ಶ್ರೀರಸ್ತು.

ಜ್ಞಾನಯೋಗತರಂಗಿಣಿ

ಎಂಬುವ

# ವಾಸಿಷ್ಠರಾಮಾಯಣವು.

ಪ್ರಥಮಭಾಗ

ವೈರಾಗ್ಯ, ಮುಮುಕ್ಷು, ಉತ್ಪತ್ತಿ, ಸ್ಥಿತಿ,
ಉಪಶಮನ ಪ್ರಕರಣಗಳು.

ಸಕಲ ಮುಮುಕ್ಷುಗಳಿಗೆ ಹಿತೋಪದವಾಗಿರುವಂತೆ

ವೇ॥ ಭಾಗವತ ಕೃಷ್ಣಸ್ವಾಮಿ ಕವಿವರ್ಯರಿಂದ

ಕನ್ನಡ ವಚನಕಾವ್ಯವಾಗಿ ರಚಿಸಲ್ಪಟ್ಟು

ಇದರ ಸರ್ವ ಸ್ವಾತಂತ್ರ್ಯವನ್ನು ಹೊಂದಿರುವ
ಬೆಂಗಳೂರು ಚಿಕ್ಕಪೇಟೆ ಬುಕ್‌ಡಿಪೊ,
ಟಿ. ಎನ್. ಕೃಷ್ಣಯ್ಯಶೆಟ್ಟಿಯವರ ಸ್ವಕೀಯ

ಶ್ರೀ ವೆಂಕಟೇಶ ಮುದ್ರಾಲಯದಲ್ಲಿ
ಮುದ್ರಿಸಲ್ಪಟ್ಟಿತು.

ಪ್ರಥಮ ಮುದ್ರಣ ೧,೦೦೦ ಪ್ರತಿಗಳು



ಕ್ರಯ ೬-೦-೦ ರೂ.

**1925**

# ವಿಷಯಾನುಕ್ರಮಣಿಕೆ.



## ಪ್ರಥಮಭಾಗದ ವೈರಾಗ್ಯಪ್ರಕರಣ.



## ಮುಮುಕ್ಷುಪ್ರಕರಣ.



## ಉತ್ಪತ್ತಿಪ್ರಕರಣ.

## ಸ್ಥಿತಿಪ್ರಕರಣ.



## ಉಪಶಮನ ಪ್ರಕರಣ.



ಪ್ರಥಮಭಾಗದ ವಿಷಯಾನುಕ್ರಮಣಿಕೆ ಸಂಪೂರ್ಣ.

ಶ್ರೀ.



ವಾಸಿಷ್ಠ ರಾಮಾಯಣವೆಂಬ

# ಜ್ಞಾನಯೋಗತರಂಗಿಣೀ.



## ಪ್ರಥಮಭಾಗ.

ಯದ್ಜ್ಞಾನಾದೇವನಿರ್ವಾಣಂ ಯದಜ್ಞಾನೇನಸಂಸೃತಿಃ ॥ ಸತ್ಯಜ್ಞಾನಾನಂತ
ನಂತಮಾತ್ಮಾನಂವಿಭಾವಯೆ ॥ ೧ ॥ ಜಗದ್ಗಜಮಿತಿಪ್ರೋಕ್ತಂಗಮನಾಜ್ಜನ
ಪಿ ॥ ಅನಙ್ಗಜಾನನಃಖ್ಯಾತೋಯಸ್ತಂವಂದೇಗಣಾಧಿಪಂ ॥೨॥ ಜೀವಃಪರಂ
ಹ್ಮಚಾಹಮಿತಿತತ್ವಂ ವಿಬೋಧಯನ್ ॥ ನರಸಿಂಹಾತ್ಮನಾಭಾತಿಯಸ್ತಂವಂ
ಗದ್ಗುರುಂ ॥೩॥ ಯಾಶಬ್ದಾರ್ಥಸ್ವರೂಪೇಣಸರ್ವಂಭಾಸಯತೇಜಗತ್ ॥ ತಾ
ಕ್ಷರಾಕೃತಿಂವಂದೇಚಿದಾಕಾರಾಂಮಹೇಶ್ವರೀಂ ॥೪॥ ಛಂದಃಪ್ರಾದುರಭೂದ್ಯ

ಸತ್ರಂ. ಸುಬ್ರಹ್ಮಣ್ಯಯ್ಯ, ಕೃಷ್ಣಶಾಸ್ತ್ರಿ,
ಬುಕ್ ಡಿಪೋ ಮತ್ತು ಶಾರದಾವಿಲಾಸ ಪ್ರೆಸ್,
ಬೆಂಗಳೂರು ಸಿಟಿ.

ಸ್ಮಾದ್ಗಂಗಾವಿಷ್ಣುಪದಾದಿವ । ನಮೋವಾಲ್ಮೀಕಯೆತಸ್ಮೈಜ್ಞಾನಯೊಗಪ್ರದರ್ಶಿನೆ ॥೪॥ ಪ್ರತಿಕರ್ತ್ರೆವಿರಂಚಸ್ಯವೆದಮಾತುರ್ಮಹರ್ಷಯೆ। ಅತ್ಯದ್ಭುತತಪೊಧಾಮ್ನೆ ವಿಶ್ವಾಮಿತ್ರಾಯತೆನಮಃ ॥ ೬ ॥ ಜಗದ್ಭ್ರಮತಮಸ್ತೊಮವಿಧೂನನಸುಧಾಂಶವೆ । ಬ್ರಹ್ಮರ್ಷೀಣಾಂವರಿಷ್ಠಾಯವಸಿಷ್ಠಾಯನಮೊನಮಃ ॥೭॥ ಜಗದ್ಭ್ರಮವಶಾತ್ತ್ರಾತುಂಜನಾನ್ಯಶ್ಶಿಷ್ಯತಾಂಭಜತ್ । ಗುರೋಃಪ್ರಕಾಶಯಾಮಾಸತತ್ತ್ವಂರಾಮಾಯತೆನಮಃ ॥೮॥ ರಾಮನಾಮಾಮೃತರಸಾಸ್ವಾದಸಂಸಕ್ತಮಾನಸಂ । ತನ್ನಮಾಮಿಹನೂಮಂತಮನೂನಶ್ರೀಪ್ರದಾಯಕಂ ॥೯॥

ಟೀ ॥ ಯಾವನ ಸ್ವರೂಪವಂ ತಿಳಿಯುವದರಿಂದ ಮುಕ್ತಿಯಾಗುವದೋ, ಯಾವನ ಸ್ವರೂಪಜ್ಞಾನವಿಲ್ಲದ್ದರಿಂದ ಸಂಸಾರ ದುಃಖವುಂಟಾಗುವದೋ, ಭೂತ ಭವಿಷ್ಯದ್ವರ್ತಮಾನ ರೂಪವಾದ ಕಾಲತ್ರಯದಲ್ಲೂ ಶಾಶ್ವತವಾಗಿರುವದ್ದರಿಂದ ಸತ್ಯವೆಂತಲೂ, ಅಚೇತನ ಪದಾರ್ಥಗಳಿಗೆ ಚೈತನ್ಯವನ್ನುಂಟುಮಾಡುವದ್ದರಿಂದ ಜ್ಞಾನವೆಂತಲೂ, ದೇಶಕಾಲ ವಸ್ತು ಪರಿಚ್ಛೇದವಿಲ್ಲದೆ ಅಖಂಡವಾಗಿ ಆನಂದರೂಪದಿಂದಿರುವದ್ದರಿಂದ ಅನಂತವೆಂತಲೂ, ಶ್ರುತಿಯಲ್ಲಿ ಪ್ರಸಿದ್ಧವಾಗಿರುವ ಆ ಪರಮಾತ್ಮನಿಗೆ ಅಭಿನ್ನನನ್ನಾಗಿ ಆತ್ಮನಂ ತಿಳಿಯುವೆನು ॥೧॥ ಲಯಿಸುವದರಿಂದಲೂ, ಉದಯಿಸುವದರಿಂದಲೂ, ಜಗತ್ತು ಗಜನೆನಿಸುವದು. ಇದನ್ನು ರಕ್ಷಿಸುವದರಿಂದಲೂ, ಆನೆಯ ಮೊಗವಂ ಧರಿಶಿರುವದ್ದರಿಂದಲೂ, ಯಾವನು ಗಜಾನನನೆಂದು ಪ್ರಸಿದ್ಧನಾದನೊ ಆ ಗಣಪತಿಯಂ ನಾನು ನಮಿಸುವೆನು. (ಸೊಹಂಭಾವೊನಮಸ್ಕಾರಃ ) ಎಂಬ ವಚನವಿರುವದ್ದರಿಂದ ಆ ಪರಮಾತ್ಮನಿಗೆ ನಾನು ಅಭಿನ್ನನೆಂದು ತಿಳಿಯುವೆನೆಂದು ತಾತ್ಪರ್ಯವು ॥೨॥ ಜೀವನೆಂತಲೂ, ಬ್ರಹ್ಮವೆಂತಲೂ, ನಾನೇ ಪ್ರಸಿದ್ಧನಾಗಿರುವೆನೆಂದು ತತ್ವಾರ್ಥವಂ ಜನಗಳಿಗೆ ತಿಳಿಸುತ್ತಾ ಯಾವನು ನೃಸಿಂಹ ರೂಪದಿಂ ಪ್ರಕಾಶಿಸುತ್ತಿಹನೋ ಜಗದ್ರೂಪವಾದ ಅಜ್ಞಾನವಂ ಪೋಗಲಾಡಿಸುವದ್ದರಿಂದ ಜಗದ್ಗುರುವೆಂದು ಪ್ರಸಿದ್ಧನಾಗಿರುವ ಆ ಪರಮಾತ್ಮನಂ ನಾನುನಮಿಸುವೆನು ॥೩॥ ನಾಮವಿಶೇಷ ರೂಪವಿಶೇಷಗಳ ರೂಪದಿಂದ ಯಾವಳು ಜಗವಂಪ್ರಕಾಶಪಡಿಸುವಳೋ, ಅಕಾರಾದ್ಯಕ್ಷರ ಸ್ವರೂಪಗಳಾಗಿಯುಂ, ಸರ್ವ ಶಬ್ದಗಳಿಗೂ ತಾತ್ಪರ್ಯವಿಷಯವಾದ ನಿತ್ಯಜ್ಞಾನಸ್ವರೂಪಗಳಾಗಿಯುಂ ಇರುವ ಪರಮೇಶ್ವರಿಯಂ ನಮಿಸುವೆನು. ಉಪಾಸಕರಧ್ಯಾನ ಪೂಜಾದಿಗಳಿಗೋಸುಗ ಪರಮಾತ್ಮನೇ ಹರಿಹರ ಗಣಪತಿ ಸೂರ್ಯ ಮೊದಲಾದ ಪುರುಷರೂಪಗಳಿಂದಲೂ ಸರಸ್ವತೀ, ಲಕ್ಷ್ಮೀ, ಪಾರ್ವತೀ ಮೊದಲಾದ ಸ್ತ್ರೀ ರೂಪಗಳಿಂದಲೂ, ಪ್ರಕಾಶಿಸುತ್ತಿಹನೆಂಬುವದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರು

ವದು ॥೪॥ ಗಗನದಿಂ ಗಂಗೆಯಂತೆ ಯಾವನಿಂದ ಛಂದಸ್ಸು ಲೋಕದಲ್ಲಿ ಆವಿರ್ಭವಿಸಿತೋ ಈ ರಾಮಾಯಣದಲ್ಲಿ ಜ್ಞಾನಯೋಗ ಮಾರ್ಗಗಳನ್ನು ತೋರಿಸುವಂಥಾ ವಾಲ್ಮೀಕಿ ಮುನಿಗೋಸ್ಕರ ನಮಸ್ಕಾರ॥೫॥ಬಹ್ಮನು ಬಹಿರ್ಮುಖವಾಗಿ ಸೃಜಿಸಿದ ಇಂದ್ರಿಯಗಳನ್ನು ಅಂತರ್ಮುಖವಾಗಿ ನಿಲ್ಲಿಸಿ ಬ್ರಹ್ಮನಿಗೆ ಪ್ರತಿಸೃಷ್ಟಿಯಂಮಾಡುತ್ತಾ ವಿಚಿತ್ರ ತಪೋನಿಧಿಯಾಗಿ ಗಾಯತ್ರಿಗೆ ಮಹರ್ಷಿಯಾದಂಥಾ ವಿಶ್ವಕ್ಕೆ ಮಿತ್ರನಾದ ವಿಶ್ವಾಮಿತ್ರನಿಗೋಸುಗ ನಮಸ್ಕಾರ ॥೬॥ ಜಗದ್ರೂಪವಾದಭ್ರಮೆ ಎಂಬ ತಮಸ್ಸಿನ ಸಮೂಹವಂ ಕೊಡಹುವದರಲ್ಲಿ ಚಂದ್ರನಾದಂಥಾ ಬ್ರಹ್ಮರ್ಷಿಗಳಿಗೆ ಶ್ರೇಷ್ಠನಾದ ವಸಿಷ್ಠನಿಗೋಸುಗ ನಮಸ್ಕಾರ॥೭॥ ಜಗವೆಂಬ ಭ್ರಮೆಯಂ ಪರಿಹರಿಸಿ ಜನಗಳಂರಕ್ಷಿಸಲೋಸುಗ ಯಾವನು ಶಿಷ್ಯಭಾವವಂ ವಹಿಸಿ ಗುರುವಾದ ವಸಿಷ್ಠನ ದೆಸೆಯಿಂದ ತತ್ವಾರ್ಥವಂ ಪ್ರಕಾಶಪಡಿಸಿದನೋ, ಯೋಗಿಗಳಿಗೆ ಕ್ರೀಡಾಸ್ಥಾನವಾದ್ದರಿಂದಲೂ, ರಾಕ್ಷಸಸಂಹಾರಕ್ಕೋಸುಗ ಅವತರಿಸಿದ್ದರಿಂದಲೂ, ರಾಮನೆಂದು ಪ್ರಸಿದ್ಧನಾದಂಥಾ ಪರಮಾತ್ಮನಿಗೋಸುಗ ನಮಸ್ಕಾರ ॥೮॥ ಶ್ರೀರಾಮಚಂದ್ರನನಾಮಕೀರ್ತನರೂಪವಾದ ರಾಮಾಯಣವಂ ಕೇಳುವದರಲ್ಲುಂಟಾದ ಆನಂದವೆಂಬ ಅಮೃತರಸ ಪಾನದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಉಪಾಸಕರಾದ ಜನಗಳಿಗೆ ಅಖಂಡವಾದ ಸಂಪದವಂ ಕೊಡುವಂಥಾ ಆ ಹನುಮಂತನಂ ನಾನು ನಮಿಸುವೆನು ॥೯॥ ಪೂರ್ವರಾಮಾಯಣ ಪಾರಾಯಣಕಾಲದಲ್ಲಿ ಆಂಜನೇಯನಿಗೆ ಪೀಠವಂ ಮಡಗುವಂತೆ ಈ ಉತ್ತರ ರಾಮಾಯಣವಂ ಪಠಿಸುವಲ್ಲೂ, ಆಂಜನೇಯನಿಗೆ ಪೀಠವಂಹಾಕಿ ಪಾರಾಯಣವಂ ಮಾಡತಕ್ಕದ್ದು.

## ವೈ ರಾ ಗ್ಯ ಪ್ರ ಕ ರ ಣ.

ಸತ್ಯಸ್ವರೂಪನಾದ ಯಾವನದೆಸೆಯಿಂದ ಜಗತ್ತುಗಳು ಪುಟ್ಟಿ ಅವನಲ್ಲಿಯೇ ಪ್ರಕಾಶಿಸುತ್ತಿದ್ದು ಅವನಲ್ಲಿಯೇ ಲೀನವಾಗುವವೋ ಅಂಥಾ ಪರಮಾತ್ಮನಿಗೋಸ್ಕರ ನಮಸ್ಕಾರವಾಗಲಿ. ಜ್ಞಾತೃ, ಜ್ಞಾನ, ಜ್ಞೇಯ, ದ್ರಷ್ಟೃ, ದರ್ಶನ, ದೃಶ್ಯ ಕರ್ತೃ, ಕರಣ ಕಾರ್ಯಗಳೆಂಬ ತ್ರಿಪುಟಗಳು ಯಾವನಿಂದಾಗಿರುವವೋ ಅಂಥಾ ಜ್ಞಾನಸ್ವರೂಪನಾದ ಪರಮಾತ್ಮನಿಗೋಸ್ಕರ ನಮಸ್ಕಾರವಾಗಲಿ. ಸರ್ವಲೋಕಗಳಿಗೂ ಜೀವನಂಗಳಾದ ಆನಂದಲೇಶಗಳು ಸಮುದ್ರದಿಂ ತುಂತುರುಗಳಂತೆ ಯಾವನಿಂ ಪೊರಮಟ್ಟು ಲೋಕಗಳಲ್ಲಿ ಪ್ರಕಾಶಿಸುತ್ತಿರುವವೋ ಅಂಥಾ ಆನಂದ ಸ್ವರೂಪನಾದ ಪರಮಾತ್ಮನಿಗೋಸುಗ ನಮಸ್ಕಾರವಾಗಲಿ.

ಸುತೀಕ್ಷ್ಣನೆಂಬ ಬ್ರಾಹ್ಮಣನು ಅಗಸ್ತ್ಯನೆಂಬ ಮುನಿಯಂ ಕುರಿತು ಪ್ರಶ್ನಿ

ಯಂ ಮಾಡಿದನದೆಂತನೆ,—ಎಲೈ ಸಕಲ ಶಾಸ್ತ್ರಧರ್ಮಗಳಂ ತಿಳಿದ ಮಹಾಮುನಿಯೇ ? ಪಕ್ಷಿಗಳಿಗೆ ಎರಡು ರಕ್ಕೆಗಳಿಂದಲೂ ಹ್ಯಾಗೆ ಗಗನಗತಿಯುಂಟಾಗುವದೋ ಹಾಗೆ ಮೋಕ್ಷಾಪೇಕ್ಷೆಯುಳ್ಳವರಿಗೆ ಜ್ಞಾನಕರ್ಮಗಳೆರಡರಿಂದಲೂ ಪರಮ ಪುರುಷಾರ್ಥ ಸಿದ್ಧಿಯಾಗುವದೆಂದು ಪೇಳುವರು. ಇದರಿಂದ ಜ್ಞಾನಕರ್ಮಗಳೆರಡೂ ಮೋಕ್ಷಸಾಧನಗಳೆಂದು ಪೇಳಲ್ಪಡುವದು. ಇದರಲ್ಲಿ ಜ್ಞಾನದಿಂದಲೇ ಮೋಕ್ಷವಾಗುವದೋ, ಕರ್ಮದಿಂದಲೇ ಆಗುವದೋ, ಜ್ಞಾನಕರ್ಮಗಳೆರಡರಿಂದಲೂ ಆಗುವದೊ, ಈ ವಿಷಯವಂನಪ್ಪಣೆಕೊಡಿಸ ಬೇಕೆಂದು ಬೆಸಗೊಳ್ಳುವ ಸುತೀಕ್ಷ್ಣನಂಕುರಿತು ಅಗಸ್ತಿಮಹಾಮುನಿಯು ಪೇಳಿದನು ಅದೆಂತೆಂದರೆ

ಎಲೈ ಸುತೀಕ್ಷ್ಣನೆ ? ಪೂರ್ವದಲ್ಲಿ ಅಗ್ನಿವೇಶ್ಯಮುನಿಗೆ ಪುತ್ರನಾದ ಕಾರುಣ್ಯನು ಗುರುಕುಲದಲ್ಲಿ ವಿದ್ಯಾಭ್ಯಾಸವಂ ನೆರವೇರಿಸಿ ಮನೆಗೆ ಬಂದು ಬಂದು ಕರ್ಮವನ್ನೂಮಾಡದೆ ಸುಮ್ಮನೆ ಕುಳಿತ್ತಿದ್ದನು. ಅದಂಕಂಡ ಅಗ್ನಿವೇಶ್ಯನು ಎಲೈ ಬಾಲಕನೆ ಏನುಕಾರಣ ನೀನು ಕರ್ಮವಂ ಮಾಡದೇ ಇದ್ಧೀಯೆ ! ಕರ್ಮವಂ ಮಾಡದ ನೀನು ಸಿದ್ಧಿಯಂ ಹ್ಯಾಗೆ ಹೊಂದೀಯೆ ! ಕರ್ಮವಂ ಬಿಡುವದಕ್ಕೆ ಕಾರಣವೇನೋ ಅದಂಪೇಳುವನಾಗೆಂದು ಕೇಳಲು, ಆ ಕಾರುಣ್ಯನು ಪೇಳಿದನು. ಎಲೈ ತಂದೆಯೇ, ಜೀವವಿರುವ ಪರ್ಯಂತರವೂ ಅಗ್ನಿಹೋತ್ರವನ್ನು ಮತ್ತು ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಬೇಕೆಂದು ಶ್ರುತಿಪೇಳುವದು. ಕರ್ಮದಿಂದಲೂ, ಧನದಿಂದಲೂ, ಪ್ರಜೆಯಿಂದಲೂ, ಮೋಕ್ಷವಾಗುವದಿಲ್ಲ. ತ್ಯಾಗದಿಂದಲೇ ಯತಿಗಳು ಮೋಕ್ಷವಂ ಪಡೆವರೆಂದು ಮತ್ತೊಂದು ಶ್ರುತಿ ಪೇಳುವದು. ಇದರಲ್ಲಿ ಯಾವದನ್ನ ಅನುಷ್ಠಿಸತಕ್ಕದ್ದೆಂದು ಸಂದೇಹದಿಂ ಸುಮ್ಮನೆ ಕುಳಿತಿಧೇನೆ ಎಂದು ಪೇಳಲು, ಆ ಅಗ್ನಿವೇಶ್ಯನು ಎಲೈ ಮಗನೇ ಈ ವಿಷಯದಲ್ಲಿ ಒಂದು ಕಥೆಯಂ ಪೇಳುವೆನು. ಅದರ ತಾತ್ಪರ್ಯವಂ ನೀನು ಚನ್ನಾಗಿ ವಿಚಾರಿಸಿನೋಡಿ, ಬಳಿಕ ನಿನಗೆ ಹ್ಯಾಗೆ ತೋರುವದೋ ಹಾಗೆ ಮಾಡೆಂದು ಪೇಳಿ ಆ ಕಥೆಯಂ ಪೇಳಲುಪಕ್ರಮಿಸಿದನು ಅದೆಂತೆನೆ, ಸಕಲ ಪಾಪಹರವಾದ ಗಂಗಾನದೀಪ್ರವಾಹದಿಂ ಮನೋಹರವಾಗಿರುವ ಹಿಮವತ್ಪರ್ವತದ ಶಿಖರದಲ್ಲಿ ಕುಳುತಿದ್ದ ಸುರುಚಿ ಎಂಬ ಅಪ್ಸರಸ್ತ್ರೀಯು ಗಗನದಲ್ಲಿ ವಿಮಾನವಂ ತೆಗೆದುಕ್ಕೊಂಡು ಪೋಗುತ್ತಿರುವ ದೇವದೂತನಂ ಕಂಡು ಎಲೈ ಸಖನೇ ಎಲ್ಲಿಗೆ ನೀನು ಪೋಗಿದ್ದೆ ಎಂದು ಕೇಳಲಾ ದೇವದೂತನು ಎಲೈ ಸುಮುಖಿಯೇ ಅರಿಷ್ಟನೇಮಿಯೆಂಬ ರಾಜರ್ಷಿಯು ಮಗನಿಗೆ ರಾಜ್ಯಾಭಿಷೇಕವಂ ಮಾಡಿ ಗಂಧಮಾದನ ಪರ್ವತವಂ ಶೇರಿ ತಪವಂಮಾಡುತ್ತಿರಲು ನಮ್ಮದೇವೇಂದ್ರನು ಸಮಾನವಿಲ್ಲದ ಈ

ವಿಮಾನದಲ್ಲಿ ಆ ರಾಜರ್ಷಿಯಂ ಕುಳ್ಳಿರಿಸಿಕೊಂಡು ಬರುವಂತೆ ನನ್ನನ್ನಾಜ್ಞಾಪಿಸಿದನು. ನಾನು ಆ ರಾಜರ್ಷಿಯ ಬಳಿಗೆ ಪೋಗಿ ಇಂದ್ರನ ಆಜ್ಞೆಯಂ ತಿಳುಪಲು, ಆ ರಾಜರ್ಷಿಯು ಸ್ವರ್ಗದಲ್ಲಿರುವ ಗುಣದೋಷಗಳಂ ಪೇಳುವಂತೆ ನನ್ನಂ ಕೇಳಿದನು. ಬಳಿಕ ನಾನು ಸ್ವರ್ಗಲೋಕದಲ್ಲಿ ಪುಣ್ಯಶಾಲಿಗಳಿಗೆ ಪುಣ್ಯಾನುಸಾರವಾಗಿ ಉತ್ತಮ ಮಧ್ಯಮಾಧಮಸ್ಥಾನ ಪ್ರಾಪ್ತಿಯೆಂತಲೂ, ಅದರಲ್ಲಿ ಉತ್ತಮರಲ್ಲಿ ಅಸಹನವು, ಸಮಾನರಲ್ಲಿ ಸ್ಪರ್ಧೆಯು, ಅಧಮರಂ ನೋಡುವಲ್ಲಿ ಸಂತೋಷವೂ ಉಂಟಾಗುವದೆಂತಲೂ, ಪುಣ್ಯಕ್ಷಯವಾದ ಸಂಗಡಲೇ ಪುನಃ ಅಧೋಲೋಕ ಪತನವೆಂತಲೂ, ಸ್ವರ್ಗಸ್ಥಿತಿಯಂ ಪೇಳುವಲ್ಲಿ ಆ ರಾಜರ್ಷಿಯು ಇಂಥಾ ಸುಖವಂ ನಾನು ಅಪೇಕ್ಷಿಸುವದಿಲ್ಲ. ಘೋರವಾದ ತಪವಂ ಮಾಡಿ ಹಾವು ಪರೆಯಂ ಬಿಡುವಂತೆ ಅಶುದ್ಧವಾದ ಈ ಶರೀರವಂ ಬಿಡುವೆನೆಂದು ಪೇಳಿದನು. ಅದಂನಾನು ದೇವೇಂದ್ರನಿಗೆತಿಳುಹಲು ಆ ಪ್ರಭುವು ಆಶ್ಚರ್ಯಪಟ್ಟು ವಿರಕ್ತನಾದ ಈ ರಾಜರ್ಷಿಯಂ ವಾಲ್ಮೀಕಿಯ ಆಶ್ರಮಕ್ಕೆ ಕರದುಕೊಂಡು ಪೋಗಿ ಇವನಿಗೆ ತತ್ವೋಪದೇಶವಂ ಮಾಡುವಂತೆ ಆ ಮುನಿಗೆ ಪೇಳೆಂದು ನನಿಗೆ ಆಜ್ಞೆಯನಿತ್ತನು. ಬಳಿಕ ನಾನು ಅದೇಪ್ರಕಾರ ಆ ರಾಜರ್ಷಿಯನ್ನು ವಾಲ್ಮೀಕಿಯ ಆಶ್ರಮವಂ ಸೇರಿಸಿ ಅಲ್ಲಿನಡದ ವೃತ್ತಾಂತವಂ ತಿಳುಪಲೋಸುಗ ದೇವೇಂದ್ರನ ಸಮೀಪಕ್ಕೆ ಪೋಗುತಲಿಧೇನೆಂದು ಪೇಳಲು, ಆ ಅಪ್ಸರೆಯು ಎಲೈ ಮಹಾತ್ಮನೇ ಅಲ್ಲಿ ನಡದ ವೃತ್ತಾಂತವಂ ನಿರೂಪಿಸುವನಾಗೆಂದು ಬೆಸಗೊಳ್ಳಲಾ ದೇವದೂತನು ಆ ವೃತ್ತಾಂತವಂ ನಿರೂಪಿಸಿದನದೆಂತೆಂದರೆ,- ನನ್ನ ಮುಖದಿಂದ ಇಂದ್ರನ ಆಜ್ಞೆಯಂ ತಿಳಿದ ವಾಲ್ಮೀಕಿಮಹಾಮುನಿಯು ಅರಿಷ್ಟನೇಮಿಯಂ ಸಮ್ಮಾನಿಸಿ, ಎಲೈ ರಾಜರ್ಷಿಯೆ ! ನಿನಗೆ ಅನಾಮಯವೆ ? ಎಂದು ಕೇಳಲಾ ರಾಜರ್ಷಿಯು ಸಾಷ್ಟಾಂಗವಾಗಿ ನಮಿಸಿ, ಎಲೈ ಸರ್ವಜ್ಞನಾದ ಮಹರ್ಷಿಯೆ ? ನಿನ್ನ ಕೃಪಾಕಟಾಕ್ಷದಿಂದೀಗ ನಾನು ಕೃತಾರ್ಥನಾದೆನು, ಭವಬಂಧದಿಂ ಖಿನ್ನನಾದ ನನಿಗೆ ಮೋಕ್ಷೋಪಾಯವಂ ಪೇಳುವನಾಗೆಂದು ಪ್ರಾರ್ಥಿಸಿದನು. ಆ ಮಹಾಮುನಿಯು ಎಲೈ ರಾಜರ್ಷಿಯೇ ಶ್ರವಣಮಾತ್ರದಿಂ ಸಕಲಪಾಪಹರವಾದ ರಾಮಾಯಣವಂ ಪೇಳುವೆನು, ಅದನ್ನು ಕೇಳಿ ಅದರ ತಾತ್ಪರ್ಯದ ಅನುಸಂಧಾನವಂ ಮಾಡುತ್ತಾ ನೀನು ಜೀವನ್ಮುಕ್ತನಾಗುತ್ತೀಯೆ. ಅಲ್ಲಿ ವಸಿಷ್ಠರಾಮ ಸಂವಾದವನ್ನು, ಮೋಕ್ಷೋಪಾಯಕಥೆಗಳನ್ನು, ಜ್ಞಾನದರೀತಿಗಳನ್ನು, ಕೇಳುವನಾಗೆಂದು ಪೇಳಲಾಗ, ಆ ರಾಜರ್ಷಿಯು ಎಲೈ ಮಹಾಮುನಿಯೆ ರಾಮನೆಂಬುವನು ಯಾರು? ಅವನು ಬದ್ಧನೋ ? ಮುಕ್ತನೋ? ಎಂಥಾವನು ಪೇಳುವನಾಗೆನಲು,

ಆ ವಾಲ್ಮೀಕಿಯು ರಾಮಾವತಾರಕಥೆಯಂ ನಿರೂಪಿಸಿದನು, ಅದೆಂತೆನೆ:—

ಎಲೈ ರಾಜರ್ಷಿಯೇ ಪೂರ್ವದಲ್ಲಿ ಒಂದಾನೊಂದು ಕಾಲದೋಳ್ ನಾರಾಯಣನು ಬ್ರಹ್ಮಲೋಕಕ್ಕೆ ಬರಲು ಆಗ ಬ್ರಹ್ಮನೆ ಮೊದಲಾದವರೆಲ್ಲರೂ ಸನ್ಮಾನವಂ ಮಾಡುತ್ತಿರುವಲ್ಲಿ ಆ ಸಭೆಯಲ್ಲಿ ನಿಷ್ಕಾಮನಾಗಿ ಕುಳಿತಿದ್ದ ಸನತ್ಕುಮಾರನು ಆ ಜಗನ್ನಾಯಕನಿಗೆ ಪ್ರತ್ಯುತ್ಥಾನವನ್ನು ಮಾಡದೆ ಧ್ಯಾನನಿಷ್ಠನಂತೆ ಸುಮ್ಮನೆ ಕುಳಿತಿದ್ದನು. ಅದಂಕಂಡ ಪುಂಡರೀಕಾಕ್ಷನು ಕುಪಿತನಾಗಿ ಎಲೈ ಸನತ್ಕುಮಾರನೇ ನಿಷ್ಕಾಮನೆಂಬ ಗರ್ವದಿಂ ನೀನು ಸ್ತಬ್ಧನಾಗಿದ್ದೀಯೆ ಆದ್ದರಿಂದ ನೀನು ಶರಜನ್ಮನೆಂಬ ನಾಮದಿಂ ಪುಟ್ಟಿ ಕಾಮಾಕುಲನಾಗಿರುವನಾಗೆಂದು ಶಪಿಸಲು, ಆ ಸನತ್ಕುಮಾರನು ಎಲೈ ವಿಷ್ಣುವೇ ನಿನಗೆ ಇರುವ ಸರ್ವಜ್ಞತೆಯು ಪೋಗಿ ನೀನೂ ಕೆಲವುಕಾಲ ಅಜ್ಞಾನಿಯಾಗುತ್ತೀಯೇಯೆಂದು ಶಪಿಸಿದನು. ಮತ್ತು ಈ ಜಗದೀಶ್ವರನು ಅಸುರವೃದ್ಧಿಗೋಸುಗ ತಪವಂ ಮಾಡುತ್ತಿರುವ ಭೃಗುಪತ್ನಿಯಂ ಸಂಹರಿಸಲು, ಆ ಮಹಾಮುನಿಯು ನಿನಗೂ ಸ್ತ್ರೀವಿಯೋಗವಾಗಲೆಂದು ಶಪಿಸಿದನು. ಜಲಂಧರವೇಷದಿಂದ ವಂಚಿಸಲ್ಪಟ್ಟ ಬೃಂದೆಯೂ ಕೂಡ ಸ್ತ್ರೀವಿಯುಕ್ತನಾಗೆಂದು ಶಪಿಸಿದಳು. ನೃಸಿಹ್ಮಾವತಾರದಲ್ಲಿ ಪಯೋಷ್ಣೀನದಿಯ ತೀರದಲ್ಲಿದ್ದ ದೇವಶರ್ಮನೆಂಬ ಮುನಿಯ ಪತ್ನಿಯು ನೃಸಿಹ್ಮಸ್ವಾಮಿಯ ಆರ್ಭಟವಂನೋಡಿ ಭಯದಿಂ ಮೃತಳಾದಳು. ಆಗ ದುಃಖಿತನಾದ ಆ ದೇವಶರ್ಮನು ನಿನಗೂ ಸ್ತ್ರೀವಿಯೋಗವು ಸಂಭವಿಸಲೆಂದು ನರಸಿಹ್ಮನಂ ಶಪಿಸಿದನು. ಭಕ್ತವತ್ಸಲನಾದ ಆ ಭಗವಂತನು ಇವರ ವಚನವಂ ಸಾರ್ಥಕವಾಗಿ ಮಾಡಲೋಸುಗ ರಾಮನೆಂಬ ನಾಮಧೇಯದಿಂ ದಶರಥನ ಮನೆಯಲ್ಲಿ ಪುಟ್ಟಿ ಅಜ್ಞಾನವಂ ಪರಿಗ್ರಹಿಸಿರುವನು. ಇನಿಗೆ ವಸಿಷ್ಠನು ಉಪದೇಶವಂ ಮಾಡಿದ ವೃತ್ತಾಂತವಂ ಪೇಳುವೆನು, ಸಾವಧಾನಚಿತ್ತನಾಗಿ ಕೇಳುವನಾಗೆಂದು ಪೇಳಿ, ಆ ಮಹಾಮುನಿಯಾದ ವಾಲ್ಮೀಕಿಯು ಮಂಗಳಾಚರಣ ಪೂರ್ವ್ವಕವಾಗಿ ಗ್ರಂಥವಂ ಪೇಳಲುಪಕ್ರಮಿಸಿದನದೆಂತೆಂದರೆ:—

ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಆಕಾಶದಲ್ಲಿಯೂ, ನನ್ನ ಹೊರಗೂ ಒಳಗೂ ಸಹ ವ್ಯಾಪಕನಾಗಿ ಯಾವನು ಚಿನ್ಮಾತ್ರಸ್ವರೂಪದಿಂ ಪ್ರಕಾಶಿಸುತ್ತಿರುವನೋ ಸರ್ವರಿಗೂ ಆತ್ಮನಾಗಿ ಸರ್ವಸ್ವರೂಪನಾಗಿಯೂ, ಪ್ರಕಾಶಿಸುತ ಸರ್ವಾತ್ಮನೆಂದು ಪ್ರಸಿದ್ಧನಾಗಿರುವ ಆ ಪರಮಾತ್ಮನಿಗೋಸುಗ ನಮಸ್ಕಾರವಾಗಲಿ. ಅತ್ಯಂತ ಮೂಢನಾಗದೆ ತತ್ವಾರ್ಥವನ್ನು ತಿಳಿಯದೆ ಬದ್ಧನಾಗಿರುವ ನಾನು ಮುಕ್ತನಾಗಬೇಕೆಂದು ಯಾವನುನಿಶ್ಚಯಿಸಿರುವನೋ ಅವನೇ ಈ ಗ್ರಂ

ಥವಂ ನೋಡುವದಕ್ಕೆ ಅಧಿಕಾರಿಯು. ಯಾವನು ಧರ್ಮಪ್ರಧಾನವಾದ ಪೂರ್ವ ರಾಮಾಯಣವಂವಿಚಾರಿಸಿ ತಿಳಿದು ಬ್ರಹ್ಮಜ್ಞಾನಪ್ರಧಾನವಾದ ಈ ಉತ್ತರ ರಾಮಾಯಣವಂ ವಿಚಾರಿಸುವನೋ ಆ ಪ್ರಾಜ್ಞನು ಪುನರ್ಜನ್ಮದುಃಖವನ್ನನು ಭವಿಸುವದಿಲ್ಲ. ಕಥೋಪಾಯಗಳಿಂ ಪ್ರಚುರವಾಗಿಮಾಡಿದ ಪೂರ್ವರಾಮಾ ಯಣವಂ ನಾನು ವ್ಯಾಪಾರಿಗೆ ಸಮುದ್ರವು ರತ್ನವಂಕೊಡುವಂತೆ ಭರದ್ವಾಜನಿಗೆ ಪೇಳಿ ಕೊಡಲಾ ಭರದ್ವಾಜನು ಅಲ್ಲಲ್ಲಿ ಅದನ್ನು ಪೇಳುತ್ತಾ ಬಂದಾನೊಂದು ಕಾಲದಲ್ಲಿ ಮೇರುಪರ್ವತದ ವನದಲ್ಲಿದ್ದ ಬ್ರಹ್ಮದೇವನ ಎದುರಿಗೆ ಗಾನವಂ ಮಾಡಿದನು. ಆಗ ಸಂತುಷ್ಟನಾದ ಬ್ರಹ್ಮನುನಿನಿಗೆ ಬೇಕಾದವರವಂ ಬೇಡಿ ಕೊಳ್ಳುವನಾಗೆಂದು ನುಡಿಯಲು, ಆ ಭರದ್ವಾಜನು ಎಲೈ ಜಗದೀಶನೆ ! ಸಂ ಸಾರಮಗ್ನರಾದ ಈ ಜನಗಳು ಯಾವದರಿಂದ ಕೃತಾರ್ಥರಾಗುವರೋ ಅದಂ ಪೇಳುವನಾಗೆಂದು ಪ್ರಾರ್ಥಿಸಿದನು. ಆಗ ಬ್ರಹ್ಮದೇವನು ಈ ವಿಷಯದಲ್ಲಿ ವಾಲ್ಮೀಕಿಯನ್ನೇ ಪ್ರಾರ್ಥಿಸುವನಾಗು. ಅವನು ಪ್ರಾರಂಭಿಸಿದ ಈ ರಾಮಾ ಯಣವಂ ಪೂರೈಸಲು, ಅದರ ಶ್ರವಣದಿಂದ ಜನಗಳು ಸೇತುವಿನಿಂದ ಸಮುದ್ರ ವಂ ದಾಂಟುವಂತೆ ಸಂಸಾರ ಸಮುದ್ರವಂ ದಾಟುವರೆಂದು ಪೇಳಿ, ಆ ಭರದ್ವಾಜ ನೊಡನೆ ನನ್ನ ಆಶ್ರಮಕ್ಕೆ ಬಂದು ನನ್ನಿಂದ ಪೂಜಿತನಾಗಿ, ಎಲೈ ಮುನಿಶ್ರೇಷ್ಠ ನೇ ! ರಾಮಗುಣ ಕೀರ್ತನೆಗೋಸುಗ ಪ್ರಾರಂಭಿಸಿದ ಈ ರಾಮಾಯಣವನ್ನು ಸಂಪೂರ್ಣವಾಗಿ ನಿರೂಪಿಸುವನಾಗು, ಇದು ಜನಗಳಿಗೆ ಅಜ್ಞಾನಸಂಕಟ ಪರಿ ಹಾರಕವಾಗುವದೆಂದುಪೇಳಿ, ಸಮುದ್ರದಲ್ಲಿ ಪುಟ್ಟಿದ ತೆರೆಯಂತೆ ಮರೆಯಾದನು. ಆಗ ಆಶ್ಚರ್ಯದಿಂದ ಪರವಶನಾಗಿದ್ದ ನಾನು, ಎಲೈ ಬಾಲಕನೇ ! ಬ್ರಹ್ಮನು ಯೇನುಪೇಳಿದನೋ ಅದಂ ಪೇಳೆಂದು ಭರದ್ವಾಜನಂಕೇಳಲು, ಆ ಭರದ್ವಾ ಜನು ಸಂಸಾರಸಮುದ್ರಕ್ಕೆತಾರಕವಾದ ರಾಮಾಯಣವಂ ಪೂರ್ಣವಾಗಿ ಮಾಡು ವಂತೆ ಬ್ರಹ್ಮದೇವನು ಆಜ್ಞಾಪಿಸಿದನೆಂದು ಪೇಳಿ ಎಲೈ ಗುರುವೇ ! ರಾಮ ಲಕ್ಷ್ಮಣ ಭರತ ಶತ್ರುಘ್ನರು ಯಶಸ್ಸಿನಿಂದ ಜಗವಂ ಬೆಳಗುವ ಸೀತಾದೇವಿಯು, ರಾಮಸ್ವಾಮಿಯನ್ನನುಸರಿಸಿಕೊಂಡಿದ್ದ ಜನಗಳು ಸಹ ಹ್ಯಾಗೆ ಲೋಕವ್ಯವ ಹಾರವಂ ಮಾಡುತ್ತಿದ್ದರೋ ಅದಂನಿರೂಪಿಸುವನಾಗು. ಅದೇಪ್ರಕಾರ ನಾನು ವ್ಯವಹರಿಸುತ್ತಾ ಕೃತಾರ್ಥನಾಗುವೆನೆಂದು ಪ್ರಾರ್ಥಿಸಿದನು. ಬಳಿಕ ನಾನು ಬ್ರಹ್ಮದೇವನ ಆಜ್ಞಾನುಸಾರವಾಗಿ ಈ ರಾಮಾಯಣವಂಮಾಡುತ್ತಾ ಎಲೈ ಸುಮತಿಯಾದ ಬಾಲಕನೇ ! ದಶರಥಮಹಾರಾಯನು ಕೌಸಲ್ಯೆ ಮೊದಲಾದ ರಾಜಸ್ತ್ರೀಯರು, ರಾಮ ಲಕ್ಷ್ಮಣ ಭರತ ಶತ್ರುಘ್ನರು ಸೀತೆ ಮೊದಲಾದ ಅವರ

ಪತ್ನೀಯರು ವಸಿಷ್ಠ ವಾಮದೇವರು ದೃಷ್ಟಿ ಜಯಂತ ಹನುಮಂತ ವಿಭೀಷಣ ಮೊದಲಾದ ಮಂತ್ರಿಗಳು ಸಹ ಬ್ರಹ್ಮಸ್ವರೂಪ ವಿಚಾರದಿಂದ ಅದಕ್ಕೆ ಭಿನ್ನವಾದ ಪದಾರ್ಥವಿಲ್ಲವೆಂದು ನಿಶ್ಚೈಸಿ ಬ್ರಹ್ಮಕ್ಕೆ ಭಿನ್ನವಾಗಿ ತೋರುವ ಪದಾರ್ಥವೆಲ್ಲವು ಸುಳ್ಳೆಂದು ದೃಢವಾದ ಜ್ಞಾನದಿಂದ ಸಂಗವಿಲ್ಲದ ಬುದ್ಧಿಯುಳ್ಳವರಾಗಿ ರಾಗದ್ವೇಷಗಳಿಲ್ಲದ ಸಮಬುದ್ಧಿಯಿಂದ ಲೋಕವ್ಯವಹಾರಗಳಂ ಮಾಡುತ್ತಾ ಜೀವನ್ಮುಕ್ತಸ್ಥಿತಿಯಿಂದ ನಿತ್ಯಾನಂದರಾಗಿ ವಿಹರಿಸಿಕೊಂಡಿದ್ದರು. ಅದೇಪ್ರಕಾರ ನೀನೂ ಇರುವನಾದರೆ, ಘೋರವಾದ ಸಂಸಾರ ಸಂಕಟದಿಂ ಮುಕ್ತನಾಗುತ್ತೀಯೇ ಎಂದು ಭರದ್ವಾಜನಂಕುರಿತು ಪೇಳಿದೆನೆಂದು ವಾಲ್ಮೀಕಿಮಹಾಮುನಿಯು ಅರಿಷ್ಟನೇಮಿಗೆ ಪೇಳಿದನು. ಈ ಅರ್ಥವಂ ಸುರುಚಿಯೆಂಬ ಅಪ್ಸರೆಗೆ ದೇವದೂತನು ಪೇಳಿದನೆಂದು ಅಗ್ನಿವೇಶ್ಯನು ಕಾರುಣ್ಯನಿಗೆ ಪೇಳಿದನು. ಅದನ್ನ ಅಗಸ್ತಿಮಹಾಮುನಿಯು ಸುತೀಕ್ಷ್ಣನಿಗೆ ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣೀ ಎಂಬ ವಾಸಿಷ್ಠದಟೀಕಿನೊಳ್ ಪೂರ್ವಪೀಠಿಕಾ ನಿರೂಪಣವೆಂಬ ಪ್ರಥಮತರಂಗಕ್ಕೆ ಮಂಗಳಮಹಾ.



## ದ್ವಿತೀಯ ತರಂಗ ಪ್ರಾರಂಭಃ.

## ವಾಸನಾ ಸ್ವರೂಪ ಕಥನ.



ಬಳಿಕ ಭರದ್ವಾಜನು ಎಲೈಗುರುವೇ ಜೀವನ್ಮುಕ್ತಸ್ಥಿತಿಯಂ ಮೊದಲು ಮಾಡಿಕೊಂಡು, ಶ್ರೀರಾಮಚಂದ್ರನ ಚರಿತ್ರೆಯಂ ನಿರೂಪಿಸುವನಾಗೆಂದು ಪ್ರಾರ್ಥಿಸಲು ಆ ವಾಲ್ಮೀಕಿಮಹಾಮುನಿಯು ಭರದ್ವಾಜನಂ ಕುರಿತು ಪೇಳಿದನದೆಂತೆಂದರೆ,—ಎಲೈ ಬಾಲಕನೇ ! ಕಣ್ಣಿಗಳ ರಪ್ಪೆಯಂ ಮುಚ್ಚುವಲ್ಲಿ ಹೊರಗೆ ಹೋಗುವದಕ್ಕೆ ಇಲ್ಲದ್ದರಿಂದ ತೇಜೋಮಯವಾದ ಚಕ್ಷುರಿಂದ್ರಿಯವು ತನಗೆ ಸ್ಥಾನವಾದ ಕರೀಗುಡ್ಡಿನಲ್ಲಿಯೇನಿಲ್ಲುವದು. ಆದ್ದರಿಂದ ಕರೀಗುಡ್ಡಿನ ಕಪ್ಪೆ ಕಣ್ಣಿನ ಹೊರಗಿರುವಂತೆ ಕತ್ತಲೆಯಾಗಿ ಕಾಣುವದು. ಇದೇಪ್ರಕಾರ ರಪ್ಪೆಯಂ ತೆಗದಿದ್ದಾಗಲು, ಬಹುದೂರವಾದ ಆಕಾಶವಲ್ಲಿ ಮುಂದಕ್ಕೆಹೋಗುವ ಶಕ್ತಿಯಿಲ್ಲದೆ ಕರೀಗುಡ್ಡನಲ್ಲಿನಿಂತ ಚಕ್ಷುರಿಂದ್ರಿಯಕ್ಕೆ ಕರೀಗುಡ್ಡಿನ ಕಪ್ಪೆ ಹೊರಗಿರುವಂತೆ ಕಾಣಿಸುವದು. ಅದರಿಂದಲೂ ವಸ್ತುಸ್ವಭಾವದಿಂದಲೂ ಆಕಾಶ ಕಪ್ಪೆಂದು ಲೋಕದಲ್ಲಿ ವ್ಯವಹಾರವುಂಟಾಗಿರುವದು. ರೂಪರಹಿತವಾಗಿ, ಸರ್ವ

ವ್ಯಾಪಿಯಾಗಿರುವ ಆಕಾಶದಲ್ಲಿ ದೃಷ್ಟಿದೋಷದಿಂ ಕಪ್ಪುಕಾಣುವಂತೆ ಅನಾದಿಯಾದ ಅಜ್ಞಾನದಿಂ ವಾಸನಾತ್ಮಕವಾದ ಅಂತಃಕರಣದಲ್ಲಿರುವ ಜಗತ್ತೇ ಸತ್ಯಜ್ಞಾನಾನಂದ ಲಕ್ಷಣಗಳಿಂ ಪರಿಪೂರ್ಣನಾದ ಪರಮಾತ್ಮನಲ್ಲಿರುವಂತೆ ತೋರುತ್ತಿರುವದು. ಬ್ರಹ್ಮ ಭಿನ್ನವಾದ ಪದಾರ್ಥವಿಲ್ಲವೆಂದು ವಿಚಾರದಿಂದುಂಟಾದ ಅಖಂಡಾಕಾರವೃತ್ತಿಯಿಂದ ಅಜ್ಞಾನದೊಡನೆ ಜಗದ್ವಾಸನೆ ಯಾವನಿಗೆ ಅಣಗುವದೋ ಅವನೇ ಜೀವನ್ಮುಕ್ತನೆನಿಸಿಕೊಳ್ಳುವನು, ಆದ್ದರಿಂದ ಎಲೈ ಸಾಧುವೇ! ಆಕಾಶದ ಕಪ್ಪಿನಂತೆ ಉಂಟಾಗಿರುವ ಈ ಜಗದ್ಭ್ರಮೆಯು ಪುನಃಸ್ಮರಣೆಗೆಬಾರದಂತೆ ಮರತುಹೋಗುವದೇ ಉತ್ತಮವೆಂದು ತಿಳಿಯುತ್ತೇನೆ. * ದೃಕ್ಕು ದೃಶ್ಯವೆನಿಸಿಕೊಳ್ಳುವ ಆತ್ಮಪ್ರಪಂಚಗಳ ಸತ್ವವಂ ವಿಚಾರಿಸುವಲ್ಲಿ ಆತ್ಮನ † ಸತ್ವವೇ ಪ್ರಪಂಚಕ್ಕೆ ಆಧಾರವಾಗಿದೆಯಲ್ಲದೆ ಬೇರೆ ಸತ್ವವಿಲ್ಲದ್ದರಿಂದ ಆತ್ಮನೆ ಪ್ರಪಂಚರೂಪದಿಂ ತೋರುವನಲ್ಲದೆ ಆತ್ಮನಿಗೆ ಭಿನ್ನವಾಗಿ ಪ್ರಪಂಚವಿಲ್ಲವೆಂದು ನಿಶ್ಚಯಿಸತಕ್ಕದ್ದು. ಹೀಗಲ್ಲದೆ ಜೀವನ್ಮುಕ್ತಸ್ಥಿತಿಯು ಅನುಭವಕ್ಕೆ ಬರುವದಿಲ್ಲ. ಆ ಜ್ಞಾನ ವುಂಟಾಗಲೋಸುಗವೇ ಈ ಶಾಸ್ತ್ರ ವುಂಟಾಗಿರುವದು. ಆದ್ದರಿಂದ ಇದರವಿಚಾರದಿಂದಾಕಾಶದ ಕಪ್ಪಿನಂತೆ ಭ್ರಮಾತ್ಮಕವಾದ ಈ ಜಗತ್ತು ಕಾಣುತ್ತಿದ್ದಾಗ್ಯೂ ಅಸತ್ಯವೆಂದು ನಿಶ್ಚಯವಾಗುವದು. ಈ ನಿಶ್ಚಯವಾದ ಕೂಡಲೇ ಪರಮಾನಂದವಾದ ಜೀವನ್ಮುಕ್ತಿಯು ಸಿದ್ಧವಾಗುವದು. ಹೀಗಲ್ಲದೆ ಶಾಸ್ತ್ರಗಳೆಂಬ ಹಳ್ಳಗಳಲ್ಲಿಬಿದ್ದು ಹೊರಳುತ್ತಿರುವ ಜನಗಳಿಗೆ ಎಂದಿಗೂ ಈ ಸಂತೋಷವಾಗಲಾರದು. ವಾಸನೆಗಳಿಗೆ ನಿಶ್ಶೇಷವಾಗಿ ನಾಶವಾಗುವದೇ ಮೋಕ್ಷವೆನಿಸಿಕೊಳ್ಳುವದು. ದೃಢವಾದ ಭಾವನೆಯಿಂದ ಪೂರ್ವೋತ್ತರ ವಿಚಾರವಿಲ್ಲದೆ ಪದಾರ್ಥಗಳಂ ಹಿಡಿಯುವ ಚಿತ್ತವೃತ್ತಿಯೇ ವಾಸನೆಯೆನಿಸಿಕೊಳ್ಳುವದು. ತತ್ವವಿಚಾರದಿಂದೀವಾಸನೆಯು ಪೋಗಲು, ಶಿಶಿರಋತುವಿನೊಡನೆ ಹಿಮವು ಪೋಗುವಂತೆ ಈ ವಾಸನೆಯಸಂಗಡಲೇ ಚಿತ್ತವು ನಷ್ಟವಾಗುವದು. ನಾಡಿಗಳಿಂದ ಅಂಡಕೋಶದಂತೆ ವಾಸನೆಗಳಿಂದಲೇ ಈ ಶರೀರವು ಹಿಡಿಯಲ್ಪಟ್ಟಿರುವದರಿಂದ ವಾಸನೆಗಳೊಡನೆಯೇ ಇದೂ ಪೋಗುವದು. ಅಶುದ್ಧವೆಂತಲೂ ಶುದ್ಧವೆಂತಲೂ ಎರಡು ಪ್ರಕಾರವಾಗಿ ಹೇಳಲ್ಪಡುವ ಆ ವಾಸನೆಗಳಲ್ಲಿ ಬ್ರಹ್ಮಕ್ಕೆ ಇವು ಭಿನ್ನವೆಂದು ಅಜ್ಞಾನರೂಪದಿಂ ದೃಶ್ಯಪದಾರ್ಥಗಳಲ್ಲಿ ಪ್ರವರ್ತಿಸುತ್ತಾ ಅಹಂಕಾರ ಮಮಕಾರಾದಿಗಳನ್ನುಂಟುಮಾಡಿ, ಪುನರ್ಜನ್ಮಕ್ಕೆ ಕಾರಣವಾಗುವ

* ಆತ್ಮನು ದೃಗ್ವಸ್ತುವು, ಪ್ರಪಂಚವು ದೃಶ್ಯವಸ್ತುವು.

† ಇರುವಿಕೆ. (Existence.)

ವಾಸನೆಯೇ ಅಶುದ್ಧವೆನಿಸಿಕೊಳ್ಳುವದು. ದೃಶ್ಯಪದಾರ್ಥವೆಲ್ಲವೂ ದೃಗ್ರೂಪನಾದ ಆತ್ಮನಿಗೆ ಅಭಿನ್ನವೆಂದು ಜ್ಞಾನರೂಪದಿಂ ಪ್ರವರ್ತಿಸುವದೇ ಶುದ್ಧವೆನಿಸುವದು. ಇದು ಹುರದ ಬೀಜದಂತೆ ಜನ್ಮಾಂತರಕ್ಕೆ ಕಾರಣವಾಗದೆ ಸತ್ಪುರುಷರನ್ನಾಶ್ರಯಿಸಿಕೊಂಡಿರುವದು. * ಕುಲಾಲಚಕ್ರದಲ್ಲಿ ಭ್ರಮಣದಂತೆ ಶರೀರದಲ್ಲಿ ನಿಂದಿರುವ ಈ ವಾಸನೆಯಿದ್ದ ಮಹಾತ್ಮರೇ ಜೀವನ್ಮುಕ್ತರೆನಿಸಿಕೊಳ್ಳುವರು. ಪ್ರಕೃತದಲ್ಲಿ ಶ್ರೀರಾಮಚಂದ್ರನು ಜೀವನ್ಮುಕ್ತನಾದ ರೀತಿಯಂ ಕೇಳುವನಾಗು. ವಿದ್ಯಾಗೃಹದಲ್ಲಿ ಸರ್ವವಿದ್ಯೆಗಳಂ ಕಲಿತು ಉಪಾಧ್ಯಾಯರ ಅನುಜ್ಞೆಯಿಂದರಮನೆಗೆ ಬಂದಬಳಿಕ ಕೇಕಯಮಹಾರಾಯನು ಭರತನಂ ಕರೆಸಿಕೊಳ್ಳಲು, ಲಕ್ಷ್ಮಣ ಶತ್ರುಘ್ನರಿಂದೊಡಗೂಡಿದ ರಾಮಚಂದ್ರನು ತೀರ್ಥಯಾತ್ರೆಯಂ ಮಾಡಲಿಚ್ಛೈಸಿ, ದಶರಥಮಹಾರಾಯನ ಅಪ್ಪಣೆಯಿಂದ ಕೆಲವು ಬ್ರಾಹ್ಮಣರನ್ನು ರಾಜಕುಮಾರರನ್ನು ಸಹ ಕರೆದುಕೊಂಡು ಕೋಸಲದೇಶವೊದಲುಗೊಂಡು ಆಯಾಯ ಮಹರ್ಷಿಗಳ ಆಶ್ರಮಕ್ಕೆ ಪೋಗೆ, ಅವರವರ ಇಷ್ಟಾರ್ಥಗಳನ್ನೀಯುತ್ತಾ ಗಂಗಾ, ಯಮುನಾ, ಸರಸ್ವತೀ, ಶತದ್ರು, ಚಂದ್ರಭಾಗಾ, ಐರಾವತೀ. ವೇಣೀ, ಕೃಷ್ಣವೇಣೀ, ನಿರ್ವಿಂಧ್ಯಾ, ಸರಯೂ, ಚರ್ಮಣ್ವತೀ, ವಿತಸ್ತಾ, ವಿಪಾಶಾ, ಬಾಹುದಾ, ಮೊದಲಾದ ನದಿಗಳಲ್ಲೂ, ಪ್ರಯಾಗ, ಸಾಲಗ್ರಾಮ, ಸುಬ್ರಹ್ಮಣ್ಯ, ನೈಮಿಶಾರಣ್ಯ, ಧರ್ಮಾರಣ್ಯ, ಗಯಾ, ಕಾಶೀ, ಶ್ರೀಶೈಲ, ಕೇದಾರ, ಪುಷ್ಕರ, ಮೊದಲಾದ ಕ್ಷೇತ್ರಗಳಲ್ಲೂ ಮಾನಸ, ಉತ್ತರಮಾನಸ, ಇಂದ್ರದ್ಯುಮ್ನ ಸರಸ್ಸುಗಳಲ್ಲೂ ಹರಿಹರರುಗಳ ಅರವತ್ತುನಾಲ್ಕು ಸ್ಥಾನಗಳಲ್ಲೂ, ಹಯಗ್ರೀವ ತೀರ್ಥ, ಅಗ್ನಿ ತೀರ್ಥಗಳಲ್ಲೂ, ಸ್ನಾನ, ದಾನ, ಜಪ, ದೇವತಾರ್ಚನೆಗಳಂ ಯಥಾವಿಧಿಯಾಗಿ ನಡೆಸುತ್ತಾ, ವಿಂಧ್ಯ, ಮಂದರ, ಹಿಮವಂತ ಮೊದಲಾದ ಪರ್ವತಗಳಲ್ಲಿ, ರಾಜರ್ಷಿ ಮಹರ್ಷಿ ಬ್ರಹ್ಮರ್ಷಿ ದೇವರ್ಷಿಗಳ ಪ್ರಭಾವವಂ ನೋಡುತ್ತಲೂ, ಸಮುದ್ರಾಂತವಾದ ಭೂಮಂಡಲವಂ ಪ್ರದಕ್ಷಿಣೆಯಂ ಮಾಡಿಕೊಂಡು ಬರುವಲ್ಲಿ ರಾಮನು ಯಾರಂ ನೋಡಲಿಲ್ಲವೋ? ರಾಮನನ್ನು ಯಾರೂ ನೋಡಲಿಲ್ಲವೋ? ಅವರು ನಿರ್ಭಾಗ್ಯರೆಂದು ಲೋಕದಲ್ಲಿ ಪ್ರಸಿದ್ಧಿಯುಂಟಾಯಿತು. ವಿಹಾರಾರ್ಥವಾಗಿ ಪೊರಮಟ್ಟ ಪರಮೇಶ್ವರನು ಅಲ್ಲಲ್ಲಿ ಸುರಮುನಿ ಮೊದಲಾದವರಿಂ ಪೂಜಿತನಾಗಿ ಕೈಲಾಸಕ್ಕೆ ಬರುವಂತೆ, ಮರಳಿ ಶ್ರೀರಾಮಚಂದ್ರನು ಅಯೋಧ್ಯಾಪುರಕ್ಕೆ ಬಂದು ಆಯಾಯ ತೀರ್ಥಕ್ಷೇತ್ರ ಮಾಹಾತ್ಮ್ಯಪ್ರಸ್ತಾಪಗಳಿಂದ, ಸುಹೃತ್ತುಗಳಂ ಸಂತೋಷಪಡಿಸುತ್ತಿರಲು ಸಕಲೇಷ್ಟಾರ್ಥ

* ಕುಂಬಾರನ ತಿರುವಣಿಗೆ.

ಗಳಂ ಕೊಡುವ ಶ್ರೀರಾಮಚಂದ್ರನ ಆಗಮನದಿಂದ ತೀರ್ಥಕ್ಷೇತ್ರವಾಸಿಗಳಿಗೆ ಹ್ಯಾಗೆ ಸಂತೋಷವಾಯಿತೋ ಅದಕ್ಕಿಂತಲೂ ಅಧಿಕವಾಗಿ ಅಯೋಧ್ಯಾಪಟ್ಟಣವಲ್ಲಿರುವ ಜನರಿಗೆ ಸಂತೋಷ ಉಂಟಾಯಿತು. ಆದ್ದರಿಂದ ಯೆಂಟು ದಿವಸ ಪರ್ಯಂತರವೂ ಶ್ರೀರಾಮಭದ್ರನು ಬಂದಿದ್ದಕ್ಕೆ ಮಾಡತಕ್ಕ ದೇವಬ್ರಾಹ್ಮಣ ಸಮಾರಾಧನೆ ಮೊದಲಾದ ಉತ್ಸವಗಳು ಅವರವರ ಮನೆಗಳೊಳು ಜನ್ಮದಿವಸಗಳಲ್ಲಿ ನಡೆಯುವಂತೆ ಬೆಳೆದವು. ಆದಾಗ್ಯೂ ಜನಗಳ ಉತ್ಸಾಹಕ್ಕೆ ಪಾರವಿಲ್ಲದೆಯಿರುವಲ್ಲಿ ಶ್ರೀರಾಮಚಂದ್ರನು ಬಂದೊಂದು ದಿವಸ ಬೇಟೆಗೆ ಪೋಗುತ್ತಲೂ, ಬಂದು ದಿನ ರಾಜ್ಯವಿಚಾರ ಸಭೆಯಲ್ಲಿ ಪ್ರಚಾರವಂ ಮಾಡುತ್ತಲೂ, ರಾಜಪುತ್ರರಿಗೆ ಉಚಿತವಾದ ಆಯಾಯ ಕಾರ್ಯಗಳಂಮಾಡುತ್ತಾ ಕೆಲವುದಿನ ಸುಖದಿಂದಿದ್ದನು. ಬಳಿಕ ಮುನಿ ಶಾಪಾಂಗೀಕಾರದಿಂ ಪ್ರಾಕೃತಭಾವವಂ ವಹಿಸಿರುವ ಆ ರಾಮಭದ್ರನಿಗೆ ತೀರ್ಥಯಾತ್ರಾಪ್ರಭಾವದಿಂ ವಿವೇಕವುಂಟಾಗಿ, ಭೋಗಾಪೇಕ್ಷೆಯಿಲ್ಲದ್ದರಿಂದ ಆಹಾರನಿದ್ರೆಗಳೂ ಕೂಡ ಪೂರ್ವದಂತೆ ನಡೆಯದಿರಲು, ಅವನ ಶರೀರವು ಶರತ್ಕಾಲದ ಸರೋವರದಂತೆ ಕೃಶವಾಯಿತು. ಕಾಲವಿಪಾಕದಿಂದರಳಿದ ದಳಗಳುಳ್ಳ ಕಮಲದಂತೆ ಅವನ ಮುಖವುಬಿಳ್ಪಾದುದು. ತಪಸ್ವಿಯಂತೆ ಜನವಿಲ್ಲದ ಪ್ರದೇಶದಲ್ಲಿ ಪದ್ಮಾಸನವನ್ನವಲಂಬಿಸಿಕೊಂಡಿರುವ ಆ ಶ್ರೀರಾಮನು ಅಂಗೈಯಲ್ಲಿ ಕೆನ್ನೆಯನಿಟ್ಟುಕೊಂಡು ಸರ್ವಕಾಲದಲ್ಲೂ ಧ್ಯಾನವಂ ಮಾಡುತ್ತಾ ಚಿತ್ರಪ್ರತಿಮೆಯಂತೆ ಕಾಣುತ್ತಿದ್ದನು. ಅವನಂನೋಡಿದ ಲಕ್ಷ್ಮಣಶತ್ರುಘ್ನರೂಕೂಡ ಅವನ ಪ್ರತಿಬಿಂಬದಂತೆಯೇ ಕಾಣುತ್ತಿದ್ದರು. ಆ ರಾಮಭದ್ರನು ಯೇನುಕಾರಣಹೀಗಿದ್ದೀಯೆ ? ನಿನ್ನ ಶರೀರಕ್ಕೆ ವ್ಯಥೆಯೋ ಮನಸ್ಸಿಗೆ ಚಿಂತೆಯೋಯೆಂದು ದಶರಥರಾಯನು ಕೇಳಿದಾಗ್ಯೂ ನನಿಗೆ ಯಾವ ದುಃಖವೂಇಲ್ಲವೆಂತಲೇ ಪೇಳಿದನು, ಬಳಿಕ ದಶರಥನು ಯೇನುಕಾರಣ ರಾಮಭದ್ರನು ಹೀಗಿರುವನೆಂದು ವಸಿಷ್ಠನಂ ಕೇಳಲಾಮಹಾಮುನಿಯು ಎಲೈರಾಜೇಂದ್ರನೇ, ಮಹಾಭೂತಗಳಂತೆ ಪರೋಪಕಾರಕ್ಕೋಸುಗವೇ ಪುಟ್ಟಿರುವ ಮಹಾತ್ಮರಿಗೆ ಕೋಪವಾಗಲೀ, ಸಂತೋಷವಾಗಲೀ, ದುಃಖವಾಗಲೀ, ಸ್ವಲ್ಪಕಾರ್ಯಕ್ಕೋಸ್ಕರ ಬರುವದಿಲ್ಲವಾದ್ದರಿಂದ ಇಲ್ಲಿ ಯೇನೋಮಹತ್ತಾದ ಕಾರಣವಿರುವದು. ಇದಕ್ಕೆ ನೀನು ಚಿಂತಿಸಬೇಡವೆಂದು ಪೇಳಿದನು. ರಾಮಚಂದ್ರನು ಹಾಗಿರುವದ್ದರಿಂದ ದಶರಥರಾಯನು ಅಂತಃಪುರಸ್ತ್ರೀರುಗಳು ಸಹ ಚಿಂತಾಕುಲರಾಗಿದ್ದರು. ಹೀಗಿರುವಲ್ಲಿ ಬಂದಾನೊಂದುದಿವಸ ವಿಶ್ವಕ್ಕೆ ಮಿತ್ರನಾದ್ದರಿಂದ ವಿಶ್ವಾಮಿತ್ರನೆಂದು ಪ್ರಸಿದ್ಧನಾದ ಮಹಾಮುನಿಯು ದಶರಥರಾಯನ ಅರಮನೆಗೆ

ಬರಲು, ದ್ವಾರಪಾಲಕರಿಂದ ಆ ಮಹಾನುಭಾವನು ಬಂದದ್ದನ್ನು ತಿಳಿದ ಮಹಾರಾಜನು ಸಪರಿವಾರನಾಗಿ ಎದುರ್ಗೊಂಡು ಪೋಗಿ ಬ್ರಹ್ಮ ಕ್ಷತ್ರತೇಜಸ್ಸುಗಳೆರಡೂ ಶೇರಿರುವದ್ದರಿಂದ ಚಂದ್ರನಿಂ ಕೂಡಿದ ಸೂರ್ಯನಂತೆ ತೇಜಸ್ಸಿನಿಂದ ದಿಕ್ಕುಗಳಂ ಬೆಳಗುತ್ತಾ ಕೆಂಜೆಡೆಗಳಿಂಕೂಡಿರುವ ಹೆಗಲುಗಳುಳ್ಳದ್ದರಿಂದ ಸಂಧ್ಯಾಕಾಲದ ಮೇಘಗಳಿಂದಲಂಕೃತವಾದ ಪರ್ವತದಂತೆ ಪ್ರಕಾಶಿಸುತ್ತಾ ಬಳಗೆ ಸ್ಥಳ ಸಾಲದ್ದರಿಂದ ಹೊರಹೊರಡುವ ಕರುಣಾರಸ ಪ್ರವಾಹದಂತಿರುವ ಕಟಾಕ್ಷಗಳಿಂದಲೂ, ಮನೋಹರವಾದ ನುಡಿಗಳಿಂದಲೂ ಪ್ರಜೆಗಳನ್ನನುಗ್ರಹಿಸುತ್ತ ಕಾರಣವಿಶೇಷದಿಂ ಧರಣಿಗೆ ಬಂದಿರುವ ಸೂರ್ಯನಂತೆ ಪ್ರಕಾಶಿಸುತ್ತಿರುವ ಆ ಮಹಾಮುನಿಯಂ ಕಂಡು ದೂರದಿಂದಲೆ ಸಾಷ್ಟಾಂಗ ಪ್ರಣಾಮವಂಮಾಡಿ, ಸಮೀಪಕ್ಕೆ ಬಂದು ಎಲೈ ಸರ್ವೋತ್ತಮನೆ! ಸೂರ್ಯನಿಂದ ಕಮಲಾಕರಗಳಂತೆ, ನಿನ್ನಿಂದ ನಾವು ಅನುಗ್ರಹಿಸಲ್ಪಟ್ಟೆವು. ನಿನ್ನ ದರ್ಶನದಿಂ ಬ್ರಹ್ಮ ಸಾಕ್ಷಾತ್ಕಾರವಾದವರಂತೆ ನಾವು ಪರಮಾನಂದರಾಗಿರುವೆವು. ನಿಮ್ಮ ಆಗಮನದಿಂದೀಗ ನಾವು ಮಹಾತ್ಮರಾದೆವೆಂದು ಮಾತನಾಡುತ್ತ, ಸಭೆಗೆ ಕರದುಕ್ಕೊಂಡು ಬಂದು ವಸಿಷ್ಠಾದಿಗಳೊಡನೆ ಕುಶಲಪ್ರಶ್ನೆಗಳು ನಡೆಯುತ್ತಿರುವಲ್ಲಿ ಆಸನದಲ್ಲಿ ಕುಳ್ಳಿರಿಸಿ ತಾನೇ ಅರ್ಘ್ಯಪಾದ್ಯಾದಿಗಳಿಂ ಪೂಜಿಸಿ, ಪರಮಸಂತೋಷದಿಂದಿಂತು ವಿಜ್ಞಾಪಿಸಿದನು.

ಎಲೈ ಮಹಾನುಭಾವನೆ! *ಕ್ಷುತ್ತಿನಲ್ಲಿ ರಸಾಯನ ದೊರತಂತೆಯೂ, ಅಕಾಲಮರಣವ್ಯಥೆಯಲ್ಲಿ ಅಮೃತದೊರತಂತೆಯೂ, ಅನಾವೃಷ್ಟಿಯಲ್ಲಿ ಮಳೆ ಬಂದಂತೆಯೂ, ಕುರಡನಿಗೆ ಕಣ್ಣು ಬಂದಂತೆಯೂ, ಇಷ್ಟಳಾಗಿ ಸುಜಾತಿಯಾದ ಪತ್ನಿಯಲ್ಲಿ ಪುತ್ರೋತ್ಸವವಾದಂತೆಯೂ, ಕನಸ್ಸಿನಲ್ಲಿ ಕಂಡ ಇಷ್ಟವಾದ ವಸ್ತುವು ದೊರತಂತೆಯೂ, ಪ್ರೀತಿಯುಕ್ತರಾದ ಪ್ರಿಯಜನರು ಬಂದಂತೆಯೂ, ಹೊಸಪದಾರ್ಥ ಶಿಕ್ಕಿದಂತೆಯೂ, ಸತ್ತವನು ಬದುಕಿದಂತೆಯೂ, ತಮ್ಮ ದರ್ಶನವು ನನಿಗೆ ಸಂತೋಷಕರವಾಗಿಧೆ. ನಿಮ್ಮ ಸಾನ್ನಿಧ್ಯದಿಂ ನಾನು ಬ್ರಹ್ಮಲೋಕದಲ್ಲಿರುವಂತೆಯೂ ಚಂದ್ರಮಂಡಲದಲ್ಲಿ ನಿಂತಿರುವಂತೆಯೂ ಸಂತುಷ್ಟನಾಗಿದೇನೆ. ತಪೋಬಲದಿಂ ರಾಜರ್ಷಿಭಾವವನ್ನತಿಕ್ರಮಿಸಿ, †ಲೋಹವಂ ಸುವರ್ಣವಾಗಿ ಮಾಡುವ ಸಿದ್ಧರಸದಂತೆ ಶರೀರವನ್ನು ಬ್ರಹ್ಮ ತೇಜೋಯುಕ್ತವಾಗಿ, ಮಾಡಿಕೊಂಡ ಮಹಾತ್ಮನಾದ ನಿನ್ನ ಕೃಪಾಕಟಾಕ್ಷದಿಂ ಗಂಗಾಜಲದಿಂದಭಿಷಿಕ್ತನಾದವನಂತೆ ಪರಿಶುದ್ಧನಾಗಿರುವೆನು. ಬ್ರಹ್ಮ ಸಾಕ್ಷಾತ್ಕಾರದಿಂ ನಿತ್ಯತೃಪ್ತನಾಗಿರುವದ್ದರಿಂದ ಇಚ್ಛಾಭಯ ಕ್ರೋಧಗಳಿಲ್ಲದವನಾಗಿ, ಪರಿಪೂರ್ಣ

* ಹಸಿಯುತ್ತಿರುವಾಗ. † ಕಬ್ಬಿಣವನ್ನು.

ಭಾವದಿಂದ ಅಹಂಕಾರವಿಲ್ಲದೆ ಕರ್ಮಗಳಂ ಮಾಡುತ್ತಿದ್ದರೂ ನಿರ್ಲೇಪನಾಗಿ, ದೇಹಭಾವವಿಲ್ಲದ್ದರಿಂದ, ನಿರಾಮಯನಾದ ನೀನು ಸ್ವೇಚ್ಛೆಯಿಂದ ಬಂದಿರುವದು ಅತ್ಯಾಶ್ಚರ್ಯವಾಗಿಧೆ, ಬ್ರಹ್ಮ ಸಾಕ್ಷಾತ್ಕಾರದಿಂ ತಪಸ್ವಿಯಂತೆ ಆನಂದ ಪೂರ್ಣನಾದನಾನು, ಚಂದ್ರದರ್ಶನದಿಂ ಸಮುದ್ರದಂತೆ ಅಣಗದಿರುವೆನು. ನಿನ್ನಂಥಾ ಪಾತ್ರದಲ್ಲಿ ನನಗೆ ಕೊಡಕೂಡದಂಥಾದ್ದು ಯಾವದೂ ಇಲ್ಲವಾದ್ದರಿಂದ, ಸ್ವಲ್ಪವೂ ವಿಚಾರಿಸದೇ ಬಂದ ಕಾರ್ಯವನ್ನಾಜ್ಞಾಪಿಸುವನಾಗು, ಎಂದು ಪ್ರಾರ್ಥಿಸುತ್ತಿರುವ ಆ ರಾಯನ ಮಧುರೋಕ್ತಿಗಳಂ ಕೇಳಿ ಹರ್ಷಾಶ್ಚರ್ಯಗಳಿಂ ಪ್ರಕಾಶಿಸುವ ರೋಮಾಂಚವುಳ್ಳ, ಆ ಮಹಾಮುನಿಯು ಎಲೈ ರಾಜಶ್ರೇಷ್ಠನೇ! ಮಹಾಕುಲದಲ್ಲಿ ಪುಟ್ಟಿ, ವಸಿಷ್ಠನ ಆಜ್ಞಾನುಸಾರಿಯಾಗಿರುವ ನೀನು ಹೀಗೆ ಹೇಳುವಂಥಾದ್ದು ಆಶ್ಚರ್ಯವಲ್ಲವೆಂದು ಶ್ಲಾಘಿಸಿ ತನ್ನ ಮನೋರಥವಂ ನಿರೂಪಿಸಿದನದೆಂತೆನೆ.

ಎಲೈ ಮಹಾರಾಜನೇ! ನಾನು ಯಜ್ಞವಂ ಮಾಡಲಾರಂಭಿಸುವಲ್ಲಿ ಖರದೂಷಣರಕಡೆ ರಾಕ್ಷಸರು ಬಂದು ಉತ್ಪಾತಮೇಘಗಳಂತೆ ರಕ್ತಮಾಂಸಗಳಂ ವರ್ಷಿಸುತ್ತಾ ವಿಘ್ನವಂ ಮಾಡುತಲಿಧಾರೆ. ದೀಕ್ಷಾಕಾಲವಾದ್ದರಿಂದಲೂ, ತಪಸ್ಸೇ ಮೂಲಧನವಾದ್ದರಿಂದಲೂ, ಅವರಮೇಲೆ ಕೋಪವಂ ಮಾಡುವದಕ್ಕೆ ನನ್ನ ಮನಸ್ಸು ಸಮ್ಮತಿಸುವದಿಲ್ಲ. ಆದ್ದರಿಂದ ನಿರ್ವಿಘ್ನವಾಗಿ ಯಜ್ಞವಂ ಪೂರೈಸಲಸಮರ್ಥನಾದ ನಾನು ಯಜ್ಞಸಂರಕ್ಷಣಾರ್ಥವಾಗಿ ನಿನ್ನ ಮಗನಾದ ಶ್ರೀರಾಮನನ್ನು ಕರದುಕೊಂಡು ಪೋಗಬೇಕೆಂದು ಬಂದಿರುವೆನು. ಶರಣು ಹೊಂದಿದವರನ್ನು ರಕ್ಷಿಸುವಂಥಾದ್ದು, ಅರ್ಥಿಗಳಿಗೆ ಇಷ್ಟಾರ್ಥವಂ ಕೊಡುವಂಥಾದ್ದು, ಪ್ರತಿಜ್ಞೆಯನ್ನು ನೆರವೇರಿಸುವಂಥಾದ್ದು ಸಹ ಸತ್ಪುರುಷರ ಧರ್ಮವಾದ್ದರಿಂದ ನನ್ನ ಸಂಗಡ ಶ್ರೀರಾಮನನ್ನು ಕಳುಹಿಸುವನಾಗು. ಮದ್ದಾನೆಗಳಿಗೆ ಸಿಂಹದಂತೆ ಆ ರಾಕ್ಷಸರಿಗೆ ರಾಮನೇ ಸಂಹಾರಕನಾಗುವನಲ್ಲದೆ ಮತ್ತೊಬ್ಬನಾಗಲಾರನು. ಕೋಪಿಸಿಕೊಂಡಿರುವ ಸಿಂಹವಂ ಮೃಗಗಳಂತೆ ಅವರು ರಾಮನಂ ನೋಡಲು ಸಮರ್ಥರಾಗುವದಿಲ್ಲ. ಮೂರುಲೋಕಗಳಲ್ಲೂ ಪೂಜ್ಯನಾಗುವಂತೆ ನಿನ್ನ ಮಗನಿಗೆ ಅನೇಕಪ್ರಕಾರವಾದ ಶ್ರೇಯಸ್ಸನ್ನು ನಾನು ಉಂಟುಮಾಡುವೆನು. ಆ ರಾಕ್ಷಸರು ಕಾಲಕೂಟಕ್ಕೆ ಸಮಾನವಾದ ವೇಗವುಳ್ಳವರಾದಾಗ್ಯೂ ಮೇಲಕ್ಕೆ ಏಳುವ ಧೂಳಿಗಳು ವೃಷ್ಟಿಯಿಂದಣಗುವಂತೆ ರಾಮನ ಶರಧಾರೆಗಳಿಂದಣಗುವರು. ಸಂದೇಹಪಡುವದಕ್ಕೆ ಯೋಗ್ಯವಾದ ವಿಷಯದಲ್ಲಿ ನಮ್ಮಂಥಾವರ ಮನಸ್ಸು ನಿಷ್ಕಲ್ಮಷವಾಗಿ ಪ್ರವರ್ತಿಸುವದಿಲ್ಲವಾದ್ದರಿಂದ ರಾಮನಿಂದ ರಾಕ್ಷಸರು

ಸಂಹೃತರಾಗುವರೆಂತಲೂ, ನನ್ನಯಜ್ಞವು ನಿರ್ವಿಘ್ನವಾಗಿ ಬೆಳೆಯುವದೆಂತಲೂ, ನಾನು ನಿಶ್ಚಯಿಸಿವೇನೆ. ರಾಮನು ಮಹಾತ್ಮನೆಂತಲೂ, ಪ್ರತಿಪತಿ ಇಲ್ಲದ ಪರಾಕ್ರಮವುಳ್ಳವನೆಂತಲೂ, ನಾನು ಬಲ್ಲೆನು. ಮಹಾ ತೇಜಸ್ವಿಯಾದ ವಸಿಷ್ಠನೂ ಬಲ್ಲನು. ಇನ್ನು ತಪೋನಿಷ್ಠರಾದ ವಿದ್ವಾಂಸರೂ ತಿಳದಿರುವರು. ಈ ರಾಮನಲ್ಲಿ ನೀನು ಪುತ್ರನೆಂಬ ಸ್ನೇಹವಂ ಬಿಟ್ಟು ನನ್ನ ಸಂಗಡ ಕಳುಹಿಸುವನಾಗು. ಧರ್ಮದಲ್ಲಿಯೂ, ಯಶಸ್ಸಿನಲ್ಲಿಯೂ, ಮಹತ್ವದಲ್ಲಿಯೂ ಮನಸ್ಸು ಇದ್ದರೆ ಈ ಕೆಲಸವಂ ನೀನು ಮಾಡುವನಾಗು. ವಸಿಷ್ಠ ಮೊದಲಾದ ಮಂತ್ರಿಗಳೂ ಇದಕ್ಕೆ ಅನುಜ್ಞೆಯಂಕೊಡಲಿ, ಕಾಲದಲ್ಲಿಮಾಡಿದ ಉಪಕಾರವು ಸ್ವಲ್ಪವಾದಾಗ್ಯೂ ಮಹತ್ತಾಗುವದು. ಅಕಾಲದ ಉಪಕಾರವು ಮಹತ್ತಾದಾಗ್ಯೂ ವ್ಯರ್ಥವಾಗುವದಾದ್ದರಿಂದ ಯಜ್ಞಕಾಲ ಮೀರದಂತೆ ಶ್ರೀರಾಮನಂ ನನ್ನ ಸಂಗಡ ಕಳುಹಿಸುವನಾಗು, ಎಂದು ಜೆಸಗೊಳ್ಳುವ ವಿಶ್ವಾಮಿತ್ರನ ವಚನವಂ ಕೇಳಿದ ದಶರಥನು ಮರ್ಮದಲ್ಲಿ ವಜ್ರಾಯುಧದಿಂ ಪೆಟ್ಟುಬಿದ್ದು ಮೂರ್ಛಿತನಾದವನಂತೆ ಒಂದು ಮುಹೂರ್ತ ಮಾತ್ರ ಸ್ತಬ್ಧನಾಗಿದ್ದು ಅತಿದೈನ್ಯದಿಂ ಪೇಳಿದನದೆಂತೆನೆ,—

"ಎಲೈ ಮಹಾಮುನಿಯೇ! ಹದಿನಾರುವರ್ಷ ತುಂಬದೆ ಬಾಲಕನಾಗಿರುವ ರಾಮಭದ್ರನಿಗೆ ಯಾವ ಯುದ್ಧಯೋಗ್ಯತೆ ಇರುವದು? ಸಂಪೂರ್ಣವಾದ ಅಕ್ಷೋಹಿಣೀ ಬಲವುಳ್ಳ ನಾನು ಧನುರ್ಧಾರಿಯಾಗಿ ಆ ರಾಕ್ಷಸರೊಡನೆ ಯುದ್ಧವಂ ಮಾಡುವೆನು; ಬಾಲಕನಾದ ರಾಮನು ಅಂತಃಪುರದಲ್ಲಿ ಚಿತ್ರದೊಳ್ಬರದಿರುವ ಯುದ್ಧವನ್ನೇ ಕಂಡಿರುವನಾದ್ದರಿಂದ ಇವನಿಗೆ ಯಾವ ಶಸ್ತ್ರಾಸ್ತ್ರಗಳ ಸಂಗ್ರವು ಇಲ್ಲ; ಈ ರಾಮನು ಮನೆಯಲ್ಲೂ, ಉದ್ಯಾನವನಗಳಲ್ಲೂ, ರಾಜಕುಮಾರರೊಡನೆ ಆಡಿಕೊಂಡಿರುವದಂ ಬಲ್ಲನಲ್ಲದೆ, ಮತ್ತೊಂದು ವಿಷಯವನ್ನು ತಿಳಿದವನಲ್ಲ; ಈಗ ನನ್ನ ದೌರ್ಭಾಗ್ಯಕ್ಕೆ ಪರಿಣಾಮರೂಪವಾದ ಮನೋರೋಗದಿಂ ಮಂಜಿನಿಂದ ಕಮಲ ಸಮೂಹದಂತೆ ಬಿಳುಪಾಗಿ ಕೃಶನಾಗುತ್ತಿರುವನು. ಆದ್ದರಿಂದ ಸಪರಿವಾರನಾದ ನಾನು ಶರತ್ಕಾಲದಿಂ ಮೇಘದಂತೆ ನಿಸ್ಸಾರನಾಗಿರುವೆನು; ಆದ್ದರಿಂದ ಈ ಪ್ರಕಾರವಾಗಿ ಸಾಧುಗಳಂ ದುಃಖಪಡಿಸುತ್ತಾ ಕಾಲವೇ ಹೊಸದಾಗಿ ಬಂದಿದೆಯೆಂದು ತಿಳಿಯುವೆನು; ಹೀಗಿರುವಲ್ಲಿ ಆ ಬಾಲಕನಂ ನಾನು ಯುದ್ಧಕ್ಕೆ ಕಳುಹಿಸುವದು ಹ್ಯಾಗೆ? * ನವೋಢಾ ಸಂಭೋಗಕ್ಕಿಂತಲೂ, ಅಮೃತರಸಪಾನಕ್ಕಿಂತಲೂ, ಶತ್ರುವಿಲ್ಲದ ರಾಜ್ಯ ಸುಖಕ್ಕಿಂತಲೂ, ಪುತ್ರ

* ಹೊಸದಾಗಿ ಮದುವೆಯಾದವಳು.

ಸ್ನೇಹವು ಅಧಿಕವಾದ್ದರಿಂದ ಅದಕ್ಕೋಸ್ಕರ ಸತ್ಪುರುಷರಾದಾಗ್ಯೂ, ಮಾಡ ಬಾರದ ಕೆಟ್ಟಕೆಲಸಗಳನ್ನಾದರೂ ಮಾಡುವರು. ಪ್ರಾಣಗಳನ್ನು, ಧನವನ್ನು, ಪತ್ನಿಯನ್ನು, ಕೂಡ ಸಮಯಗಳಲ್ಲಿ ಬಿಡುವರಲ್ಲದೆ ಮಗನನ್ನು ಯಾರೂ ಬಿಡ ಲಾರರು. ಇದು ಪ್ರಾಣಿಗಳಿಗೆ ಸಹಜವಾದದ್ದಲ್ಲವೆ ? ಕೂಟಯೋಧಿಗಳಾಗಿ ಕ್ರೂರಸ್ವಭಾವ ಕರ್ಮಗಳುಳ್ಳವರಾಗಿ ರಣಸಮರ್ಥರಾದ ರಾಕ್ಷಸರೊಡನೆ ಬಾ ಲಕನಾದ ರಾಮನಿಗೆ ಯುದ್ಧವೆನ್ನುವದು ಕೇಳುವದಕ್ಕೂ ಕೂಡ ಅಶಕ್ಯವಾಗಿ ರುವದು. ಒಂಬತ್ತು ಸಾವಿರ ವರ್ಷಗಳು ಏಕರೀತಿಯಾಗಿ ಯೋಚಿಸಿ, ಕೊ ನೆಗೆ ಪುತ್ರಕಾಮೇಷ್ಟಿಯಿಂದ ಪಡೆದ ನಾಲ್ಕು ಮಕ್ಕಳಲ್ಲಿ ರಾಮನು ಸರ್ವಾಭಿ ರಾಮನಾದ್ದರಿಂದ, ಅವನಂ ಬಿಟ್ಟಿರಲಾರೆನು; ಅವನಂ ನೀನು ಕರದುಕೊಂಡು ಹೋದಲ್ಲಿ, ಅವನ ತಮ್ಮಂದರೊಳ್ ಯಾವನೂ ಪ್ರಾಣವಂ ಧರಿಸನು; ಬಳಿಕ ಪುತ್ರಹೀನನಾದನಾನೂ ಮೃತನಾಗುವೆನು; ರಾಕ್ಷಸರ ಸಂಹಾರದಲ್ಲಿ ನಿನಗೆ ಅ ಪೇಕ್ಷೆಯಿದ್ದರೆ ಸೇನಾಸಹಿತನಾದ ನಾನೆ ಸಿದ್ಧವಾಗುತಲಿಧೇನೆ; ಆದರೆ ರಾವಣ ನಾದರೂ, ಮಾರೀಚ ಸುಬಾಹುಗಳಾದರೂ, ಲವಣಾಸುರನಾದರೂ ನಿನ್ನ ಯ ಜ್ಞಕ್ಕೆ ವಿಘ್ನವಂ ಮಾಡುತ್ತಿದ್ದಲ್ಲಿ, ಅವರಂ ನೋಡುವದಕ್ಕೂ ನಮಿಗೆ ಶಕ್ತಿಯಿ ಲ್ಲ; ಕಾಲವಿಶೇಷಗಳಲ್ಲಿ ಕೆಲವರಿಗೆ ಅಭಿವೃದ್ಧಿಯು ಕೆಲವರಿಗೆ ನ್ಯೂನತೆಯೂ ಸಹ ಸಹಜವಾದ್ದರಿಂದ, ಈ ಕಾಲದಲ್ಲೀ ರಾವಣಾದಿಗಳೆದುರಿಗೆ ನಿಲ್ಲುವದಕ್ಕೂ ನಮಿಗೆ ಶಕ್ತಿಯಿಲ್ಲ; ಈಗ ನೀನು ರಾಮನಂ ಕರದುಕೊಂಡು ಹೋಗದಿರೆ ನಾನು ಸಜೀವನಾಗಿರುವೆನು'' ಎಂದು ಪ್ರಾರ್ಥಿಸುತ್ತಿರುವ ದಶರಥನ ವಚನದಿಂ ಕೋಪಗೊಂಡ ವಿಶ್ವಾಮಿತ್ರನು-

"ಎಲೈ ಮಹಾರಾಜನೇ ! ಚಂದ್ರನಲ್ಲಿ ಉಷ್ಣವಾದ ಕಿರಣವು ಎಂದಿಗೂ ಸಂಭವಿಸಲಾರದಾದ್ದರಿಂದ, ರಘುಕುಲದಲ್ಲಿ ಪುಟ್ಟಿದ ನೀನು ಪ್ರತಿಜ್ಞೆಯಂ ನೆರ ವೇರಿಸದಿರುವದು ಯುಕ್ತವಲ್ಲ; ಮೊದಲು ನೀನು ಸಿಹ್ಮವಾಗಿ ಈಗ ಮೃಗವಾ ಗಬೇಕೆನುತೀಯೆ ! ರಾಮನಂ ಕಳುಹಿಸಲಪೇಕ್ಷೆಯಿಲ್ಲದಿರೆ ನಾನು ಹೋಗು ತ್ತೇನೆ, ಬಂಧುಗಳೊಡನೆ ನೀನು ಸುಖದಿಂದಿರುವನಾಗೆಂದು'' ನುಡಿಯುವಲ್ಲಿ, ಭೂಮಿಯು ಕಂಪಿಸಲು, ದೇವತೆಗಳಿಗೆ ಭಯವುಂಟಾಗಲು, ಅದಂ ತಿಳಿದ ಮುನಿಶ್ರೇಷ್ಠನಾದ ವಸಿಷ್ಠನು-

ಎಲೈ ರಾಜೇಂದ್ರನೆ ಮಾಡಿದ ಪ್ರತಿಜ್ಞೆಯಂ ಪೂರೈಸದಿರುವನಿಗೆ, ಇಷ್ಟಾ ಪೂರ್ತ ಧರ್ಮವು ನಷ್ಟವಾಗುವದ್ದರಿಂದ, ಈ ಮುನೀಶ್ವರನೊಡನೆ ರಾಮನಂ ಕಳುಹಿಸುವನಾಗು, ಇಕ್ಷ್ವಾಕು ವಂಶದಲ್ಲಿ ಪುಟ್ಟಿ, ಧಾರ್ಮಿಕನೆಂದು ಪ್ರಸಿದ್ಧ

ನಾದ ನೀನು, ಪ್ರತಿಜ್ಞೆಯಂ ಪಾಲಿಸದಿರುವಲ್ಲಿ ಇನ್ನು ಪಾಲಿಸುವನು ಯಾರು? ಧರ್ಮಕ್ಕೆ ಪ್ರತಿಷ್ಠೆಯನ್ನುಂಟುಮಾಡುವ ನಿಮ್ಮ ಅನುಸರಣೆಯಿಂದಲೇ ಲೋಕವು ಮರ್ಯಾದೆಯೊಳ್ ನಿಲ್ಲಬೇಕಾದ್ದರಿಂದ ನೀನು ಹೀಗೆ ಮಾಡುವದು ಸರಿಯಾದ್ದಲ್ಲ, ಈ ಮಹಾಮುನಿಯಿಂದ ಸಂರಕ್ಷಿಸಲ್ಪಡುವ ರಾಮಚಂದ್ರನು ಬಾಲಕನಾದಾಗ್ಯೂ, ಶಸ್ತ್ರಾಸ್ತ್ರಗಳಿಲ್ಲದವನಾದಾಗ್ಯೂ, ಅಗ್ನಿಯಿಂದ ರಕ್ಷಿಸಲ್ಪಡುವ ಅಮೃತದಂತೆ ಪರರಿಗೆ ಅಸಾಧ್ಯನಾಗುವನು, ತೇಜಸ್ವಿಗಳಿಗೂ, ಬುದ್ಧಿಶಾಲಿಗಳಿಗೂ, ಅಧಿಕನಾಗಿ, ತಪಸ್ಸಿಗೆ ನಿಧಿಯಂತಿರುವ ಈ ಮುನಿಯನ್ನು, ಶರೀರವುಳ್ಳ ಧರ್ಮವೆಂದು ತಿಳಿಯುವನಾಗು, ಇವನು ನಾನಾ ರೂಪವಾದ ಅಸ್ತ್ರಗಳಿಗೆ ನಿಧಿಯಾದ್ದರಿಂದ, ಇವನಂತೆ ಅಸ್ತ್ರವಿದ್ಯೆಯನ್ನು ತಿಳಿದಂಥಾವನು ತಿಳಿಯತಕ್ಕಂಥಾವನು ಯಾರೂ ಇಲ್ಲವೆಂದು ನಿಶ್ಚೈಸುವನಾಗು, ಇವನು ರಾಜ್ಯವನ್ನಾಳುತ್ತಿರುವಲ್ಲಿ ಭೃಶಾಶ್ವನಿಗೆ ಮಕ್ಕಳಾದ ನೂರು ಅಸ್ತ್ರಗಳು, ಇವನನ್ನನುಸರಿಸಿದವು. ಇವನ ಸಮೀಪದಲ್ಲಿರುವನು, ಕಾಲಮೃತ್ಯುವಿಗೂ ಕೂಡ ಅಸಾಧ್ಯನಾಗುವದ್ದರಿಂದ, ಸ್ವಲ್ಪವಾದರೂ ಸಂದೇಹಪಡದೆ ಇವನ ಸಂಗಡ ರಾಮನಂ ಕಳುಹಿಸುವನಾಗೆಂದು ಪೇಳಲು, ಆಗ ದಶರಥನು ಸಂತುಷ್ಟನಾಗಿ ರಾಮಚಂದ್ರನಂ ಕರತರುವಂತೆ ಭೃತ್ಯನಂ ಕಳುಹಿಸಿದನು.

ಆ ಭೃತ್ಯನು ಮುಹೂರ್ತಮಾತ್ರದಿಂ ಪುನಃ ಬಂದು ಎಲೈ ದೇವನೆ ರಾತ್ರಿಯೊಳ್ ಕಮಲದಲ್ಲಿ ಭ್ರಮರದಂತೆ, ಅಂತಃಪುರ ಗೃಹವಲ್ಲಿ ದುಃಖದಿಂದಿದ್ದ ರಾಮಭದ್ರನು ನನ್ನ ಮುಖದಿಂ ರಾಜಶಾಸನವಂ ಕೇಳಿದಾಗ್ಯೂ, ಕ್ಷಣಮಾತ್ರದಿಂ ಬರುವೆನೆಂದು ಪೇಳುತ್ತಾ ಏನೇನೋ ಚಿಂತಿಸುತ್ತಲಿಧಾನೆ ಎಂದು ಪೇಳಲಾ ರಾಜೇಂದ್ರನು, ಎಲೈ ಸುಮತಿಯೆ, ರಾಮಭದ್ರನು ಹೀಗೆ ಯಾಕೆ ಇರುವನು, ಎಷ್ಟು ದಿವಸದಿಂ ಹೀಗೆ ಇರುವನು, ಏನೇನು ಮಾಡುವನು, ಕ್ರಮವಾಗಿ ಪೇಳೆಂದು ಕೇಳಲಾಭೃತ್ಯನು, ಎಲೈ ಮಹಾರಾಜನೇ, ರಾಮಭದ್ರನು ತೀರ್ಥಯಾತ್ರೆಗೆ ಹೋಗಿ ಬಂದಾರಭ್ಯವಾಗಿ ಹೀಗೆ ದುಃಖಿತನಾಗಿರುವನು; ಸ್ನಾನ ದೇವಾರ್ಚನೆ ದಾನ ಭೋಜನಾದಿಗಳಲ್ಲಿಯೂ ಕೂಡ ಮನಸ್ಸಿಲ್ಲದ ರಾಮಭದ್ರನು, ನಾವು ಎಷ್ಟುಪ್ರಕಾರವಾಗಿ ಬಲಾತ್ಕಾರವಂ ಮಾಡಿದಾಗ್ಯೂ ಪೂರ್ವದಂತೆ ಭೋಜನವಂ ಮಾಡುವದಿಲ್ಲ; ವರ್ಷೋದಕಧಾರೆಗಳಿಂ ಚಾತಕಪಕ್ಷಿಯು ಕ್ರೀಡಿಸುವಂತೆ ಅಂತಃಪುರ ನಾರಿಯರಿಂದ ಡೋಲೋತ್ಸವನ್ನನುಭವಿಸುವದಿಲ್ಲ; ಕ್ಷೀಣಪುಣ್ಯನಾಗಿ ಬೀಳುವನನ್ನು ಸ್ವರ್ಗದಂತೆ ಕಿರೀಟಾದ್ಯಾಭರಣಗಳ ಲಕ್ಷ್ಮಿಯು ಇವನಂ ಸಂತೋಷಪಡಿಸುವದಿಲ್ಲ.

ಕ್ರೀಡಾಸಕ್ತರಾದ ಹುಡಗಿಯರಿಗೆ ಮನೋಹರವಾಗಿ ಸುಳಿಗಾಳಿಯಿಂ ರಮಣೀಯವಾದ ಲತಾಗೃಹಗಳಂ ನೋಡಿ ಇವನು ಅತ್ಯಂತವಾಗಿ ದುಃಖಪಡುವನು. ಲೋಕದಲ್ಲಿ ಯಾವ್ಯಾವವು ಮನೋಹರವೆನಿಸಿಕೊಳ್ಳುವದೋ, ಅದೆಲ್ಲವೂ ಇವನಿಗೆ ದುಃಖಕರವಾಗಿರುವದು, ಏನುಕಾರಣದಿಂದಿವರು ನೋಡುವರಿಗೆ ದುಃಖವನ್ನುಂಟುಮಾಡುತ್ತಾ ಕುಣಿಯುವರೆಂದು ನಾಟ್ಯಾಸಕ್ತರಾದ ಪೌರನಾರಿಯರಂ ನಿಂದಿಸುವನು, ಸಂಪತ್ತಿನಿಂದೇನು, ವಿಪತ್ತಿನಿಂದೇನು, ಮನೆಯಿಂದೇನು, ಇದರ ಅಪೇಕ್ಷೆಗಳಿಂದೇನು, ಯಾವದೂ ಯಥಾರ್ಥವಲ್ಲವೆಂದು, ತಾನೊಬ್ಬನೇ ಮಾತನಾಡಿಕೊಳ್ಳುವನು. ಯಾವ ಪರಿಹಾಸ್ಯ ವಿಷಯದಲ್ಲಿಯೂ, ಯಾವ ಭೋಗದಲ್ಲಿಯೂ, ಯಾವ ಕಾರ್ಯದಲ್ಲಿಯೂ ಆಸಕ್ತನಾಗದೆ ಸರ್ವಕಾಲದಲ್ಲಿಯೂ, ಮೌನದಿಂದಿರುವನು. ಮೃಗಗಳಂತೆ ಮನೋಹರವಾದ ನೇತ್ರವುಳ್ಳ ಸ್ತ್ರೀಯರುಗಳ ದರ್ಶನವಲ್ಲಿ ಕಾಡುಮರದಂತೆ ನಿಸ್ಪೃಹನಾಗಿರುವನು. ಅಶನವಸನಾದಿಗಳಲ್ಲಿ ಸನ್ಯಾಸಿಯಾದ ತಪಸ್ವಿಯಂತೆ ತಟಸ್ಥನಾಗಿರುವನು. ಜನಶೂನ್ಯವಾದ ನದೀತೀರಗಳಿಗೂ, ಅರಣ್ಯಗಳಿಗೂ ಹೋದರೆ ಕ್ರಯಕ್ಕೆ ಕೊಡಲ್ಪಟ್ಟವನಂತೆ ಅಲ್ಲಿಯೇ ಆಸಕ್ತನಾಗುವನು. ಯಾವಾಗ ನೋಡಿದರೂ, ಅಂಗೈಯಲ್ಲಿ ಕೆನ್ನೆಯನ್ನಿಟ್ಟುಕೊಂಡು ಏನನ್ನೋ ಚಿಂತಿಸುತ್ತಿರುವನಲ್ಲದೆ ಯಾವ ಕೆಲಸವನ್ನೂ ಮಾಡುವದಿಲ್ಲ. ಸುಖದುಃಖಗಳಲ್ಲಿ ಚಿತ್ರಪ್ರತಿಮೆಯಂತೆ ಹರ್ಷದುಃಖಗಳಂ ಹೊಂದುವದಿಲ್ಲ. ದಿನದಿನಕ್ಕಿವನು ಶರತ್ಕಾಲದ ಮೇಘದಂತೆ ಕೃಶವಾಗುವದೊಂದು ಕಾಣುತ್ತಿಯಲ್ಲದೆ ಇನ್ನೇನೂ ಕಾಣುವದಿಲ್ಲ. ನಿನಗೇನು ಆಯಾಸವೆಂದು ಅನ್ಯೆಯನವರುಗಳು ಕೇಳಿದಾಗ್ಯೂ ಏನೂ ಇಲ್ಲವೆಂದು ಹೇಳುವನಲ್ಲದೆ, ಇನ್ನೇನನ್ನೂ ಹೇಳುವದಿಲ್ಲ. ಬಂದೊಂದು ಕಾಲದಲ್ಲಿ, ಅವಿಚಾರ ಮನೋಹರವಾದ ಭೋಗದಲ್ಲಿ ಆಸಕ್ತನಾಗಬೇಡವೆಂದು, ಸಮೀಪದಲ್ಲಿರುವ ಭೃತ್ಯನಿಗೆ ಹೇಳುತ್ತಿರುವನು. ಅನಾಯಾಸವಾದ ಪದವಿಯ ಸಾಧನೆಯಿಲ್ಲದೆ ವ್ಯರ್ಥವಾಗಿ ಆಯುಸ್ಸು ಹೋಗುವದೆಂದು ಸೂಕ್ಷ್ಮವಾಗಿ ಗಾನವಂ ಮಾಡುವನು. ಸಾಮ್ರಾಜ್ಯವನ್ನನುಭವಿಸೆಂದು ಹೇಳುವ ಆಶ್ರಿತಜನವನ್ನೋಡಿ ಹುಚ್ಚನಂತಿವನು ವ್ಯರ್ಥವಾಗಿ ನುಡಿವನೆಂದು ನಗುವನು. ಸಕಲವಾದ ಅನರ್ಥಗಳಿಗೂ ಮುಖ್ಯಸ್ಥಾನವಾದ ಈ ಪದಾರ್ಥವನ್ಯಾಕೆ ಪ್ರಾರ್ಥಿಸುತ್ತೀಯೇ ಎಂದು ಹೇಳುತ್ತಾ, ಯಾಚಕರಿಗೆ ಇಷ್ಟಾರ್ಥಗಳಂ ಕೊಡುವನು. ಇದು ಆಪತ್ತು ಇದು ಸಂಪತ್ತೆಂದು ಕಲ್ಪನಾಮಯವಾದ ಮೋಹವೆಲ್ಲಿಂದ ಬಂತೆಂದು ಶ್ಲೋಕವಂ ಹೇಳುವನು, ಹಾ ! ನಾನು ಕೆಟ್ಟೆನು, ಅನಾಥನಾದೆನೆಂದು ಹೇಳುವರಲ್ಲದೆ ಜನಗಳು

ಯಾಕೆ ವಿರಕ್ತರಾಗುವದಿಲ್ಲವೆಂದು ತಾನೇ ಹೇಳಿಕೊಳ್ಳುವನು. ಬ್ರಾಹ್ಮಣನಾಗಲೀ, ಅರಸಾಗಲಿ, ಉಪದೇಶವಂ ಮಾಡುತಿದ್ದರೆ, ಮೂಢನಂತೆ ಆ ಮಾತನ್ನಂಗೀಕರಿಸುವದಿಲ್ಲ. ದೃಶ್ಯವಾದ ಈ ಪ್ರಪಂಚವು ನೋಡುವ ನಾನೂಕೂಡ ಸುಳ್ಳೆಂದು ಹೇಳುತ್ತಾ, ಎಲ್ಲಿಯೂ ವಿಶ್ವಾಸವಿಲ್ಲದೆ ಯಾವ ಸ್ಥಿತಿಯಲ್ಲಿಯೂ ನಿಲ್ಲದೆ ದುಃಖಪಡುತ್ತಿರುವ ರಾಮಭದ್ರನ ರೀತಿಯಂ ನೋಡುವ ನಾವು ನಿರ್ಮಲವಾದ ಮೇಘವಂ ನೋಡುವ ಚಾತಕಪಕ್ಷಿಗಳಂತೆ ವ್ಯಥೆಪಡುತ್ತಿರುವೆವು. ಆದ್ದರಿಂದ ಇವನ ಮನವು ಸ್ತಿಮಿತವಾಗುವ ರೀತಿಯಂ ಮಹಾರಾಜನು ಆಲೋಚಿಸತಕ್ಕದ್ದು ಎಂದು ಭೃತ್ಯನು ಹೇಳಿದ ಮಾತಂ ಕೇಳಿದ ವಿಶ್ವಾಮಿತ್ರನು,

ಎಲೈ ಸಾಧುಗಳೇ ನೀವು ರಾಮಭದ್ರನನ್ನಿಲ್ಲಿಗೆ ಕರದುಕ್ಕೊಂಡುಬನ್ನಿ, ಬೆಟ್ಟದಮೇಲಣ ಮೋಡವಂ ಬಿರಿಗಾಳಿಯಂತೆ, ಅವನ ಮೋಹವಂ ಹೋಗಲಾಡಿಸುವೆನು; ನನ್ನಮಾತಿನಿಂದವನು ಅಮೃತವಂ ಕುಡಿದವನಂತೆಯು, ಬ್ರಹ್ಮಾನಂದವನ್ನನುಭವಿಸುವಂತೆಯು, ನಿತ್ಯ ತೃಪ್ತನಾಗಿ ಪಕ್ರುತಕಾರ್ಯಗಳಂ ನಿರ್ವಹಿಸುವನೆಂದು ಹೇಳಲು, ಆ ಮಾತಿನಿಂದ ಸಂತುಷ್ಟನಾದ ದಶರಥನು ಮೇಲೆಮೇಲೆ ಭೃತ್ಯರಂ ಕಳುಹುತ್ತಿರಲಾಗಿ ಲಕ್ಷ್ಮಣ ಶತ್ರುಘ್ನರಿಂದಲೂ, ಕೆಲವು ಪರಿಜನರಿಂದಲೂ ಸಹಿತನಾದ ಶ್ರೀರಾಮಚಂದ್ರನು, ಚಂದ್ರನು ಗಗನಪ್ರದೇಶವನೈದುವಂತೆ ಆ ಸಭಾಮಂಟಪಕ್ಕೆ ಬಂದು, ದಶರಥನನ್ನು ವಸಿಷ್ಠವಿಶ್ವಾಮಿತ್ರರನ್ನು ಅಭಿವಂದಿಸಿ, ಇತರ ಜನರನ್ನು ಯಥೋಚಿತವಾಗಿ ಸಂಮಾನಿಸುತ್ತಾ ತನ್ನ ಆಸನದ ಮೇಲೆ ಕುಳಿತುಕ್ಕೊಂಡನು. ಆಗ ಎಲೈ ಮಗನೆ! ವಿವೇಕಿಯಾಗಿ ಕಲ್ಯಾಣಕ್ಕೆ ಪಾತ್ರನಾದ ನೀನು ವ್ಯರ್ಥವಾಗಿ ಶರೀರದಲ್ಲಿರುವ ಭೂತಸಮೂಹವನ್ನು ಆತ್ಮನನ್ನು ಸಹಾ ದುಃಖಪಡಿಸುವದಕ್ಕೆ ಕಾರಣವೇನು ? ದೊಡ್ಡವರ ವಚನವನ್ನನುಸರಿಸುವನಿಗೆ ಶ್ರೇಯಸ್ಸಾಗುವದಲ್ಲದೆ ವೃಥಾ ಚಿಂತೆಯಂ ಮಾಡುವವನಿಗೆ ಆಗಲಾರದು; ಯಾವವರಿಗೆ ಮೋಹವಿರುವದೊ ಆ ವರಿವಿಗೆ ಆಪತ್ತುಗಳು ಬರುವದಲ್ಲದೆ ಮೋಹ ನಿವೃತ್ತಿಯಾದಬಳಿಕ ಬರಲಾರವೆಂದು ದಶರಥನು ಹೇಳುತ್ತಿರಲು, ಆದ್ಯಂತಗಳಲ್ಲು ದುಷ್ಟವಾದ ವಿಷಯಗಳೆಂಬ ಅಂತಶ್ಶತ್ರುಗಳನ್ನು ಕೂಡ ಜೈಸಿರುವ ನೀನು, ಏನುಕಾರಣ ಜಾಡ್ಯಪ್ರದವಾದ ಮೋಹಸಮುದ್ರದಲ್ಲಿ ಬೀಳುತ್ತೀಯೆ ? ಎಂದು ವಸಿಷ್ಠನು ಕೇಳುತ್ತಿರಲು, ವಿಶ್ವಾಮಿತ್ರನು ನುಡಿದನದೆಂತೆನೆ.

ಎಲೈ ಶ್ರೀರಾಮನೆ ಮನದಲ್ಲಿದ್ದುಕೊಂಡು ನೇತ್ರಮೊದಲಾದ ಇಂದ್ರಿಯಗಳಿಗೆ ಚಾಪಲ್ಯವನ್ನುಂಟುಮಾಡುವ ಚಿಂತೆಯಿಂದ ನೀನು ಮೋಹಪಡುವದಕ್ಕೆ

ನಿಮಿತ್ತವೇನು ಇಲಿಗಳು ಮನೆಯಂ ತೊರೆಯುವಂತೆ ಎಂಥಾ ಚಿಂತೆಗಳು ನಿನ್ನ ಮನವಂ ಭೇದಿಸುವವು. ದಶರಥ ಮಹಾರಾಜನು ಬಾಹ್ಯಶತ್ರುಗಳೆಲ್ಲರನ್ನು ಪರಿಹರಿಸಿರುವದ್ದರಿಂದಲು, ಕಾಮಕ್ರೋಧ ಮೊದಲಾದ ಅಂತಶ್ಶತ್ರುಗಳಂ ನೀನು ಸ್ವಾಧೀನದಲ್ಲಿಟ್ಟುಕೊಂಡಿರುವದ್ದರಿಂದಲು, ಅನುಚಿತವಾಗಿಯೂ, ಸಾಧಾರಣವಾಗಿಯೂ ಇರುವ ವ್ಯಥೆಗಳಿಗೆ ನಿನ್ನ ಮನವು ಸ್ಥಾನವಾಗಲಾರದು, ಬಾಯಿ ಬಿಡದೆ ಮನದ ಅಭಿಪ್ರಾಯವು ಸ್ಪಷ್ಟವಾಗಿ ಹೊರಡುವದಿಲ್ಲವಾದ್ದರಿಂದ ತೋರಿರುವ ಅರ್ಥವಂ ವಿವರಿಸುವನಾಗು; ಎಂದು ಭಾವಗರ್ಭವಾದ ವಿಶ್ವಾಮಿತ್ರನ ವಚನವಂ ಕೇಳಿದ ರಾಮಚಂದ್ರನು ಮೇಘದ ಗರ್ಜನೆಯಿಂ ನವಿಲಿನಂತೆ ಸಂತೋಷಪಡುತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ರಾಮಜ್ಞಾನಾಗಮಸಂಗತಿ ನಿರೂಪಣವೆಂಬ ಎರಡನೇ ತರಂಗಕ್ಕೆ ಮಂಗಳಮಹಾ.



## ತೃತೀಯ ತರಂಗ ಪ್ರಾರಂಭಃ.

## ಶ್ರೀ ರಾ ಮ ಚ ಂ ದ್ರ ವಾ ಕ್ಯ .



ಆಬಳಿಕ ಶ್ರೀರಾಮಚಂದ್ರನು ವಿಶ್ವಾಮಿತ್ರನಿಗೆ ತನ್ನ ಅಭಿಪ್ರಾಯವಂ ತಿಳುಹಿದನೆಂತೆನೆ:— ಎಲೈ ಮಹಾಮುನಿಯೆ ! ಸರ್ವಜ್ಞನಾದ ನೀನು ನನ್ನ ಮನದಲ್ಲಿರುವ ದುಃಖವಂ ಹೊರಹೊರಡಿಸಬೇಕೆಂಬ ಅಪೇಕ್ಷೆಯಿಂದಲೇ ದುಃಖವೇನೆಂದು ಕೇಳುತ್ತೀಯೆ ? ಸತ್ಪುರುಷರ ಆಜ್ಞೆಯುಲ್ಲಂಘಿಸಲಶಕ್ಯವಾದ್ದರಿಂದ ಯಥಾಶಕ್ತಿಯಾಗಿ ವಿಜ್ಞಾಪಿಸುವೆನು ? ಈ ಅರಮನೆಯಲ್ಲಿ ಪುಟ್ಟಿ ವೃದ್ಧಿಹೊಂದುತ್ತಾ ವಿದ್ಯೆಗಳಂ ಕಲಿತ ನಾನು ಸದಾಚಾರವನ್ನನುಸರಿಸಿ ತೀರ್ಥಯಾತ್ರೆಯಂ ಮಾಡಿಕೊಂಡು ಬಂದೆನು, ಆಗಿನಾರಭ್ಯ ಸಂಸಾರಾಪೇಕ್ಷೆಗೆ ವಿರುದ್ಧವಾಗಿ ಉಂಟಾದ ವಿವೇಕದಿಂದೀಪ್ರಕಾರ ವಿಚಾರಿಸುತ್ತಿರುವೆನು, ಅದೆಂತೆಂದರೆ.

ಸಾವುಗೋಸುಗವೇ ಪುಟ್ಟುವದು. ಪುಟ್ಟಲೋಸುಗವೇ ಸಾವುದೆಂಬ ನಿಯಮವುಳ್ಳ ಈ ಸಂಸಾರ ಪರಂಪರೆಯು, ಏನೆಂದು ಸುಖವಾಗಿ ಕಾಣುತ್ತಿರುವದು. ಗಂಧಮಾಲ್ಯ ವನಿತಾದಿರೂಪಗಳಾದ ವಿಷಯಗಳು ಭೋಗವೈಭವಗಳಿಗೆ ಸ್ಥಾನವಾದಾಗ್ಯೂ, ಮುಖ್ಯವಾದ ಆಪತ್ತುಗಳಾಗಿರುವವು. ಈ ವಿಷಯಗಳು ಕಬ್ಬಿಣದ ಶಲಾಕೆಗಳಂತೆ ಬೇರೆಯಾಗಿದ್ದು ಒಂದಕ್ಕೊಂದು ಸೇರದಿದ್ದಾಗ್ಯೂ, ಮನಸ್ಸಿನ ಕಲ್ಪನೆಯಿಂದ ಸೇರಿರುವಂತೆ ತೋರುವವು. ವಿಚಾರಿಸುವಲ್ಲಿ, ಮನಸ್ಸೇ ಶೂನ್ಯವಾಗಿ ತಿಳಿಯಲ್ಪಡುವದ್ದರಿಂದ ನಾವು ಯಾವದರಿಂದ ಮೋಹಪಡುವೆವೋ ತಿ

ಳಿಯಲಿಲ್ಲ. ಮರು ಮರೀಚಿಕಾ ಜಲದಿಂದ ಮೃಗಗಳಂತೆ, ವಿಷಯಗಳಿಂ ನಾವು ಶೆಳೆಯಲ್ಪಡುವೆವು. ಈ ಮಾಯೆಯಂ ತಿಳಿದಿದ್ದಾಗ್ಯೂ ಮೂಢರಾಗಿ ಮಾರಲ್ಪಟ್ಟ ಪದಾರ್ಥಗಳಂತೆ ಪರಾಧೀನರಾಗಿರುವೆವು. ಈ ಪ್ರಪಂಚದಲ್ಲಿ ಭೋಗವೆನ್ನುವದು ದೌರ್ಭಾಗ್ಯರೂಪವಾದ್ದರಿಂದ ಕಷ್ಟಾಧಿಕವಾಗಿರುವದು. ಆದಾಗ್ಯೂ ವ್ಯರ್ಥವಾಗಿ ನಾವು ಅದನ್ನೇ ಭಾವಿಸುತ್ತಿರುವೆವು. ಹಳ್ಳದಲ್ಲಿ ಮೃಗಶಿಶುಗಳಂತೆ ವ್ಯರ್ಥವಾಗಿಯೇ ಈ ಭೋಗದಲ್ಲಿ ನಾವು ಬಿದ್ದಿರುವೆವು. ಹೀಗಿರುವಲ್ಲಿ ನನಗೆ ರಾಜ್ಯದಿಂದೇನು ? ಭೋಗಗಳಿಂದೇನು ? ನಾನು ಯಾರು ? ಇದೆಸಿಶಿಕೊಳ್ಳುವ ಪದಾರ್ಥವು ಯಾವದು ? ಯಾವದು ಸುಳ್ಳೋ ಅದು ಸುಳ್ಳೇ ಆಗಲಿ, ಅದರಿಂದ ಯಾವನಿಗೆ ಏನು ಹೋಗುವದು ? ಎಂದು ವಿಚಾರಿಸುವ ನಾನು ಮರುಭೂಮಿಗಳಲ್ಲಿ ಮಾರ್ಗಸ್ಥನಂತೆ ಭೋಗಗಳಲ್ಲಿ ನಿರಾಶೆಯಾಗಿರುವೆನು ? ಎಲೈ ಮಹಾತ್ಮನೇ ಇದು ಯನಿಸಿಕೊಳ್ಳುತ, ದೃಶ್ಯವಾಗಿರುವ ಈ ಪ್ರಪಂಚವೆಲ್ಲವು ಇರುವಂಥಾದ್ದೋ, ಇಲ್ಲದಿರುವಂಥಾದ್ದೋ, ಇದ್ದೂ ಇಲ್ಲದಂತೆ ಕಾಣಿಸಿಕೊಳ್ಳುವಂಥಾದ್ದೋ ಇಲ್ಲದಿದ್ದರೂ ಇರುವಂತೆ ಕಾಣಿಸಿಕೊಳ್ಳುವಂಥಾದ್ದೋ, ಇರುವಂಥಾದ್ದಾದರೆ ಹ್ಯಾಗೆ ನಷ್ಟವಾಗುವದು ? ಇಲ್ಲದಿರುವಂಥಾದ್ದಾದರೆ ಹ್ಯಾಗೆ ಹುಟ್ಟುವದು ? ಇದ್ದೂ ಇಲ್ಲದಂಥಾದ್ದಾದರೆ ಹ್ಯಾಗೆ ಅದೃಶ್ಯವಾಗುವದು ? ಇಲ್ಲದಿದ್ದರೂ ಇರುವಂಥಾದ್ದಾದರೆ ಹ್ಯಾಗೆ ಅದೃಶ್ಯವಾಗುವದು ಏನುಕಾರಣ ನಷ್ಟವಾಗುವದು ? ಏನುಕಾರಣ ಪುನಹಾ ಹುಟ್ಟುವದು ? ಏನುಕಾರಣ ಸ್ಥಿತಿಯಂ ಪಡದು ಸುತ್ತುತ್ತಿರುವದು ? ಇದರ ಸ್ವರೂಪವಂ ನಿರೂಪಿಸುವನಾಗು. ಜರೆಯೆಂತಲೂ, ಮರಣವೆಂತಲೂ, ಜನನವೆಂತಲೂ, ಆಪತ್ತೆಂತಲೂ, ಸಂಪತ್ತೆಂತಲೂ, ಇದರ ಅವಸ್ಥೆಗಳು, ಕಂಡೂ ಕಾಣದ ರೀತಿಗಳಿಂದ ಬಾರಿಬಾರಿಗೂ ವೃದ್ಧಿಹೊಂದುತಲಿರುವವು. ಬಿರಿಗಾಳಿಯಿಂದ ಬೆಟ್ಟದಮರಗಳಂತೆ ತುಚ್ಛವಾದ, ಆ ಭೋಗಗಳಿಂದಲೇ ನಾವು ಮರಳಿಮರಳಿ ಶಿಥಿಲರಾಗುವೆವು ? ಪ್ರಾಣವೆಂಬ ವಾಯುವಿನಿಂದ ಬಿದರುಗಳಂತೆ ವ್ಯರ್ಥವಾಗಿ ಧ್ವನಿಗೈಯ್ಯುತಲಿರುವ ಜನಗಳು, ಅಚೇತನರಂತೆ ಜಡರಾಗಿರುವರಲ್ಲದೆ, ಈ ಭೋಗಸ್ವರೂಪವಂ ವಿಚಾರಿಸುವದಿಲ್ಲ. ಈ ದುಃಖವು ಹ್ಯಾಗೆ ಹೋಗುವದೆಂಬ ಚಿಂತೆಯಿಂದ ನಾನು ಪೊಟ್ಟರೆಯಲ್ಲಿರುವ ವಹ್ನಿಯಿಂದ ಹಳೇ ಮರದಂತೆ ಸಂತಪ್ತನಾಗುವೆನು, ಸಂಸಾರದುಃಖಗಳೆಂಬ ಕಲ್ಲುಗಳಿಂದ ತುಂಬಿರುವ ಹೃದಯವುಳ್ಳವನಾದಾಗ್ಯೂ ಜನಗಳ ಭಯದಿಂ ನಾನು ರೋದನವಂ ಮಾಡುವದಿಲ್ಲ, ತೂಗಲು ಕಣ್ಣೀರು ಸಹಾ ಇಲ್ಲದ ಈ ನನ್ನ ರೋದನಗಳನ್ನು ನನ್ನ ಹೃದಯದಲ್ಲಿರುವ ವಿವೇಕ

ಬಂದೇ ನೋಡುತ್ತಿರುವದು, ದೈವವಶದಿಂ ಬಂದ ದಾರಿದ್ರ್ಯದಿಂ ದುಃಖಪಡುವ ಶ್ರೀಮಂತನಂತೆ, ಭೋಗಪದಾರ್ಥಗಳ ನಾಶವಂ ಚಿಂತಿಸುತ್ತಾ ದೀರ್ಘವಾದ ಸಂಸಾರದರೀತಿಯಿಂ ದುಃಖಪಡುತ್ತಿರುವೆನು ಅದೆಂತೆಂದರೆ:—ಈ ಸಂಸಾರದಲ್ಲಿ ವಂಚಕರಾದ ಸ್ತ್ರೀರುಗಳು, ಪುರುಷರ ಮನವಂ ಮೋಹಪಡಿಸುವರು. ಧೈರ್ಯ, ಗಾಂಭೀರ್ಯ, ಶೌರ್ಯ ಮೊದಲಾದ ಅವರ ಗುಣಗಳಂ ಖಂಡಿಸುವರು, ಅವರಿಗೆ ನಾನಾಪ್ರಕಾರವಾದ ದುಃಖವಂ ಕೊಡುವರು, ಹೃದಯವಂ ಕತ್ತರಿಸುವ ಮೊನೆಗಳುಳ್ಳ ವಿಚಿತ್ರವಾದ ಚಿಂತೆಗಳೆಂಬ ಅರಗಳ ಸಮೂಹಕ್ಕೆ ಚಕ್ರವಾಗಿ ದುಃಖಮಯವಾದಾಗ್ಯೂ ಸುಖರೂಪವಾಗಿ ತೋರುತಲೂ ಸಂಸಾರವಂ ವೃದ್ಧಿ ಹೊಂದಿಸುತಲೂ, ಸಮಸ್ತವಾದ ಆಪತ್ತುಗಳಿಗೂ ಮನೆಯಾಗಿರುವ ಧನವು, ನನಿಗೆ ಸುಖಕರವಾಗುವದಿಲ್ಲ; ನಾನಾಪ್ರಕಾರವಾಗಿರುವ ದೋಷಗಳುಳ್ಳ ದುರವಸ್ಥೆಗಳ ಆಲೋಚನೆಗಳಿಂದ, ನಿರರ್ಥಕವಾಗಿ ನಶ್ವರವಾದ ಕಾರಣಗಳಂ ಕಲ್ಪಿತವಾಗಿ, ನನ್ನ ಮನವು ಕಪ್ಪಲಿಗೆಬಿದ್ದು ಕಾಲಿಗ ಶೇರಿಸಲ್ಪಟ್ಟ ಸರಪಣಿಯುಳ್ಳ ಕಾಡಾನೆಯಂತೆ ದುಃಖಪಡುತ್ತಿರುವದು. ಅತ್ಯಂತ ಬಲಿಷ್ಠರಾಗಿ ಮೋಸವಂ ಮಾಡುವದರಲ್ಲಿ ಚತುರರಾಗಿ ಸಹಿಸಲಶಕ್ಯವಾದ ಮಂಜಿನ ಮಳೆಯಂ ಕರೆಯುತ್ತಾ ಅಜ್ಞಾನವೆಂಬ ರಾತ್ರಿಯಲ್ಲಿ ಸಂಚರಿಸುವ ವಿಚಿತ್ರರಾದ ವಿಷಯಗಳೆಂಬ ಕಳ್ಳರು ಅನೇಕಪ್ರಕಾರದಿಂ ಪರಂಪರೆಯಾಗಿ ಬಂದು ವಿವೇಕವೆಂಬ ನನ್ನ ಮೂಲಧನವಂ ಕೀಳುತ್ತಿರುವಲ್ಲಿ ನನಿಗೆ ಯಾವ ಸಂತೋಷ ವುಂಟಾದೀತು ! ಎಲೈ ತಪೋನಿಧಿಯೇ ನನ್ನ ದುಃಖಗಳೆಲ್ಲವನ್ನು ಪೇಳಿಕೊಳ್ಳುವದಕ್ಕೆ ಕಾಲದೇಶಗಳು ಸಾಲದ್ದರಿಂದಲೂ, ಮುಖ್ಯವಾಗಿ ನನ್ನ ಮಾತುಗಳೇ ಸಾಲದ್ದರಿಂದಲೂ, ಅವುಗಳಲ್ಲಿ ಕೆಲವು ಅನುಭವಕ್ಕೆ ಬರುತ್ತಿದ್ದಾಗ್ಯೂ, ಪೇಳುವದಕ್ಕೆ ಅಸಾಧ್ಯವಾಗಿರುವದ್ದರಿಂದಲೂ, ನಾನೇ ಮೊಂಕಾಗಿ ಅಸಮರ್ಥನಾಗಿರುವದ್ದರಿಂದಲೂ, ತೋರಿದಮಟ್ಟಿಗೆ ವಿವರಿಸುವೆನು. ಇಂತಿರುವ ಘೋರವಾದ ಸಂಸಾರದಲ್ಲಿ, ಸಂಪತ್ತೆಂದು ಕಲ್ಪಿತವಾದ ಲಕ್ಷ್ಮಿಯು, ವರ್ಷಾಕಾಲದ ನದಿಯು ತರತರವಾದ ತೆರೆಗಳಂ ವಹಿಸುವಂತೆ, ಜಾಡ್ಯಪ್ರದಗಳಾದ ಮನೋರಥಗಳಂ ವಹಿಸುತ್ತಾ, ನನಿಗೆ ಮೋಹವನ್ನುಂಟುಮಾಡುವಳು; ಮಹಾನದಿಗೆ ತೆರೆಗಳಂತೆ, ಅಸಹ್ಯ ವ್ಯಾಪಾರಗಳಿಂ ವೃದ್ಧಿ ಹೊಂದಿದಂಥಾ ಚಿಂತೆಗಳೆಂಬ ಹೆಣ್ಣುಮಕ್ಕಳುಗಳು, ಪರಂಪರೆಯಾಗಿ ಈ ಲಕ್ಷ್ಮಿಯಿಂದ ಪುಟ್ಟುವರು; ಅವರು ಪುಟ್ಟುತಲೆ, ಮೇಘಮಾಲೆಯಲ್ಲುದಯಿಸುವ ಮಿಂಚುಗಳಂತೆ ಚಂಚಲರಾದಾಗ್ಯೂ ನಿಜಪ್ರಕಾಶದಿಂ ಜನಗಳಿಗೆ ಕಣ್ಣಗತ್ತಲೆಯನ್ನುಂಟುಮಾಡುವರು. ಈ ಲಕ್ಷ್ಮಿಯು ಕಾಲಚಕ್ರವನ್ನನು

ಪರಿಸುವಳಂತೆ ಒಂದು ಕ್ಷಣವಾದರೂ ಒಂದೆಡೆಯಲ್ಲಿ ನಿಲ್ಲದೆ, ಅತಿ ಚಪಲಳಾದ ಕಾಮಿನಿಯನ್ನನುಸರಿಸುವಳು. ಇವಳು ಸ್ವಲ್ಪ ಶೇರಿದಾಗ್ಯು ನಾಭಿಯಲ್ಲಿ ಶೇರಿದ ಶೀತದಂತೆ ಅತಿ ದಾಹವನ್ನುಂಟುಮಾಡುವಳು; ಪ್ರಕಾಶರೂಪಳಾದಾಗ್ಯು, ದೀಪಶಿಖೆಯಂತೆ ಧೂಮದೋಷಗಳಿಂದ ನಿರ್ಮಲವಾದ ಮನವೆಂಬ ಮನೆಯಂ ಕಪ್ಪಾಗಿ ಮಾಡುವಳು. ರಾಜಸ ದೃಷ್ಟಿಯಂತೆಯು ಕಾಮಿನಿಯಂತೆಯು ಮೂಢಳಾದ ಇವಳು ಗುಣದೋಷಗಳಂ ವಿಚಾರಿಸದೆ ಬೇಕಾದ ಜನಗಳಂ ಹೊಂದುವಳು. ಸುಳ್ಳು, ಕಳ್ಳತನ, ಜೂಜು, ವ್ಯಾಪಾರ, ಸ್ತುತಿ, ನಿಂದಾ, ವ್ಯಭಿಚಾರ, ಯುದ್ಧ, ವ್ಯವಹಾರ ಮೊದಲಾದ ಮಾರ್ಗಗಳಿಂದ ವೃದ್ಧಿಹೊಂದುತ್ತಾ ಮಹತ್ತರವಾದ ಪಾಪಗಳಂ ವೃದ್ಧಿಹೊಂದಿಸುವಳು; ಗಾಳಿಯಿಂದ ಹಿಮವು ಗಟ್ಟಿಯಾಗುವಂತೆ ಈ ಲಕ್ಷ್ಮಿಯಿಂದ ಯಾವನು ಯಾವವರಿಗೆ ಕಠಿಣವಾಗಿ ಮಾಡಲ್ಪಡುವದಿಲ್ಲವೊ, ಆವರಿಗೆ ಆ ಪುರುಷನು ತನ್ನವರಿಗೂ ಪರರಿಗೂ ಸಹ ಮನೋಹರನಾಗಿರುವನು; ಈ ಲಕ್ಷ್ಮಿಯು ಸಂಬಂಧವಾದಕೂಡಲೆ, ಆ ಪುರುಷನ ಪ್ರಾಜ್ಞತೆಯು ಶೌರ್ಯವು ಸಹ, ಸಂಪಾದನೆಯಲ್ಲೂ ಸಂಪಾದಿಸಿದ್ದನ್ನು ರಕ್ಷಿಸುವದರಲ್ಲೂ ನಿಲ್ಲುವದು; ಉಪಕಾರಸ್ಮರಣೆಯನ್ನುಂಟುಮಾಡುವ ಕೃತಜ್ಞತೆಯು ಓಡಿಪೋಗುವದು; ಮೃದು ಮನೋಹರತ್ವವು ವಂಚನಾಪರವಾದ ಮಾತಿನಲ್ಲಿ ನಿಲ್ಲುವದು; ಆದ್ದರಿಂದ ಪ್ರಾಜ್ಞನು ಮೂಢನೆಂತಲೂ, ಶೂರನು ಭೀರುವೆಂತಲೂ, ಕೃತಜ್ಞನು ದ್ರೋಹಿಯಂತಲೂ, ಮನೋಹರನು ಘೋರನೆಂತಲೂ, ಮೃದುವಾದವನು ಕಠಿನನೆಂತಲೂ, ಖ್ಯಾತಿಯಂ ಪಡೆಯುವನು. ಸತ್ಯವಾದಿಗೆ ಸುಳ್ಳು, ದಾತೃವಿಗೆ ಲೋಭವು, ಕ್ಷಮಿಸುವನಿಗೆ ಅಸಹನವು, ಸದಾಚಾರವುಳ್ಳವನಿಗೆ ದುರಾಚಾರವು, ಧರ್ಮಪರನಾದವನಿಗೆ ದ್ರೋಹಬುದ್ಧಿಯು, ತಪಸ್ವಿಗೆ ಭೋಗಾಸಕ್ತಿಯು, ದಯಾಶಾಲಿಗೆ ಕ್ರೌರ್ಯವು, ಮೃದುಭಾಷಿಗೆ ಕಠಿನೋಕ್ತಿಯು, ಈ ಮೇರೆಗೆ ಗುಣಶಾಲಿಗಳೆಲ್ಲರಿಗೂ ದುರ್ಗುಣಗಳುಂಟಾಗುವದ್ದರಿಂದ, ಧೂಳಿಯಿಂದ ರತ್ನಗಳಂತೆ ಈ ಲಕ್ಷ್ಮಿಯಿಂದೆಲ್ಲರೂ ಪಾಪಿಷ್ಠರಾಗಿ ಮಲಿನರಾಗುವರು; ದರಿದ್ರನಿಗೆ ಕಾಮಕ್ರೋಧಾದಿಗಳಿಂದ ದುರ್ಬುದ್ಧಿ ಬಂದರೂ ಕಾರ್ಯ ನಡಿಯುವದಿಲ್ಲವಾದ್ದರಿಂದ, ಸಕಲ ಪಾಪಕರ್ಮಗಳಿಗೂ ಲಕ್ಷ್ಮಿಯೇ ಕಾರಣವಾಗುವಳು. ಇವಳು ಹ್ಯಾಗೆಹ್ಯಾಗೆ ವೃದ್ಧಿಹೊಂದುವಳೋ ಹಾಗೆಹಾಗೆ ಮಹಾರೋಗದಂತೆ ದುಃಖವನ್ನೇ ಬೆಳಸುವಳು; ವಿಷಲತೆಯ ಬೀಜವಂ ಬಿತ್ತುವನಂತೆ ಇವಳ ಮನೆಯಂ ಶೇರಿಸಿ ವೃದ್ಧಿಹೊಂದಿಸುವನಿಗೆ ಮೃತಿಯೇ ಸಂಭವಿಸುವದು; ಹೀಗಿರುವಲ್ಲಿ ಇವಳ ದುಸ್ಸ್ವಭಾವವಂ ಪೇಳತಕ್ಕದ್ದೇನು! ಸಮದೃಷ್ಟಿಯಾದ ಪ್ರಭುವು, ಪರಾಕ್ರಮಂ ಪೇಳಿಕೊಳ್ಳುವ ಶೂರನು, ಲೋಕ

ನಿಂದೆಗೆ ಒಳಗಾಗದ ಧನಿಕನು ಸಹ ದುರ್ಲಭರಾಗಿರುವರು. ನನ್ನವಳೆಂದು ಅಭಿಮಾನಿಸಿದಮಾತ್ರದಿಂ ಮದಾದಿ ವಿಕಾರವನ್ನುಂಟುಮಾಡುವದ್ದರಿಂದ ಈ ಲಕ್ಷ್ಮಿಯು *ವಾರುಣಿಗಿಂತ ಅಧಿಕಳೆನಿಸಿಕೊಳ್ಳುವಳು. ದುಃಖಗಳೆಂಬ ಸರ್ಪಗಳಿಗೆ ಗುಹೆಯಾಗಿ, ಮೋಹಗಳೆಂಬ ಆನೆಗಳಿಗೆ ವಿಂಧ್ಯಗಿರಿಯಾಗಿ, ಸತ್ಕರ್ಮಗಳೆಂಬ ಕಮಲಗಳಿಗೆ ರಾತ್ರಿಯಾಗಿ, ದುಷ್ಕರ್ಮಗಳೆಂಬ ನೈದಿಲೆ ಹುವ್ವಗಳಿಗೆ ಬೆಳ್ದಿಂಗಳಾಗಿ, ಶುಭದೃಷ್ಟಿ ಎಂಬ ದೀಪಕ್ಕೆ ಬಿರುಗಾಳಿಯಾಗಿ, ಮನೋರಥಗಳೆಂಬ ತೆರೆಗಳಿಗೆ ಮಹಾನದಿಯಾಗಿ, ಭೋಗ ಸಂತೋಷ ಸಂಭ್ರಮಗಳೆಂಬ ಮೇಘಗಳಿಗೆ ಗಗನವಾಗಿ, ದುರ್ವಿಚಾರವೆಂಬ ವಿಷಲತೆಗಳಿಗೆ ಮಹಾರಣ್ಯವಾಗಿ, ವಿಕಲ್ಪಗಳೆಂಬ ಪೈರುಗಳಿಗೆ ಗದ್ದೆಯಾಗಿ, ಮೋಹವೆಂಬ ವಿಷಕ್ಕೆ ಹಾವಾಗಿ, ವೈರಾಗ್ಯವೆಂಬ ತಾವರೆಗೆ ಹಿಮವಾಗಿ, ವಿಚಿತ್ರವಾದ ಕಾಮಕ್ರೋಧಾದಿ ವಿಕಾರಗಳೆಂಬ ಗೂಬೆಗಳಿಗೆ ಕೃಷ್ಣಪಕ್ಷದ ರಾತ್ರಿಯಾಗಿ, ವಿವೇಕವೆಂಬ ಚಂದ್ರನಿಗೆ ರಾಹುವಿನ ಕೋರೆದಾಡೆಯಾಗಿ, ಸದ್ಗುಣವೆಂಬ ಕಮಲಕ್ಕೆ ಚಂದ್ರಿಕೆಯಾಗಿ, ಪ್ರಕಾಶಿಸುವ ಈ ಲಕ್ಷ್ಮಿಯು ಇಂದ್ರ ಧನುವಿನಂತೆಯು ಸಂಗೀತಶಾಸ್ತ್ರದಂತೆಯು ವಿಚಿತ್ರವಾದ ರಾಗಗಳಂ ಪ್ರಕಾಶಿಸುವಳು. ಬಿಸಲು ದೊರೆಗಿಂತಲೂ ಅಧಿಕವಾಗಿ ವಂಚನೆಯನ್ನುಂಟುಮಾಡುವಳು. ಪ್ರವಾಹದಂತೆ ನಿಲ್ಲದಿದ್ದರೂ ಮುಂಗಡೆಯಲ್ಲಿ †ಭಂಗವನ್ನೇ ತೋರುತ್ತಿರುವಳು. ಅನೇಕ ಸೇನಾಸಮೂಹದಿಂ ರಕ್ಷಿಸಲ್ಪಡುತ್ತಿದ್ದಾಗ್ಯೂ ಘಾಳಿ ಒಡಿದ ದೀಪದಂತೆ ನಿಮಿಷಮಾತ್ರದಿಂದೆಲ್ಲಿಗೋ ಪೋಗುವಳು. ಮುತ್ತಿನಸರದಂತೆ ಸುಖಸ್ಪರ್ಶಳಾದ ಈ ಲಕ್ಷ್ಮಿಯು ಅಗ್ನಿಯಂತೆ ತನ್ನ ಆಶ್ರಯವನ್ನೇ ಹಾಳುಮಾಡುವಳು; ಈ ಪಿಶಾಚಿಯಿಂದ ಆವಿಷ್ಟನಾದ ಪುರುಷನು ವಿಶಾಲಾಕ್ಷನಾದರೂ ಕಂಗಳನಂತೆ ಸೇವಕರ ಮಾತಿನಿಂದ ದಾರಿಯಂ ತಿಳಿದು ನಡೆವನು. ಮಹಾಬಲಿಷ್ಠನಾಗಿ ದೃಢವಾದ ಸರ್ವಾಂಗಗಳುಳ್ಳವನಾದಾಗ್ಯೂ ಏಳಲು ಹಸ್ತಲಾಗವನ್ನಪೇಕ್ಷಿಸುವನು. ಪ್ರೌಢವಾದ ಬುದ್ಧಿಯುಳ್ಳವನಾದಾಗ್ಯೂ ಬಾಲಕನಂತೆ ವೃದ್ಧರನ್ನು ಪರಿಹಾಸವಂ ಮಾಡುವನು. ಕೃತಜ್ಞನಾದಾಗ್ಯೂ ಕಣ್ಣುರಿಯುಳ್ಳವನಂತೆ ಮಿತ್ರಮಂಡಲದ ಅಭ್ಯುದಯವಂ ಸಹಿಸಲಾರನು. ಸಾಧುವಾದದಲ್ಲಿ ಕಿವಡನಂತೆಯೂ, ಮೂಗನಂತೆಯೂ, ಸ್ತಬ್ಧನಾಗಿರುವನು. ಶಾಸ್ತ್ರಜ್ಞನಾದಾಗ್ಯೂ ತತ್ವವಂ ವಿಚಾರಿಸದೆ ಶೂರನಾದಾಗ್ಯೂ ಮನವಂ ನಿಗ್ರಹಿಸದೆ ಧೀರನಾದಾಗ್ಯೂ ವಿಷಯಗಳಿಗೆ ಚಪಲಪಡುತ್ತಾ ಪಂಡಿತನಾದಾಗ್ಯೂ ಹಿತಾಹಿತಜ್ಞಾನವಿಲ್ಲದೆ ವಂಚಕರಾದ ಜನಗಳಿಗೆ ವಶನಾಗಿ ಹುಚ್ಚ

* ಮದ್ಯ. † ಪರಾಜಯ, ಅಲೆ.

ನಂತೆ ಅಲೆಯುತ್ತಿರುವನು. ಎಷ್ಟು ಸತ್ಕರ್ಮಗಳಂ ಮಾಡಿದಾಗ್ಯೂ ಎಷ್ಟು ಜ್ಞಾನಿಯಾದಾಗ್ಯೂ ಎಷ್ಟು ದಾನವಂ ಮಾಡಿದಾಗ್ಯೂ ಸದ್ವಿಚಾರಪರನಾದಾಗ್ಯೂ ಮೃದುಮಧುರೋಕ್ತಿಯಾದಾಗ್ಯೂ ಲೋಕರಕ್ಷಣೆಯಲ್ಲಾ ಸಕ್ತನಾಗಿದ್ದಾಗ್ಯೂ ಯಾವದಾದರು ಒಂದುರೀತಿಯಿಂದ ಶ್ರೀವಂತನು ನಿಂದಿತನಾಗುವನಲ್ಲದೆ ಎಂದಿಗೂ ಸರ್ವಶ್ಲಾಘ್ಯನಾಗುವದಿಲ್ಲ; ಇವಳು ತನ್ನ ರಕ್ಷಿಸುವದಿಲ್ಲವೆಂಬ ದ್ವೇಷದಿಂ ಧಾರ್ಮಿಕರಲ್ಲಿ ಸೇರಳು. ತನಗೆ ನಿರ್ಬಂಧವಂ ಮಾಡುವರೆಂಬ ದುಃಖದಿಂ ಲೋಭಿಗಳಲ್ಲಿ ನಿಲ್ಲಳು. ತನ್ನಂ ಬಲಾತ್ಕಾರದಿಂ ಹಿಡಿವನೆಂಬ ಕೋಪದಿಂ ಶೂರನಲ್ಲಿ ಚಪಲವಾಗುವಳು. ಅಶಕ್ತರೆಂದು ಉಪೇಕ್ಷೆಯಿಂದ ಸಾಧುಗಳಂ ನೋಡಳು. ಸರ್ವಪ್ರಕಾರದಿಂದಲೂ ಅಘಟಿತಘಟನಾಚತುರಳಾಗಿ ವಿಚಿತ್ರವಾದ ವ್ಯಾಪಾರವುಳ್ಳ ಈ ಲಕ್ಷ್ಮಿಯು ಜೀವನಾಧಾರವಾದ್ದರಿಂದಲೂ, ಆಧಿವ್ಯಾಧಿಗಳಿಗೆ ಉತ್ಪತ್ತಿಸ್ಥಾನವಾದ್ದರಿಂದಲೂ, ಇದ್ದರೂ ಇಲ್ಲದಿದ್ದರೂ ನಿರ್ವಾಹವಿಲ್ಲದೆ ಇರುವದು. ಬರುವಲ್ಲಿಯೂ, ಇರುವಲ್ಲಿಯೂ, ಹೋಗುವಲ್ಲಿಯೂ ಕೂಡ ಬಹು ದುಃಖವಾದ್ದರಿಂದ ದುಃಖಸ್ವರೂಪಳೇ ಇವಳೆಂದು ತಿಳಿಯುತ್ತೇನೆ. ಈಪರಿಯಿಂದ ವಿಲಕ್ಷಣರೂಪಳಾದ ಇವಳನ್ನು ಲಕ್ಷ್ಮಿ ಎಂದು ಹ್ಯಾಗೆ ಹೇಳುವರೋ! ತಿಳಿಯಲಿಲ್ಲ. ಇವಳ ಮಾತಂತಿರಲಿ. ಆಯುಸ್ಸಾದರೋ ಅರಳಿಯಲೆಯ ಕೊನೆಯಲ್ಲಿ ತಗಲಿಕೊಂಡಿರುವ ಜಲಕಣದಂತೆ ಚಪಲವಾಗಿರುತ್ತಾ ಅಕಾಲದಲ್ಲಿಯೇ ಶರೀರವಂ ಬಿಟ್ಟುಹೋಗುವದು. ಯಾರು ತಿಳಿಯತಕ್ಕದ್ದಂ ತಿಳದು ದೇಶಕಾಲ ವಸ್ತುಭೇದವಿಲ್ಲದೆ ಪರಿಪೂರ್ಣವಾಗಿರುವ ವಸ್ತುವಿನಲ್ಲಿ ವಿಶ್ರಾಂತಿಯಂ ಪಡದಿರುವರೋ ಅವರಿಗೆ ಲಾಭಾಲಾಭಗಳಲ್ಲಿ ವೈಷಮ್ಯವಿಲ್ಲದ್ದರಿಂದ ಆಯುಸ್ಸು ಸುಖಸಾಧಕವಾಗುವದು. ವಿಷಯಗಳೆಂಬ ಸರ್ಪಗಳ ಸಹವಾಸದಿಂ ಭಗ್ನವಾದ ಮನವುಳ್ಳವರಾಗಿ ಆತ್ಮಾನಾತ್ಮ ವಿವೇಕವಿಲ್ಲದಿರುವ ಜನರಿಗೆ ಆಯುಸ್ಸು ಆಯಾಸಕ್ಕೆ ಸಾಧಕವಾಗುವದು. ಆದ್ದರಿಂದ ಶರೀರದಲ್ಲಿ ಆತ್ಮಭಾವವುಳ್ಳ ನಮಗೆ ಸಂಸಾರವೆಂಬ ಮೋಹದೊಳ್ಕಿಂಚಿನಂತಿರುವ ಆಯುಸ್ಸು ಸಂತೋಷಕಾರಿಯಾಗುವದಿಲ್ಲ. ವಾಯುವನ್ನಾದರೂ ಮೊಟ್ಟೆಯಂತೆ ಕಟ್ಟಬಹುದು. ಆಕಾಶವನ್ನಾದರೂ ಖಂಡಿಸಬಹುದು. ತರಂಗಗಳನ್ನಾದರೂ ಹುವ್ವಿನಂತೆ ಸೇರಿಸಬಹುದು. ಆಯುಸ್ಸನ್ನು ಮಾತ್ರ ನಂಬಲಾಗದು. ಶರತ್ಕಾಲದ ಮೋಘದಂತೆಯು ಎಣ್ಣೆಯಿಲ್ಲದ ದೀಪದಂತೆಯು ಈ ಆಯುಸ್ಸು ಇಧೆ ಎಂದು ನಂಬುವದಕ್ಕೆ ಯೋಗ್ಯವಾದದ್ದಲ್ಲ. ಮರಗಳು, ಮೃಗಪಕ್ಷಿಗಳೂ ಸಹಾ ಬಹುಕಾಲ ಬದಕುವದಿಲ್ಲವೆ ? ಅದರಿಂದೇನು ಯಾರು ಪಡೆಯತಕ್ಕದ್ದಂ ಪಡದು ಮರಳಿ ದುಃಖಬದ

ದಂತೆ ಪರಮಾನಂದಭರಿತರಾಗುವರೊ? ಅಜ್ಞಾನರೂಪವಾದ ಮನವು ತತ್ವಜ್ಞಾನದಿಂ ಯಾರಿಗೆ ನಷ್ಟವಾಗುವದೊ! ಅವರ ಜೀವನವೇ ಜೀವನವೆನಿಸಿಕೊಳ್ಳುವದು. ಯಾರು ತತ್ವಜ್ಞಾನದಿಂ ಪುನರ್ಜನ್ಮವಂ ಪಡೆಯುವದಿಲ್ಲವೊ? ಅವರ ಜನ್ಮವೇ ಸಾರ್ಥಕವಾದದ್ದಾದ್ದರಿಂದ ಮುದಿಕತ್ತೆಗಳಂತೆ ಮೂಢರಾದವರು ಹುಟ್ಟಲೇ ಇಲ್ಲವೆಂದು ತಿಳಿಯತಕ್ಕದ್ದು. ಅವಿವೇಕಿಗೆ ಶಾಸ್ತ್ರವು, ರಾಗಾಂಧನಿಗೆ ಜ್ಞಾನವು, ಶಾಂತಿಯಿಲ್ಲದವನಿಗೆ ಮನಸ್ಸು, ಅಜ್ಞಾನಿಗೆ ಶರೀರವೂಕೂಡಾ ಭಾರವೆನಿಸಿಕೊಳ್ಳುವದು. ರೂಪವು, ಮನಸ್ಸು, ಬುದ್ಧಿಯು, ಅಹಂಕಾರವೂ ಕೂಡ ದುರ್ಬುದ್ಧಿಗೆ ಭಾರವೇ ಆಗುವಲ್ಲಿ ರೋಗಗಳಿಗೂ, ಆಪತ್ತುಗಳಿಗೂ, ಆಸ್ಪದವಾಗಿರುವ ಆಯುಸ್ಸು, ಆಯಾಸಕ್ಕೆ ಸಾಧನವಾಗುವದೆನ್ನುವದರಲ್ಲಿ ಆಶ್ಚರ್ಯವೇನು? ಈ ಆಯುಸ್ಸು ಇಲಿಯಿಂದ ಹಳೇ ಹಳ್ಳದಂತೆ ಕಾಲದಿಂ ಕತ್ತರಿಸಲ್ಪಡುವದು. ಶರೀರಬಿಲಗಳಲ್ಲಿ ನೆಲಸಿರುವ ರೋಗಗಳೆಂಬ ಸರ್ಪಗಳಿಂದ ವಾಯುವಿನಂತೆ ಭಕ್ಷಿಸಲ್ಪಡುವದು; ಹುಳುಗಳಿಂದ ಹಳೇ ಮರದಂತೆ ದುಃಖಗಳಿಂಚ್ಛೇದಿಸಲ್ಪಡುವದು, ಬೆಕ್ಕಿನಿಂದ ಇಲಿಯಂತೆ ಮೃತ್ಯುವಿನಿಂದ ನೋಡಲ್ಪಡುತ್ತಿರುವದು, ಅತ್ಯಗ್ನಿಯಾದ ಪುರುಷನಿಂದ ಅನ್ನದಂತೆ ಜರೆಯಿಂದ ಜೀರ್ಣವಾಗುವದು, ಗುಣಜ್ಞನಾದ ಸತ್ಪುರುಷನಿಂದ ದುರ್ಜನನಂತೆ ಯವ್ವನದಿಂ ಬಿಡಲ್ಪಡುವದು, ವಿಟಪುರುಷನಿಂದ ಸೌಂದರ್ಯದಂತೆ ಯಮನಿಂದ ಅಪೇಕ್ಷಿಸಲ್ಪಡುವದು, ಆದ್ದರಿಂದ ಮರಣಭಾಜನವಾದ ಆಯುಸ್ಸಿನಂತೆ, ದುರ್ಗುಣವಾದ್ದು ಯಾವದು ಇಲ್ಲವೆಂದು ತಿಳಿಯುತ್ತೇನೆ; ಅದೂ ಅಂತಿರಲಿ, ಅಜ್ಞಾನದಿಂ ವ್ಯರ್ಥವಾಗಿ ಪುಟ್ಟಿ ವ್ಯರ್ಥವಾಗಿಯೆ ಬೆಳೆಯುತ್ತಿರುವ ಈ ಅಹಂಕಾರವೆಂಬ ಶತ್ರುವಿನಿಂದ ಭೀತನಾದ ನಾನು ಅನ್ನೋದಕಗಳನ್ನೇ ಬಿಟ್ಟಿರುವೆನಾದ್ದರಿಂದ ಭೋಗಗಳನ್ನೂ ಹ್ಯಾಗೆ ಅಪೇಕ್ಷಿಸೆನು, ಈ ಸಂಸಾರದಲ್ಲಿ ಕಿರಾತಕನಂತೆ ಮಾಯಾಮಯವಾದ ಬಲೆಯು ಬೀಸಿರುವ ಈ ಅಹಂಕಾರದಿಂದಲೇ ದೈನ್ಯವು, ಆಪತ್ತುಗಳು, ಮನೋವ್ಯಥೆಗಳು, ರಾಗಗಳು, ರೋಗಂಗಳು, ದುಃಖಗಳು ಸಹಾ ಉಂಟಾಗಿರುವವು. ಶಮವೆಂಬ ಚಂದ್ರನಿಗೆ ರಾಹುವಾಗಿ ಸದ್ಗುಣವೆಂಬ ಪದ್ಮಕ್ಕೆ ಹಿಮವೃಷ್ಟಿಯಾಗಿ ಸಮಭಾವವೆಂಬ ಮೇಘಕ್ಕೆ ಶರತ್ಕಾಲವಾಗಿರುವ ಈ ಅಹಂಕಾರವಂ ನಾನು ಸರ್ವಪ್ರಕಾರದಿಂದಲೂ ಬಿಟ್ಟುಬಿಡುವೆನು; ನಾನು ರಾಮನೂ ಅಲ್ಲ, ನನಿಗೆ ಅಪೇಕ್ಷೆಯೂ ಇಲ್ಲ; ಭೋಗವಸ್ತುಗಳಲ್ಲಿ ನನಿಗೆ ಮನಸ್ಸೂ ಇಲ್ಲ; ಜೈನನಂತೆ ಅಹಿಂಸಾಪರನಾಗಿ ಸರ್ವತ್ರ ಆತ್ಮಸಮಾನ ದೃಷ್ಟಿಯಿಂದಿರಬೇಕೆಂದು ಅಪೇಕ್ಷಿಸುತ್ತೇನೆ; ಅಹಂಕಾರದಿಂ ತಿಂದದ್ದು, ಕೊಟ್ಟದ್ದು, ಹವನವಂ ಮಾಡಿದ್ದು,

ಮೊದಲಾಗಿ ಮಾಡಿದ ಕರ್ಮವೆಲ್ಲವು ನಿಷ್ಫಲವಾದ್ದರಿಂದ ಅಹಂಕಾರವಿಲ್ಲದಿರುವದೇ ಉತ್ತಮವೆಂದು ತಿಳಿಯುತ್ತೇನೆ; ಅಹಂಕಾರವೆಂಬುವದು ಇದ್ದಲ್ಲಿ ನಾನು ದುಃಖಿತನೆಂಬ ಮಾತು ಉಂಟಾಗುವದು; ಅದೇ ಇಲ್ಲದಿರುವಲ್ಲಿ ದುಃಖಪ್ರಸಕ್ತಿಯೂ, ಇಲ್ಲವಾದ್ದರಿಂದ ನಿರಹಂಕಾರತ್ವವೇ ಉತ್ತಮವಾದದ್ದು; ಅಹಂಕಾರವಿರುವಪರ್ಯಂತವು ಮೇಘದಿಂದ ಮತ್ತೀಮರ ಕುಟಜವೃಕ್ಷದಂತೆ ಆಶೆಯು ಪ್ರಕಾಶಿಸುವದು; ಅಹಂಕಾರ ಮೇಘವು ಶಾಂತವಾಗಲು ಆಶೆಯೆಂಬ ಮಿಂಚಿನ ಬಳ್ಳಿಯು ಆರಿಹೋದ ದೀಪದ ಶಖೆಯಂತೆ ಗೊತ್ತಾಗದೆ ಹೋಗುವದು; ಅಹಂಕಾರವೆಂಬ ವಿಂಧ್ಯಪರ್ವತದಲ್ಲಿ ಮನವೆಂಬ ಮದ್ದಾನೆಯು ಮೇಘದಂತೆ ಗರ್ಜಿಸುತ್ತಾ ಹಾರಾಡುವದು. ದೇಹವೆಂಬ ಅರಣ್ಯದಲ್ಲಿ ಸಿಹ್ಮದಂತಿರುವ ಅಹಂಕಾರವೆಂಬ ರಾಜನು ಪುಣ್ಯಾಪಾಪಗಳಿಂದೀಪ್ರಪಂಚವಂ ಬೆಳಸಿ ಆಶೆಯೆಂಬ ಧಾರದಿಂ ಪೋಣಿಸಲ್ಪಟ್ಟ ಜನ್ಮಪರಂಪರೆಗಳೆಂಬ ಮುತ್ತಿನ ಮಾಲೆಗಳಂ ಧರಿಸಿಕೊಂಡಿರುವನು, ಅಹಂಕಾರವೆಂಬ ಮಾಯಾವಿಯು ಮಂತ್ರತಂತ್ರಗಳೇನೂ ಇಲ್ಲದೆ ಪತ್ನೀ ಪುತ್ರ ಮಿತ್ರಾದಿ ಸಾಧನಗಳಿಂದಲೇ ಈ ಜಗವಂ ಸ್ವಾಧೀನದಲ್ಲಿಟ್ಟುಕೊಂಡಿರುವನು, ಅಹಂಕಾರವೆಂಬ ಸ್ಥಾನವು ಹೋದಕೂಡಲೇ ಆ ಸ್ಥಾನದಲ್ಲಿ ಸಂಚರಿಸುವ ಮನಸ್ಸು ಮನೋವ್ಯಥೆಗಳು ಸಹ ಪೋಗುವದು. ಆದ್ದರಿಂದ ಸಮಸ್ತವಾದ ಆಪತ್ತುಗಳಿಗೂ ಕಾರಣವಾದ ಅಹಂಕಾರಲಕ್ಷಣವಂ ನಾನು ಬಿಡುವೆನು. ಇದನ್ನತಿಕ್ರಮಿಸಿದ ತತ್ವವನ್ನೆನಗೆ ಉಪದೇಶವಂ ಮಾಡುವನಾಗು. ಎಲೈ ಮಹಾನುಭಾವನೇ ! ಸತ್ಕಾರ್‍ಯವನ್ನು ಮತ್ತು ಸತ್ಸಂಗವನ್ನು ಮಾಡದೆ ಕಾಮಕ್ರೋಧಾದಿಗಳಿಂದ ಜರ್ಝರಿತವಾಗುತ್ತಿದ್ದಾಗ್ಯೂ ಅವುಗಳಂ ಬಿಡದ ಈ ಮನವು ಗಾಳಿಯಲ್ಲಿರುವ ನವಿಲುಗರಿಯಂತೆ ಪ್ರಾಣಾಪಾನಗಳಂ ಚಂಚಲವಾಗಿ ಗ್ರಾಮದಲ್ಲಿ ನಾಯಿಯಂತೆ ಜಗತ್ತಿನಲ್ಲಿ ನಿರರ್ಥಕವಾಗಿ ಸುತ್ತುತ್ತಿರುವದು. ಅರಣ್ಯದಲ್ಲಿ ತೃಣಾಪೇಕ್ಷಿಯಾದ ಮೃಗದಂತೆ ವಿಷಯಾಸಕ್ತಿಯಿಂದ ಹಳ್ಳಗಳಲ್ಲಿ ಬೀಳುವದನ್ನು ನೋಡದೆ ಅಲೆಯುತ್ತಿದ್ದಾಗ್ಯು ಈ ಮನವು, ಶೂನ್ಯರೂಪವಾದ್ದರಿಂದ ಯಾವ ಪದಾರ್ಥವನ್ನೂ ಪಡೆಯುವದಿಲ್ಲ. ಒಂದುವೇಳೆ ಕೈಗಳಂ ಪಡದಾಗ್ಯೂ ನೀರಿಸಿಂದ ಹುವ್ವಿನ ಬುಟ್ಟಿಯಂತೆ ಪೂರ್ಣವಾಗದೆ ತೃಪ್ತಿಯಿಲ್ಲದ್ದರಿಂದ, ಮಂದರಗಿರಿಯಿಂದ ಮಥಿಸಲ್ಪಡುವ ಕ್ಷೀರಸಮುದ್ರದ *ನೀರಿನಂತೆ ಹಾರಿಬೀಳುತ್ತಾ ವಿಷಯಾನುಸಂಧಾನದಿಂ ದಿಕ್ಕುದಿಕ್ಕುಗಳಲ್ಲೂ ಓಡಾಡುತ್ತಿರುವದು. ಸಂಕಲ್ಪಗಳೆಂಬ ತೆರೆಗಳಿಂದಲೂ ದ್ರೋಹಾಲೋಚನೆ ವಂಚನೆಗಳೆಂಬ

---

* ಹಾಲಿನಂತೆ.

ಮೊಸಳೇ ಮೀನುಗಳಿಂದಲೂ ತುಂಬಿರುವ ಮನವೆಂಬ ಸಮುದ್ರವಂ ನಾನು ತಡೆಯಲಾರೆನು. ವಿಷಯ ವಿಶೇಷಗಳಿಂದ ಖಂಡಿತವಾದಾಗ್ಯೂ ಸಿಹ್ಮದಂತೆ ಹೃದಯಪಂಜರದಲ್ಲಿ ಕಟ್ಟಲ್ಪಟ್ಟಾಗ್ಯೂ, ಕಪಿಯಂತೆ ಈ ಮನವು ತನ್ನ ಚಪಲವೃತ್ತಿಯಂ ಬಿಡುವದಿಲ್ಲ. ಮೋಹನೆಂಬ ರಥವನ್ನೇರಿದ ಈ ಮನವು ನೀರಿನಿಂದ ಕ್ಷೀರವಂ ಶೆಳೆಯುವ ಹಂಸದಂತೆ ಆತ್ಮನ ಸಮಭಾವವಂ ತಪ್ಪಿಸುವದು. ಕಲ್ಪನಾರೂಪವಾದ ಹಾಸಿಗೆಯಲ್ಲಿ ಮಲಗಿರುವ ಮನೋವೃತ್ತಿಗಳು ಎಂದಿಗೂ ಬೋಧವಂ ಪಡೆಯುವದಿಲ್ಲ. ಆದ್ದರಿಂದ ದುಃಖಪಡುವೆನು. ಆಶಾಪಾಶಸ್ವರೂಪವಾದ ಮನನೆಂಬ ಬಲೆಯಿಂದ ನಾನು ಪಕ್ಷಿಯಂತೆ ಬದ್ಧನಾಗಿರುವೆನು. ಈ ಮನದಿಂದ ನಾನು ಅಗ್ನಿಯಿಂದ ತರಗೆಲೆಯಂತೆ ಸುಡಲ್ಪಡುವೆನು. ಕ್ರೂರವಾದ ಶುನಕದಿಂ ಶವದಂತೆ ಭಕ್ಷಿಸಲ್ಪಡುವೆನು. ಪ್ರವಾಹದಿಂ ದಡದಲ್ಲಿರುವ ಮರದಂತೆ ಶೆಳೆಯಲ್ಪಡುವೆನು. ಬಿರುಗಾಳಿಯಿಂ ತೃಣದಂತೆ ಹಾರಿಸಲ್ಪಡುವೆನು. ಸ್ವರ್ಗಪಾತಾಳಗಳಿಗೆ ಹೋಗುತ್ತಿರುವ ಈ ಮನದಿಂ ನಾನು ಹಗ್ಗದಿಂ ಭಾವಿಯರಾಟವಾಳದಂತೆ ಬದ್ಧನಾಗಿರುವೆನು. ಭ್ರಾಮಕವಾದ ಬಾಲಗ್ರಹದಿಂ ಬಾಲಕನಂತೆ ಪಿಡಿಯಲ್ಪಟ್ಟಿರುವೆನು. ಅಗ್ನಿಗಿಂತಲೂ ಸಂತಾಪಕರವಾಗಿ, ಸರ್ಪಕ್ಕಿಂತಲೂ ವಿಷಮಗತಿಯಾಗಿ, ಪರ್ವತಕ್ಕಿಂತಲೂ ಕಠಿನವಾಗಿ, ಸಿಡಿಲುಗಿಂತಲೂ ಕ್ರೂರವಾದ ಪ್ರಹಾರವೇಗವುಳ್ಳ, ಈ ಗ್ರಹವು ನಿಗ್ರಹಿಸಲಶಕ್ಯವಾಗಿರುವದು. ಆಡುವ ಬಾಲಕನು ಮತ್ತೊಂದಾಟದಿಂ ಮೊದಲಿನ ಆಟವಂ ಬಿಡುವಂತೆ, ಈ ಮನವು ವಿಷಯಾಂತರ ದರ್ಶನದಿಂದ ಪೂರ್ವವಿಷಯವಂ ಬಿಡುವದು. ಅಗ್ನಿಯಂ ಭಕ್ಷಿಸುವದಕ್ಕಿಂತಲೂ, ಸಮುದ್ರವಂ ಕುಡಿಯುವದಕ್ಕಿಂತಲೂ, ಮೇರುವಂ ಕೀಳುವದಕ್ಕಿಂತಲೂ, ಈ ಮನವಂ ನಿಗ್ರಹಿಸುವದು ಅತಿ ಕಷ್ಟವಾಗಿರುವದು. ಅರ್ಥಾನರ್ಥಗಳಿಗೂ, ಸುಖದುಃಖಗಳಿಗೂ, ಜಗತ್ತಿನ ಸ್ಥಿತಿ ನಾಶಗಳಿಗೂ, ಕಾರಣವಾದ ಈ ಚಿತ್ತವಂ ನಿಗ್ರಹಿಸದೆ ಯಾರಿಗೂ ಅಖಂಡ ಸುಖವಾಗುವದಿಲ್ಲವಾದ್ದರಿಂದ, ವಿವೇಕಕ್ಕೆ ಶತ್ರುವಾದ ಈ ಮನವಂ ಜಯಿಸಲಿಚ್ಛೆಯುಳ್ಳ ನಾನು ತಮವಂ ನಿರಾಕರಿಸಲು, ಪೂರ್ಣಮಟ್ಟ ಚಂದ್ರನು ಮೇಘವೃದ್ಧಿಯಂ ಸಹಿಸದಿರುವಂತೆ, ಜಡಪ್ರಕಾಶವಾದ ಲಕ್ಷ್ಮಿಯಂ ಸಹಿಸುವದಿಲ್ಲ. ಹೀಗೆ ನಾನಿರುವಲ್ಲಿ ಮೋಹಾಂಧಕಾರಕ್ಕೆ ಆಶ್ರಯವಾದ ಆಶೆಯೆಂಬ ರಾತ್ರಿಯು, ಜೀವನೆಂಬ ಆಕಾಶದಲ್ಲಿ ರಾಗದ್ವೇಷಗಳೆಂಬ ಗೂಬೆಗಳನ್ನಾಡಿಸುತ್ತಿರುವದು. ಆದ್ದರಿಂದ ಶೀತರೋಗದಂತೆ ಅಂತರ್ದಾಹವನ್ನುಂಟುಮಾಡುವ ಚಿಂತೆಯಿಂದ ಗ್ರೀಷ್ಮಕಾಲದ ಸೂರ್ಯಕಿರಣದಿಂ ನಿರ್ಮಲವಾದ ಸರೋವರದಂತೆ, ನಾನು ಶುಷ್ಕನಾಗಿರುವೆ

ನು. ಮೋಹಾಂಧಕಾರದಿಂ ಪೂರ್ಣವಾದ ಚಿಂತಾರ್ಣ್ಯದಲ್ಲಿ ಪುಟ್ಟಿದ ಆಶೆಯೆಂಬ ಪಿಶಾಚಿಯಿಂದ ನಾನು ಕಾಮಾಲೆ ರೋಗದವನಂತೆ ಪ್ರಪಂಚವೆಲ್ಲವನ್ನು ಸುವರ್ಣೋದ್ಯಾನವನ್ನಾಗಿ ನೋಡುವೆನು. ಪ್ರಿಯೋಕ್ತಿಗಳೆಂಬ ಮಂಜುಗಳಿಂದ ಇಲ್ಲಿ ಚಿಂತೆಗಳೆಂಬ ಕಡಲೆ ಗಿಡಗಳು ಬೆಳೆಯುವವು. ದೇಹವೆಂಬ ಪರ್ವತದಲ್ಲಿ ಸಂಕಲ್ಪಗಳೆಂಬ ತೆರೆಗಳಿಂ ತುಂಬಿದ ರಾಗದ್ವೇಷಮಯವಾದ ನದಿಯು ಹರಿಯುತ್ತಿರುವದು. ಸತ್ಪುರುಷರೆಂಬ ಮೇಘಗಳಿಂ ಕಂಡು ವಿವೇಕೋಕ್ತಿಯಂಬ ವರ್ಷೋದಕದಿಂ ಅಂತರ್ದಾಹವನ್ನಡಗಿಸಕೊಳ್ಳಲೋಸುಗ ನಿಂತಿದ್ದ ಚಿತ್ತವೆಂಬ ಚಾತಕವು, ದುರಾಶೆಯಂಬ ಬಿರುಗಾಳಿಯಿಂದ ಎಲ್ಲಿಯೋ ಹಾಕಲ್ಪಡುವದು. ಇಲ್ಲಿಯು ತಂತಿಯಂ ಕತ್ತರಿಸುವಂತೆ, ಚಿಂತೆಗಳು ನನ್ನ ವಿವೇಕಾಪೇಕ್ಷೆಯಂ ಕತ್ತರಿಸುವವು. ಪ್ರವಾಹೋದಕದಲ್ಲಿ ಜೀರ್ಣಪರ್ಣದಂತೆಯು, ಸುಂಟರಗಾಳಿಯಲ್ಲಿ ಶುಷ್ಕತೃಣದಂತೆಯು, ಗಗನದಲ್ಲಿ ಶರತ್ಕಾಲದ ಮೇಘದಂತೆಯು, ಚಿಂತೆಯಿಂ ನಾನು ಭ್ರಮಿಸುತ್ತಿರುವೆನು. ಚಿಂತೆಯಲ್ಲಿ ಬಿದ್ದಿರುವ ನಾವು ಬಲೆಯಲ್ಲಿ ಬಿದ್ದಿರುವ ಮೀನುಗಳಂತೆ, ಬ್ರಹ್ಮಸರೋವರವಂ ಹೊಂದಲಾರದೆ ಬದ್ಧಕೊಳ್ಳುತ್ತಿರುವೆವು. ಆಶಾಗ್ನಿಜ್ವಾಲೆಯಿಂದುಂಟಾದ ಅಂತರ್ದಾಹವು, ಅಮೃತಪಾನದಿಂದಲೂ ಅಡಗಲಾರದೆಂದು ತಿಳಿಯುತ್ತೇನೆ. ಪತ್ನೀಪುತ್ರಾದಿಗಳಂ ಪಿಡಿದಿರುವ ಈ ಆಶೆಯಿಂದ ನಾನು ಕಡಿವಾಣದಿಂ ಕುದುರೆಯಂತೆಯು, ಮೂಗುದಾರದಿಂದೆತ್ತಿನಂತೆಯು, ಬದ್ಧನಾಗಿ ಕುದುರೆಯಿಂದ ಶೂರನಂತೆಯು, ಗಾಡಿಯಿಂದ ಧಾನ್ಯದಂತೆಯು, ಕತ್ತೆಯಿಂದ ಹೊರೆಯಂತೆಯು, ನಾವೆಯಿಂದ ರತ್ನವ್ಯಾಪಾರಿಯಂತೆಯೂ, ದಿಕ್ಕುದಿಕ್ಕುಗಳಲ್ಲಿ ಅಲೆಯುವೆನು. ಪ್ರಪಂಚವೆಂಬ ರಂಗಸ್ಥಲಕ್ಕೆ ನರ್ತಕಿಯಾಗಿ ಸಂಸಾರವೆಂಬ ವೃಕ್ಷಕ್ಕೆ ಗೊಂಚಲಾಗಿ, ಸಂಕಲ್ಪವಿಕಲ್ಪಗಳೆಂಬ ತೆರೆಗಳಿಗೆ ಮಹಾನದಿಯಾಗಿ, ಚಿಂತಾ ಪಿಶಾಚಿಗಳಿಗೆ ಮಹಾಸ್ಮಶಾನವಾಗಿ, ವೃಕ್ಷಗಳಲ್ಲಾಡುವ ಪಕ್ಷಿಯಂತೆ ಪರಂಪರೆಯಾಗಿ ಜನಗಳಂ ಹೊಂದುತ್ತಾ, ವ್ಯಭಿಚಾರಿಯಂತೆ ಪರಪುರುಷನನ್ನೇ ಪಿಡಿಯುತ್ತಿರುವ ಈ ಆಶೆಯು, ರಾಕ್ಷಸಿಯಂತೆ ಧೈರ್ಯಶಾಲಿಯನ್ನು ಭಯಪಡಿಸುವದು. ಬಿಸಲಿನಂತೆ ಸಂತಾಪಪಡಿಸುತ್ತಾ ವಿಶಾಲಾಕ್ಷನನ್ನು ಕಂಗೆಡಿಸುವದು. ಆನಂದಮಗ್ನನನ್ನೂ ದುಃಖಪಡಿಸುವದು. ಮಹಾರಾಜನಿಂದಲೂ ಚಾಕರಿಯಂ ಮಾಡಿಸುವದು. ಜಿತೇಂದ್ರಿಯನಾದ ವಿರಕ್ತನಿಂದಲೂ ಸ್ತ್ರೀಸೇವೆಯಂ ಮಾಡಿಸುವದು. ತತ್ವಜ್ಞಾನಿಯನ್ನು ಚಪಲಪಡಿಸುವದು. ಮಹಾಮೌನಿಯನ್ನು ಮಾತನಾಡಿಸುವದು. ವಿಷಲತೆಯಂತೆ ಮೋಹಪಡಿಸುತ್ತಾ ಕುಳಿತಿದ್ದವನನ್ನು ಜಾರಿಸಿ ಬೀಳಿಸುವದು.

ಅಂತಃಪುರದಲ್ಲಿದ್ದವನಿಗೂ ಕಾಮವಿಕಾರವನ್ನುಂಟುಮಾಡುವದು. ಧನಪಿಶಾಚದಂತೆ ನಿಧಿಸಮೂಹದಲ್ಲಿದ್ದವನಿಗೂ ಯಾಚನೆಯನ್ನುಂಟುಮಾಡುವದು. ದೈವವ್ಯಾಪಾರದಂತೆ ಜಗವೆಲ್ಲವಂ ತಲೆಕೆಳಗಾಗಿ ಮಾಡುವ ಮಹಾಮೋಹಿನಿಯಾದ ಈ ಆಶೆಯೆಂಬ ನಾಯಕಿಯಿಂ ಪಿಡದಿರುವ ಮನವೆಂಬ ಮಹಾವಿಟನು, ಒಂದೇ ನಿಮಿಷದಿಂ ಸ್ವರ್ಗಪಾತಾಳಾದಿಗಂತಗಳಂ ತಿರುಗುತ್ತಾ ಅಲ್ಲಲ್ಲಿ ಚಿಂತೆಯಿಂ ಬದ್ಧನಾಗುತ್ತಿದ್ದಾಗ್ಯೂ, ಕುರಡಜಿಂಕೆಯಂತೆ ವಿಷಯಗಳೆಂಬ ಹಳ್ಳಗಳಲ್ಲಿ ಬಿದ್ದು ಬಹು ಶ್ರಮಗಳನ್ನನುಭವಿಸುತಿದ್ದಾಗ್ಯೂ, ಮರ್ಕಟದಂತೆ ಅವಳೊಡನೆ ಹಾರಾಡುತ್ತಾ, ಭ್ರಮರಿಯಿಂ ಕಮಲದಂತೆ ಸಂತೋಷಪಡಿಸುತ್ತಾ ಅವಳಂ ಬೆಂಬಿಡದಿರುವನು. ಸದ್ಗುಣಗಳೆಂಬ ಪೈರುಗಳಿಗೆ ಶಿಡಿಲಾಗಿಯು, ಜ್ಞಾನವೆಂಬ ಕಮಲಕ್ಕೆ ಮಂಜಿನ ಮಳೆಯಾಗಿಯು, ಸಂಸಾರವೆಂಬ ನಾಟ್ಯಕ್ಕೆ ನಟಿಯಾಗಿಯು, ವಿಪತ್ತೆಂಬ ಗದ್ದೆಗೆ ಶರತ್ಕಾಲವಾಗಿಯು, ವ್ಯವಹಾರವೆಂಬ ಸಮುದ್ರಕ್ಕೆ ಪ್ರವಾಹಪರಂಪರೆಯಾಗಿಯು, ಆಧಿವ್ಯಾಧಿಗಳಿಗೆ ತೌರುಮನೆಯಾಗಿಯು, ಅಜ್ಞಾನನಾಟ್ಯಕ್ಕೆ ರಂಗಸ್ಥಲವಾಗಿಯು, ಸಂಕಲ್ಪವಿಕಲ್ಪಪ್ರತಿಮೆಗಳಿಗೆ ಚಿತ್ರಮಂಟಪವಾಗಿಯೂ, ಈ ಆಶೆಯು ಪ್ರಕಾಶಿಸುತ್ತಿರುವದು. ಇದು ಗಗನಮಾರ್ಗದಂತೆ, ಒಂದುಕ್ಷಣ ಅಜ್ಞಾನವೆಂಬ ಮಂಜಿನಿಂ ತುಂಬುವದು. ಒಂದು ಕ್ಷಣ ಸಂಕಲ್ಪವಿಕಲ್ಪಗಳೆಂಬ ಮೇಘಗಳಿಂದ ಸಾಂದ್ರವಾಗುವದು. ಮತ್ತೊಂದುಕ್ಷಣ ಸನ್ಮಾರ್ಗದಲ್ಲಿ ಪ್ರವರ್ತಿಸಿ ನಿರ್ಮಲವಾಗುವದು. ರಾತ್ರಿಯ ಕತ್ತಲೆಯು ಹೋಗುವದರಿಂದ, ರಾಕ್ಷಸರ ಪ್ರಾಬಲ್ಯವು ತಪ್ಪುವಂತೆ, ಈ ಆಶೆಯು ಹೋದ್ದರಿಂದ ದೇಹಶ್ರಮವು ತಪ್ಪುವದು. ಈ ಆಶೆಯೆಂಬ ವಿಷೂಚಿಯು ಉಪದ್ರವಿಸುವವರಿಗೂ, ಮಹಾತ್ಮನೂ ಕೂಡ ನಾನಾಪ್ರಕಾರ ವ್ಯಥೆಪಡುತ್ತಾ ಮೋಹಪಡುತ್ತಿರುವನು. ಸಮಸ್ತ ಪ್ರಾಣಿಗಳಿಗೂ ಮೃಗಪಕ್ಷಿಗಳಿಗೆ ಬಲೆಯಂತೆ, ಬಾಧಕವಾದ ಈ ಆಶೆಯೆಂಬ ಪಿಶಾಚಿಯು ಬಿಡುವದಕ್ಕೆ ಪದಾರ್ಥಗಳ ಆಲೋಚನೆಗಳಂ ಬಿಡುವದೇ ಮಾತ್ರವಲ್ಲದೆ ಮತ್ತೊಂದಿಲ್ಲ. ಮಡುವಿನಲ್ಲಿರುವ ಮೀನು ಜಲದಲ್ಲಿ ಬಿದ್ದಿದ್ದೆಲ್ಲವಂ ಪಿಡಿವಂತೆ ತೃಣ, ಪಾಷಾಣ ಮೊದಲಾಗಿ ಕಂಡಿದ್ದೆಲ್ಲವನ್ನೂ ಈ ಆಶೆಯು ಗ್ರಹಿಸುವದು. ರೋಗದಂತೆ ಅಂಗತಂಗನಾಗಿ ಕೆಡಹುವ ಈ ಆಶೆಯು, ಲಕ್ಷ್ಮೀನಿವಾಸವಾದ ಕಮಲವಂ ಸೂರ್ಯಕಿರಣದಂತೆ ಚಕ್ರವರ್ತಿಯನ್ನೂ, ತತ್ವಜ್ಞಾನದಿಂ ಮೌನಿಯಾದವನನ್ನೂ ಕೂಡ ಬಾಯಿಬಿಡಿಸುವದು. ದೀರ್ಘವಾದ ಕಂಟಕಗಳಿಂದಲೂ, ಗಟ್ಟಿಯಾದ ಗಂಟುಗಳಿಂದಲೂ ಕೂಡಿ, ಒಳಗೆ ಶೂನ್ಯವಾಗಿದ್ದಾಗ್ಯೂ ಮುಕ್ತಾಮಣಿಗಳಂ ಧರಿಸಿರುವದ್ದರಿಂದ, ಬಿದರಿನಂತಿರು

ವ ಈ ಆಶೆಯು, ಸನ್ಯಾಸಿಗಳಿಗೂ, ಮುದುಕರಿಗೂ, ಶೂರರಿಗೂ ಕೂಡ ಆಧಾರವಾಗುವದು. ಬಾಹ್ಯಜ್ಞಾನವಿಲ್ಲದ ಜೀವನ್ಮುಕ್ತನಲ್ಲದೆ ಇವಳಂ ತಿರಸ್ಕರಿಸುವನು. ಯಾರೂ ಇಲ್ಲ; ದಾತೃವಿನ ಬಳಿಯಲ್ಲಿ ಲಕ್ಷ್ಮಿಯಂತೆಯೂ, ಷಂಡನ ಬಳಿಯಲ್ಲಿ ಕಾಮಿನಿಯಂತೆಯೂ, ಈ ಆಶೆಯು ಜೀವನ್ಮುಕ್ತನ ಬಳಿಯಲ್ಲಿ ನಿಲ್ಲದೆ ಹೋಗುವದು. ಆಶಾಲಕ್ಷ್ಮೀ ಚಿಂತೆಗಳು ಅನ್ಯೋನ್ಯವಾಗಿ ವ್ಯವಸ್ಥೆಯಿಲ್ಲದೆ, ತಾಯಿ ಮಗಳು ಮೊಮ್ಮಗಳುಗಳ ಭಾವಗಳಂ ಪಡೆಯುತ್ತಿದ್ದಾಗ್ಯೂ, ಮೋಹಿನಿಗಳಂತೆ ಪಿಡಿದವನನ್ನು ಬಿಡದೆ, ಸೂಳೆಯರಂತೆ ಸುಖ ದುಃಖೋತ್ಸಾಹಮಯವಾದ ವಿಲಾಸಗಳಂ ಮೋಹಪಡಿಸುತ್ತಾ, ಮಹಾತ್ಮನನ್ನೂ ಕೂಡ ಸ್ವಾಧೀನವಂ ಮಾಡಿಕೊಂಡಿರುವವು. ಕ್ಷೀರಸಮುದ್ರವಂ ಮಾಧುರ್ಯದಂತೆ, ಜಗವೆಲ್ಲವಂ ವ್ಯಾಪಿಸಿರುವ ಈ ಆಶೆಯುಂ ಬಿಟ್ಟಲ್ಲದೆ, ಯಾರಿಗೂ ಬಂದ ದುಃಖವು ತಪ್ಪಲಾರದೆಂದು ತಿಳಿಯುತ್ತೇನೆ. ಎಲೈ ಬ್ರಹ್ಮರ್ಷಿಯೇ! ಪಿಶಾಚಗಳ ವೀಣೆಯಂತೆ ನಾಡಿಗಳೆಂಬ ತಂತಿಗಳಂ ಕೂಡಿ, ಲತಾಮಯವಾದ ಅರಣ್ಯದಂತೆ ವಿಕಾರಿಯಾದ ಈ ದೇಹವು ಕೂಡ, ದುಃಖಕ್ಕೋಸ್ಕರವೇ ಚಲಿಸುತ್ತಿರುವದು. ಇದು ಜಡವಾದಾಗ್ಯೂ ದೃಷ್ಟಿ ಹಸ್ತಾಭಿನಯಗಳಿಂದಲೂ, ವಾಗ್ವಿಲಾಸಗಳಿಂದಲೂ, ಜ್ಞಾನಿಯಂತೆ ತೋರ್ಪಡುವದು. ಸರ್ವವ್ಯಾಪಕವಾಗಿ ಮುಖ್ಯ ಸತ್ತಾಶ್ರಯವಾದ ಬ್ರಹ್ಮಜ್ಞಾನದೃಷ್ಟಿಯಿಂ ನೋಡುವಲ್ಲಿ ಚಿದಾತ್ಮಕವೆಂತಲೂ, ಮಾಯಾಮಯವಾದ ಜಗತ್ತಿನ ದೃಷ್ಟಿಯಿಂ ನೋಡುವಲ್ಲಿ ಜಡವೆಂತಲೂ ಪೇಳಲು ಯೋಗ್ಯವಾದ ಈ ದೇಹವು ಜ್ಞಾನಸಾಧನವಾದಲ್ಲಿ ಕ್ಷೇಮಕರವೆನಿಸಿಕೊಳ್ಳುವದು. ಇಲ್ಲದಲ್ಲಿ ಇದಕ್ಕಿಂತ ಅವಿವೇಕಿಯಾಗಿ ಘೋರವಾದ ಶತ್ರುವು ಮತ್ತೊಂದಿಲ್ಲ. ಬಾಲಕನ ಮನಸ್ಸಿನಂತೆ ಇದು ಗುಗ್ಗಿ ಕಡ್ಡಿ ಮೊದಲಾದ ಅತಿಸ್ವಲ್ಪ ಪದಾರ್ಥಗಳ ಲಾಭದಿಂದಲೂ ಸಂತೋಷಪಡುವದು. ಅದು ದೊರೆಯದಿರೆ ಒಂದು ನಿಮಿಷ ಮಾತ್ರದಿಂದಲೇ ಬಹು ದುಃಖಪಡುವದು. ಹಾಸಪುಷ್ಪಗಳಿಂದಲೂ, ಭುಜಶಾಖೆಗಳಿಂದಲೂ, ನೇತ್ರಭ್ರಮರಗಳಿಂದಲೂ, ಕರಚರಣೋಷ್ಠ ಪಲ್ಲವಗಳಿಂದಲೂ, ವೃಕ್ಷದಂತೆಸೆವ ಈ ದೇಹವು, ಸಂಸಾರಮಾರ್ಗ ಸಂಚಾರಿಗಳಾದ ಜೀವಗಳಿಗೆ ಛಾಯಾವೃಕ್ಷದಂತೆ ಆಶ್ರಯವಾಗುವದು. ನದಿಯಂ ದಾಟಲೋಸುಗ ಪಿಡಿದ ಹರಿಗೋಲಿನಲ್ಲಿ ತಾನೆಂಬ ಬುದ್ಧಿಯಂ ಮಾಡುವರಂತೆ ಮೂಢರಾದವರೇ ಈ ದೇಹವಂ ತಾನೆಂದು ತಿಳಿವರು. ನಾಡೀಲತೆಗಳಿಂದಲೂ, ಇಂದ್ರಿಯ ಪಕ್ಷಿಗಳಿಂದಲೂ, ಶುಭಾಶುಭಫಲಗಳಿಂದಲೂ, ಚಿಂತಾ ಕುಸುಮ ಮಂಜರಿಗಳಿಂದಲೂ, ರೋಮ ತೃಣಗಳಿಂದಲೂ, ಕರ್ಣನೇತ್ರಾದಿ ಬಿಲಗಳಿಂದಲೂ ಕೂಡಿ

ಕೊಂಡು ಕಾಮಕ್ರೋಧಾದಿ ದುಷ್ಟಮೃಗಗಳಿಂದಲೂ, ಆಶಾಸರ್ಪಗಳಿಂದಲೂ, ದುರ್ದೃಷ್ಟಿ ಚೋರರಿಂದಲೂ, ಕಾಡಿನಂತೆ ಭಯಂಕರವಾಗಿರುವ ಈ ದೇಹವು ಯಾವನಿಗಾದರೂ ವಿಶ್ವಾಸವನ್ನುಂಟುಮಾಡೀತೇ ! ಕರಳು, ಮಾಂಸ, ಮೂಳೆಗಳಿಂ ಕೂಡಿ ತಮಟೆಯಂತೆ ಡವಡವಾ ಎಂದು ಧ್ವನಿಗೈಯ್ಯುತ್ತಿರುವ ಈ ದೇಹದಲ್ಲಿ ನಾನು ಬೋನಿನಲ್ಲಿ ಕೂಡಿದ ಪುಣುಗಿನ ಬೆಕ್ಕಿನಂತೆ, ಬದ್ಧನಾಗಿ ತಲ್ಲಣಪಡುತ್ತಿರುವೆನು; ಅಹಂಕಾರವೆಂಬ ಯಜಮಾನನು ಈ ದೇಹವೆಂಬ ಯಜ್ಞಶಾಲೆಯೊಳ್ ವಿಷಯಗಳೆಂಬ ಯೂಪಸ್ತಂಭಗಳಲ್ಲಿ, ಆಶೆಗಳೆಂಬ ಪಾಶಗಳಿಂ ಬಿಗಿಯಲ್ಪಟ್ಟ ಇಂದ್ರಿಯಗಳೆಂಬ ಪಶುಗಳನ್ನು, ಕಾಮಕ್ರೋಧ ಮೊದಲಾದ ಋತ್ವಿಕ್ಕುಗಳೊಡನೆ ಛೇದಿಸುತ್ತಾ ತಾನೇ ನಷ್ಟನಾಗುವನು. ಮೂಳೆಗಳೆಂಬ ಗಳುಗಳಿಂದಲೂ, ನಾಡಿಗಳೆಂಬ ಹಗ್ಗಗಳಿಂದಲೂ, ಮಿಥ್ಯಾಜ್ಞಾನವೆಂಬ ಮೂಲಸ್ತಂಭದಿಂದಲೂ, ಚರ್ಮ ಮಾಂಸಾದಿ ಧಾತುವಿಕಾರವಾದ ಗೋಡೆಗಳಿಂದಲೂ, ಕೈಕಾಲುಗಳೆಂಬ ಹೊರಗಣ ಕೈಸಾಲೆಗಳಿಂದಲೂ, ಮಲಮೂತ್ರದ್ವಾರಗಳೆಂಬ ಬಚ್ಚಲುಗಳಿಂದಲೂ, ಹೊಟ್ಟೆಯೆಂಬ ಪಾಕಶಾಲೆಯಿಂದಲೂ, ಮುಖವೆಂಬ ಉಪ್ಪರಿಗೆಯಿಂದಲೂ, ಇಂದ್ರಿಯದ್ವಾರಗಳೆಂಬ ಗವಾಕ್ಷಗಳಿಂದಲೂ, ವಿಷಯಸಮೂಹವೆಂಬ ಉಗ್ರಾಣದಿಂದಲೂ, ಮನೆಯಂತಿರುವ ಈ ದೇಹದಲ್ಲಿ ದುಃಖವೆಂಬ ಬಾಲಕನ ರೋದನದಿಂದಲೂ, ಕುಚೇಷ್ಟೆಗಳೆಂಬ ಚೇಟಿಯರ ಹಾವಳಿಯಿಂದಲೂ, ಗವಾಕ್ಷಗಳಲ್ಲಿ ಆಡುತ್ತಿರುವ ಪ್ರಜ್ಞೆಯೆಂಬ ಯಜಮಾನಿಯ ದುರಾಕ್ಷೇಪದಿಂದಲೂ, ಪ್ರಾಣಾಪಾನಗಳೆಂಬ ಭೃತ್ಯರ ತುಳಿದಾಟದಿಂದಲೂ, ಅಹಂಕಾರವೆಂಬ ಯಜಮಾನನ ಆಕ್ರೋಶದಿಂದಲೂ, ಕಾಮಕ್ರೋಧಾದ್ಯಂತಶ್ಶತ್ರುಗಳ ಹಾರಾಟದಿಂದಲೂ, ನಾಲಿಗೆಯೆಂಬ ಪಾಚಕಿಯ ಕೂಗಾಟದಿಂದಲೂ, ಚಿಂತೆಗಳೆಂಬ ಹೆಮಕ್ಕಳ ತುಂಟತನದಿಂದಲೂ, ದಂತಪಂಗ್ತಿಯೆಂಬ ಬೀಸುಗಲ್ಲಿನ ಮೊರತದಿಂದಲೂ, ಅಸಹ್ಯವಾದ ಊರ್ಧ್ವಾಧೋ ವಾಯುಗಳು ಬೀಸುವದ್ದರಿಂದಲೂ, ತಿಳಿಯದಂತೆ ಒಳಗೆ ಶೇರಿಕೊಂಡು ಘಾಶಿ ಪಡಿಸುವ ರೋಗಗಳ ಸಾದಣಿಯಿಂದಲೂ, ಭೋಗಾಶೆಗಳೆಂಬ ಸೂಳೆಯರ ತುಂಟತದಿಂದಲೂ, ಬಿಂದುಸಿಮಿಷವಾದರೂ ನಿಲ್ಲಲಾರದೆ, ಜ್ಞಾನವೆಂಬ ಧನದ ಆಶೆಯಿಂದ ಬಿಡಲಾರದೆ, ವ್ಯಥೆಪಡುತ್ತಿರುವೆನು; ಮುಗುಳುನಗೆಯೆಂಬ ದೀಪದಿಂದೊಂದು ಕ್ಷಣ ಸುಂದರವಾಗಿಯು, ಕಂಣೀರುಮಳೆಗಳಿಂದೊಂದುಕ್ಷಣ ನೋಡಲಶಕ್ಯವಾಗಿಯು, ಅಂತಸ್ಸಂತಾಪಗಳಿಂದೊಂದು ಕ್ಷಣ ಘೋರವಾಗಿಯು, ಸಂತೋಷವಿಲಾಸಗಳಿಂದೊಂದು ಕ್ಷಣ ಮನೋಹರವಾಗಿಯು, ಪ್ರೀತಿಕ್ಯಾತನಂತೆ ಕ್ಷಣಕ್ಕೊಂ

ದು ಬಾಣವಾಗುವ ಈ ದೇಹವಂ ನಾನು ನೋಡಲಾರೆನು. ಕೆಸರು ಹಳ್ಳ ದೊಳ್ಬಿದ್ದಿರುವ ಆನೆಯನ್ನೆತ್ತುವದಕ್ಕೆ ಸಾಮರ್ಥ್ಯವಿಲ್ಲದ ಮರಿಯಾನೆಯಂತೆ, ಜ್ಞಾನಬಲದಿಂದೀದೇಹವನ್ನುದ್ಧರಿಸುವದಕ್ಕೆ ಶಕ್ತಿಯಿಲ್ಲದೆ ಚಿಂತಿಸುತ್ತಿರುವೆನು; ಮಲಮೂತ್ರಭಾಂಡವಾದಾಗ್ಯೂ ಜ್ಞಾನಸಾಧನ ದೃಷ್ಟಿಯಿಂ ಗ್ರಾಹ್ಯವಾದ ಈ ಶರೀರವು, ನೀರಗುಳ್ಳೆಯಂತ ನಶ್ವರವಾದ್ದರಿಂದ ನಂಬುವದಕ್ಕೆ ಯೋಗ್ಯವಾಗು ವದಿಲ್ಲ. ಎಷ್ಟುಪ್ರಕಾರವಾಗಿ ರಕ್ಷಿಸಲ್ಪಟ್ಟಾಗ್ಯೂ, ಮರಣಪಂಥಾ ಸಂಕಟಬಂದ ಕಾಲದಲ್ಲಿ ಸ್ವಲ್ಪವಾದರೂ, ಉಪಯೋಗಿಸದಿರುವ ಕೃತಘ್ನರಾದ ಜನರಿಗೋ ಸುಗ, ನಾವು ತೊಂದರೆಪಡುವದು ಉಚಿತವಲ್ಲದ್ದರಿಂದ, ರಾಜ್ಯಸಂಪತ್ತು ಮೊ ದಲಾದುದನ್ನು ಪರಿಗ್ರಹಿಸದೆ, ಈ ದೇಹವು ನನ್ನಂ ಬಿಡುವದಕ್ಕೆ ಮುಂಚಿತ ವಾಗಿ, ನಾನೆ ಇದನ್ನು ಬಿಡಬೇಕೆಂದು ಇಚ್ಛೈಸುವೆನು; ಎಷ್ಟು ತಿಂದರೂ, ಎಷ್ಟು ಕುಡಿದರೂ, ಎಷ್ಟು ಉಟ್ಟರೂ, ಎಷ್ಟು ತೊಟ್ಟರೂ, ಎಷ್ಟು ಸುಖಪ ಟ್ಟರೂ, ಪಾಳುಮಾರ್ಗವನ್ನೇ ನೋಡುವದಾದ್ದರಿಂದ, ಸ್ವಲ್ಪವಾದರೂ ಅಭಿ ಮಾನಪಡದೆ, ನಿರ್ಬಂಧದಿಂ ಕೆಟ್ಟದಾರಿಗೆ ಬಿಡದೆ, ನಿಗ್ರಹಿಸುವನಿಗೆ ಇದು ಸು ಖಸಾಧನವಾಗುವದಲ್ಲದೆ, ದುಷ್ಟಬಾಲನಂತೆ ಲಾಲನೆಗೆ ಸಾಧ್ಯವಾಗಿ ಒಳ್ಳೇ ಮಾರ್ಗಕ್ಕೆ ಬರುವದಲ್ಲ; ಹಳ್ಳದಲ್ಲಿ ಬೀಳುವದ್ದರಿಂದ ದುಃಖವನ್ನೂ, ಸಿಹ್ಮಾಸ ನದಮೇಲೆ ಕುಳ್ಳಿರುವದ್ದರಿಂದ ಸುಖವನ್ನೂ, ಯಾವದು ಸ್ವತಃ ಅರಿಯದೋ ಜಡಮೂಢವಾದ ಇಂಥಾ ಶರೀರದಲ್ಲಿ, ಅಭಿಮಾನಪಡುವದ್ದರಿಂದ ನನಿಗೇನು ಸುಖವಾದೀತು ? ಮನೋವಾಯುಗಳಿಗಿಂತಲೂ, ಇದರ ಗತಿಯು ತಿಳಿಯಲಶ ಕ್ಯವಾದ್ದರಿಂದ ಈ ಶರೀರಸ್ಥಿತಿಯೂ ನಂಬತಕ್ಕದಲ್ಲ; ಜಗತ್ತಿನ ಅಭಿಮಾನಕ್ಕೆ ಶರೀರಾಭಿಮಾನವೇ ಕಾರಣವಾದ್ದರಿಂದ ಶರೀರಸೌಖ್ಯವಂ ಬಯಸುವರು ಹು ಚ್ಚರಂತೆ ಜಗವೆಲ್ಲವನ್ನೂ ತಿರಗುತ್ತಾ, ದೃಷ್ಟಿದೋಷಗಳಿಂ ಘಾಶಿಪಡುವರು. ಜಡಾ ಜಡವಿಚಾರದಿಂದೀ ದೇಹಕ್ಕು ನನಿಗೂ ಸಂಬಂಧವೇನೆಂದು ಇದಂ ತಿರ ಸ್ಕರಿಸುವ ಜನರು, ಪರಮಾನಂದವಂ ಹೊಂದುವರು. ಶರೀರಾಭಿಮಾನಿಗೆ ಅಹಂ ಕಾರ ಪಿಶಾಚದಿಂದಲೂ, ಅವಿದ್ಯೆಯೆಂಬ ರಾಕ್ಷಸಿಯಿಂದಲೂ, ಎಂದಿಗೂ ಬಾಧೆ ತಪ್ಪುವದಿಲ್ಲ; ಪ್ರಪಂಚವೆಲ್ಲವು ಅಸತ್ಯವೆಂದು ಪೇಳುವ ಶಾಸ್ತ್ರಜ್ಞಾನಿಗೂ ಕೂ ಡ, ಅಸತ್ಯವಾಗಿ ತೋರದೆ ಅವನ್ನೆ ಆಶ್ರಯಿಸಿಕ್ಕೊಂಡಿರುವ, ಈ ಶರೀರಕ್ಕಿಂತ ಮಾಯಾವಸ್ತುವು ಮತ್ತೊಂದುಂಟೆ ? ಮಿಂಚನ್ನು, ಗಂಧರ್ವ ನಗರವನ್ನು, ಯಾವನು ಸ್ಥಿರವೆಂದು ನಂಬುವನೋ ಅವನೆ ಈ ಶರೀರವಂ ನಂಬುವನಾದ್ದ ರಿಂದ, ಈ ಶರೀರದಲ್ಲಿ ಅಭಿಮಾನವಂ ಬಿಟ್ಟು ಸುಖಪಡಬೇಕೆಂದು ನಿಶ್ಚಯಿಸಿ

ಥೇನೆ ಎಂದು ಶ್ರೀರಾಮನು ಪೇಳುತ್ತಿರುವಲ್ಲಿಗೆ ಜ್ಞಾನಯೋಗತರಂಗಿಣಿಯೋಳ್ ಧನಾದಿಸ್ವರೂಪ ನಿರೂಪಣವೆಂಬ ಮೂರನೇತರಂಗಕ್ಕೆ ಮಂಗಳಮಹಾ.



ಚತುರ್ಥತರಂಗ ಪ್ರಾರಂಭಃ.

## ಬಾಲ್ಯಾದಿಸ್ವರೂಪನಿರೂಪಣ.

ಶ್ರೀರಾಮಚಂದ್ರನಿಂತೆಂದನು, ಎಲೈ ಮಹಾಮುನಿಯೇ ಬಾಲ್ಯವು ಒಳ್ಳೇದೆಂದು ಜನಗಳು ಪೇಳುವರಲ್ಲವೇ ? ಅಲ್ಲೇನು ಸುಖವಿರುವದು, ಅಶಕ್ತಿಗಳಿಗೆ ಆವಾಸಸ್ಥಾನವಾಗಿ, ಬಾಲಗ್ರಹಗಳಿಗೆ ಕ್ರೀಡಾಶಾಲೆಯಾಗಿ, ಚಪಲಕ್ಕೆ ಉತ್ಪತ್ತಿಸ್ಥಾನವಾಗಿ, ಆಪತ್ತುಗಳಿಗೆ ವಿಹಾರೋದ್ಯಾನವಾಗಿ, ರೋಗಗಳಿಗೆ ನಾಟ್ಯಸ್ಥಾನವಾಗಿ, ಪ್ರತಿಬಿಂಬದಲ್ಲಿ ಎರಡನೇ ಶಿಶುವೆಂತಲೂ, ಛಾಯೆಯಲ್ಲಿ ಪಿಶಾಚವೆಂತಲೂ, ದೀಪದಲ್ಲಿ ಫಲವೆಂತಲೂ, ಬುದ್ಧಿಯನ್ನುಂಟುಮಾಡುವ ಅವಿದ್ಯೆಗೆ ತವರುಮನೆಯಾಗಿರುವ ಬಾಲ್ಯಕ್ಕಿಂತಲೂ ಕೆಟ್ಟದ್ದು ಯಾವದು ? ಮಾತುಮಾತಿಗೂ ಅಳುತ್ತಲೂ, ಕಂಡವರೆಲ್ಲರು ಎತ್ತಿಕೊಳ್ಳಲೆಂದು ತೋಳುಗಳನ್ನೆತ್ತುತ್ತಲೂ, ಕಂಡ ಪದಾರ್ಥಗಳಿಗೆಲ್ಲಾ ಕೈನೀಡುತ್ತಲೂ, ಮಲಮೂತ್ರಗಳಲ್ಲಿ ಜುಗುಪ್ಸೆ ಇಲ್ಲದೆ, ಅತ್ತಿತ್ತಹೋಗುವದಕ್ಕೆ ಶಕ್ತಿಯಿಲ್ಲದೆ ಬಿದ್ದಲ್ಲಿಯೇ ಬಿದ್ದಿರುತ್ತಾ, ರೋಷಬಂದುದಾ ರೋದನದಿಂ ಕಳೆಯುತ್ತಾ, ತಿರ್‍ಯಗ್ಜಾತಿಗೆ ಸರಿಯಾದ ಗತಿಗಳಿಂದೋಡಾಡುತ್ತಾ, ಸ್ಥೈರ್‍ಯ ಗಾಂಭೀರ್‍ಯ ಧೈರ್‍ಯಗಳ ಗಂಧವಂ ಕಾಣದೆ ಸಕಲ ಭಯಗಳಿಗೂ ಆಸ್ಪದವಾಗಿ ಜನಗಳ ಧಿಕ್ಕಾರಕ್ಕೆ ಮುಖ್ಯಪಾತ್ರವಾಗಿ, ದೈನ್ಯಕ್ಕೆ ಮುಖ್ಯಾಶ್ರಯವಾದ ಬಾಲ್ಯದಲ್ಲಿ ಯಾವ ದುರವಸ್ಥೆಗಳುಂಟಾಗುವವೊ ಅವುಗಳು ಕೌಮಾರದಲ್ಲೂ, ಯೌವ್ವನದಲ್ಲೂ, ವೃದ್ಧಭಾವದಲ್ಲೂ, ಮರಣದಲ್ಲೂ, ರೋಗಗಳಲ್ಲೂ, ಆಪತ್ತುಗಳಲ್ಲೂ ಕೂಡ ಉಂಟಾಗಲಾರವು. ಬಾಲ್ಯದಲ್ಲಿ ಜಲದಿಂದಲೂ, ಅಗ್ನಿಯಿಂದಲೂ, ಗಾಳಿಯಿಂದಲೂ, ಉನ್ನತಪ್ರದೇಶಗಳಿಂದಲೂ ಕೂಡ ಬಾರಿಬಾರಿಗೂ ಭಯಗಳುಂಟಾಗುತಲಿರುವವು. ದುಷ್ಟವಾದ ಆಟಗಳಿಗೂ, ಅಪೇಕ್ಷೆಗಳಿಗೂ ವಿಲಾಸಸ್ಥಾನವಾದ ಈ ಬಾಲ್ಯವು ಯಾರಿಗೂ ಸಮ್ಮತವಾಗುವದಿಲ್ಲ. ಗುಹೆಯಂ ಗೂಬೆಗಳಂತೆ ದುರಾಚಾರಗಳು, ಆಧಿಗಳೂ, ವ್ಯಾಧಿಗಳೂ, ಮನೋರಥಗಳೂ ಕೂಡ ಬಾಲ್ಯವನ್ನಾಶ್ರಯಿಸುವವು. ಸಮಸ್ತವಾದ ಅವಸ್ಥೆಗಳಿಗಿಂತಲೂ ಬಾಲ್ಯದಲ್ಲಿ ಚಾಪಲ್ಯವು ದಶಗುಣಾಧಿಕವಾಗಿರುವದು. ಅದಕ್ಕೆ ಸ್ವಭಾವ ಚಪಲವಾದ ಮನವು ಸೇರುವಲ್ಲಿ ಬಣ್ಣಿ

ಸತಕ್ಕದ್ದೇನು? ಇಂಥಾ ಬಾಲ್ಯವನ್ನು ಮನೋಹರವೆಂದು ಹೇಳುವರು ಎಂಥಾ ಮಹಾತ್ಮರೋ ತಿಳಿಯಕೂಡದು. ಸ್ತ್ರೀರುಗಳ ಲೋಚನಗಳಿಂದಲೂ, ಮಿಂಚುಗಳ ಸಮೂಹದಿಂದಲೂ, ಸಮುದ್ರದ ತೆರೆಗಳಿಂದಲೂ, ಅಗ್ನಿಜ್ವಾಲೆಗಳಿಂದಲೂ, ಅರಳೀಯಲೆಗಳಿಂದಲೂ, ಆನೆ ಕಿವಿಗಳಿಂದಲೂ, ಕಪಿಗಳ ಮನಸ್ಸುಗಳಿಂದಲೂ ಕೂಡ ಚಾಪಲ್ಯವಂ ಸಂಗ್ರಹಿಸಿ ಪರಮೇಶ್ವರನು ಈ ಬಾಲ್ಯಾವಸ್ಥೆಯಂ ಮಾಡಿರುವನೆಂದು ತೋರುತಲಿಧೆ. ಸ್ವಲ್ಪದರಿಂದಲೇ ಸಂತೋಷವನ್ನೂ, ಸ್ವಲ್ಪದರಿಂದಲೇ ದುಃಖವನ್ನೂ ಹೊಂದುತ್ತಾ, ಪ್ರತಿದಿನದಲ್ಲೂ ಹೊಸಹೊಸ ಪದಾರ್ಥಗಳನ್ನಪೇಕ್ಷಿಸುತ್ತಾ ದೊಡ್ಡವರು ಏನು ಬೇಕೆಂದು ಕೇಳಿದಾಗ್ಯೂ ಸ್ವಲ್ಪ ಪದಾರ್ಥಗಳನ್ನೇ ಅಪೇಕ್ಷಿಸುತ್ತಾ ಅವಾಚ್ಯವಾದ ವಚನವನ್ನೂ ಕೂಡ ಲಜ್ಜೆಯಿಲ್ಲದೆ ಹೇಳುತ್ತಾ ಹಸಿವು ಬಾಯಾರಿಕೆಗಳೇ ಮುಖ್ಯವಾಗಿ ಮಾತುಮಾತಿಗೂ ಅಳುತ್ತಾ, ನಾಯಿಯಂತೆ ಅಮೇಧ್ಯದಲ್ಲಿ ರಮಿಸುವ ಬಾಲಕನು ವಿದೂಷಕನಂತೆ ಎಲ್ಲರನ್ನು ಅಣಕಿಸುತ್ತಾ ಜನಗಳಿಗೆ ಕ್ರೀಡಾಮೃಗವಾಗಿರುವನು. ಸಂಕಲ್ಪಾನುಸಾರವಾಗಿ ಪದಾರ್ಥ ಸಿಕ್ಕದೆ ಇರಲು ದುಃಖಪರಾಯಣನಾಗುವ ಈ ಶಿಶುವು ತನ್ನ ಹೊಟ್ಟೆಯ ಪ್ರಮಾಣವಂ ತಿಳಿಯದೆ ತಿನ್ನುವದಕ್ಕೆ ಹೋಗುವನು. ಚಂದ್ರನಂ ಹಿಡಿಯಲು ಕೈಯೆತ್ತುವನು. ಕಪ್ಪೆಯಂತೆ ಕುಣಿಯುತ್ತಾ ಕೆಸರಲ್ಲಾಡುತ್ತಿರುವನು. ಹುಟ್ಟಿದಕೂಡ್ಲೆ ನಾಭಿನಾಳಚ್ಛೇದವು, ಬಳಿಕ ಕರ್ಣವೇಧೆಯು, ಬಾಲಗ್ರಹಾದಿಗಳಿಂ ಪೀಢೆಪಡುವಲ್ಲಿ ರಕ್ಷಾವ್ಯಾಜದಿಂದ ಅಗ್ನಿಸಂತಾಪವು, ಕಂಡದ್ದಂ ಕೇಳುವಲ್ಲಿಯೂ, ಇಲ್ಲದ್ದನ್ನಪೇಕ್ಷಿಸುವಲ್ಲಿಯೂ, ಕೈಗೆಸಿಕ್ಕಿದ್ದಂ ಬಿಡದಿರುವಲ್ಲಿಯೂ ಕೂಡ ದೊಡ್ಡವರ ಪ್ರಹಾರವು, ಆಟದಲ್ಲಿ ಬಲಿಷ್ಠರಿಂದ ಬಾಧೆಯೂ, ಮಠದಲ್ಲಿ ಗುರುಗಳಪೆಟ್ಟು, ಅಲ್ಲಿಗೆ ಹೋಗದೇ ಇದ್ದಲ್ಲಿ ಮನೆಯಲ್ಲಿ ತುಂಟತನವಂ ಮಾಡುವನೆಂದು ಶಿಕ್ಷೆಯೂ ಸಹಾ ಸಿದ್ಧವಾಗಿರುವದ್ದರಿಂದ ಬಾಲ್ಯಕ್ಕಿಂತಲೂ, ದುಃಖಕರವಾದ್ದು ಮತ್ತೊಂದಿಲ್ಲವೆಂದು ನಿಶ್ಚಯಿಸತಕ್ಕದ್ದು. ನಿರರ್ಥಕಪ್ರಯಾಸವಾಗಿ ಬೀಳುವದೇ ಅಧಿಕವಾದ ಇಂಥಾ ಬಾಲ್ಯವಂ ಕಳದ ಮರ್ತ್ಯನು ನರಕದಲ್ಲಿ ಬೀಳುವದಕ್ಕೋಸುಗವೇ ಯೌವ್ವನವಂ ಹೊಂದುವನು. ಬಾಲ್ಯದಲ್ಲಿ ಕಾಲಿನಲ್ಲಿದ್ದ ಚಾಪಲ್ಯವಾಗ ವೃದ್ಧಿ ಹೊಂದಿ ನಡುಪಟ್ಟಕ್ಕೆ ಬರಲು ರಕ್ತಮಾಂಸಗಳಿಂ ಪುಷ್ಟಿಯಾದ ದೇಹದ ಕೊಬ್ಬಿನಿಂದ ಹಾರಾಟ ಬಲವಾಗುವದು. ಮೋಹಾಂಧಕಾರದಿಂ ಪೂರ್ಣವಾದ ಮನವೆಂಬ ಬಲದಿಂದೆದ್ದ ಮನ್ಮಥನೆಂಬ ಪಿಶಾಚದ ಆವೇಶದಿಂದಾಗ ಕಾಮಿನಿಯರ ಚಿಂತೆ ಉಂಟಾಗುವದು. ಕಾಮಮಹಾರಾಜನಿಗೆ ಕಾಮಿನಿಯರು ಸೇನೆಯಾದ್ದರಿಂದ

ಅವರ ವಿಷಯವಾದ ಆಲೋಚನೆಯು ಯುಕ್ತವಾದದ್ದು. ಆದರೆ ಈ ಕಾಮಿನಿಯರು ತಮ್ಮ ಮಹಾರಾಜನ ಪುಟ್ಟದ ಮನೆಯೆಂದು ಆಲೋಚಿಸದೆ ಮನವನ್ನೇ ಕೆಡಿಸುವರಾದ್ದರಿಂದ ದುರ್ವ್ಯಾಪಾರರಾದ ಈ ಕಾಮಿನಿಯರನ್ನು ಅವರ ರೀತಿಯಂ ತಿಳಿಯದೆ ಅವರಿಗೆ ವೃದ್ಧಿಯನ್ನುಂಟುಮಾಡುವ ದುಷ್ಕೃತಿಯಾದ ಕಾಮರಾಜನನ್ನು ಯಾರು ತಿರಸ್ಕರಿಸುವರೋ ಅವರೇ ಧೀರರೆನ್ನಿಸಿಕೊಳ್ಳುವರು. ಮಿಂಚುಹುಳುವಿನ ಹೊಳಪಿನಂತೆ ಕ್ಷಣಪ್ರಕಾಶವಾಗಿ ಗಂಧರ್ವನಗರದಂತೆ ನಿಮಿಷಮಾತ್ರ ಮನೋಹರವಾಗಿ, ಸುರಾಪಾನದಂತೆ ಬುದ್ಧಿಭ್ರಂಶಕರವಾಗಿ, ಸ್ವಪ್ನಾಂಗನಾಸಂಗಮದಂತೆ ವಂಚನಾಮಯವಾಗಿ, ವೇಶ್ಯಾಸಮಾಗಮದಂತೆ ಲಜ್ಜಾನಿರ್ಬಂಧರಹಿತವಾಗಿ, ಸರ್ವವ್ಯಾಪಾರಗಳಲ್ಲೂ, ಅವಿಚಾರ ಮನೋಹರವಾಗಿರುವ ಯೌವನದ ಮದದಿಂದ ದರಿದ್ರನೇ ಶ್ರೀಮಂತನಂತೆ ಅವಿವೇಕದಿಂದ ಯಾರನ್ನು ಲಕ್ಷೀಕರಿಸದೆ ನಡೆಯುವಲ್ಲಿ ಶ್ರೀಮಂತನ ಗತಿಯಂತೆಂದು ಹೇಳಬೇಕು ? ಕಾಮಹರನಾದ ಮಹಾದೇವನು ತನಗೆ ನಿತ್ಯಯೌವನ ಸಿದ್ಧವಾಗಿರುವದರಿಂದ ಅದರ ಅಜ್ಞಾನಾಂಧಕಾರವು ತನ್ನಂ ಬಾಧಿಶೀತೆಂಬ ಭಯದಿಂದಲೋ ಅಥವಾ ತನ್ನ ಧ್ಯಾನವಂ ಮಾಡುವವರ ಮನವಂ ಕೆಡಶೀತೆಂಬ ಯೋಚನೆಯಿಂದಲೋ, ಜ್ಞಾನಪ್ರಕಾಶಾತ್ಮಕವಾದ ಚಂದ್ರನಂ ಧರಿಸಿದ್ದಾನೆ ಎಂದು ತೋರುತಲಿಧೆ. ಯೌವನದ ಕೊಬ್ಬಿನಿಂದ ಬುದ್ಧಿಗೆಟ್ಟವರಿಗೆ ಮನ್ಮಥನೇ ಪರಬ್ರಹ್ಮವಾಗಿಯೂ, ಅಂಗನೆಯರೇ ಉಪಾಸ್ಯದೇವತೆಗಳಾಗಿಯೂ, ಅವರ ಮಾತುಗಳೇ ವೇದವಾಕ್ಯಗಳಾಗಿಯೂ, ಶೃಂಗಾರಪ್ರಬಂಧಗಳೇ ಉಪನಿಷತ್ತುಗಳಾಗಿಯೂ, ವಾತ್ಸ್ಯಾಯನತಂತ್ರವೇ ವೇದಾಂತಶಾಸ್ತ್ರವಾಗಿಯೂ, ನಟವಿಟಗಾಯಕವಿದೂಷಕರೇ ವಿದ್ವಾಂಸಕರಾಗಿಯೂ, ತನಗೆ ತೋರಿದ್ದೇ ಪ್ರಮಾಣವಾಗಿಯೂ, ಅಂಗನಾಸಂಭೋಗವೇ ರಾಜಯೋಗವಾಗಿಯೂ, ಭೋಗಾನಂದದ ಅಭ್ಯುದಯವೇ ಸಾಯುಜ್ಯಮೋಕ್ಷವಾಗಿಯೂ, ತೋರುತ್ತಿರುವದು. ದುರಾಹಾರ, ದುರ್ವ್ಯವಹಾರ, ದುರಾಚಾರ, ದುರ್ವ್ಯಾಪಾರ, ದುರ್ವ್ಯಸನ, ದುರಾಶೆಗಳೆಲ್ಲವು ಕ್ಷಯಕಾಲದಲ್ಲಿ ಉತ್ಪಾತಗಳಂತೆಯೂ, ಸ್ಮಶಾನದಲ್ಲಿ ಪಿಶಾಚಗಳಂತೆಯೂ, ಯೌವನ ವಿಕಾರದಲ್ಲಿ ಶೇರಿಕೊಂಡಿರುವವು. ಆಗ ಘೃತ ಕುಂಭಸ್ವರೂಪನಾದ ಪುರುಷನಿಗೆ ಅಗ್ನಿಕುಂಡ ಸಮಾನರಾದ ಕಾಮಿನಿಯರು ಸಮೀಪದಲ್ಲಿದ್ದಲ್ಲಿ ರಸಾಭಾಸ ವ್ಯವಹಾರಗಳಿಂದ ಸಂತಾಪ ಉಂಟಾಗಬಹುದು. ಇಲ್ಲದಿದ್ದರೂ ವಿಯೋಗಸಂತಾಪಗಳಿಂ ಪ್ರಾಣಾಂತವಾದ ವ್ಯಥೆಗಳುಂಟಾಗುವದು ವಿಚಿತ್ರವಾಗಿಧೆ. ಅಗ್ನಿಸಾಮಿಪ್ಯದಿಂದುಂಟಾದ ರೋಗಗಳಿಗೆ ಔಷಧಿಗಳಿಂ ಶಾಂತಿಯಾಗುವವು.

ವಿಯೋಗಾಗ್ನಿಯಿಂ ತಪ್ತವಾದ ಶರೀರಕ್ಕೆ ಸಂಭವಿಸಿದ ಜಾಡ್ಯವು ಮರಣಾಂತವಾಗಿ ಉಪಶಾಂತವಾಗುವದಿಲ್ಲ. ಸರ್ವಕಾಲದಲ್ಲೂ ಆ ಸ್ತ್ರೀಯೇ ಸುಂದರಿಯು, ಅವಳ ಮುಖವೇ ಚಂದ್ರನು, ಅವಳ ಕುಚಗಳೇ ಕನಕ ಕಲಶಗಳು, ಅವಳ ನಿತಂಬ ಜಘನಗಳೇ ಮರಳೋಡ್ಡುಗಳು, ಅವಳ ಕೈಗಾಲುಗಳೇ ಚಿಗರುಗಳು, ಅವಳ ಮಾತುಗಳೇ ಅಮೃತರಸ ಪ್ರವಾಹಗಳು, ಅವಳ ಕಟಾಕ್ಷಕ್ಕೆ ಪಾತ್ರನಾದವನೇ ಧನ್ಯನು, ಅವಳ ಪಾದಕಮಲದಿಂ ಪೆಟ್ಟುತಿಂದವನೇ ಕೃತಾರ್ಥನೆಂದು ದುರಾಲಾಪ ದುರ್ವ್ಯಸನಗಳಿಂದಲೇ ವ್ಯರ್ಥವಾಗಿ ಆಯುಸ್ಸು ನಷ್ಟವಾಗುವದು. ಆಗ ಎಂಥಾ ಅಯೋಗ್ಯನೂ ಕೂಡ ಸರ್ವವಿಷಯದಲ್ಲೂ ತಾನೇ ದೊಡ್ಡವನೆಂದು ಅಭಿಮಾನಪಡುವನು. ಆಗ ಸಮಸ್ತ ದೋಷಗಳೂ ಕಮಲವಂ ಭ್ರಮರಗಳಂತೆ ಪುರುಷನಂ ಹೊಂದುವವು. ಆಧಿವ್ಯಾಧಿಗಳೆಂಬ ಪಕ್ಷಿಗಳಿಗೆ ಆವಾಸವೃಕ್ಷವಾಗಿ ವಿಲಾಸ ಮನೋರಥಗಳೆಂಬ ತರಂಗಗಳಿಗೆ ಸಮುದ್ರವಾಗಿ ಪಾಪಲಕ್ಷ್ಮಿಗೆ ವಿಲಾಸಸ್ಥಾನವಾದ್ದರಿಂದ ಧನಕ್ಷಯವನ್ನೂ, ರೋಗಬರುವದನ್ನೂ, ಜನಾಪವಾದವನ್ನೂ, ಶರೀರ ಶಿಥಿಲವಾಗುವದನ್ನೂ, ವೃದ್ಧರ ವಾಕ್ಯವನ್ನೂ, ವಿಧಿ ನಿಷೇಧ ಶಾಸ್ತ್ರಗಳನ್ನೂ, ಎಣಿಸದಿರುವಂತೆ ವಿಕಾರವನ್ನುಂಟುಮಾಡಿ ಕಂಡಕಂಡ ಸ್ಥಲಗಳಲ್ಲಿ ಕೆಡಹುವ ಯೌವನಕ್ಕಿಂತಲೂ ಕೆಟ್ಟದ್ದು ಮತ್ತೊಂದೂ ಕಾಣುವದಿಲ್ಲ. ರಜೋದೋಷದಿಂ ಕಂಗೆಡಿಸುವ ಯೌವ್ವನವೆಂಬ ಗಾಳಿಯು ತರಗೆಲೆಯಂತೆ ಪುರುಷನಂ ಹಾರಾಡಿಸುತ್ತಾ ಹಳ್ಳಗಳಲ್ಲಿಯೇ ಕೆಡವುವದು. ಶರೀರವೆಂಬ ಮರುಭೂಮಿಯಲ್ಲಿರುವ ಯೌವನವೆಂಬ ಬಿಸಲು ದೊರೆಯಂ ನೋಡುವ ಮನೋಮೃಗಗಳು ಸಂಕಲ್ಪಾನುಸಾರವಾಗಿ ಓಡುತ್ತಾ, ಇಂದ್ರಿಯಗಳೆಂಬ ಮರಿಗಳೊಡನೆ ವಿಷಯಗಳೆಂಬ ಹಳ್ಳಗಳಲ್ಲಿ ಬೀಳುವವು. ಶರೀರವೆಂಬ ರಾತ್ರಿಗೆ ಬೆಳದಿಂಗಳಾಗಿ, ಮನವೆಂಬ * ಕೇಸರಿಗೆ ಕೇಸರವಾಗಿ, ಜೀವನವೆಂಬ ನದಿಗೆ ಪ್ರವಾಹವಾಗಿ, ಇಂದ್ರಿಯಗಳೆಂಬ ಚಕೋರಗಳಿಗೆ ಚಂದ್ರಮಂಡಲವಾಗಿ, ಬುದ್ಧಿ ಬಲೋತ್ಸಾಹಗಳೆಂಬ ಪುಷ್ಪಗಳಿಗೆ ವಸಂತಕಾಲವಾಗಿ ಹೊಳೆಯುವ ಯೌವನವೇ ಧನ ಜ್ಞಾನಗಳ ಸಂಪಾದನೆಗೆ ಮುಖ್ಯ ಕಾಲವಾದ್ದರಿಂದ ವಿಚಾರದಿಂ ರಾಗದ್ವೇಷಪಿಶಾಚಗಳಿಗೆ ಅವಕಾಶವಂ ಕೊಡದೆ, ಶಾಸ್ತ್ರಾಭ್ಯಾಸಾದಿ ಸದ್ವ್ಯಾಪಾರಗಳಿಂದ, ಕಾಮಚಾಪಲ್ಯವಂ ಯಾರು ನಿಗ್ರಹಿಸುವರೋ ಅವರು ವೃದ್ಧಾಪ್ಯಕಾಲದಲ್ಲೂ ಆಗಲೂ ಸಹ ಸಂತುಷ್ಟರಾಗಿರುವರು. ಮನೋನಿಗ್ರಹವಿಲ್ಲದವರಿಗೆ ಪಶ್ಚಾತ್ತಾಪವೇ ಫಲವಲ್ಲದೆ ಮತ್ತೊಂದಿಲ್ಲ! ಈ ಯೌವ

* ಸಿಂಹ.

ನದಲ್ಲಿ ಅತ್ಯಂತ ಮುಖ್ಯವಾಗಿ ಮನೋಹರವಾದ ಕ್ರೀಡಾಸ್ಥಾನವೆಂದು ಪರಿಗ್ರಹಿಸಲ್ಪಟ್ಟಿರುವ ರಮಣಿಯ ಅಂಗದಲ್ಲಿ ಯಾವದು ರಮಣೀಯವಾದ್ದೋ ತಿಳಿಯಲಿಲ್ಲ. ಬಾಲ್ಯದಲ್ಲಿ ಅಚೇತನವಾದ ಬೊಂಬೆಯಂತೆ, ಯೌವ್ವನದಲ್ಲಿ ಸಚೇತನವಾದ ಈ ಚರ್ಮದ ಬೊಂಬೆಯು ವಿಹಾರಯೋಗ್ಯವಾಗಿರುವದು. ಆದರೆ ಬಾಲ್ಯದ ಬೊಂಬೆಯಲ್ಲಿ ಅಂಗಗಳಂ ಭೇದಿಸಿ ನೋಡಲು ಜುಗುಪ್ಸೆಗೆ ವಿಷಯವಾದ್ದು ಏನೂ ಇಲ್ಲ. ಯೌವ್ವನದ ಬೊಂಬೆಯಂ ನೋಡುವಲ್ಲಿಯೇ, ಜುಗುಪ್ಸಿತವಾದ ಮಲವು ಸಕಲಾಂಗಗಳಲ್ಲೂ ಕಾಣುವದಾದ್ದರಿಂದ, ಅವಿಚಾರರಮಣೀಯವಾದ ಚರ್ಮಮಾಂಸದಲ್ಲಿ ಅನುರಾಗವನ್ನುಂಟುಮಾಡುವ ಯೌವ್ವನಕ್ಕಿಂತಲೂ, ಜುಗುಪ್ಸಿತವಲ್ಲದ ಮರದ ಬೊಂಬೆಯಲ್ಲಿ ಅನುರಾಗವನ್ನುಂಟುಮಾಡುವ ಬಾಲ್ಯವು ಸರ್ವೋತ್ತಮವೆಂದು ತಿಳಿಯಬೇಕು. ಮಲಮೂತ್ರಗಳಲ್ಲಿ ಜುಗುಪ್ಸೆ ಇಲ್ಲದಿರುವದು ಬಾಲ್ಯ ಯೌವ್ವನಗಳೆರಡರಲ್ಲೂ ಸಮವಾದಾಗ್ಯೂ, ಬಾಲ್ಯದಲ್ಲಿ ಸ್ಪಷ್ಟವಾದ್ದರಿಂದಲೂ, ಯೌವನದಲ್ಲಿ ಗೂಢವಾಗಿರುವದ್ದರಿಂದಲೂ, ಲಜ್ಜಾಯುಕ್ತವಾದ ಯೌವ್ವನ ಉತ್ತಮವೆಂದು ಹೇಳುವರು. ಅದಂತಿರಲಿ ! ಬುದ್ಧಿವಂತರೆಂದು ಪ್ರಸಿದ್ಧರಾದ ಯೌವ್ವನಸ್ಥರು ಇತ್ತ ಕೇಶದ ಹಗರು, ಇತ್ತ ಕಣ್ಣಿನ ಜಿಬಿರು, ಇತ್ತ ಕಿವಿಯ ಗುಗ್ಗ, ಇತ್ತ ಮೂಗಿನ ಶಿಂಬಳ, ಇತ್ತ ಬಾಯಿನ ಜೊಲ್ಲು, ಇತ್ತ ಬೆವರು, ಇತ್ತ ಮಲಮೂತ್ರಗಳೆಂತಲೂ; ಚರ್ಮ, ಮಾಂಸ, ರಕ್ತ, ಮೇದೋ, ಮಜ್ಜಾ, ಸ್ನಾಯು, ಅಸ್ಥಿ ರೇತಸ್ಸುಗಳಿಂದಲೇ ಸಕಲಾಂಗಗಳು ತುಂಬಿರುವವೆಂತಲೂ ತಿಳಿದಿದ್ದಾಗ್ಯೂ, ಚಂದ್ರ ಮೊದಲಾದ ಆಯಾಯ ದಿವ್ಯಪದಾರ್ಥಗಳ ದೃಷ್ಟಾಂತದಿಂದ, ಅಂಗಗಳಂ ಬಗೆಬಗೆಯಾಗಿ ಬಣ್ಣಿಸುತ್ತಾ ಏನುಕಾರಣ ತರುಣಿಯರಂ ಹೊಂದುವರೋ ತಿಳಿಯುವದಿಲ್ಲ; ವಸ್ತ್ರಲೇಪನಾದಿಗಳಿಂದ ಪ್ರಾಣಿಗಳ ಯಾವ ಯಾವ ಅಂಗಗಳು ಪುನಃಪುನಃ ಶೋಭಿತವಾಗಿದ್ದವೊ, ಆ ಅಂಗಗಳು ನಾಯಿ, ನರಿ, ಕಾಗೆ, ಹದ್ದುಗಳಪಾಲಾಗಿ ಹೋಗುವವು. ಮೇರುವಿನ ಶೃಂಗದಲ್ಲಿ ಗಂಗೆಯಂತೆ ಯಾವ ಸ್ತನಾಗ್ರದಲ್ಲಿ ಮುತ್ತಿನ ಸರ ಮೆಸದುದೊ ಅದೇ ಸ್ತನವು ಕೊನೆಗಾಲದಲ್ಲಿ ಪಿಂಡದಂತೆ ನಾಯಿಗಳಿಂದ ತಿನ್ನಲ್ಪಡುವದು. ಕತ್ತೆಯ ದೇಹದಂತೆಯೇ ಈ ದೇಹವು ರಕ್ತಮಾಂಸಾಸ್ಥಿಮಯವಾಗಿರುವಲ್ಲಿ ಅದು ನಿಷಿದ್ಧವೆಂತಲೂ ಇದು ರಮಣೀಯವೆಂತಲೂ ಹೇಳುವದಕ್ಕೆ ಅಜ್ಞಾನವೇ ಕಾರಣವಲ್ಲದೆ ಮತ್ತೊಂದಲ್ಲ, ದರ್ಶನಮಾತ್ರದಿಂದಲೇ ಮದವನ್ನುಂಟುಮಾಡುವದ್ದರಿಂದ ಮದ್ಯಕ್ಕಿಂತಲೂ, ಅಧಿಕರಾದ ಸುಂದರಿಯರಲ್ಲಾಸಕ್ತರಾದ ಪುರುಷರು, ಹುಚ್ಚುಹಿಡಿದ ಆನೆಗಳಂತೆ ಶಾಂತಿಕರವಾದ

ವಿವೇಕ ವಚನಗಳೆಂಬ ಅಂಕುಶಗಳನ್ನೆಣಿಸದೆ ಮೆರೆಯುತ್ತಿರುವದು. ಮದವನ್ನುಂಟುಮಾಡುವವರಲ್ಲಿ ಮದ್ಯವೂ ಸ್ತ್ರೀಯೂ ಸಹ ಸಮವಾದಾಗ್ಯೂ; ಮದ್ಯದಮದವು ಸ್ವಲ್ಪ ಕಾಲದಲ್ಲಿಯೇ ಇಳಿಯುವದ್ದರಿಂದ ಮದ್ಯಕ್ಕಿಂತಲೂ ಸ್ತ್ರೀಯುರು ಅಧಿಕರೆಂದು ತಿಳಿಯಬೇಕು. ಧನಧಾನ್ಯ, ವಸ್ತ್ರಾಭರಣ, ಗಂಧ, ಮಾಲಿಕೆ ಮೊದಲಾದ ಸಮಸ್ತ ಭೋಗ ದ್ರವ್ಯಗಳೂ, ಸ್ತ್ರೀಭೋಗಕ್ಕೆ ಸಾಧನವಾದ್ದರಿಂದ ಸ್ತ್ರೀಯೇ ಸರ್ವಾಧಿಕಾರಳಾಗಿರುವಳು. ದುಷ್ಕೃತವೆಂಬ ಅಗ್ನಿಗೆ ಶಿಖೆಯಾಗಿ ನರಕವೆಂಬ ಅಗ್ನಿಗೆ ಕಾಷ್ಠವಾಗಿ, ದುಃಖವೆಂಬ ಅಗ್ನಿಗೆ ಕಿಡಿಯಾಗಿರುವ ನಾರಿಯು, ಅಗ್ನಿಮಯವಾದ ಪ್ರತಿಮೆಯಾದ್ದರಿಂದ ದರ್ಶನ ಸ್ಪರ್ಶಾದಿ ಸಮಸ್ತ ವ್ಯಾಪಾರಗಳಲ್ಲೂ, ಸಂತಾಪಕರಳಾದ ಈ ನಾರಿಯಿಂದ ಪುರುಷನು ನಿಸ್ಸಾರನಾಗುವನು. ಇವಳಿಗೆ ಸುಂದರಿ ಎಂದು ಹೆಸರು ಎಂತು ಬಂದಿರುವದೋ ತಿಳಿಯಕೂಡದು. ಇಂದ್ರಿಯಗಳೆಂಬ ಭ್ರಮರಗಳಿಗೆ ಪುಷ್ಪಮಂಜರಿಗಳಾಗಿ, ಮನವೆಂಬ ಮದ್ದಾನೆಗೆ ಬಂಧನಸ್ತಂಭಗಳಾಗಿ ಶುಕ್ಲಪಕ್ಷದ ರಾತ್ರಿಗಳಂತೆ, ಚಂದ್ರವದನೆಯರಾಗಿ, ವಿಷಲತೆಗಳಂತೆ ಮೋಹಪ್ರದರಾಗಿ, ವಿಚಿತ್ರವಾದ ನಾಟ್ಯವಿಲಾಸಗಳಿಗೆ ನರ್ತನಶಾಲೆಗಳಾಗಿ, ದೋಷಗಳೆಂಬ ರತ್ನಗಳಿಗೆ ಪೆಟ್ಟಿಗೆಗಳಾಗಿ, ಸಂಸಾರ ದುಃಖಗಳಿಗೆ ಉತ್ಪತ್ತಿ ಭೂಮಿಗಳಾಗಿ, ನಾನಾ ರೂಪದಿಂ ಮೆರೆಯುವ ಈ ಸುಂದರಿಯರು ಪ್ರಾಣಗಳೆಂಬ ಪಕ್ಷಿಗಳಂ ಹಿಡಿಯುಲೋಸುಗ ಕಾಮನೆಂಬ ಕಿರಾತನಿಂದ ಬೀಸಲ್ಪಟ್ಟ ಬಲೆಗಳಂತೆ ಕಾಣುತ್ತಿರುವರು. ಶೃಂಗಾರಾದಿ ರಸಗಳಿಗೆ ಸ್ಥಾನವಾದ ಈ ಸ್ತ್ರೀಯೆ ಭೋಗಸ್ಥಾನವಾದ್ದರಿಂದ ಇವಳಂ ಪರಿಗ್ರಹಿಸುವನಿಗೆ ಭೋಗೇಚ್ಛೆಯುಂಟಾಗಿ, ಜಗತ್ತಿನ ವ್ಯಾಪಾರಗಳೆಲ್ಲವೂ ಬೇಕಾಗುವವು ; ಆದ್ದರಿಂದ ಇವಳಂ ಬಿಟ್ಟವನಿಗೆ ಜಗದ್ಭ್ರಾಂತಿಯು ತಪ್ಪುವದು. ಇವಳು ದೈವಕೃಪೆಯಿಂದ ತನ್ನ ನೆರಳಿಗೆ ತಾನಂಜಿಕೊಳ್ಳುತ್ತ ಮನೆಯಲ್ಲಿತಗಿದ್ದರೆ ಇವಳಂ ಪರಿಗ್ರಹಿಸಿದ ಪುರುಷನು ಗೃಹಸ್ಥನೆನಿಸಿಕೊಳ್ಳುವನು, ಹಾಗಿಲ್ಲದಿರೆ ಇವಳಿಗಿಂತಲೂ ಮೃತ್ಯುವು ಬ್ಯಾರೆ ಇಲ್ಲವೆಂದು ತಿಳಿಯತಕ್ಕದ್ದು. ಹ್ಯಾಗೆ ಹ್ಯಾಗೆ ನೋಡಿದರೂ ಅಸ್ಥಿಪಂಜರವಾದ ಶರೀರದಲ್ಲಿ ಯಾವದೂ ಮನೋಹರವಾಗಿ ಕಾಣುವದಿಲ್ಲವಾದ್ದರಿಂದಲೂ, ಜರಾಮೃತ್ಯು ರೋಗಾದಿಗಳ ಭಯದಿಂದಲೂ, ಭೋಗಸ್ಥಾನವಾದ ಸ್ತ್ರೀಯಲ್ಲಿ ಮನವನ್ನಿಡದೆ ಶಾಂತನಾಗಿರಬೇಕೆಂದು, ಅಪೇಕ್ಷಿಸುತಲಿದ್ದೇನೆ.

ಎಲೈ ಮುನಿಶ್ರೇಷ್ಠನೇ ! ಬಾಲ್ಯವು ನಡೆಯುತ್ತಿರುವಲ್ಲಿಯೇ ಅದನ್ನು ಯೌವನವಾಕ್ರಮಿಸುವದು. ಅದು ಪ್ರಕಾಶಿಸುತ್ತಿರುವಲ್ಲಿಯೇ ವೃದ್ಧಾಪ್ಯವ

ನ್ನಾಕ್ರಮಿಸುವದು, ಶರೀರಾವಸ್ಥೆಗಳಿಗೂ ಕೂಡ ಈಪ್ರಕಾರ ಸ್ಪರ್ಧೆ ಇರು ವಲ್ಲಿ ಹೇಳತಕ್ಕದ್ದೇನು, ಬೆಕ್ಕು ಇಲಿಯಂ ಹಿಡಿವಂತೆ ಯೌವ್ವನವನ್ನಾಕ್ರಮಿಸಿ ಶರೀರದ ಸಾರವಂ ಕುಡಿಯುತ್ತಾ ಶ್ವಾಸಶ್ವಾಸ ಅಧೋವಾಯುಗಳೆಂಬ ಮೃದು ಗಧ್ವನಿಗೆ ಸರಿಯಾಗಿ ಕುಣಿಯುವ ಜರೆಯೆಂಬ ನಟಿಯು ಶಿರವಂ ನಡುಗಿಸು ತಲೂ, ಕೈಯ್ಯಂ ಕುಣಿಸುತಲೂ, ದಂಡದೊಡನೆ ಮೂರು ಕಾಲುಗಳಿಂದ ಮೆಲ್ಲಮೆಲ್ಲನೆ ತಾಳವಂ ಹಾಕುತಲೂ, ಮದ್ಯಪಾನದಿಂ ಮದಸಿರುವಳಂತೆ ಅರಳು ಮರಳು ಮಾತುಗಳನ್ನಾಡುತ್ತಲೂ, ಹಣೆಯಲ್ಲಿ ಕೈಯ್ಯಿಟ್ಟುಕೊಂಡು ನೋಡು ತ್ತಲೂ, ಬೆನ್ನಂ ಬಗ್ಗಿಸುತ್ತಲೂ, ವಿಚಿತ್ರವಾದ ನರ್ತನ ಮಾಡುತ್ತಿರಲಾಗಿ, ಸ್ತ್ರೀಬಾಲರು ಮೊದಲಾಗಿ ಸರ್ವರೂ ನಗುತ್ತಿರುವರು. ನರೆಗೂದಲುಗಳಿಂದ ಮೃತ್ಯು ಮಹಾರಾಜನು ಪ್ರಾಣಿಯಂ ಕರತರಲೋಸುಗ ಕಳುಹಿದ ಚಾಮರ ಧಾರಿಣಿಯಂತೆ ತೋರುತ್ತಿರುವ ಈ ಜರೆಯು ಬಂದಕೂಡಲೆ, ಶರೀರವೆಲ್ಲವೂ ಶಿಥಿಲವಾಗುವದು. ರೋಗಗಳೆಲ್ಲವು ಪ್ರಕಾಶಿಸುವವು, ತೈಲವಿಲ್ಲದ್ದರಿಂ ಹೋ ಗುವ ದೀಪದಂತೆ, ಕಾರ್ಯಸಾಧಕವಾಗದ ಆಹಾರ ವಿಹಾರ ಚಾಪಲ್ಯವು ಪ್ರಕಾ ಶಿಸುವದು, ಈ ಜರೆ ಹುಟ್ಟುವದಕ್ಕೆ ಪೂರ್ವದಲ್ಲಿಯೇ ದೂರದೃಷ್ಟಿಯು ಉಪ ನೇತ್ರಪ್ರಾಪ್ತಿಯು ಸಹ ಉಂಟಾಗುವದ್ದರಿಂದ, ಜರೆಯುಳ್ಳ ಪುರುಷನು ಮಹಾ ತ್ಮನಂತೆ ದೊಡ್ಡವನೆನಿಸಿಕೊಳ್ಳುವನು, ಪ್ರಜ್ಞಾಬಲ ತಪ್ಪುವದ್ದರಿಂದಲೂ, ಇಂದ್ರಿ ಯಗಳಿಗೆ ಶಕ್ತಿ ಕಡಮೆಯಾಗುವದ್ದರಿಂದಲೂ, ಸರ್ವಕಾರ್ಯ ಸಾಧಕವಾದ ಯೌವ್ವನದ ಕೊಬ್ಬಿನಲ್ಲಿ ಪರಲೋಕದ ದೃಷ್ಟಿಯೇ ಇಲ್ಲದ್ದರಿಂದಲೂ, ನಾನಾ ಪ್ರಕಾರವಾದ ಚಿಂತೆಗಳುಂಟಾಗುವವು. ಅದೆಂತೆಂದರೆ;—ಅಕಟಾ! ನಾನು ಸಕಲಸುಖಸಾಧನವಾದ ಶಕ್ತಿ ಇರುವಲ್ಲಿ ಯಾವ ಸತ್ಕರ್ಮಗಳನ್ನು ಮಾಡದೆ, ಯಾರ ಮಾತನ್ನೂ ಕೇಳದೆ, ಯಾವ ಶಾಸ್ತ್ರವನ್ನೂ ನೋಡದೆ, ಘಾತಪಾತಗ ಳನ್ನು ಚಿಂತಿಸದೆ, ದೊಡ್ಡವರು ಸಂಪಾದಿಸಿದ ಕೀರ್ತಿಯನ್ನು, ಮೂಲಧನ ವನ್ನೂ, ಮನೆಯನ್ನು, ದೇಹವನ್ನು, ಮನವನ್ನು ಇಂದ್ರಿಯಗಳನ್ನು ಕೂಡ ಪಾಳುಬೀದಿಗಳಲ್ಲಿ ಕೆಡಹಿ ಈ ಪಾಡಾದೆನು. ಹೊಟ್ಟೆಗೂ ಬಟ್ಟೆಗೂ ಕೂಡ ಕಷ್ಟಪಡುವ ಈ ಅವಸ್ಥೆಯಲ್ಲಿ ನಾನು ಮಾಡತಕ್ಕದ್ದೇನು, ಪಾಳಾದ ಊರಿ ಗಿಂತಲೂ, ವೃಷ್ಟಿಯಿಲ್ಲದ ದೇಶಕ್ಕಿಂತಲೂ, ಫಲಪರ್ಣ ಶಾಖೆಗಳಿಲ್ಲದ ಮರ ಕ್ಕಿಂತಲೂ, ಕಡೆಯಾದ ಈ ನನ್ನ ದೇಹವು ಈಗ ಅಂತರ್ದಾಹದಿಂದಲೇ ಭಸ್ಮ ವಾಗುವದೆಂದು ತೋರುತಲಿದೆ ; ಹೀಗಿರುವಲ್ಲಿ ನಾನು ಮಕ್ಕಳಿಗೆ ಪ್ರಸ್ತುತ ಗಳಂ ಮಾಡುವದು ಹ್ಯಾಗೆ ? ಮನೆಗೇನನ್ನ ಮೂಲಧನವಾಗಿರಿಸಲೆಂತಲೂ,

ಇದುವರಿಗೆ ನಾನು ಕೆಟ್ಟ ನಡತೆಗಳಲ್ಲಿದ್ದವರಿಂದ ಈ ಬಟ್ಟೆಯಾಗಿ ರೋಗಗಳಂ ಸಂಪಾದಿಸಿಕೊಂಡನಲ್ಲದೆ ಮತ್ತೊಂದಿಲ್ಲ. ನನಿಗೆ ಯಾವ ನರಕ ಬರುವದೋ ಯಾವ ಯಾತನೆಗಳಂ ನಾನನುಭವಿಸಬೇಕೋ ಯೆಂತಲೂ, ಕೃಷ್ಣಪಕ್ಷದಲ್ಲಿ ಸಾಯಂಕಾಲದ ಸಂಧ್ಯಾರಾಗವಂ ನೋಡಿದ ತಮಸ್ಸಿನಂತೆ, ನರೆಗೂದಲುಗಳಂ ನೋಡಿದ ಮೃತ್ಯುವು, ಅತಿ ಸಂತೋಷದಿಂದೋಡಿಬರುವದಾದ್ದರಿಂದ, ಈಗ ಲಾದರೂ ಪರಮೇಶ್ವರನ ನಾಮಕೀರ್ತನೆಗಳಂ ಕೃತಾರ್ಥನಾಗಬೇಕೆಂತಲೂ; ದುರ್ಮಾರ್ಗದಿಂದೌರ್ಭಾಗ್ಯ, ದೌರ್ಜನ್ಯ, ದಾರಿದ್ರ್ಯ, ದುರ್ವ್ಯಾಧಿಗಳಂ ಸಂಪಾದಿ ಸಿಕ್ಕೊಂಡಿರುವ ನಾನು ಈಗ ಯಾರಿಗೇನು ಕೊಡಲಿ? ಒಂದು ದಾರವನ್ನಾದರೂ ಕೊಡುವದಕ್ಕೆ ನನಿಗೆ ಗತಿಯಿಲ್ಲದೆ ಹೋಯಿತೆಂತಲೂ, ವ್ಯರ್ಥವಾಗಿ ಈ ಮನುಷ್ಯ ಜನ್ಮವಂ ಹಾಳುಮಾಡಿಕೊಂಡೆನಲ್ಲವೆ ? ಮುಂದೆ ನನಿಗೆ ಯಾವಜನ್ಮ ಬರುವದೋ ಎಂತಲೂ, ಬಗೆಬಗೆಯಾದ ಚಿಂತೆಗಳುಂಟಾಗುವಲ್ಲಿ ತಾನು ಮಾಡಿದ ಪಾಪಗಳಂ ನೆನೆಯುತ್ತಲೂ, ಕಣ್ಣೀರುಗಳಿಂದ ಉಟ್ಟ ಬಟ್ಟೆಯಂ ನೆನೆಸುತ್ತಲೂ, ಹಾ ಮಹಾದೇವ ! ನನಿಗೆ ಇಂಥಾ ಬುದ್ಧಿಯಂ ನೀನು ಯಾಕೆ ಕೊಟ್ಟೆ ಎಂದು ಕೂಗುತ್ತಲೂ, ಏನಾದರೂ ಆಗಲಿ, ಈ ಪದಾರ್ಥವನ್ನಾನು ಮಾಡಿಸಿಕ್ಕೊಂಡು ತಿನ್ನುವೆನು. ಈ ವಸ್ತ್ರವಂ ನಾನು ಕೊಂಡು ಹೊದಿಯುವೆನ್ನು, ಜಾತಿ ಕೆಟ್ಟರೂ ಕೆಡಲಿ, ಇವಳ ಬಳಿಯಲ್ಲೊಂದು ಕ್ಷಣ ಕುಳಿತಿದ್ದು ಬರುವೆನೆಂದು ಚಪಲಪಡುತ್ತಲೂ ಎದ್ದು ಕೂಡುವವಕ್ಕೆ ಯೋಗ್ಯತೆಯಿಲ್ಲದ್ದರಿಂದ ತನಿಗೆ ಯಾರೂ ಉಪಚಾರವಂ ಮಾಡುವದಿಲ್ಲವೆಂದು ಜನಗಳೆಲ್ಲವನ್ನು ಶಪಿಸುತ್ತಲೂ, ದಂತವಿಲ್ಲದ್ದರಿಂ ಕಟ್ಟಿಲ್ಲದಂತಿರುವ ನಾಲಿಗೆಯನ್ನಲ್ಲಾಡಿಸುತ್ತಲೂ, ನಾನಾದುಃಖಗಳನ್ನನುಭವಿಸುವನು. ಆಧಿವ್ಯಾಧಿ ಅಶಕ್ತಿ ಚಿಂತಾ ಪರಿವಾರಕ್ಕೆ ವಿಲಾಸಗೃಹವಾದ ವೃದ್ಧಭಾವಕ್ಕಿಂತಲೂ ದುಃಖಪಡುವದಕ್ಕೆ ಯೋಗ್ಯವಾದ್ದು, ಮತ್ತೊಂದೂ ಕಾಣುವದಿಲ್ಲ, ಸಂಪಾದನೆಯ ಕಾಲದಲ್ಲಿ ಚಾಕರರಿಗಿಂತಲೂ, ಅಧಿಕವಾಗಿ ಸೇವಿಸುತಿದ್ದ ಪತ್ನೀಪುತ್ರಾದಿಗಳೂ ಜರೆ ಎಂಬ ಅಕಾಲಮೃತ್ಯುವಿನಿಂದ ಕಾಲ ಬಲ ತಪ್ಪಿರುವಲ್ಲಿ ತೃಣಕ್ಕಿಂತಲೂ ಕಡೆಯಾಗಿ ಎಣಿಸುವರು. ಆದ್ದರಿಂದ ಇದಕ್ಕಿಂತಲೂ ಶತ್ರುವಾದ್ದು ಮತ್ತೊಂದಿಲ್ಲವೆಂದು ತಿಳಿಯುತ್ತೇನೆ.

ಎಲೈ ತಪೋನಿಧಿಯೆ ! ಇಂಥಾ ದುರವಸ್ಥೆಗಳಲ್ಲಿ ಭೋಗಿಸುವನು, ನಾನು ಇವು ಭೋಗಸಾಧನಗಳು, ಇವು ಭೋಗ್ಯವಸ್ತುಗಳು, ಇದಂ ನಾನು ಭೋಗಿಸಿದೆನು, ಇದಂ ಮುಂದಕ್ಕೆ ಭೋಗಿಸುವೆನೆಂದು ಮನಸ್ಸಿನ ಕಲ್ಪನಾ ವಿಶೇಷಗಳಿಂದ ಮರುಭೂಮಿಯಲ್ಲಿ ಪ್ರವಾಹದಂತೆ ಈ ಸಂಸಾರದಲ್ಲಿ ಸುಖತೋರುವದು.

ಕನ್ನಡಿಯಲ್ಲಿ ಕಾಣುವ ಫಲವನ್ನಪೇಕ್ಷಿಸುವರು, ಬಾಲಕರಲ್ಲದೆ ದೊಡ್ಡವರಲ್ಲವಾದ್ದರಿಂದ ತಿಳಿದವರು ಇದರಲ್ಲಿ ಆಶೆಪಡರು. ಈ ಸಂಸಾರ ಸುಖವಂ ಬಯಸುವ ದೇಹಾತ್ಮದಾದಿಯ ಅಶೆಯನ್ನು ಸೂತ್ರವನ್ನಿಲಿಯಂತೆ ಕಾಲಪುರುಷನು ಕತ್ತರಿಸುವನು. ಸಮುದ್ರವಂ ಬಡಬಾಗ್ನಿಯಂತೆ, ದೃಶ್ಯವಾದ ಪ್ರಪಂಚದ ಸಾರವಂ ಹೀರುವ ಕಾಲನಿಗೆ ಯಾವದು ಅಸಾಧ್ಯವಾಗಿರುವದು ! ಶುಭಕರವೆಂತಲೂ, ಮನೋಹರವೆಂತಲೂ, ದೊಡ್ಡದೆಂತಲೂ ಯಾವದನ್ನೂ ನೋಡದೆ ಅಗ್ನಿಯಂತೆ ಸರ್ವವನ್ನೂ ಭಕ್ಷಿಸುವ ಈ ಕಾಲನು ಪ್ರಪಂಚವೆಲ್ಲವನ್ನೂ ನುಂಗಿರುವದ್ದರಿಂದ ವಿಶ್ವಾತ್ಮಕನೆನಿಸಿಕೊಳ್ಳುವನೆಂದು ತೋರುತಲಿದೆ. ಘಳಿಗೆ,ದಿವಸ,ಮಾಸ, ವರ್ಷ, ಯುಗ ಮನ್ವಂತರಾದಿಯಾದ ರೂಪಗಳಿಂ ಪ್ರಕಾಶಿಸುವ ಈ ಕಾಲನು ದಾಳಿಂಬದ ಬೀಜಗಳಿಂ ಶುಕದಂತೆ ಬ್ರಹ್ಮಸೃಷ್ಟವಾದ ಪ್ರಾಣಿಗಳನ್ನುಂಗುವಲ್ಲಿ "ಕುಂಬಾರನಿಗೆ ವರ್ಷ ದೊಣ್ಣೆಗೆ ನಿಮಿಷನೆಂಬ"ಲೋಕಗಾಥೆಯು ಸರಿಯಾಗುವದು. ಶುಭಾಶುಭ ಕರ್ಮಗಳೆಂಬ ದಂತಗಳಿಂದೆಸೆವ ಈ ಕಾಲನೆಂಬ ಮದ್ದಾನೆಯು ಬ್ರಹ್ಮನೇ ಮೂಲವಾಗಿ ಪುಟ್ಟಿರುವ ಬ್ರಹ್ಮಾಂಡಗಳೆಂಬ ಕಮಲಗಳಲ್ಲಿ ಆಡುತ್ತಿರುವದು. ಚಿತ್ರಗಾರನಂತೆ ರಾತ್ರಿಗಳೆಂಬ ಭ್ರಮರಗಳಿಂ ಕೂಡಿದ ದಿವಸಗಳೆಂಬ ಪುಷ್ಪಗುಚ್ಛಗಳಂ ರಚಿಸುವ ಈ ಕಾಲನು ಎಂದಿಗೂ ತೃಪ್ತನಾಗುವದಿಲ್ಲ. ನಿಮಿಷಮಾತ್ರದಿಂದನೇಕ ವಸ್ತುಗಳಂ ಪುಟ್ಟಿಸಿ ಹಾಳುಮಾಡುವ ಈ ಕಾಲನು ಮನೋರಾಜ್ಯವನ್ನಾಳುವ ದರಿದ್ರನಂತೆ ಭೋಗಪಡುತ್ತಿರುವನು. ಕಾಲನೆಂಬ ಈ ಬಾಲಕನ ಸೂರ್ಯಚಂದ್ರಮಂಡಲಗಳೆಂಬ ಚಂಡುಗಳಿಂದಲೂ, ನಕ್ಷತ್ರಗಳೆಂಬ ಗೋಲಿಗಳಿಂದಲೂ, ಆಡುತ್ತಾ, ಮಹೇಂದ್ರರನ್ನು ತೃಣವಾಗಿಯೂ, ಭೂಮಿಗಳನ್ನು ಜೀರ್ಣಪರ್ಣವಾಗಿಯೂ, ಮೇರುಪರ್ವತಗಳನ್ನು ರೇಣುಕಣವಾಗಿಯೂ, ಸಮುದ್ರಗಳನ್ನು ಜಲಕಣವಾಗಿಯೂ, ಎಣಿಸುತ್ತಿರುವನು. ಕಲ್ಪಾಂತದಲ್ಲಿ ಇವನ ವೇಗದಿಂದ ಕುಲಗಿರಿಗಳು ಭುಜಪತ್ರಿಯ ಚೂರುಗಳಂತೆ ಹಾರಾಡುತ್ತಿರುವವು. ಬ್ರಹ್ಮ, ವಿಷ್ಣು, ರುದ್ರಾದಿ ರೂಪಗಳಿಂದಾಡುತ್ತಿರುವ ಈ ಕಾಲನ ಮಹಿಮೆಯಲ್ಲಿ ಸಮುದ್ರದಲ್ಲಿ ತೆರೆಗಳಂತೆ ಸೃಷ್ಟಿಸ್ಥಿತಿ ಸಂಹಾರ ಲೀಲೆಗಳು ಕಾಣುತ್ತಿರುವವು. ಈ ಕಾಲವೆಂಬ ಅತ್ತೀಮರದಲ್ಲಿ ಪ್ರಾಣಿಗಳೆಂಬ ಸೊಳ್ಳೆಗಳಿಂದ ತುಂಬಿರುವ ಬ್ರಹ್ಮಾಂಡಗಳೆಂಬ ಕಾಯಿಗಳು ಜೋಲಾಡುತ್ತಿರುವವು. ಕ್ರಿಯಾಶಕ್ತಿ ಸಹಾಯಕನಾದ ಈ ಕಾಲಪುರುಷನು ಸೂರ್ಯಚಂದ್ರರೆಂಬ ದೀಪಗಳಂ ಹಚ್ಚಿಕೊಂಡು ಗ್ರಾಸಯೋಗ್ಯವಾದ ಪದಾರ್ಥವು ಎಲ್ಲಿ ಏನು ಇಹೆಯೋ ಎಂದು ಕ್ರಮವಾಗಿ ಸಮಸ್ತವನ್ನು ಭಕ್ಷಿಸುತ್ತಿದ್ದಾಗ್ಯೂ

ನಿರಹಂಕಾರನಾದ್ದರಿಂದ ಯಾವದೋಷದ ಸಂಬಂಧವು ಇಲ್ಲದೆ ನಿತ್ಯಾನಂದನಾಗಿರುವನು. ಉನ್ಮತ್ತನಾದ ಪಾಚಕನಂತೆ ತಾನುಭಕ್ಷಗಳಂತೆ ಮಾಡಿಕೊಂಡ ಸರ್ವ ಪ್ರಾಣಿಗಳನ್ನು ಶುಭಾಶುಭ ಕರ್ಮಗಳೆಂಬ ಸೂತ್ರಗಳಿಂದ ಕಟ್ಟಿ ಆಭರಣವಾಗಿ ವಹಿಸಿಕೊಂಡು ಯಥೇಚ್ಛವಾಗಿ ತಿನ್ನುತ್ತಾ ಉದಯಾಸ್ತಗಳಿಲ್ಲದವನಾದಾಗ್ಯೂ ಉದಯಾಸ್ತಸ್ಥಿತಿರೂಪದಿಂ ಗೋಚರನಾಗುತ್ತಾ ಕ್ರಿಯಾಶಕ್ತಿಯೊಡನೆ ಕುಣಿಯುತ್ತಿರುವನು. ಸ್ವಛಂದಕಾರಿಯಾದ ಚಿತ್ರಕಾರನಂತೆ ಸಮಸ್ತ ವಸ್ತುಗಳನ್ನು ನಿಮಿಷಕ್ಕೊಂದು ರೀತಿಯಾಗಿ ಮಾಡುವಂಥಾ ವಿಚಿತ್ರರೀತಿಯಾದ ಈ ಕಾಲನ ವಿಲಾಸದಲ್ಲಿ ಒಳ್ಳೇದೆಂತಲೂ, ಕೆಟ್ಟದ್ದೆಂತಲೂ, ಕೆಲವುದಿನವಿರತಕ್ಕದ್ದೆಂತಲೂ, ಈಗಿಲೇ ಹೋಗತಕ್ಕದ್ದೆಂತಲೂ, ಯಾವದನ್ನು ನಂಬಬಹುದು! ಈ ಕಾಲನೆಂಬ ರಾಜಕುಮಾರನು ನೃಸಿಂಹನನ್ನು ಹೃದಯರತ್ನವಾಗಿಯೂ, ಕಾಲರುದ್ರನನ್ನು ಲೀಲಾಶುಕವಾಗಿಯೂ, ಭೂಮಂಡಲವನ್ನು ಪಾನಪಾತ್ರವಾಗಿಯೂ, ಬಡಬಾಗ್ನಿ ಎಂಬಕನಕ ಕಮಲದಿಂ ಪ್ರಕಾಶಿಸುವ ಸಮುದ್ರವನ್ನು ಕ್ರೀಡಾಸರೋವರವಾಗಿಯೂ, ಮಾಡಿಕೊಂಡು ಸಂಹಾರ ಶಕ್ತಿಮಯವಾದ ಧನುರ್ಬಾಣಗಳು ಧರಿಸಿಚಂಡಿ ಎಂಬ ಪ್ರಾಣಕಾಂತೆಯೊಡನೆ ವಿನೋದವಾಡುತ್ತಾ ಪ್ರಪಂಚವೆಂಬ ಮಹಾರಣ್ಯದಲ್ಲಿ ಬೇಟೆಯಾಡುತ್ತಿರುವನು. ಈ ಮಹಾಕಾಲನೆ ಘಟಿಕಾಮುಹೂರ್ತಾದಿರೂಪದಿಂ ಕಾಲನೆಂತಲೂ, ಶುಭಾಶುಭ ಕರ್ಮರೂಪದಿಂ ದೈವವೆಂತಲೂ,ಪೇಳಲ್ಪಡುವನು. ಜನ್ಮಾಂತರ ಕರ್ಮರೂಪವಾದ ದೈವದಲ್ಲಿ ಈ ಕರ್ಮಕ್ಕೆ ಈಪ್ರಕಾರ ಫಲವಾಗತಕ್ಕದ್ದೆಂಬ ಪರಮೇಶ್ವರಕ್ಲುಪ್ತಿಯೇ ನಿಯತಿಯನಿಸಿಕೊಳ್ಳುವದು. ಫಲದಾನೋದ್ಯತವಾದ ಕರ್ಮಪರಿಪಾಕವೇ ಕೃತಾಂತನೆಂದು ಪೇಳಲ್ಪಡುವದು. ಕೃತಾಂತನಿಗೆ ಅತಿಪ್ರಿಯಳಾಗಿ ತ್ರಿಲೋಕವ್ಯಾಪಿನಿಯಾವ ಈ ನಿಯತಿಯು ಶಿವನಂತೆ ಆದಿಶೇಷನನ್ನೇ ಕಾಲ್ಕಡಗವಾಗಿಯೂ, ಚಂದ್ರಕಲೆಯನ್ನೇ ಶಿರೋಮಣಿಯಾಗಿಯೂ, ಧರಿಸಿ ನರ್ತನವಂ ಮಾಡುವ ಕೃತಾಂತನಿಗೆ ಸಹಚಾರಿಣಿಯಾಗಿ ನರಕಗಳಂ ಕಾಲಗೆಜ್ಜೆಯಾಗಿಯೂ, ನಕ್ಷತ್ರಮಾಲೆಯಂ ಕೇಶಭೂಷಣವಾಗಿಯೂ, ಚತುರ್ದಶಲೋಕಗಳನ್ನಾಭರಣವಾಗಿಯೂ, ಧರಿಸಿ ನಾಟ್ಯವಾಡುತ್ತಿರುವಳು. ಎಲೈ ಜ್ಞಾನನಿಧಿಯೇ,ಈಪ್ರಕಾರವಾದ ಸಂಸಾರಮಾರ್ಗದಲ್ಲಿ ಮಾರಲ್ಪಟ್ಟವರಂತೆ ನಾವು ಪರಾಧೀನರಾಗಿರುವೆವು. ಇಲ್ಲಿ ಕಾಲನು ತನ್ನ ಹೊಟ್ಟೆಯಂ ಹೊರಕೊಳ್ಳುವದರಲ್ಲಿಯೇ ನಿತ್ಯಾಸಕ್ತನಾದ ಪಾಪಿಯಂತೆ ದುರಾಚಾರಪರಾಯಣನಾಗಿ ಲೋಕಗಳನ್ನಾಪತ್ತೆಂಬ ಸಮುದ್ರದಲ್ಲಿ ಕೆಡವುತ್ತಾ ಬಡಬಾಗ್ನಿಯು ಜ್ವಾಲೆಗಳಿಂದ ದಹಿಸುವಂತೆ ದುರಾಶೆಗಳಿಂದ ಅಂತಸ್ಸಂತಾ

ಪವನ್ನುಂಟುಮಾಡುವನು. ಸ್ತ್ರೀಸ್ವಭಾವದಿಂದತಿ ಕಠಿನಳಾದ ನಿಯುತಿಯು ವೃದ್ಧನಾದ ಗಂಡನಿಗೆ ತಾಂಬೂಲವನ್ನರದುಕೊಡುವ ಮಾನಿನಿಯಂತೆ ಪ್ರಾಣಿಗಳಂ ಮರ್ದಿಸಿ ಪುರಾತನನಾದ ಕೃತಾಂತನೆಂಬ ನಾಯಕನಿಗೆ ಸಮರ್ಪಿಸುವಳು. ಕೃತಾಂತನಾದರೋ ನುಂಗುವದೆಂಬ ಒಂದು ವ್ಯಾಪಾರವನ್ನೇ ಬಲ್ಲವನಾದ್ದರಿಂದ ಜನಗಳ ಕಷ್ಟ ಸುಖ ಸಮಯವಂ ನೋಡುವನಲ್ಲ. ಸರ್ವಭೂತಗಳಲ್ಲಿಯೂ ದಯಾಶಾಲಿಯಾದ ಪುರುಷನು ದುರ್ಲಭವಾಗಿರುವನು. ಸಮಸ್ತ ಪ್ರಾಣಿಗಳು ತುಚ್ಛವಾದ ಸೌಖ್ಯವಂ ನೋಡುವರಲ್ಲದೆ ಅಖಂಡೈಶ್ವರ್ಯವಂ ನೋಡುವದಿಲ್ಲ. ಭೋಗಸ್ಥಾನವಾದ ವಿಷಯಗಳು ದುಃಖಮಯವಾದ್ದರಿಂದ ಭಯಂಕರವಾಗಿರುವವು. ಆಯುಸ್ಸಿಗಿಂತಲೂ ಕ್ಷಣಿಕವಾದ ಪದಾರ್ಥವು ಮತ್ತೊಂದಿಲ್ಲ. ಮೃತ್ಯುವಾದರೋ ಕರುಣಾರಸದ ಗಂಧವನ್ನೇ ಅರಿಯದು. ಅತಿಚಾಪಲ್ಯದಿಂದರಳು ಮರುಳಾಗಿ ಮಾತನಾಡುವ ವೃದ್ಧಾಪ್ಯಕ್ಕೆ ಸ್ಥಿತಿಯ ಯೋಗ್ಯತೆ ಹ್ಯಾಗೆ ಬಂದೀತು? ತಾರುಣ್ಯವು ಮಿಂಚುಬಳ್ಳಿಗಳಂತೆಸೆವ ಚಂಚಲಾಕ್ಷಿಯರ ಸಹವಾಸದಿಂದತಿಚಂಚಲವಾಗಿರುವದು. ಜಾಡ್ಯಗಳಿಗೆ ಆಶ್ರಯವಾದ ಬಾಲ್ಯವು ಮೂಢಭಾವದಿಂದಾಕ್ರಮಿಸಲ್ಪಟ್ಟಿರುವದು. ಲೋಕವೆಲ್ಲವು ಮನೋರಥಕಲ್ಪನೆಗಳಿಂದ ಮಲಿನವಾಗಿರುವದು. ಸಂಸಾರದಲ್ಲಿ ಬಂಧನರಜ್ಜುಗಳಂತೆ ಬಂಧುಗಳು ಕಾಣುತ್ತಿರುವರು. ಭೋಗಗಳಿಗೂ, ರೋಗಗಳಿಗೂ, ಭರವೆಂಬ ವರ್ಣಭೇದವಿರುವದಲ್ಲದೆ ಹೆಚ್ಚುಕಡಮೆ ಏನೂ ಇಲ್ಲವು. ಆಶೆಗಳು ಬಿಸಲು ದೊರೆಗಳಗಿಂತಲೂ ಅಧಿಕವಾಗಿ ಶೆಳೆಯುವವು, ಇಂದ್ರಿಯಗಳು ದುಷ್ಟವಾದ ವಿಷಯಗಳೆಂಬ ಹಳ್ಳಗಳಿಗೆ ಶೆಳೆಯುತ್ತಾ ರಥಿಕನಿಗೆ ದುಷ್ಟಾಶ್ವಗಳಂತೆ ಪುರುಷನಿಗೆ ಶತ್ರುಗಳಾಗಿರುವವು. ಸತ್ಯದ ಪ್ರಸ್ತಾಪವೂಕೂಡ ಅಸತ್ಯವಾಗಿ ಕಾಣುತ್ತಿರುವದು. ತೆರಳೆ ಹುಳವು ತೆನಗೆ ಸುತ್ತಲೂ ಗೂಡನ್ನು ಮಾಡಿಕೊಂಡು ಆ ಗೂಡಿನ ಬಾಯನ್ನು ಬಿಗಿದುಕೊಂಡು ಹೊರಹೊರಡಲಾರದೆ ಒಳಗೆ ದುಃಖಪಡುವಂತೆ ಆತ್ಮನುಸ್ವೇಚ್ಛೆಯಿಂ ಮಾಡಿಕೊಂಡ ಈ ಪರಿವಾರದಲ್ಲಿ ಸಿಕ್ಕಿ ಕಷ್ಟಪಡುತ್ತಿರುವನು. ಮನಸ್ಸಾದರೋ ಇಂದ್ರಿಯ ಮಾರ್ಗಗಳನ್ನನುಸರಿಸಿ ತನ್ನಿಂದತಾನೇಕೆಡುವದು. ಅಹಂಕಾರವೆಂಬುವದು ಉತ್ಪಾತದಂತೆ ಜನಗಳನಾಶಕ್ಕೋಸುಗವೆ ಪುಟ್ಟುವದು. ಬುದ್ಧಿಯು ದುರಾಲೋಚನೆಯಿಂದ ಸನ್ಮಾರ್ಗಕ್ಕೆ ದೂರವಾಗುವದು. ಕಾಯವಾಙ್ಮನಸ್ಸುಗಳ ರೀತಿಗಳು ಸೂಳೆಯರಂತೆ ದುಃಖಾಂತವಾದ ಸುಖವನ್ನೇ ತೋರಿಸುವವು. ವಿಷಯಸಮೂಹದಲ್ಲಿರುವ ಅಪೇಕ್ಷೆಗಳು ರಂಗಭೂಮಿಯಲ್ಲಿರುವ ನಟಿಯರಂತೆ ಅತಿಚಮತ್ಕಾರದಿಂ ಕುಣಿಯುತ್ತಿರುವವು. ನಾರಿಯರು ದುಷ್ಟ

ಸೇನೆಗಳಂತೆ ತಮ್ಮಂ ಪಿಡಿದವನನ್ನೇ ಕೆಡಿಸುವರು, ಬಿಸಲು ದೊರೆಯಂ ನೋಡಿ ನ್ಯೋಡುವ ಮೃಗಗಳಂತೆ ಅನುರಾಗಗಳು ವಿಷಯಾಭಿ ಮುಖವಾಗಿರುವವು. ತನ್ನ ನೆರಳಿನೊಡನೆ ಆಡುವ ಹುಡುಗನಂತೆ ಚಿತ್ತವು ಅಹಂಕಾರವಂ ಪಿಡಿದಿರುವದು. ಇರುವ ಪದಾರ್ಥಗಳೆಲ್ಲವೂ ನಾಶಗ್ರಸ್ತವಾಗಿರುವವು. ಸಮುದ್ರದಂತೆ ಸಂಸಾರಕ್ಕೆ ಪಾರವೇ ಕಾಣುವದಿಲ್ಲ. ದುಷ್ಪುತ್ರರಂ ಪೆತ್ತನಾರಿಯಂತೆ ಬುದ್ಧಿಯು ಸ್ವದೋಷಗಳಿಂ ದುಃಖ ಪಡುತ್ತಿರುವದು. ರಾಗದ ಪ್ರಾಬಲ್ಯದಿಂದ ವಿರಾಗವು ಓಡಿ ಪೋಯಿತು. ದೃಷ್ಟಿಯು ಧೂಳಿಯಿಂ ವ್ಯಥೆಪಡುವಂತೆ ರಜೋಗುಣದಿಂ ವ್ಯಾಕುಲವಾಗಿರುವದು. ತಮಸ್ಸಿನ ಆಧಿಕ್ಯದಿಂ ಸತ್ವದ ಪ್ರಕಾಶ ಪಡಗಿರುವದರಿಂದ ತತ್ವದ ಮಾರ್ಗವೇ ಗೋಚರವಾಗುವದಿಲ್ಲ. ಸ್ಥಿತಿಗೆ ಸ್ಥಿತಿಯಿಲ್ಲದ್ದರಿಂದ ಮೃತಿಯೇ ಎದುರಾಗಿರುವದು. ಧೈರ್ಯವು ಓಡಿ ಹೋದ್ದರಿಂದ ತುಚ್ಛ ವಿಷಯದಲ್ಲಿಯೇ ರತಿ ಯುಂಟಾಗುವದು. ಶರೀರವು ಬಾಲ್ಯದಿಂದಲೂ, ಅಭ್ಯಾಸವಾಗಿ ಬಂದು ಬೀಳುವ ರೀತಿಯನ್ನೇ ನೋಡುತ್ತಿರುವದು. ಮೋಹಾಕುಲವಾದ ಬುದ್ಧಿಯು ಧೂಮಾವೃತವಾದ ಅಗ್ನಿಜ್ವಾಲೆಯಂತಿರುವದು. ಜರೆಯಂಬುವದು ಜ್ವರದಂತೆ ಸಂತಾಪ ಪಡಿಸುವದು. ಕಾರುಣ್ಯವು ಕಾರುಣ್ಯಾಲೇಶವಿಲ್ಲದೆ ಪುರುಷರಿಂದ ಕೆಡಿಸಲ್ಪಡುವದು. ಅಸತ್ಯವೇ ಸತ್ಯವಾಗಿ ಕಾಣುವದಲ್ಲದೆ ಸತ್ಯದ ವಾರ್ತೆಯೇ ಕೇಳ್ಬರುವದಿಲ್ಲ. ಮನಸ್ಸಿನ ಮನನವು ನಶ್ವರ ಪದಾರ್ಥಗಳಲ್ಲಿ ನೆಲಸಿದ್ದರಿಂದ ಮೈತ್ರಿಯೆಂಬುವದು ಓಡಿಹೋಯಿತು. ತರುಣಿಯ ಋಣಾನುಬಂಧವೇ ತೀರಿತು. * ಮುದಿತೆಗೆ ಉದಯವೇ ಇಲ್ಲವು, ಉಪೇಕ್ಷೆಯು ಅಪೇಕ್ಷೆಯಾಗಿರುವದು. ಧೈರ್ಯಕ್ಕೆ ಅಧೈರ್ಯವುಂಟಾಗಿರುವದ್ದರಿಂದ ಜನಗಳು ಸ್ವರ್ಗ ನರಕಗಳಲ್ಲಿ ಹಾರಿಹಾರಿ ಬೀಳುತ್ತಿರುವರು. ದುರ್ಜನರ ಪ್ರಾಚುರ್ಯದಿಂದ ಸಜ್ಜನರ ಸಂಗತಿಯೇ ದುರ್ಲಭವಾಯಿತು. ಪದಾರ್ಥಗಳೆಲ್ಲವು ಬಂದುಹೋಗತಕ್ಕಂಥಾವಾದ್ದರಿಂದ ನಶ್ವರವಾದ ಆ ವಸ್ತುಗಳಲ್ಲಿ ಸೇರಿದ ಭಾವನೆಯು ಸಂಸಾರಬಂಧನಕ್ಕೆ ಸಾಧನವಾಗಿರುವದು. ಪ್ರಾಣಿಗಳಪರಂಪರೆಯು ಪರಂಪರೆಯಾಗಿ ಎಲ್ಲಿಗೋ ಪೋಗುವದು. ದಿಕ್ಕುಗಳು ದಿಕ್ಕಿಲ್ಲದೆ ಓಡುವವು. ಶೈಲಗಳು ಶೀಳಿಹೋಗುವವು. ಆಕಾಶಕ್ಕೆ ಪ್ರಕಾಶ ತಪ್ಪುವದು. ವಾಯುವಿನ ಆಯುಸ್ಸೇ ತೊಡಮಹೋಗುವದು. ಸಮುದ್ರಗಳಿಗೆ ನೀರಿನ ದರಿದ್ರದೋಷ ಬರುವದು. ಉರಿಯುವ ಅಗ್ನಿಯೇ ಉರಿದುಬೀಳುವದು. ಧರಣಿಗೆ ಧೈರ್ಯ ತಪ್ಪುವದು. ಸಿದ್ಧರು ಅಸಿದ್ಧರೂಪರಾಗುವರು. ಇಂದ್ರರು ಇಂದ್ರಜಾಲಪದಾರ್ಥವಾಗುವರು. ಯಮು

* ಪ್ರೀತಿಭಾವ.

ನಿಗೆ ಸ್ಥಿತಿ ನಿಯಮ ತಪ್ಪುವದು. ಸೋಮನು ಶಾಮನಾಗಿ ವ್ಯೋಮದ ಕಪ್ಪಿನಲ್ಲಿ ಸೇರಿಕೊಳ್ಳುವನು. ಮಾರ್ತಾಂಡನ ಮಂಡಲವು ಖಂಡಖಂಡವಾಗುವದು. ವಿಧಿಗೆ ವಿಧಿಲಿಪಿ ತಪ್ಪುವದು. ಹರಿಹರರು ಹಾರಿಹೋಗುವರು. ಕಾಲನಿಗೆ ನಾಶಕಾಲ ಬರುವದು. ಹೀಗಿರುವಲ್ಲಿ ನಮ್ಮ ಸ್ಥಿತಿಯನ್ನಾವು ಹ್ಯಾಗೆ ನಂಬಬೇಕು. ವಾಙ್ಮನಸ್ಸುಗಳಿಗೂ ಇಂದ್ರಿಯಗಳಿಗೂ ಅಗೋಚರವಾದ ಬ್ರಹ್ಮವೆಂಬ ಖಂಡಾನೊಂಧು ವಸ್ತುವಿನಿಂದ ಈ ಪ್ರಕಾರವಾಗಿ ಪ್ರಪಂಚವೆಲ್ಲವು ಮಾಯೆಯಾಗಿ ಮಾಡಲ್ಪಡುವದು. ಅಹಂಕಾರಿಗಳಲ್ಲಿ ಕಾಲರೂಪವಾದ ಈ ಬ್ರಹ್ಮದಿಂ ಬಾಧಿಸಲ್ಪಡದಿರುವನು ಯಾವನೂ ಇಲ್ಲ. ಇದರಿಂದ ಸೂರ್ಯಚಂದ್ರಾದಿ ಗ್ರಹಗಳು ಗಿರಿಯ ಕಲ್ಲುಗಳಂತೆ ಶಳೆಯಲ್ಪಡುವವು. ಸುರಾಸುರರಿಗೆ ಆಸ್ಪದವಾದ ಭೂಗೋಳವು ಜ್ಯೋತಿಶ್ಚಕ್ರದಿಂದಾವರಿಸಲ್ಪಡುವದು. ಸ್ವರ್ಗದಲ್ಲಿ ದೇವತೆಗಳು, ಭೂಲೋಕದಲ್ಲಿ ಮರ್ತ್ಯರು, ಪಾತಾಳದಲ್ಲಿ ಸರ್ಪಗಳೂ ಕೂಡ ಸಂಕಲ್ಪಮಾತ್ರದಿಂ ಕಲ್ಪಿತವಾಗಿ ಪಾಳುಮಾಡಲ್ಪಡುವವು. ಪರಮೇಶ್ವರನಿಂದ ಶರೀರವು ಭಸ್ಮವಾಗಿ ಮಾಡಲ್ಪಟ್ಟಾಗ್ಯೂ ಅನಂಗನಾಗಿಯೇ ಅವನಿಗೆ ಸರ್ವಮಂಗಳೆಯ ಸಂಗವನ್ನುಂಟು ಮಾಡಿದ ಕಾಮನು ಪರಾಕ್ರಮದಿಂ ಲೋಕವೆಲ್ಲವನ್ನೂ ಆಕ್ರಮಿಸಿಕೊಂಡಿರುವನು. ವಸಂತನೆಂಬ ಇವನ ಪಟ್ಟದಾನೆಯು ಪುಷ್ಪಗಳ ಮಕರಂದವೆಂಬ ಮದೋದಕದ ಪರಿಮಳದಿಂದ ದಿಙ್ಮಂಡಲವಂ ತುಂಬುತ್ತಾ ಸಕಲರ ಮನಸನ್ನು ಚಪಲಪಡಿಸುವದು. ಕಾಮಿನಿಗಳ ಕಟಾಕ್ಷದಿಂ ನಿಸ್ಸಾರವಾಗಿ ಮಾಡಲ್ಪಟ್ಟ ವಿವೇಕವು ಮನವಂ ತಡೆಯುವದಕ್ಕೆ ಸಮರ್ಥವಾಗುವದಿಲ್ಲ. ದ್ವಿತೀಯಪದಾರ್ಥ ಜ್ಞಾನವಿರುವವರಿಗೆ ದುಃಖತಪ್ಪದಾದ್ದರಿಂದ ಪರಮಾರ್ಥ ಜ್ಞಾನದಿಂದ ಅದ್ವಿತೀಯನಾಗಿರುವನೇ ಸುಖಿಯೆಂದು ತಿಳಿಯುತ್ತೇನೆ. ದ್ವಿತೀಯಪದಾರ್ಥ ಜ್ಞಾನದಿಂ ಸಂಸಾರಿಗಳಾಗಿ ಕಾಲನೆಂಬ ಬಡಬಾಗ್ನಿಯಲ್ಲಿ ಬೀಳುವ ಜೀವರ ದುರ್ದೆಶೆಯು ಯಾರಿಂದಲಾದರೂ ಸ್ಮರಿಸಲು ಶಕ್ಯವಾದೀತೆ. ಇದೇ ಮೊದಲುತ್ಸವವು, ಇದು ವಸಂತಋತುವು, ಈಗ ಸ್ವದೇಶ ಪ್ರಯಾಣವು, ಇವರು ಬಂಧುಗಳು, ಇದು ಸುಖವು, ಇವು ಭೋಗಗಳು, ಎಂದು ವ್ಯರ್ಥವಾಗಿ ಕಲ್ಪನೆಯಿಂ ಮಾಡುತ್ತಾ ಜನಗಳು ಶಿಥಿಲರಾಗುವರು. ಎಲೈ ಮುನೀಂದ್ರನೇ ! ಘೋರವಾದ ಸಂಸಾರದಲ್ಲಿ ಮನಸ್ಸು ಭ್ರಮೆಪಡುವಂತೆ ಹೊಸ್ತಾಗಿ ಬಂದು ಪದಾರ್ಥವು ಬರುವದಿಲ್ಲ. ಆದಾಗ್ಯೂ ಹೊಸ ಹೊಸದಾದ ಆಟಗಳಿಂದ ಬಾಲ್ಯವು ಕಳೆಯುವದು. ಸುಂದರಿಯರೆಂಬ ದರಿಗಳಲ್ಲಿ ಮನಸ್ಸು ಬೀಳುವದ್ದರಿಂದ ಯೌವನವು ಭಗ್ನವಾಗುವದು. ಬಳಿಕ ವೃದ್ಧಾಪ್ಯದಿಂದ ಶರೀರಕ್ಕೆ ಭಂಗ ಬರು

ಪದು. ಸಂಸಾರ ಸಮುದ್ರದಲ್ಲಿ ಶರೀರಗಳೆಂಬ ಹರಿಗೋಲುಗಳಲ್ಲಿ ಕುಳಿತಿರುವ ಇಂದ್ರಿಯಗಳೆಂಬ ಅಂಬಿಗರು ಮನಸ್ಸೆಂಬ ನಾಯಕನೊಡನೆ ಆಡುತ್ತಿರುವರು. ತುರಂಗ, ಮಾತಂಗ, ಶತಾಂಗಗಳಿಂ ತರಂಗಯುಕ್ತವಾದ ರಣಾಂಗವೆಂಬ ಸಮುದ್ರವಂ ಯಾರು ದಾಟುವರೋ, ಅವರು ಕಾಮ, ಕ್ರೋಧ, ಮೊದಲಾದ ಅಂತಶ್ಶತ್ರುಗಳಂ ಜಯಿಸಲಿಲ್ಲವಾದ್ದರಿಂದ ಸತ್ಪುರುಷರಿಂ ಶೂರರೆನಿಸಿಕೊಳ್ಳುವದಿಲ್ಲ. ಯಾರು ಅಂತಶ್ಶತ್ರುಗಳಂ ನಿಗ್ರಹಿಸಿ ಮನೋಮಯವಾದ ತರಂಗಗಳುಳ್ಳ ದೇಹೇಂದ್ರಿಯಾತ್ಮಕವಾದ ಸಂಸಾರ ಸಮುದ್ರವಂ ದಾಟುವರೋ ಅವರು ಮಹಾತ್ಮರಿಂದ ಹೊಗಳಿಸಿಕೊಳ್ಳುವರು. ಸಂಸಾರಶ್ರಮಕ್ಕೆ ಶಾಂತಿಯನ್ನುಂಟುಮಾಡಿ ದುಃಖ ಲೇಶ ಸಂಬಂಧವಿಲ್ಲದ ಅಖಂಡಸುಖವಂ ಕೊಡುವ ಕರ್ಮವು ಯಾವದೂ ಇಲ್ಲ. ತತ್ವಾರ್ಥಜ್ಞಾನಬಲದಿಂದ ಧೈರ್ಯಚ್ಯುತಿ ಇಲ್ಲದೆ ಕೀರ್ತಿಯಿಂದ ಜಗತ್ತನ್ನು ಪ್ರತಾಪದಿಂದ ದಿಕ್ಕುಗಳನ್ನು ಸಂಪತ್ತಿನಿಂದ ಅರ್ಥಿಗಳ ಮನೆಗಳನ್ನೂ ತುಂಬುತ್ತಾ ಸಾತ್ವಿಕವಾದ ಲಕ್ಷ್ಮಿಯಿಂದ ನಿತ್ಯಾನಂದರಾಗಿರುವ ಮಹಾತ್ಮರು ಲೋಕದಲ್ಲಿ ದುರ್ಲಭರಾಗಿರುವರು. ಜನ್ಮಾಂತರಕರ್ಮವುಳ್ಳ ಪುರುಷನು ಗಿರಿದುರ್ಗದಲ್ಲಿದ್ದಾಗ್ಯೂ ವಜ್ರಮಯವಾದ ಮನೆಯಲ್ಲಿದ್ದಾಗ್ಯೂ ಅವನಿಗೆ ಬರತಕ್ಕ ಸಂಪತ್ತುಗಳು ವಿಪತ್ತುಗಳು ಸಹ ಅಲ್ಲಲ್ಲಿಯೆ ಸಿದ್ಧವಾಗುವವು. ಧರ್ಮಾರ್ಥಕಾಮಪ್ರಧಾನವಾದ ಕರ್ಮಗಳಿಂದ ವಯಸ್ಸಂ ಕಳಕೊಂಡ ಪುರುಷನ ಮನವು ಬಿರಿಗಾಳಿಯಲ್ಲಿರುವ ನವಿಲಗರಿಯಂತೆ ಚಂಚಲವಾಗಿರುವದಲ್ಲದೆ ಯಾವ ಕರ್ಮದಿಂದಲೂ ಶಾಂತಿಹೊಂದಲಾರದು. ದೈವಬಲದಿಂದಿಷ್ಟಾರ್ಥಗಳು ಸಿದ್ಧವಾದಾಗ್ಯೂ ತತ್ವಜ್ಞಾನವಿಲ್ಲದ ಪುರುಷನು ಗಾಣದ ಮಾಂಸವಂ ಗ್ರಹಿಸಿದ ಮತ್ಸ್ಯದಂತೆ ದುಃಖಪಡುವನು. ಮಕ್ಕಳು, ಹೆಂಗಸರು, ಹಣವು ಸಹ ರಸಾಯನದಂತೆ ಸಂಪಾದಿಸಲ್ಪಟ್ಟಾಗ್ಯೂ ಕೊನೆಗೆ ಅವರಿಂದ ಮೋಹ ಉಂಟಾಗುವದಲ್ಲದೆ ಅಖಂಡವಾದ ಸುಖವು ಎಂದಿಗೂ ಸಂಭವಿಸಲಾರದು. ಇವು ಅವುಗಳೆಂದು ಭಾವಿಸಲ್ಪಟ್ಟ ಕಾರ್ಯಗಳು ಜರೆಯಿಂದ ಜರ್ಝರವಾದ ಶರೀರವುಳ್ಳವನಿಗೆ ಪಶ್ಚಾತ್ತಾಪವನ್ನೇ ಉಂಟುಮಾಡುವವು. ವಿವೇಕವಿಲ್ಲದವರು ಮರಗಳ ಎಲೆಗಳಂತೆ ಹುಟ್ಟಿ ಕೆಳಕ್ಕೆ ಬೀಳುವರಲ್ಲದೆ ಸುಖಮಾರ್ಗವಂ ಹೊಂದುವದಿಲ್ಲ. ಮನೋರಥಗಳಿಂದತ್ತಿತ್ತಲಾಗಿ ಓಡಾಡುತ್ತಾ ಶ್ರಮಪಡುವ ಅವಿವೇಕಿಯು ಮನೆಯಂ ಸೇರಿದಾಗ್ಯೂ ದುಃಖಾಧಿಕ್ಯದಿಂ ಸುಖವಾಗಿ ನಿದ್ರೆಯಂ ಪಡೆಯುವದಿಲ್ಲ. ಈ ಶತ್ರುಗಳನ್ನು ಓಡಿಸಿದೆನು. ಈ ಲಕ್ಷ್ಮಿಯು ಸಿದ್ಧವಾಗಿರುವಳು. ಈ ಸುಖಗಳನ್ನನುಭವಿಸುವೆನೆಂದು ಯೋಚಿಸುವಲ್ಲಿಯೇ ಅಕಾಂಡತಾಂಡವವಾದ ಮೃ

ತ್ಯುವು ಅವನಂ ಕೊಂಡುಹೋಗುವದು. ಅವಿವೇಕಿಯಾದವನಿಗೆ ಪ್ರಯತ್ನದಿಂ ಸಂಪಾದಿಸಲ್ಪಟ್ಟವರಾಗಲೀ, ತಾವಾಗಿ ಬಂದವರಾಗಲೀ, ಸೇರಿದ ಜನರು ದುಃಖ ಸಾಧಕರಾಗುವರಲ್ಲದೆ, ಸುಖಸಾಧನರಾಗುವದಿಲ್ಲ. ದೈವವಶದಿಂ ಬಂದು ಬಹು ಕಾಲದಿಂ ಪೋಷಿಸಲ್ಪಟ್ಟ ದೇಹವೇ ಅಪಕಾರವಂ ಮಾಡುವಲ್ಲಿ, ಕಡಮೆಯು ವರು ಅಪಕಾರವಂ ಮಾಡುವದರಲ್ಲಿ ಆಶ್ಚರ್ಯವೇನು. ಕೊಡ್ಲಿಯಿಂದ ಕತ್ತರಿಸ ಲ್ಪಡುವ ಅರಣ್ಯದಲ್ಲಿರುವನಂತೆ, ಮೃತ್ಯು ಮುಖದಲ್ಲಿರುವ ಸಂಸಾರವಂ ಹೊಂ ದುವ ಪುರುಷನು ಎಂದಿಗೂ ಸುಖಪಡುವದಿಲ್ಲ. ಎಲೈ ಮಹಾನುಭಾವನೇ! ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಸ್ವಪ್ನದಲ್ಲಿ ಕಾಣುವ ಜನ ಸಮೂಹದಂತೆ ಕ್ಷಣಿಕವಾಗಿರುವದು. ಸಮಸ್ತ ಪದಾರ್ಥಗಳೂ ಕಾಲಭೇದದಿಂ ಭೇದವಂ ಪಡೆಯುತ್ತಿರುವಲ್ಲಿ ಯಾವದು ಏಕರೀತಿಯಾದ್ದೆಂದು ನಂಬತಕ್ಕದ್ದು ಶುಷ್ಕವಾದ ಸಮುದ್ರದಂತೆ ಹಳ್ಳವಾಗಿದ್ದ ಭೂಮಿಯು ಕೆಲವುಕಾಲದಲ್ಲಿ ಬೆ ಟ್ಟಕ್ಕೆ ಸಮಾನವಾದ ತಿಟ್ಟಾಗುವದು. ಹೀಗೆ ತಿಟ್ಟಾಗಿದ್ದ ಭೂಮಿಯು ಹಳ್ಳ ವಾಗುವದು. ನೆಲವು ಬೆಟ್ಟಕ್ಕೆ ಸರಿಯಾಗುವದು, ಬೆಟ್ಟ ನೆಲಸಮವಾಗು ವದು. ನಗರವು ಪಾಳಾಗಿಯೂ, ಪಾಳು ನಗರವಾಗಿಯೂ, ಮರುಭೂಮಿ ತೋಟವಾಗಿಯೂ, ತೋಟ ಮರುವಾಗಿಯೂ, ಜಲವಿದ್ದಸ್ಥಲ ಶುಷ್ಕವಾಗಿ ಯೂ, ಶುಷ್ಕವಾದ್ದು ಜಲಮಯವಾಗಿಯೂ, ದರಿದ್ರನು ಶ್ರೀಮಂತನಾಗಿ ಯೂ, ಶ್ರೀಮಂತನು ದರಿದ್ರನಾಗಿಯೂ, ಯೋಗಿಯು ಭೋಗಿಯಾಗಿಯೂ, ಭೋಗಿಯು ಯೋಗಿಯಾಗಿಯೂ, ಕಲ್ಲು ದೇವರಾಗಿಯೂ, ದೇವರು ಕಲ್ಲಾ ಗಿಯೂ ಕಾಣಲ್ಪಡುವದು. ಹೀಗೆ ಮಾಯಾಮಯವಾಗಿ ನಟಿಸುವ ಸಂಸಾರ ವೆಂಬ ನಟನ ವಿಲಾಸದಲ್ಲಿ ಆ ದಿವಸಗಳು ಹೋದವು. ಆ ಸಂಪತ್ತುಗಳು ಸ್ಮರ ಣಯೋಗ್ಯವಾದವು. ಆ ಕ್ರಿಯೆಗಳು ಮರತುಹೋದವು, ಇಲ್ಲಿಯ ಹಳಬರು ಯಮಲೋಕಕ್ಕೆ ಹೊಸಬರಾದರು. ಚಿಕ್ಕವರು ದೊಡ್ಡವರಾದರು. ದೊಡ್ಡ ವರು ಭಸ್ಮವಾದರು. ಹೊಸಬರು ಪ್ರತಿದಿನದಲ್ಲಿಯು ಪುಟ್ಟುತ್ತಿರುವರು, ಪ್ರಕಾ ಶಕಾಲವು ಕಳದುಹೋಯಿತು, ಕತ್ತಲೆಗಾಲವು ಸಿದ್ಧವಾಗಿರುವದು, ಎಂದು ಜನಗಳೆಲ್ಲರೂ ದುಃಖಪಡುತ್ತಿರುವರಲ್ಲದೆ ಯಾರೂ ಸಂತೋಷಪಡುವದಿಲ್ಲ; ದರಿದ್ರನಿಗೆ ಇಲ್ಲವೆಂದು ಬಂದೇದುಃಖವಿರುವದು, ಶ್ರೀಮಂತನಿಗೆ ಯಾವದು ಎಲ್ಲಿಹೋಗುವದೋ ಎಂದು ದುಃಖವು ಸಹಸ್ರ ಪ್ರಕಾರವಾಗುವದು. ಇದ್ದ ವನಿಗೆ ದುಃಖವಲ್ಲದೆ ಇಲ್ಲದವನಿಗೆ ನಾಶ ದುಃಖವಿಲ್ಲವಾದ್ದರಿಂದ ದರಿದ್ರನ ಮ ನೋರಥಗಳು ಶ್ರೀಮಂತನ ದುಃಖಗಳು ಸಹ ಫಲಿಸುವಂತೆ ತೋರುವದು, ದರಿ

ದ್ರನು ಅರೋಗ ದೃಢಗಾತ್ರನಾಗಿ ಬೀಸಣಿಗೆಯಂತೆ ತಿರಗುತ್ತಾ ಕೊಡದವನಿಗೆ ದರಿದ್ರತೆ ಉಂಟಾಗುವದೆಂಬ ಭಯದಿಂದ ಅರ್ಥಿಗಳಂ ಸಂತೋಷಪಡಿಸುವನು. ರಾಗ, ಭೋಗ, ರೋಗಗಳಿಂದೇಳಲು ಹಸ್ತಲಾಗವನ್ನಪೇಕ್ಷಿಸುವ ಶ್ರೀಮಂತನು ಕೊಟ್ಟರೆ ತನಿಗೆ ಕಡಿಮೆಯಾಗುವದೆಂದು ಲೋಭದಿಂದ ಯಾಚಕರಂ ನಿರಾಕರಿಸುತ್ತಾ ಆ ದೋಷಗಳಿಂದಲೇ ದರಿದ್ರನಾಗುವನು. ಧಾರ್ಮಿಕನ ಧನವು ಯಾಚಕರ ಮನವಂ ಸಂತೋಷಪಡಿಶಿದ್ದರಿಂದ ಅಕ್ಷಯವಾಗಿ ಇಲ್ಲಿಯು ಶ್ರಮವನ್ನುಂಟುಮಾಡಿ ಜನ್ಮಾಂತರಕ್ಕೆ ಸ್ಥಿತಿಯಾಗುವದು. ಲೋಭಿಯ ಧನವು ಹ್ಯಾಗೆ ಹ್ಯಾಗೆ ರಕ್ಷಿಸಲ್ಪಟ್ಟಾಗ್ಯೂ ಬ್ರಾಹ್ಮಣರ ಕೃಪಾಕಟಾಕ್ಷವಿಲ್ಲದ ದೋಷದಿಂದ ಇದ್ದಲ್ಲಿಯೇ ಅದೃಶ್ಯವಾಗಿ ಹೋಗುವದು. ಹೀಗೆ ಏನಾದರೂ ಒಂದು ನಿಮಿತ್ತದಿಂದ ಪದಾರ್ಥವೆಲ್ಲವು ವ್ಯತ್ಯಾಸವಾಗುವದು. ಪತ್ನೀ, ಪುತ್ರ, ಮಿತ್ರ, ಭೃತ್ಯ, ಬಂಧುಗಳು, ಧನಧಾನ್ಯಗಳು ಸಹ ಸಿದ್ಧವಾಗಿದ್ದಾಗ್ಯೂ ನಾಶವಾದೀತೆಂದು ದಿಗಲು ಬೀಳುವನಿಗೆ ಯಾವದೂ ಇದ್ದಂತೆ ಕಾಣುವದಿಲ್ಲ. ಯಾವದೂ ಇಲ್ಲದ ದರಿದ್ರನಿಗೆ ಮನೋರಥಗಳಿಂದಲೇ ಅಖಂಡಸಾಂಮ್ರಾಜ್ಯ ಉಂಟಾಗುವದು. ಪುತ್ರೋತ್ಪತ್ತಿ, ಪಿತೃವಿನಾಶ ಕಾಲಗಳೂ ಕೂಡ ನಾಶ, ವೃಥಾ ನಾಶಗಳಂ ಚಿಂತಿಸುವನಿಗೆ ದುಃಖ ಸುಖಪ್ರಾಯವಾಗುವದು. ಸ್ಥಿರಚರ ಪ್ರಾಣಿಗಳಿಗೂ ಪಶು ಮನುಷ್ಯಜಾತಿಗಳಿಗೂ ಕೂಡ ವೇಷಧಾರಿಗಳರೀತಿಯಿಂ ವ್ಯತ್ಯಾಸವಾಗುವಲ್ಲಿ ವಿಕರೀತಿಯಂದು ಯಾವದಂ ನಂಬಬಹುದು! ಶೂನ್ಯರೂಪವಾದ ಆಕಾಶವುಕೂಡ ಕ್ಷಣಕ್ಷಣಕ್ಕೆ ಒಂದೊಂದು ಬಗೆಯಾಗುವಲ್ಲಿ ರೂಪಯುಕ್ತವಾದ ಪದಾರ್ಥಗಳಿಗೆ ವ್ಯತ್ಯಾಸವಾಗುವದರಲ್ಲಿ ಆಶ್ಚರ್ಯವೇನು ! ಈ ಜಗದ್ಭ್ರಮೆಯಿಂದ ಮೋಹಪಡದವರು ಯಾರೂ ಇಲ್ಲವೆಂತಲೇ ತೋರುತಲಿಧೆ, ಹೀಗೆ ದೋಷಗಳನ್ನಾಲೋಚಿಸುವ ನನ್ನ ಹೃದಯದಲ್ಲಿ ಮರುಭೂಮಿಯಲ್ಲಿ ಸರೋವರದಂತೆ ಭೋಗಾಪೇಕ್ಷೆಯು ಪುಟ್ಟುವದಿಲ್ಲ; ನನಿಗೆ ಅಹಂಕಾರವೇ ಭಗ್ನವಾಗಿರುವದ್ದರಿಂದ ಅಹಂಕಾರ ಕಾರಣವಾದ ರಾಜ್ಯಸಂಪತ್ತುಗಳೆಲ್ಲವೂ ಇಲ್ಲದಿರುವಂತೆ ತೋರುತ್ತಿರುವವು; ಜನ್ಮಾಂತರಗಳಲ್ಲೂ ದುಃಖವನ್ನುಂಟುಮಾಡುವ ಇಂದ್ರಿಯ ವೈಷವ್ಯಕ್ಕಿಂತ ಒಂದು ಜನ್ಮದಲ್ಲಿ ದುಃಖಪಡಿಸುವ ವಿಷಯವು ಅಧಿಕವಲ್ಲವಾದ್ದರಿಂದ ವಿಷಯಾಸಕ್ತವಾದ ಇಂದ್ರಿಯ ವೈಷಮ್ಯವೇ ವಿಷವೆನಿಸಿಕೊಳ್ಳುವದು; ವಿಷಗಳು ಇಂದ್ರಿಯಗಳನ್ನೂ, ಮನ್ಮಥನು ಮನವನ್ನೂ ಶೆಳಕೊಳ್ಳುವದಕ್ಕೆ ಪೂರ್ವದಲ್ಲೇ ಮಹಾತ್ಮನಾದ ನೀನು ತತ್ವೋಪದೇಶದಿಂ ಚಿಕಿತ್ಸೆಯಂ ಮಾಡಿದರೆ ನಾನು ಸ್ವಸ್ಥನಾಗುವೆನು. ಸುಖದುಃಖಗಳೂ, ಜೀವನಮರಣಗಳೂ ಕೂಡ

ಜ್ಞಾನಿಗೆ ಬಂಧಕವಾಗುವದಿಲ್ಲವಾದ್ದರಿಂದ ಅಂಥಾ ಜ್ಞಾನವು ನನಿಗೆ ಉಂಟಾಗುವಂತೆ ಉಪದೇಶವಂ ಮಾಡುವನಾಗು, ನನ್ನ ಹೃದಯವೆಂಬ ಗುಹೆಯಲ್ಲಿ ಶೇರಿಕೊಂಡಿರುವ ಅಜ್ಞಾನವೆಂಬ ಅಂಧಕಾರವು ನಿಶ್ಶೇಷವಾಗಿ ಪೋಗುವಂತೆ ಜ್ಞಾನವೆಂಬ ರತ್ನದೀಪವಂ ಸ್ಥಾಪಿಸುವನಾಗು, ಪ್ರತಿಕ್ಷಣದಲ್ಲೂ ಪುಟ್ಟುತಲಿರುವ ಅನರ್ಥಪರಂಪರೆಗಳಿಂದ ದಾಟಲಶಕ್ಯವಾದ ಸಂಸಾರಸಮುದ್ರದಲ್ಲಿ ಮುಳುಗುವ ಜಗವಂ ನೋಡುವ ನನ್ನ ಮನವು ಈಗ ಆಲೋಚನೆಎಂಬ ಕೆಸರಿನಲ್ಲಿ ಬಿದ್ದಿರುವದು. ಬಿರುಗಾಳಿಯಿಂ ಸಮುದ್ರದಲ್ಲಿ ಹೊಡೆಯಲ್ಪಟ್ಟ ನಾವೆಯಂತೆ ನನ್ನ ಮನವು ಗುಣವ್ಯತ್ಯಾಸದಿಂ ಭ್ರಮೆಪಡುತ್ತಿರುವದು. ಜೀರ್ಣವಾದ ವೃಕ್ಷದ ಯಲೆಗಳಂತೆ ನನ್ನ ಇಂದ್ರಿಯಗಳು ಕಂಪಿಸುತಿರುವವು, ದಾರಿದ್ರ್ಯದೋಷದಿಂ ವಿಟನಮನೆಯಲ್ಲಿ ಚಾಕರಿಗೆ ಶೇರಿ ಮೊದಲೇ ಸಂಬಳವಂ ತೆಗೆದುಕೊಂಡಿರುವ ಪತಿವ್ರತೆಯಂತೆ ದುರ್ವಿಷಯ ಸಮೂಹವಂ ಹೊಂದಿರುವ ನನ್ನ ಚಿಂತೆಯು ತನಗೆ ಆಲಂಬನವಾದ ಆತ್ಮನನ್ನು ಹೊಂದಲಾರದೆ ವಿಷಯಸಮೂಹವನ್ನು ಬಿಡಲಾರದೆ ಮೊಂಕಾಗಿರುವದು. ಇದೇ ಪ್ರಕಾರವಾಗಿರುವ ನನ್ನ ಧೃತಿಯು ಹಿಮಗಾಲದಲ್ಲಿ ಕೆಲವು ಯಲೆಗಳಂ ವಹಿಸಿರುವ ಬಳ್ಳಿಯಂತಿರುವದು. ನನ್ನ ಸಂಸಾರಸ್ಥಿತಿಯು ನಡವೆಯ ದೀಪದಂತೆ ಮಧ್ಯಸ್ಥವಾಗಿರುವದು. ನನ್ನ ಬುದ್ಧಿಯು ಅರ್ಧ ಕತ್ತರಿಸಲ್ಪಟ್ಟ ವೃಕ್ಷದ ಬೇರಿನಂತೆ ನಿಸ್ಸಾರವಾಗಿರುವದು. ಹೀಗಿರುವದ್ದರಿಂದ ಸತ್ಯವಾಗಿ ಆಯಾಸಭ್ರಮೋಪಾದಿಗಳಿಲ್ಲದ ಸರ್ವೋತ್ತಮವಾದ ಪದವಂ ಹೊಂದಿ ಶೋಕರಹಿತನಾಗಿರಬೇಕೆಂದು ಪ್ರಾರ್ಥಿಸುತಲಿದ್ದೇನೆ ! ನಮ್ಮಂತೆ ಸರ್ವಕಾರ್ಯಗಳನ್ನು ಮಾಡುತ ವ್ಯವಹಾರಾಸಕ್ತರಾಗಿದ್ದ ಜನಕಾದಿಗಳು ಹ್ಯಾಗೆ ಕೃತಾರ್ಥರಾದರು, ಅಭಿಮಾನಿಸಿದ ಕಲ್ಲೂಕೂಡ ಮೋಹಪಡಿಸುವದಷ್ಟೆ? ಹೀಗಿರುವಲ್ಲಿ ಯಾವದೃಷ್ಟಿಯಿಂದ ತಾವು ಜೀವನ್ಮುಕ್ತರಾಗಿ ವಿಹರಿಸುತ್ತೀರಿ ! ಸರ್ಪಗಳಂತೆ ಭಯಂಕರಗಳಾದ ವಿಷಯಗಳು ಹ್ಯಾಗೆ ತಮಗೆ ಕ್ಷೇಮಕರವಾಗಿರುವವು? ತಮ್ಮ ಬುದ್ಧಿಎಂಬ ಸರೋವರವು ಮೋಹವೆಂಬ ಮಾತಂಗದಿಂ ಕದಲದೇ ನಿರ್ಮಲವಾಗಿರುವದಕ್ಕೆ ಕಾರಣವೇನು? ಸಂಸಾರದಲ್ಲಿರುವ ತಾವು ಪದ್ಮಪತ್ರದಂತೆ ನಿರ್ಲೇಪರಾಗಿರುವದು ಹ್ಯಾಗೆ? ಪರರದುಃಖವಂ ಪರಿಹರಿಸುವಲ್ಲಿ ಆತ್ಮಸಮವಾಗಿ ಲೋಕವಂ ತಿಳಿಯುವ ತಾವು ಸುಖದುಃಖಾದಿಗಳಲ್ಲಿ ಈ ಲೋಕವನ್ನೇ ತೃಣವಾಗಿ ಹ್ಯಾಗೆ ತಿಳಿಯುತ್ತೀರಿ! ತಮ್ಮ ಮನವು ಮನ್ಮಥನಿಗೆ ಹ್ಯಾಗೆ ಸ್ವಾಧೀನವಾಗದೆ ಇರುವದು? ಯಾವಪುರುಷನನ್ನನುಸರಿಸಿ ನಡೆಯುವ ಜನರು ದುಃಖಹೀನರಾಗುತಾರು? ಯಾವದು ಉತ್ತಮವಾದ ಶ್ರೇಯಸ್ಸೋ, ಯಾವದರಿಂದ ಉತ್ತಮ

ವಾದ ಪ್ರಯೋಜನವಾಗುವದೋ, ಯಾವದು ಉತ್ತಮವಾದ ಫಲವೋ ಇದ ನ್ನು ಸತ್ಯವಾಗಿ ಅಪ್ಪಣೆಕೊಡಿಸಬೇಕು. ವಿಧಿವ್ಯಾಪಾರಕ್ಕೆ ವಿಷಯವಾದ ಈ ಜಗದ ಪೂರ್ವಾಪರವನ್ನೆನಗೆ ಬೋಧಿಸಬೇಕು. ಹೃದಯಾಕಾಶಕ್ಕೆ ಚಂದ್ರನಾ ತಿರುವ ಮನಸ್ಸಿನ ಕಳಂಕವು ಹೋಗುವಂತೆ ಅನುಗ್ರಹಿಸಬೇಕು. ಇಲ್ಲಿ ಹಿಡಿ ಯತಕ್ಕದ್ದು ಯಾವದು, ಬಿಡತಕ್ಕದ್ದು ಯಾವದು, ಚಪಲವಾದ ಮನವು ಪರ್ವ ತದಂತೆ ಹ್ಯಾಗೆ ಸ್ಥಿರವಾಗುವದು, ಯಾವಮಂತ್ರದಿಂದ ಈ ಸಂಸೃತಿಎಂಬ ವಿ ಷೂಚಿಕೆ ಶಾಂತವಾಗುವದು. ಪರಮಾನಂದ ವೃಕ್ಷಕ್ಕೆ ಮಂಜರಿಯಾದ ಶಾಂತಿ ಯಂ ಹೊಂದಿ ಕಳಂಕವಿಲ್ಲದ ಚಂದ್ರನಂತೆ ಹ್ಯಾಗೆ ನಾನು ಪೂರ್ಣನಾಗು ವೆನೋ! ಪ್ರಾಣಶೇಷವಾದ ಶವವಂ ನಾಯಿನರಿಗಳು ಶೆಳೆವಂತೆ ಕಾಮಾದಿವಿಕಾ ರಗಳು ನನ್ನ ಹ್ಯಾಗೆ ಶೆಳೆಯಲಾರವೊ, ಹ್ಯಾಗೆ ಮೂಢತೆಯಿಲ್ಲದೆ ಅರಣ್ಯದಂತಿ ರುವ ಸಂಸಾರವು ನನಿಗೆ ಲೀಲೋದ್ಯಾನವಾಗುವದೋ,ರಾಗರೋಗಮಯವಾದ ಈ ಭೋಗಗಳು ಹ್ಯಾಗೆ ನನ್ನಂ ಬಾಧಿಸಲಾರವೋ ಹಾಗೆ ಅನುಗ್ರಹಿಸಬೇಕು. ಕಟಾಕ್ಷಮಾತ್ರದಿಂ ಸಮಸ್ತವನ್ನು ಪವಿತ್ರವಾಗಿ ಮಾಡುವ ತಮ್ಮಂಥಾ ಮಹಾ ತ್ಮರಿಗೆ ಅಸಾಧ್ಯವಾದ್ದು ಸ್ವರ್ಗದಲ್ಲಾಗಲೀ ಭೂಮಿಯಲ್ಲಾಗಲೀ ಎಲ್ಲೂ ಇಲ್ಲ ವಾದ್ದರಿಂದ ಕರುಣೆಯಿಂದ ನನ್ನಂ ಕಟಾಕ್ಷಿಸಬೇಕು, ಎಲೈ ಮಹಾನುಭಾವನೆ! ಜ್ಞಾನದೃಷ್ಟಿಯಿಲ್ಲದ ನನಿಗೆ ದೃಶ್ಯಪದಾರ್ಥವೆಲ್ಲವು ಮೃತ್ಯುಮುಖದಂತೆ ಭಯಂ ಕರವಾಗಿರುವದ್ದರಿಂದ ಸ್ನಾನಪಾನಾದಿಗಳೊಂದೂ ರುಚಿಸದೆ ದುಃಖಪಡುತ್ತಿರು ವೆನು. ನನಿಗೆ ದೇಹವಂ ಬಿಡುವದು ಒಂದೇ ಬೇಕಾಗಿದೆ ಅಲ್ಲದೆ ಮತ್ತೊಂದಿಲ್ಲ, ಈ ಪ್ರಕಾರವಾಗಿ ಘೋರವಾದ ಸಂಸಾರದ ದುಃಖದಲ್ಲಿ ಬಿದ್ದಿರುವ ನನ್ನನ್ನು ಪಾತಾಳದಲ್ಲಿ ಬಿದ್ದಿರುವ ಭೂಮಿಯಂನಾದಿವರಾಹಸ್ವಾಮಿಯಂತೆ ಉದ್ಧರಿಸ ಬೇಕು ಎಂದು ಶ್ರೀರಾಮಚಂದ್ರನು ಪ್ರಾರ್ಥಿಸುತ್ತಿದ್ದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯಲ್ಲಿ ವೈರಾಗ್ಯಪ್ರಕರಣದೊಳ್ ಬಾಲ್ಯಾದಿ ಸ್ವರೂಪನಿರೂಪಣ ವೆಂಬ ನಾಲ್ಕನೇ ತರಂಗಕ್ಕೆ ಮಂಗಳಮಹಾ ಶ್ರೀ ಶ್ರೀ.

ಪಂಚಮಪ್ರಕರಣ ಪ್ರಾರಂಭ.

## ಪುಷ್ಪವರ್ಷಾದಿ ನಿರೂಪಣ.

ಇಂತು ಶ್ರೀರಾಮಚಂದ್ರನು ಕೇಕಾಧ್ವನಿಯಂ ಮಾಡುವ ನವಿಲಿನಂತೆ ಮ ನೋಹರವಾಗಿ ನುಡಿದು ಸುಂಮನೆ ಇರುವಲ್ಲಿ ಸಭಾಜನರೆಲ್ಲರೂ ಆಶ್ಚರ್ಯ ಭರಿ

ತರಾಗುತ್ತಿರಲು, ಅವರ ಶರೀರದಲ್ಲಿ ರೋಮಾಂಚಗಳು, ತಾವು ಆ ರಾಮಚಂದ್ರನಂ ನೋಡಬೇಕೆಂಬ ಅಪೇಕ್ಷೆಯಿಂ ಕೂಡಿರುವಂತೆ, ಆವಿರ್ಭವಿಸಿದವು; ಶ್ರೀರಾಮನ ವಾಕ್ಯಗಳಿಂದಡಗಿದ ಲೋಕವ್ಯವಹಾರವುಳ್ಳ ಆ ಸಭೆಯು, ಬ್ರಹ್ಮಾನಂದಸಮುದ್ರದ ತೆರೆಗಳಿಂ ತುಂಬಿರುವಂತೆ ಪ್ರಕಾಶಿಸುತ್ತಿದ್ದುದು; ವೈರಾಗ್ಯವಾಸನೆಗಳಿಂದ ಭೋಗವಾಸನೆಗಳಂ ತಿರಸ್ಕರಿಸುತ್ತಾ, ಅಮೃತ ಸಮುದ್ರದ ತೆರೆಗಳಂತೆಸೆವ ಆ ಮಾತುಗಳಂ ರಾಮಚಂದ್ರನು ಪೇಳುತ್ತಿರುವಲ್ಲಿ ವಸಿಷ್ಠ ವಿಶ್ವಾಮಿತ್ರ ಮೊದಲಾದ ಮುನಿಗಳು, ಜಯಂತ ಮೊದಲಾದ ಮಂತ್ರಿಗಳು, ದಶರಥ ಮೊದಲಾದ ಧೊರೆಗಳ ಗವಾಕ್ಷೆಗಳಿಂ ನೋಡುತ್ತಿದ್ದ ಕೌಶಲ್ಯೆ ಮೊದಲಾದ ಅಂತಃಪುರ ಸ್ತ್ರೀಯರುಗಳು, ಸಾಮಂತರಾದ ರಾಜರು, ಲಕ್ಷ್ಮಣ ಶತ್ರುಘ್ನಾದಿ ರಾಜಕುಮಾರರು, ಇತರರಾದ ಅಮಾತ್ಯರು, ಭೃತ್ಯರು ಸಹಾ ಆಶ್ಚರ್ಯವಾಗಿ ಕೇಳುತ್ತಿದ್ದರು; ಆಗ ಪಂಜರಗಳಲ್ಲೂ ಉದ್ಯಾನ ಲತೆಗಳಲ್ಲೂ, ಲೋವೆಗಳಲ್ಲೂ, ಶೇರಿದ್ದ ಪಕ್ಷಿಗಳು ತಮ್ಮ ರೆಕ್ಕೆಗಳನ್ನು,ಕೊಕ್ಕುಗಳನ್ನು ಸಹ ಅಲ್ಲಾಡಿಸಲಿಲ್ಲ; ಅಲ್ಲಿದ್ದ ಕುದುರೆಗಳು ಹುಲ್ಲೆಗಳು ಸಹ ಕಚ್ಚಿದ್ದ ಹುಲ್ಲಂ ಮೆಲ್ಲದೆ ನಿಂತಿದ್ದವು; ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ವ್ಯಾಸ, ನಾರದ, ಪುಲಹ, ಪುಲಸ್ತ್ಯಾದಿ ಮುನಿಗಳು ಸಿದ್ಧ,ಚಾರಣ,ಗಂಧರ್ವ,ವಿದ್ಯಾಧರ,ಕಿಂನರ, ಕಿಂಪುರುಷರು, ಇತರರಾದ ವೈಮಾನಿಕರು ಸಹ ತಮ್ಮ ಕೆಲಸಕ್ಕೆ ಹೋಗುವದಂಬಿಟ್ಟು, ಸ್ತಬ್ಧರಾಗಿ ಕೇಳುತ್ತಿದ್ದರು. ಬಳಿಕ ಆಶ್ಚರ್ಯಾನಂದಗಳಿಂದ ಸಾಂದ್ರವಾದ ಅಂತಃಕರಣವುಳ್ಳ ಆ ಸಿದ್ಧರು. ಸಾಧು ಸಾಧು ಎಂದು ಪೇಳುತ್ತಾ ಮೇಘಗಳಂತೆ ಪುಷ್ಪವೃಷ್ಟಿಯಂ ಕರೆದರು, ಆಗ ಶ್ರೀರಾಮನೆಂಬ ಚಂದ್ರನಂ ನೋಡಲೋಸುಗ ಬರುವತಾರೆಗಳಂತೆಯು ತಮ್ಮ ಸೌಭಾಗ್ಯವು, ಇದುವರಿಗೆ ಲೋಕಶ್ಲಾಘ್ಯವಾಗಿದ್ದುದು, ಇನ್ನು ಮೇಲೆ ಕಡಮೆಯಾಗುವದೆಂದು ವ್ಯಸನದಿಂ ದಪ್ಸರೆಯರಿಂದ ಕಿತ್ತು ಬಿಸಡಲ್ಪಟ್ಟ ಮುಕ್ತಾಹಾರಗಳಂತೆಯು, ಇನ್ನು ಮೇಲೆ ಮಧ್ಯಮಲೋಕದವರು, ನನ್ನಂ ಘ್ಲಾಶಿಪಡಿಸಲಾರರೆಂದು ಸಂತುಷ್ಟಳಾದ ಸ್ವರ್ಗಲಕ್ಷ್ಮಿಯ ಮಂದಹಾಸಪ್ರಕಾಶಗಳಂತೆಯು ಭೂಲೋಕದಲ್ಲಿ ವಿಲಾಸೇಚ್ಛೆಯಿಂ ಬರುವ ಮೋಕ್ಷ ಲಕ್ಷ್ಮಿಯ ಕರುಣಾಕಟಾಕ್ಷಗಳಂತೆಯು ಮಧ್ಯಮಲೋಕದ ಜನರನ್ನಾಶ್ರಯಿಸಲು ಬರುವ ಸಾತ್ವಿಕಗುಣಸಮೂಹಗಳಂತೆಯು ಕಮಲ,ಕುಮುದ,ಮಂದಾರ,ಪಾರಿಜಾತಕ್ಕೆ ತಕ್ಕ ಮರುವಕ,ಕುರವಕ,ಚಂಪಕ, ಚಾಂಪೇಯಾದಿ ಪುಷ್ಪಗಳು ಅಂತರಿಕ್ಷದಿಂ ಬೀಳುತ್ತಿರಲು ಅಪ್ಸರೆಯರೆಲ್ಲರೂ ಕೂಡಿ ಶ್ರೀರಾಮನ ಗುಣಗಳಂ ವೀಣೆಯಂ ಪಿಡಿದು ಪೊಗಳುವರೋ ಎಂದು ಸಂದೇಹವನ್ನುಂಟುಮಾಡುತ್ತಾ ಆ ಪುಷ್ಪಗ

ಳಲ್ಲಿ ಸೇರಿಕೊಂಡಿರುವ ಭ್ರಮರಗಳ ಝೇಂಕಾರವು ಮೊದಲು ಕೇಳಬಾದುದು; ಬಳಿಕ ಗಂಧದ ಪುಡಿಯಂತೆ ಮಂದಮಾರುತನಿಂದೆರಚಲ್ಪಟ್ಟ ಆ ಪುಷ್ಪಗಳ ಪರಾಗವು ಅಯೋಧ್ಯಾಪುರವಂ ವ್ಯಾಪಿಸಿತು. ಅದರ ಸಂಗಡಲೇ ಮಂಜಿನ ಹನಿಗಳಂತೆ ತನುವಾದ ಮಕರಂದದ ಬಿಂದುಗಳು ಜನಗಳಮೇಲೆಬಿದ್ದವು. ಬಳಿಕ ಇದೇನು ಆಶ್ಚರ್ಯವೆಂದು ಮೇಲ್ಮುಖರಾದ ಪುರಜನರಿಂನೋಡಲ್ಪಡುವ ಪುಷ್ಪಸಮೂಹಗಳು ನೆಲದಮೇಲೆ ಬಿದ್ದವು. ಅರ್ಧಘಳಿಗೆ ಸರಿಯಾಗಿ ಪುಷ್ಪಗಳ ಮಳೆಯು ಬೀಳಲು, ಅದರೊಡನೆಬಂದ ತುಂಬಿಗಳ ಸಂಗೀತದಿಂ ದಶರಥರಾಜಸಭೆಯಲ್ಲಿ ಚಿತ್ರಪ್ರತಿಮೆಗಳಂತಿರ್ದ ಜನರೆಲ್ಲರೂ ಎಚ್ಚತ್ತು ಇದೇನು ಆಶ್ಚರ್ಯವೆಂದು ಸುತ್ತಲೂ ನೋಡುತ್ತಿರಲು, ಕಲ್ಪಾದಿಯಾಗಿ ಸಿದ್ಧಸಮೂಹಗಳಲ್ಲೆಲ್ಲಾ ಕಡೆಯಲ್ಲೂ ತಿರುಗುತ್ತಿರುವ ನಮ್ಮಿಂದೀಗ ಶ್ರುತಿರಸಾಯನವಾಗಿಯೂ, ಸತ್ಯವಾಗಿಯೂ, ಆಶ್ಚರ್ಯಕರವಾಗಿಯೂ, ಮನಸ್ಸಿನ ಮೋಹಕ್ಕೆ ಮೂಲೋಚ್ಛೇದಕವಾಗಿಯೂ, ಬುದ್ಧಿಗೆ ಉಲ್ಲಾಸಕರವಾಗಿಯೂ, ಭೋಗಶಾ ಪಿಶಾಚಿಗಳಿಗೆ ಮಹಾಮಂತ್ರಗಳಾಗಿಯೂ, ರಾಗ ರೋಗಗಳಿಗೆ ನಿರ್ನಾಮಕವಾಗಿಯೂ, ಎಂದಿಗೂ ಕೇಳದ ಶ್ರೀರಾಮನ ಅಭಿರಾಮವಾದ ವಚನಗಳು ಕೇಳಲ್ಪಟ್ಟವು. ಶ್ರೀರಾಮಚಂದ್ರನ ಮುಖಚಂದ್ರನಿಂದಮೃತರಸ ತರಂಗಗಳಂತೆ ಪೊರಮಡುವ ಈ ಜ್ಞಾನವಾಕ್ಯಗಳಂ ಕೇಳಿದ್ದರಿಂದ ನಮ್ಮ ಪುಣ್ಯಗಳಿಗೀಗ ಫಲಿಸಿದವೆಂದು ತೋರುತಲಿಧೆ, ಶ್ರೀರಾಮನ ಈ ಪ್ರಶ್ನೆಗಳಿಗೆ ಮಹಾಮುನಿಗಳಿಂ ಪೇಳಲ್ಪಡುವ ಉತ್ತರಗಳು ಅವಶ್ಯವಾಗಿ ಕೇಳತಕ್ಕಂಥಾವಾದ್ದರಿಂದ ಪದ್ಮಾಕರವಂ ಭ್ರಮರಗಳಂತೆಯೂ ರತ್ನಾಕರವಂ ಮೇಘಗಳಂತೆಯೂ, ದಶರಥರಾಯನ ಸಭೆಯಂ ನಾವು ಸೇರೋಣವೆಂದು ಸಿದ್ಧರ ಮಾತುಗಳು ಕೇಳಬಂದವು; ಸಂಗಡಲೇ ವ್ಯಾಸ, ನಾರದ, ಪುಲಹ, ಪುಲಸ್ತ್ಯ, ಭೃಗ್ವಂಗಿರಚ್ಯವನೋದ್ದಾಲಕ, ಉಶೀರ, ಶರಲೋಮಾದಿ ಮುನಿಗಳ ಸಮೂಹವು ಪರಸ್ಪರಾಂಗಸಂಗದಿಂ ವ್ಯತ್ಯಸ್ತವಾದ ಕೃಷ್ಣಾಜಿನ, ಕಮಂಡಲು,ಜಪಮಾಲೆಗಳುಳ್ಳದ್ದಾಗಿ ಗಗನದಿಂದಿಳಿಯುತ್ತಾ ರತ್ನಗಳಂತೆಯೂ, ನಕ್ಷತ್ರಗಳಂತೆಯೂ, ಬೆಳದಿಂಗಳ ಪ್ರವಾಹದಂತೆಯೂ, ಸೂರ್ಯರ ಸಮೂಹದಂತೆಯೂ, ಚಂದ್ರಮಂಡಲಗಳ ಮಂಡಲಿಯಂತೆಯೂ, ಜನಗಳಿಂ ನೋಡಲ್ಪಡುತ್ತಾ ಅಂತರಿಕ್ಷಮಾರ್ಗದಿಂ ದಶರಥಮಹಾರಾಯನ ಸಭೆಯಂ ಪ್ರವೇಶಿಸಲು, ಆಗ ದಶರಥನೊದಲಾದ ರಾಜರು ಝುಗ್ಗನೆ ಎದ್ದು ಪ್ರಥಮ ಪ್ರಣಾಮವಂ ಮಾಡುತ್ತಿರುವಲ್ಲಿಯೇ ವಶಿಷ್ಟವಿಶ್ವಾಮಿತ್ರರು ಅರ್ಘ್ಯಪಾದ್ಯಾದಿಗಳಿಂ ಪೂಜಿಸುತ್ತಿರಲು, ಪರಸ್ಪರ ಕುಶಲಪ್ರಶ್ನೆಗಳಿಂ ಸಂತುಷ್ಟರಾದ ಆ ಮುನಿಗಳು ಸಾಧುವಾ

ದಗಳಿಂದಲೂ, ಪುಷ್ಪಾಂಜಲಿಗಳಿಂದಲೂ, ಶ್ರೀರಾಮನು ಸನ್ಮಾನಿಸುತ್ತಾ ಯಥೋಚಿತವಾಗಿ ಆಸನಗಳಲ್ಲಿ ಕುಳಿತುಕೊಳ್ಳಲು ದಶರಥನಿಂ ಸನ್ಮಾನಿತರಾದ ಖೇಚರರು, ಭೂಚರರೂ ಸಹ ಸುಖದಿಂ ಕುಳಿತಬಳಿಕ ನಾರದ, ವ್ಯಾಸ, ಮರೀಚಿ, ದೂರ್ವಾಸಾಂಗಿರಸ, ಕ್ರತು, ಪುಲಸ್ತ್ಯ, ಶರರೋಮ, ವಾತ್ಸ್ಯಾಯನ, ಭರದ್ವಾಜ, ವಾಲ್ಮೀಕಿ, ಉದ್ದಾಲಕ, ಋಚೀಕ, ಶರ್ಯಾತಿ, ಚ್ಯವನ, ಮೊದಲಾದ ಮುನೀಶ್ವರರು ಭಯಭಕ್ತಿವಿನಯಗಳಿಂ ತಲೆಯು ತಗ್ಗಿಸಿಕೊಂಡು ಎದುರಿಗೆ ಕುಳಿತಿರುವ ಶ್ರೀರಾಮಚಂದ್ರನಂ ನೋಡುತ್ತಾ ಪೇಳಿದರದೆಂತೆನೆ,—ಜಗತ್ತಿಗೆ ಶ್ರೇಯಸ್ಕರವಾಗಿ ವೈರಾಗ್ಯಸಂಪೂರ್ಣವಾದ ಮಾತುಗಳನ್ನೀಕುಮಾರನು ಹೇಳಿದ್ದು ಅತ್ಯಾಶ್ಚರ್ಯವಾಗಿದೆ. ನಿಶ್ಚಿತಾರ್ಥವಾಗಿಯೂ, ತತ್ವಜ್ಞಾನಗರ್ಭವಾಗಿಯೂ, ಪೂಜ್ಯವಾಗಿಯೂ, ಸ್ಫುಟಾಕ್ಷರವಾಗಿಯೂ, ಉತ್ಕೃಷ್ಟವಾಗಿಯೂ, ಸಂತೋಷಕರವಾಗಿಯೂ, ಸಂಗ್ರಹಯೋಗ್ಯವಾಗಿಯೂ, ನಿಸ್ಸಂದೇಹವಾಗಿಯೂ, ಗಂಭೀರವಾಗಿಯೂ, ಸ್ಫುಟಾಭಿಪ್ರಾಯವಾಗಿಯೂ, ಶ್ರುತಿಮನೋಹರವಾಗಿಯೂ, ದೋಷರಹಿತವಾಗಿಯೂ, ಮೃದುವಾಗಿಯೂ, ಪೂರ್ವಾಪರ ಸಂದರ್ಭಶುದ್ಧವಾಗಿಯೂ, ಪ್ರೌಢವಾಗಿಯೂ, ಅಜ್ಞಾನಪರಿಹಾರಕವಾಗಿಯೂ, ಪ್ರಕಾಶಿಸುವ ಈ ಕುಮಾರನ ವಚನಗಳು ಯಾವನಿಗೆ ತಾನೆ ಆಶ್ಚರ್ಯವನ್ನುಂಟುಮಾಡಲಾರವು! ನೂರುಜನ ವಿದ್ವಾಂಸರಲ್ಲಿ ಒಬ್ಬನಿಗೆ ಇಂಥಾ ಚಮತ್ಕಾರವಾದ ವಾಕ್ಕುಂಟಾಗುವದು. ಈ ರಾಮಭದ್ರನ ಬುದ್ಧಿಯಂತೆ ಯಾವನ ಬುದ್ಧಿಯೂ, ಲತೆಯಂತೆ ವಿವೇಕದಿಂ ಫಲ ಸಂಪೂರ್ಣವಾಗಲಾರದು; ಇವನ ಪ್ರಜ್ಞೆಯಂತೆ ಯಾವನ ಪ್ರಜ್ಞೆಯೂ ಸಾಧಾರಣವಲ್ಲದ ಪ್ರಕಾಶದಿಂ ಮಣಿದೀಪದಂತೆ ಪ್ರಕಾಶಿಸುವದೋ ಅವನೇ ಪುರುಷನೆನಿಸಿಕೊಳ್ಳುವನು; ರಕ್ತಮಾಂಸಾಸ್ಥಿಮಯವಾದ ದೇಹವನ್ನೇ ತಾನೆಂದು ನಿಶ್ಚಯಿಸಿ ಅಂಥಾ ಪದಾರ್ಥಗಳನ್ನೇ ಶೆಳದಾಡುತ್ತಿರುವ ಜನರಿಗೆ ಚೈತನ್ಯವೆಂಬುವದು ಎಲ್ಲಿರುವದು! ಜನ್ಮ ಮೃತ್ಯು ಜರಾ ದುಃಖಮಯವಾದ ಸಂಸಾರದಲ್ಲಿ ನೆಲಸಿರುವ ಅವರಿಗೂ ಪಶುಗಳಿಗೂ ಹೆಚ್ಚು ಕಡಮೆ ಏನಿರುವದು! ಈ ಶ್ರೀರಾಮನಂತೆ ಪೂರ್ವಾಪರ ವಿಚಾರವಂ ಮಾಡುವ ಸುಮತಿಯು ಸಾಧಾರಣವಲ್ಲದ ಶೀ ಮಾವಿನ ಮರದಂತೆಯೂ ಅತಿ ಸುರಭಿಯಾದ ಗಂಧದ ಮರದಂತೆಯೂ ಮನೋಹರವಾದ ಲವಂಗದ ಮರದಂತೆಯೂ ಹುಡುಕುವದಕ್ಕೆ ಯೋಗ್ಯನಾಗಿರುವನು; ಚಂದ್ರನಲ್ಲಿ ಚಂದ್ರಿಕೆಯಂತೆಯೂ, ಶೀ ಮಾವಿನಮರದಲ್ಲಿ ಗೊಂಚಲಿನಂತೆಯೂ, ಮಲ್ಲಿಗೆ ಹುವ್ವಿನಲ್ಲಿ ಪರಿಮಳಪ್ರವಾಹದಂತೆಯೂ, ಮನೋಹರವಾದ ಜ್ಞಾನಚಮತ್ಕಾರವು ಈ ರಾಮಭದ್ರನಲ್ಲಿಯೊಳಿ ದೆ

ಷ್ಟವಾಯಿತು; ಸಹಿಸಲಶಕ್ಯವಾದ ದೋಷಗಳುಳ್ಳ ಜನ್ಮಾಂತರ ಕರ್ಮ ಪರಿಣಾಮದಿಂ ಬ್ರಹ್ಮನಿಂ ನಿರ್ಮಿತವಾದ ಈ ಸಂಸಾರದಲ್ಲಿ ಸಾರವಾದ ಸ್ವರೂಪಜ್ಞಾನಕ್ಕೋಸುಗ ಯಾರು ಪ್ರಯತ್ನಂ ಮಾಡುವರೋ ಅವರೇ ಸತ್ಪುರುಷರ ಸವಿಸಾಪದಲ್ಲಿ ಗಣನೆಗೆ ಯೋಗ್ಯರಾದವರು, ಆದರೆ ರಾಮನಂತೆ ವಿವೇಕಿಯಾದ ಪ್ರೌಢಮತಿಯೂ ಯಾವನೂ ಇಲ್ಲ, ಪೂರ್ವದಲ್ಲೂ ನಮ್ಮಿಂದ ನೋಡಲ್ಪಡಲಿಲ್ಲ. ಸಕಲ ಲೋಕಗಳಿಗೂ ಸಂತೋಷಕರವಾದ ಚಮತ್ಕಾರವುಳ್ಳ ಶ್ರೀರಾಮಭದ್ರನ ಪ್ರಶ್ನೆಗಳಿಗೆ ಸರಿಯಾದ ಉತ್ತರವಾಗದೆ ಅವನ ಮನಸ್ಸಮಾಧಾನವಾಗದಿದ್ದಲ್ಲಿ ಮುನಿಗಳೆಂದು ಪ್ರಸಿದ್ಧರಾದ ನಮ್ಮೆಲ್ಲರ ಪ್ರಜ್ಞೆಯು ವ್ಯರ್ಥವಾಗುವದು. ಎಂದು ನಾರದಾದಿಗಳು ಪೇಳುತ್ತಿದ್ದರೆಂಬಲ್ಲಿಗೆ ವೈರಾಗ್ಯ ಪ್ರಕರಣದಲ್ಲಿ ಪುಷ್ಪವರ್ಷಾದಿ ನಿರೂಪಣವೆಂಬ ಐದನೇ ತರಂಗಕ್ಕೆ ಮಂಗಳಮಹಾ. ಶ್ರೀ. ಶ್ರೀ.

ವೈರಾಗ್ಯಪ್ರಕರಣ ಸಮಾಪ್ತವು.

ಮುಮುಕ್ಷು ಪ್ರಕರಣ. ಪ್ರಥಮ ತರಂಗ ಪ್ರಾರಂಭಃ.

## ಶುಕಜ್ಞಾನೋತ್ಪತ್ತಿ ನಿರೂಪಣ.

ಬಳಿಕ ಮಹಾ ಮುನಿಯಾದ ವಿಶ್ವಾಮಿತ್ರನು ಶ್ರೀರಾಮಚಂದ್ರನಂ ಕುರಿತಿಂತೆಂದನು. ಎಲೈ ರಾಮಭದ್ರನೇ ! ಸ್ವಬುದ್ಧಿಯಿಂದಲೇ ಸರ್ವವನ್ನು ವಿಚಾರಿಸಿ ಪರಮಾರ್ಥವಂ ತಿಳಿದ ನಿನಗೆ ತಿಳಿಯತಕ್ಕಂಥಾದ್ದು ಮತ್ತೊಂದಿಲ್ಲ; ಆದರೆ ಕನ್ನಡಿಯ ಮೇಲಣ ಧೂಳಿಯಂ ತೊಡೆಯುವಂತೆ ನಿನ್ನ ಬುದ್ಧಿಗೆ ಬಂದ ಸಂದೇಹವು ಪೋಗಲಾಡಿಸತಕ್ಕದ್ದಾಗಿಧೆ. ವ್ಯಾಸಪುತ್ರನಾದ ಶುಕನ ಪ್ರಜ್ಞೆಯಂತೆ ನಿನ್ನ ಪ್ರಜ್ಞೆಯು ತಿಳಿಯತಕ್ಕ ವಸ್ತುವಂ ತಿಳಿದಿದ್ದಾಗ್ಯೂ ಬಳಗಿನ ವಿಶ್ರಾಂತಿ ಸುಖವನ್ನಪೇಕ್ಷಿಸುತಲಿಧೆಯೆಂದು ಪೇಳುತ್ತಾ ಎಲೈ ಮಹಾತ್ಮನೇ ! ಶುಕಮುನೀಶ್ವರನ ಬುದ್ಧಿಯು ತಿಳುವಳಿಕೆಗೆ ಗೋಚರವಾದ ವಸ್ತುವಿನಲ್ಲಿ ಮೊದಲು ವಿಶ್ರಾಂತಿಯಂ ಪಡೆಯದೆ ಪುನಃ ವಿಶ್ರಾಂತಿಯಂಹೊಂದಿದ್ದು ಹ್ಯಾಗೆ? ಅದಂ ನಿರೂಪಿಸುವನಾಗೆಂದು ಬೆಸಗೊಳ್ಳುವ ರಾಮನಂ ಕುರಿತು ಪುನಃ ಪೇಳಿದನೆಂತೆನೆ; ಎಲೈ ರಘುಶ್ರೇಷ್ಠನೇ ! ನಿನಗೆ ಸರಿಯಾದ ಶುಕನ ವೃತ್ತಾಂತವಂ ಕೇಳುವನಾಗು; ಷಡ್ಗುಣೈಶ್ವರ್ಯ ಸಂಪೂರ್ಣನಾದ ಈ ವೇದವ್ಯಾಸನಿಗೆ ಮಗನಾದ ಶುಕನು ನಿನ್ನಂತೆ ಈ ಜಗತ್ತಿನ ಉತ್ಪತ್ತಿ ಮೊದಲಾದುದನ್ನಾಲೋಚಿಸುತ್ತಾ, ತತ್ವಜ್ಞಾನವಂ ಪಡದನು. ಸರ್ವಸಾಧಾರಣವಾಗಿ ಪ್ರಸಿದ್ಧವಲ್ಲದ ವಸ್ತುವಿನಲ್ಲಿ

ಪ್ರಾಜ್ಞಾನುಮತಿಯಿಲ್ಲದೆ ನಂಬಿಕೆ ಉಂಟಾಗುವದಿಲ್ಲವಾದ್ದರಿಂದ ಆ ಶುಕಮುನಿಯ ಮನವು ವಿಶ್ರಾಂತಿಯಂ ಹೊಂದದೆ ಸಂದೇಹದಿಂ ಚಂಚಲವಾಗಿದ್ದುದು ಸರಸವಲ್ಲವೆಂಬ ನಿಶ್ಚಯದಿಂದ ಅಕಾಲವೃಷ್ಟಿಯ ಜಲಧಾರೆಗಳಂ ಚಾತಕದಂತೆ ಭೋಗಗಳಂ ಗ್ರಹಿಸದೆ ವೈರಾಗ್ಯದಿಂ ಪೂರ್ಣವಾಗಿದ್ದುದು. ಬಂದಾನೊಂದು ಕಾಲದಲ್ಲಿ ಮೇರುಪರ್ವತದೊಳೇಕಾಂತದಲ್ಲಿ ಕುಳಿತಿರುವ ಈ ವೇದವ್ಯಾಸನನ್ನು ಆ ಶುಕಮುನಿಯು ಪ್ರಶ್ನೆಗೈದನದೆಂತೆಂದರೆ:—ಎಲೈ ಗುರುವೆ! ಆಡಂಬರವಾಗಿ ಕಾಣುವ ಈ ಸಂಸಾರವು ಹ್ಯಾಗೆ ಪುಟ್ಟಿತು, ಹ್ಯಾಗೆ ಶಾಂತವಾಗುವದು ? ಇದು ಎಷ್ಟು ಪ್ರಮಾಣವುಳ್ಳಂಥಾದ್ದು, ಯಾವಾಗ ಪುಟ್ಟಿತು, ಯಾವಾಗ ಶಾಂತವಾಗುವದು, ಇದು ಆತ್ಮನಿಗೊ ? ಅಂತಃಕರಣಕ್ಕೋ ? ಇಂದ್ರಿಯಗಳಿಗೋ, ಪ್ರಾಣಗಳಿಗೋ, ದೇಹಕ್ಕೋ, ಇದರ ಸುಖದುಃಖಸಂಬಂಧವು, ಯಾವದಕ್ಕೆ, ಇದೆಲ್ಲವನ್ನು ಪೇಳಬೇಕು, ಎಂದು ಕೇಳುವ ಶುಕನಂ ಕುರಿತು ಈ ವ್ಯಾಸನು ಈ ಪ್ರಪಂಚದ ಕ್ರಮವನ್ನು ಪೇಳುತ್ತಾ, ಎಲೈ ತಂದೆಯೇ ! ನೀನು ಪೇಳಿದ ಈ ಅರ್ಥವು ನನ್ನಿಂದಲೇ ತಿಳಿಯಲ್ಪಟ್ಟಿರುವದೆಂದು ತಾನು ಪೇಳಿದ್ದಂ ಪರಿಗ್ರಹಿಸದಿರುವ ಮಗನ ಅಭಿಪ್ರಾಯವಂ ತಿಳಿದು "ಹಿತ್ತಲುಗಿಡ ಮದ್ದಾದೀತೇ" ಎಂಬ ಗಾದೆಯು ಸರಿಯಾದುದೆಂದಾಲೋಚಿಸಿ, ಎಲೈ ಮಗನೇ ! ಈ ವಿಷಯವೆಲ್ಲವನ್ನು ಜನಕರಾಯನು ಚನ್ನಾಗಿ ತಿಳದಿರುವನಾದ್ದರಿಂದ ಅವನಂ ಕೇಳಿ ತಿಳಕೊಳ್ಳುವನಾಗೆಂದು ಪೇಳಿದನು. ಬಳಿಕ ಶುಕಮುನಿಯು ಮಿಥಿಲಾಪುರಕ್ಕೆ ಬಂದು ಅರಮನೆಯ ಬಾಗಿಲಲ್ಲಿ ನಿಂದಿರಲು, ದ್ವಾರಪಾಲಕರಿಂದವನ ಆಗಮನವಂ ತಿಳಿದ ಜನಕರಾಯನು ಜ್ಞಾನದೃಷ್ಟಿಯಿಂದವನು ಬಂದ ಕಾರ್ಯವಂ ತಿಳಿದು ಅವನ ಚಿತ್ತವೃತ್ತಿಯಂ ತಿಳಿಯಲೋಸುಗ ಹಾಗಿರಲೆಂದು ಉದಾಸೀನಭಾವದಿಂ ಪೇಳಿ ಸುಮ್ಮನಿದ್ದನು. ಏಳುದಿನಪರ್ಯಂತವು ಬಾಗಿಲಲ್ಲಿಯೇ ಶುಕನು ನಿಂದಿರಲು ಅರಮನೆವಳಗನ ಅಂಗಳಕ್ಕೆ ಅವನಂ ಕರತಂದು ಬಿಡುವಂತೆ ಊಳಿಗದವರಿಗೆ ಆಜ್ಞಾಪಿಸಿದನು. ಅಂಗಳದಲ್ಲಿ ಏಳುದಿವಸ ಇದ್ದಬಳಿಕ ಆ ಶುಕನನ್ನಂತಃಪುರವಂ ಹೊಂದಿಸಿ ಪರಿಪರಿಯಾಗಿ ಉಪಚರಿಸುವಂತೆ ಸ್ತ್ರೀರಿಗೆ ನೇಮಿಸಿದನು. ಅಲ್ಲಿ ಮದಾಧಿಕರಾದ ಪ್ರಮದೇಯರಿಂದುಪಚರಿಸಲ್ಪಡುವ ಆ ಮುನಿಯ ಮನವು ಅಂತಃಪುರದ ಗಂಧಮಾಲ್ಯಾಹಾರಗಳಿಂದಲೂ, ಪೂರ್ವದಲ್ಲಿ ಊಳಿಗದವರು ಮಾಡಿದ ಅವಮಾನಗಳಿಂದಲೂ, ಸುಳಿಗಾಳಿಗಳಂ ಗಿರಿಯಂತೆ ಅಲ್ಲಾಡಿಸಲ್ಪಡಲಿಲ್ಲ. ಸ್ವಯಂಪ್ರಕಾಶನಾದ ಪರಮಾತ್ಮನ ಮಹಿಮವಿಚಾರದಿಂ ಜಿತೇಂದ್ರಿಯನಾದ ಆ ಮುನೀಂದ್ರನು ಅಕಳಂಕನಾದ ಪೂರ್ಣ

ಚಂದ್ರನಂತೆ ಆ ಸುಂದರಿಯರಿಗೆ ದರ್ಶನಮಾತ್ರದಿಂದಾನಂದಕರನಾಗಿದ್ದನು. ಇಂತು ಇಪ್ಪತ್ತೊಂದು ದಿನಗಳಾದ ಬಳಿಕ ವಿಸ್ಮಿತನಾದ ಆ ಜನಕರಾಯನು ಆ ಮುನಿಯಂ ಸಮೀಪಕ್ಕೆ ಕರತರಿಸಿ ಸಾಷ್ಟಾಂಗ ಪ್ರಣಾಮಮಂಗೈದು ಎಲೈ ಮಹಾಮುನಿಯೇ! ಸ್ವರೂಪಸಾಕ್ಷಾತ್ಕಾರದಿಂ ಪೂರ್ಣನಾಗಿ ಹೊರಗಣ ಕೆಲಸಗಳಲ್ಲಿ ಅಪೇಕ್ಷೆಯಡಗಿದ ನೀನು ಇಲ್ಲಿಗೆ ದಯಮಾಡಿಶಿದ್ದಕ್ಕೆ ಕಾರಣವೇನೆಂದು ಕೇಳಲು, ಆ ಶುಕನು ಪೂರ್ವದಂತೆ ಪ್ರಶ್ನೆಯಂಗೈದು ತಂದೆಯಂತೆ ಅವನೂ ಪೇಳಲು ಮರಳಿ ಇಂತೆಂದನು. ಎಲೈ ರಾಯನೆ! ಆತ್ಮನಲ್ಲವೆಂದು ನಿಷೇಧಿಸುವದಕ್ಕೆ ಯೋಗ್ಯವಾದ್ದರಿಂದ ಅಸತ್ಯವೆನಿಸಿಕೊಳ್ಳುವ ಪ್ರಪಂಚಕ್ಕೆ ಭಿನ್ನವಾದ್ದರಿಂದ ಸತ್ಯವೆಂತಲೂ, ಜಡವಾದ ಈ ಪ್ರಪಂಚಕ್ಕೆ ಅದರದರ ವ್ಯಾಪಾರ ಯೋಗ್ಯತೆಯನ್ನುಂಟುಮಾಡುತ್ತಾ ಅದಕ್ಕೆ ಭಿನ್ನವಾಗಿರುವದ್ದರಿಂದ ಜ್ಞಾನವೆಂತಲೂ, ಶಾಂತವಾದ ಈ ಪ್ರಪಂಚವಂ ವ್ಯಾಪಿಸಿಕೊಂಡಿದ್ದಾಗ್ಯೂ ಅದರ ಸುಖದುಃಖಾದಿ ಸಂಬಂಧವಿಲ್ಲದ್ದರಿಂದ ಅನಂತನೆಂತಲೂ, ಬ್ರಹ್ಮವು ಶ್ರುತಿಯಿಂದ ಪೇಳಲ್ಪಡುವದು, ಇದಕ್ಕೆ ದೀಪಕ್ಕೆ ಜ್ವಾಲೆಯಂತೆ ಸ್ವಾಭಾವಿಕವಾದ ಜ್ಞಾನೇಚ್ಛಾಕ್ರಿಯಾಶಕ್ತಿಗಳಿರುವದ್ದರಿಂದ ಸ್ವಾಭಾವಿಕವಾಗಿಯೇ ವಿಹರಿಸಲಿಚ್ಛೆಯುಂಟಾಗುವದು. ವಿಹಾರಸಹಾಯವಾದ ಎರಡನೇ ವಸ್ತುವಂ ನೋಡುವ ಇದರ ಇಚ್ಛಾಮಾತ್ರದಿಂದ ಭ್ರೂಮಧ್ಯದಲ್ಲಿ ನೇತ್ರದ ತೇಜಸ್ಸು ಕಾಣುವಂತೆ ಈ ಶಕ್ತಿಗಳ ಪ್ರಕಾಶವು ಗೋಚರವಾಗುವದು. ಅಭಿನ್ನವಾದ ಆ ಪ್ರಕಾಶವಂ ಭಿನ್ನವಾಗಿ ತೋರಿಸುವ ಜ್ಞಾನಶಕ್ತಿಯೇ ಆಗ ಅಜ್ಞಾನರೂಪವಾದ ಮಾಯೆಯೆನಿಸಿಕೊಳ್ಳುವದು. ಇದಕ್ಕೆ ಆಶ್ರಯವಾದ್ದರಿಂದ ಆ ಶಕ್ತಿಪ್ರಕಾಶವೂಕೂಡ ಸತ್ವರಜಸ್ತಮೋಗುಣಾತ್ಮಕವಾದ ಮಾಯೆ ಎನಿಸಿಕೊಳ್ಳುವದು. ಇದು ಸತ್ವಪ್ರಾಧಾನ್ಯದಿಂ ಮಾಯೆಎಂತಲೂ, ರಜಃಪ್ರಾಧಾನ್ಯದಿಂ ಮಲಿನಸತ್ವೆಎಂತಲೂ, ತಮಃಪ್ರಾಧಾನ್ಯದಿಂ ತಮಃಪ್ರಧಾನೆ ಎಂತಲೂ, ಮೂರು ಪ್ರಕಾರವಾಗಿ ಪೇಳಲ್ಪಡುವದು. ಮಲಿನಸತ್ವೆಯೂ, ತಮಃಪ್ರಧಾನೆಯೂ ಕೂಡ ಅವಿದ್ಯೆ ಎನಿಸಿಕೊಳ್ಳುವದು. ಸತ್ವರಜಸ್ತಮಸ್ಸುಗಳನ್ನು ಜಗತ್ತಿಗೆ ಕಾರಣವಾದ ಪರಮಾಣುಗಳೆಂದು ಪೇಳುವರು. ಇದರ ದರ್ಶನವಾದಕೂಡಲೇ ಆ ಪರಮಾತ್ಮನಿಗೆ ನಾನು ನನ್ನದೆಂಬ ಜ್ಞಾನ ಉಂಟಾಯಿತು. ನನ್ನದಿದೆಂಬುವದಕ್ಕೆ ವಿಷಯವಾದ ಗುಣತ್ರಯವಂ ತನ್ನ ಶರೀರವೆಂದು ಪರಿಗ್ರಹಿಸಿದ ಆ ಪರಮಾತ್ಮನು ಮಾಯೋಪಾಧಿಯಾದ ಈಶ್ವರನೆನಿಸಿಕೊಳ್ಳುವನು; ಬಹುರೂಪವಾಗಿ ಕ್ರೀಡಿಸಬೇಕೆಂದು ಇಚ್ಛೈಸಿದ ಈಶ್ವರನ ಇಚ್ಛಾಮಾತ್ರದಿಂ ಸತ್ವಪ್ರಧಾನವಾದ ಅವನ ಶರೀರ

ದಿಂದಲೇ ಅಗ್ನಿಯಿಂದ ಕಿಡಿಗಳಂತೆ ಪಂಚಾಂತಃಕರಣಗಳು, ಪಂಚಪ್ರಾಣಗಳು, ದಶೇಂದ್ರಿಯಗಳು, ಪಂಚತನ್ಮಾತ್ರೆಗಳು ಸಹಾ ಪುಟ್ಟಿದವು; ಇವುಗಳ ಸಮೂಹವೇ ಸೂಕ್ಷ್ಮಶರೀರವೆನಿಸುವದು. ಇದನ್ನಭಿಮಾನಿಸಿದ ಈಶ್ವರನೇ ಹಿರಣ್ಯಾಗರ್ಭನೆನಿಸಿಕೊಳ್ಳುವನು, ಆದಿಜೀವನಾದ ಈ ಹಿರಣ್ಯಗರ್ಭನ ಸಂಕಲ್ಪಮಾತ್ರದಿಂ ಚತುರ್ದಶಲೋಕಾತ್ಮಕವಾದ ಈ ಪ್ರಪಂಚ ಉಂಟಾಯಿತು, ಇದೇ ಪರಮಾತ್ಮನಿಗೆ ಸ್ಥೂಲಶರೀರವೆನಿಸಿಕೊಳ್ಳುವದು, ಇದಂ ಪರಿಗ್ರಹಿಸಿದ ಹಿರಣ್ಯಾಗರ್ಭನು ವಿರಾಟನೆನಿಸಿಕೊಳ್ಳುವನು, ಮಾಯೋಪಾಧಿಯಾದ ಈಶ್ವರನು ಗುಣಭೇದದಿಂ ಬ್ರಹ್ಮ, ವಿಷ್ಣು, ರುದ್ರನೆಂದು ಮೂರು ರೂಪಗಳಂ ವಹಿಸಿದನು. ಇವರಲ್ಲಿ ಸೃಷ್ಟಿಕರ್ತೃವಾದ ಬ್ರಹ್ಮನು ಚತುರ್ದಶಲೋಕದಲ್ಲಿರುವ ಪ್ರಾಣಿಗಳಂ ಸೃಜಿಸಿ ಕರ್ಮಕಾಂಡ ಬ್ರಹ್ಮಕಾಂಡಾತ್ಮಕವಾದ ಶಾಸ್ತ್ರಗಳೆಲ್ಲವನ್ನು ಪ್ರಕಾಶಪಡಿಸಿದನು; ಇವರ ಸೃಷ್ಟಿಯಲ್ಲಿ ಈಶ್ವರ ಶರೀರಾಂಶಗಳಿಂದಲೇ ಇವರ ಸ್ಥೂಲಾದಿ ಶರೀರಗಳುಂಟಾದವು. ಈಶ್ವರನಿಗೂ ಜೀವರಿಗೂ ಉಪಾಧಿಯಾದ ಮಾಯಾಅವಿದ್ಯೆಗಳ ಭೇದದಿಂದ ಸರ್ವಜ್ಞತ್ವಾಲ್ಪಜ್ಞತ್ವಾದಿಗುಣ ಭೇದವುಂಟಾಗಿರುವದಲ್ಲದೆ ಚೈತನ್ಯಾಂಶದಲ್ಲಿ ಭೇದವಿಲ್ಲ. ನಾನು ನನ್ನದೆಂಬ ಜ್ಞಾನಕ್ಕೆ ಗೋಚರವಾದ ಚಿಜ್ಜಡಪದಾರ್ಥಗಳ ಸತ್ವವಂ ವಿಚಾರಿಸುವಲ್ಲಿ ಚಿತ್ಪದಾರ್ಥಸತ್ವವೇ ಜಡಪದಾರ್ಥಗಳಿಗೆ ಅವಲಂಬನವೆಂದು ನಿಶ್ಚಯಿಸಲ್ಪಡುವದ್ದರಿಂದ ಚಿತ್ತೇ ಜಡವಾಗಿ ತೋರುವದಲ್ಲದೆ ಜಡವಾದ ಪದಾರ್ಥವು ಬೇರೆ ಇಲ್ಲವೆಂತಲೂ, ಜಡಸಂಬಂಧಿಯಾದ ಸುಖದುಃಖಗಳೆಲ್ಲವು ಉಪಾಧಿಯಾದ ಆ ವಿದ್ಯೆಯ ಪ್ರಭಾವದಿಂ ತೋರುವದೆಂತಲೂ, ಈಶ್ವರನಿಗೆ ಉಪಾಧಿಯಾದ ಮಾಯೆಯೂ ಸತ್ವಪ್ರಧಾನವಾದ್ದರಿಂದ ಸ್ವರೂಪಜ್ಞಾನಕ್ಕೆ ಚ್ಯುತಿಯಿಲ್ಲದೆ ನಾನು ನನ್ನದೆಂಬ ಜ್ಞಾನವಂ ಪಿಡಿದು ನಾನಾಪ್ರಕಾರದಿಂ ವಿಹರಿಸುತ್ತಿದ್ದಾಗ್ಯೂ ಈಶ್ವರನು ನಿತ್ಯಾನಂದನಾಗಿರುವನು. ಜೀವರಾದರೋ ಸ್ವೋಪಾಧಿಯಾದ ಅವಿದ್ಯೆಯ ಪ್ರಭಾವದಿಂದ ಸ್ವರೂಪವಂ ಮರತು ಜಡವಾದ ದೇಹವೇ ತಾವೆಂತಲೂ, ಅದಕ್ಕೆ ಭಿನ್ನವಾಗಿ ಗೋಚರವಾಗುವ ಪದಾರ್ಥಗಳು ತಮ್ಮದೆಂತಲೂ ನಿಶ್ಚೈಸಿ ಅವಿದ್ಯಾಸಂಬಂಧಿಗಳಾದ ಆವರಣ ವಿಕ್ಷೇಪಶಕ್ತಿಗಳ ಬಾಧೆಯಿಂ ದುಃಖಪಡುತ್ತಿರುವರೆಂತಲೂ ಚಿಜ್ಜಡ ವಿವೇಕದಿಂದ ಚಿದ್ರೂಪನು ತಾನೆಂದು ತಿಳಿದು ನಿತ್ಯಾನಿತ್ಯವಿಚಾರದಿಂದ ದೃಶ್ಯವೆಲ್ಲವೂ ಅಸತ್ಯವೆಂದು ನಿಶ್ಚೈಸಿ ಸ್ವರೂಪಮಹಿಮ ಜ್ಞಾನದಿಂ ನಾನು ನನ್ನದೆಂಬ ಭೇದಜ್ಞಾನವು *ಅಳಿಯೆ ಅಖಂಡಾಕಾರವೃತ್ತಿಯಿಂ ಜೀವರು ಕೃತಾರ್ಥ

* ಅಳಿಯೆ-ಹೋಗಲಾಗಿ.

ರಾಗುವರೆಂತಲೂ, ಜಗತ್ತಿನ ಕ್ರಮವಂ ವಿಚಾರಿಸುವ ನನಗೆ ಪ್ರಥಮತಃ ತೋರಿತು. ಎಲೈ ರಾಜರ್ಷಿಯೇ! ನನಗೆ ತೋರಿದ ಈ ಅರ್ಥವನ್ನೇ ಪ್ರಶ್ನೆಯಂ ಮಾಡುವ ನನಗೆ ನಮ್ಮ ತಂದೆಯು ನಿರೂಪಿಸಿದನು. ಶಾಸ್ತ್ರಗಳಲ್ಲಿ ನೋಡಿದರೂ ಇದೇ ಅರ್ಥವು ಕಾಣುತಲಿಧೆ. ಈ ಅರ್ಥವನ್ನೇ ನೀನೂ ನಿರೂಪಿಸುತ್ತೀಯೆ, ಇದೇ ಸತ್ಯವಾದಲ್ಲಿ ಪುನಃ ಹೇಳುವನಾಗು, ನಾನು ಜಗದ್ಭ್ರಮೆಯಂ ಬಿಟ್ಟು ವಿಶ್ರಾಂತನಾಗುವೆನು ಎಂದು ಕೇಳುವ ಶುಕಮುನಿಯಂ ಕುರಿತು ಜನಕರಾಯನಿಂತೆಂದನು. ಎಲೈ ವ್ಯಾಸಪುತ್ರನೆ! ಅಖಂಡನಾದ ಪರಮಾತ್ಮನೊಬ್ಬನೇ ನಾನಾಪ್ರಕಾರವಾಗಿ ತೋರುವನಲ್ಲದೆ ಅವನಿಗೆ ಭಿನ್ನವಾದ ಪದಾರ್ಥವಿಲ್ಲವೆಂಬುವದು ನಿಶ್ಚಯುವಾದದ್ದು. ಶಾಸ್ತ್ರದಿಂದಲೂ, ಗುರುವಿನಿಂದಲೂ, ಸ್ವಾನುಭವದಿಂದಲೂ, ಈ ಅರ್ಥವು ಗೊತ್ತಾದಬಳಿಕ ಪುನಃ ಈ ವಿಷಯದಲ್ಲಿ ಸಂದೇಹಪಡುವದಕ್ಕೆ ಕಾರಣವೇನು. ಪರಮಾತ್ಮನ ಮಹಿಮೆಯು ಗೋಚರವಾಗದೆ ಅವನಿಗೆ ಭಿನ್ನವೆಂದು ಪದಾರ್ಥವಂ ತಿಳಿಯುವದ್ದರಿಂದ ಬಂಧವುಂಟಾಗುವದು, ವಿಚಾರದಿಂದವನ ಮಹಿಮೆಯಂ ತಿಳಿದು ಪದಾರ್ಥಕಲ್ಪನೆಯಂ ಬಿಟ್ಟಂಥಾವನು ಮುಕ್ತನಾಗುವನು. ನಿತ್ಯಾನಿತ್ಯವಿಚಾರದಿಂ ಭೋಗಗಳಲ್ಲಿ ವಿರಕ್ತನಾದ ನೀನು ಸ್ವಬುದ್ಧಿಯಿಂದಲೆ ಸ್ವರೂಪವಂ ನಿರ್ಧರಿಸಿ ದೃಶ್ಯಸಾಮಾನ್ಯವನ್ನೀಗ ತ್ಯಜಿಸಿದ್ದೀಯೆ; ವೈರಾಗ್ಯದಿಂ ದಿಂದ್ರಿಯನಿಗ್ರಹವಂಮಾಡಿ ಸ್ವರೂಪದಲ್ಲಿಯೇ ಮತಿಯಂ ನಿಲ್ಲಿಸಿ ದೀರ್ಘರೋಗಗಳಾದ ಭೋಗಗಳಂ ತ್ಯಜಿಸಿರುವ ನಿನಗೆ ಕೇಳತಕ್ಕದ್ದೇನಿರುವದು. ಸರ್ವಜ್ಞನಾಗಿ ತಪಸ್ಸಿನಲ್ಲಿ ನಿತ್ಯಸ್ಥಿತಿಯುಳ್ಳ ವ್ಯಾಸನಿಗೆ ನಿನ್ನಂತೆ ಜ್ಞಾನವುಂಟಾಗಲಿಲ್ಲ. ಜ್ಞಾನವಿಷಯದಲ್ಲಿ ನಿಮ್ಮ ತಂದೆಗಿಂತಲೂ, ನಾನು ಅಧಿಕನಾಗಿರುವೆನು. ಅತ್ಯಂತವಾಗಿ ಭೋಗಾಪೇಕ್ಷೆ ಇಲ್ಲದ್ದರಿಂದ ನನಗಿಂತಲೂ ನೀನು ಅಧಿಕನಾಗಿದ್ದೀಯೆ, ಪಡೆಯತಕ್ಕದ್ದಂ ಪಡದಿರುವದ್ದರಿಂದ ಪೂರ್ಣವಾದ ಮತಿಯುಳ್ಳ ನೀನು ದೃಶ್ಯಭ್ರಾಂತಿ ಇಲ್ಲದ್ದರಿಂದ ಮುಕ್ತನಾಗಿದ್ದೀಯೆ. ಈ ವಿಷಯದಲ್ಲಿ ಸಂದೇಹಪಡಬ್ಯಾಡ ಎಂದು ಜನಕರಾಯನಿಂ ಹೇಳಲ್ಪಟ್ಟ ಶುಕಮುನಿಯು ಸಂತುಷ್ಟನಾಗಿ ಮೇರುಶಿಖರವಂ ಕುರಿತು ಪೋಗಿ ಅಲ್ಲಿ ಹತ್ತು ಸಹಸ್ರ ವರ್ಷ ನಿರ್ವಿಕಲ್ಪ ಸಮಾಧಿಯಲ್ಲಿದ್ದು ಈಚೆಗೆ ಹಾರಿಬಿದ್ದಿದ್ದ ಜಲಕಣವು ಪುನಃ ಸಮುದ್ರದಲ್ಲಿ ಐಕ್ಯವಂ ಪಡೆಯುವಂತೆ ಪರಮಾತ್ಮನ ಸಾಯುಜ್ಯಸಂಪದವಂ ಪಡದನು. ಎಲೈ ಶ್ರೀರಾಮಭದ್ರನೇ! ಆ ಶುಕಮುನಿಯಂತೆ ಜ್ಞಾನಿಯಾದ ನಿನಗೂ ಸಂದೇಹಮಾತ್ರ ನಾಶವಾಗಬೇಕಾಗಿಧೆಯಲ್ಲದೆ ಮತ್ತೇನು ಇಲ್ಲವೆಂದು ವಿಶ್ವಾಮಿತ್ರನು ಶ್ರೀರಾಮನಂ ಕುರಿತು ಹೇಳವನೆಂಬಲ್ಲಿಗೆ

ಜ್ಞಾನಯೋಗ ತರಂಗಿಣಿಯಲ್ಲಿ ವೈರಾಗ್ಯಪ್ರಕರಣದೊಳ್ ಶುಕಜ್ಞಾನೋತ್ಪತ್ತಿ ನಿರೂಪಣವೆಂಬ ಮೊದಲನೇ ತರಂಗಕ್ಕೆ ಮಂಗಳಮಸ್ತು.

ಮುಮುಕ್ಷು ಪ್ರಕರಣದಲ್ಲಿ ಎರಡನೇ ತರಂಗ ಪ್ರಾರಂಭಃ.

## ಪೌರುಷಸ್ಥಾಪನ ಜ್ಞಾನಾವತರಣ ನಿರೂಪಣ.

ಇಂತು ಶ್ರೀರಾಮಚಂದ್ರನಂ ಕುರಿತು ಪೇಳಿದ ವಿಶ್ವಾಮಿತ್ರನು ಮುನಿಗಳಂ ಕುರಿತು ಪೇಳಿವನದೆಂತೆನೆ,—ಎಲೈ ಮುನಿಗಳಿರಾ ! ರೋಗಗಳಂತೆ ಭೋಗಗಳು ವಿರುದ್ಧವಾಗುವದೇ ಜ್ಞಾನಿಗೆ ಲಕ್ಷಣವಾದ್ದರಿಂದ ಭೋಗಾಪೇಕ್ಷೆಯಿಲ್ಲದ ಈ ಶ್ರೀರಾಮಚಂದ್ರನು ತಿಳಿಯತಕ್ಕ ತತ್ವಾರ್ಥವಂ ತಿಳಿದಿಧಾನೆಯೆಂದು ತಿಳಿಯತಕ್ಕದ್ದು. ವಸ್ತುವಲ್ಲದ ಭೋಗ್ಯಪದಾರ್ಥ ಸಂಬಂಧದಿಂದುಂಟಾಗುವ ಬಂಧವು ವಾಸನೆಯಿಂದಲೇ ದೃಢವಾಗುವದ್ದರಿಂದ ವಾಸನೆಯಳಿಯುವದೇ ಮೋಕ್ಷವೆನಿಸಿಕೊಳ್ಳುವದು. ಎಲೈ ತಪೋಧನರಾ ! ದೃಗ್ದೃಶ್ಯ ವಿವೇಕಮಾತ್ರದಿಂದಲೇ ತತ್ವಾರ್ಥಜ್ಞಾನವು ಸುಲಭವಾಗಿ ಉಂಟಾಗುವದು. ಆತ್ಮತತ್ವದಲ್ಲಿ ಸ್ಥಿತಿಯುಂಟಾಗಿ ಅದರ ಆನಂದಾನುಭವವಾಗದೆ ಭೋಗದಲ್ಲಿ ಜುಗುಪ್ಸೆಯುಂಟಾಗಲಾರದಾದ್ದರಿಂದ ಭೋಗಗಳಲ್ಲಿ ರಾಗವು ಉಂಟಾಗದಂತೆ ಯಾವನು ಪ್ರತ್ಯಗಾತ್ಮನಲ್ಲಿ ಸ್ಥಿತಿಯಂ ಹೊಂದುವನೋ ಅವನೇ ತಿಳಿಯತಕ್ಕ ತತ್ವವಂ ತಿಳಿದಂಥಾ ಪಂಡಿತನೆನಿಸಿಕೊಳ್ಳುವನು. ಯಾವನು ರಾಗದ್ವೇಷಾಭಿ ನಿವೇಶಗಳಿಲ್ಲದೆ ಯಶಸ್ಸು ಮೊದಲಾದ ನಿಮಿತ್ತದಿಂ ಭೋಗಾಸಕ್ತನಾಗುವನೋ ಅವನು ಜೀವನ್ಮುಕ್ತನೆನಿಸುವನು. ಹ್ಯಾಗೆ ಹ್ಯಾಗೆ ಪ್ರತ್ಯಗಾತ್ಮನ ಸ್ವರೂಪಜ್ಞಾನ ಉಂಟಾಗುವದೋ ಹಾಗೆ ಹಾಗೆ ಭೋಗವಿಷಯಗಳಲ್ಲಿ ಜುಗುಪ್ಸೆಯುಂಟಾಗುವದಾದ್ದರಿಂದ ಅತ್ಯಂತವಾಗಿ ಭೋಗಗಳಂ ನಿಷೇಧಿಸುವ ಈ ರಾಮಭದ್ರನು ಆತ್ಮಸ್ವರೂಪವಂ ಚನ್ನಾಗಿ ತಿಳಿದಿರುವನೆಂದು ತಿಳಿಯತಕ್ಕದ್ದು. ಈ ರಾಮನು ಯಾವದನ್ನು ಸ್ವತಃ ತಿಳಿದಿರುವನೋ ಅದನ್ನೇ ನಮ್ಮ ಮುಖದಿಂದ ಕೇಳಿ ಶುಕನಂತೆ ನಿಸ್ಸಂದೇಹನಾಗಿ ವಿಶ್ರಾಂತಿಯಂ ಹೊಂದುವನು. ಈ ರಾಮಭದ್ರನ ಚಿತ್ತ ವಿಶ್ರಾಂತಿಗೋಸುಗ ರಘುಕುಲ ಗುರುವಾಗಿ ತ್ರಿಕಾಲಜ್ಞಾನದಿಂ ಸರ್ವಜ್ಞನೆನಿಸಿಕೊಳ್ಳುತ್ತಾ ಸರ್ವಸಾಕ್ಷಿಭಾವದಿಂದಿರುವ ಈ ವಸಿಷ್ಠನು ಜ್ಞಾನೋಪಾಯವಂ ಪೇಳಲಿ, ಎಂದು ಮುನಿಗಳಂ ಕುರಿತು ಪೇಳಿದ ವಿಶ್ವಾಮಿತ್ರನು ಸಂಗಡಲೇ ವಸಿಷ್ಠನಂ ಕುರಿತು ಪೇಳಿದನದೆಂತೆನೆ ! ಎಲೈ ಜ್ಞಾನನಿಧಿಯಾದ ವಸಿಷ್ಠನೇ, ನಮ್ಮಿಬ್ಬರ

ಶ್ರೇಯಸ್ಸಿಗೋಸುಗ ನಿಷಧಗಿರಿಯ ತಟದಲ್ಲಿ ಬ್ರಹ್ಮದೇವನು ನಮಿಗೆ ಯಾವದನ್ನುಪದೇಶವಂ ಮಾಡಿದನೋ ಅದು ನಿನ್ನ ಸ್ಮೃತಿಮಾರ್ಗದಲ್ಲಿರುವದೆ ಆ ಜ್ಞಾನವನ್ನು ಶ್ರೀರಾಮಭದ್ರನಿಗೆ ಉಪದೇಶವಂ ಮಾಡುವನಾಗು, ಸೂರ್‍ಯನಿಂದ ರಾತ್ರಿಯಂತೆ ಆ ಜ್ಞಾನದಿಂ ಸಂಸಾರವಾಸನೆಯಡಗಲು, ಈ ರಾಮಚಂದ್ರನು ವಿಶ್ರಾಂತಿಯಂ ಹೊಂದುವನು. ಈ ರಾಮನು ಸಚ್ಛಿಷ್ಯನಾದ್ದರಿಂದಲೂ, ವಿರಕ್ತನಾದ್ದರಿಂದಲೂ, ನಿರ್ದೋಷವಾದ ಕನ್ನಡಿಯು ಪ್ರತಿಬಿಂಬವಂ ಪಿಡಿವಂತೆ ನಿನ್ನ ಉಪದೇಶವಂ ಗ್ರಹಿಸುವನು. ಆದ್ದರಿಂದ ನಿನ್ನ ಜ್ಞಾನವು ಸಾರ್ಥಕವಾಗುವದು. ಜ್ಞಾನಾತಿಶಯದಿಂ ಜಿತಾಂತಃಕರಣರಾಗಿ ಪಾಪಗಂಧವಿಲ್ಲದ ನಿಮ್ಮಂಥಾ ಮಹಾತ್ಮರು ಉಪದೇಶವಂ ಮಾಡುವಲ್ಲಿ ಯಾವನ ಮನಸ್ಸಾದರೂ ವಿಶ್ರಾಂತಿಯಂ ಹೊಂದದೆ ಇದ್ದೀತೆ ಎಂದು ವಿಶ್ವಾಮಿತ್ರನು ಪೇಳಿದ ಮಾತನ್ನು ವ್ಯಾಸ, ನಾರದ ಮೊದಲಾದ ಮುನಿಗಳು ಯುಕ್ತವೆಂದು ಶ್ಲಾಘಿಸುತ್ತಿರಲು, ದಶರಥರಾಯನ ಪಾರ್ಶ್ವದಲ್ಲಿ ಕುಳಿತಿದ್ದ ವಸಿಷ್ಠನು ಎಲೈ ವಿಶ್ವಾಮಿತ್ರನೆ! ಸತ್ಪುರುಷರ ಶಾಸನವನ್ನುಲ್ಲಂಘಿಸುವ ವಿಷಯದಲ್ಲಿ ಎಂಥಾವನೂ ಸಮರ್ಥನಾಗುವದಿಲ್ಲವಾದ್ದರಿಂದ ತಮ್ಮ ಅಪ್ಪಣೆಯಂ ನಾನು ನಿರ್ವಿಘ್ನವಾಗಿ ನಡೆಸುವೆನು. ಸಂಸಾರಭ್ರಮಶಾಂತಿಗೋಸುಗ ಬ್ರಹ್ಮದೇವನು ಪೇಳಿದ್ದೆಲ್ಲವು ನನ್ನ ಸ್ಮೃತಿಯಲ್ಲಿರುವದ್ದರಿಂದ ಜ್ಞಾನವೆಂಬ ದೀಪದಿಂ ರಾಮಾದಿಗಳ ಮೋಹಾಂಧಕಾರವಂ ಹೋಗಲಾಡಿಸುವೆನು ಎಂದು ಶ್ರೀರಾಮನಿಗೆ ಅಭಿಮುಖನಾಗಲು ಆ ರಾಮಚಂದ್ರನು ಎಲೈ ಗುರುವೆ! ಮಹಾತ್ಮನಾದ ಈ ವ್ಯಾಸನೇ ವಿದೇಹಮುಕ್ತನಾಗದಿರುವಲ್ಲಿ ಶುಕನು ವಿದೇಹಮುಕ್ತನಾದದ್ದು ಹ್ಯಾಗೆ? ಗುರುವಿಗಿಲ್ಲದ ಯೋಗ್ಯತೆ ಶಿಷ್ಯನಿಗೆ ಹ್ಯಾಗೆ ಬಂದೀತೆಂದು ಕೇಳಲಾ ವಸಿಷ್ಠನಿಂತೆಂದನು. ಎಲೈ ರಾಮಭದ್ರನೆ! ಸೂರ್‍ಯರಿಗೂ ಸೂರ್‍ಯನಾದ ಪರಮಾತ್ಮನ ಪ್ರಕಾಶದಲ್ಲಿ ಜಗತ್ತುಗಳೆಂಬತ್ರಸರೇಣುಗಳು ಎಷ್ಟು ಹೋದವೋ, ಎಷ್ಟು ಇರುವವೋ, ಎಷ್ಟು ಆಗುವವೋ, ಯಾರು ಯಣಿಸ್ಯಾರು. ಕರ್ಮಪರಿಪಾಕಕ್ಕೆ ಅನುಗುಣವಾಗಿ ಮರಣಕಾಲದಲ್ಲಿ ಯಾವ ವಾಸನೆ ಪುಟ್ಟುವದೋ ಅದಕ್ಕೆ ಸರಿಯಾದ ಜನ್ಮವಂ ಪಡದ ಪ್ರಾಣಿಕೋಟಿಗಳು ಪೂರ್ವದಲ್ಲಿ ಎಷ್ಟೋ ಮೃತವಾದವು. ಈಗ ಎಷ್ಟೋ ಮೃತವಾಗುತ್ತಿರುವವು, ಮುಂದಕ್ಕೆ ಎಷ್ಟೋ ಮೃತವಾಗಿ ಹೋಗುವವು. ದೇವಮನುಷ್ಯ ಪಶ್ವಾದಿಗಳಲ್ಲಿ ಯಾವನು ಎಲ್ಲಿ ಸ್ಥೂಲಶರೀರವಂ ಬಿಡುವನೋ ಅವನು ಪರಮಾರ್ಥವಾಗಿ ಚಿತ್ಸ್ವರೂಪನಾದ್ದರಿಂದ ಅದೇ ದೇಶ, ಅದೇಕಾಲದಲ್ಲಿ ಲೋಕಾಂತರಪ್ರಾಪ್ತಿ ಸಾಧನವಾದ್ದರಿಂದಾತಿವಾಹಿಕವೆನಿಸುವ ಸೂಕ್ಷ್ಮಶರೀರದಿಂದ

ತನ್ನ ಹೃದಯದಲ್ಲಿಯೇ ಈ ಜಗತ್ರಯವಂ ನೋಡುವನು. ಸಂಕಲ್ಪಸೃಷ್ಟಿ ಯಂತೆಯೂ, ಮನೋರಾಜ್ಯವಿಲಾಸದಂತೆಯೂ, ಇಂದ್ರಜಾಲದ ಪುಷ್ಪಮಾಲೆ ಯಂತೆಯೂ, ಕಥೆಯಲ್ಲಿ ತೋರುವ ಪದಾರ್ಥದಂತೆಯೂ, ವಾಯುರೋಗದಲ್ಲಿ ಕಾಣುವ ಭೂಕಂಪದಂತೆಯೂ, ಭಯಪಡಿಸಿದ ಬಾಲಕನ ಹೃದಯಕ್ಕೆ ತೋ ರಿದ ಪಿಶಾಚದಂತೆಯೂ, ದೃಷ್ಟಿಯಿಂದಂತರಿಕ್ಷದಲ್ಲಿ ರಚಿಸಲ್ಪಟ್ಟ ಮುತ್ತಿನಸರ ದಂತೆಯೂ, ಹರಿಗೋಲು ನಡೆಯುವಲ್ಲಿ ಕಾಣುವ ವೃಕ್ಷಗಳ ಗಮನದಂತೆಯೂ, ಸ್ವಪ್ನದಲ್ಲಿ ಕಂಡ ಪಟ್ಟಣದಂತೆಯೂ, ಸ್ಮರಣೆಯಿಂದುಂಟಾದ ಗಗನಪುಷ್ಪದಂ ತೆಯೂ, ಹೃದಯದಲ್ಲಿ ಪುಟ್ಟಿದ ಜಗತ್ಸಂಸಾರವನ್ನು ಸತ್ತಪುರುಷನು ನೋಡು ವನು. ಅನುಭವದಿಂದ ಅದೇಬಲವಾಗಿ ಇದೇ ಲೋಕವು, ಇದೇ ನನ್ನ ದೇಹ ವು, ಇವರೇ ನಮ್ಮ ಜನಗಳೆಂದು ಸಂಸಾರವೆಲ್ಲವು ಅವನಿಂದ ಕಾಣಲ್ಪಡುವದು. ಅಲ್ಲಿಯೇ ಜನ್ಮವು, ಮರಳಿ ಅಲ್ಲೇ ಮರಣವು, ಮರಳಿ ಪರಲೋಕಕಲ್ಪನೆ ಎಂದು ಸಂಸಾರವು ಪರಂಪರೆಯಾಗಿರುವದು. ಸ್ವಪ್ನದಲ್ಲಿ ಮತ್ತೊಂದು ಸ್ವಪ್ನ ದಂತೆ ಕಂಡಜನಗಳಲ್ಲಿ ಕೆಲವು ಹೊಸಜನಗಳು ಅವರಲ್ಲಿ ಕೆಲವು ಹೊಸ ಜನಗ ಳೆಂದು ಬಾಳೇಕಂಭದ ಪಟ್ಟೆಯಂತೆ ಪರಂಪರೆಯಾಗಿ ಜನಸಂಬಂಧವು ಸಂಸಾ ರವೂ ಸಹ ಗೋಚರವಾಗುವದು. ಸತ್ತವನಿಗೆ ಪೃಥಿವ್ಯಾದಿ ಮಹಾಭೂತಗಳು, ಜಗತ್ತಿನ ಕ್ರಮಗಳು ಸಹ ಇಲ್ಲದಿದ್ದಾಗ್ಯೂ ಸರ್ವವೂ ವಾಸನಾಮಯವಾದ್ದ ರಿಂದ ವಾಸನೆಯಿಂದಲೇ ಇದೆಲ್ಲವು ಉಂಟಾಗುವದು. ಹೀಗೆ ನಾನಾಪ್ರಕಾರ ವಾಗಿ ಹರಿಯುವ ಅವಿದ್ಯೆಯೆಂಬ ನದಿಯು ಅಜ್ಞಾನಿಗಳಿಗೆ ದಾಟಲಶಕ್ಯವಾಗಿರು ವದು, ಪರಮಾರ್ಥಸ್ವರೂಪನಾದ ಪರಮಾತ್ಮನಲ್ಲಿ ಸೃಷ್ಟಿಗಳೆಂಬ ತೆರೆಗಳು ಹಳೆದಾಗಿಯು ಹೊಸದಾಗಿಯೂ ತರತರವಾಗಿ ತೋರುತ್ತಿರುವವು; ಇದರಲ್ಲಿ ಕುಲಕ್ರಮಾದಿಗಳಿಂದ ಕೆಲವರು ಸಮರಾಗಿಯು ಕೆಲವರು ಅರ್ಧಸಮರಾಗಿ ಯೂ, ಕೆಲವರು ವಿಲಕ್ಷಣರಾಗಿಯು ಕಾಣುತ್ತಿರುವರು. ಈ ಪರಂಪರೆಯಲ್ಲಿ ಈ ವ್ಯಾಸಮುನಿಯನ್ನು ಮೂವತ್ತೆರಡನೇ ವ್ಯಾಸನೆಂದು ತಿಳಿಯುತ್ತೇನೆ. ಈಗ ಲು ಅನೇಕಜನ ವ್ಯಾಸ, ವಾಲ್ಮೀಕಿಗಳು, ಭೃಗು ಮೊದಲಾದ ಮುನಿಗಳು, ಮನುಷ್ಯರು, ದೇವತೆಗಳು ಸಹ ಹುಟ್ಟಿ ಹುಟ್ಟಿ ಲಯವಾಗುತ್ತಿರುವರು; ಈ ಬ್ರಹ್ಮಕಲ್ಪದಲ್ಲಿ ಇದು ಎಪ್ಪತ್ತೆರಡನೇ ತ್ರೇತಾಯುಗವು. ಇದು ಇದರಂತೆ ಲೋಕಗಳು ನಾನು ನೀನು ಸಹ ಎಷ್ಟೋಭಾರಿ ಉಂಟಾದೆವು. ಈಗ ಉಂಟಾ ಗಿದ್ದೇವೆ. ಮುಂದಕ್ಕೂ ಇದೇಮೋರಿಗೆ ಉಂಟಾಗುವೆವು. ಅನೇಕಾವರ್ತಿ ನಾವು ವ್ಯಾಸ ವಾಲ್ಮೀಕಿಗಳಿಂದ ಯುಕ್ತರಾಗಿಯು ವಿಯುಕ್ತರಾಗಿಯೂ ಹುಟ್ಟಿರು

ವೆವು. ನಮ್ಮಂತೆ ಅನೇಕಜನರೂ ಹುಟ್ಟಿರುವರು, ಜ್ಞಾನಸಿದ್ಧಿಯಾದ ಯಾವ ವ್ಯಾಸನು ಇನ್ನೂ ಎಂಟನೇ ಅವತಾರದಲ್ಲಿ ವೇದಗಳಂ ವಿಭಾಗಿಸಿ ಪುನಃ ಭಾರತವೆಂಬ ಇತಿಹಾಸವಂ ರಚಿಸಿ ಬ್ರಹ್ಮಪದವಿಯನ್ನು ಅನುಭವಿಸಿ ಬಳಿಕ ವಿದೇಹಮುಕ್ತನಾಗುವನು. ಪರಮಾತ್ಮನ ಮಹಿಮವಿಚಾರದಿಂದಿವನಂತೆ ಈ ಪ್ರಪಂಚವೆಲ್ಲವನ್ನು ಮಾಯಾ ವಿಲಾಸವೆಂದು ನಿಶ್ಚಯಿಸಿ "ನಾನು, ನನ್ನದೆಂಬ" ಕಲ್ಪನೆಯಂ ಬಿಟ್ಟ ಜೀವನ್ಮುಕ್ತರು ಕೆಲವು ಜನ ಪ್ರತಿಸರ್ಗದಲ್ಲೂ ಹುಟ್ಟುವರು, ಕೆಲವರು ನೂರಾರುಕಲ್ಪಗಳಾದರೂ ಹುಟ್ಟುವದಿಲ್ಲ. ವಿಚಾರದಿಂದುಂಟಾದ ಬ್ರಹ್ಮಾತ್ಮೈಕ್ಯಜ್ಞಾನದಿಂದ ಅಜ್ಞಾನವು ನಿಶ್ಶೇಷವಾಗಿ ಹೋಗುವದೇ ಮುಕ್ತಿಯಾದ್ದರಿಂದ ಅಜ್ಞಾನನಾಶದಿಂ ಬ್ರಹ್ಮಭಾವದಲ್ಲಿರುವ ಮಹಾತ್ಮರಿಗೆ ದೇಹವಿದ್ದರೂ ಇಲ್ಲದಿದ್ದರೂ ಒಂದೇರೀತಿಯಾಗಿರುವದು. ಆದ್ದರಿಂದ ಅಖಂಡಭಾವದಿಂ ನಾನು ನನ್ನದೆಂಬ ಕಲ್ಪನೆಯಿಲ್ಲದ ಜೀವನ್ಮುಕ್ತನನ್ನು ದೇಹಭಾವನೆ ಇಲ್ಲದ್ದರಿಂದ ವಿದೇಹಮುಕ್ತನೆಂತಲೇ ತಿಳಿಯಬಹುದು. ತರಂಗವಿದ್ದರೂ ಇಲ್ಲವಿದ್ದರೂ ಜಲಕ್ಕೆ ಹ್ಯಾಗೆ ಭೇದವಿಲ್ಲವೋ ಹಾಗೆ ಭೋಗಗಳಿದ್ದರೂ ಇಲ್ಲದಿದ್ದರೂ ಜೀವನ್ಮುಕ್ತನಿಗೆ ಭೇದವಿಲ್ಲವೆಂದು ತಿಳಿಯತಕ್ಕದ್ದು. ಸಂಸಾರಿಯಂತೆ ರಾಗದ್ವೇಷಾಭಿನಿವೇಶಪೂರ್ವಕವಾದ ಭೋಗಾಸಕ್ತಿ ಇಲ್ಲದ್ದರಿಂದ ಜ್ಞಾನಿಗೆ ಭೋಗಗಳು ಇಲ್ಲವೇ ಇಲ್ಲವೆಂದು ನಿಶ್ಚಯಿಸಬೇಕು. ನೀಲಮೇಘಶ್ಯಾಮಳವಾದ ಈ ವ್ಯಾಸಮುನಿಯ ದೇಹವು ನಮಗೆ ಗೋಚರವಾಗಿಧೆಯಲ್ಲದೆ ಇವನ ಜ್ಞಾನವು ಗೋಚರವಾಗಿಲ್ಲವಾದ್ದರಿಂದ ವಿದೇಹಮುಕ್ತನಾದ ಶುಕನಿಗೂ, ಜೀವನ್ಮುಕ್ತನಾದ ಈ ಮುನಿಗೂ ತಾರತಮ್ಯವನ್ನೆಣಿಸುವದು ಹ್ಯಾಗೆ ? ಜ್ಞಾನವು ದೇಹಾಭಿಮಾನ ಮೊದಲಾದ ರೂಪದಿಂದಿರುವ ಅಜ್ಞಾನವಂ ಹೋಗಲಾಡಿಸುವದಲ್ಲದೆ ದೇಹವಂ ಹೋಗಲಾಡಿಸಲಾರದೆಂದು ನಿಶ್ಚೈಸುವನಾಗು. ಎಲೈ ರಾಮಭದ್ರನೆ ! ಅಖಂಡಾನಂದ ಸಾಮ್ರಾಜ್ಯವು ನಿತ್ಯಸಿದ್ಧವಾದಾಗ್ಯೂ ಅಜ್ಞಾನದಿಂದ ಅಸಿದ್ಧವಾಗಿರುವದು. ಅಜ್ಞಾನನಾಶದಿಂದದು ಸಿದ್ಧವಾಗತಕ್ಕದಾದ್ದರಿಂದಲೂ ಅಜ್ಞಾನಕ್ಕೆ ಜ್ಞಾನದಿಂದಲೇ ನಾಶವಾಗುವದ್ದರಿಂದಲೂ ಜ್ಞಾನವು ತತ್ವವಿಚಾರದಿಂ ಪುಟ್ಟುವದ್ದರಿಂದಲೂ ವಿಚಾರವು ಪುರುಷಪ್ರಯತ್ನರೂಪವಾದ್ದರಿಂದಲೂ ಪೌರುಷವೇ ಸಕಲ ಸುಖಸಾಧಕವೆಂದು ತಿಳಿಯತಕ್ಕದ್ದು. ಕಾಯವಾಙ್ಮನಸ್ಸುಗಳ ಕರ್ಮವೇ ಪೌರುಷವೆನಿಸಿಕೊಳ್ಳುವದು. ಇದು ಜನ್ಮಾಂತರೀಯವೆಂತಲೂ, ಐಹಿಕವೆಂತಲೂ ಎರಡುಪ್ರಕಾರವಾಗಿಹುದು. ಮತ್ತು ಶಾಸ್ತ್ರೀಯವೆಂತಲೂ, ಅಶಾಸ್ತ್ರೀಯವೆಂತಲೂ ಎರಡುಪ್ರಕಾರವಾಗಿಹುದು. ಜನ್ಮಾಂತರೀಯವು ಅದೃಶ್ಯವಾದ್ದರಿಂದಲೂ, ಐಹಿ

ಕವು ಪ್ರತ್ಯಕ್ಷವಾದ್ದರಿಂದಲೂ ಬುದ್ಧಿಶಾಲಿಗಳು ಜನ್ಮಾಂತರೀಯವಂ ಲಕ್ಷ್ಯಕ್ಕೆ ತಾರದೆ ಐಹಿಕದಿಂದಲೆ ಸಕಲೇಷ್ಟಾರ್ಥಗಳಂ ಸಾಧಿಸುವರು. ಸಾಧುಸಮ್ಮತವಾದ ಶಾಸ್ತ್ರೀಯ್ಯವು ಶ್ರೇಯಸ್ಸಾಧಕವಾಗುವದು. ಹಾಸಿಕರವಾದ ಅಶಾಸ್ತ್ರೀಯವು ಉನ್ಮತ್ತಚೇಷ್ಟಿತವೆನಿಸುವದು. ಐಹಿಕಜನ್ಮಾಂತರೀಯಗಳಿಗೂ ಶಾಸ್ತ್ರೀಯಾಶಾಸ್ತ್ರೀಯ್ಯಗಳಿಗೂ ಪರಸ್ಪರಸ್ಪರ್ಧೆಯಲ್ಲಿ ಯಾವದು ಬಲಿಷ್ಠವಾದ್ದೋ ಅದೇ ಜಯಿಸುವದು. ಪಟ್ಟದಾಸೆಯಿಂದ ಭಿಕ್ಷುಕನಿಗೆ ರಾಜ್ಯಾಧಿಪತ್ಯ ಬರುವಲ್ಲಿ ಭಿಕ್ಷುಕನ ಜನ್ಮಾಂತರೀಯವು ಮಂತ್ರಿಗಳ ಐಹಿಕವೂ ಬಲಿಷ್ಠವೆಂದು ತಿಳಿಯಬೇಕು. ನಿನ್ನೇ ದಿವಸದ ಆಹಾರ ದೋಷವು ಈ ದಿವಸದ ಆಹಾರದಿಂ ಹೋಗುವಂತೆ ಜನ್ಮಾಂತರದ ಅಶಾಸ್ತ್ರೀಯ ದೋಷವು ಐಹಿಕವಾದ ಶಾಸ್ತ್ರೀಯವಿಂ ಹೋಗುವದು. ಆಯುಷ್ಮಂತನಾದವನಿಗೆ ಅಜೀರ್ಣದೋಷದಿಂದಗ್ನಿಗೆ ಸಾಮರ್ಥ್ಯ ಕತಮೆಯಾಗುವದಲ್ಲದೆ ಅಗ್ನಿಗೆ ನಾಶವಾಗದು. ಅಗ್ನಿಯಿಂದಲಾದರೋ ಅಜೀರ್ಣಕ್ಕೆ ನಾಶವೇ ಆಗುವದು. ಈ ಪ್ರಕಾರ ಅಶಾಸ್ತ್ರೀಯದಿಂದ ಶಾಸ್ತ್ರೀಯಕ್ಕೆ ತಿರಸ್ಕಾರವು ಶಾಸ್ತ್ರೀಯದಿಂದ ಅಶಾಸ್ತ್ರೀಯಕ್ಕೆ ನಾಶವು ಉಂಟಾಗುವದು. ಶಾಸ್ತ್ರಗಳಲ್ಲಿ ಪುಣ್ಯಕರ್ಮದಿಂ ಪಾಪಕ್ಕೆ ನಾಶವು ಹೇಳಿರುವಂತೆ ಪಾಪಕರ್ಮದಿಂ ಪುಣ್ಯಕ್ಕೆ ನಾಶವು ಹೇಳಲಿಲ್ಲವಾದ್ದರಿಂದ ಪುಣ್ಯಕರ್ಮರೂಪವಾದ ಶಾಸ್ತ್ರೀಯವೇ ಬಲಿಷ್ಟವೆಂದು ತಿಳಿಯಬೇಕು. ಜನ್ಮಾಂತರದ ಶಾಸ್ತ್ರೀಯದಿಂದಿಷ್ಟಾರ್ಥವು ಸಿದ್ಧಿಸದಿರುವಲ್ಲಿ ಶಾಸ್ತ್ರೀಯಕ್ಕೆ ಕಾರ್ಯಸಾಧನೆ ಯೋಗ್ಯತೆ ಸಾಲದೆಂತಲೂ ವಿಘ್ನಕಾರಿಯಾದ ಅಶಾಸ್ತ್ರೀಯವು ಬಲವಾಗಿರುವದೆಂತಲೂ ತಿಳಿಯುವ ಬುದ್ಧಿಶಾಲಿಗಳು ಪ್ರಾಯಶ್ಚಿತ್ತಗಳಿಂದ ಅಶಾಸ್ತ್ರೀಯವಂ ಹೋಗಲಾಡಿಸುತಲೂ, ದೇಶ ಕಾಲಾದಿ ಸಾಮಗ್ರಿಗಳಿಂದ ಶಾಸ್ತ್ರೀಯಕ್ಕೆ ಬಲವನ್ನುಂಟುಮಾಡುತಲೂ ಇಷ್ಟಾರ್ಥವಂ ಬಿಡದೆ ಸಾಧಿಸುವರು. ಶಾಸ್ತ್ರೀಯವಾದ ಜನ್ಮಾಂತರೀಯವು ಬಲವಾಗಿದ್ದಲ್ಲಿ ಐಹಿಕವು ಸ್ವಲ್ಪವಾಗಿದ್ದರೂ ಕಾರ್ಯಸಿದ್ಧಿಯಾಗುವದು. ಬೀಜರೂಪವಾಗಿದ್ದಲ್ಲಿ ಐಹಿಕದ ಪ್ರಾಬಲ್ಯದಿಂ ಫಲಿಸುವದು. ಜನ್ಮಾಂತರೀಯವಿಲ್ಲದೆ ಇದ್ದಲ್ಲಿ ಅತ್ಯುಕ್ಕಟವಾದ ಐಹಿಕದಿಂ ಕಾರ್ಯಸಿದ್ಧಿಯಾಗುವದು. ನಿನ್ನೇದಿನ ಮಾಡಿದ ಕರ್ಮದಲ್ಲಿ ಈ ಹೊತ್ತು ಹ್ಯಾಗೆ ಬುದ್ಧಿ ಪ್ರವರ್ತಿಸುವದೋ ಹಾಗೆ ಜನ್ಮಾಂತರೀಯವಿದ್ದರೆ ಈ ಜನ್ಮದಲ್ಲೂ ಬುದ್ಧಿಯುಂಟಾಗುವದು. ಅದಕ್ಕೆ ಸರಿಯಾದ ಐಹಿಕ ವ್ಯವಸಾಯವು ನಡೆಯದಿದ್ದಲ್ಲಿ ಬೀಜಪ್ರಾಯವಾದ ಆ ಜನ್ಮಾಂತರೀಯವು ಸ್ವಪ್ನ ಮನೋರಥಾದಿಗಳಲ್ಲಿ ತನ್ನ ಫಲವಂ ತೋರಿಸಿ ಹೋಗುವದು. ಈ ರೀತಿಯಂ ತಿಳಿದ ಸಾಧುಗಳು ತಮ್ಮ ಬುದ್ಧಿಯಸ್ಥಾ

ಘುಭಾವವಂ ನೋಡುತ್ತಾ ಅದಕ್ಕೆ ತಕ್ಕ ಐಹಿಕದಿಂ ಕಾರ್ಯವಂ ಸಾಧಿಸುವರು. ಶಾಸ್ತ್ರೀಯುವಂ ಗ್ರಹಿಸಿದವನು ಬಲವಾಗಿ ವ್ಯವಸಾಯುವಂ ಮಾಡುತ್ತಾ ಮಧ್ಯ ದಲ್ಲಿ ಹಿಂತಿರುಗದಿದ್ದರೆ ಎಂಥಾ ಕಾರ್ಯವನ್ನಾದರೂ ಸಾಧಿಸುವನು. ಇಂಥಾ ಶಾಸ್ತ್ರೀಯುವಾದ ಐಹಿಕವಂ ಗ್ರಹಿಸಿದ ಒಬ್ಬ ಪಾರ್ಥಿವನು ತ್ರಿಲೋಕೈಶ್ವರ್ಯಸುಂದರವಾದ ಇಂದ್ರಪದವಂ ಹೊಂದುವನು. ಇನ್ನೊಬ್ಬನು ಕಮಲರೂಪ ಸಿಂಹಾಸನವನ್ನೇರಿ ಪ್ರಪಂಚಗಳಂ ಸೃಜಿಸುವನು. ಮತ್ತೊಬ್ಬನು ಗರುಡವಾಹನನಾಗಿ ಜಗತ್ಕಂಟಕರಾದ ಪಾಪಿಗಳಂ ನಿಗ್ರಹಿಸುವನು. ಮತ್ತೊರ್ವನು *ಮತ್ತಕಾಶಿನೀರೂಪವಾದ ಅರ್ಧಾಂಗವುಳ್ಳವನಾಗಿ ಮಹಾದೇವನೆಂದು ಹೊಗಳಿಸಿಕೊಳ್ಳುವನು. ಲೋಕದಲ್ಲಿ ಯಾವನಾವನು ಯಾವ ಯಾವ ಸಿದ್ಧಿಯಂ ಪಡದಿರುವನೋ ಆ ಸಿದ್ಧಿಯಲ್ಲವೂ ಐಹಿಕದಿಂದಲೇ ಉಂಟಾದದ್ದಾದ್ದರಿಂದ ನೀನೂ ಶಾಸ್ತ್ರೀಯುವಾದ ಐಹಿಕವಂ ಪರಿಗ್ರಹಿಸುವನಾಗು. ಜನ್ಮಾಂತರೀಯುವೆಷ್ಟು ಬಲವಾಗಿದ್ದರೂ ಸ್ವಲ್ಪವಾದರೂ ಐಹಿಕವಿಲ್ಲದೆ ಕಾರ್ಯಕಾರಿಯಾಗುವದಿಲ್ಲ. ಗರ್ಭದಲ್ಲೇ ಸಾಯುವದಕ್ಕೂ, ಪುಟ್ಟುತಲೇ ಸಾಯುವ ಮಗುವಿಗೂ, ಅಂತಃಪುರದಲ್ಲಿ ಚಿತ್ರದಲ್ಲಿರುವ ಹುಲಿಯಂ ನೋಡಿ ಸಾಯುವವನಿಗೂ, ಏನಾದರೂ ಒಂದು ಐಹಿಕನಿಮಿತ್ತ ಉಂಟಾಗಿದ್ದೀತೆಂದು ನಿಶ್ಚೈಸತಕ್ಕದ್ದು. ಭಿಕ್ಷುಕನು ಬೀದಿಗೆ ಬಂದಿದ್ದರಿಂದಲೇ ಪಟ್ಟದಾನೆಯು ಅವನ ಕತ್ತಿಗೆ ಮಾಲಿಕೆಯಂ ಹಾಕಿತು. ಅನ್ನವು ಸಿದ್ಧವಾದಾಗ್ಯೂ ಬಾಯಿಗೆ ಇಟ್ಟುಕೊಂಡು ನುಂಗದೆ ತೃಪ್ತಿಯಾಗುವದಿಲ್ಲವಾದ್ದರಿಂದ ಐಹಿಕವೇ ಮುಖ್ಯವೆಂತಲೂ, ಅದು ಶಾಸ್ತ್ರಸಮ್ಮತವಾಗಿದ್ದರೆ ಸರ್ವೋತ್ತಮವೆಂತಲೂ ನಿಶ್ಚೈಸತಕ್ಕದ್ದು. ಹೀಗೆ ಅನುಭವವಿರುವಲ್ಲಿ ದೈವವೇ ಪ್ರಮಾಣವೆಂತಲೂ, ಅದಕ್ಕೆ ಸರಿಯಾಗಿಯೇ ಕಾರ್ಯವು ನಡೆಯುವದೆಂತಲೂ, ಜನಗಳು ಪೇಳುವರಲ್ಲವೆ ? ಅದು ಎಂಥಾ ದೈವವೂ ಹ್ಯಾಗೆ ಉಂಟಾಯಿತೊ ತಿಳಿಯಲಶಕ್ಯವಾಗಿರುವದು. ಕೆಲವರು ದೇವಾಂಶದಿಂ ಪುಟ್ಟಿದ ಪುರುಷೋತ್ತಮನ ವ್ಯಾಪಾರವನ್ನು ದೈವವೆನ್ನುವರು, ಅದು ಶ್ಲಾಘ್ಯವೇಸರಿ. ಆದರೆ ದುರ್ಜನರ ಭಾವವಂ ಸಹಿಸಲಾರದ ಭೂದೇವಿಯ ಪ್ರಾರ್ಥನೆಯೇ ಮೊದಲಾದ ನಿಮಿತ್ತಗಳಿಂದಾ ದೇವನು ಅವತರಿಸಿರುವನಾದಕಾರಣ ಆ ದೈವವು ಪೌರುಷಕ್ಕೆ ಸೇರುವದು. ಕೆಲವರು ಜನ್ಮಾಂತರೀಯ ಪೌರುಷವನ್ನೇ ದೈವವೆಂದು ಪೇಳುವರು. ಐಹಿಕಸಹಾಯುವನ್ನಪೇಕ್ಷಿಸುವ ದುರ್ಬಲವಾದ ಆ ದೈವದಿಂದೇನೇನೂ ಆಗುವದಿಲ್ಲವಾದ್ದರಿಂದ ಬುದ್ಧಿಶಾಲಿಯಾದವನು ಅದನ್ನೆಣಿಸಲಾಗದು. ಪರಸ್ಪರ ಶತ್ರುಗಳಾದ

*ಮತ್ತಕಾಶಿನೀ—ಯೌವನಮದದಿಂದ ಮದಿಸಿದ ಹೆಂಗಸು.

ಇಬ್ಬರ ಜನ್ಮಾಂತರೀಯವು ಸರಿಯಾಗಿರುವಲ್ಲಿ ಯಾವನಿಗೆ ಐಹಿಕ ಸಾಮಗ್ರಿ ಯಧಿಕವಾಗುವದೋ ಅವನೇ ಜೈಸುವನಾದ್ದರಿಂದ ಐಹಿಕವೇ ಮುಖ್ಯವೆಂದೆ ಣಿಸತಕ್ಕದ್ದು. ಶಾಸ್ತ್ರೀಯವಾದ ಐಹಿಕವು ಫಲಿಸದಿರುವಲ್ಲಿ ಜನ್ಮಾಂತರದ ಅಶಾ ಸ್ತ್ರೀಯವು ಬಲವಾಗಿಧೆ, ಎಂದು ತಿಳಿದು ಪ್ರಾಯಶ್ಚಿತ್ತಾದಿಗಳಿಂದದನ್ನು ಹೋ ಗಲಾಡಿಸುತ್ತಾ ಸತ್ಸಹವಾಸಾದಿ ಸಾಮಗ್ರಿಗಳಿಂದ ಐಹಿಕವಂ ವೃದ್ಧಿಪಡಿಸಬೇ ಕು. ವೃದ್ಧನಂತೆ ಜನ್ಮಾಂತರೀಯವು ವೃದ್ಧಿಯಂ ಹೊಂದತಕ್ಕದ್ದಲ್ಲವಾದ್ದರಿಂ ದಲೂ, ತರುಣನಂತೆ ಐಹಿಕವು ವೃದ್ಧಿ ಹೊಂದುವದ್ದರಿಂದಲೂ, ಪರೋಕ್ಷಕ್ಕಿಂತಾ ಪ್ರತ್ಯಕ್ಷಕ್ಕೆ ವೃದ್ಧಿಯಾಗುವ ಯೋಗ್ಯತೆ ಚನ್ನಾಗಿರುವದ್ದರಿಂದಲೂ, ಪ್ರತ್ಯ ಕ್ಷಕ್ಕೆ ವೃದ್ಧಿಯನ್ನುಂಟುಮಾಡುವದು ಸುಕರವಾದ್ದರಿಂದಲೂ, ಶಾಸ್ತ್ರೀಯ ವಾದ ಐಹಿಕವು ಅಶಾಸ್ತ್ರೀಯವಾದ ಜನ್ಮಾಂತರೀಯವಂ ಹೊಡೆಯುವದು. ಬುದ್ಧಿಪ್ರವೃತ್ತಿಯಿಂದ ಜನ್ಮಾಂತರೀಯವು ಊಹಿಸಬೇಕಾಗಿಧೆಯಾಗಿ ಬುದ್ಧಿ ಶಾಲಿಯಾದವನು ಐಹಿಕವನ್ನೇ ಹಿಡಿದು ಪುರುಷಾರ್ಥವಂ ಸಾಧಿಸಬೇಕು. ಜ ನ್ಮಾಂತರೀಯದಿಂ ಪಂಜರಕೆ ಬಿದ್ದ ಸಿಹ್ಮವು ಐಹಿಕಪ್ರಭಾವದಿಂ ಪಂಜರವಂ ಭೇದಿಸಿಕೊಂಡು ಪೋಗುವಂತೆ ಪ್ರಾಜ್ಞನು ಜನ್ಮಾಂತರೀಯಸಿದ್ಧವಾದ ಸಂ ಸಾರವನ್ನು ವಿವೇಕ, ವೈರಾಗ್ಯ ವಿಚಾರರೂಪವಾದ ಐಹಿಕದಿಂ ಭೇದಿಸಿ ಮು ಕ್ತನಾಗುವನು. ಶುಭದಿಂದ ಶುಭಫಲವು, ಅಶುಭದಿಂದ ಅಶುಭಫಲವೂ ಸಹಾ ಪ್ರತ್ಯಕ್ಷವಾದ ಐಹಿಕದಿಂದಲೇ ಅಗುತ್ತಿರುವಲ್ಲಿ ಪರೋಕ್ಷವಾದ ದೈವವ ನ್ನ್ಯಾಕೆ ಪರಿಗ್ರಹಿಸಬೇಕು. ಪ್ರತ್ಯಕ್ಷವಂ ಬಿಟ್ಟು ಯಾವನು ಅನುಮಾನವಂ ಹಿಡಿವನೋ ಅವನು ತನ್ನ ಭುಜಗಳನ್ನೇ ಸರ್ಪಗಳೆಂದು ತಿಳಿದು ಭಯದಿಂದೋ ಡುವನು. ದೈವಪ್ರೇರಣೆಯಿಂ ನಾನು ನಡೆವೆನೆಂಬ ದುರ್ಮತಿಯಂ ನೋಡುವ ಲಕ್ಷ್ಮಿಯು ಚಂಡಾಲಿಯಂಕಂಡ ತಪಸ್ವಿನಿಯಂತೆ ಓಡುವಳು. ಯಾವನು ಸ ಮರ್ಥನಾದಾಗ್ಯೂ ಕಾರ್ಯವಂಸಾಧಿಸಲುಜ್ಜುಗಿಸದೆ ಕೇವಲ ಮನೋರಥದಿಂ ಕಾ ಲಕ್ಷೇಪವಂ ಮಾಡುವನೋ ಅವನನ್ನು ಭೂಭಾರವೆಂದು ತಿಳಿದು ಕಾಲನು ಕೊಂಡುಪೋಗುವನು. ಅದ್ದರಿಂದ ಸುಬುದ್ಧಿಯಾದವನು ಸ್ವಲ್ಪವಾದರೂ ವಿಳಂ ಬಿಸದೆ ಸತ್ಸಹವಾಸಾದಿ ಪ್ರಯತ್ನದಿಂ ಪರಮಾರ್ಥವಾದ ಶ್ರೇಯಸ್ಸಂ ಸಾಧಿಸ ಬೇಕು. ಬಾಲ್ಯದಿಂ ಕಲಿಯಲ್ಪಟ್ಟ ಶಾಸ್ತ್ರದಿಂದಲೂ, ಸತ್ಸಹವಾಸಾದಿಗಳಿಂದ ಲೂ, ಸುಖಸಾಧನೆಯಾಗುವದ್ದರಿಂದ ಐಹಿಕವೇ ಅನುಭವಸಿದ್ಧವಾಗಿರುವಲ್ಲಿ ದೈವದಿಂ ಸುಖಸಾಧನೆಯಾಗುವದೆಂದು ಕುಳಿತಿರುವವರು ಕುಬುದ್ಧಿಗಳಲ್ಲದೇ ಎಂದಿಗೂ ಸುಬುದ್ಧಿಗಳಾಗಲಾರರು. ಲೋಕದಲ್ಲಿ ಆಲಸ್ಯವೆಂಬುವದು ಇಲ್ಲದಿ

ದ್ದರೆ ಯಾವನುತಾನೇ ಧನಿಕನೂ, ಪಂಡಿತನೂ ಸಹಾ ಆಗಲಾರನು. ಆಲಸ್ಯದಿಂದಲೇ ಈ ಧರಣಿಯು ಅಜ್ಞಾನಿಗಳಿಂದಲೂ, ದರಿದ್ರರಿಂದಲೂ, ಪೂರ್ಣವಾಗಿರುವದು. ಆದ್ದರಿಂದ ಸಕಲ ಕಾರ್ಯಸಾಧನೆಗಳಿಗೂ ವಿರುದ್ಧವಾದ ಆಲಸ್ಯವಂ ತ್ಯಜಿಸಿ ಶರೀರಕ್ಕೂ, ಬುದ್ಧಿಗೂ, ಪ್ರಾಬಲ್ಯವನ್ನುಂಟುಮಾಡುವ ಯೌವನ ಬಂದಕೂಡ್ಲೆ ಬುದ್ಧಿವಂತನಾದವನು ಕಾಮಿನಿಯರ ಕೂಟಲೆಗೆ ವಳಗಾಗದೆ ಜಿತೇಂದ್ರಿಯನಾಗಿ ಸತ್ಸಹವಾಸದಿಂ ತತ್ವವಂ ವಿಚಾರಿಸಬೇಕು. ಎಲೈ ರಘುಪತಿಯೇ ! ಲೋಕದಲ್ಲಿ ಶರೀರಜಾಡ್ಯದಿಂದಲೂ, ಬುದ್ಧಿಮಾಂಧ್ಯದಿಂದಲೂ, ಅಲಸರಾಗಿ ಕಾರ್ಯವಂ ಮಾಡಲಸಮರ್ಥರಾದ ಜನರು ಸ್ವಗೌರವಸ್ಥಾಪನಾರ್ಥವಾಗಿ ದೈವವಿದ್ದಂತೆ ನಡೆಯುವದಲ್ಲದೆ ಪೌರುಷದಿಂದೇನಾಗುವದೆಂದು ಪೇಳುವರು.

ಆದ್ದರಿಂದ ಪೌರುಷಾ*ತಿರಿಕ್ತವಾದ ದೈವ ಒಂದುಂಟೆಂದು ಲೋಕವೆಲ್ಲವು ಅಂಧಪರಂಪರೆಯಂತೆ ಭ್ರಾಂತವಾಗಿ ಹಾ ! ದೈವವೆಂದು ಕಷ್ಟಕಾಲದಲ್ಲಿ ಅಳುತ್ತಿರುವದು, ಭಯಪಡಿಸಿದ ಬಾಲಕರ ಹೃದಯಕ್ಕೆ ಗೋಚರವಾದ ಮಹಾಭೂತದಂತೆ ಪ್ರಸಿದ್ಧವಾದ ಈ ಹಾಳುದೈವವು ಕಾರ್ಯೋದ್ಯುಕ್ತರಾದ ಜನಗಳಿಗೆ ವಿಘ್ನವಾಗುವದ್ದರಿಂದ ತಿರಸ್ಕರಿಸತಕ್ಕದ್ದಾಗಿಥೆ. ಯಾರು ಜನ್ಮಾಂತರೀಯವಾದ ಪೌರುಷವೇ ದೈವವೆನಿಸಿಕೊಳ್ಳುವದೆಂದು ತಿಳದಿರುವರೋ ಆ ಬುದ್ಧಿಶಾಲಿಗಳು ಅದನ್ನು ಲಕ್ಷೀಕರಿಸದೆ ಕಾರ್ಯೋದ್ಯುಕ್ತರಾಗಿ ಸಮಸ್ತೇಷ್ಟಾರ್ಥಗಳನ್ನು ಪಡೆಯುವರು. ಜನ್ಮಾಂತರೀಯವಾಗಲೀ, ಐಹಿಕವಾಗಲೀ, ಪರಕೀಯವಾಗಲೀ, ವಿಘ್ನಕಾರಿಯಾದ ಪೌರುಷವು ಬಲವಾಗಿದ್ದರೆ ಕಾರ್ಯಕಾರಿಯಾದ ಐಹಿಕವು ಫಲಿಸುವದಿಲ್ಲ. ಅದೇ ಐಹಿಕವು, ವಿಘ್ನಹರವಾದ ಸಾಮಗ್ರಿಗಳೊಡನೆ ಬಲವಾದರೆ ಕಾರ್ಯಸಿದ್ಧಿಯನ್ನುಂಟುಮಾಡುವದಾದ್ದರಿಂದ ಸುಮತಿಯು ಒಂದುವೇಳೆ ಕಾರ್ಯಸಿದ್ಧಿಯಾಗದಮಾತ್ರದಿಂ ಹಿಂತಿರಗದೆ ಕಾರ್ಯವಂ ಸಾಧಿಸಬೇಕು. ದೇಶ ಕಾಲ ಕ್ರಿಯಾ ದ್ರವ್ಯಗಳ ಭೇದದಿಂ ಭಾವಗಳು ಭೇದಿಸುವದ್ದರಿಂದ ಇವುಗಳ ಸಹಾಯದಿಂ ಬಲಪಡಿಸಿದ ಐಹಿಕವು ಸಕಲವಾದ ಇಷ್ಟಾರ್ಥಗಳನ್ನು ಸಾಧಿಸುವದು ತಟಸ್ಥನಾದ ಪರಮೇಶ್ವರನ ಕಾರುಣ್ಯನೈರ್ಘೃಣ್ಯಾಗಳು ಕರ್ಮಸಾಪೇಕ್ಷವಾದ್ದರಿಂದ ಅವನ ಕಾರುಣ್ಯವೂ ಕೂಡ ಪೌರುಷಕ್ಕೆ ಅಭಿನ್ನವಾಗಿರುವಲ್ಲಿ ಪೌರುಷದಿಂದ ಯಾವನು ದೈವವಂ ಜಯಿಸಲಾರನೊ, ಅವನನ್ನು ಪಶುವೆಂತಲೆ ತಿಳಿಯಬೇಕು. ಈಶ್ವರಪ್ರೇರಣೆ ಇದ್ದಂತೆ ಕಾರ್ಯಗಳು ನಡೆಯುವವಾದಲ್ಲಿ ಸಮಸ್ತವಾದ ವಿಧಿ ನಿಷೇಧಶಾಸ್ತ್ರಗಳು, ಸ್ವರ್ಗಾದಿಫಲ ಶಾಸ್ತ್ರಗಳು, ಪರಮಪುರುಷಾ

*ಅತಿರಿಕ್ತ=ಬೇರೆಯಾದ.

ರ್ಥಸಾಧಕವಾದ ವೇದಾಂತಶಾಸ್ತ್ರವೂ ಕೂಡ, ನಿರರ್ಥಕವಾಗಬೇಕಾದೀತು ! ಪರಮಾತ್ಮನ ಸೃಷ್ಟಿಯಲ್ಲಿ ಸತ್ವ ರಜಸ್ತಮೊ ಗುಣಭೇದದಿಂ ಗುಣಮಯವಾದ ಅಂತಃಕರಣಾದಿಗಳಿಗೆ ತಾರತಮ್ಯವಿರುವದಲ್ಲದೆ ಗುಣಾತೀತವಾಗಿ ಅವುಗಳಂ ವ್ಯಾಪಿಸಿಕೊಂಡಿರುವ ಚೈತನ್ಯಕ್ಕೆ ಭೇದವಿಲ್ಲ. ಆದ್ದರಿಂದ ಸಮಸ್ತ ಪ್ರಾಣಿಗಳಿಗೂ ಸ್ವಾಭಾವಿಕ ಕರ್ತೃತ್ವವಿದ್ದುದು. ಅದರಿಂದ ಅಂತಃಕರಣಾದಿಗಳಂ ನಿಗ್ರಹಿಸಿ ಸ್ವರೂಪಸ್ಥಿತಿಯಲ್ಲಿ ನಿಲ್ಲುವದಕ್ಕೂ, ಅಂತಃಕರಣಾದಿಗಳನ್ನನುಸರಿಸಿ ವಿಷಯಾಧೀನರಾಗುವದಕ್ಕು ಯೋಗ್ಯತೆಯಿದ್ದುದು. ಇದರಿಂದ ಸ್ವರೂಪನಿಷ್ಠರಾದವರು ನಾರಾಯಣಾದಿಗಳಂತೆ ಸ್ವೇಚ್ಛೆಯಿಂದ ರೂಪಾಂತರಗಳಂ ಪಡೆಯುತ್ತಿದ್ದಾಗ್ಯೂ ಲೀಲಾರ್ಥವಾಗಿ ದೇಹಾಂತರಗಳಂ ಪಡೆಯುತಿದ್ದಾಗ್ಯೂ, ನಿತ್ಯಮುಕ್ತರಾಗಿಯೇ ಇರುವರು. ವಿಷಯಾಧೀನರಾದವರು ಶ್ರುತಿ ಸ್ಮೃತಿರೂಪವಾದ ಪರಮಾತ್ಮನ ಆಜ್ಞೆಯನ್ನುಲ್ಲಂಘಿಸಿದ್ದರಿಂದ ಸಕಲ ಪಾಪಮೂಲವಾದ ಅಜ್ಞಾನದಿಂದಾವಿಷ್ಟರಾಗಿ ಸಂಸಾರಿಗಳೆನಿಸಿಕೊಳ್ಳುತ್ತಾ ಅವಾಂತರ ಸೃಷ್ಟಿ ಲಯ ಪ್ರವಾಹದಲ್ಲಿ ಬಿದ್ದು ನಾನಾವಿಧವಾದ ಕಷ್ಟಗಳನ್ನನುಭವಿಸುತ್ತಿರುವರು. ಇವರು ವಿವೇಕ ವೈರಾಗ್ಯವಿಚಾರಾದಿಗಳಿಲ್ಲದೆ ಎಂದಿಗೂ ಮುಕ್ತರಾಗುವದಿಲ್ಲ. ಪರಮಾತ್ಮನಿಗೆ ಸೃಷ್ಟ್ಯಾದಿ ಲೀಲೆಯು ಸ್ವಾಭಾವಿಕವಾದ್ದರಿಂದ ಅನಾದಿಯನಿಸಿಕೊಳ್ಳುವದು. ಹೀಗಿರುವಲ್ಲಿ ದೈವವೆಂಬುವದು ಯಾವದಿರುವದೋ ? ಬುದ್ಧಿಶಾಲಿಗಳು ವಿಚಾರಿಸಬಹುದು. ಎಲೈ ರಘುಕುಲೋತ್ತಮನೇ ! ಯಾವನು ಭೂಮಿಯಲ್ಲಿ ಪುಟ್ಟಿ ಯಾವಾಗ ಅರೋಗದೃಢವಾದ ದೇಹವಂ ಧರಿಸುವನೋ ಆಗ ಅವನು ಪುನಃ ಪುಟ್ಟದಂತೆ ಪ್ರಯತ್ನವಂ ಮಾಡಬೇಕು. ಹೀಗಿರುವಲ್ಲಿ ದೃಷ್ಟಫಲವಾದ ಪೌರುಷವಂ ಬಿಟ್ಟು ಅದೃಷ್ಟಫಲವಾದ ದೈವವನ್ನೆಂಥಾವನಾದರೂ ನಂಬಬಹುದೇ ? ಪ್ರಥಮತಃ ಪುರುಷನಿಗೆ ಪದಾರ್ಥದ ಜ್ಞಾನಉಂಟಾಗುವದು. ಬಳಿಕ ಆ ಕಾರ್ಯದ ಸಾಧನೆಗಳು ತೋರುವಲ್ಲಿ ಅದರಲ್ಲಿ ಇಚ್ಛೆಯಾದರೆ ಅದರ ಸಾಧನೆಯಂ ಮಾಡಬೇಕೆಂದು ತೋರುವದು. ಬಳಿಕ ನೇತ್ರಾದೀಂದ್ರಿಯಗಳ ಚಲನದಿಂದ ಕಾಯವು ಚಲಿಸಲು, ಸಾಧನಗಳಾದ ಸಾಮಗ್ರಿಗಳಿಂದ ಇಷ್ಟಾರ್ಥವು ಸಿದ್ಧಿಸುವದು. ಇಂತು ಪೌರುಷವೆಂಬುವದು ಹುಡುಗರಿಗೂ ಕೂಡ ಪ್ರತ್ಯಕ್ಷವಾಗಿ ಕಾಣುವದಲ್ಲದೆ ದೈವವೆಂಬುವದು ಯಾರಿಗೂ ಕಂಡದ್ದಲ್ಲ. ಗುರು ಶುಕ್ರರು ಸುರಾಸುರರಿಗೆ ಗುರುಗಳಾದ್ದಕ್ಕೂ ನಹುಷನು ಇಂದ್ರನಾದ್ದಕ್ಕೂ, ಈ ವಿಶ್ವಾಮಿತ್ರನು ಬ್ರಹ್ಮರ್ಷಿಯಾದ್ದಕ್ಕೂ, *ನಮಿಗೆ ಗಗನಗತಿ ಉಂ

*ನಮಿಗೆ=ವಸಿಷ್ಠಮುನಿಗೆ.

ಟಾದ್ದಕ್ಕೂ, ದರಿದ್ರರು ಧನಿಕರಾಗುವದಕ್ಕೂ, ಬಾಲಕರು ಬುದ್ಧಿಶಾಲಿಗಳಾಗುವದಕ್ಕೂ; ಹ್ಯಾಗೆ ಪೌರುಷವೆ ಸಾಧಕವಾಯಿತೋ ಹಾಗೆ ಸಮಸ್ತ ಶುಭಾಶುಭಕಾರ್ಯಗಳಿಗೂ, ಶುಭಾಶುಭಗಳಾದ ಪೌರುಷಗಳೇ ಸಾಧಕವಾಗುವವು. ಯಾವದು ಶ್ರೆಯಸ್ಕರವೋ, ಯಾವದು ಉತ್ತಮವಾದದ್ದೋ, ಯಾವದು ನಾಶವಿಲ್ಲದ್ದೋ ಅದನ್ನೇ ಸಾಧಿಸೆಂದು ಗುರುಗಳುಪದೇಶವಂ ಮಾಡುವರು. ಅದನ್ನಂಗೀಕರಿಸಿದವರು ಶುಭವಾದ ಪೌರುಷದಿಂದ ಸ್ವರ್ಗಾದಿಸುಖಗಳನ್ನು ಮೋಕ್ಷವನ್ನೂ ಪಡದರು. ಗುರುಶಾಸನವನ್ನುಲ್ಲಂಘಿಸಿದವರು ಅಶುಭವಾದ ಪೌರುಷದಿಂದ ನರಕಾದಿದುಃಖಗಳಂ ಹೊಂದಿದರು. ಮುಖ್ಯವಾಗಿ ತಿನ್ನುವನೇ ತೃಪ್ತನಾಗುವನು. ನಡೆಯುವನೇ ಹೋಗಿಬರುವನು. ಬಾಯಳ್ಳಾಡಿಸುವನೇ ಮಾತನಾಡುವನು. ಕೆಲಸವಂಮಾಡುವನೇ ಕಾರ್ಯ ಸಿದ್ಧಿಯಂಪಡೆಯುವನು. ಹೀಗೆ ಪೌರುಷವು ಯಲ್ಲಾ ಕಡೆಯಲ್ಲೂ, ಪ್ರತ್ಯಕ್ಷಫಲವಾಗಿರುವದು. ದೈವವೆಂಬುವದು ಕಷ್ಟಕಾಲದಲ್ಲಿ ದುಃಖಪಡುವರಿಗೆ ದೈವಗತಿಯೆಂದು ಸಮಾಧಾನವಂ ಪೇಳುವರ ಮಾತಿನಲ್ಲಿಧೆಯಲ್ಲದೆ ಇನ್ನೆಲ್ಲೂಇಲ್ಲ. ದೈವವೆಂಬುವದು ಮೂರ್ತಿಯುಕ್ತವಾದರೆ ದೃಶ್ಯವಾಗಬಹುದು. ಮೂರ್ತಿಯುಕ್ತವಲ್ಲದಿರೆ ಮೂರ್ತಿಯುಕ್ತನಾದವನಿಗೆ ಸಂಬಂಧಿಸದಿರಬಹುದು. ಮನೋಬುದ್ಧಿಗಳಂತೆ ಅದೂ ಒಂದು ಪದಾರ್ಥವಾದರೆ ಅದರ ರೀತಿಯಂತೆ ಇದರ ರೀತಿಯು ಗೋಚರವಾಗಬಹುದು. ಬ್ರಹ್ಮದಂತೆ ಜ್ಞಾನಿಗಳ ಅನುಭವಮಾತ್ರ ಗೋಚರವಾದದ್ದಾದರೆ ಸುಖಸಾಧಕವಾದ ಅದರ ಸಾಧನೆಗಳು ಶಾಸ್ತ್ರೋಕ್ತವಾಗಿರಬಹುದು. ಜೋಯಿಸರು ಜನ್ಮಾಂತರೀಯ ಕರ್ಮಸೂಚಕವಾದ ಗ್ರಹಸ್ಥಿತಿಯನ್ನೇ ದೈವವೆಂದು ಪೇಳುವರು. ಇವನು ದೀರ್ಘಾಯುಷ್ಮಂತನು. ಇವನು ವಿದ್ಯಾವಂತನೆಂದು ಅವರು ಪೇಳಿದಮೇರಿಗೆ ಆ ಮನುಷ್ಯನು ತಲೆಯಂ ಕತ್ತರಿಸಿದಾಗ್ಯೂ ಬದುಕಿದರೆ ಅಧ್ಯಯನವಂ ಮಾಡದಿದ್ದಾಗ್ಯೂ ವಿದ್ಯಾವಂತನಾದರೆ ಅವರ ಮಾತಂ ನಂಬಬಹುದು, ಎಂದು ವಸಿಷ್ಠನು ಪೇಳುತ್ತಿರುವಲ್ಲಿ ಎಲೈ ಗುರುವೆ! ಜನ್ಮಾಂತರೀಯ ಕರ್ಮವೆ ದೈವವೆಂದು ಪೂರ್ವದಲ್ಲಿ ಅಪ್ಪಣೆ ಕೊಡಿಸಿದ್ದಕ್ಕೆ ಈಗ ಪ್ರಕಾರಾಂತರವಾಗಿ ಪೇಳುವಂತೆ ತೋರುತಲಿಧೆ. ಇದರ ನಿರ್ಣಯವೇನು? ಜನಗಳು ಯಾವದನ್ನು ದೈವವೆನ್ನುವರು. ವಿವರಿಸಬೇಕೆಂದು ಶ್ರೀರಾಮಚಂದ್ರನು ಪ್ರಶ್ನೆಯಂ ಮಾಡಲು, ವಸಿಷ್ಠನು ಪೇಳಿದನದೆಂತೆನೆ!

ಎಲೈ ಸುಮತಿಯೆ! ಲೋಕದಲ್ಲಿ ಜನ್ಮಾಂತರೀಯ ಪೌರುಷದಿಂದುಂಟಾಗುವಂಥಾದ್ದು ಉಂಟಾಗತಕ್ಕಂಥಾದ್ದು ಕೂಡ ಶುಭವಾಗಲೀ, ಅಶುಭವಾಗಲೀ,

ದೈವವೆನಿಸಿಕೊಳ್ಳುವದು. ಮತ್ತೂ ಶುಭಾಶುಭಪ್ರಾಪ್ತಿಯಲ್ಲಿ ಹೀಗೇ ನನಗೆ ಸಿಕ್ಷೆಯು ಉಂಟಾಯಿತೆಂತಲೂ, ನನ್ನ ಕರ್ಮ ಹೀಗಿತ್ತೆಂತಲೂ; ಈ ಫಲ ಹೀಗಿತ್ತೆಂತಲೂ, ಜನವಾಕ್ಯವೆ ದೈವವೆನಿಸಿಕೊಳ್ಳುವದು. ಆಕಾಶದಂತೆ ಶೂನ್ಯರೂಪವಾದ ಈ ದೈವವು ಫಲಕಾರಣವಾಗಿ ತೋರುವದಲ್ಲದೆ ಜಡವಾದ್ದರಿಂದ ಯಾವದನ್ನು ಮಾಡಲಾರದು. ಈ ವಿಷಯದಲ್ಲಿ ನಿರ್ಣಯವೇನಂದರೆ ?

ಪುರುಷನು ಯಾವದನ್ನು ಮನಸ್ಸಿನಿಂದ ಚಿಂತಿಸುವನೋ ಅದನ್ನೇ ವಾಕ್ಕು ಪೇಳುವದು ಕಾಯವು ಮಾಡುವದು, ಆದ್ದರಿಂದ ಮನಸ್ಸಿಗೆ ತೋರಿದ್ದೇ ಕರ್ಮವೆನಿಸಿಕೊಳ್ಳುವದು; ಮನಸ್ಸಿನ ಕೋರಿಕೆಯೇ ವಾಸನೆಯೆನಿಸುವದು; ವಾಸನಾನುಸಾರವಾಗಿ ಕರ್ಮ ನಡೆಯುವದಾದ್ದರಿಂದ ಕರ್ಮವೇ ಮನಸ್ಸು, ಮನಸ್ಸೇ ಪುರುಷನೆಂದು ತಿಳಿಯಬರುತ್ತೆ. ಪುರುಷನು ಮನಸ್ಸು ಮೊದಲಾದ ಕರಣಗಳಿಂದ ಯಾವದನ್ನು ಕುರಿತು ಯತ್ನವಂ ಮಾಡುವನೋ ಅದನ್ನೇ ಹೊಂದುವನು. ಆದ್ದರಿಂದ ಫಲೋದಯಕ್ಕೆ ಈಗಿನ ಕರ್ಮವೇ ಕಾರಣವಲ್ಲದೆ ದೈವಕಾರಣವಾಗಲಾರದು. ದೃಢವಾದ ಅಭಿಲಾಷೆಯಿಂದ ಪೂರ್ವದಲ್ಲಿ ಮಾಡಿದ ಕರ್ಮವೇ ದೈವವೆನಿಸಿಕೊಳ್ಳುವದಾದ್ದರಿಂದ ಅದು ಕಾರಣವಾಗಬಹುದೆಂದರೆ ಮನಸ್ಸೆಂತಲೂ, ವಾಸನೆಯೆಂತಲೂ, ಕರ್ಮವೆಂತಲೂ, ದೈವವೆಂತಲೂ ಪುರುಷನಿಗೆ ಹೆಸರುಗಳಾಗಬಹುದು. ಹೀಗಿರುವದ್ದರಿಂದ ಜನ್ಮಾಂತರೀಯಕರ್ಮಕ್ಕೂ ಕಾರಣವಾಗಿ ಅದನ್ನು ಸ್ವಾಧೀನವಾಗಿಟ್ಟುಕೊಂಡು ಸಕಲ ಶುಭಾಶುಭಗಳಿಗೂ, ಸಾಧಕವಾಗುವಂಥಾ ಮನೋಮಯವಾದ ವಾಸನೆಯನ್ನೇ ಶ್ರೇಯೋಭಿಲಾಷೆಯುಳ್ಳವನು ಪರಿಗ್ರಹಿಸಬೇಕು. ಪೂರ್ವಾಪರಗಳ ವಿಚಾರವಲ್ಲದೆ ಪದಾರ್ಥಗಳಲ್ಲಿ ಪ್ರವರ್ತಿಸುವ ಮನೋವೃತ್ತಿಯೇ ವಾಸನೆಯೆನಿಸುವದು. ಹೊಸದಾಗಿ ಬಂದ ಹೆಂಗಸು ತನ್ನ ನಡತೆಯಿಂದ ತಮ್ಮ ತಾಯಿಸರೀತಿಯಂ ತೋರಿಸುವಂತೆ ಪದಾರ್ಥಗಳಂ ಪಿಡಿಯುವ ವಾಸನೆಯು ಪೂರ್ವವಾಸನಾಸಮೂಹವಂ ಸೂಚಿಸುವದು. ಅದು ಶುಭವಾಗಿದ್ದರೆ ಸತ್ಸಹವಾಸಾದಿಗಳಿಂದ ವೃದ್ಧಿಪಡಿಸಬೇಕು. ಅಶುಭವಾಗಿದ್ದರೆ ಶುಭಮಾರ್ಗಕ್ಕೆ ತಿರುಗಿಸಬೇಕು. ಮಗನು ಸೊಸೆಯನ್ನನುಸರಿಸುವಂತೆ ಮನಸ್ಸು ಆ ವಾಸನೆಯನ್ನೆ ಅನುಸರಿಸುವದ್ದರಿಂದ ಅದನ್ನು ಒಳ್ಳೇ ಮಾರ್ಗದಲ್ಲಿ ನಿಲ್ಲಿಸಬೇಕು. ಆಟದಲ್ಲಿರುವ ಬಾಲಕನಿಗೆ ವಿಚಿತ್ರವಾದ ಮತ್ತೊಂದಾಟವಂ ತೋರಿಸಿ ಸ್ವಾಧೀನಪಡಿಸುವಂತೆ ದುರ್ಮಾರ್ಗದಲ್ಲಿರುವ ಮನಸ್ಸಿಗೆ ಸನ್ಮಾರ್ಗದ ರುಚಿಯಂ ತೋರಿಸಿ ವಶವಂಮಾಡಿಕೊಳ್ಳಬೇಕು. ಎಲೈ ಪ್ರಾಜ್ಞನೇ! ನೀನು ದೇಹಾದ್ಯಂತಃಕರಣಾಂತವಾದ ಪದಾರ್ಥಗಳಿಗೆ ಚೈತನ್ಯವನ್ನುಂಟುಮಾಡುವಂ

ಥಾ ಚಿನ್ಮಾತ್ರಸ್ವರೂಪನು ನಿನಗೆ ಚೈತನ್ಯವನ್ನುಂಟುಮಾಡುವನು ಇನ್ನೊಬ್ಬ ನಾಗಬೇಕಾದರೆ ಅವನಿಗೆ ಚೈತನ್ಯವನ್ನುಂಟುಮಾಡುವನು ಮತ್ತೊಬ್ಬನಾಗಬೇಕಾಗುತ್ತೆ. ಇದರಿಂದ ಅವ್ಯವಸ್ಥೆಯಲ್ಲದೆ ಮತ್ತೊಂದಿಲ್ಲವಾದ್ದರಿಂದ ಚಿದ್ರೂಪನಾದ ನಿನ್ನೊಬ್ಬನಂ ಗ್ರಹಿಸುವದೇ ಸಾಕಾಗುವದು. ನಿನಗೆ ಅಸಾಧ್ಯವಾದ್ದು ಒಂದೂ ಇಲ್ಲದ್ದರಿಂದ ಚಿತ್ತವಂ ಶುಭಮಾರ್ಗಕ್ಕೆ ತಿರುಗಿಸಿ ಸ್ವಾಧೀನವಾಗ ಇಟ್ಟುಕೊಳ್ಳುವನಾಗು. ಜುಟ್ಟಂ ಹಿಡಿದವನಿಗೆ ಮೈಯೆಲ್ಲವು ಸ್ವಾಧೀನವಾಗುವಂತೆ ಮನವಂ ಹಿಡಿದ ನಿನಗೆ ವಾಸನಾಸಮೂಹವೆಲ್ಲವು ಸ್ವಾಧೀನವಾಗುವದು. ಯಾವವರಿಗೆ ನೀನು ಸ್ವರೂಪಜ್ಞಾನಿಯಾಗುವೆಯೋ ಆವರಿಗೆ ಗುರುಶಾಸ್ತ್ರೋಕ್ತಮಾರ್ಗದಿಂ ಜಿತೇಂದ್ರಿಯನಾಗಿ ಮನವಂ ನಿನ್ನಲ್ಲಿಯೇ ನಿಲ್ಲಿಸಿಕೊಂಡು ಸ್ವರೂಪವಿಚಾರವಂ ಮಾಡುವನಾಗು. ಅದರಿಂದ ಸ್ವರೂಪಜ್ಞಾನ ಉಂಟಾಗಲು ಸೂರ್ಯೋದಯದಿಂ ತಮಸ್ಸು ಪೋಗುವಂತೆ ವಾಸನಾಸಮೂಹವು ಪೋಗುವದು. ಎಲೈ ದಾಶರಥಿಯೇ ! ಸರ್ವತ್ರಸಮವಾಗಿರುವ ಬ್ರಹ್ಮದ ಸತ್ವವೇ ಪದಾರ್ಥಗಳಲ್ಲಿ ಫಲಪ್ರದವಾದ ನಿಯತಿಎನಿಸಿಕೊಳ್ಳುವದು. ಇದನ್ನೇ ಭವಿತವ್ಯತೆ ಎಂದು ಕೆಲವರು ಪೇಳುವರು; ಇದು ನೀನು ಮಾಡತಕ್ಕ ಪೌರುಷದಲ್ಲೂ ಇರುವದ್ದರಿಂದ ಈ ನಿಯತಿಯು ಇದರ ಸಂಬಂಧಿಯಾದ ಕಾಲವೂ ಸಹಾ ನೀನು ಪುರುಷಾರ್ಥವಂ ಸಾಧಿಸುವದಕ್ಕೆ ವಿಘ್ನವಾಗಲಾರದು. ಆದ್ದರಿಂದ ನೀನು ಗುರುಶಾಸ್ತ್ರವಚನಗಳಂ ನಂಬಿ ಐಹಿಕ ಭೋಗಗಳಂತೆ ಕರ್ಮಾರ್ಜಿತವಾದ ಸ್ವರ್ಗಭೋಗಗಳೂ ನಶ್ವರಗಳೆಂದು ನಿಶ್ಚೈಸಿ ಕೂರ್ಮವು ಅಂಗಗಳಂ ಸೆಳೆಕೊಳ್ಳುವಂತೆ ವಿಷಯಾಸಕ್ತವಾದ ಇಂದ್ರಿಯಗಳಂ ಶೆಳೆಕೊಂಡು ಬ್ರಹ್ಮಮಾಹಾತ್ಮ್ಯವಿಚಾರದಿಂ ರಾಗದ್ವೇಷಗಳಂ ಬಿಟ್ಟು ಸಮಭಾವದಲ್ಲಿ ಮನವಂ ನಿಲ್ಲಿಸುತ ಜಡಾತ್ಮಭಾವದಿಂದುಂಟಾದ ಅಹಂಕಾರವಂ ಬಿಟ್ಟರೆ ಜೀವನ್ಮುಕ್ತಿಯಾಗುವದು. ಪ್ರಾರಬ್ಧಭೋಗದೊಡನೆ ದೇಹವು ಪೋಗಲು, ಅದೇ ವಿದೇಹ ಮುಕ್ತಿಎನಿಸುವದು. ರಾಕ್ಷಸವೇಷವಂ ಧರಿಸಿ ರಾಕ್ಷಸಭಾವಾವೇಶದಿಂ ಕುಣಿಯುವ ನಟನಂತೆ ಜಡಾತ್ಮಭಾವದಿಂ ಮೆರೆಯುವ ನೀನು ದುಃಖಜನಕವಾದ ದುರ್ವಾಸನೆಗಳು ಪೋಗುವಂತೆ ಸದ್ವಾಸನೆಗಳಂ ವೃದ್ಧಿಹೊಂದಿಸುವನಾದರೆ ದುರಹಂಕಾರವಳಿದು ಅಖಂಡಸ್ವರೂಪನಾದ ಪರಮಾತ್ಮನಿಗೆ " ನಾನು " ಅಭಿನ್ನನೆಂದು ಜ್ಞಾನವುಂಟಾಗುವದು. ಚಿತ್ಸ್ವರೂಪದಿಂ ಸಜಾತೀಯರಾದ ಜೀವರಲ್ಲೂ, ಜಡಸ್ವರೂಪದಿಂ ವಿಜಾತೀಯವಾದ ಮಾಯಾಪ್ರಪಂಚಗಳಲ್ಲೂ, ಸ್ವಗತವಾದ ಜ್ಞಾನೇಚ್ಛಾದಿ ಶಕ್ತಿಗಳಲ್ಲೂ ಭೇದವಿಲ್ಲದೆ ಪರಿಪೂರ್ಣಭಾವದಿಂದಿರುವ, ಪರಮಾತ್ಮವಿಲಾಸದಲ್ಲಿ

ನಾನು ನನ್ನದೆಂಬ ಭೇದವೆಲ್ಲಿಯದೆಂದು ಶಾಸ್ತ್ರಸಿದ್ಧವಾದ ಗುರುವಾಕ್ಯವು ಅನುಭವಗೋಚರವಾಗಿ ಅದೇರೂಢಮೂಲವಾಗಲು ಜೀವನ್ಮುಕ್ತಿಯಾಗುವದು. ಜೀವನ್ಮುಕ್ತಿಯಾಗದೆ ವಿದೇಹಮುಕ್ತಿಯಾಗುವದಿಲ್ಲವಾದ್ದರಿಂದ ಜೀವನ್ಮುಕ್ತಿ ಸಾಧನವಾದ ಈ ಶಾಸ್ತ್ರವಂ ಸಾವಧಾನವಾಗಿ ಕೇಳುವನಾಗು.

ಸಮಸ್ತ ಚರಾಚರ ಪ್ರಾಣಿಗಳಲ್ಲೂ, ಮಣಿದೀಪದಂತೆ ಪರಮಾತ್ಮನು ಪ್ರಕಾಶಿಸುತಲಿಥಾಸೆಯಷ್ಟೆ. ಮಾಯಾವಿಲಾಸಗಳಲ್ಲೂ ವಿಕರೀತಿಯಾಗಿರುವ ಈ ಪರಮಾತ್ಮನಲ್ಲಿ ಅಮೃತ ಸಮುದ್ರವಲ್ಲಿ ತರಂಗದಂತೆ ನಾರಾಯಣನು ಪುಟ್ಟಿದನು, ನಕ್ಷತ್ರಗಳೇ ಕೇಸರಗಳಾಗಿ, ಮೇರುವೇ ಕರ್ಣಿಕೆಯಾಗಿ, ದಿಕ್ಕುಗಳೇ ದಳವಾಗಿರುವ ಈ ಲಕ್ಷ್ಮೀಪತಿಯ ಹೃದಯ ಕಮಲದಲ್ಲಿ ಮಕರಂದದಂತೆ ಬ್ರಹ್ಮನು ಪ್ರಕಾಶಿಸಿದನು. ಮನಸ್ಸಿನಿಂದ ವಿಕಲ್ಪಗಳಂತೆ ಅವನಿಂದ ಈ ಪ್ರಪಂಚಗಳೆಲ್ಲವು ಪುಟ್ಟಿದವು. ಈ ಭಾರತವರ್ಷದಲ್ಲಿ ಆಧಿವ್ಯಾಧಿಗಳಿಂ ವ್ಯಾಕುಲರಾಗಿರುವ ಪ್ರಾಣಿಗಳಂ ನೋಡುವ ಆ ಬ್ರಹ್ಮನು, ದುಃಖಪಡುವ ಮಕ್ಕಳುಗಳಂ ನೋಡುವ ತಂದೆಯಂತೆ, ಕೃಪಾವಿಷ್ಟನಾಗಿ ದುಃಖ ಕಾರಣವಾದ ಪಾಪಕ್ಕೆ ನಾಶಕವಾದ ತಪೋದಾನ ಧರ್ಮ ಸತ್ಯ ತೀರ್ಥಗಳಂ ಸೃಜಿಸಿ ಇವುಗಳಿದ್ದಾಗ್ಯೂ ಜಡಾತ್ಮ ಜ್ಞಾನರೂಪವಾದ ಅಜ್ಞಾನವೇ ಪಾಪಗಳಿಗೆ ಮೂಲವಾದ್ದರಿಂದ ಆ ಅಜ್ಞಾನ ಪರಿಹಾರವಾಗದೆ ಇವರು ಕೃತಾರ್ಥರಾಗುವದಿಲ್ಲ. ತಮಸ್ಸಿಗೆ ತೇಜಸ್ಸಿನಂತೆ ಅಜ್ಞಾನಕ್ಕೆ ಜ್ಞಾನವೇ ಮೃತ್ಯುವಾಗುವದು. ಉದಯಾಚಲದಿಂದ ಸೂರ್ಯನಂತೆ ಗುರುವಿನಿಂದಲೇ ಜ್ಞಾನ ವುದಯಿಸತಕ್ಕದ್ದೆಂದು ಆಲೋಚಿಸುತ್ತಿರುವಲ್ಲಿ ಶರೀರವಂ ಧರಿಸಿದ ಸಂಕಲ್ಪದಂತೆ ಆ ಬ್ರಹ್ಮನ ಮನದಿಂ *ನಾನು ಪೊರಮಟ್ಟೆನು. ಕಾಲವೆಂಬ ಪುರುಷನು ಶರತ್ಕಾಲದ ಮೇಘದಲ್ಲಿ ಚಂದ್ರನಂ ಕೇರಿಸುವಂತೆ ಆ ಬ್ರಹ್ಮನು ತನಿಗೆ ಆಸನವಾದ ಕಮಲದ ಒಂದು ದಳದಲ್ಲಿ ನನ್ನಂ ಕುಳ್ಳಿರಿಸಿಕೊಂಡು ಎಲೈ ಬಾಲಕನೆ! ಚಂದ್ರನಿಗೆ ಕಳಂಕದಂತೆ ನಿನ್ನ ಮನಸ್ಸಿಗೆ ಮುಹೂರ್ತಮಾತ್ರವಜ್ಞಾನ ಬರಲೆಂದು ಶಪಿಸಿದನು. ಆಗ ನನಿಗೆ ವೇಷಧಾರಿಗೆ ಆವೇಶಬಂದಂತೆ ದೇಹವೇ ನಾನೆಂಬ ಮೋಹವುಂಟಾಯಿತು. ಬಿಸಲು ದೊರೆಯಂ ನೋಡಿದ ಮೃಗಗಳಂತೆ ನನ್ನ ಅಂತಃಕರಣಾದಿಗಳು ವಿಷಯಾಭಿಮುಖವಾಗಿ ಪ್ರವರ್ತಿಸಿದವು. ಬಿರಿಗಾಳಿ ಬಡಿದ ಸಮುದ್ರದಲ್ಲಿ ತೆರೆಗಳಂತೆ ನನ್ನ ಮನದಲ್ಲಿ ಕಾಮಕ್ರೋಧಾದಿಗಳುಂಟಾದವು. †ಗತಪಾಥೇಯನಾದಪಥಿಕನಂತೆ ನಾನು ಕ್ಷುತ್ಪಿಪಾಸೆಗಳಿಂದಾಕುಲನಾದೆನು. ಸರ್ವಸ್ವವಂ ಕಳಕೊಂಡ ಭಿಕ್ಷುಕನಂತೆ ನಾನು ವ್ಯಥೆಪಡುತ್ತಾ ಯೇನುಕಾರಣ

* ನಾನು—ವಸಿಷ್ಠ.

† ಬುತ್ತಿಮುಗಿದವನು.

ಇಂಥಾಕಷ್ಟ ನನಿಗೆ ಬಂದುದೆಂದು ಚಿಂತಿಸುತ್ತಿರುವಲ್ಲಿ ಎಲೈ ಬಾಲಕನೆ! ನಿನಗೇನು ವ್ಯಥೆಯುಂಟಾಗಿರುವದು ಬಂದರೋಗವು ಮುಚ್ಚಿಕೊಳ್ಳತಕ್ಕದ್ದಲ್ಲವಾದ್ದರಿಂದ ಅದಂ ನೀನು ಪೇಳುವನಾಗು, ತಿಳಿದವರು ಅದರ ನಾಶೋಪಾಯವಂ ಪೇಳುವರೆಂದು ಆ ಬ್ರಹ್ಮನು ನನ್ನಂಕುರಿತು ಪೇಳಿದನು. ಆಗ ನಾನು ಎಲೈ ತಂದೆಯೇ ! ದುಃಖಮಯವಾದ ಸಂಸಾರವು ನನಿಗೆ ಹ್ಯಾಗೆ ಬಂದುದು ಇದು ಹೋಗುವದು ಹ್ಯಾಗೆ ಎಂದು ಕೇಳಲು ಆ ಜಗತ್ಪಿತಾಮಹನು ನನಿಗೆ ಕರ್ಮಮಾರ್ಗವನ್ನು, ಜ್ಞಾನಮಾರ್ಗವನ್ನು, ಪೇಳಿ ಧೂಳುಪೋದ ಅಪರಂಜಿಯಂತೆ ಸ್ವಾಭಾವಿಕವಾದ ರೀತಿಯಂ ನಾನು ಪಡದ ಬಳಿಕ ಎಲೈ ವತ್ಸನೆ! ನಿತ್ಯಾನಂದನಾದ ನನಿಗೆ ದುಃಖಪಡುವರ ರೀತಿಯು ತಿಳಿಯದೆ ಕರುಣೆಯುಂಟಾಗುವದಿಲ್ಲವಾದ್ದರಿಂದ ಸಂಸಾರಿಗಳ ಕಷ್ಟವು ನಿನಗೆ ಗೋಚರವಾಗುವಂತೆ ಶಪಿಸಿದೆನು. ಈಗ ತತ್ವಜ್ಞಾನೋಪದೇಶದಿಂ ನೀನು ನನ್ನಂತೆ ಸಹಜವಾದ ಅದ್ವಿತೀಯಭಾವದಿಂದಿರುವನಾದ್ದರಿಂದ ಪೇಳುವೆನು, ನೀನು ಭರತವರ್ಷಕ್ಕೆ ಪೋಗಿ ಕರ್ಮಠರಿಗೆ ಕರ್ಮಮಾರ್ಗವನ್ನು, ವಿರಕ್ತರಿಗೆ ಜ್ಞಾನಮಾರ್ಗವನ್ನು, ತಿಳಿಪಡಿಸುತ್ತಾ ಕಲ್ಪಾಂತವಾಗೂವರಿಗೆ ಇರುವನಾಗೆಂದು ಆಜ್ಞಾಪಿಸಿದನು, ಆಗ ಇಲ್ಲಿಗೆ ಬಂದ ನಾನು ಮನೋವ್ಯಾಪಾರವಿಲ್ಲದ ಸುಷುಪ್ತನ ವೃತ್ತಿಯಂತೆ ತಟಸ್ಥಭಾವದಿಂದಿರುವ ಬುದ್ಧಿಯಿಂದ ಬ್ರಹ್ಮನ ಆಜ್ಞೆಯಂ ನಡೆಸುತ್ತಾ ನಿರ್ಲೇಪನಾಗಿರುವೆನು ನನ್ನಂತೆಯೇ ಸನತ್ಕುಮಾರ ನಾರದ ಮೊದಲಾದ ಮಹರ್ಷಿಗಳು ಕಳುಹಿಸಲ್ಪಟ್ಟಿರುವರು. ಪೂರ್ವದ ಕೃತಯುಗವು ಪೋಗುವಲ್ಲಿ ಧರ್ಮವು ಕಡಮೆಯಾದ್ದರಿಂದ ಲೋಕದಲ್ಲಿ ವೈದಿಕಮಾರ್ಗವು ಮಲಿನವಾಗುತ ಬರಲು ಕರ್ಮಮಾರ್ಗಗಳಂ ಸರಿಯಾಗಿ ನಡೆಸಲೋಸುಗವು ಲೋಕದಲ್ಲಿ ಶಾಸ್ತ್ರೀಯವಾದ ಮರ್ಯಾದೆಗಳಂ ನಿಲ್ಲಿಸಲೋಸುಗವು, ದೇಶಭೇದದಿಂದ ಅನೇಕ ರಾಜರುಗಳು ನಮ್ಮಿಂದ ನಿಲ್ಲಿಸಲ್ಪಟ್ಟರು. ಧರ್ಮಾರ್ಥಕಾಮಪ್ರಧಾನವಾದ ಅನೇಕ ಸ್ಮೃತಿಗಳೂ ಸಹ ಮಾಡಲ್ಪಟ್ಟವು, ಕಾಲಕ್ರಮದಿಂ ಧರ್ಮವು ಕಡಮೆಯಾಗುತ್ತಾ ಗತಶಾಸ್ತ್ರಕರ್ಮವು ತಪ್ಪಲು ಕ್ಷುತ್ಪಿಪಾಸೆಗಳಿಂ ಪೀಡಿತರಾದ ಜನಗಳು ಧಾನ್ಯಸಂಗ್ರಹದಲ್ಲಿ ಉದ್ಯುಕ್ತರಾಗಲು ವಿಷಯಲೋಭದಿಂ ದೊರೆಗಳು ಯುದ್ಧಾಸಕ್ತರಾಗಲು, ಅವರ ಪರಸ್ಪರಯುದ್ಧದಿಂ ಪ್ರಾಣಿಗಳು ಘಾಸಿಪಡುತ್ತಿರಲೂ ಸಮರ್ಥರಾದ ದೊರೆಗಳು ದೇಹಾಭಿಮಾನದಿಂ ಕೂಡಿ ಯುದ್ಧಕ್ರಮದಿಂ ದುಷ್ಟರಂ ನಿಗ್ರಹಿಸಲಸಮರ್ಥರಾಗಲೂ, ವೈಷ್ಣುರವೆಯಿಂದವರು ದುಷ್ಟರಂ ನಿಗ್ರಹಿಸಿ ಶಿಷ್ಟರಂ ರಕ್ಷಿಸಲೋಸುಗವು, ಲೋಕದಲ್ಲಿ ಜ್ಞಾನಮಾರ್ಗದ ಪ್ರಚಾರಕ್ಕೋಸುಗವು ದೀನರಾದ ಜನಗಳ ದುಃಖನಾಶ

ಕ್ಕೊಸುಗವು ರಾಜರಿಗೆ ನಾವು ಅಧ್ಯಾತ್ಮವಿದ್ಯೆಯಂ ಪೇಳಿಕೊಟ್ಟೆವು, ಅದರಿಂದ ಈ ಜ್ಞಾನಶಾಸ್ತ್ರವು ರಾಜವಿದ್ಯೆಯೆನಿಸಿಕೊಂಡಿತು. ಇದರಿಂದ ಪೂರ್ವದ ಮಹಾರಾಜರು ತತ್ವಜ್ಞಾನಿಗಳಾಗಿ ನಾನು ನನ್ನದೆಂಬ ಅಭಿಮಾನವಿಲ್ಲದ್ದರಿಂದ ಕರ್ಮಬಂಧವಿಲ್ಲದೆ ಶಾಸ್ತ್ರಕ್ರಮವಾಗಿ ನಿಗ್ರಹಾನುಗ್ರಹಗಳಿಂದ ಲೋಕಮರ್ಯಾದೆಗಳಂ ನಿಲ್ಲಿಸಿ ಧರ್ಮದಿಂ ರಾಜ್ಯಭಾರವಂ ಮಾಡುತ್ತಾ ಮಹಾತ್ಮರೆನಿಸಿಕೊಂಡರು; ಈಚಿಗೆ ದಶರಥರಾಯನ ತಪಃಪ್ರಭಾವದಿಂ ಪುಟ್ಟಿರುವ ನೀನು ವಿವೇಕವಿಚಾರಗಳಿಂದಲೇ ವೈರಾಗ್ಯವಂ ಪಡೆದು ಪರಿಮಳಯುಕ್ತವಾದ ಸುವರ್ಣಪುಷ್ಪದಂತೆ ಲೋಕಕ್ಕೆ ಆಶ್ಚರ್ಯಕರನಾಗಿದ್ದೀಯೇ ? ಬೀಭತ್ಸವಾದ ವಿಷಯಗಳನ್ನು, ಸರ್ವಸ್ವನಾಶವನ್ನು ಪ್ರಿಯಜನ ದುಃಖವನ್ನೂ, ರೋಗಾದಿ ಬಾಧೆಗಳನ್ನೂ, ಸಹ ಅನುಭವಿಸುತ್ತಿದ್ದಾಗ್ಯೂ ಜನಗಳು ವೈರಾಗ್ಯವಂ ಹೊಂದುವದಿಲ್ಲ. ಒಂದು ವೇಳೆ ವೈರಾಗ್ಯವಂ ಪಡದಾಗ್ಯೂ ಇಂಥಾ ನಿಮಿತ್ತದಿಂದಲೇ ಪಡೆಯುವರು. ಕೆಲವರಿಗೆ ದಾನಧರ್ಮ ತೀರ್ಥಯಾತ್ರಾದಿ ಸತ್ಕರ್ಮಗಳಿಂದಲೂ ತಪಸ್ಸುಗಳಿಂದಲೂ, ಪಾಪ ಕ್ಷಯವಾಗುತ್ತಿರಲು, ಬಹುಕಾಲಕ್ಕೆ ಈಶ್ವರಪ್ರಸಾದದಿಂ ವಿವೇಕವೈರಾಗ್ಯಗಳುಂಟಾಗುವವು. ನೀನು ಸ್ವಲ್ಪವಾದರೂ ಪ್ರಯಾಸಪಡದೆ ವಿವೇಕವೈರಾಗ್ಯಗಳಿಂ ಪ್ರಕಾಶಿಸುವದ್ದರಿಂದ ಪರಮೇಶ್ವರನ ಪ್ರಸಾದಕ್ಕೆ ಪಾತ್ರನಾಗಿರುವಂತೆ ಕಾಣುತಲಿದ್ದೀಯೆ, ವೃದುವಾದ ಭೂಮಿಯು ಕಂಡ * ಹಲಿಕನಿಗೆ ಬೀಜವಂ ಬಿತ್ತಲಪೇಕ್ಷೆಯಾಗುವಂತೆ ನಿನ್ನಂ ನೋಡುವವನಿಗೆ ಜ್ಞಾನೋಪದೇಶವಂ ಮಾಡಲಪೇಕ್ಷೆಯುಂಟಾಗುತಲಿಧೆ. ಕರ್ಮಪರರಾದವರು ವಿಷಮವಾದ ಈ ಸಂಸಾರ ಸಮುದ್ರದಲ್ಲಿ ಸುಳಿಗೆ ಸಿಕ್ಕಿದ ತರಗೆಲೆಯಂತೆ ಚಕ್ರಾಕಾರವಾಗಿ ತಿರಗುತ್ತಾ ಬಹುಕಾಲಕ್ಕೆಪರಮೇಶ್ವರನ ಪ್ರಸಾದದಿಂ ಜ್ಞಾನನೆಂಬ ನಾವೆಯಂ ಪಡೆದು ನಿಮಿಷಮಾತ್ರದಿಂದಲೇ ದಾಟಿಹೋಗುವರು. ಜ್ಞಾನರೂಪವಾದ ಉಪಾಯವಂ ತಿಳಿದ ಮಹಾತ್ಮನಿಗೆ ಶೀತೋಷ್ಣ ಸುಖ ದುಃಖಾದಿ ದ್ವಂದ್ವಗಳಿಂದಲೂ, ಇಂದ್ರಿಯಗಳ ಸನ್ನಾಹದಿಂದಲೂ, ಕಾಮ ಕ್ರೋಧಾದಿಗಳ ತುಳಿದಾಟದಿಂದಲೂ, ಆಧಿವ್ಯಾಧಿಗಳ ಸಂದಣಿಯಿಂದಲೂ, ವ್ಯಥೆಯುಂಟಾಗಲರಿಯದು.

ಎಂದು ವಸಿಷ್ಠನು ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಮುಮುಕ್ಷುಪ್ರಕರಣದೊಳ್ ಪೌರುಷಸ್ಥಾಪನ ಜ್ಞಾನಾವತರಣ ನಿರೂಪಣವೆಂಬ ಎರಡನೇ ತರಂಗಕ್ಕೆ ಮಂಗಳಮಹಾ.



* ಕೃಷಿಮಾಡುವವನು.

## ತೃತೀಯ ತರಂಗ ಪ್ರಾರಂಭ.

## ಗುರುಶಿಷ್ಯಯೋಗ್ಯತಾದಿ ಜ್ಞಾನಸಾಧನ ನಿರೂಪಣ.

ಬಳಿಕ ವಸಿಷ್ಠನು ಶ್ರೀರಾಮನಂ ಕುರಿತಿಂತೆಂದನು ; ಎಲೈ ಮಹಾಮತಿಯೇ ! ಈ ಜ್ಞಾನೋಪದೇಶ ವಿಷಯದಲ್ಲಿ ಗುರುಶಿಷ್ಯರಿಬ್ಬರೂ ಯೋಗ್ಯರಾದರೆ ಪರಮಾರ್ಥಸಿದ್ಧಿಯಾಗುವದು. ಶಾಸ್ತ್ರವನ್ನು, ತತ್ವಾರ್ಥವನ್ನು, ಚನ್ನಾಗಿ ತಿಳಿದು ಪರೀಕ್ಷಿಸಲ್ಪಟ್ಟ ಯೋಗ್ಯತೆಯುಳ್ಳ ಶಿಷ್ಯನು ಹ್ಯಾಗೆ ಹ್ಯಾಗೆ ಪ್ರಶ್ನೆಯಂ ಮಾಡಿದರೂ ಕೋಪಿಸಿಕೊಳ್ಳದೆ ಸರ್ವಪ್ರಕಾರದಿಂದಲೂ, ಅವನಿಗೆ ತತ್ವಾರ್ಥವಂ ತಿಳುಹಿಸುವದೇ ಮುಖ್ಯ ಪ್ರಯೋಜನವೆಂದು ನಿಶ್ಚೈಸಿ ಕರುಣೆಯಿಂದವನಿಗೆ ಪೂರ್ವಾಪರ ಸಂದರ್ಭಗಳಿಗೆ ವಿರೋಧವಿಲ್ಲದಂತೆ ಶಾಸ್ತ್ರಾರ್ಥವಂ ತಿಳುಹಿ ಅವನಿಗೆ ತಿಳಿದ ವಿಷಯವಂ ಪರೀಕ್ಷಿಸಿ ನೋಡಿ ಆದಕ್ಕೆ ಸರಿಯಾಗಿ ಅನುಭವದ ರೀತಿಯಂ ತೋರುವ ಗುರುವೇ ಉತ್ತಮನೆನಿಸಿಕೊಳ್ಳುವನು ; ಇಂಥಾ ಗುರುವಿನ ದರ್ಶನವಾಗುವಲ್ಲಿಯೇ ಶಿಷ್ಯನಂ ಹಿಡಿದಿರುವ ಮೋಹಪಿಶಾಚವು ಪಲಾಯನಕ್ರಮವಂ ಧ್ಯಾನಿಸುವದು. ಗುರುವಿನ ಯೋಗ್ಯತೆಯಂ ತಿಳಿದು ಪರದೇವತಾಬುದ್ಧಿಯಿಂದವನಂ ಸೇವಿಸುತ್ತಲೂ, ಅವನ ವಚನವಂ ವೇದವಾಕ್ಯವೆಂದು ಗ್ರಹಿಸುತ್ತಲೂ, ತಿಳಿಯದ ವಿಷಯವನ್ನು ಸಮಯದಲ್ಲಿ ಕೇಳಿ ಚನ್ನಾಗಿ ತಿಳಿದುಕೊಳ್ಳುತ್ತಲೂ, ಅವನ ವಚನಪ್ರಕಾರವಾಗಿ ನಡೆಯುತ್ತಲೂ, ಪರಮಾರ್ಥವಂ ಸಾಧಿಸುವ ಶಿಷ್ಯನೇ ಉತ್ತಮನೆನಿಸುವನು. ಇಂಥಾ ಶಿಷ್ಯನು ಬರುವಲ್ಲಿಯೇ ಕೀರ್ತಿಲಕ್ಷ್ಮಿಯು ಗುರುವಂ ಕಾಮಿಸಿ ಬರುವಳು. ಅಜ್ಞನಂ ಗುರುವೆಂದು ತಿಳಿದು ಪ್ರಶ್ನೆಯಂ ಮಾಡುವ ಶಿಷ್ಯನು ಅಯೋಗ್ಯನಂ ಶಿಷ್ಯನೆಂದು ತಿಳಿದು ಉಪದೇಶವಂ ಮಾಡುವ ಗುರುವು ಭ್ರಾಂತರೆನಿಸಿಕೊಳ್ಳುವರು ; ಇವರ ಪ್ರಶ್ನೋಪದೇಶಗಳು ಮರುಭೂಮಿಯಲ್ಲಿ ಬಿತ್ತಿದ ಬೀಜಗಳಂತೆ ಫಲಿಸವು ; ಇಬ್ಬರೂ ಯೋಗ್ಯರಾಗಿದ್ದರೆ ಕೇಸರಿಯ ಬಣ್ಣವು ಬಟ್ಟೆಗೆ ತಗಲುವಂತೆ ಗುರೂಪದೇಶವು ಶಿಷ್ಯನಂ ಹೊಂದುವದು. ನಮ್ಮಿಬ್ಬರಿಗೂ ಗುರುಶಿಷ್ಯಭಾವವು ಸಹಜವಾಗಿಯೂ, ಯೋಗ್ಯವಾಗಿಯೂ ಇರುವದ್ದರಿಂದ, ನಿನಗೆ ನಾನು ತತ್ವಾರ್ಥಗಳಂ ಪೇಳುವೆನು, ನೀನು ರಜಸ್ತಮೋದೋಷವಿಲ್ಲದ ಬುದ್ಧಿಯಿಂದ ನಾನು ಪೇಳಿದ್ದಂ ಗ್ರಹಿಸುತ್ತಾ ತಿಳಿಯದ ವಿಷಯವಂ ಕೇಳಿ ತಿಳಿದುಕೊಳ್ಳುವನಾಗು ; ವಿವೇಕಿಯಾದವನು ಶಾಸ್ತ್ರವಂ ಕಲಿಯುವದಕ್ಕು, ಅದರ ತಾತ್ಪರ್ಯವಂ ತಿಳಕೊಳ್ಳುವದಕ್ಕೂ, ಅದನ್ನು ಮನನಾದಿಗಳಿಂದ ಸ್ಥಿರಪಡಿಸಿಕೊಳ್ಳುವದಕ್ಕೂ, ಅದಕ್ಕೆ

ಸರಿಯಾದ ಸುಖವನ್ನನುಭವಿಸುವದಕ್ಕೂ ಯೋಗ್ಯನಾಗುವನು. ಅವಿವೇಕಿಯ ಬುದ್ಧಿಯು ಗಾಳಿಯಿಂದ ಹಿಮವು ಕಲ್ಲಾಗುವಂತೆ ದುಸ್ಸಂಗದಿಂದ ದಿನದಿನಕ್ಕೆ ಮೂಢವಾಗುವದು. ಆದ್ದರಿಂದ ಸತ್ಸಂಗಪೂರ್ವಕವಾದ ಪ್ರಯತ್ನಗಳಿಂದ ಬುದ್ಧಿಗೆ ಮಾಂದ್ಯವಂ ತಪ್ಪಿಸಬೇಕು. ಈ ಶಾಸ್ತ್ರದ ವಿಚಾರದಿಂ ತೀಕ್ಷ್ಣವಾಗಿ ನಿರ್ಮಲವಾದ ಪ್ರಜ್ಞೆಯುಳ್ಳವನಿಗೆ ಅಜ್ಞನಿಗೆ ಮೋಹಕವಾದ ಈ ಪ್ರಪಂಚವು ಶರತ್ಕಾಲದ ಪೂರ್ಣಚಂದ್ರನ ಚಂದ್ರಿಕೆಯಿಂದ ಸಾಂದ್ರವಾಗಿರುವಂತೆ ಆನಂದಕರವಾಗುವದು. ಮತ್ತು ಇಂದ್ರಜಾಲದಂತೆ ವಿನೋದಸ್ಥಾನವಾಗುವದು. ಗರುಡ ಮಂತ್ರದಿಂ ವಿಷವಿಳಿಯುವಂತೆ ಈ ಶಾಸ್ತ್ರದ ಶ್ರವಣದಿಂ ಮೋಹವಳಿಯುವದು. ಸೂರ್ಯಕಿರಣಪ್ರಚಾರದಿಂ ಜಾರೆಯರು ಅಣಗುವಂತೆ ಇದರ ವಿಚಾರದಿಂ ದುರಾಲೋಚನೆಗಳು ಮರೆಯಾಗುವವು ; ಪೂರ್ಣಚಂದ್ರೋದಯದಿಂ ತಾಪರೋಗದಂತೆ ಇದರಲ್ಲಿ ಜ್ಞಾನೋದಯದಿಂ ಸಂಸಾರ ದುಃಖವಡಗಿ ಪರಮಾನಂದವುಂಟಾಗುವದು. ತತ್ವಜ್ಞಾನದಲ್ಲಿ ಸ್ಥಿತಿಯುಂಟಾದ ಜೀವನ್ಮುಕ್ತನಿಗೆ ಆನಂದಮಯವಾಗುವ ಜಗವು ಸಂಸಾರರಿಗೆ ದುಃಖಮಯವಾಗಿಕಾಣುವದು. ಸಂಸಾರಿಯು ಯಾವದನ್ನನುಭವಿಸುವದಿಲ್ಲವೋ ಆ ದುಃಖವು ಜಗತ್ತಿನಲ್ಲಿಯೇ ಇಲ್ಲವೆಂದು ತಿಳಿಯಬರುತ್ತೆ. ಇವನು ಬದುಕಿದ್ದರೂ ಸತ್ತರೂಕೂಡ ನರಕ ದುಃಖವು ತಪ್ಪುವದಿಲ್ಲ ; ಅದೆಂತೆಂದರೆ;—ಅಸಿಲತಾವನದಂತೆ ಕಾಮಿನೀ ಸಮೂಹವು ಅವನನ್ನು ಆವರಿಸುವದು, ಕುಂತಗಳಂತೆ ಕಾಮಿನೀ ಕಟಾಕ್ಷಗಳು ವೇಧಿಸುವವು, ಕುಂಭೀಪಾಕದಂತೆ ಸ್ತ್ರೀಭೋಗವು ಸಂತಾಪವನ್ನುಂಟುಮಾಡುವದು. ದೂತಿಯರ ನಖ ದಂತಗಳಿಂದಲೇ ಮೈಯಲ್ಲವು ಗಾಯವಾಗುವದು. ಕಬ್ಬಿಣದ ಕಾಗೆಗಳಂತೆ ಕಾಮ, ಕ್ರೋಧಗಳು ಬಾಧಿಸುವವು. ವಜ್ರದುಂಬೆಗಳಂತೆ ರೋಗಗಳು ಶರೀರವಂ ಚಾಲಗವಾಕ್ಷವಾಗಿ ಮಾಡುವವು. ಮಲ, ಮೂತ್ರ, ಶುಕ್ಲ, ಶೋಣಿತ, ಶ್ಲೇಷ್ಮಮಯವಾದ ಪ್ರವಾಹದಲ್ಲೆ ಮಜ್ಜನವಾಗುವದು. ಅತಿ ಕ್ಷುತ್ತಿನಲ್ಲಿ ತನ್ನ ಮಾಂಸವೆ ಆಹಾರವಾಗುವದು. ಪಿಪಾಸೆಯಲ್ಲಿ ನಿಜಮುಖಜಲವೇ ಪಾನೀಯವಾಗುವದು. ಕಾಲಸೂತ್ರದಂತೆ ದುರಾಶೆಯೇ ಬಂಧಕವಾಗುವದು. * ತಪ್ತವಾಲುಕೆಯಲ್ಲಿ ನಡೆಯುವಂತೆ ಸ್ಮರಣಮಾತ್ರದಿಂ ಸಂತಾಪಕವಾದ ದುಃಖಮಾರ್ಗದಲ್ಲಿ ಸಂಚಾರವುಂಟಾಗುವದು. ನಾಯಿಗಳಂತೆ ಚಿಂತೆಗಳು ಶೆಳೆಯುವವು,ಅಂಧಕೂಪದಲ್ಲಿ ಬೀಳುವಂತೆ ಮೋಹದ ಮಡುವಿನಲ್ಲಿ ಪತನವಾಗುವದು. ಸೂಜೀಮುಖ

* ಕಾದ ಮರಳು.

ದಂತೆ ಜನವಾಕ್ಯವು ವ್ಯಥೆಯನ್ನುಂಟುಮಾಡುವದು. ಯತ್ರೆತ್ತಲಾಗಿ ಓಡಿದರೂ ಮೃತ್ಯುಭಯವು ತಪ್ಪುವದಿಲ್ಲ. ಮತ್ತು ಧನಾಶೆಯಿಂದಲೂ, ಸ್ತ್ರೀಮೋಹದಿಂದಲೂ, ಚೌರ್ಯದ್ಯೂತ ಮೊದಲಾದ ದುರ್ಮಾರ್ಗಗಳಲ್ಲಿ ಬೀಳುವ ಕಾಮಿಗೆ ಕೈಗೆ ಕೋಳವು, ಕಾಲಿಗೆ ಸಂಕೋಲೆಯು, ಮಾನಭಂಗವು, ಅಂಗಛೇದವು, ಪಾದುಕಾಪ್ರಹಾರವು, ಸರ್ವಸ್ವಾಪಹಾರವು, ಭೃಗುಪತನವು, ಜಲಾಗ್ನಿ ಪ್ರವೇಶವು, ದೇಶಭ್ರಂಶವು, ಅಕಾಲಮೃತ್ಯುವು, ಇನ್ನು ಹೇಳಲಶಕ್ಯವಾದಂಥಾ ಎಣಿಸಲಶಕ್ಯವಾದ ದುಃಖಗಳು ಸಂಭವಿಸುವವು. ಆದ್ದರಿಂದ ನರಕ ಸಮೂಹಕ್ಕಿಂತಲೂ ಸಂಸಾರವು ಅತಿ ದುಃಖಕರವೆಂದು ತೋರುತಲಿಧೆ. ಸಕಲ ದುಃಖಗಳಿಗೂ ಅಜ್ಞಾನವೇ ಕಾರಣವಾದ್ದರಿಂದ ಅದರನಾಶಕ್ಕೋಸುಗ ಸುಖಾಪೇಕ್ಷೆಯಾದವನು ಪ್ರಯತ್ನವಂ ಮಾಡಬೇಕು. ಮಹಾರೋಗಕ್ಕಿಂತಲೂ ಅಂತಶ್ಶತ್ರುವಿಗಿಂತಲೂ ಅಧಿಕವಾಗಿ ಬಾಧೆಪಡಿಸುವದ್ದರಿಂದ ಈ ಸಂಸಾರರೋಗವನ್ನುಪೇಕ್ಷಿಸದೆ ಜ್ಞಾನಿಗಳಿಂದಿದಕ್ಕೆ ಚಿಕಿತ್ಸೆಯುಂ ಮಾಡಿಸಬೇಕು. ಸತ್ಸಹವಾಸದಲ್ಲಿ ಸಂಭವಿಸಿದ ಶಾಸ್ತ್ರವಿಚಾರದಿಂದ ದೇಹವೇ ತಾನೆಂಬ ಮೋಹವಳಿಯಲು ಆತ್ಮಾನಾತ್ಮಗಳಿಗೆ ಅಭೇದಜನಕವಾದ ಅವಿದ್ಯೆಯಣಗಲು ಸರ್ವಾತೀತನಾತ್ಮವೆಂದು ತತ್ವಾರ್ಥವು ತಿಳಿಯಲು ಅನಾತ್ಮಪದಾರ್ಥಗಳ ಸತ್ವವಂ ವಿಚಾರಿಸುವಲ್ಲಿ ಆತ್ಮನೊಬ್ಬನೇ ಶಾಶ್ವತವಾಗಿ ಉಳಿಯಲು ದೇಶ ಕಾಲ ವಸ್ತು ಪರಿಚ್ಛೇದರಹಿತವಾದ ಆತ್ಮನ ಸ್ವರೂಪವು ವಿದಿತವಾಗಲು ಅದರಿಂದಹಂಕಾರವು ಮರಳಿ ಬರದಂತೆ ಪೋಗಲು ಸರ್ವಸಾಕ್ಷಿಭಾವದಿಂದಿರುವ ಮಹಾತ್ಮನಿಗೆ ಜಗವೆಲ್ಲವೂ ಇಂದ್ರಜಾಲವಾಗಿ ಕಾಣುವದ್ದರಿಂದ ಇದರಲ್ಲಿ ಸಂಚರಿಸುವದೇ ಕ್ರೀಡೆಯಾಗುವದು. ಮರಳಿ ಅಜ್ಞಾನಕ್ಕೆ ಪ್ರಸಕ್ತಿಯಿಲ್ಲದ್ದರಿಂದ ಆತ್ಮನು ಪ್ರಸನ್ನನಾಗಿರಲು ಇದು ಭಿನ್ನಪದಾರ್ಥವೆಂಬ ಭ್ರಮೆಯಿಂದ ದೃಶ್ಯವಾದ ವಿಷಯದ ಭೋಗದಲ್ಲಿ ಕುಕಲ್ಪನೆಗಳಡಗುತ್ತಿರಲು ಅದರಿಂದ *ನಿವಾತದೀಪದಂತೆ ಮನವು ಚಲಿಸದಿರಲು ಬ್ರಹ್ಮಮಹಿಮ ವಿಚಾರದಿಂದ ಸರ್ವವೂ ಬ್ರಹ್ಮವೆಂಬ ದೃಢಬುದ್ಧಿಯಿಂದ ತಾನು ತನ್ನದೆಂಬುವದೆಲ್ಲವೂ ಕೂಡ ಬ್ರಹ್ಮಕ್ಕೆ ಅಭಿನ್ನವೆಂದು ತಿಳಿದು ಪರಮಾತ್ಮನೊಬ್ಬನೇ ಬಹುರೂಪನಾಗಿ ತರಂಗಗಳು ತರಂಗಗಳಿಂದಾಡುವಂತೆ ವಿಷಯಗಳಲ್ಲಿ ಅಂತಃಕರಣಾದಿಗಳು ಪ್ರವರ್ತಿಸುವವೆಂದು ನಿಶ್ಚಯ ಜ್ಞಾನದಿಂದಾತ್ಮಾರಾಮನಾಗಿರುವ ಮಹಾತ್ಮನಿಗೆ ಲೋಕಸಂಚಾರವು ಕ್ರೀಡೆಯಾಗುವದು. ಶ್ರುತಿ ಸ್ಮೃತಿರೂಪವಾದ ಕಡಿವಾಣಗಳ ನಿರ್ಬಂಧದಿಂದ ಇಂದ್ರಿಯ ತು

* ಗಾಳಿ ಇಲ್ಲದಿರುವ ಸ್ಥಳದಲ್ಲಿರುವ.

ರಂಗಗಳಂ ಕ್ಷುದ್ರಮಾರ್ಗಕ್ಕೆ ಬಿಡದೆ ಮರವೆಯಿಲ್ಲದಿರುವ ಮನವೆಂಬ ಸಾರಥಿಯಿಂ ರಕ್ಷಿಸಲ್ಪಡುವ ಶರೀರವೆಂಬ ರಥವನ್ನೇರಿ ಪ್ರಣವವೆಂಬ ಧನುವಿನಲ್ಲಿ ಬುದ್ಧಿ ಎಂಬ ಬಾಣವಂ ಸೇರಿಸಿ ವಿಚಾರವೆಂಬ ಶೆಳತದಿಂದ ಸರಿಮಾಡಿಕೊಂಡು ನಿರ್ಗುಣವಾದ ಬ್ರಹ್ಮವೆಂಬ ಲಕ್ಷ್ಯವಂ ವೇಧಿಸುವಲ್ಲಿ ದ್ರಷ್ಟೃ ದೃಶ್ಯ ದೃಷ್ಟಿಗಳಂ ಬಂದಾಗಿ ತೋರಿಸುವ ಅವಿವೇಕವು ಒಡೆಯಲು ದೃಗ್ಧಾತುವಿನಂತೆ ತ್ರಿಪುಟಿಯಲ್ಲಿರುವ ಅಖಂಡಚೈತನ್ಯವು ಪ್ರಕಾಶಿಸಲು ಬ್ರಹ್ಮಸಾಮ್ರಾಜ್ಯವು ತನಿಗೆ ಸಿದ್ಧವಾದ್ದರಿಂದ ಕಾಷ್ಠವಿಲ್ಲದ ಅಗ್ನಿಯಂತೆ ಅಹಂಕಾರವಡಗಲು ತ್ರಿಪುರಸಂಹಾರಿಯಾದ ಪರಮೇಶ್ವರನಂತೆ ನಿತ್ಯಾನಂದನಾದ ಜೀವನ್ಮುಕ್ತನಿಗೆ ಲೋಕಸಂಚಾರವು ವಿಹಾರವಾಗುವದು. ಇಂಥಾ ಬುದ್ಧಿಯಂ ಪಿಡಿದಿರುವ ಮಹಾತ್ಮರು ಯಾವಯಾವ ಕಾರ್ಯಗಳಂ ಮಾಡುತ್ತಿದ್ದಾಗ್ಯೂ ನಿರ್ಲೇಪರಾಗಿರುವರು. ಅಹಂಕಾರ ಮಮಕಾರ ಕಾಮಕ್ರೋಧಾದಿಗಳಿಲ್ಲದ್ದರಿಂದ ಅಖಂಡಭಾವದಿಂದಿರುವ ಮಹಾತ್ಮರು ಪ್ರಾರಬ್ಧಭೋಗವೆಂಬ ವ್ಯಾಜದಿಂ ಶರೀರವಂ ಪಿಡಿದು ಲೋಕಾನುಗ್ರಹಾರ್ಥವಾಗಿ ಸಂಚರಿಸುತ್ತಿರುವರು. ಇಂಥಾ ಜ್ಞಾನದೃಷ್ಟಿಗಳು ಆತ್ಮವಿಚಾರದಲ್ಲಿಯೇ ಉಂಟಾಗುವದ್ದರಿಂದ ಶ್ರವಣ ಮನನನಿಧಿಧ್ಯಾಸನಗಳಿಂದಾತ್ಮಸ್ವರೂಪವನ್ನೇ ತಿಳಿಯಬೇಕು. ಗುರುವೇದವಾಕ್ಯಸ್ವಾನುಭವಗಳು ಬಂದಾಗುವಲ್ಲಿ ಸ್ವಸ್ವರೂಪಜ್ಞಾನ ಉಂಟಾಗುವದು. ಹೀಗೆ ಜ್ಞಾನಿಯಾದವನು ಎಂಥಾ ಕಷ್ಟಬಂದರೂ ದುಃಖಪಡುವದಿಲ್ಲ. ಮತಿಮೋಹದಂತೆ ವಿಷವು, ವ್ಯಾಧಿಯು, ಆಧಿಯೂ, ಆಪತ್ತು, ಶತ್ರುವೂಕೂಡ ದುಃಖಕರವಲ್ಲ. ಮೋಹವಂ ಹೋಗಲಾಡಿಸುವದರಲ್ಲಿ ಉಪಮಾದ್ಯಲಂಕಾರದಿಂ ಮನೋಹರವಾಗಿ ಸಮರ್ಥವಾದ ಇಂಥಾ ಶಾಸ್ತ್ರವು ಮತ್ತೊಂದಿಲ್ಲ. ಅಖಂಡವಾಗಿ ಈ ಶಾಸ್ತ್ರವಂ ವಿಚಾರಿಸುವನು ಸುಖಗಳೆಂಬ ಮಿಂಚು ಹುಳುಗಳಿಂ ಮಿಣಕುವ ಸಂಸಾರವೆಂಬ ರಾತ್ರಿಯ ಗಾಢಾಂಧಕಾರದಲ್ಲಿದ್ದಾಗ್ಯೂ ಇತರರಿಗೆ ಅದೃಶ್ಯವಾದ ಜ್ಞಾನಪ್ರಕಾಶದಿಂ ಬೆಳ್ದಿಂಗಳಲ್ಲಿರುವನಂತೆ ಸುಖವಾಗಿರುವನು. ಮತಿಮೋಹದಿಂ ಜೀವಿಸುವನಗಿಂತ ಶ್ರಾವೆಯಂ ಪಿಡಿದು ಚಂಡಾಲರ ಬೀದಿಗಳಲ್ಲಿ ತಿರಗುವ ಭಿಕ್ಷುಕನು, ಘೋರವಾದ ಅಂಧಕೂಪದಂತಿರುವ ಮರದ ಪೊಟ್ಟರೆಯಂ ಸೇರಿರುವ ಹುಳುವೂ ಕೂಡ ಉತ್ತಮವೆನಿಸುವರು. ಆದ್ದರಿಂದ ಸರ್ವಪ್ರಕಾರದಿಂದಲೂ ಪುರುಷನು ನಿರಾಯಾಸವಾದ ಪರಮಾರ್ಥಪದವಂ ಸಾಧಿಸತಕ್ಕದ್ದು. ಇದಂ ತಿಳಿಯದ ಧೊರೆಗಳು ಕ್ಷುದ್ರಚಾರರ ವಚನದಿಂದಲೂ, ಪ್ರಿಯೋಕ್ತಿಚತುರರಾಗಿ ಕಾಮಕ್ರೋಧಾದಿಗಳಂತೆ ಹಿತವಂ ತೋರುತ ಅಂತಶ್ಶತ್ರುಗಳಾಗಿರುವ ಅಧಿಕಾರಿಗಳ ಪ್ರೇರ

ಣೆಯಿಂದಲೂ, ವಂಚಕರಾಗಿ ವಿಷಯೋನ್ಮುಖವಾದ ಇಂದ್ರಿಯಗಳಂತೆ ಸಾರ ವಂ ಶೆಳೆಯುವ ಸೇವಕರ ಪ್ರಾಬಲ್ಯದಿಂದಲೂ, ಬಹುಪ್ರಕಾರವಾಗಿ ಪಾಪಗ ಳಿಗೆ ಆಸ್ಪದವಾಗುವ ರಾಜ್ಯಭಾರವಲ್ಲಿ ಅಂಧಕೂಪದ ಕಪ್ಪೆಯಂತೆ ಕೂಗುತ್ತಾ ಕೊನೆಗೆ ನರಕವನ್ನೇ ಸಾಧಿಸುವರು. ಶತ್ರುಗಳಿಂದೋಡಿಸಲ್ಪಡುವ ಧೊರೆಗಳು ದುರ್ಗಾಂಧದಿಂದ ದುರ್ಗವನ್ನು, ಕಾಡಿನಿಂದ ಕಾಡನ್ನು ಹೊಂದುವಂತೆ ದುಃಖ ದಿಂದ ದುಃಖವನ್ನು, ನರಕದಿಂದ ನರಕವನ್ನು, ಹೊಂದುತ್ತಾ ಸಮುದ್ರದ ಸುಳಿ ಯಲ್ಲಿ ಶಿಕ್ಕಿದ ಹುಳುಗಳಂತೆ ಅಲೆಯುತ್ತಿರುವರು. ಸುಖದುಃಖದಾಶೆಗಳು ಪರ ಸ್ಪರನಾಶಕವಾಗಿ ಮಿಂಚುಗಳಂತೆ ಕ್ಷಣಿಕವಾದಾಗ್ಯೂ ಕಂಗೆಡಿಸುವವೆಂದು ಪದಾರ್ಥಗಳ ಸ್ವರೂಪವಂ ವಿಚಾರಿಸುತ ವಿರಕ್ತರಾದ ನಿನ್ನಂಥಾ ಮಹಾಮತಿ ಗಳು ಅಖಂಡಾನಂದ ಸಾಮ್ರಾಜ್ಯಾಭಿಷೇಕಕ್ಕೆ ಯೋಗ್ಯರಾಗುವರು. ಮಾಯಾ ಮಯವಾದ ಈ ಸಂಸಾರಮೋಹವಂ ಯಾರು ಎಣಿಸದಿರುವರೋ ಅವರು ಉ ರಿಯುವ ಮನೆಯಲ್ಲಿ ತೃಣರಾಶಿಯಮೇಲೆ ಶಯನವಂ ಮಾಡುವರೆಂದು ತಿಳಿ ಯುವನಾಗು. ಜ್ಞಾನಮಾತ್ರದಿಂದಿಂಥಾ ದುಃಖಗಳೆಲ್ಲವನ್ನೂ ಪರಿಹರಿಸುವ ವ ಸ್ತುವು ಬುದ್ಧಿಸಾಧ್ಯವಾಗಿರುವಲ್ಲಿ ಯಾಕೆ ಜನಗಳು ಕಷ್ಟಪಟ್ಟಾರೆಂದರೆ, ಆ ವಸ್ತುವಿಲ್ಲದೆ ಈ ಮಾತು ಪುಟ್ಟದ್ದು ಹ್ಯಾಗೆ ಅಥವಾ ಅಂಥಾ ವಸ್ತುವು ಇರಲೀ ಇಲ್ಲದಿರಲೀ ವಿಚಾರಿಸುವನಿಗೆ ಬಾಧಕವೇನು ? ವಿಚಾರಿಸುವಲ್ಲಿ ಇದ್ದದ್ದೇ ಗೋಚರವಾಗುವದಲ್ಲದೆ ಇಲ್ಲದ್ದು ಗೋಚರವಾಗುವದಿಲ್ಲವಾದ್ದರಿಂದ ಚನ್ನಾಗಿ ವಿಚಾರಿಸಿ ನೋಡಿರುವದು ಗೊತ್ತಾದರೆ ಕೃತಾರ್ಥರಾಗುತ್ತೀರಿ, ವಿವೇಕಸಾಧ್ಯ ವಾಗಿ ವಿಚಾರದಿಂ ನಿಶ್ಚಿತವಾಗುವ ಆ ವಸ್ತುವು ಮನೋಜಯದಿಂದಲೇ ಪ್ರಾ ಪ್ತವಾಗುವದು. ಶ್ರವಣಾದಿಗಳಿಂದುಂಟಾದ ಬ್ರಹ್ಮಾತ್ಮೈಕ್ಯ ಜ್ಞಾನವಾಸನೆಯಿಂ ದಾಗುವ ಮನೋಜಯದಂತೆ ಧನವು, ಮಿತ್ರರು, ಬಂಧುಗಳು, ಯಜ್ಞಾದಿಕರ್ಮ ಗಳು, ಉಪಾಸನೆಗಳು, ತೀರ್ಥಕ್ಷೇತ್ರಯಾತ್ರೆಗಳು, ಪುಣ್ಯಕ್ಷೇತ್ರವಾಸವೂ ಕೂಡ ಸುಖಕರವಾಗುವದು. ಸುಖವಾದ ಆಸನದಲ್ಲಿ ಕುಳಿತು ವಿಚಾರಿಸುತ್ತಾ ಸಂಸಾರವೆಂಬ ರೋಗಕ್ಕೆ ಸಿದ್ಧೌಷಧವಾಗಿ ಪರಮಾನಂದಪ್ರಕಾಶಕವಾದ ಆ ವಸ್ತುವಂ ಹೊಂದಿದವನು ಮರಳಿ ಜನ್ಮದುಃಖವನ್ನನುಭವಿಸುವದಿಲ್ಲ. ವ್ಯವ ಹಾರಪರನಾಗಿದ್ದಾಗ್ಯೂ ಕರ್ಮಸಾಕ್ಷಿಯಾದ ಸೂರ್ಯನಂತೆ ನಿರ್ಲೇಪನಾಗಿರುವನು.

ಎಲೈ ರಾಮಭದ್ರನೇ ! ಮೋಕ್ಷಮಹಾರಾಜನ ದ್ವಾರಪಾಲಕರಾದ ಶಮ, ವಿಚಾರ, ಸಂತೋಷ, ಸತ್ಸಂಗಗಳ ಪ್ರಭಾವವಂ ಕೇಳುವನಾಗು. ಅಂತಃಕರ ಣದಲ್ಲಿ ಬ್ರಹ್ಮೇತರಪದಾರ್ಥಗಳಂ ಪರಿಗ್ರಹಿಸದಿರುವದೆ ಶಮವೆನಿಸಿಕೊಳ್ಳುವ

ದು. ಪ್ರಜೆಗಳು ಧೊರೆಯರೀತಿಯನ್ನನುಸರಿಸುವಂತೆ ಇಂದ್ರಿಯಗಳು ಅಂತಃ ಕರಣವನ್ನನುಸರಿಸುವದ್ದರಿಂದ ಮನವು ಸಂಕಲ್ಪವಂ ಬಿಟ್ಟಕೊಡ್ಲೆ ಇಂದ್ರಿಯ ಗಳು ತಮ್ಮ ವಿಕಲ್ಪಗಳಂ ಬಿಡುವವು. ಆದ್ದರಿಂದ ಶಮಸಂಪನ್ನನಾದ ಪುರುಷ ನು ಶತ್ರುಗಳಂ ನಿರ್ನಾಮವಾಗಿ ಮಾಡಿ ಅಖಂಡಸಾಮ್ರಾಜ್ಯವಂ ಪಡದವನಂತೆ ಯೂ, ಅಮೃತಪಾನವಂ ಮಾಡಿದವನಂತೆಯೂ, ನಿತ್ಯ ತೃಪ್ತನಾಗುವನು. ಕಾ ಮಕ್ರೋಧಾದಿಗಳಡಗಿಹೋದ್ದರಿಂದ ಸಮಸ್ತ ಪ್ರಾಣಿಗಳಿಗೂ ಇವನು ವಿಶ್ವಾ ಸಪಾತ್ರನಾಗುವನು. ಇವನ ದರ್ಶನದಿಂ ವ್ಯಾಘ್ರಾದಿ ಪ್ರಾಣಿಗಳು ಕೂಡ ಕ್ರೌ ರ್ಯವಂ ಬಿಡುವವು. ಪ್ರಾರಬ್ಧದೋಷದಿಂದಂಗಗಳು ಖಂಡಿತವಾದಾಗ್ಯೂ ಅವ ನಿಗೆ ದುಃಖವಿಲ್ಲದ್ದರಿಂದ ಪುನಃ ಆಯಾಯ ಅಂಗಗಳು ಅನಂಗನಂತೆ ಅಗೋಚ ರವಾಗಿ ಪುಟ್ಟುವದೆಂದು ತಿಳಿಯುತ್ತೇನೆ. ಲೋಕದಲ್ಲಿ ಯಾವಯಾವ ದುಃಖಗ ಳೋ, ಯಾವಯಾವ ಆಶೆಗಳೋ, ಯಾವಯಾವ ಮನೋವ್ಯಥೆಗಳೋ ಅವೆಲ್ಲ ವು ಸೂರ್ಯೋದಯದಿಂ ತಮಸ್ಸಿನಂತೆ ಶಮೋದಯದಿಂದೋಡುವವು. ಸುಂದರ ನನ್ನು ಕಾಮಿನಿಯಂತೆ ಶಮಶಾಲಿಯನ್ನು ಮೋಕ್ಷಲಕ್ಷ್ಮಿಯು ವರಿಸುವಳಾದ್ದ ರಿಂದ, ಅವನ ಮನಸ್ಸಿನಲ್ಲಿ ಸ್ವಯಂಪ್ರಕಾಶವಾದ ಪರಮಾರ್ಥವು ಸ್ಫುರಿಸುವ ದು. ಚಂದ್ರನಕಾಂತಿ ತಗಲಿದ ಚಂದ್ರಕಾಂತದಲ್ಲಿ ರಸ ವುಂಟಾಗುವಂತೆ ಗುರು ಕಟಾಕ್ಷಸ್ಪರ್ಶಮಾತ್ರದಿಂದಲೆ ಶಮ ಯುಕ್ತವಾದ ಮನಸ್ಸಿನಲ್ಲಿ ತತ್ವಜ್ಞಾನ ವುಂ ಟಾಗುವದು. ಶಮವೆಂಬ ವಜ್ರಕವಚದಿಂ ಕೂಡಿದವನನ್ನು ಮಹಾ ಮೋಹನಿಂ ಪ್ರೇರಿತವಾದ ದುಃಖಗಳೆಂಬ ಮಹಾಸ್ತ್ರಗಳು ವೇಧಿಸಲಾರವು. ಸೂರ್ಯನು ರಾ ತ್ರಿಯ ದುಃಖಗಳನ್ನೇ ಪರಿಹರಿಸುವನು. ಚಂದ್ರನು ಹಗಲಿನ ದುಃಖಗಳನ್ನೇ ಪರಿಹರಿಸುವನು. ಶಮವಾದರೊ ಉದಯಿಸುವಲ್ಲಿಯೆ ಸಮಸ್ತ ದುಃಖಗಳನ್ನೂ ನಿಶ್ಶೇಷವಾಗಿ ಪರಿಹರಿಸುವದು. ಪ್ರಾಣಕಾಂತೆಯೊಡನೆ ಅಂತಃಪುರದಲ್ಲಿರುವ ಚಕ್ರವರ್ತಿಗಿಂತಲೂ ಅಧಿಕವಾಗಿ ಶಾಂತಿಯುಕ್ತನಾದವನು ಸಂತೋಷಪಡು ವನು. ಶಾಂತಿಯುಕ್ತನಲ್ಲಿ ಪರಮೇಶ್ವರನಕಟಾಕ್ಷ ವುಂಟಾಗುವಂತೆ ಎಂಥಾ ತಪಸ್ವಿಯಲ್ಲೂ ಉಂಟಾಗುವದಿಲ್ಲ. ತಪಿಸದಿರುವ ಸೂರ್ಯನಂತಲೂ, ಕಳಂಕವಿ ಲ್ಲದ ಚಂದ್ರನಂತಲೂ, ದಹನದೋಷವಿಲ್ಲದ ಅಗ್ನಿಯಂತಲೂ, ಶಮಯುಕ್ತನು ಜನಗಳಿಂ ಸ್ತುತಿಸಲ್ಪಡುವನು. ಜನಗಳು ಶಮಶಾಲಿಯಂ ಸಮ್ಮಾನಿಸುವಂತೆ ಅನ್ನದಾತೃವಾದ ಮಹಾರಾಜನನ್ನು ವಿದ್ಯೆಗಳಂ ಪೇಳಿಕೊಟ್ಟ ಗುರುವನ್ನು ಮ ಟ್ಟಿಶಿದ ತಂದೆಯನ್ನು ಕೂಡಾ ಸಮ್ಮಾನಿಸುವದಿಲ್ಲ. ಶಮಶಾಲಿಯು ಮಾಡಿದ ಸತ್ಕಾರ್ಯವನ್ನು ಸತ್ಸಂಪ್ರದಾಯವೆಂದು ಜನಗಳೆಲ್ಲರೂ ಗ್ರಹಿಸುವರು. ಅವನ

ವಾಕ್ಯವನ್ನೇ ವೇದೋಕ್ತವೆಂದು ನಡೆಸುವರು. ಅವನ ದರ್ಶನವಾದರೆ ಸಾಕೆಂದು ಚಕ್ರವರ್ತಿಗಳೂ ಕೂಡಾ ಅಪೇಕ್ಷಿಸುತ್ತಿರುವಲ್ಲಿ ಅವನ ವೈಭವವೆಂತೆಂದು ಪೇಳತಕ್ಕದ್ದು. ಹಾನಿವೃದ್ಧಿಗಳಲ್ಲೂ, ನಿಂದಾಸ್ತುತಿಗಳಲ್ಲೂ, ದುಃಖಸುಖಗಳಲ್ಲೂ, ಲಾಭಾಲಾಭಗಳಲ್ಲೂ, ಜಯಾಪಜಯುಗಳಲ್ಲೂ, ಮರಣೋತ್ಸವಗಳಲ್ಲೂ, ಶತ್ರುಮಿತ್ರರಪ್ರಾಭವಗಳಲ್ಲೂ, ಯಾವನ ಮನವು ಸಮಭಾವದಿಂದಿರುವದೋ ಅವನೇ ಶಾಂತನೆಂದು ತಿಳಿಯತಕ್ಕದ್ದು. ಲೋಕದಲ್ಲಿ ವಿವೇಕಿಯು ಪ್ರಿಯೋಕ್ತಿಗಳಾದ ಪುರುಷರನ್ನು ಕಳದು ಸತ್ಯವಾದಿಗಳನ್ನೇ ಗ್ರಹಿಸುವನು. ಮಣಳೊಟ್ಟಿನ್ನಲ್ಲಿ ಬಿದ್ದಿರುವ ಸಕ್ಕರೆಯ ಕಣವಂ ಪಿಪೀಲಿಕೆ ಪಿಡಿಯುವಂತೆ ದೋಷರಾಶಿಯಲ್ಲಿ ಗುಣವಂದಿದ್ದರೂ ಪಿಡಿಯುವನು. ಸ್ತುತಿವಾಕ್ಯಗಳಿಗಿಂತ ಅಧಿಕವೆಂದು ನಿಂದೆಯಂ ಶ್ಲಾಘಿಸುವನು. ದಾತೃವಂ ಸ್ತುತಿಸುವದಕ್ಕಿಂತಲೂ ಅಧಿಕವಾಗಿ ಧಿಕ್ಕಾರಕಾರಿಯಂ ಸ್ತುತಿಸುವನು. ಮಿತ್ರರಗಿಂತಲೂ ಅಧಿಕವಾಗಿ ಶತ್ರುಗಳಂ ಸನ್ಮಾನಿಸುವನು. ಶ್ರೀಮಂತರು ಅಧಿಕವಾಗಿ ಕೊಡುತ್ತಿದ್ದಾಗ್ಯೂ ಅದಂ ಬಿಟ್ಟು ಭಿಕ್ಷುಕನು ಕೊಡುವ ಬರಿದು ಕಾಸನ್ನಾದರೂ ಸರ್ವೋತ್ತಮವೆಂದು ಗ್ರಹಿಸುವನು. ವಿಪತ್ತುಗಳಲ್ಲಿ ಸಂತೋಷಪಡುವಂತೆ ಸಂಪತ್ತುಗಳಲ್ಲಿ ಸಂತೋಷಪಡುವದಿಲ್ಲ. ಈಪ್ರಕಾರ ವಿವೇಕಿಯು ತನ್ನ ಪುಣ್ಯಕ್ಕೆ ಹಾನಿಬರದಂತೆಯೂ, ತನ್ನ ಪಾಪವು ಹೋಗುವಂತೆಯೂ, ಸೂಕ್ಷ್ಮದೃಷ್ಟಿಯಿಂದ ನೋಡುತ್ತಾ ವ್ಯವಹರಿಸುವನು. ಶಾಂತನಾದರೋ ಸರ್ವವ್ಯಾಪಿಯಾದ ಚೈತನ್ಯದಲ್ಲಿ ದೃಷ್ಟಿಯನ್ನಿಟ್ಟು ಯಾರ ಮನಸ್ಸಿಗೂ ವಿಕಾರವುಂಟಾಗದಂತೆ ಸಮಭಾವದಿಂ ಸಂಚರಿಸುವನಾದ್ದರಿಂದ ತಪಸ್ವಿಗಳಲ್ಲಿಯೂ, ಪ್ರಾಜ್ಞರಲ್ಲಿಯೂ, ಯಾಚಕರಲ್ಲಿಯೂ, ಧೊರೆಗಳಲ್ಲಿಯೂ, ಬಲಿಷ್ಠರಲ್ಲಿಯೂ, ಗುಣಾಢ್ಯರಲ್ಲಿಯೂ ಕೂಡ ಶಾಂತಿಯುಕ್ತನಾದವನೇ ಉತ್ತಮನೆಂದು ಗ್ರಹಿಸತಕ್ಕದ್ದು. ಎಲೈ ಮಹಾಮತಿಯೇ! ಇಂಥಾ ಶಾಂತಿಗುಣಕ್ಕೆ ವಿಚಾರವೇ ಮೂಲವಾದ್ದರಿಂದ ಇದಕ್ಕಿಂತಲೂ ಮೊದಲಾಗಿ ಅದನ್ನೇ ಪರಿಗ್ರಹಿಸಬೇಕು. ವಿಚಾರದಿಂ ನಿರ್ಮಲವಾದ ಬುದ್ಧಿಯು ಸರಿಯಾಗಿ ತತ್ವಾರ್ಥವಂ ಗ್ರಹಿಸುವದ್ದರಿಂದ ಸಂಸಾರವೆಂಬ ರೋಗಕ್ಕೆ ವಿಚಾರವೇ ಮಹೌಷಧವೆನಿಸಿಕೊಳ್ಳುವದು. ಗುಣದೋಷಗಳು, ಸತ್ಯಾಸತ್ಯಗಳು, ಸಾರಾಸಾರಗಳು, ಸುಖದುಃಖಗಳು, ದುಷ್ಟಾದುಷ್ಟಗಳು, ಜ್ಞಾನಾಜ್ಞಾನಗಳು, ಭಾವಾಭಾವಗಳು, ಗುಣಗುಣಿಗಳು, ಆಧಾರಾಧೇಯುಗಳು ; ಗುರುಲಘುಗಳು, ಸ್ಥೂಲಸೂಕ್ಷ್ಮಗಳು, ಹಾನಿ ವೃದ್ಧಿಗಳೂ, ಲಾಭಾಲಾಭಗಳು, ವಸ್ತುತಾರತಮ್ಯಗಳು, ಗ್ರಾಹ್ಯತ್ಯಾಜ್ಯಗಳು, ಯುಕ್ತಾಯುಕ್ತಗಳು, ವಿಚಾರ್ಯಾವಿಚಾರ್ಯ

ಗಳೂ, ವಿಚಾರಾವಿಚಾರಗಳೂ ಕೂಡ ವಿಚಾರದಿಂದಲೆ, ತಿಳಿಯತಕ್ಕಂಥಾವಾದ್ದರಿಂದ ವಿಚಾರವಿದ್ದವನು ಸರ್ವಜ್ಞನಾಗುವನು. ವಿಚಾರವಿಲ್ಲದವನು ಕೋಣಕ್ಕಿಂತಲೂ ಕಡೆಯನಿಸಿಕೊಳ್ಳುವನು. ಗಾಢಾಂಧಕಾರಮಯವಾದ ಗಿರಿ ಗುಹೆಯಲ್ಲಿರುವ ಕಗ್ಗಲ್ಲುಗಳ ಸಾರದಿಂ ಬ್ರಹ್ಮದೇವನು ವಿಚಾರವಿಲ್ಲದವನ ಹೃದಯವಂ ನಿರ್ಮಿಸಿರುವನೆಂದು ತಿಳಿಯಬರುತ್ತೆ. ಸಂಸಾರಾದಿ ದುಃಖಗಳಂ ದಾಟುವದಕ್ಕೆ ಉಪಾಯಗಳು ಅನೇಕಪ್ರಕಾರವಾಗಿದ್ದರೂ ಇದರ ಸಹಾಯವಿಲ್ಲದೆ ಅವುಗಳು ಕಾರ್ಯಾಕಾರಿಗಳಾಗಲಾರವು. ಇದಕ್ಕೆ ಸಹಾಯಾಂತರಾಪೇಕ್ಷೆ ಇಲ್ಲದ್ದರಿಂದ ಸಂಸಾರ ಮೋಹವೆಂಬ ಶತ್ರುವಂ ಸಂಹ್ಮರಿಸುವದರಲ್ಲಿ ವಿಚಾರವೆಂಬ ಪುರುಷನೇ ಅಸಹಾಯಶೂರನೆನಿಸಿಕೊಳ್ಳುವನು. ಸುಮತಿಗಳು ಈ ವಿಚಾರದಿಂದಲೇ ಶುಭಾಶುಭಗಳಂ ತಿಳಿದು ಅಶುಭವಂ ಕಳದು ಶುಭವಂ ಗ್ರಹಿಸುವರು. ಬಲವು, ಬುದ್ಧಿಯು, ತೇಜಸ್ಸು, ಜ್ಞಾನವೂ, ಮಾಡಿದ್ದೆಲ್ಲವೂ ಕೂಡ, ವಿಚಾರದಿಂದಲೇ ಸಫಲವಾಗುವದಾದ್ದರಿಂದ ಇಂಥಾ ಸರ್ವಸಾಧನವು ಯಾವದೂ ಇಲ್ಲ, ಇದರಿಂದಲೇ ಸಂಸಾರಮೋಹವು ಹೋಗುವದ್ದರಿಂದ ಅದಕ್ಕೆ ಪುನರಾವೃತ್ತಿಯಾಗುವುದಿಲ್ಲ. ಲೋಕಗಳಲ್ಲಿರುವ ಸುಖಗಳೆಲ್ಲವು ವಿಚಾರಫಲಗಳೆಂತಲೂ, ದುಃಖಗಳು ಅವಿಚಾರಫಲಗಳೆಂತಲೂ ತಿಳಿಯತಕ್ಕದ್ದು. ವಿಚಾರಶುದ್ಧವಾದ ಬುದ್ಧಿಗಳು ಜಲದಲ್ಲಿ ಸೋರೇಬುರುಡೆಗಳಂತೆ ಆಪತ್ತಿನಲ್ಲಿ ಮುಳುಗುವದಿಲ್ಲ. ಯಾವನ ಮಾನಸವೆಂಬ ಸರಸ್ಸಿನಲ್ಲಿ ವಿಚಾರವೆಂಬ ಕಮಲವು ವಿಕಸಿತವಾಗಿರುವದೋ ಅವನು ಹಿಮವಂತನಂತೆ ಧೀರನಾಗುವನು. ಯಾವನಿಗೆ ವಿಚಾರದಲ್ಲಿ ವಿಕಾರವುಂಟಾಗುವದೋ ಅವನಿಗೆ ಚಂದ್ರಮಂಡಲದಿಂದಲೂ ಕೂಡ ಸಿಡಲು ಹೊರಡುವದು. ಸರಿಯಾಗಿ ವಿಚಾರಮಾಡುವನಿಗೆ ಅವಿಚಾರ ಮನೋಹರವಾದ ಭೋಗಗಳು ರೋಗಗಳಂತೆ ಪರಿಹರಿಸಲು ಯೋಗ್ಯವಾಗುವವು. ಅವಿಚಾರದಿಂದಲೇ ಸಾಯುವವನಿಗೂ, ಸಂಸಾರಿಗೂ, ಹೆಚ್ಚು ಕಡಿಮೆ ಏನು ಇರುವದು. ನಿಂತಿರುವಲ್ಲೂ, ಕುಳಿತಿರುವಲ್ಲೂ, ನಡೆಯುತ್ತಿರುವಲ್ಲೂ, ಆಹಾರವಿಹಾರ ನಿದ್ರಾದಿ ವ್ಯಾಪಾರಗಳಲ್ಲೂ, ಲೋಕವ್ಯವಹಾರಗಳಲ್ಲೂ ಕೂಡ, ಯಾವನು ಅಂತರ್ದೃಷ್ಟಿಯಾಗಿ ಪರಮಾರ್ಥ ವಿಚಾರವಂ ಮಾಡುತ್ತಿರುವನೋ, ಅವನು ಶೀಘ್ರವಾಗಿಯೇ ಜೀವನ್ಮುಕ್ತಿ ಪದವಿಯಂ ಪೊಂದುವನು. ಯಾವನು ವಿಚಾರಪರನಾಗುವದಿಲ್ಲವೋ ಅವನನ್ನು ನರರೂಪದಿಂದಿರುವ ಕತ್ತೆಯನ್ನುವರು. ವಿಚಾರವಿಲ್ಲದವನಿಗೆ ಕೆಟ್ಟ ನಡತೆಗಳೂ, ದುಷ್ಟಸಂಕಲ್ಪಗಳೂ, ದುರಾಲೋಚನೆಗಳೂ, ದುರಾಚಾರಗಳೂ ಕೂಡ, ಕತ್ತಲೆಯಲ್ಲಿ ಪಿಶಾಚಿಗಳಂತೆ ಸಂಸಾರ

ಮೋಹದಲ್ಲಿ ತೋರುವವು. ವಿಚಾರವೆಂಬ ಚಂದ್ರನುದಯಿಸಲು, ಮೋಹವೆಂಬ ತಮದಿಂ ಪೂರ್ಣವಾಗಿದ್ದ ಸಂಸೃತಿಯೆಂಬ ರಾತ್ರಿಯು ಪರಮಾರ್ಥ ಪ್ರಕಾಶವೆಂಬ ಬೆಳದಿಂಗಳಿಂದ ಮನೋಹರವಾಗುವದು. ಬೆದರಿಸಿದ ಬಾಲಕನಿಗೆ ಕತ್ತಲೆಯಲ್ಲಿ ಕಂಡ ಬೇತಾಳವು ದೀಪದಿಂ ಪೋಗುವಂತೆ, ಅಜ್ಞಾನದಲ್ಲಿ ಕಲ್ಪಿತವಾದ ಸಂಸಾರವು ವಿಚಾರದಿಂ ಹೋಗುವದು. ವಿಚಾರದಿಂ ಸ್ವರೂಪ ಸಾಕ್ಷಾತ್ಕಾರವಾಗಲು, ಜಗವೆಲ್ಲವೂ ಬಿಸಲು ದೊರೆಯಂತೆ ಭ್ರಮಾತ್ಮಕವೆಂದು ತಿಳಿದಿದ್ದರಿಂದ, ಪುರುಷನು ಕಾಮರಹಿತನಾಗುವನು. ಬಳಿಕ ಜನ್ಮಾಂತರ ಕರ್ಮದಿಂ ಬಾದದ್ದನ್ನು ಬಿಡದೆ, ಇಲ್ಲದ್ದನ್ನಪೇಕ್ಷಿಸದೆ ಲೋಕವ್ಯವಹಾರದಲ್ಲಿ ಅಂತರ್ಮುಖದೃಷ್ಟಿಯಿಂದ ತಟಸ್ಥನಾಗಿರುವನು. ಬುದ್ಧಿಶಾಲಿಯಾದವನು ಸರ್ವವ್ಯವಹಾರದಲ್ಲೂ, ನಾನು ಯಾರು? ನನಿಗೆ ಈ ಸಂಸಾರವೆಲ್ಲಿಯದೆಂದು ಚಿಂತಿಸುತ್ತಾ, ಶೀಘ್ರವಾಗಿಯೇ ವಿವೇಕಾದಿ ಗುಣಗಳಿಂದ ಶಮವಂ ಪಡೆಯುವನು. ಆದ್ದರಿಂದ ಆಪತ್ತುಗಳಲ್ಲಿಯೂ ಕೂಡ ಚಿನ್ಮಯವಾದ ನನಿಗೆ ಮೋಹಮಯವಾದ ಸಂಸಾರವು ಹ್ಯಾಗೆ ಬಂತೆಂದು ಚಿಂತಿಸುತ್ತಿರಬೇಕು. ಅಂಧಕಾರದಿಂದುಪಹತಿ ಇಲ್ಲದೆ ಎಷ್ಟು ತಿರುಗಿದರೂ ಶ್ರಮಪಡದೇ ಬಹು ದೂರದಲ್ಲಿದ್ದ ವಸ್ತುವನ್ನೂ ಕೂಡ ನಿರ್ಣಯವಾಗಿ ಹಿಡಿಯುವ ವಿಚಾರವೆಂಬ ನೇತ್ರದ ತೇಜದಿಂದಲೇ ಅಂಧಕರು ತಿರಗುವರಾದ್ದರಿಂದ, ವಿಚಾರವಿಲ್ಲದವನನ್ನೇ ಹುಟ್ಟು ಕುರುಡನೆಂದು ತಿಳಿಯಬೇಕು. ವಿಚಾರವಿಲ್ಲದವನಂತೆ ಯಂಥಾ ದುಃಖಿಯೂ ಅಳುವದಿಲ್ಲವಾದ್ದರಿಂದ, ಅವಿಚಾರವೇ ಸರ್ವ ದುಃಖಗಳಿಗೂ ಮೂಲವೆಂದು ತಿಳಿಯುತ್ತೇನೆ. ಪರಮಾನಂದಸಾಧನವಾದ ಪರಮಾತ್ಮ ವಿಚಾರವಂ ಬಿಡದಿರುವರು ಮಾರ್ಗವಂ ತಿಳಿದವರಂತೆ ದುಃಖಕರವಾದ ಹಳ್ಳದಲ್ಲಿ ಬೀಳುವದಿಲ್ಲ. ವಿಚಾರವಿಲ್ಲದವನಿಗಿಂತ ಕೆಸರಿನಲ್ಲಿರುವ ಕಪ್ಪೆಯು, ಅಮೇಧ್ಯದ ಹುಳುವು ಅಂಧಕೂಪದಲ್ಲಿರುವ ಹಾವು ಕೂಡ ಉತ್ತಮವೆಂದು ತೋರುತ್ತೆ. ವಿಚಾರಯುಕ್ತನಾಗಿ ತನ್ನಿಂದ ತಾನೇ ನಿಲ್ಲುವ ಮಹಾತ್ಮನಿಗೆ ಸಂಸಾರ ಸಮುದ್ರವು ಗೋಷ್ಪದವಾಗುವದು. ನಾನು ಯಾರು? ನನಿಗೆ ಈ ಸಂಸಾರವು ಹ್ಯಾಗೆ ಸಂಭವಿಸಿತೆಂದು ಆಲೋಚಿಸುವದೇ ಪರಮಾರ್ಥ ವಿಚಾರವೆನಿಸುವದು. ಇದರಿಂದ ತತ್ವಜ್ಞಾನವಾಗಲು ಮನಸ್ಸಿಗೆ ವಿಶ್ರಾಂತಿಯುಂಟಾಗುವದು. ಅದರಿಂದ ಶಾತಿ ಪುಟ್ಟುವದು, ಅದರಿಂದ ಸರ್ವ ದುಃಖಗಳೂ ಪೋಗುವವೆಂದು ತಿಳಿಯತಕ್ಕದ್ದು.

ಎಲೈ ಶ್ರೀರಾಮನೇ ! ಪೂರ್ವಕರ್ಮದಿಂದಾಗಲೀ, ಈಗಿನ ಕರ್ಮದಿಂದಾಗಲೀ, ಎಷ್ಟು ಪ್ರಾಪ್ತವಾಗುವದೋ ಅಷ್ಟರಿಂದಲೇ ತೃಪ್ತನಾಗಿ ಅಧಿಕವಾಗಿ

ಅಪೇಕ್ಷಿಸದಿರುವದೇ ಸಂತೋಷವೆನಿಸಿಕೊಳ್ಳುವದು. ಕರ್ಮಕ್ಕೆ ಸರಿಯಾಗಿಯೇ ಫಲವಾಗುವದ್ದರಿಂದ, ಅಧಿಕಕ್ಕೆ ಆಶೆ ಪಡುವದು ನ್ಯಾಯವಲ್ಲ. ಅನ್ಯಾಯವಾದ ಈ ಮಾನಸ ಕರ್ಮವು ಸಕಲ ದೋಷಬೀಜವಾದ್ದರಿಂದ, ದೋಷಮೂಲಕ ದುಃಖಗಳೆಲ್ಲವನ್ನು ಉಂಟುಮಾಡುವದು. ಇದನ್ನು ವಿಚಾರಿಸಿ ತಿಳಿದ ಬುದ್ಧಿಶಾಲಿಗಳು ಶಾಂತಿಗುಣದಿಂ ದುಃಖಹೀನರಾಗುವರು. ಆಶೆಪಡುವನಿಗೆ ಬಾರದ ದುಃಖವು ಸಂತೋಷಶಾಲಿಗೆ ಬಾರದ ಸುಖವು ಜಗತ್ತಿನಲ್ಲಿಲ್ಲವಾದ್ದರಿಂದ, ಆಶೆಯಂತೆ ಕೆಟ್ಟದ್ದು ಸಂತೋಷದಂತೆ ಒಳ್ಳೇದು ಯಾವದೂ ಇಲ್ಲ. ಆಶೆಪಡುವನನ್ನು ತಿರಸ್ಕರಿಸುವಂತೆ ಸಂತೋಷಪಡುವನನ್ನು ಜನಗಳು ಪೂಜಿಸುವರು. ಆಶೆಪಡುವರಿಗೆ ಬರುವದಕ್ಕಿಂತ ಸಂತೋಷಪಡುವನಿಗೆ ಅಧಿಕವಾಗಿ ಬರುವದು. ಆದ್ದರಿಂದ ಆಶೆಪಡದೇ ದುಷ್ಕರ್ಮವೆಂತಲೂ, ಸಂತೋಷಪಡುವದೇ ಸತ್ಕರ್ಮವೆಂತಲೂ ತಿಳಿಯತಕ್ಕದ್ದು. ಜಡವಾದ ಮೇಘಗಳೂ ಕೂಡ ಆಶೆಪಡುವ ಸಂಸಾರಿಗಳಿಗೆ ಆಶ್ರಯವಾದ, ಗ್ರಾಮ ನಗರಗಳಂ ಬಿಟ್ಟು, ವಿರಕ್ತರಿಗೆ ಆಶ್ರಯವಾದ ವನ ಗಿರಿಗಳಲ್ಲಿ ಅಧಿಕವಾಗಿ ವರ್ಷಿಸುವವು. ಜ್ಞಾನಸ್ವರೂಪನಾದ ಪರಮೇಶ್ವರನು ವಿರಕ್ತಮನವಂ ಶೇರುವಂತೆ ಆಶೆಪಡುವರ ಮನವಂ ಶೇರುವದಿಲ್ಲ. ಆದ್ದರಿಂದ ಆಶೆಯೇ ಬಂಧವೆಂತಲೂ, ಅದಿಲ್ಲದಿರುವದೇ ಮೋಕ್ಷವೆಂತಲೂ, ಪ್ರಸಿದ್ಧವಾಗಿರುವದು. ಆದರೆ ದುರ್ವಿಷಯದ ಆಶೆಯೇ ಬಂಧಕವಲ್ಲದೆ ಸದ್ವಿಷಯದ ಆಶೆ ಬಂಧಕವಾಗಲಾರದು. ಆಶೆಪಡುವ ಪುರುಷನು ಸದ್ವಿಷಯದಲ್ಲಿ ಆಶೆಯಂ ನಿಲ್ಲಿಸಿದರೆ ಲೋಕಪೂಜ್ಯನಾಗುವನು. ಸದ್ವಿಷಯದಲ್ಲಿ ಕಾಮ ಲೋಭ ಮದಗಳನ್ನು, ಅಸದ್ವಿಷಯದಲ್ಲಿ ಕ್ರೋಧ ಮೋಹ ಮತ್ಸರಗಳನ್ನು ನಿಲ್ಲಿಸಿದ, ವಿಚಾರಚತುರನಿಗೆ ಸಾಯುಜ್ಯ, ಸಾಮ್ರಾಜ್ಯವೂ ಕೂಡ ಸ್ವಾಭಾವಿಕ ಧರ್ಮದಂತೆ ಸಿದ್ಧವಾಗುವದು. ವಿಚಾರವಿಲ್ಲದೆ ಆಶೆಪಡುವನಿಗೆ ಸಹಜವಾದ ಸುಖವೂ ಕೂಡ ಗಗನಕುಸುಮದಂತೆ ದುರ್ಲಭವಾಗುವದು. ಸದ್ವಿಷಯದಲ್ಲೇ ಆಶೆಯನ್ನಿಲ್ಲಿಸಿ ಅದಂ ಸಾಧಿಸಲೋಸುಗ ಪ್ರಯತ್ನವಂ ಮಾಡುವ ದರಿದ್ರನು ಜನರು ಸಹಾಯವಂ ಮಾಡದಿದ್ದಲ್ಲಿ ಜನರಲ್ಲಿರುವ ಪಾಪದ್ರವ್ಯವು ಆ ವಿಷಯಕ್ಕೆ ಉಪಯೋಗಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು. ಬಲಾತ್ಕಾರದಿಂದಾಗಲೀ, ದುರ್ಮಾರ್ಗದಿಂದಾಗಲೀ, ಅಂಥಾ ದ್ರವ್ಯವು ಬಂದರೆ ಅದು ಆ ವಿಷಯವನ್ನು ಸಂಪಾದಿಸುವನನ್ನೂ ಕೂಡ ಹಾಳುಮಾಡುವದಾದ್ದರಿಂದ ವಿಚಾರಪರನಾದವನು ಅಂಥಾ ದ್ರವ್ಯವನ್ನಪೇಕ್ಷಿಸಲಾಗದು. ಹಿಡಿದ ವಿಷಯವು ಸಾಧುವಾಗಿದ್ದಲ್ಲಿ ಸತ್ಪಕ್ಷಪಾತಿಯಾದ ಪರಮೇಶ್ವರನೇ ಆ ಕಾರ್ಯವನ್ನೆರವೇರಿಸುವನು. ಅವನ ಮನಸ್ಸಿಗೆ

ಬಾರದೆಯಿದ್ದಲ್ಲಿ ತಾನು ಎಷ್ಟು ತಲೆಕೆಳಗಾದರೂ ಕಷ್ಟಪಡುವದೊಂದೇ ಆಗುವದಲ್ಲದೇ ಕಾರ್ಯಸಿದ್ಧಿಯಾಗುವದಿಲ್ಲ. ತಟಸ್ಥನಾದ ಪರಮೇಶ್ವರನು ಪಕ್ಷಪಾತಿಯಾಗುವದಕ್ಕೆ ಪುರುಷೋದ್ಯೋಗವೇ ಕಾರಣವಾದ್ದರಿಂದ, ಶ್ರೇಯಸ್ಕಾಮಿಯಾದವನು ವಿಚಾರ ಪರಿಶುದ್ಧವಾದ ಸನ್ಮಾರ್ಗದಿಂ ಪರಮೇಶ್ವರನಂ ಶರಣು ಹೊಂದಲು, ಅವನ ಪ್ರಸಾದದಿಂದಲೇ ಇವನ ಕಾರ್ಯವೆಲ್ಲವೂ ಸಿದ್ಧವಾಗುತ್ತಾ ಸದ್ವಾಸನೆಗಳು ವೃದ್ಧಿಹೊಂದುವವು. ಅವುಗಳಿಂದ ದುರ್ವಾಸನೆಗಳು ನಿಶ್ಶೇಷವಾಗಲು, ಅಖಂಡವಾದ ಆನಂದವು ಆವಿರ್ಭವಿಸುವದು. ಆದ್ದರಿಂದ ಸದ್ವಾಸನೆಗಳಂ ವೃದ್ಧಿಹೊಂದಿಸುವಂಥಾವನು ಲಾಭಾಲಾಭಗಳಲ್ಲಿ ಸುಖದುಃಖಗಳಿಂದ ಪರವಶನಾಗದೆ ಸತ್ಕಾರ್ಯಗಳಂ ಮಾಡುತ್ತಿರಬೇಕು. ಸರ್ವಥಾ ಸಂತೋಷಪರನಾದವನಿಗೆ ಯಾವ ದುಃಖವೂ ಸಂಭವಿಸುವದಿಲ್ಲವಾದ್ದರಿಂದ ವಿಚಾರದಿಂ ದುರಾಶೆಗಳನ್ನೆಲ್ಲವಂ ಬಿಟ್ಟು ಸಂತೋಷಪರನಾಗತಕ್ಕದ್ದು. ಸಂತೋಷಶಾಲಿಯು ಅತಿದರಿದ್ರನಾಗಿದ್ದರೂ ಚಕ್ರವರ್ತಿಯಂತೆ ಸುಖಿಯಾಗಿರುವನು. ತನ್ನಿಂದತಾನೇ ಸಂತೋಷವಂ ಸಂಪಾದಿಸಿಕೊಂಡಿರುವ ಪುರುಷನಿಗೆ ಅಖಂಡಸಾಮ್ರಾಜ್ಯವೂ ಕೂಡ ತೃಣಕವಾಗಿ ಕಾಣುವದು. ಸಂತೋಷವುಂಟಾಗುವವರಿಗೆ ವಿಪತ್ತುಗಳಿಗೂ, ವ್ಯಾಧಿಗಳಿಗೂ, ಆಧಿಗಳಿಗೂ, ಸಕಲ ದುಃಖಗಳಿಗೂ, ಜನನಿಯಾದ ದುರಾಶೆಯೂ, ಸೂಳೆಯಂತೆ ಎದುರಿಗೆ ಕುಣಿಯುತ್ತಿರುವದು ; ಮಲಿನವಾದ ಕನ್ನಡಿಯು ಪ್ರತಿಬಿಂಬವಂ ಪಿಡಿಯದಿರುವಂತೆ ದುರಾಶೆಗಳಿಂ ಕೂಡಿದ ಮನವು ಜ್ಞಾನೋಪದೇಶವಂ ಪಿಡಿಯುವದಿಲ್ಲ. ಚಂದ್ರನಿಂದುತ್ಪಲದಂತೆ ಯಾವನ ಮನವು ಸಂತೋಷದಿಂ ವಿಕಾಸವಾಗಿರುವದೋ ಅವನ ಮೊಗದಾವರೆಯಲ್ಲಿ ಸರ್ವದಾ ಲಕ್ಷ್ಮಿಯಾಡುತ್ತಿರುವಳು. ಧೊರೆಯಂ ಪ್ರಜೆಗಳಂತೆ ಸಮಸ್ತ ಸಮೃದ್ಧಿಗಳು ಸಂತೋಷಶಾಲಿಯಂ ಹೊಂದುವವು.

ಎಲೈ ರಾಮಭದ್ರನೇ ! ಸಮಕ್ಕೂ, ವಿಚಾರಕ್ಕೂ, ಸಂತೋಷಕ್ಕೆ ಸಹಾ ಸತ್ಸಂಗವೇ ಕಾರಣವಾದ್ದರಿಂದ ಇವುಗಳಲ್ಲಿ ಸತ್ಸಂಗವೇ ಮುಖ್ಯವೆಂದು ತಿಳೀ ಬರುತ್ತೆ. ಕಾಲತ್ರಯದಲ್ಲೂ ಬಾಧೆಯಿಲ್ಲದ್ದರಿಂದ ಪರಬ್ರಹ್ಮವೇ ಸತ್ತೆನಿಸುವದು. ಅದಂ ತಿಳಿದವರು ಸತ್ಪುರುಷರೆನಿಸಿಕೊಳ್ಳುವರು. ಇವರಿಗೆ ದೋಷವ್ಯಾವದೂ ಇಲ್ಲದ್ದರಿಂದ ಸಾಧುಗಳೆಂತಲೂ, ಪರಿಪೂರ್ಣಭಾವದಿಂ ಮಹತ್ತಾದ ಬ್ರಹ್ಮದಲ್ಲಿ ಬುದ್ಧಿವುಳ್ಳವರಾದ್ದರಿಂದ ಮಹಾತ್ಮರೆಂತಲೂ ಪ್ರಸಿದ್ಧರಾಗುವರು. ಇವರ ಪಾದಚ್ಛಾಯೆಯನ್ನಾಶ್ರಯಿಸಿದ ಸಂಸಾರ ಮಾರ್ಗಸ್ಥರಿಗೆ ವಿವೇಕವೆಂಬ ಕುಸುಮದ ಪರಿಮಳದಿಂದಲೂ, ವಿಚಾರವೆಂಬ ಮಂದಮಾರುತದಿಂದಲೂ,

ಜ್ಞಾನವೆಂಬ ಫಲದಿಂದಲೂ, ದುಃಖಗಳೆಲ್ಲವೂ ಪೋಗಿ ಶಾಂತಿಯುಂಟಾಗಲು ಸಂತೋಷಾಧಿಕ್ಯದಿಂ ವಿಶ್ರಾಂತಿ ಸುಖವುಂಟಾಗುವದು. ಸತ್ಪುರುಷರ ಸಮಾಗಮದಲ್ಲಿ ಪಾಳುಭೂಮಿಯು ಲೀಲೋದ್ಯಾನದಂತೆಯೂ, ಆಪತ್ತುಗಳು ಸಂಪತ್ತುಗಳಂತೆಯೂ, ಪ್ರಕಾಶಿಸುವದ್ದರಿಂದ ಸತ್ಪುರುಷರಿಲ್ಲದ ಸ್ಥಳವೇ ಪಾಳುಭೂಮಿ ಎಂದು ತಿಳಿಯತಕ್ಕದ್ದು. ಆಪತ್ತುಗಳೆಂಬ ಪಂಕಜಗಳಿಗೆ ಮಂಜಿನ ಮಳೆಯಾಗಿ ಮೋಹವೆಂಬ ಮಂಜಿನ ಸೋನೆಗೆ ಬಿರುಗಾಳಿಯಾಗಿ, ಭೋಗಗಳೆಂಬ ಭೋಗಿಗಳಿಗೆ ಗರುಡಸಮೂಹವಾಗಿ, ಅಜ್ಞಾನವೆಂಬ ವಿಷವೃಕ್ಷಕ್ಕೆ ಪರಶುವಾಗಿ, ಚಿಂತೆಗಳೆಂಬ ಪಿಶಾಚಿಗಳಿಗೆ ಮಹಾಮಂತ್ರವಾಗಿ, ವಿವೇಕ ವೈರಾಗ್ಯ ವಿಚಾರಗಳೆಂಬ ರತ್ನಗಳಿಗೆ ಪೆಟ್ಟಿಗೆಯಾಗಿ, ಜ್ಞಾನವೆಂಬ ದೀಪಕ್ಕೆ ಸ್ನೇಹವಾಗ, ಸಂತೋಷವಿಲಾಸಗಳಿಗೆ ಕ್ರೀಡಾವನವಾಗಿ, ಶಾಂತಿ ಲಕ್ಷ್ಮಿಗೆ ನಿವಾಸಸ್ಥಾನವಾಗಿ, ಸಾಯುಜ್ಯ ಸಾಮ್ರಾಜ್ಯಕ್ಕೆ ಸಿಂಹಾಸನವಾಗಿರುವ ಸತ್ಪುರುಷರ ಸಂಗವು ಎಂಥಾ ಆಪತ್ತುಗಳಲ್ಲೂ ಬಿಡತಕ್ಕದ್ದಲ್ಲ. ಸನ್ಮಾರ್ಗಪ್ರಕಾಶಕ್ಕೆ ದೀವಿಗೆಗಳಂತಿರುವ ಸಾಧು ಸಂಗತಿಗಳು ಹೃದಯಾಂತರದಲ್ಲಿರುವ ಗಾಢಾಂಧಕಾರವಂ ಮರಳಿ ಬರದಂತೆ ಹೋಗಲಾಡಿಸುತ್ತಾ, ಸೂರ್ಯ ಚಂದ್ರಪ್ರಕಾಶಗಳಗಿಂತಲೂ, ಅಧಿಕವಾಗಿ ಸಂತೋಷವನ್ನುಂಟುಮಾಡುವವು. ಸಾಧುಸಂಗತಿ ಎಂಬ ಗಂಗೆಯಲ್ಲಿ ಸ್ನಾನವಂ ಮಾಡಿದವನಿಗೆ ಸಕಲ ಪಾಪಮೂಲವಾದ ಅಜ್ಞಾನಕ್ಕೆ ನಾಶವು ಅಖಂಡಾನಂದ ಸಾಮ್ರಾಜ್ಯವೂ ಕೂಡ ಅನುಭವಸಿದ್ಧವಾಗುವದು. ಆದ್ದರಿಂದ ಅವನಿಗೆ ಮಹಾದಾನಗಳಿಂದಲೂ, ತೀರ್ಥಯಾತ್ರೆಯಿಂದಲೂ, ಯಜ್ಞಾದಿ ಕರ್ಮಗಳಿಂದಲೂ, ಮಹತ್ತರವಾದ ತಪಸ್ಸುಗಳಿಂದಲೂ ಕೂಡ ಆಗತಕ್ಕದ್ದೇನು ? ಗಂಗಾದಿ ಮಹಾನದಿಗಳೂ ಕೂಡ ದುಸ್ಸಂಗದಿಂ ಬಂದ ಪಾಪಗಳಂ ಕಳೆಕೊಳ್ಳಲೋಸುಗ ಸತ್ಸಂಗವನ್ನಪೇಕ್ಷಿಸುವವು. ವೇದಶಾಸ್ತ್ರವಚನಗಳಲ್ಲಿಯೂ, ಸತ್ಪುರುಷರಿಂ ಪರಿಗ್ರಹಿಸಲ್ಪಟ್ಟದ್ದೇ ಪ್ರಮಾಣವಾಗುವದು. ಪರಮಾತ್ಮನ ಅವತಾರಗಳಲ್ಲಿ ಸತ್ಪುರುಷರ ಅನುಮತಿಯಿಲ್ಲದರಿಂದಲೇ ಬುದ್ಧಮೂರ್ತಿಯು ಅಪೂಜ್ಯನಾಗಿರುವನು. ಹೀಗಿರುವಲ್ಲಿ ಸತ್ಪುರುಷರ ಮಹಿಮೆಯಂ ಪೇಳುವದಕ್ಕೆ ಯಾರಾದರೂ ಸಮರ್ಥರಾದರೆ ಸಂತೋಷದ ಲಾಭವೇಲಾಭವು, ಸಾಧುಗಳ ಸಂಗತಿಯೇ ಗತಿಯು, ವಿಚಾರವೇ ಜ್ಞಾನಲಕ್ಷ್ಮೀಪ್ರಚಾರವು, ಶಮವೇ ಸರ್ವದುಃಖಪ್ರಶಮವೆಂದು ಪ್ರಸಿದ್ಧವಾಗಿರುವವು. ಈ ನಾಲ್ಕುಜನ ದ್ವಾರಪಾಲಕರು ನಿತ್ಯಸಹವಾಸದಿಂ ಪರಸ್ಪರವಾಗಿ ಹೊಂದಿಕೊಂಡಿರುವದ್ದರಿಂದ ಅವರ ಗುಣಗಳೂ ಕೂಡ ಪರಸ್ಪರವಾಗಿ ಶೇರಿಕೊಂಡಿರುವವು. ಇವರಲ್ಲಿ ಒಬ್ಬನ

ಸ್ಸಾದಾಗ್ಯ್ಯ ಬಲವಾಗಿ ಪಿಡಿಯದೆ ಯಾರಿಗೂ ಮೋಕ್ಷಮಹಾರಾಜನ ದರ್ಶನ ವಾಗಲಾರದು. ಯಾವನಮೇಲೆ ಇವರ ಕೃಪಾಕಟಾಕ್ಷ ಪ್ರಸರಿಸುವದೋ ಅವನ ಸಂದರ್ಶನವಂ ಮೋಕ್ಷಮಹಾರಾಜನೇ ಭಕ್ತವಾತ್ಸಲ್ಯದಿಂದಪೇಕ್ಷಿಸು ವನು. ಯಾರು ಇವರ ಕಟಾಕ್ಷವಂ ಸಂಪಾದಿಸಿ ಸಂಸಾರದುಃಖವಂ ದಾಟಲ ಪೇಕ್ಷಿಸುವರೋ ಅವರಿಗೆ ಈ ಗ್ರಂಥಕ್ಕಿಂತ ಸುಲಭವಾದ ಸಾಧನವ್ಯಾವದೂ ಇಲ್ಲ. ಇದರ ಶ್ರವಣಪಠನಾರ್ಥ ವಿಚಾರಗಳಲ್ಲಾಸಕ್ತನಾದವನನ್ನು ಜೀವನ್ಮು ಕ್ತಿಯು ತಾನಾಗಿ ವರಿಸುವಳು. ಈ ಗ್ರಂಥದಲ್ಲಿ ವೈರಾಗ್ಯಪ್ರಕರಣವೆಂತಲೂ, ಮುಮುಕ್ಷುಪ್ರಕರಣವೆಂತಲೂ, ಉತ್ಪತ್ತಿಪ್ರಕರಣವೆಂತಲೂ, ಸ್ಥಿತಿಪ್ರಕರಣ ವೆಂತಲೂ, ಉಪಶಮಪ್ರಕರಣವೆಂತಲೂ, ನಿರ್ವಾಣಪ್ರಕರಣವೆಂತಲೂ, ಆರು ಪ್ರಕರಣಗಳು ನಾಮಾನುಗುಣವಾದ ಕಥಾಪ್ರಸ್ತಾಪಗಳಿಂ ಪ್ರಶಸ್ತವಾಗಿರು ವವು. ಒಂದೂವರೆ ಸಾವಿರ ಗ್ರಂಥವುಳ್ಳ ಮೊದಲನೇ ವೈರಾಗ್ಯಪ್ರಕರಣವಂ ನೋಡುವನಿಗೆ ಭೋಗಗಳಲ್ಲಿ ಜುಗುಪ್ಸೆಯು ಸಂಸಾರಿಗಳ ದುಃಖವೂ ಸಹ ತಿಳಿಯುವದು. ಸಹಸ್ರಗ್ರಂಥವಾದ ಎರಡನೇ ಮುಮುಕ್ಷುಪ್ರಕರಣದಲ್ಲಿ ಮೋ ಕ್ಷಾಪೇಕ್ಷೆಯುಳ್ಳ ಜನಗಳ ರೀತಿಯು ವರ್ಣಿತವಾಗಿರುವದು. ಏಳು ಸಹಸ್ರ ಗ್ರಂಥವುಳ್ಳ ಮೂರನೇ ಉತ್ಪತ್ತಿಪ್ರಕರಣವಂ ಕೇಳುವನಿಗೆ ಶುಕ್ತಿರಜತದಂ ತೆಯೂ, ಮರುಮರೀಚಿಕಾಜಲದಂತೆಯೂ, ಸ್ವಪ್ನಾಂಗನಾಸಂಗಮದಂತೆಯೂ, ಭ್ರಮಾತ್ಮಕವಾದ ಈ ಜಗತ್ತು ಅಜ್ಞಾನದಿಂದಲೇ ಪುಟ್ಟುವದೆಂಬ ಅರ್ಥವು ಗೊತ್ತಾಗುವದು. ಮೂರುಸಹಸ್ರ ಗ್ರಂಥವುಳ್ಳ ನಾಲ್ಕನೇ ಸ್ಥಿತಿಪ್ರಕರಣವಂ ನೋಡುವನಿಗೆ ವಾಸನೆ ಇರುವವರಿಗೆ ಈ ಜಗತ್ತಿರುವದೆಂದು ಜ್ಞಾನವುಂಟಾಗು ವದು. ಐದು ಸಹಸ್ರ ಗ್ರಂಥವುಳ್ಳ ಐದನೇ ಉಪಶಮ ಪ್ರಕರಣವಂ ವಿಚಾರಿ ಸುವನಿಗೆ ದೃಶ್ಯವಾದ ಈ ಪ್ರಪಂಚವು ಚಿತ್ರದಲ್ಲಿರುವ ಸರ್ಪದಂತೆ ದರ್ಶನಯೋ ಗ್ಯವಾಗುವದು. ಹದಿನಾಲ್ಕೂವರೆ ಸಾವಿರ ಗ್ರಂಥವುಳ್ಳ ಆರನೇ ನಿರ್ವಾಣಪ್ರಕ ರಣದಲ್ಲಿ ದೃಷ್ಟಿಯುಳ್ಳವನಿಗೆ ಬ್ರಹ್ಮಾನಂದವು ಅನುಭವಗೋಚರವಾಗುವದು. ಇಂತು ಮುವ್ವತ್ತೆರಡುಸಾವಿರ ಗ್ರಂಥವುಳ್ಳ ಈ ಗ್ರಂಥವಂ ಪಠಿಸುವನು ಮತ್ಸ ರವಿಲ್ಲದ ಪಾಂಡಿತ್ಯವಂ ಪಡದು, ಸತ್ಯವಾದರೂ ಕರ್ಣಕಠೋರವಾಗದೆ ಪ್ರಿಯ ವಾದರೂ ತತ್ಕಾಲಮಾತ್ರ ಸುಖಕರವಾಗದೆ ರಾಜಸ್ತ್ರೀವಿಲಾಸದಂತೆ ಅನೇಕಾಲಂ ಕಾರ ಧ್ವನಿ ಮನೋಹರವಾಗಿ ಸಜ್ಜನ ಸಮಾಗಮದಂತೆ ನಿತ್ಯ ಸರಸವಾಗಿ, ಸಂ ಗೀತದಂತೆ ಶ್ರುತಿಸಹಕಾರಿಯಾಗಿ ಸುಂದರೀಕಟಾಕ್ಷದಂತೆ, * ಶ್ರುತ್ಯಂತಗ್ರಾಹಿ

* ವೇದಾಂತ, ಕಿವಿಯ ತುದಿ.

ಯಾಗಿ ಅಮೃತಪ್ರವಾಹದಂತೆ ನಿರ್ಮಲವಾಗಿ ವಿಲಾಸಿನಿಯು ಕಟ್ಟಿದ ಪೂಮಾಲೆಯಂತೆ ಪೂರ್ವೋತ್ತರ ಸಂದರ್ಭ ಶುದ್ಧವಾಗಿ ದಾನಶೂರನಾದ ಮಹಾರಾಜನ ವೈಭವದಂತೆ ಪರಮಾರ್ಥಪ್ರಚಾರ ಸುಂದರವಾಗಿರುವ ವಾಗ್ವಿಲಾಸದಿಂ ಸಭಾಪೂಜ್ಯನಾಗುವನು. ಆದ್ದರಿಂದ ಪರಸ್ಪರ ವಿರುದ್ಧವಾದ ವಿದ್ಯಾಸಂಪತ್ತುಗಳೆರಡೂ ಈ ಪಂಡಿತನಂ ಶೇರಿ ಸಾಮರಸ್ಯವಂ ಹೊಂದುವವು. ಅದರಿಂದಿವನು ಜಗತ್ತಿಗೆ ಪೂಜ್ಯನಾಗುವನು. ಇದರ ಆಲೋಚನೆಯಿಂದುಂಟಾದ ಜ್ಞಾನವೆಂಬ ಮಣಿದೀಪವಂ ಪಿಡದಿರುವನು. ಸಂಸಾರಮೋಹವೆಂಬ ಕಗ್ಗತ್ತಲೆಯಲ್ಲಿ ತಿರುಗುತ್ತಿದ್ದಾಗ್ಯೂ, ಅಲ್ಲಲ್ಲಿ ಸಂಭವಿಸಿದ ಆಯಾಯ ಸುಖದುಃಖಗಳಲ್ಲಿ ಮೋಹಪಡದ ಸುಂದರಿಯಂದರಿಯಂತಲೂ, ವಿಷಯಗಳಂ ವಿಷವೆಂತಲೂ, ಭೋಗವಂ ರೋಗವೆಂತಲೂ, ರಾಜವೈಭವವನ್ನಿಂದ್ರಜಾಲವೆಂತಲೂ, ಸಂಪತ್ತುಗಳಂ ವಿಪತ್ತುಗಳೆಂತಲೂ, ವನವಂ ಲೀಲಾಭವನವೆಂತಲೂ, ದಾತೃಗಳಂ ಶತ್ರುಗಳೆಂತಲೂ, ರತ್ನಗಳಂ ಕಾಡು ಕಲ್ಲುಗಳೆಂತಲೂ, ತಿಳಿಯುತ್ತಾ ಮೇರುವಿಗಿಂತಲೂ ಧೀರನಾಗುವನು. ಈ ಗ್ರಂಥವು ದೊರತಮಾತ್ರದಿಂದೀಶ್ವರಪ್ರಸಾದ ಉಂಟಾಯಿತೆಂತಲೂ, ಇದಂ ನೋಡಬೇಕೆಂಬ ಅಪೇಕ್ಷೆಯುಂಟಾಗುವಲ್ಲಿ ಮೋಕ್ಷದ್ವಾರಪಾಲಕರ ಕಟಾಕ್ಷಬಂತೆಂತಲೂ, ಇದರ ಅರ್ಥವಂ ಕೇಳಲಿಚ್ಛೆಯಲ್ಲಿ ಜೀವನ್ಮುಕ್ತಿಯ ದಯೆ ಉಂಟಾಯಿತೆಂತಲೂ ತಿಳಿಯತಕ್ಕದ್ದು. ಇದರ ಪಾರಾಯಣವಾಗುವ ಪ್ರದೇಶದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರಾದಿ ಸಮಸ್ತದೇವತೆಗಳೂ, ಮಹರ್ಷಿಗಳೂ, ಸಹ ಸಿದ್ಧರಾಗುವರಾದ್ದರಿಂದ ಈ ಗ್ರಂಥವಂ ಕೇಳತಕ್ಕಂಥಾವನು, ಪಾರಾಯಣವಂ ಮಾಡುವನನ್ನು ಪ್ರತ್ಯಕ್ಷವಾಗಿ ಬಂದಿರುವ ಪರಮಾತ್ಮನೆಂದು ಭಾವಿಸುತ್ತಾ ಭಯವಿನಯ ಶ್ರದ್ಧಾಭಕ್ತಿಗಳಿಂದ ಸಾವಧಾನಚಿತ್ತನಾಗಿ ಕೇಳಬೇಕು. ಕೇಳಿದ ಅರ್ಥವನ್ನೇ ಸರ್ವದಾ ಮನನವಂ ಮಾಡುತ್ತಿರುವನಿಗೆ, ಜ್ಞಾನಿಗಳ ಮಾರ್ಗವೆಲ್ಲವು ಗೋಚರವಾಗುವದ್ದರಿಂದ ಶೀಘ್ರವಾಗಿಯೇ ಪರಮಾನಂದ ಪದವಿಯು ಸಿದ್ಧವಾಗುವದು. ತಿಳಿದ್ದನ್ನು ಮತ್ತೊಬ್ಬನಿಗೆ ತಿಳಪುವದು ತಿಳಿಯದಿರುವದನ್ನು ದೊಡ್ಡವರಿಂದ ತಿಳಿಯುವದು ಮತ್ತೊಬ್ಬನಿಲ್ಲದಿರೆ ತಾನೇ ನೋಡಿಕೊಳ್ಳುತ್ತಿರುವದು, ಇಷ್ಟುಮಾತ್ರದಿಂದಲೇ ಈ ಗ್ರಂಥವು ಪರಮ ಪುರುಷಾರ್ಥವಂ ಸಾಧಿಸುವದ್ದರಿಂದ ಇದಕ್ಕಿಂತ ಸುಲಭವಾಗಿ ಉತ್ತಮವಾದ ಸಾಧನವು ಯಾವದೂ ಇಲ್ಲವೆಂದು ತಿಳಿಯತಕ್ಕದ್ದು. ಸುಲಭವಾಗಿ ವಸ್ತು ಜ್ಞಾನವಾಗಲೋಸುಗ ಪೇಳಲ್ಪಡುವ ದೃಷ್ಟಾಂತಗಳಲ್ಲಿ ಏಕದೇಶಸಾಮ್ಯವೇ ಬ್ರಹ್ಮಕ್ಕೆ ಸರಿಯಾಗುವದ್ದರಿಂದ ಬ್ರಹ್ಮವು ಅಸ

ಮಾನವೆನಿಸಿಕೊಳ್ಳುವದು. ಉಪಾಯದಿಂದ ದೃಷ್ಟಾಂತದಾರ್ಷ್ಟಾಂತಗಳನ್ನು ಸರಿಮಾಡಿಕೊಳ್ಳುತ್ತಾ ವಿಷಯವಂ ತಿಳಿದುಕೊಳ್ಳುವನಿಗೆ ಶೀಘ್ರವಾಗಿ ಅಪರೋಕ್ಷಜ್ಞಾನ ಉಂಟಾಗುವದು. ಪ್ರಮೇಯ ಜ್ಞಾನಾರ್ಥವಾಗಿ ಪೇಳಲ್ಪಡುವ ಪ್ರಮಾಣಗಳಲ್ಲಿ ಪ್ರತ್ಯಕ್ಷವೇ ಮುಖ್ಯವೆನಿಸಿಕೊಳ್ಳುವದಲ್ಲವೆ ? ಅದರ ಸ್ವರೂಪವಂ ಕೇಳುವನಾಗು, ಜ್ಞಾನಿಗಳಿಗೆ ಅನುಭವಗೋಚರವಾದ ಸಾಕ್ಷಿ ಚೈತನ್ಯವೇ ಪ್ರತ್ಯಕ್ಷವೆನಿಸಿಕೊಳ್ಳುವದು. ಇದನ್ನೇ ಸ್ವರೂಪಜ್ಞಾನವೆಂತಲೂ, ಪೇಳುವರು. ಇದು ಸ್ವಾಭಾವಿಕವಾದ ಜ್ಞಾನೇಚ್ಛಾ ಕ್ರಿಯಾ ಶಕ್ತಿಗಳಿಂದ ಸೃಷ್ಟಿಗೆ ಉದ್ಯುಕ್ತವಾಗುವಲ್ಲಿ ಜ್ಞಾತೃ ಜ್ಞಾನ ಜ್ಞೇಯ ಮೊದಲಾದ ತ್ರಿಪುಟಿಗಳು ಅನೇಕಪ್ರಕಾರವಾಗಿ ಉಂಟಾಗುವವು. ಈ ಮೂರು ಪದಾರ್ಥಗಳಂ ವ್ಯಾಪಿಸಿಕೊಂಡಿರುವ ಸ್ವರೂಪಜ್ಞಾನಕ್ಕೆ ಅನುಭೂತಿ ಎಂತಲೂ, ವೇದನವೆಂತಲೂ, ಪ್ರತಿಪತ್ತಿಯಂತಲೂ, ಕ್ರಮವಾಗಿ ಪೆಸರುಗಳಾಗಿರುವವು. ಇದರಲ್ಲಿ ಅನುಭೂತಿಯೇ ಜೀವನೆನಿಸಿಕೊಳ್ಳುವದು. ಅಹಂಕಾರಿಯಾದ ಈ ಜೀವನೇ ಪುರುಷನೆಂತಲೂ, ಪೇಳಲ್ಪಡುವನು. ಈ ಪುರುಷನು ಯಾವದರ ಭಾವನೆಯಿಂದುದಯಿಸುವನೋ ಆ ಪದಾರ್ಥರೂಪದಿಂದವನ ಭಾವನೆಯೇ ತೋರುತ್ತಿರುವದು. ಈ ಜ್ಞಾತೃವು ಜ್ಞಾನದಿಂ ಜ್ಞೇಯವಂ * ಪಿಡಿಯುವದರಲ್ಲಿ ಬದ್ಧನೆನಿಸುವನು. ಜ್ಞಾನವಂ ತನಗೆ ಅಭಿಮುಖವಾಗಿ ಮಾಡಿಕೊಳ್ಳುವಲ್ಲಿ ವಿವೇಕಿಯೆನಿಸುವನು. ಸ್ವರೂಪವಂ ವಿಚಾರಿಸುತ್ತಾ ತಾನು ಸರ್ವಾತೀತಸಾಕ್ಷಿ ಸ್ವರೂಪನೆಂದು ತಿಳಿದು ಜ್ಞಾತೃ ಜ್ಞಾನ ಜ್ಞೇಯಾದಿ ತ್ರಿಪುಟಿಗಳೆಲ್ಲವು ಜಲದಿಂ ತರಂಗಗಳಂತೆ ನನ್ನಿಂದಲೇ ಉಂಟಾಗಿರುವವು. ನನ್ನಿಂದಲೇ ಕ್ಲೃಪ್ತಸ್ಥಿತಿಗಳಾಗಿರುವವು. ನನ್ನಲ್ಲಿಯೇ ಲಯವಂಹೊಂದುವನಾದ್ದರಿಂದ ನಾನೇ ಈ ಪದಾರ್ಥ ರೂಪದಿಂ ಪ್ರಕಾಶಿಸಿರುವೆನೆಂದು ತಿಳಿಯಬರುತ್ತೆ. ಎಂದು ಅಖಂಡಾಕಾರವೃತ್ತಿಯಂ ಪಿಡಿದಿರುವನೇ ಜ್ಞಾನಿಯೆನಿಸುವನು. ಈ ಜ್ಞಾನದ ದಾರ್ಢ್ಯದಿಂದೆರಡನೇ ಪದಾರ್ಥವೇ ಇಲ್ಲದಿರುವಲ್ಲಿ ನಾನೆಂಬುವದೆಲ್ಲಿಯದೆಂದು ಚಿಂತಿಸುತ್ತಾ, ನಾನೆಂಬ ಅಭಿಮಾನವಂ ಬಿಟ್ಟವನೇ ಮುಕ್ತನೆನಿಸಿಕೊಳ್ಳುವನು. ಈಪ್ರಕಾರ ಪ್ರತ್ಯಕ್ಷವೆನಿಸಿಕೊಳ್ಳುವ ಸಾಕ್ಷಿ ಚೈತನ್ಯವೇ ಸ್ವೇಚ್ಛೆಯಿಂದನೇಕ ರೂಪವಾಗಿ ಕ್ರೀಡಿಸುತ್ತಿರುವದು ಅನುಮಾನಾದಿ ಪ್ರಕರಣಗಳೆಲ್ಲವು ಈಪ್ರಕಾರ ಪ್ರತ್ಯಕ್ಷವೆನಿಸಿಕೊಳ್ಳುವವು. ಅಂಶಾಂಶಿಗಳಿಗೆ ಸತ್ತಾಭೇದವಿಲ್ಲದ್ದರಿಂದ ಅಂಶಿಯೇ ಅಂಶರೂಪದಿಂ ಪ್ರಕಾಸುತಲಿಧೆ ಯೆಂದು ತಿಳಿಯತಕ್ಕದ್ದು. ಹೀಗೆ ಪರಮಾತ್ಮನೆ ನಾನಾರೂಪಗಳಂ

* ಪಿಡಿಯುವದರಲ್ಲಿ.

ಪ್ರಕಾಶಿಸುವನೆಂದು ತಿಳಿದ ಪುರುಷನೇ ಮಹಾತ್ಮನೆನಿಸಿಕೊಳ್ಳುವನೆಂದು ವಸಿಷ್ಠನು ಶ್ರೀರಾಮನಂ ಕುರಿತು ಪೇಳಿದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯಲ್ಲಿ ಮುಮುಕ್ಷುಪ್ರಕರಣದೊಳ್ ಗುರುಶಿಷ್ಯ ಯೋಗ್ಯತಾದಿ ಜ್ಞಾನಸಾಧನ ನಿರೂಪಣವೆಂಬ ಮೂರನೇ ತರಂಗಕ್ಕೆ ಮಂಗಳಮಹಾ.

ಮುಮುಕ್ಷುಪ್ರಕರಣಸ್ಸಮಾಪ್ತಃ.



## ಸಂಕ್ಷೇಪ ಜಗದುತ್ಪತ್ತಿಪ್ರಕರಣ ಪ್ರಥಮತರಂಗ ಪ್ರಾರಂಭ.

## ಆಕಾಶಜೋಪಾಖ್ಯಾನ.



ಅನಂತರವಲ್ಲಿ ವಸಿಷ್ಠನು ಶ್ರೀರಾಮಚಂದ್ರನಂ ಕುರಿತಿಂತೆಂದನು.

ಎಲೈ ರಾಮಭದ್ರನೇ ! ಸತ್ಯಜ್ಞಾನಾನಂದ ಸ್ವರೂಪವಾದ ಪರಬ್ರಹ್ಮವೇ ಸ್ವೇಚ್ಛೆಯಿಂದ ಕ್ರೀಡಿಸಲಿಚ್ಛೈಸಿ ಎರಡನೇ ಪದಾರ್ಥವೇ ಇಲ್ಲದ್ದರಿಂದಲೂ, ಎರಡನೇ ಪದಾರ್ಥವಿಲ್ಲದೆ ಕ್ರೀಡೆಸಂಭವಿಸುವದಿಲ್ಲವಾದ್ದರಿಂದಲೂ, ಎರಡನೇ ಪದಾರ್ಥವಂ ಧ್ಯಾನಿಸುತ್ತಾ ತತ್‌ಕ್ಷಣದಲ್ಲಿ ಗೋಚರವಾದ ಸ್ವಪ್ರಕಾಶವನ್ನೇ ಸ್ವರೂಪವೆಂತಲೂ, ಸ್ವಶಕ್ತಿಯನ್ನೇ ದ್ವಿತೀಯವಸ್ತುವೆಂತಲೂ, ಪರಿಗ್ರಹಿಸಿ ಸ್ವಶಕ್ತಿಪ್ರಕಾಶ ಪರಿಣಾಮರೂಪವಾದ ಪದಾರ್ಥಗಳಿಂದ ಈ ಪ್ರಪಂಚವಂ ರಚಿಸಿಕೊಂಡು ಸರ್ವವ್ಯಾಪಕವಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಸ್ವರೂಪವಾಗಿಯೂ, ಸರ್ವೇಶ್ವರವಾಗಿಯೂ, ನಾನಾಪ್ರಕಾರವಾಗಿ ವಿಹರಿಸುತ್ತಿರುವದು. ಎರಡನೇ ಪದಾರ್ಥವಂ ಧ್ಯಾನಿಸುವಲ್ಲಿ ಸ್ವಪ್ನಪದಾರ್ಥದಂತೆ ಈ ಪ್ರಪಂಚವೆಲ್ಲವೂ ತನ್ನಲ್ಲೇ ಗೋಚರವಾಗುವದು. ಬಳಿಕ ಭಿನ್ನಪದಾರ್ಥದಂತೆ ದೃಶ್ಯವಾಗುವದು. ಇದನ್ನು ಭಿನ್ನವೆಂತಲೂ, ಅಭಿನ್ನವೆಂತಲೂ, ಸತ್ಯವೆಂತಲೂ, ಅಸತ್ಯವೆಂತಲೂ, ಅನಿರ್ವಚನೀಯವೆಂತಲೂ, ಸುಖಸ್ವರೂಪವೆಂತಲೂ, ದುಃಖಸ್ವರೂಪವೆಂತಲೂ, ಸುಖದುಃಖಾತ್ಮಕವೆಂತಲೂ, ಯಾವನು ಹ್ಯಾಗೆ ತಿಳಿಯುವನೋ ಅವನು ಹಾಗೆ ಅನುಭವಿಸುವನು. ಯಾವಾಗ ಮಹಾವಾಕ್ಯಾರ್ಥ ವಿಚಾರದಿಂದ ಸರ್ವವು ಬ್ರಹ್ಮಕ್ಕೆ ಅಭಿನ್ನವಾದ್ದೆಂದುತಿಳಿದು ಅನುಭವಕ್ಕೆ ಗೋಚರವಾದ ಸ್ವರೂಪದ ಪ್ರಕಾಶದಿಂ ಸಹಜವಾದ ಆನಂದವನ್ನನುಭವಿಸುವನೋ ಆಗ ಮುಕ್ತನೆನಿಸುವನು. ಹೀಗೆ ಪ್ರಪಂಚವೆಲ್ಲವು ತನ್ನಲ್ಲಿಯೇ ಸೃಷ್ಟಿಸ್ಥಿತಿಲಯಗಳಂ ಹೊಂದುತ್ತಿರುವಲ್ಲಿ ಇದು ಎಂಥಾದ್ದೆಂತಲೂ, ಯಾರಿಗೆ ಸಂಬಂಧಿಸಿರುವದೆಂತಲೂ, ಎಲ್ಲಿ ಪುಟ್ಟುವದೆಂತಲೂ, ಏನು ನಿಮಿತ್ತ ಪುಟ್ಟುವದೆಂತಲೂ,

ಯಾಕೆ ಜನನಮರಣಾದಿಗಳಂ ಹೊಂದುತ್ತಾ ಭ್ರಮಿಸುತ್ತಿರುವದೆಂತಲೂ, ಪ್ರಶ್ನೆಯೇ ವಿಚಿತ್ರವಾಗಿ ಕಾಣುವದು. ಸತ್ಯಕ್ಕೆ ನಾಶವಿಲ್ಲವೆಂತಲೂ, ಅಸತ್ಯಕ್ಕೆ ಉತ್ಪತ್ತಿಯೇ ಇಲ್ಲವೆಂತಲೂ, ವಿಚಾರಿಸುವಲ್ಲಿ ತಾನಾಗಿ ಈ ಪ್ರಶ್ನೆಗೆ ಉತ್ತರವಾಗುವದ್ದರಿಂದ ಬ್ಯಾರೆ ಉತ್ತರವಂ ಪೇಳುವದಕ್ಕೆ ನಿಮಿತ್ತವಿಲ್ಲ. ಆದಾಗ್ಯೂ ಇದರ ಸ್ವರೂಪಜ್ಞಾನಕ್ಕೋಸುಗ ಉತ್ಪತ್ತಿಪ್ರಕರಣವಂ ಪೇಳುವೆನು. ಸಾವಧಾನವಾಗಿ ಕೇಳುವನಾಗು.

ಈ ಪ್ರಪಂಚವೆಲ್ಲವು ಷುಷುಪ್ತಿಯಲ್ಲಿ ಸ್ವಪ್ನ ಪ್ರಪಂಚದಂತೆ ನಷ್ಟವಾಗಲು ನಾಮ ರೂಪ ಕ್ರಿಯೆಗಳಿಲ್ಲದ್ದರಿಂದ ಅಭಿವ್ಯಕ್ತಿಯಿಲ್ಲದ ಪರಮಾತ್ಮನು ತೇಜವೆಂತಲೂ, ತಮವೆಂತಲೂ, ಬಣ್ಣಿಸಲಶಕ್ಯನಾಗಿ ತರಂಗವಿಲ್ಲದ ಸಮುದ್ರದಂತೆ ಗಂಭೀರವಾಗಿರುವನು. ಇವನನ್ನು ಶ್ರುತಿಪ್ರಮಾಣಗಮ್ಯನಾದ್ದರಿಂದ ಋತವೆಂತಲೂ, ಜ್ಞಾನಿಗಳ ಅನುಭವಕ್ಕೆ ಗೋಚರನಾದ್ದರಿಂದ ಸತ್ಯವೆಂತಲೂ, ಸರ್ವೋತ್ಕೃಷ್ಟನಾದ್ದರಿಂದ ಪರವೆಂತಲೂ, ದೇಶ ಕಾಲ ವಸ್ತುಭೇದವಿಲ್ಲದ್ದರಿಂದ ಬ್ರಹ್ಮವೆಂತಲೂ, ವಿದ್ವಾಂಸರು ವ್ಯವಹಾರಾರ್ಥವಾಗಿ ಪೇಳುವರು. ಮತ್ತು ಇವನು ಸುಷುಪ್ತಿಯಲ್ಲಿ ತನ್ನಂತಾನು ಹೊಂದುವದ್ದರಿಂದಲೂ, ಜಾಗ್ರದವಸ್ಥೆಯಲ್ಲಿ ವಿಷಯಗಳನ್ನನುಭವಿಸುವದ್ದರಿಂದಲೂ, ಈ ವಿಷಯಗಳಂ ಸ್ವಪ್ನದಲ್ಲಿ ಸ್ವೀಕರಿಸುವದ್ದರಿಂದಲೂ, ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ವಿಛಿತ್ತಿ ಇಲ್ಲದೆ ಪ್ರಕಾಶಿಸುವದ್ದರಿಂದಲೂ, ಆತ್ಮನೆನಿಸಿಕೊಳ್ಳುವನು. ಇವನು ಸ್ವಶಕ್ತಿಯಾದ ಮಾಯೆಯಿಂದ ಪ್ರಕಾರಾಂತರದಿಂ ಪ್ರಕಾಶಿಸುತ್ತಾ ಶರೀರಧಾರಣಾನಂತರದಲ್ಲಿ ಉಂಟಾಗತಕ್ಕ ಜೀವನೆಂಬ ನಾಮವಂ ಪಡೆಯುವದಕ್ಕೆ ಯೋಗ್ಯನಾಗುವನು. ಬಳಿಕ ಸಮುದ್ರದಿಂ ತರಂಗ ಪುಟ್ಟುವಂತೆ ಸ್ಥಿರಸ್ವಭಾವನಾದ ಈ ಪರಮಾತ್ಮನಿಂದ ಚಂಚಲಸ್ವಭಾವವಾದ ಮನವುಂಟಾಗುವದು. ಎಥೇಚ್ಛವಾಗಿ ಸರ್ವಕಾಲದಲ್ಲೂ, ಸಂಕಲ್ಪವಂ ಮಾಡುವ ಈ ಮನದಿಂದ ಇಂದ್ರಜಾಲಪ್ರಾಯವಾದ ಈ ಜಗತ್ತು ವುಂಟಾಗುವದು. ಬಿಸಲುದೊರೆಯಂತಿರುವ ಈ ಜಗದ್ರೂಪವಾದ ಇಂದ್ರಜಾಲದ ಸಂಪತ್ತಿಗೆ ವಿದ್ಯೆಗೆ ವಿರುದ್ಧವಾಗಿ ಅದರಿಂ ಹೋಗುವದ್ದರಿಂದ ಅವಿದ್ಯೆಯಂತಲೂ, ಊರ್ಧ್ವಾಧೋ ಲೋಕಗಳಲ್ಲಿ ಸಂಚಾರಕ್ಕೆ ನಿಮಿತ್ತವಾದ್ದರಿಂದ ಸಂಸಾರವೆಂತಲೂ, ಸ್ವಾತಂತ್ರ್ಯವಂ ತಪ್ಪಿಸುವದ್ದರಿಂದ ಬಂಧವೆಂತಲೂ, ಅಸತ್ಯವಾದ್ದರಿಂದ ಮಾಯೆಯಂತಲೂ, ಭ್ರಮೆಗೆ ಕಾರಣವಾದ್ದರಿಂದ ಮೋಹವೆಂತಲೂ, ಅಂಧಕಾರವು ಪದಾರ್ಥವಂ ಮುಚ್ಚಿಕೊಳ್ಳುವಂತೆ ಸ್ವರೂಪವಂ ಮರೆಮಾಡುವದ್ದರಿಂದ ತಮಸ್ಸೆಂತಲೂ ಹೆಸರು

ಗಳು ಉಂಟಾಗಿರುವವು. ಮರುಭೂಮಿಯಲ್ಲಿ ಬಿಸಲು ಹೊಳೆಯುತ್ತಿದ್ದಾಗ್ಯೂ, ಅಪೇಕ್ಷೆಗೆ ವಿಷಯವಾದ ಜಲವನ್ನಂತರಂಗದಲ್ಲಿಟ್ಟುಕೊಂಡಿರುವನ ಕಣ್ಣಿಗೆ ಜಲವಾಗಿ ಕಾಣುವದಲ್ಲದೆ ಮತ್ತೊಬ್ಬನಿಗೆ ಕಾಣದು. ಆದ್ದರಿಂದ ಹೃದಯದ ವಳಗಿರುವ ಪದಾರ್ಥವು ಹೊರಗಿರುವಂತೆ ಕಾಣುವದೆಂದೇ ನಿಶ್ಚೈಸುವಲ್ಲಿ ಈ ಪ್ರಪಂಚವೆಲ್ಲವೂ ಪರಮಾತ್ಮನಲ್ಲಿಯೇ ಇಹೆಯೆಂದು ತಿಳಿಯಬರುತ್ತೆ. ಆದ್ದರಿಂದ ಕಾಂಚನ ಕಟಕಗಳಿಗೆ ಹ್ಯಾಗೆ ಭೇದವಿಲ್ಲವೋ ಹಾಗೆ ಬ್ರಹ್ಮ ಜಗತ್ತುಗಳಿಗೆ ಭೇದವಿಲ್ಲವೆಂದು ತಿಳಿಯಬೇಕು. ಆದರೆ ಕಟಕವಂ ನೋಡಿ ಕನಕವೆಂದು ಪೇಳುವಂತೆ ಕನಕವಂ ನೋಡಿ ಕಟಕವೆಂದು ಯಾರೂ ಪೇಳಲಾರರು. ಆದ್ದರಿಂದ ಕಾರಣದ ಸತ್ವವೇ ಕಾರ್‍ಯದಲ್ಲಿರುವದೆಂದು ತಿಳಿಯತಕ್ಕದ್ದು. ಯಾವನು ಅವಿದ್ಯೆಯಲ್ಲಿರುವನೋ ಅವನೇ ಪುಟ್ಟುವನು. ಬಂಧಮೋಕ್ಷಗಳು ಸ್ವರ್ಗನರಕಗಳೂ ಸಹಾ ಅವನಿಗೆ ಸಂಭವಿಸುವವು. ಯಾವನಿಗೆ ಅವಿದ್ಯೆಯೇ ಇಲ್ಲವೋ ಅವನಿಗೆ ಉತ್ಪತ್ತಿಮೊದಲಾದ್ದು ಒಂದೂ ಇಲ್ಲವಾದ್ದರಿಂದ ಬುದ್ಧಿಶಾಲಿಯಾದವನು ಅವಿದ್ಯೆ ಇಲ್ಲದ ಸ್ವಸ್ವರೂಪವಂ ತಿಳಿಯತಕ್ಕದ್ದು.

ಎಲೈ ಶ್ರೀರಾಮನೇ ! ನಾನು ನೀನೆಂಬುವದೇ ಮೊದಲಾದ ಈ ಸುಳ್ಳುಜಗವೆಲ್ಲವೂ ದೃಶ್ಯವೆನಿಸಿಕೊಳ್ಳುವದು. ದ್ರಷ್ಟೃವಿನ ಸತ್ವವೇ ದೃಶ್ಯಕ್ಕೆ ಅವಲಂಬನವಾಗಿರುವದಲ್ಲದೆ ದೃಶ್ಯಕ್ಕೆ ಬ್ಯಾರೆ ಸತ್ವವಿಲ್ಲದ್ದರಿಂದ ದ್ರಷ್ಟೃವಾದ ದೃಕ್ಕೇ ದೃಶ್ಯವಾಗಿ ತೋರುವದಲ್ಲದೆ ದೃಶ್ಯವಿಲ್ಲವೇ ಇಲ್ಲವೆಂದು ನಿಶ್ಚಯಿಸತಕ್ಕದ್ದು. ಈ ಜ್ಞಾನದಿಂ ದೃಶ್ಯವು ಅಣಗಲು, ದ್ರಷ್ಟೃವಿಗೆ ಕೈವಲ್ಯವಾಗುವದು. ಹೀಗಾಗದಿರೆ ಬಂಧಕವಾದ ದೃಶ್ಯವು ಎಂದಿಗೂ ತಪ್ಪುವದಿಲ್ಲ. ಆದ್ದರಿಂದ ದೃಶ್ಯವಿರುವ ಪರ್‍ಯಂತವೂ ದ್ರಷ್ಟೃವಿಗೆ ಬಂಧ ತಪ್ಪುವದಿಲ್ಲವೆಂದು ತಿಳಿಯಬೇಕು. ಇದು ಪರಮಾರ್ಥವಾಗಿಲ್ಲವೆಂತಲೂ, ಇದು ಅಸತ್ಯವೆಂತಲೂ, ಬರೀಮಾತಿನಿಂದಲೇ ಈ ದೃಶ್ಯವು ಪೋಗಲಾರದು. ಕ್ರಮವಾಗಿ ಚಿಕಿತ್ಸೆಯಂ ಮಾಡದೆ ತನ್ನಂ ಹೋಗಲಾಡಿಸಬೇಕೆಂದು ಬರೀ ಸಂಕಲ್ಪವಂ ಮಾಡುತ್ತಿರುವನಿಗೆ ರೋಗವು ಹ್ಯಾಗೆ ಚಿಂತೆಯನ್ನೂ ಉಂಟುಮಾಡುತ್ತ ವೃದ್ಧಿಯಾಗುವದೋ ಹಾಗೆ ಈ ದೃಶ್ಯವು ಬರೀಮಾತುಗಳಿಂದ ವೃದ್ಧಿಯಾಗುವದು. ಶಾಸ್ತ್ರ, ವ್ಯವಹಾರ, ತೀರ್ಥ, ಸ್ನಾನ, ವ್ರತ, ನಿಯಮ ಜಪತಪಗಳಿಂದಲೂ; ಇದು ಹೋಗಲಾರದು. ದ್ರಷ್ಟೃವು ಎಲ್ಲೆಲ್ಲಿಗೆ ಹೋದಾಗ್ಯೂ, ಈ ದೃಶ್ಯವು ಪ್ರಾರಬ್ಧದಂತೆ ಅವನಂ ಬಿಡದು. ದರ್ಪಣವಿದ್ದೆಡೆಯಲ್ಲಿ ಪ್ರತಿಬಿಂಬವಿರುವಂತೆ ದ್ರಷ್ಟೃವಿದ್ದೆಡೆಯಲ್ಲಿ ಸಿದ್ಧವಾಗಿರುವದು. ಇದು ಇರುವವರಿಗೆ ಎಂಥಾ ಯೋಗಿಗೂ, ನಿರ್ವಿಕಲ್ಪಸಮಾಧಿಗೆ ಅವ

ಕಾಶವಂ ಕೊಡದು. ಒಂದುವೇಳೆ ನಿರ್ವಿಕಲ್ಪಸಮಾಧಿಯಾದಾಗ್ಯೂ ಬಹಿರ್ಮುಖವಾದೊಡನೆ ದೇಹಾಭಿಮಾನದಂತೆ ಸಿದ್ಧವಾಗುವದು. ಪಾಷಾಣದ ಹೃದಯದಂತೆ ಎಂದೆಂದಿಗೂ ಚಲನವಿಲ್ಲದ ಸಮಾಧಿಯಾಗುವಂಥಾದ್ದು ಯಾರಿಗೂ ಅನುಭವಸಿದ್ಧವಾಗಿಲ್ಲ. ಈ ದೃಶ್ಯವು ಸತ್ಯವಾದದ್ದಾದರೆ ಎಂದಿಗೂ ಶಾಂತವಾಗಲಾರದು. ಜಪತಪ ಧ್ಯಾನಗಳಿಂದ ಇದು ಶಾಂತವಾಗುವದೆಂಬುವದು ಅಜ್ಞರ ಕಲ್ಪನೆಯಾದ್ದರಿಂದ ಪ್ರಾಜ್ಞರು ಇದನ್ನಂಗೀಕರಿಸಲಾರರು. ಬೀಜದಲ್ಲಿ ವೃಕ್ಷದಂತೆಯೂ, ಪದಾರ್ಥದಲ್ಲಿ ರಸದಂತೆಯೂ, ತಿಲದಲ್ಲಿ ತೈಲದಂತೆಯೂ, ಪುಷ್ಪದಲ್ಲಿ ಪರಿಮಳದಂತೆಯೂ, ನಿದ್ರೆಯಲ್ಲಿ ಸ್ವಪ್ನದಂತೆಯೂ, ಚಿತ್ತದಲ್ಲಿ ಸಂಕಲ್ಪದಂತೆಯೂ, ಚಿನ್ಮಯನಾದ ದ್ರಷ್ಟೃವಿನಲ್ಲಿ ಇದು ಸಿದ್ಧವಾಗಿರುವದು. ಮತ್ತು ಹೃದಯದಲ್ಲಿರುವ ಭೀತಿ ಪಿಶಾಚವು ಬಾಲಕನಂ ಬಾಧಿಸುವಂತೆ ದ್ರಷ್ಟೃ ಚೈತನ್ಯವಂ ವ್ಯಥೆಪಡಿಸುವದು.

ಎಲೈ ರಾಮಭದ್ರನೇ ! ಪೂರ್ವದಲ್ಲಿ ಸರ್ವಭಕ್ಷಕವಾದ ಮೃತ್ಯುವು ಚಿರಜೀವಿಯಾಗಿ ಸರ್ವದಾ ಸಮಾಧಿನಿಷ್ಠವಾಗಿರುವ ಆಕಾಶಜನೆಂಬ ಬ್ರಾಹ್ಮಣನಂ ಕಂಡು ಅವನಂ ತಿನ್ನಲೋಸುಗ ಅವನ ಮನೆಗೆ ಪೋಗಿ ಅಲ್ಲಿ ಸುಡುತ್ತಿರುವ ಅಗ್ನಿಜ್ವಾಲೆಗಳನ್ನು ಭೇದಿಸಿಕೊಂಡು ಒಳಕ್ಕೆನುಗ್ಗಿ ಆ ಬ್ರಾಹ್ಮಣನಂ ಹಿಡಿಯಲೋಸುಗ ಕೈಗಳಂ ನಾನಾಪ್ರಕಾರವಾಗಿ ನೀಡುತ್ತಾ ಭಾವನಾಮಯನಾದ ಪುರುಷನಂತೆ ಅವನು ಸಿಕ್ಕದಿರಲು, ಆಶ್ಚರ್ಯಪಟ್ಟು ಯಮನ ಸಮೀಪಕ್ಕೆ ಪೋಗಿ ಆ ವೃತ್ತಾಂತವಂ ಪೇಳಿತು. ಆ ಯಮನು ಎಲೈ ಮೃತ್ಯುವೆ! ಕರ್ಮಸಹಾಯವಿಲ್ಲದೆ ಸಂಹರಿಸುವದಕ್ಕೆ ಆಗುವದಿಲ್ಲವಾದ್ದರಿಂದ, ಆ ಬ್ರಾಹ್ಮಣನ ಕರ್ಮವೆಲ್ಲಿರುವದೋ ನೋಡೆಂದು ಪೇಳಲಾಮೃತ್ಯುವು ಜಗವೆಲ್ಲವನ್ನೂ ಸುತ್ತಿ ಆತನ ಕರ್ಮವು ಎಲ್ಲೂ ಸಿಕ್ಕಲಿಲ್ಲವಾದ್ದರಿಂದ, ಪುನಃ ಯಮನಸಮೀಪಕ್ಕೆ ಪೋಗಿ ಆ ಬ್ರಾಂಹಣನ ಕರ್ಮವೆಲ್ಲಿರುವದೆಂದು ಕೇಳಲಾ ಯಮನು ಒಂದು ಕ್ಷಣವಾಲೋಚಿಸಿ ಪೇಳಿದನದೆಂತೆನೆ.

ಎಲೈ ಮೃತ್ಯುವೇ ! ಈ ಆಕಾಶಜನೆಂಬ ಬ್ರಾಹ್ಮಣನು ಸಹಕಾರಿ ಕಾರಣಾಂತಗಳಿಲ್ಲದೆ ಸ್ವೇಚ್ಛೆಮಾತ್ರದಿಂ ಚಿದಾಕಾಶದಲ್ಲಿ ಪುಟ್ಟಿರುವನು. ಈತನಿಗೆ ಪೂರ್ವಕರ್ಮವು, ಈಗಿನ ಕರ್ಮವು, ಕರ್ಮಸಂಬಂಧವು ಸಹ ಇಲ್ಲದ್ದರಿಂದ ಈತನ ಚಿತ್ತವು ಪರವಶವಾಗದೆ ಸ್ವಭಿನ್ನವಾದ ಪದಾರ್ಥಗಳ ಕಲ್ಪನೆಯಿಲ್ಲದೆ ತನಿಗೆ ಶರೀರವಿಧೆಯುಂತಲೂ, ಶ್ವಾಸೋಛ್ವಾಸಗಳು ನಡೆಯುವವೆಂತಲೂ, ಜ್ಞಾನವಿಲ್ಲದೆ ಕಲ್ಲಿನಲ್ಲಿ ಒಡದು ಮೂಡಿಪಂತಿರುವ ಆಕಾರದಿಂ ಚಿದಾ

ಕಾಶವಲ್ಲಿಯೇ ನಿಂದಿರುವನಾದ್ದರಿಂದಾಕಾಶದಂತೆ ಹಿಡಿಯುವದಕ್ಕೆ ಶಕ್ಯವಾಗುವದಿಲ್ಲ. ಕಾರಣದಿಂದ ಕಾರ್ಯಪುಟ್ಟುವಲ್ಲಿ ಸಹಕಾರಿ ಕಾರಣಾಂತರಗಳಿಂದಲೇ ವಿಕಾರವುಂಟಾಗುವದು. ಇಲ್ಲಿ ಅದು ಇಲ್ಲವಾದ್ದರಿಂದ ದೀಪದಲ್ಲಿ ಜ್ವಾಲೆಯಂತೆ ಇವನು ಸಹಜವಾದ ಸ್ವರೂಪದಲ್ಲಿ ನಿಂದಿರುವನು. ಪ್ರಳಯಕಾಲದಲ್ಲಿ ಅವಶಿಷ್ಟವಾದ ಬ್ರಹ್ಮವು ಪುನಃ ಸೃಷ್ಟಿಯಂ ಮಾಡಲುಜ್ಜುಗಿಸುವಲ್ಲಿ ಯೋಗಿಯ ನೇತ್ರವು ಭ್ರೂಮಧ್ಯದಲ್ಲಿ ತೇಜವಂ ಕಾಣುವಂತೆ ತನಗ ಅಭಿನ್ನವಾದ ಪ್ರಕಾಶವಂ ಕಂಡು, ಜ್ಞಾನಸ್ವರೂಪವಾದ್ದರಿಂದ ಇದೇ ನಾನೆಂದು ತಿಳಿಯುವದು. ಆಗ * ಕಾಕತಾಳೀಯನ್ಯಾಯದಿಂ ಪ್ರಕಾಶರೂಪವಾದ ಈ ಆಕಾರವು ಪರಬ್ರಂಹಕ್ಕೆ ಉಂಟಾಗಿರುವದು. ಯಾವನಿಗೆ ಜೀವನ ಮರಣ ಕಲ್ಪನೆಗಳು ಜಡಾಜಡಕಲ್ಪನೆಗಳು, ಸಹ ಇರುವವೋ ಅವನು ಪಾರ್ಥಿವನಾಗಿ ನಿನಗೆ ಅಧೀನನಾಗುವನು. ಇವನಿಗೆ ಅಂಥಾ ವಿಕಾರವೇನೂ ಇಲ್ಲದ್ದರಿಂದ ಇವನ ಆಶೆಯಂ ನೀನು ಬಿಡುವನಾಗು, ಎಂದು ಪೇಳಲಾಮೃತ್ಯುವು ಆಶ್ಚರ್ಯಪಟ್ಟು ತನ್ನ ಮನೆಗೆ ಪೋದನು. ಎಂದು ವಸಿಷ್ಠನ ವಚನವಂ ಕೇಳಿದ ಶ್ರೀರಾಮನು, ಎಲೈ ಮಹಾಮುನಿಯೇ ! ಲೋಕಪಿತಾಮಹನಾದ ಬ್ರಂಹನನ್ನೇ ಆಕಾಶಜನೆಂದು ಪೇಳಿದಂತೆ ಕಾಣುತಲಿಧೆ. ಎಂದು ಪೇಳಲು, ಮರಳಿ ವಸಿಷ್ಠನಿಂತೆಂದನು. ಎಲೈ ಮಹಾಮತಿಯೇ ! ಮನ್ವಂತರದಲ್ಲಿ ಸರ್ವಪ್ರಾಣಿಗಳನ್ನು ಸಂಹರಿಸಿದ ಮೃತ್ಯುವು ಬ್ರಹ್ಮನೂ ಸಂಹರಿಸಲಿಚ್ಛೈಸಿ, ಅವನೂ ಹಿಡಿಯಲಾರದೆ ಯಮನಿಂದೀಪ್ರಕಾರ ಪೇಳಲ್ಪಟ್ಟಿತು. ಚಿತ್ರಕಾರನ ಚಿತ್ತದಲ್ಲಿರುವ ಪುತ್ತಲಿಯಂತೆ ದ್ರಷ್ಟೃದೃಶ್ಯಭೇದವಿಲ್ಲದ ಪರಮಾತ್ಮನ ಸಂಕಲ್ಪರೂಪನಾದ ಈ ಬ್ರಂಹನು ಸಹಕಾರಿಕರಣಾಂತರಗಳಿಲ್ಲದೆ ಚಿದ್ರೂಪನಾದ ಪರಮಾತ್ಮನಿಂ ತಾನಾಗಿ ಪುಟ್ಟಿದವನಾದ್ದರಿಂದ ಸ್ವಯಂಭುವೆನಿಸಿಕೊಳ್ಳುವನು. ಇವನು ಪರಮಾತ್ಮನಿಗೆ ಅಭಿನ್ನನಾಗಿರುವದ್ದರಿಂದ ಕಾರ್ಯಾಕಾರಣಭಾವವು ಸಂಭವಿಸುವದಿಲ್ಲ. ಸಂಕಲ್ಪಮಾತ್ರವೇ ಮನವು ಅದೇ ಬ್ರಹ್ಮವೆನಿಸಿಕೊಳ್ಳುವದು. ಇವನು ಪೃಥಿವ್ಯಾದಿಗಳ ಸಂಬಂಧವಿಲ್ಲದಿದ್ದಾಗ್ಯೂ ಸ್ವೇಚ್ಛೆಯಿಂದಾಕಾರವುಳ್ಳವನಂತೆ ಕಾಣಿಸಿಕೊಳ್ಳುವನಲ್ಲದೆ ಇವನಿಗೆ ಆಕಾರವಿಲ್ಲ, ಇವನಿಗೆ ನಮ್ಮಂತೆ ಪೂರ್ವಕರ್ಮವಿಲ್ಲದ್ದರಿಂದ ಆದಿಭೌತಿಕವೆನಿಸುವ ಪಾಂಚಭೌತಿಕದೇಹವು ಅದರ ಸ್ಮೃತಿಯೂ ಸ್ಮೃತಿಮೂಲಕವಾದ ಸಂಸಾರವೂ ಸಹ ಇಲ್ಲ. ಪೂರ್ವದೇ

* ಕಾಗೆ ಬರುವ ಕಾಲಕ್ಕೆ ಸರಿಯಾಗಿ ತಾಳೇಹಣ್ಣು ಬಿದ್ದಂತೆ, ಏಕಕಾಲದಲ್ಲಿ ಅತರ್ಕಿತವಾಗಿ ಒದಗುವದು ಕಾಕತಾಳೀಯನ್ಯಾಯವು.

ಹಳಿದ್ದವನಿಗೆ ಸ್ಮೃತಿಯು ಕಾರಣವಾಗಿ, ಪುನಃ ಸ್ಥೂಲದೇಹವನ್ನುಂಟುಮಾಡುವದು. ಇವನಿಗೆ ನಮ್ಮಂತೆ ಪೂರ್ವದೇಹವಿಲ್ಲದ್ದರಿಂದ ಸ್ಮೃತಿಮೂಲಕವಾದ * ಆದಿಭೌತಿಕದೇಹವಿಲ್ಲದೆ † ಆತಿವಾಹಿಕವೆನಿಸುವ ಸೂಕ್ಷ್ಮಶರೀರ ಒಂದೇ ಇರುವದು. ಇತರ ಪ್ರಾಣಿಗಳಿಗೆ ಈ ಎರಡು ಶರೀರವು ಇರುವದು. ಲೋಕಾಂತರಗಮನಯೋಗ್ಯವಾದ್ದರಿಂದ ಆತಿವಾಹಿಕವೆನಿಸುವ ಸೂಕ್ಷ್ಮಶರೀರದ ಸೃಷ್ಟಿಯೇ ಮೊದಲಾದದ್ದು ಬ್ರಹ್ಮನಿಂದ ಸೃಷ್ಟವಾದ ಈ ಆತಿವಾಹಿಕಾದಿಭೌತಿಕ ಶರೀರಗಳು ಎಲ್ಲರಿಗೂ ಇರುವದರಿಂದ ಬ್ರಹ್ಮನು ಪರಬ್ರಹ್ಮಕ್ಕೆ ಅಭಿನ್ನವಾದಂತೆ ಸಮಸ್ತ ಪ್ರಾಣಿಗಳೂ ಅಭಿನ್ನರೆಂದು ತಿಳಿಯತಕ್ಕದು. ಕಾರಣಾಂತರ ಸಹಕಾರವಿಲ್ಲದೆ ಯಾವುದು ಯಾವುದರಿಂದುಂಟಾಗುವುದೋ ಅದು, ಅದೇ ಸರಿ; ಎಂದು ಅನುಭವವಿರುವಲ್ಲಿ ಸರ್ವವೂ ಬ್ರಹ್ಮವೆಂದು ತಿಳಿಯದಿರುವದಕ್ಕೆ ನಿಮಿತ್ತವೇನು ? ಆದರೆ ಶುದ್ಧಜ್ಞಾನಸ್ವರೂಪವಾದುದರಿಂದ ಪರಬ್ರಹ್ಮದಿಂದ ಪುಟ್ಟಿದ ಬ್ರಹ್ಮನು ಶುದ್ಧಜ್ಞಾನಸ್ವರೂಪನಾಗಿಯೇ ಇದ್ದನು. ಸಂಕಲ್ಪಸ್ವರೂಪನಾದ ಇವನು ಪ್ರಾಣಿಗಳ ಕರ್ಮಾನುಸಾರವಾಗಿ ಪ್ರವರ್ತಿಸಿದ್ದರಿಂದ ಪಾಂಚಭೌತಿಕ ಸೃಷ್ಟಿಗೆ ಕಾರಣವಾದನು. ರೂಪರಹಿತವಾದ ಆಕಾಶದಿಂದ ಪುಟ್ಟಿದ ವಾಯುವು ರೂಪರಹಿತವಾಗಿದ್ದಾಗೂ ತನ್ನ ಚಲನದಿಂದ ರೂಪಸಹಿತವಾದ ತೇಜವನ್ನು ಪುಟ್ಟಿಸುವಂತೆ ಬ್ರಹ್ಮನು ಪಾಂಚಭೌತಿಕ ಪ್ರಪಂಚವನ್ನು ರಚಿಸುವನು. ಬಾಲಕರಿಗೆ ಅಜ್ಞಾನದಿಂದ ನೆರಳೇ ಪಿಶಾಚವಾಗಿ ಬಾಧಿಸುವಂತೆ ಪ್ರಾಣಿಗಳಿಗೆ ಆತಿವಾಹಿಕ ಶರೀರವೇ ಆಧಿಭೌತಿಕವಾಗಿ ಬಂಧಕವಾಗುವುದು. ಈ ಆಧಿಭೌತಿಕವು ವಸ್ತುತಃ ಅಸತ್ಯವಾದಾಗೂ ಸ್ವಪ್ನಸ್ತ್ರೀಸಮಾಗಮದಂತೆ ಪ್ರತ್ಯಕ್ಷಫಲಾನುಭವದಿಂದ ಸತ್ಯದಂತೆ ತೋರುವುದು. ಪ್ರಾಣಿಗಳಿಗೆ ಜನ್ಮಾಂತರಕರ್ಮದಿಂದ ಸ್ವರೂಪವಿಸ್ಮೃತಿಯುಂಟಾದುದರಿಂದ ಮೃತ್ಯುಸ್ವರೂಪವಾದ ಈ ಸಂಸಾರ ಉಂಟಾದುದು. ಸ್ವರೂಪವನ್ನು ವಿಚಾರಿಸುವ ವಿವೇಕಿಗಳಿಗೆ ಆತಿವಾಹಿಕಭ್ರಾಂತಿಯೇ ತಪ್ಪುವದರಿಂದ ಆಧಿಭೌತಿಕಬುದ್ಧಿಯು ಗಗನಕುಸುಮದ ವಾಸನೆಯಂತಾಗುವುದು. ಪರಮಾತ್ಮನಿಗೆ ಪ್ರಪಂಚಸೃಷ್ಟಿಯು ಸ್ವಾಭಾವಿಕವಾದುದರಿಂದ ಸಂಕಲ್ಪಿಸುವನು. ಅವನ ಸಂಕಲ್ಪಸ್ವರೂಪನಾದ ಬ್ರಹ್ಮನು ಅವನಿಗೆ ಹೇಗೆ ಭಿನ್ನನಲ್ಲವೋ, ಅದೇಪ್ರಕಾರ ಸಂಕಲ್ಪದಿಂದುಂಟಾದ ಈ ಪ್ರಪಂಚವು ಭಿನ್ನವಲ್ಲ. ಆದುದರಿಂದ ಈ ಪ್ರಪಂಚವೆಲ್ಲವೂ ಮನೋಮಯವೆಂತಲೂ, ಮನವೇ ಬ್ರಹ್ಮವೆಂತಲೂ, ತಿಳಿಯತಕ್ಕದು. ಯಾವುದು ಯಾವುದರಿಂದ ಪುಟ್ಟು

* ಸ್ಥೂಲಶರೀರ Physical body. † Astral body.

ವಮೋ ಅದು ಅದೇಅಲ್ಲದೆ ಮತ್ತೊಂದಾಗಲಾರದಾದುದರಿಂದ ಸರ್ವವೂ ಬ್ರಹ್ಮವೆಂದು ನಿಶ್ಚೈಸುವನಾಗು. ಸ್ವಪ್ನಸಂಕಲ್ಪಮನೋರಥಗಳಂತೆ ದೃಶ್ಯಬುದ್ಧಿಯು ಮನದಲ್ಲಿರುವದು. ಬಾಲಕನ ಭೀತಿಯು ಪಿಶಾಚವಾಗುವಂತೆಯೂ, ಬೀಜವು ವೃಕ್ಷವಾಗುವಂತೆಯೂ, ದೃಶ್ಯಬುದ್ಧಿಯೇ ದೃಶ್ಯವಾಗಿ ನಿಲ್ಲುವದು. ದೃಶ್ಯವಾದ ಪ್ರಪಂಚವು ಸತ್ಯವಾದರೆ ದೃಶ್ಯದುಃಖವು ಎಂದಿಗೂ ತಪ್ಪಲಾರದು. ಮತ್ತು ದೃಗ್ರೂಪನಾದ ಪರಮಾತ್ಮನಿಗ ಅದ್ವಿತೀಯ ಭಾವವು ತಪ್ಪುವದು. ಸತ್ಯವಿಚಾರದಿಂದ ದೃಕ್ಕೇ ದೃಶ್ಯವಾಗಿ ತೋರುವುದಲ್ಲದೆ ದೃಶ್ಯವು ಬೇರೆ ಇಲ್ಲವೆಂದು ನಿಶ್ಚಯದಿಂದ ದೃಶ್ಯವು ಅಳಿಯಲು ಆತ್ಮನಿಗೆ ದೃಗ್ಭಾವವೂ ತಪ್ಪುವದು. ಇದೇ ಮೋಕ್ಷವೆಂದು ಜ್ಞಾನಿಗಳು ಹೇಳುವರು, ಎಂದು ವಸಿಷ್ಠನು ಹೇಳುತಿರುವಲ್ಲಿ ಆ ವಾಕ್ಯಗಳ ಶ್ರವಣದಲ್ಲಿ ಅತ್ಯಂತವಾದ ಕುತೂಹಲದಿಂದ ಸಭಾಜನರು ಕರ್ಮಕಾಲವನ್ನೂ, ಪಂಜರದಲ್ಲಿರುವ ಗಿಳಿಗಳ ಕೇಳಿಯನ್ನೂ, ಸೂಳೆಯರ ವಿಲಾಸಗಳನ್ನೂ, ಸಹ ಸ್ಮರಿಸದೆ ಚಿತ್ರದ ಪ್ರತಿಮೆಗಳಂತೆ ಕಾಣುತಿರಲು, ಈ ಮಹರ್ಷಿಯ ವಚನಗಳನ್ನು ಏಕಾಂತದಲ್ಲಿ ಮನನವಂ ಮಾಡಲೋಸುಗವೋ, ಎಂಬಂತೆ ಸೂರ್ಯನು ಪಶ್ಚಿಮಗಿರಿಯಂ ಕುರಿತು ಪೊರಮಡಲು ಆ ಮುನಿಯ ವಚನವನ್ನು ಕೇಳಲೋಸುಗವೋ, ಎಂಬಂತೆ ತಂಗಾಳಿ ಸುಳಿಯುತಿರಲು ಜನಗಳ ನೆರಳುಗಳು ದೀರ್ಘವಾಗಿ ಕತ್ತೆತ್ತಿಕೊಂಡಿರಲು, ಪ್ರಾರಬ್ಧಭೋಗಾರ್ಥವಾಗಿ ನಿಂತಿರುವ ಜ್ಞಾನಿಯ ಶರೀರದಂತೆ ಬಿಸಿಲು ಶಾಂತವಾಗಲು, ಹೊರಕ್ಕೆ ಹೊರಟಿದ್ದ ಪಕ್ಷಿಗಳು ತಮ್ಮ ತಮ್ಮ ಗೂಡುಗಳಿಗೆ ಹೋಗುತಿರುವದನ್ನು ಕಂಡ ದ್ವಾರಪಾಲಕನು ಸಭೆಗೆ ಬಂದು ಮಹಾರಾಜನೆ ! ಸ್ನಾನಬ್ರಾಹ್ಮಣಾರ್ಚನಕಾಲವು ಮೀರುವುದೆಂದು ವಿಜ್ಞಾಪಿಸಲು, ವಸಿಷ್ಠನು ಮುಂದಿನ ಪ್ರಸ್ತಾವವು ನಾಳೆ ನಡೆಯಲೆಂದು ಮೌನವಂ ವಹಿಸಲು, ಅಪ್ಪಣೆಯಪ್ರಕಾರವೆಂದು ದಶರಥರಾಯನೆದ್ದು ಶ್ರವಣಾರ್ಥವಾಗಿ ಬಂದವರಿಗೆ ಸನ್ಮಾನವಂ ಮಾಡಲು ಪರಸ್ಪರವಾಗಿ ಅಂಗಗಳ ಸಂಘಟನದಿಂದುಂಟಾದ ಆಭರಣಧ್ವನಿಯಿಂದಲೂ, ಶಿರೋಭೂಷಣವಾದ ಪುಷ್ಪಗಳಿಂದ ಹಾರುವ ಭ್ರಮರಗಳ ಝೇಂಕಾರದಿಂದಲೂ, ಸಭಾಮಂಟಪವನ್ನು ಶಬ್ದಬ್ರಹ್ಮಮಯವಾಗಿ ಮಾಡುತ್ತಾ ಜನರೆಲ್ಲರೂ ತಮ್ಮ ತಮ್ಮ ನಿವೇಶನಗಳನ್ನು ಹೊಂದಿದರು. ವಿಶ್ವಾಮಿತ್ರನು ವಸಿಷ್ಠನಿಂದ ಪ್ರಾರ್ಥಿತನಾಗಿ ಅವನ ಆಶ್ರಮಕ್ಕೆ ಹೋದನು. ವಸಿಷ್ಠವಾಕ್ಯಾರ್ಥವಿಚಾರದಿಂದ ಶಾಂತವಾದ ಇಂದ್ರಿಯವ್ಯಾಪಾರಗಳುಳ್ಳ ಜನರು ಪ್ರಕೃತೋಚಿತವಾದ ಕರ್ಮವನ್ನು ನೆರವೇರಿಸುತಿರುವಲ್ಲಿ ಮುತ್ತುಗದ ಹುವ್ವುಗಳಿಂದ ಪ್ರಕಾಶಿಸುವ ವಸಂತಲಕ್ಷ್ಮಿಯಂತೆ

ನಕ್ಷತ್ರಗಳಿಂದ ಪ್ರಕಾಶಿಸುವ ಸಂಧ್ಯೆಯುಂಟಾಯಿತು. ಜನರ ಮನಸಗಳಲ್ಲಿ ಮಹಾಮುನಿಯ ವಾಗ್ವ್ಯುತ್ಪತ್ತಿಗಳಂತೆ ಗೂಡುಗಳಲ್ಲಿ ಹಕ್ಕಿಗಳು ಸೇರಿಕೊಂಡುವು. ಜನಗಳ ಮನಸಗಳಿಂದ ಪೊರಮಟ್ಟ ಅಜ್ಞಾನಗಳ ಗುಂಪಿನಂತೆ ಅಂಧಕಾರವು ಪ್ರಸರಿಸಿತು. ನೈದಲೆಹುವ್ವುಗಳ ಪರಿಮಳದಿಂದ ಕೂಡಿದ ತಂಗಾಳಿಯು ಶಾಂತಿಗುಣದಂತೆ ಜನರನ್ನು ಸಂತೋಷಪಡಿಸಿತು. ಮುಂದಕ್ಕೆ ಉಂಟಾಗುವ ತತ್ವಜ್ಞಾನದ ರೀತಿಯನ್ನು ತೋರುವನಂತೆ ಚಂದ್ರನುದಯಿಸಿದನು. ಮುಮುಕ್ಷು ಜನಗಳ ಚಿಂತೆಗಳಂತೆ ತಮಸ್ಸಮೂಹಗಳು ಓಡಿದುವು. ಜನರೆಲ್ಲರೂ ವಸಿಷ್ಠವಾಕ್ಯಾಲೋಚನೆಯಿಂದ ಸಮಾಧಿಯನ್ನು ಪಡದವರಂತೆ ವಿಶ್ರಮಿಸಿಕೊಂಡರು. ಬಳಿಕ ಪ್ರಾತಃಕಾಲದ ಗಾಳಿಯಿಂದ ಗಗನತಲಕ್ಕೆ ಅಲಂಕಾರವಾದ ತಾರೆಗಳೆಂಬ ಕುಸುಮಗಳು ಕಸದಂತೆ ತೆಗೆದುಹಾಕಲ್ಪಡಲು, ಉದಯಿಸುವ ಸೂರ್ಯನಿಗೆ ತಮ್ಮ ತೇಜವನ್ನು ಸಮರ್ಪಿಸಿದವೋ, ಎಂಬಂತೆ ದೀಪಗಳು ಪ್ರಭಾಹೀನವಾಗಲು, ಸಂಧ್ಯಾರಾಗದಿಂದ ಕೂಡಿದ ಮೇಘಗಳಿಂದ ಪೀತಾಂಬರನಂತೆ ಉದಯಾಚಲವು ಪ್ರಕಾಶಿಸುತ್ತಿರಲು, ಪ್ರಾತಃಕಾಲದ ನಿತ್ಯಕರ್ಮಗಳಂ ನೆರವೇರಿಸಿಕೊಂಡು ಪೂರ್ವದಿವಸದಂತೆ ಸಮಸ್ತಜನಗಳೂ ಸಭಾಮಂಟಪಕ್ಕೆ ಬಂದು ಸೇರಲು, ಅಂಧಕಾರವನ್ನು ಪರಿಹರಿಸಲೋಸುಗ ಉದಯಪರ್ವತವನ್ನು ಹೊಂದಿದ ಸೂರ್ಯನಂತೆ ಜನರ ಅಜ್ಞಾನವನ್ನು ಪರಿಹರಿಸಲೋಸುಗ ಗುರುಪೀಠವಂ ಹೊಂದಿರುವ ವಸಿಷ್ಠನು ಮನದ ಸ್ವರೂಪವೇನೆಂತಾದ್ದೆಂದು ಪ್ರಶ್ನೆಯಂ ಮಾಡುತಿರುವ ಶ್ರೀರಾಮನಂ ಕುರಿತಿಂತೆಂದನು.

ಎಲೈ ರಾಮಭದ್ರನೇ ! ಗಗನದಂತೆ ರೂಪಶೂನ್ಯವಾಗಿರುವ ಜಡವಾದ ಮನಸ್ಸಿಗೆ ನಾಮಮಾತ್ರವೇ ಸ್ವರೂಪವಾಗಿರುವುವಲ್ಲದೆ ಮತ್ತೊಂದಿಲ್ಲ. ಆದಾಗ್ಯೂ ಸರ್ವವ್ಯಾಪಿಯಾಗಿ ಪದಾರ್ಥಜ್ಞಾನಕ್ಕೆ ಸಾಧನವಾಗಿರುವದು. ಆದುದರಿಂದ ಯಾವದರಿಂದ ಪದಾರ್ಥಸ್ವರೂಪಜ್ಞಾನ ಉಂಟಾಗುವುದೋ, ಅದೇ ಮನವೆನಿಸಿಕೊಳ್ಳುವುದೆಂದು ತಿಳಿಯಬೇಕು. ಮತ್ತು ವಾಯುವಿನಲ್ಲಿ ಚಲನದಂತೆಯೂ, ಜಲದಲ್ಲಿ ದ್ರವದಂತೆಯೂ, ಯಾವುದರಲ್ಲಿ ಸಂಕಲ್ಪ ಗುಣವಿರುವುದೋ ಅದೇ ಮನವೆನಿಸಿಕೊಳ್ಳುವುದು. ಇದನ್ನೇ ಬ್ರಹ್ಮನೆನ್ನುವರು. ಆತಿವಾಹಿಕ ದೇಹವು ಈ ಬ್ರಹ್ಮನ ಸಂಕಲ್ಪಮಾತ್ರದಿಂದ ಆದಿಭೌತಿಕವಾಗಿ ಕಾಣಿಸಿಕೊಳುವುದು. ಆದಿಭೌತಿಕಕ್ಕೂ ಆತಿವಾಹಿಕಕ್ಕೂ, ಕಾರ್ಯಕಾರಣಭಾವವಿರುವದರಿಂದ, ಕಾರ್ಯ ಕಾರಣಗಳಿಗೆ ಅಭೇದವೆಂಬ ನ್ಯಾಯದಿಂದ ನೋಡುವಲ್ಲಿ ಈ ದೃಶ್ಯವೇ ಮನಸ್ಸಿನ ರೂಪವೆಂದು ತಿಳಿಯತಕ್ಕದ್ದು, ಅವಿದ್ಯೆಯೆಂತಲೂ,

ಸಂಸೃತಿಯೆಂತಲೂ, ಚಿತ್ತವೆಂತಲೂ, ಮನಸೆಂತಲೂ, ಬಾಧವೆಂತಲೂ, ಮಲವೆಂತಲೂ, ತಮಸ್ಸೆಂತಲೂ, ಈ ದೃಶ್ಯಕ್ಕೆ ನಾಮಗಳಾಗಿರುವವು. ಬೀಜದಲ್ಲಿ ಬಳ್ಳಿಯಂತೆಯೂ, ಜಲದಲ್ಲಿ ದ್ರವದಂತೆಯೂ, ಚಿನ್ನದಲ್ಲಿ ವೊಡವೆಯಂತೆಯೂ, ಬಿಸಿಲುದೊರೆಯಲ್ಲಿ ಜಲದಂತೆಯೂ, ಸ್ವಪ್ನಪುರಿಯಲ್ಲಿ ಗೋಡೆಯಂತೆಯೂ, ಚಿನ್ಮಯವಾದ ಪರಮಾಣುವಿನಲ್ಲಿ ದೃಶ್ಯಬುದ್ಧಿಯಿರುವುದು. ಹೀಗೆ ಅಭಿನ್ನವಾಗಿರುವ ದೃಶ್ಯವು ಹೋದಲ್ಲದೆ ದೃಕ್ಕಿಗೆ ದ್ರಷ್ಟೃಭಾವ ತಪ್ಪುವುದಿಲ್ಲ. ದ್ರಷ್ಟೃಭಾವ ತಪ್ಪದೆ ಕೈವಲ್ಯವಾಗುವುದಿಲ್ಲ. ಈ ದೃಶ್ಯವು ಸದ್ವಸ್ತುವಾದ ಪರಮಾತ್ಮನ ಸತ್ವದಿಂದ ಸತ್ತೆನಿಸುವದು. ಭಿನ್ನವಾಗಿ ನೋಡುವಲ್ಲಿ ಅಸತ್ತೆನಿಸುವುದು. ಅಸತ್ಪದಾರ್ಥವು ದೃಶ್ಯವಾಗಲಾರದಾದುದರಿಂದ ಸತ್ವದೃಷ್ಟಿಯಿಂದೀ ದೃಶ್ಯವು ಸತ್ತೆನಬೇಕಾಗುವದು. ಹಾಗೆ ನೋಡುವಲ್ಲಿ ಸತ್ವವೊಂದಾದ್ದರಿಂದ ಸತ್ತಾದ ದೃಕ್ಪದಾರ್ಥವೆ ದೃಶ್ಯದಂತೆ ಕಾಣುವುದೆಂದು ನಿಶ್ಚಯಿಸಬೇಕಾಗಿದೆ. ಹೀಗೆ ನಿಶ್ಚಯಿಸುವಲ್ಲಿ ದಿಗ್ಭಿತ್ತ್ಯಾಕಾಶ ಗಿರಿಸಮುದ್ರಾತ್ಮಕವಾದ ಈ ದೃಶ್ಯವು ಬೇರೆ ಇಲ್ಲವೆನಿಸಿಕೊಳ್ಳುವುದು. ಆಗ ಪ್ರತಿಬಿಂಬವನ್ನು ಹಿಡಿಯದಿರುವ ದರ್ಪಣಕ್ಕೆ ದರ್ಪಣಭಾವವು ತಪ್ಪುವಂತೆ ದೃಕ್ಕಿಗೆ ದ್ರಷ್ಟೃಭಾವ ತಪ್ಪುವುದು. ನಾನು ನೀನೆಂಬುವುದೇ ಮೊದಲಾದ ಸ್ವರೂಪವುಳ್ಳ ದೃಶ್ಯವು ಹೀಗೆ ಸಂಭವಿಸದಿರಲೂ ದೃಕ್ಕಿಗೆ ದ್ರಷ್ಟೃಭಾವ ತಪ್ಪಿ ಕೈವಲ್ಯವಾಗುವುದು. ಎಂದು ಹೇಳುತಿರುವಲ್ಲಿ ಶ್ರೀರಾಮಚಂದ್ರನು ಪ್ರಶ್ನೆಗೈದನದೆಂತೆನೆ :—

ಎಲೈ ಮಹಾತ್ಮನೇ ! ದೃಕ್ಕೇ ದೃಶ್ಯವೆಂದು ಎಷ್ಟು ಯುಕ್ತಿಯಿಂದ ಹೇಳುತ್ತಿದ್ದಾಗ್ಯೂ, ಕಣ್ಣು ತನ್ನನ್ನು ತಾನು ನೋಡಲಾರದಾದುದರಿಂದ ದೃಶ್ಯವು ದೃಕ್ಕಿಗೆ ಭಿನ್ನವಾದುದೆಂದು ನಿಶ್ಚಯಿಸಿರುವ ನಮ್ಮ ಮನವು ತಮ್ಮ ವಚನವನ್ನು ಪದೇಶವೆಂದು ಗ್ರಹಿಸುವುದಿಲ್ಲ. ಅದರಿಂದ ಸತ್ವವಿಲ್ಲದ ಪದಾರ್ಥಕ್ಕೆ ಸ್ಥಿತಿಯಿಲ್ಲವೆಂಬ ನ್ಯಾಯದಿಂದ ನೋಡುವಲ್ಲಿ ದೃಕ್ಕಿನ ಸತ್ವಕ್ಕೆ ಭಿನ್ನವಾದ ಸತ್ವವು ದೃಶ್ಯಕ್ಕೆ ಇರುವುದೆಂದು ನಿಶ್ಚಯಿಸಲ್ಪಡುತಲಿದೆ. ದೋಷಾತ್ಮಕವಾದ ಈ ದೃಶ್ಯವಿರುವಪರ್ಯ್ಯಂತವೂ ದೃಗ್ರೂಪನಾದ ಆತ್ಮನಿಗೆ ದುಃಖವು ತಪ್ಪುವುದಲ್ಲ. ಕೈವಲ್ಯವೂ ಸಂಭವಿಸುವುದಿಲ್ಲವಾದುದರಿಂದ ಮನಕ್ಕೆ ಸಂಸಾರ ಭ್ರಮೆಯನ್ನುಂಟುಮಾಡುತ್ತಾ ದುಃಖಪರಂಪರೆಯನ್ನುಂಟುಮಾಡುವ ದೃಶ್ಯವೆಂಬ ವಿಷೂಚಿಕೋಪದ್ರವವು ಹೋಗುವಂತೆ ಉಪದೇಶವನ್ನು ಮಾಡಬೇಕೆಂದು ಬೆಸಗೊಳುವ ಶ್ರೀರಾಮನನ್ನು ಕುರಿತು ವಸಿಷ್ಠನಿಂತೆಂದನು. ಎಲೈ ಸುಮತಿಯೇ ! ಯಾವುದು ಇರತಕ್ಕ ಪದಾರ್ಥವೋ, ಅದು ಎಂದಿಗೂ ಹೋಗುವುದಿಲ್ಲವಾದುದರಿಂದ,

ಈ ದೃಶ್ಯವು ಬಂದಾನೊಂದುವೇಳೆ ಅದೃಶ್ಯವಾದಾಗ್ಯೂ ಸ್ಮೃತಿರೂಪದಿಂದ ಮನವನ್ನು ಸೇರಿಕೊಂಡಿದ್ದು ಸೂಕ್ಷ್ಮವಾದ ಬೀಜವು ಮಹತ್ತಾದ ವೃಕ್ಷರೂಪದಿಂದ ಕಾಣಿಸಿಕೊಳುವಂತೆ ಈ ಜಗದ್ರೂಪದಿಂದ ಕಾಣಿಸಿಕೊಳುವುದೆಂಬ ಅನುಭವದಿಂದೀದೃಶ್ಯವು ಸತ್ಯವಾಗಿ ತೋರುತಲಿದೆ. ಆದರೆ ದುಃಖ ದೋಷಾತ್ಮಕವಾದ ಈ ದೃಶ್ಯವಿರುವವರಿಗೆ ಕೈವಲ್ಯವಾಗುವುದಿಲ್ಲವಾದುದರಿಂದಲೂ, ಕೈವಲ್ಯವನ್ನು ಪಡೆದು ಆತ್ಮಾರಾಮರಾಗಿ, ನಿತ್ಯಾನಂದರಾಗಿರುವ ಮಹರ್ಷಿಗಳು ಪ್ರತ್ಯಕ್ಷವಾಗಿರುವುದರಿಂದಲೂ,ಈ ಅದೃಶ್ಯವು ಅಸತ್ಯವೆಂತಲೆ ನಿಶ್ಚಯಿಸತಕ್ಕದ್ದು. ಈ ದೃಶ್ಯಪಿಶಾಚವು ನಿಶ್ಶೇಷವಾಗಿ ಹೋಗಲೋಸುಗ ಈ ಮಹಾಮಂತ್ರವನ್ನು ಹೇಳಿಕೊಡುವೆನು. ಇದನ್ನು ನೀನು ದೃಢವಾಗಿ ಪಡೆದರೆ ಸಮಸ್ತ ದುಃಖಗಳಿಂದಲೂ ಬಿಡಲ್ಪಟ್ಟು, ಈ ಮುನಿಗಳಂತೆ ನಿತ್ಯಾನಂದನಾಗುತ್ತೀಯೆ, ಈ ಅರ್ಥವನ್ನೇ ನೀನು ಮುಂದಕ್ಕೆ ಸಿದ್ಧಾಂತವಾಗಿ ತಿಳಿಯುತ್ತೀಯೆ ಆ ಮಹಾಮಂತ್ರವೇನೆಂದರೆ :—ಧನಿಕದರಿದ್ರರಿಗೂ, ಸಾಧುದುಷ್ಟರಿಗೂ, ಗುಣದೋಷಗಳಿಗೂ ಸತ್ಯಾಸತ್ಯಗಳಿಗೂ, ಏಕೀಭಾವವು ಸಂಭವಿಸುವುದಿಲ್ಲವಾದುದರಿಂದಲೂ, ಗಗನದಲ್ಲಿ ಪುಟ್ಟುವುದು ಗಗನವಲ್ಲದೆ ಮತ್ತೊಂದಾಗಲಾರದಾದುದರಿಂದಲೂ, ಶಾಂತನಾದವನಲ್ಲಿ ಶಾಂತನಿಗೆ ಸ್ಥಿತಿ ಉಂಟಾಗುವುದರಿಂದಲೂ, ಶ್ರೀಮಂತನಿಗೆ ದರಿದ್ರನಲ್ಲಿ ನಿತ್ಯವಾದ ಸ್ನೇಹವುಂಟಾಗುವುದಿಲ್ಲವಾದ್ದರಿಂದಲೂ, ಬ್ರಹ್ಮದಲ್ಲಿ ಪುಟ್ಟಿದ್ದು ಬ್ರಹ್ಮವಲ್ಲದೆ ಮತ್ತೊಂದಲ್ಲವೆಂತಲೂ, ಬ್ರಹ್ಮದಲ್ಲಿಯೆ, ಬ್ರಹ್ಮಕ್ಕೆ ಸಂಬಂಧ ಉಂಟಾಗುವುದೆಂತಲೂ, ಬ್ರಹ್ಮವು ಬ್ರಹ್ಮದಲ್ಲಿಯೇ ಇರುವುದೆಂತಲೂ, ಬ್ರಹ್ಮವು ಬ್ರಹ್ಮವನ್ನೇ ಹಿಡಿಯುವುದೆಂತಲೂ, ಬ್ರಹ್ಮವು ತನಗೆ ಭಿನ್ನವಾದ ಪದಾರ್ಥವನ್ನು ನೋಡದೆಂತಲೂ, ನಿಶ್ಚೈಸಬೇಕಾಗುತ್ತದೆ. ಹೀಗಾಗುವಲ್ಲಿ ನಾನೆಂತಲೂ, ನೀನೆಂತಲೂ, ಪ್ರಾಣಿಗಳೆಂತಲೂ, ಪಂಚಭೂತಿಗಳೆಂತಲೂ, ಸಿದ್ಧವಾದ ಜಗತ್ತೆಂಬ ಶಬ್ದಕ್ಕೆ ಅರ್ಥವಾಗಿ ಯಾವುದೂ ನಿಲ್ಲಲಾರದಾದುದರಿಂದ ದೃಶ್ಯವೂ, ದರ್ಶನವೂ, ದೃಕ್ಕು, ಶೂನ್ಯವು, ಪೂರ್ಣವು, ಜಡವು, ಚೇತವು ಕೂಡ ಯಾವುದೂ ಇಲ್ಲವೆಂತಲೂ, ಸ್ವಸ್ವರೂಪವಾಗಿ ಬ್ರಹ್ಮವೇ ಪ್ರಕಾಶಿಸುತ್ತಿರುವದೆಂತಲೂ, ನಿಶ್ಚಯವಾಗಿ ತಿಳಿಯುವನಾಗು. ಇದಕ್ಕಿಂತ ಮತ್ತೊಂದು ಮಂತ್ರವು ಇಲ್ಲವೆಂದು ಹೇಳುತ್ತಿರುವಲ್ಲಿ, ಶ್ರೀರಾಮನಿಂತೆಂದನು. ಎಲೈ ಗುರುವೇ ! ವಂಧ್ಯಾಪುತ್ರನಿಂದ ಬೆಟ್ಟವು ಅರೆಯಲ್ಪಟ್ಟಿತೆಂತಲೂ, ಮೊಲದಕೊಂಬು ಹಾಡುವುದೆಂತಲೂ, ಶಿಲೆಯು ಕೈಗಳನ್ನಾಡಿಸುತ್ತಾ ಕುಣಿಯುವುದೆಂತಲೂ, ಮಳಲಿನಿಂದ ತೈಲವು ತಾನಾಗಿ ಸ್ರವಿಸುವುದೆಂತಲೂ, ಕಲ್ಲುಬೊಂಬೆಗಳು ಓದುವುವೆಂ

ತಲೂ, ಚಿತ್ರದ ಮೋಘಗಳು ಗುಡುಗುವವೆಂತಲೂ ಹೇಳುವಂತೆ ತಮ್ಮ ಉಪದೇಶವು ಬಹು ಚಮತ್ಕಾರವಾಗಿರುವುದು. ಜರಾಮರಣ ದುಃಖರೂಪವಾಗಿಯೂ, ಗಿರಿ ಸಮುದ್ರ ಭೂಮ್ಯಾಕಾಶ ರೂಪವಾಗಿಯೂ ಕಾಣುತ್ತಿರುವ, ಜಗತ್ತೆಲ್ಲವೂ ಇಲ್ಲವೇ ಇಲ್ಲವೆಂದು ನನಗೆ ನೀವು ಹೇಳುತ್ತಲಿದ್ದೀ, ಇದು ಬಹು ಆಶ್ಚರ್ಯವಾಗಿ ಕಾಣುತ್ತದೆ. ಈ ಪ್ರಪಂಚವು ಹುಟ್ಟಲಿಲ್ಲವೆಂತಲೂ, ಇಲ್ಲದಿರುವುದೆಂತಲೂ, ಇಲ್ಲವೇ ಇಲ್ಲವೆಂತಲೂ, ನನಗೆ ನಿಶ್ಚಯವಾಗುವಂತೆ ಹೇಳಬೇಕೆನಲು, ವಸಿಷ್ಠನಿಂತೆಂದನು. ಎಲೈ ಮಹಾಮತಿಯೇ! ಅಸಂಗತವಾಗಿ ನಾನು ಹೇಳಲಿಲ್ಲ, ಈ ದೃಶ್ಯವು ವಂಧ್ಯಾಪುತ್ರನು ಕೂಗುತ್ತಿರುವನೆಂಬ ವಚನವಂತೆ ಹೇಗೆ ಅಸತ್ಯವಾಗುವುದೋ, ಆಪರಿಯನ್ನು ಕೇಳುವನಾಗು, ಸರ್ಗಾದಿಯಲ್ಲಿ ರೂಪಶೂನ್ಯವಾದ ಮನವೇ ಹುಟ್ಟದಿರುವಲ್ಲಿ ಮನದಿಂದುಂಟಾದ ಈ ಜಗತ್ತು ಇರುವುದು ಹೇಗೆ? ಈಗ ನಾನಾಪ್ರಕಾರವಾಗಿ ತೋರುವ ಮನವು ಸ್ವಪ್ನದ ಪಟ್ಟಣದಂತೆಯೂ, ಸ್ವಪ್ನದಲ್ಲಿ ಮತ್ತೊಂದು ಸ್ವಪ್ನದಂತೆಯೂ ಕಾಣುವ, ಈ ಜಗದ್ರೂಪವಾದ ಇಂದ್ರಜಾಲವನ್ನುಂಟುಮಾಡುವದು. ಈ ಮನವು ಚಂಚಲವಾದುದರಿಂದ ಚಲಿಸುವುದು, ಪ್ರಕಾಶಿಸುವುದು, ಬಲದಿಂದ ಮತ್ತೊಬ್ಬನನ್ನು ನಿಗ್ರಹಿಸುವುದು, ದೈನ್ಯದಿಂದ ಯಾಚಿಸುವುದು, ಭಾವನೆಯಿಂದ ತಿರುಗುವುದು, ದುಃಖದಿಂದ ಮುಳುಗುವುದು, ಸುಖದಿಂದೇಳುವುದು, ಬೇಡದ್ದನ್ನು ಸಂಹರಿಸುವುದು, ಬೇಕಾದ್ದನ್ನು ಪುಟ್ಟಿಸುವುದು, ಅನೇಕವಾಗಿ ರೂಪಾಂತರಗಳನ್ನು ಹೊಂದಿ ಭಿನ್ನವಾಗಿಯೂ ಕಾಣುತ್ತಿರುವುದು, ಇನ್ನೂ ನಾನಾಪ್ರಕಾರವಾಗಿ ಕಾಣುತಿರುವುದು. ಇದರಿಂದಲೇ ಮಾಯಾಮಯವಾದ ದೃಶ್ಯವೆಂಬ ಇಂದ್ರಜಾಲವೂ ಮಾಡಲ್ಪಟ್ಟಿರುವುದೆಂದು ಶ್ರೀರಾಮನಿಗೆ ಹೇಳುವಲ್ಲಿ, ಜ್ಞಾನಯೋಗ ತರಂಗಿಣಿಯೊಳು ಉತ್ಪತ್ತಿಪ್ರಕರಣದೊಳು ಸಂಕ್ಷೇಪ ಜಗದುತ್ಪತ್ತಿ ನಿರೂಪಣನೆಂಬ ಪ್ರಥಮತರಂಗಕ್ಕೆ ಮಂಗಳಮಹಾ ಶ್ರೀ.



## ದ್ವಿತೀಯತರಂಗ ಪ್ರಾರಂಭವು.



### ಲೀಲೆಗೆ ಪೂರ್ವಜನ್ಮಸ್ಥಾನಪ್ರದರ್ಶನ ನಿರೂಪಣ ಪ್ರಾರಂಭವು.

ಅನಂತರದಲ್ಲಿ ಶ್ರೀರಾಮನು ಎಲೈ ಮುನಿಶ್ರೇಷ್ಠನೇ! ಈ ಪರಿಯಾದ ಮನೋಭ್ರಮೆಗೆ ಕಾರಣವೇನು? ಈ ಮನಸ್ಸು ಪುಟ್ಟಿದ್ದು ಹೇಗೆ? ಇದು ಹೇಗೆ ಮಾಯಾಮಯವಾಗಿರುವುದು? ಇದನ್ನು ನನಗ ಹೇಳುವನಾಗೆಂದು

ಕೇಳಲು, ವಸಿಷ್ಠನಿಂತೆಂದನು. ಎಲೈ ರಘುಕುಲೋತ್ತಮನೇ! ಯಾವನು ಸರ್ವಕಾಲದಲ್ಲೂ ಸರ್ವಕರ್ತೃವಾಗಿಯೂ, ಸರ್ವರೂಪನಾಗಿಯೂ, ಪ್ರಕಾಶಿಸುವನೋ, ಯಾವನಿಗೆ ಆತ್ಮನೆಂತಲೂ, ಪರಮಾತ್ಮನೆಂತಲೂ, ಬ್ರಹ್ಮನೆಂತಲೂ, ನಾನಾಪ್ರಕಾರವಾದ ಸಂಜ್ಞೆಗಳು ವ್ಯವಹಾರಾರ್ಥವಾಗಿ ಉಂಟಾಗಿರುವವಲ್ಲದೆ, ವಸ್ತುತಃ ನಾಮಧೇಯವಿಲ್ಲವೊ, ಯಾವನನ್ನು ಸುಗತರು ಶೂನ್ಯವೆಂತಲೂ, ಬೌದ್ಧರು ವಿಜ್ಞಾನವೆಂತಲೂ, ಸಾಂಖ್ಯರು ಪುರುಷನೆಂತಲೂ, ವೇದಾಂತಿಗಳು ಬ್ರಹ್ಮವೆಂತಲೂ, ಹೇಳುವರೊ, ಯಾವನು ಸೂರ್ಯಾದಿ ತೇಜಸ್ಸುಗಳಿಗೂ ಪ್ರಕಾಶಕನಾಗಿರುವನೊ, ಯಾವನನ್ನು ಜ್ಞಾತೃವೆಂತಲೂ, ವಕ್ತೃವೆಂತಲೂ, ಕರ್ತೃವೆಂತಲೂ, ಭೋಕ್ತೃವೆಂತಲೂ, ಪ್ರಾಜ್ಞರು ಹೇಳುವರೋ? ಯಾವನು ಸರ್ವತ್ರ, ಇದ್ದಾಗ್ಯೂ ಇಲ್ಲದಂತಿರುವನೋ, ದೇಹದಲ್ಲೇ ಇದ್ದಾಗ್ಯೂ ದೂರಸ್ಥನಂತೆ ತೋರುತಿರುವನೋ, ಯಾವನಿಂದ ಚೇತನ ಪದಾರ್ಥಗಳಿಗೆ ಜ್ಞಾನಪ್ರಕಾಶವಾಗುವುದೋ, ಸೂರ್ಯನಂತೆ ಯಾವನು ಸ್ವಪ್ರಕಾಶದಿಂದ ಜಗವನ್ನು ವ್ಯಾಪಿಸಿರುವನೊ, ಸೂರ್ಯನ ದೆಸೆಯಿಂದ ಕಿರಣಗಳಂತೆ ಯಾವನ ದೆಶೆಯಿಂದ ಬ್ರಹ್ಮ, ವಿಷ್ಣು, ರುದ್ರಾದಿಗಳು ಹೊರಟುಬಿಟ್ಟಿರುವರೋ, ಸಮುದ್ರದಲ್ಲಿ ನೀರುಗುಳ್ಳೆಗಳಂತೆ ಯಾವನಲ್ಲಿ ಬ್ರಹ್ಮಾಂಡ ತಂಡಗಳು ಹುಟ್ಟುವವೋ, ಜಲಗಳು ಸಮುದ್ರವನ್ನು ಸೇರುವಂತೆ ಸಮಸ್ತ ಪ್ರಪಂಚಗಳೂ ಯಾವನನ್ನು ಹೊಂದುವವೊ, ಯಾವನು ದೀಪದಂತೆ ತನ್ನನ್ನೂ ಪದಾರ್ಥಗಳನ್ನೂ ಸಹ ಪ್ರಕಾಶಪಡಿಸುವನೊ, ಯಾವನು ಅಣುರೇಣು ತೃಣ ಕಾಷ್ಠ ಪಾತಾಳ ಭೂವ್ಯಾಕಾಶಾದಿಗಳಲ್ಲಿ ಪರಿಪೂರ್ಣನಾಗಿರುವನೊ, ಯಾವನು ಅವಿದ್ಯೆ ಕಾಮ, ಕರ್ಮ, ಅಂತಃಕರಣ, ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಪ್ರಾಣಭೂತ ಸೂಕ್ಷ್ಮಗಳೆಂಬ ಪುರ್ಯಷ್ಟಕವನ್ನು ಒಳಗೂ ಹೊರಗೂ ವ್ಯಾಪಿಸಿ ಅವರವರ ವ್ಯಾಪಾರಗಳನ್ನು ನಡೆಸುವನೊ, ಯಾವನಿಂದ ಶಿಲೆಗಳು ಸಮಾಧಿನಿಷ್ಠರಂತೆ, ಮೂಕವಾಗಿಯೂ, ಮೂಢವಾಗಿಯೂ, ಮಾಡಲ್ಪಟ್ಟಿರುವವೊ, ಯಾವನಿಂದ ಆಕಾಶವು ಶೂನ್ಯವಾಗಿಯೂ, ಗಿರಿಗಳು ದೊಡ್ಡವಾಗಿಯೂ, ವಾಯುವು ಚಲನವಾಗಿಯೂ, ತೇಜಸ್ಸು ಪ್ರಕಾಶವಾಗಿಯೂ, ಜಲವು ದ್ರವವಾಗಿಯೂ, ಭೂಮಿಯು ಕಠಿನವಾಗಿಯೂ, ಮತ್ತು ಆಯಾಯ ಪದಾರ್ಥಗಳು ಆಯಾಯ ಗುಣಗಳಿಂದ ಸಹಿತವಾಗಿಯೂ ಉಂಟಾಗಿರುವವೋ ಮೇಘದಿಂದ ವೃಷ್ಟಿಗಳಂತೆ ಯಾವನಿಂದ ಸಂಸಾರ ದೃಷ್ಟಿಗಳುಂಟಾಗುವವೊ, ಯಾವನು ಪ್ರಪಂಚರೂಪನಾಗಿದ್ದಾಗ್ಯೂ, ಅಂತರ್ಯಾಮಿಯಾಗಿದ್ದಾಗ್ಯೂ ಸರ್ವಭಾವಗಳನ್ನು ಹೊಂದಿಕೊಂಡಿರುವನಾದಾ

ಗೂ, ಸರ್ವಾತಿರಿಕ್ತನಾಗುವನೋ, ಬ್ರಹ್ಮಾಂಡಗಳೆಂಬ ಫಲಗಳುಳ್ಳ ಪ್ರಕೃತಿ ಯೆಂಬ ಬಳ್ಳಿಯು ಯಾವ ವಾಯುವಿನಿಂದ ಇಂದ್ರಿಯಗಳೆಂಬ ಎಲೆಗಳನ್ನೆಲ್ಲಾ ಡಿಸಿಕೊಂಡು ಕುಣಿಯುತ್ತಿರುವದೊ, ದೇಹಗಳೆಂಬ ಪೆಟ್ಟಿಗೆಗಳಲ್ಲಿ ಯಾವ ಜ್ಞಾನಮಣಿಯು ಸರ್ವವ್ಯಾಪಿಯಾಗಿ ಪ್ರಕಾಶಿಸುತ್ತಿಹುದೋ, ಯಾವ ಚಂದ್ರನಿಂದ ಜಗತ್ತುಗಳೆಂಬ ಕಿರಣಗಳು ಹೊರಡುವುವೊ ಯಾವ ಮೇಘದಲ್ಲಿ ಸೃಷ್ಟಿಗಳೆಂಬ ಮಿಂಚುಗಳು ಹೊಳೆಯುತ್ತಿರುವವೊ, ಯಾವನ ಕಟಾಕ್ಷದಿಂದ ಚರಾಚರ ಪ್ರಾಣಿಗಳು, ಚಮತ್ಕಾರವಾಗಿ ಕಾಣುವವೊ, ಯಾವ ಸೂರ್ಯಕಾಂತದ ಸಾನ್ನಿಧ್ಯದಿಂದ ದೇಹಗಳೆಂಬ ಲೋಹ ಕಲಶಗಳು ಚಲಿಸುತ್ತಿರುವವೊ, *ನಿಯತಿ ದೇಶ ಕಾಲ ಮೊದಲಾದ ಸಮಸ್ತವಸ್ತುಗಳೂ ಯಾವನಿಂದ ಸತ್ವವಂ ಪಡೆದಿರುವವೊ; ಯಾವನು ಶುದ್ಧಜ್ಞಾನ ಸ್ವರೂಪನಾದುದರಿಂದ, ಇಚ್ಛಾಮಾತ್ರದಿಂದ ಆಕಾಶಾದಿ ರೂಪವ ತಾಳಿ ಪ್ರಕಾಶಿಸುತಿರುವನೋ, ಯಾವನು ಅಸ್ತೋದಯಗಳಿಲ್ಲದೆ ನಿರ್ವಿಕಾರವಾಗಿರುವ ನಿಜವಾದ ಜ್ಞಾನಸ್ವರೂಪದಲ್ಲಿ ಶಾಶ್ವತವಾಗಿದ್ದುಕೊಂಡು ಸಮಸ್ತ ಕಾರ್ಯಗಳನ್ನು ಮಾಡುತ್ತಿದ್ದಾಗ್ಯೂ ಸಾಕ್ಷಿಯಂತೆ ತಟಸ್ಥನಾಗಿರುವನೊ, ಅಂಥಹ ಪರಮಾತ್ಮನೊಬ್ಬನೆ, ಮಹಾ ಪ್ರಳಯದಲ್ಲಿ ನಿಂತಿರುವನು. ಈ ದೇವದೇವನ ಸ್ವರೂಪಜ್ಞಾನ ಮಾತ್ರದಿಂದಲೇ ಪರಮಾರ್ಥಸಿದ್ಧಿಯಾಗುವುದಲ್ಲದೆ ಮತ್ತೊಂದರಿಂದಾಗುವುದಿಲ್ಲ. ಈ ಪರಮಾತ್ಮನು ಸರ್ವರಿಗೂ ಆತ್ಮನಾಗಿ ಸರ್ವದೇಶಕಾಲ ವಸ್ತುಗಳಲ್ಲೂ ಸಿದ್ಧವಾಗಿರುವುದರಿಂದ ದೂರವಾಗಿಲ್ಲ. ಆದಾಗ್ಯೂ ತಿಳಿಯದವರಿಗೆ ಸಮೀಪದಲ್ಲಿಲ್ಲದಂತೆ ಇರುವನು. ವಾಙ್ಮನಸ್ಸುಗಳಿಗೆ ಅಗೋಚರನಾದಾಗ್ಯೂ ವಿಚಾರಿಸುವರಿಗೆ ಅತಿ ಸುಲಭನಾಗಿ ದೇಹದಲ್ಲಿಯೇ ಗೋಚರನಾಗುವನು. ಇವನು ಸರ್ವತ್ರ ಸಾಕ್ಷಿಭಾವದಿಂದಿರುವನಾದುದರಿಂದ ಸ್ವತಃ ವೈಷಮ್ಯವಿಲ್ಲದೆ ಪ್ರಕಾಶಿಸುತ್ತಿರುವನು. ಈ ಪರಮಾತ್ಮನ ಪ್ರಾಪ್ತಿಯಲ್ಲಿ ಮನಸ್ಸಿನ ವಿಶ್ರಾಂತಿ ಒಂದೇಸಾಧನವಲ್ಲದೆ ಮತ್ತೊಂದಿಲ್ಲ. ಇದಕ್ಕೆ ಸಾಧು ಸಂಗತಿಯಲ್ಲೂ, ಸಚ್ಛಾಸ್ತ್ರದಲ್ಲೂ ಆಸಕ್ತಿಯೇ ಕಾರಣವಾಗುವುದು. ಈ ಆಸಕ್ತಿಯು ಸಾಧುವಾದುದರಿಂದ ಮೋಹ ಸಮೂಹಕ್ಕೆ ಬಾಧಕವಾಗಿ ಮನೋವಿಶ್ರಾಂತಿಗೆ ಸಾಧನವಾಗುವುದು. ಇವನೇ ಆ ದೇವನೆಂದು ನಿಜಸ್ವರೂಪವಂ ತಿಳಿದ ಮಾತ್ರದಿಂದಲೆ ದುಃಖ ಸಂಬಂಧವಿಲ್ಲದ ಜೀವನ್ಮುಕ್ತಿಯು ಸಿದ್ಧವಾಗುವುದು. ಎಂದು ಹೇಳುವಲ್ಲಿ ಶ್ರೀರಾಮನಿಂತು ಪ್ರಶ್ನೆಯಂ ಮಾಡಿದನು. ಎಲೈ ಮುನೀಶ್ವರನೆ ! ಈ ಆತ್ಮನ ಜ್ಞಾನದಿಂದಲೇ ಮರ

* ನಿಯತಿ=ಭಗವಂತನ ಕಟ್ಟು (Natural Law.)

ಣಾದಿ ದುಃಖಗಳು ಪೋಗುವವಷ್ಟೆ? ಇವನು ಪಡೆಯುವದಕ್ಕೆ ಎಂಥಾ ತಪ ವಂಮಾಡಬೇಕು? ಎಷ್ಟು ಕ್ಲೇಶ ಪಡಬೇಕು? ಎಂದು ಪ್ರಶ್ನೆಯಂ ಮಾಡಲು ವಶಿಷ್ಠನಿಂತೆಂದನು. ಎಲೈ ಕಾಕುತ್ಸ್ಥನೇ! ಪುರುಷಪ್ರಯತ್ನ ರೂಪವಾದ ನಿತ್ಯಾನಿತ್ಯವಸ್ತು ವಿವೇಕದಿಂದಿವನು ತಿಳಿಯಲ್ಪಡುವನಲ್ಲದೆ ತಪೋದಾನವ್ರತಾ ದಿಗಳಿಂದ ಗೋಚರನಾಗುವದಿಲ್ಲ. ಇವನು ನಿತ್ಯಸಿದ್ಧನಾದುದರಿಂದ ಇವನ ವಿಷಯದಲ್ಲಿ ನಿಶ್ಶೇಷವಾಗಿ ಅಜ್ಞಾನ ನಾಶವಾಗುವದೇ ಇವನ ಲಾಭವೆನಿಸುವದು. ತಮಸ್ಸಿಗ ತೇಜದಂತೆ ಅಜ್ಞಾನಕ್ಕೆ ಜ್ಞಾನವೇ ನಾಶಕವಾದುದರಿಂದಲೂ, ಜ್ಞಾನವು ಅಂತಃಕರಣವೃತ್ತಿಯಾದುದರಿಂದಲೂ, ವಿವೇಕ ವಿಚಾರಾದ್ಯಂತಃಕರಣವೃತ್ತಿಗ ಳಿಂದಲೇ ಈ ಪುರುಷಾರ್ಥವಾಗತಕ್ಕದ್ದು. ನಿತ್ಯಾನಿತ್ಯ ವಿವೇಕದಿಂದ ಜಡ ವಾದ ಪ್ರಪಂಚವು ಅಸತ್ಯವೆಂದು ನಿಶ್ಚಿತವಾಗುವಲ್ಲಿ, ನಿಂತಿರುವ ಬ್ರಹ್ಮಾತ್ಮರು ಗಳಲ್ಲಿ ಬೇದವೇ ಅಜ್ಞಾನವೆನಿಸುವದು. ಇದು ವಿಚಾರದಿಂದಲ್ಲದೆ ಮತ್ತೊಂದ ರಿಂದ ಹೇಗೆ ಹೋದೀತು? ಇತರವಾದ ಕರ್ಮಗಳೆಲ್ಲವೂ ದೇಹ ಪ್ರಯಾಸಾದಿ ಗಳಿಂದ ನ್ಯಾಯವಾಗಿ ಬಂದು ಹಣದಿಂದ ಮಾಡಲ್ಪಟ್ಟರೆ ಕೆಲವುಕಾಲಪರ್ಯಂತ ಸ್ವರ್ಗಾದಿ ಸೌಖ್ಯವನ್ನುಂಟುಮಾಡುವದು. ಅಂಥಹ ಫಲದಲ್ಲಿ ಅಪೇಕ್ಷೆ ಇಲ್ಲದಿದ್ದರೆ ಚಿತ್ತಶುದ್ಧಿ ಮಾರ್ಗದಿಂದ ವಿಚಾರಕ್ಕೆ ಸಾಧನವಾಗುವದು. ಸ್ವಧ ರ್ಮವಂ ಬಿಟ್ಟು ಪರಧರ್ಮಕ್ಕೆ ಹೋಗದಿರುವದೇ ನ್ಯಾಯವೆನಿಸುವದು. ಬ್ರಾಹ್ಮ ಣನಿಗೆ ಪ್ರತಿಗ್ರಹವು ಧರ್ಮವಾದಾಗ್ಯೂ ದೇಶ ಕಾಲ ದಾತೃ ಕ್ರಿಯಾ ದ್ರವ್ಯ ದೋಷವಿಲ್ಲದ ಧನವು ಅಧಿಕವಾಗಿ ದೊರೆಯುವಂಥಾದ್ದು ಅತಿ ಪ್ರಯಾಸವಾದು ರಿಂದ ಬಹು ಧನ ಸಾಧ್ಯವಾದ ಕರ್ಮಗಳ ಬಿಟ್ಟು ಕೆಲವು ಋಷಿಗಳು ಜ್ಞಾನಾದಿ ಯಜ್ಞಗಳಿಂದ ಕೃತಾರ್ಥರಾದರು. ಕೆಲವರು ತೀರ್ಥಯಾತ್ರೆಯಿಂದ ಅನೇಕ ಯಜ್ಞಫಲವಂ ಸಂಪಾದಿಸಿಕೊಳ್ಳುವರು. ರಾಗಾವೇಶದಿಂ ಪರರಂ ವಂಚಿಸಿ ಧನವಂ ಸಂಪಾದಿಸಿ, ಅದರಿಂದ ಯಜ್ಞ ದಾನ ವ್ರತಾದಿ ಕರ್ಮಗಳನ್ನು ಮಾಡಿದಲ್ಲಿ ಯಾವನದು ಧನವೋ, ಅವನಿಗೆ ಆ ಕರ್ಮದ ಫಲವು ಬರುವದು, ಮಾ ಡಿದವನಿಗೆ ನರಕಪ್ರಾಪ್ತಿಯಾಗುವದು. ಆ ಕರ್ಮವೂ ಕೂಡ ದಾಂಭಿಕವೆನಿಸು ವದು. ಅಂತಹ ಕರ್ಮಗಳಲ್ಲಿರುವ ಕಾಮವನ್ನು ಬಲಾತ್ಕಾರದಿಂದ ಹಿಂತಿರುಗಿ ಸಿಕೊಂಡು ಜ್ಞಾನಮಾರ್ಗದಲ್ಲಿ ಪ್ರವರ್ತಿಸುವನಿಗೆ ಸತ್ಸಹವಾಸದಿಂದ ಶಾಸ್ತ್ರಜ್ಞಾ ನವುಂಟಾಗುವದು. ಅದರಿಂದ ಚಿಜ್ಜಡಗಳನ್ನೂ, ನಿತ್ಯಾನಿತ್ಯಗಳನ್ನೂ, ವಿವೇಕ ದಿಂದ ಭಾವಿಸುತ್ತಾ, ನಿಜವಾದ ಸ್ವರೂಪವಂ ನಿರ್ಧರಿಸಿ, ದುರಾಶೆಗಳಿಗೆ ಮನವಂ ಬಿಡದೆ ಜನ್ಮಾಂತರ ಪೌರುಷದಿಂದ ಪ್ರಾಪ್ತವಾದುದರಿಂದಲೇ ಸಂತುಷ್ಟನಾಗಿ

ಸತ್ಸಹವಾಸವನ್ನು ಬಲವಾಗಿ ಹಿಡಿದಿರುವವನಿಗೆ ಶೀಘ್ರವಾಗಿ ವಿಚಾರಬಲದಿಂದ ಜೀವನ್ಮುಕ್ತಿಯಾಗುವದು. ಕರ್ಮಕಾಲದಲ್ಲಿ ನಿಜವಾದ ತನ್ನ ಮಹಿಮೆಯುಂ ತಿಳವು ಸಮ್ಮಾನಿಸುವನೆಂದು ಸಂತೋಷದಿಂದ ಬ್ರಹ್ಮ, ವಿಷ್ಣು, ರುದ್ರೇಂದ್ರಾದಿದೇವತೆಗಳೂ ಕೂಡ ಇಂಥಾ ಜ್ಞಾನಿಯ ದಯವನ್ನಪೇಕ್ಷಿಸುವರು. ಯಾವನು ಕಷ್ಟಕಾಲದಲ್ಲೂ ಕೂಡ ದುರ್ಮಾರ್ಗವಂ ನೋಡದೆ ಸಮರ್ಥರಾದ ಲೌಕಿಕರಿಂದ ಅಶಕ್ತನೆನಿಸಿಕೊಳ್ಳುವನೋ ಶಾಸ್ತ್ರಜ್ಞರಿಂದ ಯಾವನು ಸಾಧುವೆನಿಸಿಕೊಳ್ಳುವನೋ ಅವನೇ ಸತ್ಪುರುಷನು. ಯಾವದರ ವಿಚಾರದಿಂದುಷ್ಟವಾದ ರಾಗದ್ವೇಷಗಳು ಅಣಗುವವ್ರೋ: ಯಾವದು ವಿದ್ಯೆಗಳೊಳ್ಮುಖ್ಯವಾದ ಅಧ್ಯಾತ್ಮವಿದ್ಯೆಯನ್ನು ಆಶ್ರಯಿಸಿ ಹೊರವಟ್ಟಿರುವದೊ ಅದೇ ಸಚ್ಛಾಸ್ತ್ರವು ಇವುಗಳ ಸಹವಾಸವಿಚಾರಗಳಿಂದ ಚಿಲ್ಲದಬೀಜದಿಂದ ಜಲದ ದೋಷದಂತೆಯೂ, ಯೋಗಾಭ್ಯಾಸದಿಂದ ಬಾಹ್ಯವ್ಯಾಪಾರದಂತೆಯೂ, ಅವಿದ್ಯೆಯಲ್ಲಿಯು ಅಣಗುವುದು. ಅದರಿಂದ ತೆರೆಮರೆಯಿಲ್ಲದವನಂತೆ ಪರಮಾತ್ಮನು ಗೋಚರನಾಗುವನು. ಎಲೈ ರಾಮಭದ್ರನೇ ! ಈ ದೇವನು ದೇಹದಲ್ಲಿಯೇ ಚಿನ್ಮಾತ್ರನೆನಿಸಿಕೊಂಡಿರುವನು. ಇವನು ಸರ್ವಸ್ವರೂಪನಾಗಿದ್ದಾಗ್ಯೂ ಸರ್ವವ್ಯಾಪಕನಾದಾಗ್ಯೂ, ಸರ್ವಾಂತರ್ಯಾಮಿಯಾದಾಗ್ಯೂ ಸರ್ವಾತೀತನಾಗಿರುವನು. ಇವನೇ ಚಂದ್ರಶೇಖರನೆಂತಲೂ, ಗರುಡಧ್ವಜನೆಂತಲೂ, ವಾಗೀಶ್ವರನೆಂತಲೂ, ಸಹಸ್ರಾಕ್ಷನೆಂತಲೂ, ಸಹಸ್ರಕಿರಣನೆಂತಲೂ, ಹೇಳಲ್ಪಡುವುದೆಂದು ಹೇಳುವಲ್ಲಿ ಶ್ರೀರಾಮನಿಂತೆಂದನು.

ಎಲೈ ಗುರುವೇ ! ದೇಹದಲ್ಲಿ ಚಿನ್ಮಾತ್ರನೆಂದು ಜೀವನೇ ಪ್ರಸಿದ್ಧನಾಗಿರುವನು. ಇವನನ್ನೇ ಪರಮಾತ್ಮನೆಂದು ಹೇಳುವೆಯೋ, ಮತ್ತೊಬ್ಬನನ್ನು ಹೇಳುವೆಯೋ, ಎಂದು ಕೇಳುವ ಶ್ರೀರಾಮನನ್ನು ಕುರಿತು ವಸಿಷ್ಠನಿಂತೆಂದನು. ಎಲೈ ಸುಮತಿಯೇ ! ಜರಾಮರಣಾದಿ ದುಃಖಗಳಿಗೆ ಆಸ್ಪದವಾಗಿರುವ ಈ ಜೀವನು ಅಜ್ಞಾನಿಯೆನಿಸುವನು. ಜಡಸ್ವರೂಪವಾದಾಗ್ಯೂ ಸಂಕಲ್ಪ ಸಂಶಯ ಮನೋರಥಕಲ್ಪನೆಗಳಿಗೆ ಆಧಾರವಾಗಿ ಜಗದಿಂದ್ರಜಾಲವನ್ನು ತೋರುವ ಮನವನ್ನು ಹಿಡಿದಿರುವದರಿಂದ ಈ ಜೀವನು ಸಮಸ್ತವಾದ ಅನರ್ಥಗಳಿಗೂ ಸ್ಥಾನವಾಗಿರುವನು. ಇವನಿಗೆ ಸತ್ಸಹವಾಸಾದಿಗಳಿಂದ ಪರಮಾತ್ಮಸ್ವರೂಪಜ್ಞಾನವಾಗಲು, ಹೃದಯದಲ್ಲಿರುವ ಅಜ್ಞಾನದಗಂಟು ಒಡೆಯುವುದು. ಸಮಸ್ತವಾದ ಸಂಶಯಗಳೂ ಹೋಗುವುವು. ಸಂಚಿತಾಗಾಮಿಕರ್ಮಗಳು ಭಸ್ಮವಾಗುವುವು. ಪ್ರಾರಬ್ಧವೂ ಕೂಡ ಅವನಿಗೆ ಗೋಚರವಾಗದೆ ಶರೀರದಲ್ಲಿ ಅಡಗಿಹೋಗುವುದು. ಚಿಜ್ಜ

ಡವಿಭಾಗದಿಂದ ತಾನು ತಟಸ್ಥನೆಂದು ನಿಶ್ಚಯಿಸಿದಾಗ್ಯೂ ಮನವನ್ನು ದೃಶ್ಯಕ್ಕೆ ಅಭಿಮುಖವಾಗಿ ಬಿಡದೆ ಚಿನ್ಮಾತ್ರವಾದ ಸ್ವರೂಪವಲ್ಲಿ ನಿಲಿಸಿಕೊಂಡಾಗ್ಯೂ ದೃಶ್ಯಕ್ಕೆ ಸ್ಥಿತಿ ತಪ್ಪದೆ ಇದ್ದಲ್ಲಿ ದ್ವಿತೀಯಪದಾರ್ಥವಿರುವದರಿಂದ ಆತ್ಮನಿಗೆ ಕೈವಲ್ಯವಾಗುವುದಿಲ್ಲ. ಆದುದರಿಂದ ದೃಶ್ಯಕ್ಕೆ ಸ್ಥಿತಿಯಿಲ್ಲದಿರುವದನ್ನು ಚೆನ್ನಾಗಿ ತಿಳಿಯಬೇಕು. ದೃಗ್ರೂಪನಾದ ಆತ್ಮನಿಗೆ ಯಾವವರೆಗೆ ದ್ರಷ್ಟೃಭಾವವಿರುವುದೋ, ಆವರೆಗೆ ಪ್ರಪಂಚವು ದೃಶ್ಯವಾಗುವುದು. ದ್ರಷ್ಟೃಭಾವ ತಪ್ಪಿದ ಕೂಡಲೆ ಪ್ರಪಂಚಕ್ಕೆ ದೃಶ್ಯಭಾವವು ತಪ್ಪುವದಾದುದರಿಂದ ದ್ರಷ್ಟೃವಿನ ಸತ್ವವೇ ದೃಶ್ಯಕ್ಕೆ ಆಧಾರವಾಗಿರುವುದೆಂದು ತಿಳಿಯಬರುತ್ತದೆ. ಆದರೆ ದೃಶ್ಯವಿರುವವರೆಗೆ ದ್ರಷ್ಟೃಭಾವವು, ದ್ರಷ್ಟೃಭಾವವಿರುವವರೆಗೆ ದೃಶ್ಯವೆಂದು ಪರಸ್ಪರ ಸಂಬಂಧವಿರುವಲ್ಲಿ ದ್ರಷ್ಟೃಭಾವವು ಹಿಂತಿರುಗಲು ದೃಶ್ಯವಿದ್ದರೂ ಪ್ರಯೋಜನವಿಲ್ಲ. ದೃಶ್ಯವಿಲ್ಲದಿರೆ ದ್ರಷ್ಟೃಭಾವವೇ ಸಂಭವಿಸುವುದಿಲ್ಲ. ದೃಕ್ಕು ದ್ರಷ್ಟೃಭಾವವಂ ವಹಿಸಲು ಇಲ್ಲದ ದೃಶ್ಯವೂ ಉಂಟಾಗುವುದೆಂದು ವೈಲಕ್ಷಣ್ಯವನ್ನು ನೋಡುವಲ್ಲಿ ಸೃಷ್ಟಿಸ್ಥಿತಿಗಳಲ್ಲಿ ದ್ರಷ್ಟೃಭಾವ ಮೊದಲಾಗುವದು. ಲಯದಲ್ಲಿ ದೃಶ್ಯವೇ ಮೊದಲಾಗುವದು. ಪ್ರಕೃತದಲ್ಲಿ ಬಾಧಕವಾದ ದೃಶ್ಯವು ದುರ್ವಿಷಯದಂತೆ ಹೋಗಬೇಕಾಗಿರುವದರಿಂದ ಅದರ ಅಸತ್ವವನ್ನೇ ವಿಚಾರಿಸಬೇಕು. ದೃಕ್ಕು ದ್ರಷ್ಟೃಭಾವ ದೃಷ್ಟಿ, ದೃಶ್ಯವೆಂದು ನಾಲ್ಕುಪದಾರ್ಥಗಳಲ್ಲಿ ಸರ್ವವ್ಯಾಪಕವಾದಾಗ್ಯೂ ಹೊಳಗಿರುವಂತಹದು ದೃಕ್ಕು; ಅದರ ಸ್ವಭಾವವೇ ದ್ರಷ್ಟೃಭಾವ; ನೋಡುವದಕ್ಕೆ ಸಾಧನವಾದುದು ದೃಷ್ಟಿ; ನೋಡಲು ಯೋಗ್ಯವಾಗಿ ಹೊರಗಿರುವುದು. ದೃಶ್ಯ; ಇವುಗಳಲ್ಲಿ ದೃಕ್ಕಿಗೆ ದ್ರಷ್ಟೃಭಾವವು ಎಂದಿಗೂ ಹೋಗತಕ್ಕುದಲ್ಲವಾದುದರಿಂದ ಅದರೊಡನೆ ದೃಷ್ಟಿಯೂ ಸಹಜವಾಗಿರುವುದು. ದ್ರಷ್ಟೃಭಾವ ದೃಷ್ಟಿಗಳಿಂದ ಇಲ್ಲದ ದೃಶ್ಯವು ಕಲ್ಪಿತವಾಗುತಿರುವಲ್ಲಿ ಇರುವ ದೃಶ್ಯವು ಹೋಗುವುದು ಹೇಗೆ? ದೃಶ್ಯವು ಒಂದುವೇಳೆ ಹೋದಾಗ್ಯೂ ಪ್ರಕಾರಾಂತರದಿಂದ ಸಿದ್ಧವಾಗುವುದು. ದೃಶ್ಯವಿರುವವರೆಗೆ ಬಾಧೆ ದುಃಖಗಳು ತಪ್ಪುವುದಿಲ್ಲ. ಹೀಗಿರುವದರಿಂದ ದೃಷ್ಟಿಯನ್ನು ಹಿಂತಿರುಗಿಸಬೇಕಾಗುತ್ತದೆ. ದೃಷ್ಟಿಯೊಡನೆ ದ್ರಷ್ಟೃಭಾವವು ಹಿಂದಿರುಗುವಲ್ಲಿ ದೃಶ್ಯವಿದ್ದರೂ ನಿರರ್ಥಕವಾಗುವುದು. ದೃಶ್ಯದಲ್ಲಿ ದುಃಖಗಳನ್ನನುಭವಿಸಲಾರದೆ ದೃಷ್ಟಿಯನ್ನು ಹಿಂದಿರುಗಿಸಿ ದೃಕ್ಕಿನಲ್ಲಿ ನಿಲಿಸಿಕೊಂಡಾಗ್ಯೂ ದೃಶ್ಯವು ಸೆಳೆಯತಕ್ಕುದಾದುದರಿಂದ ಚಪಲವಾದ ದೃಷ್ಟಿಯು ಎಂದಿಗಾದರೂ ದೃಶ್ಯಮುಖವಾಗಲೇ ಆಗುವುದು. ಆಗ ಪುನಃ ದುಃಖವೂ ಸಿದ್ಧವಾಗುವುದು. ಆದುದರಿಂದ ದೃಶ್ಯ ನಾಶವಾ

ಗುವರೀತಿಯನ್ನೇ ವಿಚಾರಿಸಬೇಕು. ಇವುಗಳ ಸತ್ವವನ್ನು ವಿಚಾರಿಸುವಲ್ಲಿ ದೃಕ್ಕಿನಸತ್ವವೇ ಇವುಗಳಲ್ಲಿರುವದರಿಂದ ತರಂಗಬುದ್ಬುದಸೀಕರಾದಿರೂಪದಿಂದ ಪ್ರಕಾಶಿಸುವ ಸಮುದ್ರದಂತೆ ದ್ರಷ್ಟೃಭಾವ ದೃಷ್ಟಿ ದೃಶ್ಯರೂಪದಿಂದ ದೃಕ್ಕೇ ಪ್ರಕಾಶಿಸುತ್ತದೆ ಎಂದು ನಿಶ್ಚಯಿಸತಕ್ಕದು. ಈ ನಿಶ್ಚಯಜ್ಞಾನವೇ ದೃಢವಾಗುವಲ್ಲಿ ಎರಡನೇ ಪದಾರ್ಥವಿಲ್ಲದ್ದರಿಂದ ನಿರ್ದುಃಖವಾದ ಕೇವಲೀಭಾವವು ಪ್ರಕಾಶಿಸುವುದು. ಹೀಗೆ ದೃಶ್ಯಕ್ಕೆ ನಾಶವಾಗಬೇಕಲ್ಲದೆ ಪ್ರಕಾರಾಂತರದಿಂದಾಗಲಾರದು. ಇಂತು ಜೀವನ ಸ್ವರೂಪವು ಅವನು ಕೃತಾರ್ಥನಾಗುವರೀತಿಯು ಸಹ ಹೇಳಲ್ಪಟ್ಟಿತು. ಇನ್ನು ಪರಮಾತ್ಮನಸ್ವರೂಪವನ್ನು ಕೇಳುವನಾಗು! ಶಾಖಾಚಂದ್ರದರ್ಶನಕ್ರಮದಿಂ ದೂರವಾದ ದೇಶಾಂತರವಂ ಹೊಂದುವ ಬುದ್ಧಿಗೆ ಮಧ್ಯದಲ್ಲಿ ವಿಚ್ಛಿತ್ತಿಯುಂಟಾಗದಂತೆ ಅವಲಂಬನವಾಗಿರುವ ಸ್ವರೂಪಜ್ಞಾನವೇ ಪರಮಾತ್ಮನೆನಿಸುವುದು. ಸರ್ವಾಲಂಬವಾದಾಗ್ಯೂ ನಿರಾಲಂಬವಾದ ಈ ಜ್ಞಾನದಲ್ಲಿ ದ್ರಷ್ಟೃ ದೃಶ್ಯಕ್ರಮಗಳು, ವಿಚಿತ್ರವಾದ ಸೃಷ್ಟಿಗಳು ಜಗತ್ತುಗಳು, ಸಹ ಇದ್ದಾಗ್ಯೂ ಅಭೇದದೃಷ್ಟಿಯಿಂದ ಸಮುದ್ರದಲ್ಲಿ ತರಂಗಗಳಂತೆ ಇಲ್ಲವೆನಿಸಿಕೊಳ್ಳುವವು. ಆದ್ದರಿಂದಿದು ದೃಶ್ಯಾತ್ಯಂತಾಭಾವಸ್ವರೂಪವೆನಿಸುವದು, ಈ ದೃಶ್ಯಪ್ರಪಂಚಕ್ಕೆ ಅತ್ಯಂತಾಭಾವವಾಗುವರೀತಿಯಂ ತಿಳಿಯುವದರಿಂದ ಇದರ ಜ್ಞಾನವುಂಟಾಗುವದು. ಅಂತಃಕರಣ ಬಾಹ್ಯಕರಣಗಳು ಯಾವದರಿಂದ ಸ್ವರೂಪಯೋಗ್ಯತೆಯಂ ಪಡದಿರುವವೆಂದು ಸಾಕ್ಷಿಭಾವದಿಂ ನೋಡುವಲ್ಲಿ ಈ ಪರಮಾತ್ಮನ ಸ್ವರೂಪವು ಗೋಚರವಾಗುವದು. ಜಗತ್ತಿಗೆ ಸ್ವತಃ ಸತ್ವವಿಲ್ಲವೆಂಬುವದು ತಿಳಿದಲ್ಲದೆ ಪರಮಾರ್ಥಪ್ರಾಪ್ತಿಯಾಗಲಾರದು. ವಂಧ್ಯಾಪುತ್ರನಂತೆಯೂ ಮರುಜಲದಂತೆಯೂ, ಗಗನವೃಕ್ಷದಂತೆಯೂ, ಜಗತ್ತು ಇಲ್ಲವೇ ಇಲ್ಲವೆಂದು ತಿಳಿಯುವನಾಗು. ಮತ್ತು ದೃಶ್ಯವಾದ ಪ್ರಪಂಚವೆಲ್ಲವೂ ಪರಬ್ರಹ್ಮವೆಂತಲೇ ನಿಶ್ಚಯಿಸುವನಾಗು. ಈ ಅರ್ಥವು ನಿನಗೆ ತಿಳಿಯುವಂತೆ ಅನೇಕ ಯುಕ್ತಿಗಳಂ ಪೇಳುವೆನು. ದೊಡ್ಡವರ ಮಾತುಗಳಂ ತಿರಸ್ಕರಿಸದೆ ಅವರು ಪೇಳುವ ಯುಕ್ತಿಗಳಂ ಭಕ್ತಿಯಿಂದ ಗ್ರಹಿಸುವೆಯಾದರೆ ಕೆಲವು ದಿವಸಗಳಲ್ಲಿಯೇ ನಿನಗೆ ತತ್ವಜ್ಞಾನವುಂಟಾಗುವದು. ದೊಡ್ಡವರು ಪೇಳುವ ಯುಕ್ತಿಗಳು ತಿಳಿಯುವದಿಲ್ಲವೆಂದು ಮಧ್ಯದಲ್ಲಿ ಎದ್ದುಹೋಗುವೆಯಾದರೆ ಪಶುವಿಗಿಂತಲೂ ಅಜ್ಞಾನಿಯಾದ ನಿನಗೆ ಯಾವದೂ ತಿಳಿಯುವದಿಲ್ಲ. ತತ್ವಜ್ಞಾನವುಂಟಾಗುವದಕ್ಕೆ ನಾನು ಪೇಳುವ ಈ ರಾಮಾಯಣಕ್ಕಿಂತ ಸುಲಭೋಪಾಯವಾದುದು ಮತ್ತೊಂದೂ ಇಲ್ಲ. ಔಷಧಸೇವನೆಯಿಂದ ರೋಗ ಹೋಗುವಂತೆ

ಈ ಇತಿಹಾಸದ ಶ್ರವಣಮಾತ್ರದಿಂದಲೆ ಜಗದ್ಭ್ರಾಂತಿಯುಳಿಯುವದು. ಜ್ಞಾನೋಪಾಯಗಳಲ್ಲಿ ಇಲ್ಲಿರುವದೇ ಮತ್ತೊಂದುಕಡೆಯಲ್ಲಿರುವದಲ್ಲದೆ ಇಲ್ಲಿ ಇಲ್ಲದ್ದು ಎಲ್ಲೂ ಇಲ್ಲವಾದ್ದರಿಂದ ಜ್ಞಾನಶಾಸ್ತ್ರಗಳಿಗೆ ಇದು ಬೊಕ್ಕಸವೆಂದು ಪ್ರಸಿದ್ಧವಾಗಿರುವದು. ಇದನ್ನು ಯಾವನು ನಿತ್ಯದಲ್ಲೂ ಕೇಳುವನೋ, ಅವನಿಗೆ ಸರ್ವೋತ್ತಮವಾದ ಬುದ್ಧಿಚಮತ್ಕಾರವುಂಟಾಗುವದು. ಯಾರು ಇದರಲ್ಲಿ ಸರ್ವದಾ ವ್ಯಾಸಂಗವಂ ಮಾಡುವರೋ, ಅವರು ಜೀವನ್ಮುಕ್ತಿ ಸಾಂಬ್ರಾಜ್ಯವನ್ನು ಪಡೆಯುವರು. ಯಾರಿಗೆ ಈ ಗ್ರಂಥವು ರುಚಿಸುವದಿಲ್ಲವೋ ಅವರಿಗೆ ಜ್ಞಾನೋತ್ಪತ್ತಿಗೆ ನಿರೋಧಕವಾದ ಪಾಪವು ಬಲವಾಗಿರುವದೆಂದು ತಿಳಿಯತಕ್ಕದ್ದು. ಎಲೈ ಶ್ರೀರಾಮನೇ ! ಏಕತ್ವವಿರುವವರಿಗೆ ದ್ವಿತ್ವವಿರುವದು. ದ್ವಿತ್ವವಿರುವವರಿಗೆ ಏಕತ್ವವಿರುವದು. ಇವುಗಳಲ್ಲಿ ಒಂದು ಹೋದಾಗ್ಯೂ ಎರಡೂಹೋಗುವದು. ಬ್ರಹ್ಮದಲ್ಲಿರುವ ಏಕತ್ವವು ಕೈವಲ್ಯವನ್ನು ಬೋಧಿಸುವುದಲ್ಲದೆ ಸಂಖ್ಯೆಯನ್ನು ಬೋಧಿಸುವದಿಲ್ಲ. ಈ ಏಕತ್ವ ದ್ವಿತ್ವಗಳೇ ಅದ್ವೈತ ದ್ವೈತಗಳೆಂದು ಪ್ರಸಿದ್ಧವಾಗಿರುವುವು. ಇವುಗಳಂತೆ ದ್ರಷ್ಟೃದೃಶ್ಯಗಳು ಅನ್ಯೋನ್ಯ ಸಂಬಂಧಿಗಳಾಗಿರುವದರಿಂದ ದೃಶ್ಯವು ಹೋದಕೂಡ್ಲೆ ದ್ರಷ್ಟೃತ್ವವೂ ಹೋಗಿ ಕೇವಲವಾದ ಪರಮಾರ್ಥಜ್ಞಾನವೇ ನಿಲ್ಲುವದು. ಇದನ್ನೇ ಬ್ರಹ್ಮವೆಂದು ಹೇಳುವರು. ಕನಕದಲ್ಲಿ ಕಟಕದಂತೆ ಈ ಬ್ರಹ್ಮದಲ್ಲಿ ಜಗತ್ತು ಕಲ್ಪಿತವಾಗಿರುವದಾದ್ದರಿಂದ ಮರುಭೂಮಿಯಲ್ಲಿ ಸರೋವರವುಂಟಾಯಿತೆಂಬಂತೆ ಬ್ರಹ್ಮದಲ್ಲಿ ಜಗತ್ತು ಹುಟ್ಟಿತೆನ್ನುವದು ಆಶ್ಚರ್ಯಕರವಾಗಿರುವದು. ಯಾವದು ಹುಟ್ಟಲೇ ಇಲ್ಲವೋ, ಅದು ಇದೆಯೆಂತಲೂ, ಹೋಗುವದೆಂತಲೂ ಹೇಳತಕ್ಕದು ಹೇಗೆ ? ಇರುವದಂ ಹೋಗಲಾಡಿಸಬೇಕಾದಲ್ಲಿ ಶ್ರಮಪಡಬೇಕಲ್ಲದೆ ಇಲ್ಲದ್ದಂ ಹೋಗಲಾಡಿಸುವದರಲ್ಲಿ ಏಕೆ ಶ್ರಮಪಡಬೇಕು ? ಅಕಟಕಟಾ ! ವಿಚಾರವಿಲ್ಲದ ಜನಗಳಿಗೆ ಯಥಾರ್ಥ ಪಿಶಾಚಕ್ಕಿಂತಲೂ ಭ್ರಾಂತಿ ಪಿಶಾಚವು ಬಹು ಬಾಧಕವಾಗಿರುವದು. ಅದರಿಂದ ಅಜ್ಞಾನಿಗಳು ಬಾಲಕರಿಗಿಂತಲೂ ಕಡೆ ಎಂದು ಹೇಳಲ್ಪಡುವರು. ಯಾವದು ಯಾವಾಗ್ಯೂ ಇರುವದೋ, ಆ ಬ್ರಹ್ಮವೇ ಇರುವದು. ಯಾವದು ಎಂದಿಗೂ ಇಲ್ಲವೋ, ಆ ಜಗವು ಇಲ್ಲವೇ ಇಲ್ಲವೆಂದು, ಇದೊಂದು ಯುಕ್ತಿಯನ್ನೇ ಬಲವಾಗಿ ಹಿಡಿದು ದೃಶ್ಯವೆಲ್ಲವನ್ನೂ, ಬ್ರಹ್ಮವೆಂದು ತಿಳಿದ ಜನರು ಕೃತಾರ್ಥರಾಗುವರು. ಭ್ರಾಂತರಾದವರು ಮಂಡಲಾಕಾರವಾದ ಕನಕವಂ ಕಟಕವೆಂದು ವ್ಯವಹರಿಸುವರಲ್ಲದೆ ನಿಮ್ಮ ಕಟಕವಂ ತೆಗೆದುಕೊಂಡು ನಮ್ಮ ಕನಕವಂ ಕೊಡಬೇಕೆಂದರೆ ಯಾರೂ ಸಮರ್ಥರಾಗು

ವದಿಲ್ಲ. ಹೀಗೆ ದೃಶ್ಯವಾದ ಬ್ರಹ್ಮದಲ್ಲಿ ಜಗತ್ತೆಂಬ ವ್ಯವಹಾರವಮಾತ್ರವಿರುವದಲ್ಲದೆ ಇನ್ನೇನೂ ಇಲ್ಲವೆಂದು ನಿಶ್ಚಯಿಸಿದವರು ತತ್‌ಕ್ಷಣದಲ್ಲಿಯೆ ಜೀವನ್ಮುಕ್ತಿಯ ಕಟಾಕ್ಷಕ್ಕೆ ಪಾತ್ರರಾಗುವರೆಂದು ಹೇಳುತಿದ್ದ ವಸಿಷ್ಠನನ್ನು ಮುಕ್ತರ ಲಕ್ಷಣವನ್ನು ಹೇಳುವನಾಗು. ಅವರಂತೆ ನಾನೂ ನಡೆಯುತ್ತಾ ಕೃತಾರ್ಥನಾಗುವೆನೆಂದು ಬೆಸಗೊಳ್ಳುವ ಶ್ರೀರಾಮನು ಕುರಿತಿಂತೆಂದನು. ಎಲೈ ಮಹಾಮತಿಯೆ ! ಬಹು ಜನ್ಮಾಭ್ಯಾಸದಿಂದ ಅತಿದೃಢವಾಗಿ ರೂಢಮೂಲವಾಗಿರುವ ಈ ಸಂಸಾರವಾಸನೆಗೆ ಬಹುಕಾಲ ಸಚ್ಛಾಸ್ತ್ರಾಭ್ಯಾಸದಿಂದುಂಟಾದ ಬ್ರಹ್ಮವಾಸನೆಯಿಂದ ನಿಶ್ಶೇಷವಾಗಿ ನಾಶವಾಗುವದೆ ಜೀವನ್ಮುಕ್ತಿಯೆನಿಸುವದು. ಇದಂ ಪತವವನಿಗೆ ದ್ರಷ್ಟೃ ದರ್ಶನ ದೃಶ್ಯ, ಜ್ಞಾತೃ ಜ್ಞಾನ ಜ್ಞೇಯ, ಕೃರ್ತೃ ಕರಣ ಕಾರ್ಯ ಭೋಕ್ತೃ ಭೋಗ ಭೋಗ್ಯ, ಮೊದಲಾದ ತ್ರಿಪುಟಿ ಪದಾರ್ಥಗಳೆಲ್ಲವೂ, ಬ್ರಹ್ಮಭಿನ್ನವಾಗಿರುವದ್ದರಿಂದ ಜಾಗ್ರತೆಯಲ್ಲಿಯೂ ಸುಪ್ತನಂತಿರುವನು. ಇವನು ವ್ಯವಹಾರವಂ ಮಾಡುತ್ತಿರುವಲ್ಲಿ ಅಹಂಕಾರಾದಿ ಕರಣಗಳು, ಕಾಮಕ್ರೋಧಾದಿ ಮನೋಧರ್ಮಗಳು, ಕ್ಷುತ್ಪಿಪಾಸಾದಿ ಪ್ರಾಣಧರ್ಮಗಳೂಕೂಡ ಮಹಾರಾಜನಿಗೆ ಪರಿಜನಗಳಂತೆ ಸ್ವಾಧೀನವಾಗಿರುವವು. ಅಜ್ಞಾನಿಯಂತೆ ವ್ಯಾಪಾರಗಳೆಲ್ಲವಂ ನಡೆಸುತಿದ್ದಾಗ್ಯೂ, ಅಂತರ್ಮುಖವಾದ ದೃಷ್ಟಿಯಿಂ ತಟಸ್ಥನಾಗಿರುವದರಿಂದ ಹಾನಿವೃದ್ಧಿಗಳಿಂದಲೂ, ಸ್ತುತಿನಿಂದೆಗಳಿಂದಲೂ ಉಂಟಾದ ಹರ್ಷದುಃಖಗಳು ಅವನಂ ಹೊಂದಲಾರವು. ಸಂಸಾರಿಗೆ ಬ್ರಹ್ಮವಿಷಯದಲ್ಲಿ ಮರವೆ ಇರುವಂತೆ ಅವನಿಗೆ ಜಗತ್ತಿನಲ್ಲಿ ಮರವೆ ಉಂಟಾಗಿರುವದ್ದರಿಂದ ಅವನು ಮಾಡುವ ಕರ್ಮದಲ್ಲಿ ಪಾಪಪುಣ್ಯಗಳು ಅವನಂ ಹೊಂದುವದಿಲ್ಲ. ಅವನ ವ್ಯಾಪಾರದಲ್ಲಿ ಯಾವ ಪ್ರಾಣಿಗೆ ಘಾತವಾಗುವದೋ, ಯಾವ ಪ್ರಾಣಿಯು ಬದುಕುವದೋ ಆ ವಿಷಯದಲ್ಲಿ ಆ ಪಾಪಪುಣ್ಯಗಳು ಆ ಪ್ರಾಣಿಗಳದೇ ಎಂದು ನಿಶ್ಚಯಿಸಬೇಕು. ಈ ಜೀವನ್ಮುಕ್ತನಿಗೆ ಬ್ರಹ್ಮಜ್ಞಾನವೊಂದೇ ಇರುವದರಿಂದ ಯಾವ ಪ್ರಾಣಿಗಳನ್ನು ಕಂಡರೂ ಭಯವಿಲ್ಲದೆ ಸಂಚರಿಸುವನು. ಆ ಪ್ರಾಣಿಗಳಿಗೆ ಇವನ ದರ್ಶನದಿಂ ಭಯಕ್ರೋಧಾದಿಗಳು ತಪ್ಪಿಹೋಗುವವಾದ್ದರಿಂದ ಅವುಗಳು ಇವನಲ್ಲಿ ವಿಶ್ವಾಸದಿಂದಿರುವವು. ಆತ್ಮನ ಏಕೀಭಾವದಿಂ ಪ್ರಾಣಿಗಳಿಗೆ ಮನೋಧರ್ಮಗಳು ಪ್ರಾಯಶಃ ಸರಿಯಾಗುವವೆಂದು ತಿಳಿಯತಕ್ಕದ್ದು. ಪ್ರಾರಬ್ಧನಾಶದಿಂ ದೇಹಪಾತವಾಗಲು ಇವನೇ ವಿದೇಹಮುಕ್ತನೆನಿಸುವನು. ಸರ್ವಾತ್ಮಭಾವದಿಂದಿರುವ ಜೀವನ್ಮುಕ್ತನ ದೇಹದಲ್ಲಿದ್ದ ತತ್ವಗಳು ತಮ್ಮತಮ್ಮ ಅಭಿಮಾನಿ ದೇವತೆಗಳಲ್ಲಿ ಸೇರಿಕೊಂಡದ್ದರಿಂದ, ಈ ವಿದೇಹಮುಕ್ತನು ಬ್ರಹ್ಮವಿಷ್ಣುರು

ದ್ರಾದಿತ್ಯಾದಿರೂಪದಿಂದಾಯಾಯ ಕಾರ್ಯಗಳಂ ನಡಿಸುವನೆಂದು ತಿಳಿಯುತ್ತೇನೆ. ಇವನು ಜೀವನ್ಮುಕ್ತಾವಸ್ಥೆಯಲ್ಲಿಯೇ ಬ್ರಹ್ಮಭಾವದಿಂದಿದ್ದವನಾದ್ದರಿಂದ, ಆ ಸಂಸ್ಕಾರದಿಂದಲೇ ಪ್ರಪಂಚದ ಸರ್ವಕಾರ್ಯಗಳನ್ನೂ ನೆರವೇರಿಸುವನೆಂದು ನಿಶ್ಚಯಿಸುವನಾಗು. ಎಂದು ಹೇಳುತಿರುವಲ್ಲಿ ಎಲೈ ಗುರುವೇ ! ಮುಕ್ತನಾದವನಿಗೆ ಪುನರ್ಜನ್ಮವಿಲ್ಲವೆಂದು ಸರ್ವತ್ರ ಪ್ರಸಿದ್ಧವಾಗಿರುವಲ್ಲಿ ವಿದೇಹಮುಕ್ತನು ಸೃಷ್ಟಿಮಾರ್ಗಕ್ಕೆ ಬರುವದು ಹೇಗೆ ? ಈ ಮಾರ್ಗಕ್ಕೆ ಬರದೆಯಿದ್ದಲ್ಲಿ ಬ್ರಹ್ಮಾದಿರೂಪದಿಂ ಜಗತ್ಕಾರ್ಯವನ್ನು ನಿರ್ವಹಿಸುವದು ಹೇಗೆ ? ಎಂದು ಶ್ರೀರಾಮನು ಕೇಳಲು, ಮರಳಿ ವಸಿಷ್ಠನಿಂತೆಂದನು.

ಎಲೈ ಸೂಕ್ಷ್ಮಮತಿಯೇ! ಎಂದೆಂದಿಗೂ ಸೃಷ್ಟಿಯೇ ಇಲ್ಲದಿರುವಲ್ಲಿ ವಿದೇಹಮುಕ್ತನು ಸೃಷ್ಟಿಮಾರ್ಗಕ್ಕೆ ಬರುವದುಂಟೆ ? ಒಂದರಿಂದ ಮತ್ತೊಂದು ಪದಾರ್ಥವುಂಟಾದಲ್ಲಿ ಸೃಷ್ಟಿಯಾಯಿತೆಂದು ಹೇಳಬಹುದು. ಆಗ ಆ ಪದಾರ್ಥಕ್ಕೆ ಬೇರೆ ಸತ್ವವೂ ಇರಬಹುದು. ನಟನು ವೇಷಾಂತರವಂ ವಹಿಸುವಂತೆ ಬ್ರಹ್ಮವು ಪ್ರಪಂಚರೂಪವಂ ವಹಿಸಿರುವಲ್ಲಿ ಬ್ರಹ್ಮದಿಂದ ಜಗತ್ತು ಹುಟ್ಟಿರುವುದೆಂದು ಹೇಳುವುದು ಹ್ಯಾಗೆ ? ಹ್ಯಾಗೆ ? ಹ್ಯಾಗೆ ? ಕಟಕವಂ ತಿರುಗಿಸಿ ನೋಡಿದರೂ, ಚಿನ್ನ ಕಾಣುವದಲ್ಲದೆ ಅದನ್ನು ಬಿಟ್ಟು ಕಟಕಭಾವವು ಕಾಣುವುದಿಲ್ಲ. ಮತ್ತು ಎಲ್ಲೆಲ್ಲಿ ಉಜ್ಜಿದರೂ ಚಿನ್ನವುದುರುವುದಲ್ಲದೆ ಕಟಕವು ಉದುರುವದಿಲ್ಲ. ಆದುದರಿಂದ ಚಿನ್ನದಲ್ಲಿ ಕಟಕವು ಭ್ರಾಂತಿಕಲ್ಪಿತವೆಂದು ತಿಳಿಯಬೇಕಾಗುತ್ತದೆ. ಹೀಗೆ ಬ್ರಹ್ಮದಲ್ಲಿ ಜಗತ್ತು ಅಜ್ಞಾನದಿಂದ ಕಲ್ಪಿತವಾಗಿರುವುದೆಂದು ನಿಶ್ಚಯಿಸುವನಾಗು. ಘಟವು ಭಗ್ನವಾದಬಳಿಕ ಘಟಾಕಾಶವು ಮಹಾಕಾಶವಂ ಸೇರುವಂತೆ ವಿದೇಹಮುಕ್ತನಾದ ಆತ್ಮನು ಪರಮಾತ್ಮನಂ ಸೇರಿದ್ದರಿಂದ ಅವನ ಕೃತ್ಯವನ್ನು ನಿರ್ವಹಿಸುವನೆಂದು ಹೇಳಿದೆನು. ಹ್ಯಾಗೆ ಶೂನ್ಯತ್ವವೇ ಆಕಾಶವೋ, ಚಲನವೇ ವಾಯುವೋ, ಪ್ರಕಾಶವೇ ತೇಜವೋ, ಹಾಗೆಯೇ ಬ್ರಹ್ಮವೇ ಮೂಜಗವೆಂದು ತಿಳಿಯುವನಾಗು, ಎಂದು ಹೇಳುತಿದ್ದ ವಸಿಷ್ಠನನ್ನು ಎಲೈ ಜ್ಞಾನನಿಧಿಯೇ ! ಏಕತ್ವ ದ್ವಿತ್ವಗಳಂತೆ ಪರಸ್ಪರ ಸಂಬಂಧವುಳ್ಳ ದ್ರಷ್ಟೃ ದೃಶ್ಯಗಳೆರಡೂ ಹೋದರೆ ಕೈವಲ್ಯವೇ ನಿಲ್ಲುವುದು. ಆದುದರಿಂದ ಈ ದೃಶ್ಯ ದ್ರಷ್ಟೃ ರೂಪವಾದ ಜಗತ್ತಿಗೆ ಅತ್ಯಂತವಾಗಿ ಸಂಭವವೇ ಇಲ್ಲವೆಂತಲೂ, ಬ್ರಹ್ಮವೇ ಜಗದ್ರೂಪದಿಂದ ವೃದ್ಧಿ ಹೊಂದಿರುವುದೆಂತಲೂ, ನನಿಗೆ ನಿಸ್ಸಂದೇಹವಾಗಿ ತಿಳಿಯುವಂತೆ ಯುಕ್ತಿಯನ್ನು ಹೇಳುವನಾಗೆಂದು ಬೆಸಗೊಳುವ ರಾಮನನ್ನು ಕುರಿತು ಮತ್ತಿಂತೆಂದನು. ಎಲೈ ಶ್ರೀರಾಮನೇ!

ಬಹುಕಾಲದಿಂದ ಬೆಳೆದ ಅಜ್ಞಾನಪಿಶಾಚವು ವಿಚಾರಮಂತ್ರದಿಂದಲೇ ನಿರ್ಮೂಲವಾಗಿ ಹೋಗುವುದು. ಆದರೆ ಯುಕ್ತಿಗಳಿಂದಲೂ, ಉಪಪತ್ತಿಗಳಿಂದಲೂ, ಅಭ್ಯಾಸದಿಂದಲೂ, ಕ್ರಮವಾಗಿ ಈ ಅಂತಶ್ಶತ್ರುವನ್ನು ಹೋಗಲಾಡಿಸಬೇಕಾಗಿದೆ. ಆದುದರಿಂದ ಪ್ರಥಮತಃ ನಿನಗೆ ಜ್ಞಾನವುಂಟಾಗುವಂತೆ ಉಪಾಖ್ಯಾನವನ್ನು ಹೇಳುವೆನು. ಅಭ್ಯಾಸಬಲದಿಂದ ಜ್ಞಾನವು ಸ್ಥಿರವಾಗಲು, ವೃದ್ಧಿಪಡಿಸಿದ ದೀಪವು ತಮವನ್ನು ಹೋಗಲಾಡಿಸುವಂತೆ ಈ ಜ್ಞಾನವೇ ಆ ಅಜ್ಞಾನವನ್ನು ಹೋಗಲಾಡಿಸುವುದು. ಎಲೈ ಶ್ರೀರಾಮನೇ ! ಯಾವನು ನಿರಾಕಾರನಾದರೂ ಸಾಕಾರನಂತೆ ಸರ್ವ ಕಾರ್ಯಗಳನ್ನು ಮಾಡುವನೋ, ಯಾವನು ನಾಮರಹಿತನಾದರೂ ಹರಿಹರಬ್ರಹ್ಮಾತ್ಮ, ಪರಮಾತ್ಮ, ಬ್ರಹ್ಮಾದಿ ನಾಮಗಳಿಂದ ಪ್ರಖ್ಯಾತನಾಗಿರುವನೋ, ಯಾವನು ಕ್ರಿಯಾರಹಿತನಾದಾಗ್ಯೂ ಚಲಾಚಲಸ್ವರೂಪನಾಗಿ ಚಲನಕಾಲದಲ್ಲಿ ಪುಟ್ಟುವನಂತೆಯೂ, ಸ್ಥೈರ್ಯಕಾಲದಲ್ಲಿ ಶಾಂತನಾಗುವನಂತೆಯೂ, ಕಾಣುತಿರುವನೋ, ಯಾವನು ಜಗತ್ತೆಂಬ ಅಲಾತ ಚಕ್ರಕ್ಕೆ ಕೊಳ್ಳಿಯೆಂತಲೂ, ದೃಶ್ಯಪದಾರ್ಥ ಪರಂಪರೆಗಳೆಂಬ ತರಂಗಗಳಿಗೆ ಸಮುದ್ರನೆಂತಲೂ, ಜ್ಞಾನಮನೋಬುಧ್ಯಾದಿ ತತ್ವಗಳೆಂಬ ಕಿಡಿಗಳಿಗೆ ಅಗ್ನಿಯೆಂತಲೂ, ಅಹಂಕಾರ ಮಮಕಾರ ಸುಖ ದುಃಖಾದಿ ವಿಕಾರಗಳೆಂಬ ಕಿರಣಗಳಿಗೆ ಸೂರ್ಯನೆಂತಲೂ, ಪ್ರಸಿದ್ಧನಾಗಿರುವನೋ, ಆ ಈ ಪರಮಾತ್ಮನೊಬ್ಬನೇ ಪ್ರಳಯಕಾಲದಲ್ಲಿ ನಿಲ್ಲುವನು. ಪುಷ್ಪಹೋದಾಗ್ಯೂ ಅದರ ವಾಸನೆ ಹ್ಯಾಗೆ ನಿಂತಿರುವುದೊ, ಹಾಗೆ ಜಗವು ಹೋದಾಗ್ಯೂ ಇವನು ನಿಂತಿರುವನು. ನಿಮಿತ್ತಕಾರಣವೂ, ಉಪಾದಾನ ಕಾರಣವೂ, ಸಹಾ ಇವನೇ ಆದುದರಿಂದ ಕಾರ್ಯವಾದ ಜಗತ್ತುಗಳು ಇವನಿಗೆ ಭಿನ್ನವಲ್ಲವೆಂದು ಹೇಳುವರು. ಆದುದರಿಂದ ನಾನು, ನೀನು,ಅದು, ಇದು, ಅವನು, ಇವನೆಂಬುವುದೇ ಮೊದಲಾದ ಸಮಸ್ತ ವಸ್ತುಗಳೂ, ಸುವರ್ಣದಿಂದಾಭರಣಗಳಂತೆಯೂ, ಸೂರ್ಯನಿಂದ ಕಿರಣಗಳಂತೆಯೂ, ಸೂರ್ಯಪ್ರಕಾಶದಿಂದ ಮರುಭೂಮಿಯಲ್ಲಿ ಜಲತರಂಗಗಳಂತೆಯೂ, ಉಂಟಾಗುವವು. ಈ ಬ್ರಹ್ಮದಲ್ಲಿ ದೃಶ್ಯಪದಾರ್ಥಗಳೆಲ್ಲವೂ ಸಿದ್ಧವಾಗಿದ್ದಾಗ್ಯೂ, ಭಿನ್ನವಾದ ಪದಾರ್ಥ ಒಂದೂ ಇಲ್ಲದ್ದರಿಂದ ಶೂನ್ಯವೆನಿಸುವುದು. ಪ್ರಳಯದಲ್ಲಿ ಸಮಸ್ತ ಪದಾರ್ಥಗಳೂ ಅಸ್ತವಾದಾಗ್ಯೂ ಪುನಃ ಪುಟ್ಟುವ ಯೋಗ್ಯತೆ ಇರುವದರಿಂದ ಅಶೂನ್ಯವೆನಿಸುವುದು. ಬೊಂಬೆಯನ್ನು ಕೆತ್ತದಿದ್ದರೂ ಕೆತ್ತುವುದಕ್ಕೆ ಯೋಗ್ಯವಾದುದರಿಂದ, ಮರವು ಅಶೂನ್ಯವೆನಿಸುವಂತೆ, ಈ ಬ್ರಹ್ಮವು ಶೂನ್ಯವೆನಿಸುವುದು. ಈ ಪ್ರಕಾರದಿಂದ ಬ್ರಹ್ಮಾಭಿನ್ನವಾದ ಜಗವು ಎಂದಿ

ಗೂ ಹುಟ್ಟದೆ ಇರುವಲ್ಲಿ, ಈ ಜಗವನ್ನು ಹಿಡಿದು ಹೊರಟರುವ ಶೂನ್ಯಾ ಶೂ ನ್ಯಭಾವಗಳು ಭ್ರಾಂತಿಕಲ್ಪಿತವೆನಿಸುವುವಲ್ಲದೆ ಪರಮಾರ್ಥವಾಗಲಾರವು. ಈ ಬ್ರಹ್ಮವು ಸೂರ್ಯಾದಿ ಪದಾರ್ಥಗಳಿಗೆ ಪ್ರಕಾಶವಾದುದರಿಂದ ತೇಜವೆನಿಸುವುದು. ತೇಜವಿಲ್ಲದಿರುವುದೇ ತಮವೆಂದು ಶಾಸ್ತ್ರವಿರುವದರಿಂದ, ಸೂರ್ಯ ಚಂದ್ರಾಧಿ ತೇಜಸ್ಸುಗಳ ಪ್ರಕಾಶಕ್ಕೆ ಸ್ಥಾನವಾಗದ ಈ ಬ್ರಹ್ಮವು ತಮವೆನಿಸುವುದು. ಸ್ವಭಿನ್ನಪದಾರ್ಥವನ್ನು ಪ್ರಕಾಶಪಡಿಸುವದಿಲ್ಲವಾದುದರಿಂದ ತೇಜವೆಂತಲೂ, ಅಜ್ಞಾನರೂಪವಲ್ಲದ್ದರಿಂದ ತಮವೆಂತಲೂ, ಹೇಳಿಸಿಕೊಳ್ಳುವುದಿಲ್ಲ. ದ್ರಷ್ಟೃದೃಶ್ಯಗಳಂತೆ ಚಿಚ್ಚೇತ್ಯಗಳು ಪರಸ್ಪರಾನುಬಂಧಿಗಳಾದುದರಿಂದ ಚೇತನವನ್ನು ಪಡೆಯತಕ್ಕ ಚೇತ್ಯವಿರುವವರಿಗೆ ಚೈತನ್ಯವನ್ನುಂಟುಮಾಡುವ ಚಿತ್ತಿರುವುದು. ಭೋಕ್ತೃವಾದ ಚಿತ್ತು ಅಂತರ್ಮುಖವಾಗುವ ಮೆಣಸಿನ ಕಾರದಂತೆ ಚೇತ್ಯವು ಹೋಗುವುದು. ಹೀಗೆ ಚಿಚ್ಚೇತ್ಯಗಳೆರಡೂ ಹೋಗತಕ್ಕಂತಹವಾದುದರಿಂದ, ನಿತ್ಯವಾದ ಬ್ರಹ್ಮವು ಚಿತ್ತೆನಿಸಿಕೊಳಲಾರದು. ಮತ್ತು ವಾಗತೀತವಾದುದರಿಂದ ಬ್ರಹ್ಮವು ಚಿತ್ತೆಂಬ ಶಬ್ದಕ್ಕೆ ಲಕ್ಷಣೆಯಿಂದರ್ಥವಾಗುವುದಲ್ಲದೆ ಶಕ್ತ್ಯರ್ಥವಾಗಲಾರದು. ಆದುದರಿಂದ ಚಿತ್ತೆನಿಸಿಕೊಳ್ಳಲಾರದು. ಮನೋಬುದ್ಧಿಗಳು ಸ್ವೇತರ ಪದಾರ್ಥಗಳಲ್ಲಿ ಸಂಶಯ ನಿಶ್ಚಯಾತ್ಮಕವಾದ ರೀತಿಗಳನ್ನು ಹೊಂದುವಂತಹವು ಬ್ರಹ್ಮಕ್ಕೆ ಸ್ವೇತರ ಪದಾರ್ಥವಿಲ್ಲದ್ದರಿಂದ ಮನವೆಂತಲೂ, ಬುದ್ಧಿಯಂತಲೂ, ಹೇಳಿಸಿಕೊಳ್ಳಲಾರದು. ಚಿದ್ಭಾವನೇ ಇಲ್ಲದ ಪರಮಾತ್ಮನಲ್ಲಿ ಜೀವಭಾವವು ಹೇಗೆತಾನೆ ಉಂಟಾದೀತು ? ಜೀವಾದಿ ಸಮಸ್ತ ವಸ್ತುಗಳಿಗೂ ಆಧಾರವಾದ ಜಗತ್ತನ್ನು ಪ್ರಕಾಶಪಡಿಸುವ ಯೋಗ್ಯತೆಯು ಬ್ರಹ್ಮದಲ್ಲಿರುವದ್ದರಿಂದ ಜಗತ್ತು ಹುಟ್ಟುವದಿಲ್ಲವೆಂಬ ಪಕ್ಷದಲ್ಲಿ ಬ್ರಹ್ಮವೇ ಜಗದ್ರೂಪವಾಗಿ ಕಾಣಿಸುವದೆಂಬುವದು ಸಿದ್ಧವಾಗಿರುವದು. ಜಗತ್ತು ಹುಟ್ಟುವದೆಂಬ ಪಕ್ಷದಲ್ಲಿ ಸಿಂಹ್ಮದಿಂದ ಹುಟ್ಟಿದ್ದು ಸಿಂಹ್ಮವಲ್ಲದೆ ನಾಯಾಗಲಾರದೆಂಬ ನ್ಯಾಯದಿಂದ ಬ್ರಹ್ಮದಿಂದ ಹುಟ್ಟಿದ್ದು ಬ್ರಹ್ಮವಲ್ಲದೆ ಮತ್ತೊಂದಾಗಲಾರದೆಂದು ತಿಳಿಯತಕ್ಕದ್ದು. ದೃಗ್ದೃಶ್ಯಗಳಂತೆ ಬ್ರಹ್ಮ ಜಗತ್ತುಗಳನ್ನು ಹಿಡಿದು ನೋಡುವಲ್ಲಿ ಎರಡರ ಭಾವವೂ ನಿಲ್ಲಲಾರದಾದುದರಿಂದಲೂ, ಬ್ರಹ್ಮಾದಿ ಶಬ್ದಗಳು ವ್ಯವಹಾರಾರ್ಥವಾಗಿ ಕಲ್ಪಿತವಾದುದರಿಂದಲೂ, ಅಖಂಡವಾಗಿ ಸರ್ವರಿಗೂ ಸ್ವರೂಪವಾಗಿರುವ ಜ್ಞಾನವೊಂದೇ ಶಾಶ್ವತವಾಗಿರುವದೆಂದು ತಿಳಿಯುವನಾಗು. ಹೀಗೆ ಯಾವದರ ಧರ್ಮವೂ ಇಲ್ಲದ್ದರಿಂದ ಕಾಣುವದೊಂದೂ ಬ್ರಹ್ಮವಲ್ಲವೆಂತಲೂ, ಸರ್ವಸ್ವರೂಪವಾಗಿ ಅದೇ ಕಾಣುವದರಿಂದ ಸರ್ವವೂ ಬ್ರಹ್ಮವೆಂತ

ಲೂ, ವಿದ್ವಾಂಸರು ಹೇಳುವರು. ಎಂದು ಹೇಳುವಾಗ ಪರಮಾತ್ಮನ ಸ್ವರೂಪವನ್ನು ಪುನಃ ಹೇಳಬೇಕೆಂದು ಪ್ರಾರ್ಥಿಸುವ ಶ್ರೀರಾಮನನ್ನು ಕುರಿತು ವಸಿಷ್ಠನಿಂತೆಂದನು.

ಎಲೈ ಬುದ್ಧಿಶಾಲಿಯೆ! ದೃಶ್ಯವಾದ ಜಗವೆಲ್ಲವೂ ಪ್ರಳಯಕಾಲದೊಳು ಅದೃಶ್ಯವಾಗಲು ಆಗಲೂ ಶಾಶ್ವತವಾದುದರಿಂದ ನಿರ್ವಿಕಾರವಾಗಿ ನಿಂತಿರುವದೇ ಪರಮಾತ್ಮನ ಸ್ವರೂಪವು. ಪದಾರ್ಥದಲ್ಲಿರುವ ರಸದಂತೆ ಅನುಭವಮಾತ್ರಗೋಚರವಾದುದರಿಂದ ಸ್ವರೂಪವನ್ನು ಹೇಳಲಶಕ್ಯವಾಗಿರುವದು. ಕಿವಿಯನ್ನು ಮುಚ್ಚುವಲ್ಲಿ ನಾದದಂತೆಯೂ, ಕಣ್ಣಂ ಮುಚ್ಚುವಲ್ಲಿ ತೇಜದಂತೆಯೂ, ಮನೋವೃತ್ತಿಗಳು ಅಡಗುವಲ್ಲಿ ಸುಖಸ್ವರೂಪದಿಂ ಯಾವದು ತೋರುವದೋ, ಅದೇ ಬ್ರಹ್ಮಸ್ವರೂಪವೆಂದು ತಿಳಿಯುವನಾಗು. ಭೋಗಾಂತರದಲ್ಲಿಯೂ, ವಿಷಯಲಾಭದಲ್ಲಿಯೂ, ವಿಷಯೇಂದ್ರಿಯ ಸಂಧಿಯಲ್ಲಿಯೂ, ಇಂದ್ರಿಯಮನಸ್ಸಂಧಿಯಲ್ಲಿಯೂ, ಜಾಗ್ರತ್ಸ್ವಪ್ನಗಳ ಸಂಧಿಯಲ್ಲಿಯೂ, ಸುಷುಪ್ತಿ ನಿರ್ವಿಕಲ್ಪ ಸಮಾಧಿಗಳ ಮಧ್ಯದಲ್ಲಿಯೂ, ಯಾವಯಾವ ಕಾಲದಲ್ಲಿ ಮನಸ್ಸಿನ ಚಪಲತೆ ತಪ್ಪುವದೊ, ಆಗ ಈ ಸ್ವರೂಪವು ಗೋಚರವಾಗುವದು. ಆಕಾಶದ ಶೂನ್ಯಭಾವಕ್ಕೂ, ವಾಯುವಿನ ಸ್ತಂಭೀಭಾವಕ್ಕೂ, ಶಿಲೆಯ ಹೃದಯಕ್ಕೂ, ಚೈತನ್ಯ ಸಂಭವಿಸಿದಲ್ಲಿ ಅದು, ಇದಕ್ಕೆ ಸಮಾನನೆಂದು ಪೇಳಬಹುದು. ಜ್ಞಾತೃ ಜ್ಞಾನ ಜ್ಞೇಯ ಮೊದಲಾದ ತ್ರಿಪುಟಿಗಳು ಸಮುದ್ರದ ತೆರೆಗಳಂತೆ ಈ ಬ್ರಹ್ಮಸ್ವರೂಪದಲ್ಲಿ ಚಲಿಸುತಿರುವವು. ಇದರ ಅವಲಂಬನೆಯಿಂದಲೇ ಜ್ಞಾತೃ ಜ್ಞಾನಜ್ಞೇಯಾದಿ ಪದಾರ್ಥಗಳು ಒಂದಕ್ಕೊಂದು ಸೇರುವವು. ಈ ತ್ರಿಪುಟಿಗಳ ಮಧ್ಯದಲ್ಲಿರುವ ಕರಣದಲ್ಲಿ ದೃಷ್ಟಿಯನ್ನಿಟ್ಟು ಹಿಂದುಮುಂದಕ್ಕೆ ಹೋಗುವದನ್ನೂ ಮಧ್ಯದಲ್ಲಿ ನಿಲ್ಲುವದನ್ನೂ ಸಹ ನೋಡುವ ಬುದ್ಧಿಶಾಲಿಗೆ ಈ ಸ್ವರೂಪವು ಚನ್ನಾಗಿ ಅನುಭವಗೋಚರವಾಗುವದು. ನಿರ್ವಿಕಲ್ಪವಾಗಿ ನಿರಾಲಂಬವಾಗಿರುವ ಜ್ಞಾನಸ್ಥಿತಿಯೇ ಬ್ರಹ್ಮಸ್ವರೂಪವೆಂದು ನಿಶ್ಚಯಿಸುವನಾಗು. ಆಕಾಶದಿಂ ಪುಟ್ಟಿದ ವಾಯುವಿನಿಂದ ತೇಜದಂತೆ ಜ್ಞಾನಸ್ವರೂಪನಾದ ಈ ಪರಮಾತ್ಮನಿಗೆ ಸ್ವಾಭಾವಿಕವಾದ ಜ್ಞಾನಶಕ್ತಿಯ ಚಲನದಿಂ ದೃಶ್ಯವಾದ ಈ ಪ್ರಪಂಚವು ಪ್ರಕಾಶಿಸುವದು. ಕೊಳ್ಳಿಯ ಚಲನದಿಂ ಕಾಣುವ ಜ್ವಾಲಾಮಂಡಲದಂತೆ ಈ ಜಗವು ಕಾಣುತಿದ್ದಾಗ್ಯೂ ಇದೇ ಸರಿಯೆನ್ನುವದಕ್ಕೆ ಅಶಕ್ಯವಾಗಿರುವದು. ಕೊಳ್ಳಿಯ ಜ್ವಾಲಾಮಂಡಲವೋ, ಬ್ಯಾರೆಯೋ, ಬುದ್ಧಿಶಾಲಿಗಳು ಆಲೋಚಿಸಬಹುದು, ಎಂದು ಹೇಳುವಲ್ಲಿ ಈ ಬ್ರಹ್ಮಾಂಡಮಂಡಲವು ಪ್ರಳಯಕಾಲದಲ್ಲೆಲ್ಲಿಗೆ ಹೋ

ಗುವದೆಂದು ಶ್ರೀರಾಮನು ಕೇಳಲು ವಸಿಷ್ಠಮುನಿ ಇಂತೆಂದನು. ಎಲೈ ವತ್ಸನೇ ! ವಂಧ್ಯಾಪುತ್ರನು ಎಲ್ಲಿಂದ ಬಂದನು ? ಎಲ್ಲಿಗೆ ಹೋದನೆಂದು ಕೇಳುವಲ್ಲಿ ಹೇಳತಕ್ಕದ್ದೇನು ? ವಂಧ್ಯಾಪುತ್ರನಂತೆಯೇ ಈ ಜಗತ್ತು ಹುಟ್ಟಲಿಲ್ಲವೆಂದು ತಿಳಿಯತಕ್ಕದ್ದು. ಆದರೆ ವಂಧ್ಯಾಪುತ್ರನೆಂಬ ಕಲ್ಪನೆಯಂತೆ ಈ ಜಗತ್ತು ಹುಟ್ಟಿ ಹೋಗತಕ್ಕದ್ದಲ್ಲವೆಂದು ನಿಶ್ಚಯಿಸತಕ್ಕದು. ಸುವರ್ಣದಘಟ್ಟಿಯಲ್ಲಿ ಕಟಕವೆಂಬ ಕಲ್ಪನೆಗೂಕೂಡ ಅವಕಾಶವಿಲ್ಲದಿರುವಂತೆ ಬ್ರಹ್ಮದಲ್ಲಿ ಜಗತ್ತೆಂಬ ಕಲ್ಪನೆಗೆ ಅವಕಾಶವಿಲ್ಲ. ಆಕಾಶದಲ್ಲಿರುವ ಶೂನ್ಯತ್ವವು ಹೇಗೆ ಭಿನ್ನವಾಗಿಲ್ಲವೋ, ಹಾಗೆ ಬ್ರಹ್ಮದಲ್ಲಿರುವ ಜಗದ್ಭಾವವೂ ಭಿನ್ನವಾಗಿಲ್ಲ. ಕಾಡಿಗೆಕಪ್ಪುಗಳಿಗೂ, ಹಿಮಶೈತ್ಯಗಳಿಗೂ, ಹೇಗೆ ಭೇದವಿಲ್ಲವೋ, ಹಾಗೆ ಬ್ರಹ್ಮ ಜಗತ್ತುಗಳಿಗೆ ಭೇದವಿಲ್ಲವಾದುದರಿಂದ ಮರುಭೂಮಿಯಲ್ಲಿ ಜಲದಂತೆಯೂ, ಎರಡನೆಯ ಚಂದ್ರನಲ್ಲಿ ಚಂದ್ರತ್ವದಂತೆಯೂ ಬ್ರಹ್ಮದಲ್ಲಿ ಜಗತ್ತು ಇಲ್ಲವೆಂದು ತಿಳಿಯುವನಾಗು. ಎಂದಿಗೂ ಇಲ್ಲದಿರುವದಕ್ಕೆ ಜನ್ಮಸ್ಥಿತಿನಾಶಗಳು ಸಂಭವಿಸುವದಿಲ್ಲವಾದುದರಿಂದ ಎಂದಿಗೂ ಇರುವ ಶಾಶ್ವತವಾದ ಬ್ರಹ್ಮವೇ ಈಪರಿಯಿಂದ ಪ್ರಕಾಶಿಸುತ್ತಾ, ಮರೆಯಾಗುತಿರುವುದೆಂದು ತಿಳಿಯುವನಾಗು. ಅಜ್ಞಾನದಿಂದ ಸ್ವಪ್ನವಾಗುವಂತೆ ಈ ಜಗತ್ತು ಪುಟ್ಟುವುದೆಂದರೆ, ಅಜ್ಞಾನವೆಂಬುವದು ಜ್ಞಾನದ ಪ್ರಕಾಶವಿಶೇಷವಲ್ಲದೆ ಮತ್ತೊಂದಲ್ಲವಾದುದರಿಂದ, ಆ ಅಜ್ಞಾನವು ಜ್ಞಾನಸ್ವರೂಪವಾದ ಬ್ರಹ್ಮಕ್ಕೆ ಅಭಿನ್ನವೆಂದು ತಿಳಿಯುವನಾಗು. ಹೀಗೂ ಬ್ರಹ್ಮವೇ ಕಾರಣವಾದುದರಿಂದ ತೇಜದಿಂದ ತೇಜವೇ ಹುಟ್ಟುವುದೆಂಬ ನ್ಯಾಯದಿಂದೀದೃಶ್ಯಪ್ರಪಂಚವು ಬ್ರಹ್ಮವೇ ಆಗುವುದು. ಜಲದಲ್ಲಿ ದ್ರವದಂತೆಯೂ, ವಾಯುವಿನಲ್ಲಿ ಚಲನದಂತೆಯೂ, ಬ್ರಹ್ಮದಲ್ಲಿ ಅಭಿನ್ನವಾಗಿರುವ ಈ ಪ್ರಪಂಚವು ಬುದ್ಧಿಯಲ್ಲಿ ಸ್ವಪ್ನದಂತೆ ಪ್ರಕಾಶಿಸಿತೆಂದು ನಿಶ್ಚಯಿಸುವನಾಗು, ಎಂದು ಹೇಳುತ್ತಿರುವ ಶ್ರೀರಾಮನಿಂತು ಪ್ರಶ್ನೆಯಂ ಮಾಡಿದನು. ಎಲೈ ಜ್ಞಾನಶಿರೋಮಣಿಯೇ ! ನೀನು ಹೇಳಿದ ರೀತಿಯಿಂದ *ದೃಶ್ಯವೆಲ್ಲವೂ ಬ್ರಹ್ಮವೇ ಆಗಿರುವಲ್ಲಿ, ಇದು ಜಗತ್ತೆಂದು ಜನಗಳಿಗೆ ದೃಢವಾದ ನಿಶ್ಚಯವಾಗಿರುವದಕ್ಕೆ ಕಾರಣವೇನು! ದೃಶ್ಯವಿರುವವರೆಗೆ ದ್ರಷ್ಟೃವು ದ್ರಷ್ಟೃವಿರುವವರಿಗೆ ದೃಶ್ಯವು ಎಂದು ಪರಸ್ಪರ ಸಂಬಂಧವಿರುವದರಿಂದ ಇವುಗಳಲ್ಲಿ ಒಂದು ಹೋದಾಗ್ಯೂ ಎರಡೂ ಹೋಗುವದು. ಒಂದು ಇದ್ದರೂ ಎರಡೂ ಇರುವದು, ಇದು ಇರುವವರೆಗೆ ಬಂಧ ತಪ್ಪಲಾರದಾ

*ಪಂಚೇಂದ್ರಿಯಗಳಿಗೆ ಗೋಚರಗಳಾದ ಪೃಥಿವ್ಯಾದಿ ಪಂಚಭೂತಸಮುದಾಯ ಸ್ವರೂಪವಾದ ಈ ಜಗತ್ತಿಗೆ "ದೃಶ್ಯ" ವೆಂದು ಹೆಸರು. The tangible world.

ಮುದರಿಂದ ಇದು ನಿಶ್ಶೇಷವಾಗಿ ಹೋಗುವಂತೆ ಹೇಳಬೇಕೆಂದು ಕೇಳುವ ರಾಮನನ್ನು ಕುರಿತು ವಸಿಷ್ಠನು ಪೇಳಿದನದೆಂತೆನೆ.

ಎಲೈ ರಾಮಭದ್ರನೇ ! ಜಡಕ್ಕೆ ಜಡವೇ ಕಾರಣವು, ಚಿತ್ತಿಗೆ ಚಿತ್ತೇಕಾರಣವೆನ್ನುವದು ಯುಕ್ತವಾದುದರಿಂದ ನೆಳಲಿಗೆ ಬಿಸಲು ಕಾರಣವೆಂಬುವಂತೆ ಜಡವಾದ ಜಗತ್ತಿಗೆ ಜ್ಞಾನಸ್ವರೂಪನಾದ ಪರಮಾತ್ಮನು ಕಾರಣನೆಂಬುವದು ಅಸಂಗತವಾಗಿರುವುದು. ಎಂದೆಂದಿಗೂ ಹೋಗದೆ ಸತ್ಯವಾಗಿರುವನು ಪರಮಾತ್ಮನಲ್ಲದೆ ಮತ್ತೊಂದಿಲ್ಲವಾದುದರಿಂದ ಬಿಸಲಿನಲ್ಲಿ ಕತ್ತಲೆ ಇರುವದೆಂಬಂತೆ ಪರಮಾತ್ಮನಲ್ಲಿ ಜಗತ್ತಿಧೆ ಯೆಂಬುವದು ಅತ್ಯಂತಾಸಂಗತವಾಗಿರುವದು. ಎಂದಿಗೂ ಇಲ್ಲದ ಜಗತ್ತು ಸೃಷ್ಟ್ಯಾದಿ ಸೃಷ್ಟ್ಯಂತಗಳಲ್ಲಿ ಕಾಣದೆ ಮಧ್ಯದಲ್ಲಿ ಕಾಣುತಿರುವುದೆಂಬುದು ಗಗನೋದ್ಯಾನ ಕಾಣುತಿರುವದೆಂಬಂತೆ ಅತ್ಯಂತಾಸಂಗತವಾಗಿರುವದಾದ್ದರಿಂದ ಜಗತ್ತು ಇಲ್ಲವೇ ಇಲ್ಲವೆಂತಲೂ, ಪ್ರಳಯಕಾಲದಲ್ಲಿ ಹೋಗದೇ ನಿಲ್ಲುವ ಪರಮಾತ್ಮನೇ ಜಗದ್ರೂಪದಿಂ ತೋರುತ್ತಿರುವನೆಂತಲೂ, ಸತ್ಯವಾಗಿ ನಿಶ್ಚಯಿಸುವನಾಗು. ಸೃಷ್ಟಿಕ್ರಮವಂ ನೋಡುವಲ್ಲಿ ಈ ಅರ್ಥವು ನಿನಗೆ ತೋರುವದಾದ್ದರಿಂದ ಸೃಷ್ಟಿಕ್ರಮವಂ ಪೇಳುವೆನು. ಇದಂ ನೀನು ಸಾವಧಾನವಾಗಿ ಕೇಳುವನಾಗು. ಜ್ಞಾನಸ್ವರೂಪನಾದ ಪರಮಾತ್ಮನಿಗೆ ಜ್ಞಾನಶಕ್ತಿಯು ದೀಪಕ್ಕೆ ಜ್ವಾಲೆಯಂತೆ ಸ್ವಾಭಾವಿಕವಾಗಿರುವದು. ಈ ಜ್ಞಾನಶಕ್ತಿಗೆ ಇಚ್ಛಾಶಕ್ತಿಯೂ, ಇಚ್ಛಾಶಕ್ತಿಗೆ ಕ್ರಿಯಾಶಕ್ತಿಯೂ, ಸಹ ಉರಿಗೆ ಸಣ್ಣ ಉರಿಗಳಂತೆ ಸಹಜವಾಗಿರುವದಾದ್ದರಿಂದ ಈ ಶಕ್ತಿಯುಕ್ತನಾದ ಪರಮಾತ್ಮನು ಬಹು ರೂಪವಾಗಿ ವಿಹರಿಸಬೇಕೆಂದು ಇಚ್ಛೈಸುವನು. ಶಕ್ತಿ ಶಕ್ತಿವಂತರಿಗೆ ಭೇದವು ವಾಙ್ಮಾತ್ರದಲ್ಲಿರುವದಲ್ಲದೆ ವಸ್ತುವಿನಲ್ಲಿ ಕಾಣುವದಿಲ್ಲವಾದ್ದರಿಂದ ಅವುಗಳಿಗೆ ಭೇದವನ್ನೆಣಿಸಲಾಗದು. ಭೇದವಿಲ್ಲದ್ದರಿಂದ ಆ ಶಕ್ತಿಗಳೂ ಪರಮಾತ್ಮನೆಂತಲೇ ತಿಳಿಯತಕ್ಕದ್ದು. ಈ ಪರಮಾತ್ಮನು ಇಚ್ಛೈಸಿದಕ್ಷಣವೆ ಭ್ರೂಮಧ್ಯದಲ್ಲಿ ನೇತ್ರಗಳ ತೇಜವು ಕಾಣುವಂತೆ ಆ ಶಕ್ತಿ ಪರಮಾತ್ಮರುಗಳ ಪ್ರಕಾಶವು ಎದುರಿಗೆ ಗೋಚರವಾಯಿತು. ಅದು ಇಚ್ಛಾನುಸಾರವಾಗಿ ಚಲಿಸುವದ್ದರಿಂದ ಇದು ಜಡವಾದ ಚೇತ್ಯವೆಂದು ಗ್ರಹಿಸಿದ ಪರಮಾತ್ಮನು ಚಿತ್ತೆನಿಸಿಕೊಂಡನು. ಅಭಿನ್ನವಾದ್ದಂ ಭಿನ್ನವೆಂತಲೂ, ಜಡವಲ್ಲದ್ದಂ ಜಡವೆಂತಲೂ, ಗ್ರಹಿಸುವದಕ್ಕೆ ಸಾಧನವಾದ ಜ್ಞಾನಶಕ್ತಿಯೆ ಆಗ ಅಜ್ಞಾನರೂಪವಾದ ಮಾಯೆಯೆನಿಸಿಕೊಂಡಿತು. ಗೋಚರವಾದ ಆ ಪ್ರಕಾಶವನ್ನೇ ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯೆನ್ನುವರು. ಇದು ಪ್ರಕಾಶವಾದಕೂಡಲೆ ಪರಮಾ

ತ್ಮನಲ್ಲಿ ಅಹಂಭಾವ ಮಮಭಾವಗಳುಂಟಾದವು. ಇವುಗಳಲ್ಲಿ ಅಹಂಭಾವವಂ ಗ್ರಹಿಸಿದ ಚಿತ್ತೇ ಸಾಕ್ಷಿಯೆನಿಸಿಕೊಂಡಿತು. ಮಮಭಾವಕ್ಕೆ ಆಶ್ರಯವಾದ ಆ ಪ್ರಕಾಶವೇ ಪ್ರಕೃತಿಯೆನಿಸಿಕೊಂಡಿತು. ಈ ಪ್ರಕೃತಿಯನ್ನಭಿಮಾನಿಸಿ ತನ್ನ ಶರೀರವೆಂದು ಪರಿಗ್ರಹಿಸಿದ ಸಾಕ್ಷಿಯೆ ಈಶ್ವರನೆನಿಸಿಕೊಂಡನು. ಬಹುರೂಪದಿಂ ವಿಹರಿಸಬೇಕೆಂಬ ಇಚ್ಛೆಯು ಈಶ್ವರನಿಗೆ ಉಂಟಾದ ಕ್ಷಣವೇ ಅಗ್ನಿಯಿಂದ ಕಿಡಿಗಳಂತೆ ಈ ಪ್ರಕೃತಿಯಿಂದ ಪಂಚಾಂತಃಕರಣಗಳು, ದಶೇಂದ್ರಿಯಗಳು, ಪಂಚಪ್ರಾಣಗಳು ಪಂಚತನ್ಮಾತ್ರೆಗಳು ಸಹ ಪುಟ್ಟಿದವು, ಇವುಗಳೆ ಇಪ್ಪತ್ತೈದು ತತ್ವಗಳು. ಇವುಗಳ ಸಮೂಹವೇ ಲಿಂಗಶರೀರವೆಂತಲೂ, ಸೂಕ್ಷ್ಮಶರೀರವೆಂತಲೂ, ಅತಿವಾಹಿಕಶರೀರವೆಂತಲೂ, ಪೇಳಲ್ಪಡುವದು. ಈ ಶರೀರವಂ ಪರಿಗ್ರಹಿಸಿದ ಈಶ್ವರನೇ ಆದಿಜೀವನಾದ ಹಿರಣ್ಯಗರ್ಭನೆನಿಸಿಕೊಳ್ಳುವನು. ಇವನಂತೆ ಈ ತತ್ವಾಭಿಮಾನಿ ದೇವತೆಗಳೆಲ್ಲರೂ ಆತಿವಾಹಿಕ ಶರೀರವುಳ್ಳಂಥಾವರು ಈ ಹಿರಣ್ಯಗರ್ಭನ ಇಚ್ಛಾಮಾತ್ರದಿಂದ ಆಕಾಶಾದಿ ಪಂಚಭೂತಗಳು ತನ್ಮಾತ್ರೆಗಳಿಂ ಪುಟ್ಟಿದವು. ಆಕಾಶದೊಡನೆಯೇ ಕಾಲವೂ ಸಮಸ್ತ ವೇದಶಾಸ್ತ್ರಗಳೂ ಸಹ ಉಂಟಾದವು. ಈ ಪಂಚಭೂತಗಳಿಂದಲೆ ಹಿರಣ್ಯಗರ್ಭನು ಚತುರ್ದಶಲೋಕಾತ್ಮಕವಾದ ಬ್ರಹ್ಮಾಂಡಗಳಂ ಸೃಜಿಸಿದನು. ಈ ಬ್ರಹ್ಮಾಂಡಗಳ ತಂಡವಂ ತನ್ನ ಶರೀರವೆಂದು ಪರಿಗ್ರಹಿಸಿದ ಹಿರಣ್ಯಗರ್ಭನೇ ವಿರಾಟನೆನಿಸಿಕೊಳ್ಳುವನು. ತತ್ವಾಭಿಮಾನಿ ದೇವತೆಗಳಲ್ಲಿ ಮನೋಭಿಮಾನಿಯಾದ ಬ್ರಹ್ಮನು ವಿರಾಟ್ಪುರುಷನ ಶರೀರದಿಂ ಪಂಚಭೂತಗಳಂ ಸಂಗ್ರಹಿಸಿ ಸಮಸ್ತ ಪ್ರಾಣಿಗಳಂ ಸೃಜಿಸುವನು. ಚಿತ್ತಾಭಿಮಾನಿಯಾದ ವಿಷ್ಣುವು ರಕ್ಷಿಸುವನು. ಅಹಂಕಾರಾಭಿಮಾನಿಯಾದ ರುದ್ರನು ಸಂಹರಿಸುವನು. ಬುದ್ಧಿಗೆ ಅಭಿಮಾನಿಯಾದ ಈಶ್ವರನು ಅನುಗ್ರಹಿಸುವನು. ಜ್ಞಾನಾಭಿಮಾನಿಯಾದ ಸದಾಶಿವನು ಪ್ರಾಣಿಗಳಿಗೆ ಅಜ್ಞಾನಾತ್ಮಕವಾದ ಜಗವಂ ಮರೆಮಾಡುವನು. ಹೀಗೆ ಚತುರ್ಮುಖನಿಂ ಪುಟ್ಟಿದ ಅಧಿಕಾರಮೂರ್ತಿಗಳಾದ ದೇವತೆಗಳು, ನಾರದಾದಿ ದೇವರ್ಷಿಗಳು, ಪ್ರಪಂಚರೂಪದಿಂ ಕ್ರೀಡಿಸುವ ಪರಮಾತ್ಮನ ವಿಲಾಸವಂ ನೋಡಲಿಚ್ಛೆಯುಳ್ಳ ಕೆಲವು ಜ್ಞಾನಿಗಳು ಸಹ, ತತ್ವಾಭಿಮಾನಿದೇವತೆಗಳಂತೆ ಆತಿವಾಹಿಕ ಶರೀರವುಳ್ಳವರಾಗಿ ಐಚ್ಛಿಕವಾದ ಸ್ಥೂಲಶರೀರವಂ ಕವಚದಂತೆ ವಹಿಸಿ ಲೋಕಾನುಗ್ರಹಪರಾಯಣರಾಗಿ ವಿಚಿತ್ರವಾಗಿ ಕ್ರೀಡಿಸುತ್ತಿರುವರು. ಸಮಸ್ತ ಪ್ರಾಣಿಗಳಿಗೂ ಆತಿವಾಹಿಕವೇ ಮುಖ್ಯ ಶರೀರವು. ಅದಕ್ಕೆ ಆಧಾರವಾದ್ದರಿಂದಲೆ ಪಾಂಚಭೌತಿಕವಾದ ಸ್ಥೂಲದೇಹಕ್ಕೆ ಶರೀರವೆಂದು ಪೆಸರು ಬಂದಿರುವದು.

ಯಾರಿಗೆ ಕರ್ಮಾನುಸಾರವಾಗಿ ಸ್ಥೂಲಶರೀರ ಬಂದಿರುವದೋ ಅವರು ಜ್ಞಾನಿಗ ಳಾದಾಗ್ಯು ಪ್ರಾರಬ್ಧಭೋಗಾಂತವಾಗಿ ಸ್ಥೂಲಶರೀರವಂ ವಹಿಸಿರುವರು. ಹ ಕ್ಕಿಗಳಿಗೆ ಗೂಡುಗಳಂತೆ ಆತಿವಾಹಿಕ ಶರೀರಗಳಿಗೆ ಆಧಾರವಾದ ಈ ಸ್ಥೂಲ ಶರೀರಗಳು ಭೋಗಾಯತನವಾದ್ದರಿಂದ ಬ್ರಹ್ಮಾದಿದೇವತೆಗಳೂ ಕೂಡ ಇದ ನ್ನೇ ಪಿಡಿದು ವಿಹರಿಸುತ್ತಿರುವರು. ಆದರೆ ಅವರಿಗೆ ಇರುವ ಸ್ಥೂಲಶರೀರವು ಸತ್ವಪ್ರಧಾನವಾದ್ದರಿಂದಲೂ, ಐಚ್ಛಿಕವಾದ್ದರಿಂದಲೂ, ಅವರ ಇಚ್ಛಾನುಸಾ ರಿಯಾಗಿರುವದು. ಇತರರಿಗೆ ಕರ್ಮಜವಾದ್ದರಿಂದ ಸ್ವೇಚ್ಛೆಯಿಂ ಬಿಡಲಾಗದೆ ಬಂಧಕವಾಗಿರುವದು. ಅಂತಃಕರಣಾದಿ ಸ್ಥೂಲಾಂತ ಪದಾರ್ಥಗಳಿಗೂ, ನಿರ್ಗು ಣನಾದ ಆತ್ಮನಿಗೂ ಪರಸ್ಪರಸಂಬಂಧವೇ ಅಜ್ಞಾನವೆನಿಸುವದು. ಸ್ವಸ್ವರೂಪ ಜ್ಞಾನದಿಂದೀ ಅಜ್ಞಾನವಳಿಯೆ ಸಾಯುಜ್ಯಮುಕ್ತಿಯಾಗುವದು, ಮಾರ್ಗಾಂತರ ದಿಂದಾಗುವ ಸಾಲೋಕ್ಯಾದಿಗಳಲ್ಲಿ ಕರ್ಮಜವಾದ ಶರೀರಬಂಧವು ತಪ್ಪುವದ ರಿಂದ ಆತಿವಾಹಿಕ ಶರೀರದಿಂ ದೇವಲೋಕಪ್ರಾಪ್ತಿಯಾಗುವದು. ಅಲ್ಲಾದರೂ ಜ್ಞಾನವುಂಟಾದರೆ ಸಾಯುಜ್ಯವಾಗುವದು, ಇಲ್ಲದಿದ್ದರೆ ಪುಣ್ಯಾಂತರದಲ್ಲಿ ಪುನ ರಾವೃತ್ತಿಯಾಗುವದು. ಆದ್ದರಿಂದ ಸಾಯುಜ್ಯಸಾಧನವಾಗಿ ಪುನರಾವೃತ್ತಿಯಂ ತಪ್ಪಿಸುವ ಜ್ಞಾನಮಾರ್ಗವೇ ಸರ್ವೋತ್ತಮವೆನಿಸಿಕೊಳ್ಳುವದು. ಇಲ್ಲಿ ವಿದೇಹ ಕೈವಲ್ಯಾನಂದವೂ ಕೂಡ ಸಹಜವಾಗಿ ಸಂಭವಿಸುವದ್ದರಿಂದಲೂ, ಬ್ರಹ್ಮೇತ ರಜ್ಞಾನವಿಲ್ಲದ್ದರಿಂದಲೂ, ಇದ್ದಲ್ಲಿಯೇ ಬ್ರಹ್ಮಸಾಯುಜ್ಯವುಂಟಾಗುವದು ಇದಂ ತಿರಲಿ; ಇಂತು ಪ್ರಪಂಚಸೃಷ್ಟಿಯಾಗುವಲ್ಲಿ ಪರಮಾತ್ಮನಗಿಂತ ಭಿನ್ನವಾದ್ದು ಯಾವದೊ ಜಗತ್ತು ಎಲ್ಲಿರುವದೊ ಚೆನ್ನಾಗಿ ವಿಚಾರಿಸಿ ನೋಡುವನಾಗು. ಈ ಪ್ರಕಾರ ಸ್ವೇಚ್ಛೆಯಿಂದಲೆ ಸಾಕ್ಷಿಯೆಂತಲೂ, ಈಶ್ವರನೆಂತಲೂ, ಹಿರಣ್ಯಗ ರ್ಭನೆಂತಲೂ, ವಿರಾಟೆಂತಲೂ, ದ್ರಷ್ಟೃವೆಂತಲೂ, ದೃಷ್ಟಿಯೆಂತಲೂ, ದೃ ಶ್ಯವೆಂತಲೂ, ಜೀವನೆಂತಲೂ, ಬದ್ಧನೆಂತಲೂ, ಮುಕ್ತನೆಂತಲೂ, ಸುಖಿಯೆಂ ತಲೂ, ದುಃಖಿಯೆಂತಲೂ, ವಿಚಿತ್ರವಾಗಿಯೂ, ನಾನಾಪ್ರಕಾರವಾಗಿಯೂ, ನಾ ನಾಸ್ವರೂಪವಾಗಿಯೂ, ಒಂದು ಬ್ರಹ್ಮವೇ ವಿಹರಿಸುತ್ತಿರುವಲ್ಲಿ ನಾನು, ನೀ ನು, ಅವನು, ಇವನು, ಅದು, ಇದು, ಅಂಥಾದ್ದು ಇಂಥಾದ್ದು, ಎಂಬುವದೇ ಮೊದಲಾದ ಯಾವ ವ್ಯವಹಾರಕ್ಕಾದರೂ, ಅವಕಾಶವಿರುವದೆ ಚೆನ್ನಾಗಿ ಆ ಲೋಚಿಸುವನಾಗೆಂದು ಪೇಳುತ್ತಿರುವಲ್ಲಿ ಶ್ರೀರಾಮನು ಎಲೈ ಮಹಾಮುನಿ ಯೇ! ಜೀವನು ಇಷ್ಟೆಂದು ಪರಿಮಿತಿ ಇರುವದೊ? ಜೀವರಾಶಿಯೇ ಅನಂ ತವಾಗಿರುವದೋ, ಬೆಟ್ಟದಂತೆ ಜೀವರಮೂಟೆ ಇರುವದೋ, ವರ್ಷಾಕಾಲದ

ಮೇಘದ ಧಾರೆಗಳಂತೆಯೂ, ಸಮುದ್ರದ ತುಂತುರುಗಳಂತೆಯೂ, ಕಾದ ಕಬ್ಬಿಣದ ಕಿಡಿಗಳಂತೆಯೂ, ಜೀವರು ಪೊರಮಡುವರೋ ಪೇಳಬೇಕೆಂದು ಕೇಳಲಾ ವಸಿಷ್ಠನಿಂತೆಂದನು. ಎಲೈ ರಘುವರನೇ ! ಜೀವನೊಬ್ಬನಿರುವನೆನ್ನುವದಕ್ಕೆ ಮಾರ್ಗವಿಲ್ಲದಿರುವಲ್ಲಿ, ಅನೇಕ ಜೀವರ ಪ್ರಸ್ತಾಪಕ್ಕೆ ನಿಮಿತ್ತವೇನು ? "ಮೊಲದಕೊಂಬು ಗಗನಕ್ಕೆ ಹಾರಿಹೋಯಿತೆಂಬಂತೆ" ನಿನ್ನ ಪ್ರಶ್ನೆಯು ವಿಚಿತ್ರವಾಗಿರುವದು. ಅದ್ವಿತೀಯವಾಗಿರುವ ಜ್ಞಾನರೂಪವಾದ ಬ್ರಹ್ಮವು ಜೀವನೆಂತಲೂ, ಬುದ್ಧಿಯೆಂತಲೂ, ಮನವೆಂತಲೂ, ಅದ್ವೈತವೆಂತಲೂ, ದ್ವೈತವೆಂತಲೂ, ಕಲ್ಪನಾರೂಪವಾಗಿರುವ ತನ್ನ ಸತ್ವವಂ ಹ್ಯಾಗೆ ಹ್ಯಾಗೆ ಭಾವಿಸುವದೋ, ಹಾಗೆಹಾಗೆ ಅನುಭವಿಸಿ ಸ್ವೇಚ್ಛೆಯಿಂ ತಾನೇ ಹಿಂತಿರುಗಿ ಪೂರ್ವದಂತೆ ಅಖಂಡಭಾವದಿಂ ಬೆಳಗುವದು. ಪ್ರಥಮತಃ ಹಿರಣ್ಯಗರ್ಭನೆಂಬ ನಾಮದಿಂ ಸಮಷ್ಟಿಜೀವಭಾವವಂ ಹೊಂದಿದ ಬ್ರಹ್ಮವು ಬಹುರೂಪವಾಗಬೇಕೆಂದು ಸಂಕಲ್ಪಿಸುತ್ತಾ ಇದು ಈ ಪ್ರಕಾರವಾಗಿರಬೇಕೆಂದು ವ್ಯವಸ್ಥೆಯಂ ಮಾಡಿದ್ದರಿಂದ ವ್ಯಷ್ಟಿಜೀವರುಗಳಲ್ಲಿ ಒಬ್ಬನ ಸುಖದುಃಖಾದಿಗಳಿಂದೊಬ್ಬನಿಗೆ ಸಂಬಂಧವಿಲ್ಲದಿರುವದು. ಸತ್ಯಸಂಕಲ್ಪನಾದ ಆ ಮಹಾತ್ಮನು ವ್ಯವಸ್ಥೆಯಂ ಮಾಡಿರುವಂತೆಯೇ ಸಮಸ್ತವೂ ನಡೆಯುವದೆಂದು ತಿಳಿಯುವನಾಗು. ಚೇತನಪಡಿಸುವದಕ್ಕೆ ಯೋಗ್ಯವಾದ್ದರಿಂದ ಚೈತ್ಯವೆಂದು ಪ್ರಸಿದ್ಧವಾದ ದೃಶ್ಯವಂ ಪಿಡಿದ ಬ್ರಹ್ಮವೇ ಜೀವನೆನಿಸಿಕೊಳ್ಳುವದು. ತಾನೇ ಚೇತ್ಯವಾಗಿ ತೋರುವನಲ್ಲದೆ ಈ ಚೇತ್ಯಕ್ಕೆ ಬೇರೆ ಸತ್ವವಿಲ್ಲವೆಂಬ ನಿಶ್ಚಯದಿಂ ಚೇತ್ಯವು ನಷ್ಟವಾಗಲು ಪುನಃ ಸ್ವಸ್ವರೂಪವಂ ಹೊಂದುವದು ತನ್ನ ನಿಯಮಾನುಸಾರವಾಗಿ ತಾನೇ ಸರ್ವರೂಪವಾಗಿರುವದ್ದರಿಂದ ಸರ್ವವೂ ಬ್ರಹ್ಮವೆಂತಲೇ ನಿಶ್ಚಯಿಸತಕ್ಕದು. ಎಂದು ವಸಿಷ್ಠನು ನಿರೂಪಿಸಿದ್ದನೆಂಬಲ್ಲಿಗೆ ಉತ್ಪತ್ತಿಪ್ರಕರಣದೊಳು ಜ್ಞಾನಯೋಗತರಂಗಿಣಿಯಲ್ಲಿ ಬ್ರಹ್ಮಜೀವಸ್ವರೂಪ ಜಗದುತ್ಪತ್ತಿ ನಿರೂಪಣವೆಂಬ ಎರಡನೆಯ ತರಂಗಕ್ಕೆ ಮಂಗಳಮಹಾ ಶ್ರೀ.



## ತೃತೀಯತರಂಗ ಪ್ರಾರಂಭವು.

### ಲೀಲೆಗೆ ಪೂರ್ವಜನ್ಮಸ್ಥಾನ ಪ್ರದರ್ಶನ ನಿರೂಪಣ ಪ್ರಾರಂಭವು.



ಎಲೈ ಶ್ರೀರಾಮಚಂದ್ರನೇ ! ಮನವೆಂತಲೂ, ಬುದ್ಧಿಯೆಂತಲೂ, ಅಹಂಕಾರವೆಂತಲೂ, ಇಂದ್ರಿಯಗಳೆಂತಲೂ, ಪಂಚಭೂತಗಳೆಂತಲೂ, ಜಗತ್ತೆಂ

ತಲೂ, ಪ್ರಾಣಿಗಳೆಂತಲೂ, ಸುಖದುಃಖಗಳೆಂತಲೂ, ಜನನಮರಣಗಳೆಂತಲೂ, ಬಂಧಮೋಕ್ಷಗಳೆಂತಲೂ, ಸತ್ಯಸಂಕಲ್ಪವಾದ ಬ್ರಹ್ಮವು ಹ್ಯಾಗೆಹ್ಯಾಗೆ ಸಂಕಲ್ಪಿಸಿತೋ, ಹಾಗೆಹಾಗೆತಾನೇ ಆದ್ದರಿಂದ ಜಗತ್ತಿನ ಸತ್ವವೇ ಬ್ರಹ್ಮಸ್ವರೂಪವೆಂತಲೂ, ಬ್ರಹ್ಮಸತ್ವವೇ ಜಗದ್ರೂಪವೆಂತಲೂ ನಿಶ್ಚಯಿಸಬೇಕಾಗುವದು. ಆದ್ದರಿಂದ ಜಗದ್ಬ್ರಹ್ಮಶಬ್ದಗಳು ಪರ್ಯಾಯ ಪದಗಳೆಂತಲೂ, ಆಕಾಶದಲ್ಲಿ ಕಪ್ಪಿನಂತೆ ಇಲ್ಲಿ ಭೇದವಿಲ್ಲವೆಂತಲೂ ತಿಳಿಯುವನಾಗು. ಬ್ರಂಹವು ಕಲ್ಪನೆ ಮಾಡುವ ರೀತಿಯಂ ತಿಳಿಯದೆ ಈ ಅರ್ಥವು ನಿಶ್ಚಯಿಸುವದಕ್ಕಾಗುವದಿಲ್ಲವಾದ್ದರಿಂದ ಈ ಮಂಡಪೋಪಾಖ್ಯಾನವನ್ನು ಪೇಳುವೆನು ಸಾವಧಾನದಿಂದ ಕೇಳುವನಾಗು, ಎಲೈ ರಘುವರನೇ ! ಪೂರ್ವದಲ್ಲಿ ಸಮುದ್ರದಂತೆ ಮರ್ಯಾದಾಪಾಲಕನಾಗಿ ಶತ್ರುಕುಲವೆಂಬಂಧಕಾರಕ್ಕೆ ಸೂರ್ಯನಾಗಿ ಸದ್ಗುಣಗಳೆಂಬ ಹಂಸಗಳಿಗೆ ಮಾನಸಸರೋವರ ಸ್ವರೂಪನಾಗಿ, ದೋಷಗಳೆಂಬ ತೃಣರಾಶಿಗೆ ದಾವಾನಲನಾಗಿ ಪ್ರಮದೆಯರೆಂಬ ಕುಮುದಿನಿಗಳಿಗೆ ಚಂದ್ರನಾಗಿ, ಮನವೆಂಬ ಮದ್ದಾನೆಗೆ ಸಿಹ್ಮವಾಗಿ, ಅಸುರಸಮೂಹವೆಂಬ ಸಮುದ್ರಕ್ಕೆ ಮಂದರಾದ್ರಿಯಾಗಿ, ವಿದ್ಯೆಗಳೆಂಬ ಲತೆಗಳಿಗೆ ಉದ್ಯಾನವಾಗಿ, ವಿವೇಕವಿಲಾಸಗಳೆಂಬ ಪುಷ್ಪಗಳಿಗೆ ವಸಂತನಾಗಿ, ಸೌಂದರ್ಯ ಸೌಕುಮಾರ್ಯಲಾವಣ್ಯಾದಿಗುಣಗಳಿಗೆ ಕುಸುಮಾಯುಧನಾಗಿ, ಮೇರುವಿನಂತೆ ವಿಬುಧಾಶ್ರಯನಾಗಿ, ಅರ್ಥಿಗಳಿಗೆ ಕಲ್ಪವೃಕ್ಷನಾಗಿ, ಪದ್ಮದಂತೆ ಲಕ್ಷ್ಮೀವಿಲಾಸಸ್ಥಾನವಾದ ಪದ್ಮನೆಂಬ ಮಹಾರಾಜನಿದ್ದನು.

ಭೂಮನ್ಮಥನೆಂದು ಪ್ರಸಿದ್ಧನಾದ ಆ ರಾಜೇಂದ್ರನಿಗೆ ನಿತ್ಯದರಿದ್ರರಾದ ಮನುಜರ ದುಃಖವನ್ನು ಪರಿಹರಿಸಲೋಸುಗ ಭೂಮಿಯಲ್ಲವತರಿಸಿರುವ ಲಕ್ಷ್ಮಿಯಂತೆಯೂ, ಶರೀರವನ್ನು ಧರಿಸಿ ಸೇವಾರ್ಥವಾಗಿ ಬಂದಿರುವ ಸಾಮ್ರಾಜ್ಯಲಕ್ಷ್ಮಿಯಂತೆಯೂ, ಶೃಂಗಾರರಸಕ್ಕೆ ಅಧಿದೇವತೆಯಂತೆಯೂ, ಕಲಾಶಾಸ್ತ್ರಗಳಿಗೆ ಕುಲದೇವತೆಯಂತೆಯೂ ಎರಡನೆಯ ರತಿಯಂತೆಯೂ, ತಪೋಬಲದಿಂದ ಚಪಲ ದೋಷವನ್ನು ಬಿಟ್ಟು ಭೂತಲ ವಿಲಾಸಾರ್ಥವಾಗಿ ಬಂದಿರುವ ಮಿಂಚಿನಂತೆಯೂ, ಚೈತನ್ಯವನ್ನು ಪಡದಿರುವ ಚಿನ್ನದ ಬೊಂಬೆಯಂತೆಯೂ, ತೋರುತ್ತಿರುವ ಲೀಲೆ ಎಂಬ ಪತ್ನಿಯಾದಳು. ಪಾತಿವ್ರತ್ಯಕ್ಕೆ ಅಭಿಮಾನದೇವತೆಯಂತಲೂ, ಜ್ಞಾನದಲ್ಲಿ ಸರಸ್ವತಿಯೆಂತಲೂ, ಸೌಭಾಗ್ಯದಲ್ಲಿ ಲಕ್ಷ್ಮಿಯೆಂತಲೂ, ಜನರ ಸಂರಕ್ಷಣೆಯಲ್ಲಿ ಅನ್ನಪೂರ್ಣೆಯೆಂತಲೂ, ಕೀರ್ತಿಯನ್ನು ಪಡೆದ ಆ ಲೀಲೆಯು ಛಾಯೆಯಂತೆ ಆ ಮಹಾರಾಯನನ್ನನುಸರಿಸಿಕೊಂಡಿದ್ದಳು. ಪ್ರತಿಬಿಂಬದಂತೆ ಸಮಾನವಾದ ನಡತೆಯುಳ್ಳ ಆ ದೇವಿಯು ಅವನ ಕೋಪ ಕಾಲ

ದಲ್ಲಿಮಾತ್ರ ಭೀತಳಾಗಿದ್ದಳು. ಭೂಲೋಕಾಪ್ಸರೆಯಾದ ಆ ಲೀಲೆಯೊಡನೆ ರತಿಯೊಡನೆ ಮನ್ಮಥನಂತೆಯೂ, ಶಚಿಯೊಡನೆ ಇಂದ್ರನಂತೆಯೂ, ರೋಹಿಣಿಯೊಡನೆ ಚಂದ್ರನಂತೆಯೂ, ಆ ರಾಜೇಂದ್ರನು ವಿಚಿತ್ರವಿಲಾಸಗಳಿಂ ವಿಹರಿಸುತ್ತಿರಲು, ನಿಮಿಷವಾದರೂ ಯಡೆಬಿಡದೆ ಅತಿಪ್ರೀತಿಯಿಂದಿರುವ ಆ ಪ್ರಾಣಕಾಂತನು, ಜರಾಮರಣವರ್ಜಿತನಾಗಿರಬೇಕೆಂದು ಆಲೋಚಿಸಿದ ಆ ಲೀಲೆಯು, ತಪೋಧನರಾದ ಬ್ರಾಹ್ಮಣರಂ ಕರೆಸಿ ಪರಿಪರಿಯಿಂ ಪೂಜಿಸಿ ತನ್ನಪೇಕ್ಷೆಯಂ ತಿಳುಹುವಲ್ಲಿ ಆ ಬ್ರಾಹ್ಮಣರು ಅಮರತ್ವವಲ್ಲದೆ ಮಿಕ್ಕ ಸಿದ್ಧಿಗಳೆಲ್ಲವೂ ಜಪತಪಗಳಿಂದಾಗುನವೆಂದು ಹೇಳಲು, ಪ್ರಾಣಕಾಂತನು ಶರೀರವನ್ನು ಬಿಟ್ಟಾಗ್ಯೂ ಅವನಿಗೆ ತನ್ನ ವಿಯೋಗವುಂಟಾಗದಂತೆ ಮಾಡುವೆನೆಂದು ನಿಶ್ಚಯಿಸಿ ಆ ರಾಯನಿಗೆ ತಿಳಿಯದಂತೆ ಮೂರುದಿವಸಕ್ಕೆ ಒಂದುವೇಳೆ ಆಹಾರವನ್ನು ಮಾಡುತ್ತಾ ಸರಸ್ವತಿಯನ್ನು ಕುರಿತು ತಪವಂಗೈದಳು. ಹೀಗೆ ಮುನ್ನೂರುದಿವಸವಾಗಲು, ವರ್ಣಮಯವಾದ ಅಂಗಗಳಿಂದ ಸರ್ವಶಾಸ್ತ್ರಸ್ವರೂಪಳಾದ ಆ ದೇವಿಯು ಭೂಮಿಗೆ ಇಳಿದು ಬಂದ ಚಂದ್ರಕಲೆಯಂತೆಯೂ, ಸರ್ವರಿಗೂ ಸಾಕ್ಷಿಯಾಗಿ ನಾನಿರುವೆನೆಂದು ಜನರಿಗೆ ತಿಳುಹಲೋಸುಗ ಪ್ರತ್ಯಕ್ಷವಾಗಿ ಬಂದ ಪರಮಾತ್ಮನ ಜ್ಞಾನಶಕ್ತಿಯಂತೆಯೂ, ಬಾಹ್ಯಾಂತಸ್ಸಂತಾಪಗಳನ್ನು ಹೋಗಲಾಡಿಸುತ, ದೃಷ್ಟಿಗೆ ಗೋಚರವಾಗಲು, ಆ ಲೀಲೆಯು ಸಕಲಶಾಸ್ತ್ರಸಾರಾತ್ಮಕವಾದ ವಿಗ್ರಹವುಳ್ಳ ಆ ವಾಗ್ದೇವಿಯಂ ಕಂಡು, ಪ್ರಹರ್ಷ ಭಯಭಕ್ತಿಗಳಿಂದ ಝುಗ್ಗನೆ ಸಿಜಾಸನದಿಂದೆದ್ದು ಕುಳಿತುಕೊಳ್ಳುವ ಆನೆಯಂತೆ ಪ್ರಣಾಮವಂಗೈದು, ಬದ್ಧಾಂಜಲಿಯಾಗಿ ನಿಂತು ಪೂರ್ಣ ಚಂದ್ರನ ಪ್ರಭೆಯು ಬಿಸಿಲಿನ ತಾಪವನ್ನು ಹೋಗಲಾಡಿಸುವಂತೆ ಜನನಮರಣದುಃಖವನ್ನು ಹೋಗಲಾಡಿಸುವ ಅಖಂಡಾನಂದ ಮೂರ್ತಿಯೆ ! ಸರ್ವೋತ್ತಮಳಾಗಿರುವಳಾಗು. ಸೂರ್ಯಪ್ರಭೆಯು ಅಂಧಕಾರವಂ ಪರಿಹರಿಸುವಂತೆ ಅಜ್ಞಾನವಂ ಪರಿಹರಿಸುವ ಶುದ್ಧಜ್ಞಾನಮೂರ್ತಿಯೇ! ಸರ್ವೋತ್ತಮಳಾಗಿರುವಳಾಗು. ಜರಾಮರಣಭೀತಿಯಂ ತಾಳಲಾರದೆ ಶರಣಾಗತಳಾಗಿರುವ ನನ್ನಂ ಸಂರಕ್ಷಿಸುವಳಾಗೆಂದು ಪ್ರಾರ್ಥಿಸುತ್ತಿರಲಾಗ, ಆ ವಾಗೀಶ್ವರಿಯು ಎಲೌ ಬಾಲೆಯೇ ! ನಿನಗೆ ಬೇಕಾದ ವರವಂ ಬೇಡಿಕೊಳ್ಳುವಳಾಗೆಂದು ನುಡಿಯಲು ಆ ಲೀಲೆಯು ಎಲೌ ದೇವಿಯೇ ! ನನ್ನ ಪ್ರಾಣಕಾಂತನ ಇದುರಿಗೆ ನನಗೆ ಪ್ರಾಣವಿಯೋಗವಾದರೆ ನನ್ನ ಪುಣ್ಯಕ್ಕೆ ಸರಿಯಿಲ್ಲ, ಒಂದುವೇಳೆ ಆತನಿಗೆ ಹೀಗಾದರೆ ಆತನು ನನ್ನ ವಿಯೋಗವಂ ಸಹಿಸಲಾರನಾದ್ದರಿಂದ ಈ ನನ್ನ ಲೀಲಾಮಂಟಪದಲ್ಲೆ ಮನ್ಮಥನಂತೆ ಅನಂಗನಾಗಿರುತ್ತಾ ನನ್ನಂ ನೋಡು

ತ್ತಿರಲಿ. ಯಾವಾಗ ನಿನ್ನಂ ನಾನು ಸ್ಮರಿಸುವೆನೋ, ಆಗ ನೀನು ದರ್ಶನವಂ ಕೊಡಬೇಕೆಂದು ಎರಡು ವರಗಳಂ ಬೇಡಿಕೊಳ್ಳಲು ಆ ಜಗಜ್ಜನನಿಯು ಹಾಗೆಯೆ ಆಗಲೆಂದು ಪೇಳಿ ಅಂತರ್ಧಾನವಾದಳು. ಬಳಿಕ ಅನೇಕ ವರ್ಷಗಳು ಆ ದಂಪತಿಗಳು ಅಸಮಾನವಾದ ಸುಖವನ್ನನುಭವಿಸುತ್ತಿರುವಲ್ಲಿ ಆ ಪದ್ಮರಾಜನು ಮನಃಕಲ್ಪಿತವಾದ ಯುದ್ಧದಲ್ಲಿ ಶತ್ರುವಿನಿಂ ಕತ್ತರಿಸಲ್ಪಟ್ಟು ಶರೀರವಂ ಬಿಟ್ಟವನಂತೆಯು, ಅನವರತ ಸಮಾಗಮಸೌಖ್ಯದಿಂ ಸೊಕ್ಕಿದವನಂತೆಯೂ, ಇದ್ದಕ್ಕಿದ್ದಹಾಗೆ ಪ್ರಾಣವಂ ಬಿಡಲು ಹೀಗೆ ಅನಾಯಾಸ ಮರಣವಾಗುವದು ಮಹಾಯೋಗಿಗಲ್ಲದೆ ಸಾಧಾರಣರಿಗೆ ಆಗಲಾರದೆಂದು ಜನಗಳು ಆಶ್ಚರ್ಯಪಡುತ್ತಿರಲು, ಪ್ರಾಣಕಾಂತನ ಆ ಅವಸ್ಥೆಯನ್ನೂ ಕೂಡ ಅನುಸರಿಸಿದವಳಂತೆ ಲೀಲೆಯೂ ಶೋಕ ಮೋಹದಿಂದ ಸ್ತಬ್ಧವಾಗಿರಲು ಆ ಲೀಲೆಯು ದೀಪವಿಲ್ಲದ ಮನೆಯ ಶೃಂಗಾರದಂತೆ ಅದೃಶ್ಯವಾದದ್ದೂ, ಯಾವಳು ಪ್ರಾಣಕಾಂತನು ಕಾರ್ಯವಿಶೇಷದಿಂ ಹೊರಹೊರಡುವನೆಂದು ಮನಸ್ಸಿಗೆ ತೋರುವಲ್ಲಿಯೆ ಕೃಶಳಾಗುವಳೋ ಆ ಸುಶೀಲೆಯಾದ ಲೀಲೆಗೆ ಆ ಕಾಂತನು ಈ ಲೋಕವಂ ಬಿಟ್ಟುಹೋದುದಂ ನೋಡುತ್ತಿದ್ದಾಗ್ಯೂ ಪ್ರಾಣಗಳು ಶರೀರದಲ್ಲಿ ಇದ್ದವೆಂಬುವದೆ ಅತ್ಯಾಶ್ಚರ್ಯವಾದದ್ದು. ಹೀಗಿರುವಲ್ಲಿ ಮಂತ್ರಿ ಪುರೋಹಿತರು ಉತ್ತರ ಕಾರ್ಯಾಲೋಚನೆಯಂ ಮಾಡುತ್ತಿರಲು ಎಲ್ಲರೂ ಕೇಳುವಂತೆ ಆಗ ಆಕಾಶವಾಣಿಯುಂಟಾದುದು. ಎಲೌ ಬಾಲೆಯಾದ ಲೀಲೆಯೇ ! ನಿನ್ನ ಸೌಮಂಗಲ್ಯಕ್ಕೆ ಭಂಗ ಬರುವದಿಲ್ಲ. ಶವವಾಗಿರುವ ಈ ರಾಯನ ಶರೀರವಂ ಪುಷ್ಪರಾಶಿಯಲ್ಲಿ ಮಡಗಿಸುವಳಾಗು. ಇದಕ್ಕೆ ಪುನಃ ಪ್ರಾಣಬರುವದು. ಪುಷ್ಪಗಳೂ ಬಾಡುವದಿಲ್ಲ. ನಿನ್ನ ಕಾಂತನ ಚೈತನ್ಯವು ನಿನ್ನ ಮಂಟಪದಲ್ಲಿಯೇ ಇರುವದು. ಎಂದು ಆಕಾಶವಾಣಿಯಾದುದಂ ಕೇಳಿದ ಮಂತ್ರಿ ಪುರೋಹಿತ ಮೊದಲಾದವರು ಎಲೌ ದೇವಿಯೆ ! ನಿನ್ನ ಪಾತಿವ್ರತ್ಯಕ್ಕೆ ಸಮಾನವಿಲ್ಲ, ಪಾರ್ವತಿಯಂತೆ ಸರ್ವಮಂಗಳೆಯಾದ ನಿನ್ನ ಸೌಮಂಗಲ್ಯವು ಶಾಶ್ವತವಾದದ್ದೆಂದು ಲೀಲೆಯಂ ಶ್ಲಾಘಿಸುತ್ತಾ, ಆ ಪದ್ಮರಾಯನ ಶರೀರವಂ ಪುಷ್ಪತಲ್ಪದಲ್ಲಿಡಿಸಿದರು. ಬಳಿಕ ಆ ರಾಯನ ಶರೀರದಲ್ಲಿ ಚೈತನ್ಯದಂತೆ ಸೂರ್ಯನು ಅಸ್ತಮಾಗಲು ಆಕಾಶವಾಣಿಯ ನಂಬಿಕೆಯಿಂದ ಚಿತ್ತಸ್ವಾಸ್ಥ್ಯವಂ ಪಡೆದ ಜನರು ಸುಖದಿಂ ನಿದ್ರೆಗೈಯುತ್ತಿರಲು ಪೂರ್ವದಂತೆಯೇ ಕಾಂತಿಯುಕ್ತವಾದ ಆ ಕಾಂತನ ಶರೀರವಂ ನೋಡುತ್ತಿದ್ದಾಗ್ಯೂ ಆ ಶರೀರದಲ್ಲಿ ಶ್ವಾಸವಂ ಕಾಣದ ಲೀಲೆಯು ಲೀಲಾಸಂಕಲ್ಪಗಳಿಲ್ಲದಿದ್ದರೂ, ತರಳವಾದ ಹೃದಯವುಳ್ಳವಳಾಗಿ ದುಃಖವಂ ಸಹಿಸಲಾರದೆ ಶಾರದೆಯಂ ಸ್ಮರಿಸಿದಳು.

ತತ್‌ಕ್ಷಣದಲ್ಲಿಯೇ ಪ್ರತ್ಯಕ್ಷಳಾಗಿ ಬಂದ ಆ ದೇವಿಯು ಎಲೌ ಬಾಲೆಯೇ! ಬಿಸಿಲುದೊರೆಯುಂತಿರುವ ಈ ಸಂಸಾರದಲ್ಲಿ ಹುಲ್ಲೆಯುಂತೆ ಏಕೆ ಭ್ರಮೆಪಡುತ್ತಿರುವೆ ಎಂದು ಕೇಳಲು, ಎಲೌ ಜಗದಂಬಿಕೆಯೇ! ನನ್ನ ಪ್ರಾಣಕಾಂತನು ಎಲ್ಲಿರುವನು? ಏನು ಮಾಡುತ್ತಿರುವನು? ಅವನಂ ಸಮೀಪವಂ ನನ್ನನ್ನು ಹೊಂದಿಸುವಳಾಗು. ಗಿಳಿಯಂ ಬಿಡಲ್ಪಟ್ಟ ಪಂಜರದಂತೆಯೂ, ಎಜಮಾನನಿಲ್ಲದ ಮನೆಯುಂತೆಯೂ, ದೇವರಿಲ್ಲದ ಗುಡಿಯುಂತೆಯೂ, ನಿಶ್ಶಬ್ದವಾದ ಈ ಶರೀರವಂ ನೋಡಲಾರೆನು. ಯಾವದನ್ನು ನಾನು ಅತಿಪ್ರೀತಿಯಿಂದ ಆಲಿಂಗಿಸುತಿದ್ದೆನೊ, ಆ ಈ ಶರೀರವನ್ನೀಗ ಒಬ್ಬಳೇ ನೋಡುವದಕ್ಕೆ ಭಯಪಡುತಿದೇನೆ. ಎಂದು ಕಂದಿದ ಮೊಗದಿಂದಲೂ, ನೊಂದ ಹೃದಯುದಿಂದಲೂ, ಭಿನ್ನಳಾಗಿ ಬಿನ್ನೈಸುವ ಆ ಲೀಲೆಯು ವಚನವನ್ನು ಲಾಲಿಸಿ ವಾಗ್ದೇವಿಯು ಹೇಳಿದಳದೆಂತೆನೆ.

ಎಲೌ ಭಾಲೆಯೇ! ದೃಶ್ಯಪದಾರ್ಥಗಳ ಮಧ್ಯಭಾಗದಲ್ಲಿ ಅವಕಾಶರೂಪದಿಂ ಪ್ರಕಾಶಿಸುವ ಈ ಆಕಾಶಕ್ಕಿಂತಲೂ, ಅಧಿಕವಾಗಿ ಚಿತ್ತಾಕಾಶವೆಂತಲೂ, ಚಿದಾಕಾಶವೆಂತಲೂ ಎರಡು ಆಕಾಶಗಳಿರುವವು. ಚಿದಾಕಾಶವಲ್ಲಿ ಈ ಎರಡು ಆಕಾಶಗಳು ಅಭಿನ್ನವಾಗಿರುವದರಿಂದ ಅದಕ್ಕಿದು ಬೇರೆಯಾಗಿಲ್ಲವೆಂದು ಹೇಳುವರು. ಆ ಚಿದಾಕಾಶವು ಭಾವಿಸಿದಂತೆ ಇಲ್ಲದ ಪದಾರ್ಥವುಕೂಡ ಗೋಚರವಾಗಿ ಅನುಭವಿಸಲ್ಪಡುವದು. ಈ ಚಿದಾಕಾಶವು ಸಮಸ್ತ ಪದಾರ್ಥಗಳಲ್ಲೂ, ಸೂತ್ರಪ್ರಾಯವಾಗಿರುವದು. ದೂರದಲ್ಲಿರುವ ಪದಾರ್ಥಗಳಲ್ಲಿ ಒಂದರಿಂದ ಮತ್ತೊಂದು ಪಿಡಿಯುವ ಜ್ಞಾನಕ್ಕೆ ವಿಚ್ಛಿತ್ತಿ ಇಲ್ಲದೆ ಗತಿಯುಂಟಾಗಲೊಸುಗ ಮಧ್ಯಭಾಗದಲ್ಲಿ ಆಧಾರವಾಗಿರುವ ಸ್ವರೂಪಜ್ಞಾನವೇ ಚಿದಾಕಾಶವೆನಿಸುವದು. ದೂರದಲ್ಲಿರುವ ಜ್ಞೇಯವಾದ ವಸ್ತುವನ್ನು ಜ್ಞಾತೃವೆನಿಸುವ ತನ್ನನ್ನು ಬಿಟ್ಟು ಮಧ್ಯದಲ್ಲಿರುವ ಜ್ಞಾನದ ಸ್ಥಿತಿರೀತಿಗಳಂ ನೋಡುವಲ್ಲಿ ಚಿದಾಕಾಶಸ್ವರೂಪವು ಗೊತ್ತಾಗುವದು. ಅದೇ ತಾನೆಂದು ನಿಶ್ಚಯಿಸುತ ಬಾಹ್ಯಪದಾರ್ಥಸಂಕಲ್ಪಗಳೆಲ್ಲವನ್ನೂ ಬಿಟ್ಟು ಆ ಚಿದಾಕಾಶವಲ್ಲಿಯೇ ನೀನು ಸ್ಥಿತಿಯಂ ಪಡೆಯುವೆಯಾದರೆ, ಸರ್ವಾತ್ಮಕವಾದ ಪರತತ್ವವು ಸಿದ್ಧವಾಗುವದು. ನಿನ್ನಕಾಂತನಿರುವದು ಸಹ ಗೋಚರವಾಗುವದು. ದೃಶ್ಯ ಪದಾರ್ಥಗಳ ಸತ್ವವಂ ವಿಚಾರಿಸುತ್ತಾ, ಬೇರೆ ಸತ್ವವಿಲ್ಲದ ದೃಶ್ಯ ಪದಾರ್ಥಗಳೆಲ್ಲವನ್ನೂ ಬಿಟ್ಟು ಸತ್ವಕ್ಕೆ ಮುಖ್ಯಾಧಾರವಾದ ದೃಕ್ಪದಾರ್ಥವಂ ಪಿಡಿಯುವೆಯಾದರೆ, ಜಗತ್ತಿನ ಅತ್ಯಂತಾಭಾವಜ್ಞಾನ ವುಂಟಾಗುವದು. ಅವಶಿಷ್ಟವಾದ ಸ್ವರೂಪವಲ್ಲಿ ನಿಂತವರಿಗೆ ವಿಶಿಷ್ಟಸಿದ್ಧಿಗಳೂ ಆಗುವವು. ಇಂತಹ ನಿರ್ವಿಕಲ್ಪಸಮಾಧಿಯು ನನ್ನ ಅನುಗ್ರಹದಿಂ

ನಿನಗೆ ಶೀಘ್ರವಾಗಿ ಸಿದ್ಧಿಸುವದು ಎಂದು ವಾಗ್ದೇವತೆಯು ಹೇಳಿ ಮರೆಯಾಗಲು ಪದ್ಮಾಸನದಲ್ಲಿ ಕುಳಿತು ದೃಶ್ಯಪದಾರ್ಥಗಳೆಲ್ಲವನ್ನೂ ಬಿಟ್ಟು ಕಳೆಯುತ ಲೀಲೆಯು ಲೀಲೆಯಿಂದಲೇ ನಿರ್ವಿಕಲ್ಪ ಸಮಾಧಿಯಂಪಡದಳು. ಪಂಜರದಿಂದ ಹಾರಿ ಗಗನವಂ ಸೇರಿದ ಪಕ್ಷಿಯಂತೆ ಅಂತಃಕರಣ ಪಂಜರವಾದ ದೇಹವಂ ಬಿಟ್ಟ ಆ ಲೀಲೆಯು ಚಿದಾಕಾಶವಂ ಶೇರಿ ಭೂಲೋಕದಿಂದ ಹಿಂತಿರುಗಿದ ಅಪ್ಸರೆಯು ಇಂದ್ರನ ಸಭೆಯಂ ಹೊಂದುವಂತೆ ತನ್ನ ಕಾಂತನ ಸಭಾಮಂಟಪವನ್ನು ಸೇರಿ ಅಲ್ಲಿ ಸಿಹ್ಮಾಸನದ ಮೇಲೆ ಕುಳಿತು ರಾಜ್ಯಭಾರವಂ ಮಾಡುತ್ತಿರುವ ತನ್ನ ಪ್ರಾಣಕಾಂತನನ್ನು, ಪೂರ್ವದಂತೆ ಸಿದ್ಧವಾಗಿರುವ ಸಕಲ ಪರಿವಾರವನ್ನೂ, ಪೂರ್ವದ್ವಾರದಲ್ಲಿ ಶ್ರೇಯಃಪ್ರಾರ್ಥನೆಯಂ ಮಾಡುತ್ತಿರುವ ಮಹರ್ಷಿಬ್ರಹ್ಮರ್ಷಿಗಳ ಸಮೂಹವನ್ನೂ ದಕ್ಷಿಣದ್ವಾರದಲ್ಲಿ ಆಜ್ಞಾಪ್ರತೀಕ್ಷಕರಾದ ರಾಜಶ್ರೇಷ್ಠರ ಮಂಡಲವನ್ನೂ, ಪಶ್ಚಿಮದ್ವಾರದಲ್ಲಿ ವಿನೋದ ಸಮಯವನ್ನು ನಿರೀಕ್ಷಿಸುತ್ತಿರುವ ವಿಲಾಸಿನೀಕುಲವನ್ನೂ, ಉತ್ತರದ್ವಾರದಲ್ಲಿ ಸನ್ನದ್ಧರಾಗಿರುವ ಸೇನಾಪತಿಗಳ ಸಮುದಾಯವನ್ನೂ, ಮಧ್ಯಭಾಗದಲ್ಲಿ ತಮ್ಮ ಅಪರಾಧಗಳನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಿರುವ ಶತ್ರುರಾಜರನ್ನೂ ನೋಡುತ್ತಾ ಆ ಪ್ರಾಣಕಾಂತನು ತನ್ನನ್ನೆಲ್ಲಿ ಕಾಣುವನೋ, ಏನನ್ನುವನೋ, ಎಂದು ಭಯದಿಂದ ಆತನು ಕಾಣದಂತೆ ಸಿಹ್ಮಾಸನದ ಸಮಿಾಪವನ್ನೈದಿ ಒಬ್ಬ ದೂತನು ಹೇಳಿದದಕ್ಷಿಣದೇಶ ಯುದ್ಧಕ್ರಮವನ್ನೂ, ಮತ್ತೊಬ್ಬನು ಪೇಳಿದ ದಿಗಂತವೃತ್ತಾಂತವನ್ನೂ, ಲಂಕಾದೂತನು ಪೇಳಿದ ರಾಕ್ಷಸವ್ಯಾಪಾರವನ್ನೂ, ಅಲಕಾಪುರದಿಂ ಬಂದವನು ಪೇಳಿದ ಯಕ್ಷಚರಿತ್ರವನ್ನೂ, ಪಶ್ಚಿಮ ಸಮುದ್ರದಿಂದ ಬಂದಿರುವನು ಪೇಳುವ ಅಸ್ತಮಯಕ್ರಮವನ್ನೂ, ಪೂರ್ವಸಮುದ್ರದಿಂದ ಬಂದ ಚಾರನು ವರ್ಣಿಸಿದ ಮಹೇಂಧ್ರ ಪರ್ವತದಲ್ಲಿರುವ ಸಿದ್ಧರು ಪೇಳಿದ ಗಂಗಾವೃತ್ತಾಂತವನ್ನೂ, ಕೇಳುತ ಕರ್ಣಾಟ, ಸೌರಾಷ್ಟ್ರ, ಮಾಳವದೇಶಾಧಿಪತಿಯ ಮುಖದಿಂದ ಪೂರ್ವೋತ್ತರಪಶ್ಚಿಮದೇಶಗಳಲ್ಲಿ ತನ್ನ ಜಯಧ್ವಜವಂ ಸ್ಥಾಪಿಸಿ, ದೂತಮಾತ್ರದಿಂದ ಜಯಿಸಲ್ಪಟ್ಟ ದಕ್ಷಿಣದೇಶವುಳ್ಳವನಾಗಿ, ಕೀರ್ತಿಪ್ರತಾಪಗಳಿಂ ಜಗವಂ ಬೆಳಗುವ ಆ ಮಹಾರಾಜನ ದರ್ಶನದಿಂದುಂಟಾದ ಸಂತೋಷ ಕುತೂಹಲಾತಿಶಯದಿಂದವನ ಸಮಿಾಪವಂ ಹೊಂದಿ ಆಗಲೂ ಆತನು ತನ್ನಂ ಕಾಣದಿರುವದನ್ನೂ, ಅವನು ಪೂರ್ವದ ಜರಾವಿಕಾರವಿಲ್ಲದೆ ಷೋಡಶವರ್ಷಕುಮಾರನಾಗಿರುವದನ್ನೂ, ನೋಡಿ ಆಶ್ಚರ್ಯಪಡುತ್ತಾ ಸುತ್ತುಮುತ್ತಲು ತಿರಗುತ್ತಾ ಒಬ್ಬರೂ ತನ್ನಂ ಕಾಣದಿರುವದಂನೋಡಿ ಅತ್ಯಂತ ವಿಸ್ಮಿತಳಾಗಿ

ಹುಡುಗರು ಮೊದಲಾಗಿ ಸಮಸ್ತ ಜನರೂ ಪೂರ್ವದಂತೆ ಅಲ್ಲಿರುವದಂ ಕಂಡು ನನ್ನ ಗಂಡನಂತೆ ಸಮಸ್ತರೂ ಮೃತರಾದರೊ, ಎಂದು ಚಿಂತಿಸುತ್ತಾ ಬಹಿರ್ಮುಖ ಚಿತ್ತಳಾಗಿ ಸಭಾಜನರೆಲ್ಲರನ್ನೂ ನೋಡಲಿಚ್ಛೈಸಿ ಎಲ್ಲರನ್ನೂ ಕರತರುವಂತೆ ಪರಿಜನಕ್ಕೆ ಆಜ್ಞಾಪಿಸಲು ಆಗ ಅರ್ಧರಾತ್ರಿಯೊಳ್ ಅಲ್ಲಿಯ ಆಶ್ಚರ್ಯಕ್ರಮವನ್ನು ನೋಡಲೋಸುಗ ಬಂದ ನಕ್ಷತ್ರಗಳಂತೆ ಬೆಳಗುವ ದೀಪಗಳಿಂದ ಸಭಾಂಗಣವು ಪ್ರಕಾಶಿಸುತ್ತಿರಲು, ಸೃಷ್ಟ್ಯಾದಿಯಲ್ಲಿ ಸಮುದ್ರವಂ ಸೇರುವ ನದಿಗಳಂತೆ ಜನಗಳೂ, ದಿಕ್ಪಾಲಕರಂತೆ ಸೇನಾಪತಿಗಳೂ, ಅಧಿಕಾರಿಜನಗಳೂಸಹ ಬರುತ್ತಿರಲು ನಿಮಿಷಮಾತ್ರದಲ್ಲಿ ಸುಧರ್ಮೆಯಂತೆ ವಿಬುಧರಿಂದ ಪೂರ್ಣವಾಗಿ ಶೋಭಿಸುತ್ತಿರುವ ರಾಜಸಭೆಯಲ್ಲಿ ಸಿಹ್ಮಾಸನದ ಸಮೀಪದಲ್ಲಿ ಕಟ್ಟಿರುವ ತೆರೆಯಲ್ಲಿ ರತ್ನಮಯವಾದ ಆಸನದಲ್ಲಿ ಕುಳಿತ ಲೀಲಾದೇವಿಯು ಸಮಸ್ತ ಸಭಾಜನರ ಕ್ಷೇಮವಂ ವಿಚಾರಿಸಿ ಎಲ್ಲರೂ ಸುಖದಿಂದಿರುವದಂ ತಿಳಿದು ಪ್ರಿಯವಿರಹಖಿನ್ನಳಾದ ನಾನು ನಿಮ್ಮ ದರ್ಶನದಿಂದ ಕಾಲಕ್ಷೇಪವಂ ಮಾಡಲೋಸುಗ ನಿಮ್ಮನ್ನು ಕರಸಿದೆನೆಂದು ಪೇಳುತ್ತಾ ಆ ಜನವೆಲ್ಲವನ್ನೂ ಸಮಾಧಾನಪಡಿಸಿ ಕಳುಹಿ, ಅಂತಃಪುರದೊಳು ರಾಯನ ಶರೀರವಂ ಮಡಗಿರುವ ತನ್ನ ಲೀಲಾಮಂಟಪವಂಸೇರಿ ಸ್ಮರಣಮಾತ್ರದಿಂದ ಪ್ರತ್ಯಕ್ಷವಾಗಿ ಬಂದ ಸರಸ್ವತಿಯಂ ನಮಸ್ಕರಿಸಿ ತನ್ನ ಭದ್ರಾಸನದೊಳು ಕುಳ್ಳಿರಿಸಿ ಆ ದೇವಿಯ ಆಜ್ಞೆಯಿಂದ ತಾನು ಎದುರಾಗಿ ಕುಳಿತು, ಎಲೌ ಜಗದಂಬಿಕೆಯೇ ! ನಿನ್ನ ಅನುಗ್ರಹದಿಂದ ನಿರ್ವಿಕಲ್ಪಸಮಾಧಿಯನ್ನು ಹೊಂದಿದ ನಾನು ಚಿದಾಕಾಶವಲ್ಲಿ ಈ ಜಗವೆಲ್ಲವನ್ನೂ ಪ್ರತಿಬಿಂಬದಂತೆ ನೋಡಿದೆನು. ಇವುಗಳಲ್ಲಿ ಯಾವದು ಕೃತ್ರಿಮವೋ ; ಯಾವದು ಯಥಾರ್ಥವೊ, ಹೇಳಬೇಕೆನಲು ಆಗ ಸರಸ್ವತಿಯು ಈ ಸರ್ಗಸೃಷ್ಟಿಗಳಲ್ಲಿ ಯಾವದು ಕೃತ್ರಿಮವೆಂತಲೂ, ಯಾವದು ಅಕೃತ್ರಿಮವೆಂತಲೂ ತಿಳಿದಿದ್ದೀಯೋ ಹೇಳೆಂದು ಕೇಳಲು, ಈಗ ನನ್ನ ಕಾಂತನಿರುವ ಸರ್ಗವು ಕೃತ್ರಿಮವೆಂತಲೂ, ಅವನಿಲ್ಲದ ಈ ಸರ್ಗವು ಅಕೃತ್ರಿಮವೆಂತಲೂ, ತಿಳಿದಿರುವೆನೆಂದು ಲೀಲೆಯು ಪೇಳಲು, ಕೃತ್ರಿಮವಾದ ಸರ್ಗಕ್ಕೆ ಕಾರಣವಿರುವುದೋ ಇಲ್ಲವೋ ? ಇಲ್ಲದಿದ್ದರೆ ಕಾರ್ಯವೂ ಇಲ್ಲದಿರಬೇಕಾಗುತ್ತದೆ. ಇದೆಯೆಂದರೆ ಕಾರಣವೇನೆಂದು ತಿಳಿಯುತ್ತೀಯೆ ? ಪಾಂಚಭೌತಿಕಕ್ಕೆ ಪಾಂಚಭೌತಿಕವೇ ಕಾರಣವಾಗತಕ್ಕದಾದುರಿಂದ ಅಕೃತ್ರಿಮವಾದ ಈ ಸರ್ಗವೇ ಕಾರಣವೆಂದರೆ, ಕಾರ್ಯವು ಕಾರಣಕ್ಕೆ ಭಿನ್ನವಾಗಲಾರದಾದುರಿಂದ ಆ ಸರ್ಗವೂ ಯಥಾರ್ಥವಾಗಬೇಕಾಗುತ್ತದೆ. ಎಂದು ಸರಸ್ವತಿಯು ಕೇಳಲು ಕಾರಣಕ್ಕೆ ಸರಿಯಾದ ಕಾರ್ಯವೇ ಹು

ಟ್ಟುವದೆನ್ನುವದರಲ್ಲಿ ನಿಯಮವೇನು ? ನೀರುಹಿಡಿಯಲಾರದ ಮಣ್ಣಿನ ಮುದ್ದೆ ಯಿಂದ ನೀರು ಹಿಡಿಯುವ ಗಡಿಗೆಗಳು ಹುಟ್ಟುವದಿಲ್ಲವೇ ಎಂದು ಲೀಲೆಯು ಕೇಳಲು, ಸಹಕಾರಿಕಾರಣಗಳಿಂದಲೇ ಮುಖ್ಯ ಕಾರಣಕ್ಕೆ ಭಿನ್ನವಾದ ಗುಣ ವಿಶೇಷವುಳ್ಳ ಕಾರ್ಯವು ಹುಟ್ಟುವದು. ಈ ದೇಹವನ್ನೇ ಬಿಟ್ಟುಹೋಗುವಲ್ಲಿ ಈ ಪಾಂಚಭೂತಗಳಿಂದ ಹುಟ್ಟಿದ ಕೃತ್ರಿಮ ಪ್ರಪಂಚವು ಹೇಗೆ ಗೋಚರವಾದೀತು ? ಆದುದರಿಂದ ಈ ಸರ್ಗವು ಅದಕ್ಕೆ ಕಾರಣವೆನ್ನುವದಕ್ಕೆ ಆಗುವದಿಲ್ಲ. ಆ ಸರ್ಗಕ್ಕೆ ಮುಖ್ಯ ಕಾರಣವ್ಯಾವುದು? ಸಹಕಾರಿಕಾರಣಗಳಾವುದೆಂದು ಸರಸ್ವತಿಯು ಕೇಳಲು ಸ್ವಪ್ನ ಪ್ರಪಂಚಕ್ಕೆ ಸ್ಮೃತಿಯು ಹೇಗೆ ಕಾರಣವೋ ಹಾಗೆ ಪ್ರಾಣಕಾಂತನಿದ್ದ ಸರ್ಗಕ್ಕೆ ಸ್ಮೃತಿಯೇ ಕಾರಣವಾಗುವುದೆಂದು ಲೀಲೆಯು ಪೇಳಲು, ಸ್ಮೃತಿಯು ಆಕಾಶರೂಪವಾದುದರಿಂದ ಅದರಿಂದುಂಟಾಗುವ ಸ್ವಪ್ನದಂತೆ ನಿನ್ನ ಕಾಂತನಿದ್ದ ಸರ್ಗವು ಆಕಾಶಾತ್ಮಕವೆಂದು ತಿಳಿಯುವಳಾಗು ಎಂದು ಸರಸ್ವತಿಯು ಹೇಳಲು ಹೀಗಾದ ಬಳಿಕ ಅಕೃತ್ರಿಮವೆನಿಸುವ ಈ ಸರ್ಗವು ಏಕೆ ಸ್ಮೃತ್ಯಾತ್ಮಕವಾಗಬಾರದೆಂದು ಲೀಲೆಯು ಕೇಳಲು ನೀನು ಪೇಳಿದಂತೆ ಈ ಪ್ರಪಂಚವು ಸ್ಮೃತಿಜನಿತವಾದುದರಿಂದ ಸ್ವಪ್ನ ಪ್ರಪಂಚದಂತೆ ಯಥಾರ್ಥವಲ್ಲವೆಂದು ನಾನು ತಿಳಿಯುತ್ತೇನೆಂದು ಸರಸ್ವತಿಯು ಪೇಳಲು ಎಲೌ ಜಗನ್ಮಾತೆಯೇ! ನನಗೆ ಜಗದ್ಭ್ರಮೆಯು ತಪ್ಪುವಂತೆ ಇದರ ಉತ್ಪತ್ತಿಯನ್ನು ಹೇಳೆಂದು ಲೀಲೆಯು ಬೆಸಗೊಳ್ಳಲು ಸರಸ್ವತಿಯು ಇಂತೆಂದಳು.

ಎಲೌ ಲೀಲೆಯೇ ! ಚಿದಾಕಾಶದ ಒಂದು ಪ್ರದೇಶದಲ್ಲಿ ಆಕಾಶದಲ್ಲಿ ಕಪ್ಪಿನಂತೆ ಸಂಸಾರವೆಂಬ ಹಳೆಯಮಂಟಪವಿರುವದು. ಅದಕ್ಕೆ ಆಧಾರವಾಗಿರುವ ಮೇರುಪರ್ವತವೆಂಬ ಮೂಲಸ್ತಂಭದಲ್ಲಿ ಪ್ರಾಣಿಗಳೆಂಬ ಬೊಂಬೆಗಳಿಂ ಕೂಡಿದ ಹದಿನಾಲ್ಕು ಲೋಕಗಳು ಕೆತ್ತಲ್ಪಟ್ಟಿರುವವು. ಅನೇಕ ಪುತ್ರರುಳ್ಳ ಬ್ರಹ್ಮರೆಂಬ ವೃದ್ಧಬ್ರಾಹ್ಮಣರಿಂದಲೂ, ಆಕಾಶದ ಕಪ್ಪಿನಲ್ಲಿ ಸೇರಿಕೊಂಡಿರುವ ಸಿದ್ಧರೆಂಬ ಸೊಳ್ಳೆಗಳಿಂದಲೂ, ಜೀವಗಳೆಂಬ ತೆರಳೆ ಹುಳಗಳಿಂದಲೂ, ವಾಯುಮಾರ್ಗಗಳೆಂಬ ಬಿದಿರುಗಳಲ್ಲಿ ಸೇರಿಕೊಂಡಿರುವ ವೈಮಾನಿಕರೆಂಬ ಚಿಟ್ಟೆ ಹುಳಗಳಿಂದಲೂ, ಸರ್ವದಾ ಜಗಳವಾಡುತ್ತಿರುವ ಸುರಾಸುರರೆಂಬ ಹುಡುಗರಿಂದಲೂ, ತೇಜೋಗ್ರಹಗಳೆಂಬ ಮಿಂಚುಹುಳಗಳಿಂದಲೂ, ತನ್ನ ನಾಭಿಯಲ್ಲಿರುವ ಕರ್ಮಗುಣಗಳಿಂ ಸುತ್ತಮುತ್ತಲೂ ಕಟ್ಟಿ ಅದಕ್ಕೆ ಸಿಲುಕಿದ ಪ್ರಾಣಿಗಳಿಂ ತಿನ್ನುತ್ತಿರುವ ಕಾಲನೆಂಬ ಜಾಡನಹುಳುವಿನಿಂದಲೂ, ತುಂಬಿರುವ ಆ ಮಂಟಪದಲ್ಲಿ ಮಣ್ಣು ಹೆಂಟೆಗಳಂತಿರುವ ಪರ್ವತಗಳಲ್ಲಿ ಒಂದಾನೊಂದು ಹೆಂಟೆ

ಯ ಸಮೀಪದಲ್ಲಿ ಒಂದು ಹಳ್ಳದ ಗ್ರಾಮವಿರುವದು; ಅಲ್ಲಿ ಸರ್ವಗುಣಗಳಿಂದ ಲೂ, ಆಕಾರದಿಂದಲೂ, ಅರುಂಧತೀ ವಸಿಷ್ಠರಂತಿರುವ ಅರುಂಧತೀ ವಸಿಷ್ಠ ರೆಂಬ ದಂಪತಿಗಳಿದ್ದರು. ಆ ವಸಿಷ್ಠನು ಬೆಟ್ಟದಮೇಲೆ ಕುಳಿತು ಕೆಳಗಡೆ ಬೇಟೆಯಾಡಲು ಬಂದ ಒಬ್ಬ ಮಹಾರಾಜನ ವೈಭವವನ್ನು ನೋಡಿ ಆಶ್ಚರ್ಯಪ ಟ್ಟು ತಾನೂ ರಾಜಸಂಪದವನ್ನು ಅನುಭವಿಸಬೇಕೆಂದು ಅಪೇಕ್ಷಿಸಿದನು. ಪರಿ ಪರಿಯಾದ ಭೋಗವೈಭವಗಳನ್ನು ಸರ್ವದಾ ಧ್ಯಾನಿಸುತ್ತಿರುವ ಆ ಮಹರ್ಷಿಗೆ ವೃದ್ಧಾಪ್ಯವುಂಟಾಗಲು ಆ ಅರುಂಧತಿಯು ನಿನ್ನಂತೆ ನನ್ನಂ ಪೂಜಿಸಿ ದೇಹವಂ ಬಿಟ್ಟ ತನ್ನ ಕಾಂತನ ಜೀವವು ತನ್ನ ಲೀಲಾಮಂಟಪದಲ್ಲಿಯೇ ನಿಂದಿರಬೇಕೆಂ ದು ನನ್ನಂ ಪ್ರಾರ್ಥಿಸಿದಳು. ಕೆಲವುಕಾಲದಮೇಲೆ ಆ ವಸಿಷ್ಠನು ಪ್ರಾಣವಂ ಬಿಡಲು ವಿಯೋಗವ್ಯಥೆಯುಂ ತಾಳಲಾರದೆ ಅರುಂಧತಿಯು ಯೋಗಬಲದಿಂ ತಾ ನೂ ಶರೀರವಂ ಬಿಟ್ಟು ತನ್ನ ಮಂಟಪದಲ್ಲಿರುವ ವಸಿಷ್ಠನ ಚೈತನ್ಯವಂ ಸೇರಿ ದಳು. ಆ ಬ್ರಾಹ್ಮಣನು ಸತ್ತು ಏಳುದಿವಸವಾದವು. ಇದೇ ಎಂಟನೆಯ ದಿವ ಸವು. ಅರುಂಧತಿಯ ಲೀಲಾಮಂಟಪದಲ್ಲಿ ಚಿದಾಕಾಶರೂಪದಿಂದಿರುವ ವಸಿ ಷ್ಠನ ಚೈತನ್ಯವು ಪದ್ಮರಾಜನರೂಪದಿಂದ ಖಂಡ ಭೂಮಂಡಲಾಧಿಪತ್ಯವನ್ನ ನುಭವಿಸುವದು. ಆ ಅರುಂಧತಿಯ ಚೈತನ್ಯವೆ ನಿನ್ನರೂಪದಿಂ ಪದ್ಮರಾಜನನ್ನ ನುಸರಿಸಿಕೊಂಡಿರುವದು. ಎಂದು ಸರಸ್ವತಿಯು ಪೇಳಲು, ಆಶ್ಚರ್ಯಯುಕ್ತಳಾ ದ ಆ ಲೀಲೆಯು ಎಲೌ ದೇವಿಯೇ ! ಏಕೆ ಹೀಗೆ ನೀನೂ ಸುಳ್ಳಂಪೇಳುತ್ತೀ ಯೆ ? ಅಥವಾ ವಿನೋದಾರ್ಥವಾಗಿ ಹೇಳುವೆಯೋ ? ಅತಿಸ್ವಲ್ಪವಾದ ಅರುಂಧ ತಿಯ ಲೀಲಾಮಂಟಪದಲ್ಲಿರುವ ವಸಿಷ್ಠನ ಚೈತನ್ಯವೆಲ್ಲಿ ? ಅತ್ಯಂತ ಮಹತ್ತರ ವಾದ ಈ ಪ್ರಪಂಚದಲ್ಲಿರುವ ನಾವೆಲ್ಲಿ ? ಮತ್ತು ನಾನು ಸಮಾಧಿಯಲ್ಲಿ ಕಂಡ ಯಲ್ಲೆಕಟ್ಟಿಲ್ಲದಿರುವ ಪ್ರಪಂಚವೆಲ್ಲಿ ? ದಿಗ್ಭೂವ್ಯೋಮಾಕಾಶ ಗಿರಿ ಸಮುದ್ರಗಳಿಂ ಕೂಡಿರುವ ಆ ಪ್ರಪಂಚವು ನನ್ನ ಗಂಡನಿರುವ ಮನೆಯಲ್ಲಿ ಇಧೆಯುಂಬುವದಂ ನೋಡಿದರೆ, ಸಾಸುವೆಕಾಳಿನತೂತಿನಲ್ಲಿ ಐರಾವತವಿದೆಯೆಂಬಂತೆಯೂ, ಪರಮಾ ಣುವಿನ ರಂಧ್ರದಲ್ಲಿ ಸೊಳ್ಳೆಯು ಸಿಹ್ಮಸಮೂಹದೊಡನೆ ಯುದ್ಧವಂ ಮಾಡು ತಿದೆ ಎಂಬಂತೆಯೂ, ತಾವರೆಮಣಿಯಲ್ಲಿರುವ ಮೇರುಪರ್ವತವನ್ನು ಮರಿದುಂ ಬೆಯು ನುಂಗಿತೆಂಬಂತೆಯೂ, ಸ್ವಪ್ನದಲ್ಲಿ ಕಂಡ ಮೇಘದ ಗರ್ಜನೆಯಂ ಕೇಳಿ ನವಿಲುಗಳು ವಿಚಿತ್ರವಾಗಿ ಕುಣಿಯುವದೆಂಬಂತೆಯೂ, ನಿನ್ನಮಾತು ಅಸಂಗತ ವಾಗಿ ಕಾಣುತಿದೆ. ಯಥಾಸ್ಥಿತಿಯಾಗಿ ಇದರ ತತ್ವಾರ್ಥವಂ ಪೇಳುವಳಾಗೆಂದು ಬೆಸಗೊಳ್ಳಲು, ಅ ಸರಸ್ವತಿಯು ಪೇಳಿದಳದೆಂತೆನೆ:—

ಎಲೌ ಲೀಲೆಯೆ ! ನಾವೇ ಸುಳ್ಳುಹೇಳುವಲ್ಲಿ ಲೋಕಮರ್ಯಾದೆಯಂ ನಿಲ್ಲಿಸುವರ್ಯಾರು ? ದುಷ್ಟರಿಂದ ಭೇದಿಸಲ್ಪಟ್ಟ ಸತ್ಯದ ಮರ್ಯಾದೆಯು ನಾವು ಸಂರಕ್ಷಿಸತಕ್ಕವರಾದ್ದರಿಂದ ನಮ್ಮ ಮಾತಿನಲ್ಲಿ ನೀನು ಸಂದೇಹಪಡಬೇಡ. ಆ ಅರುಂಧತಿ ವಸಿಷ್ಠರೇ ನೀವು ಇಲ್ಲಿ ಅವತರಿಸಿದ ಪಾರ್ವತೀಪರಮೇಶ್ವರರಂತೆ ವಿಹರಿಸುತಲಿದೀರಿ, ಸ್ವಪ್ನದಲ್ಲಿ ಜಾಗ್ರದಪ್ರಸ್ತಾವದಂತೆ ಜನ್ಮಾಂತರದ ಕಥೆಯು ಈಗ ನಿಮಗೆ ಮರತುಹೋಗಿರುವದು. ಸ್ವಪ್ನಸಂಕಲ್ಪಗಳಲ್ಲಿ ಪ್ರಪಂಚವು ಕಾಣುವಂತೆಯೂ, ಸೂಕ್ಷ್ಮವಾದ ಕನ್ನಡಿಯಲ್ಲಿ ಪಟ್ಟಣ ಪ್ರತಿಫಲಿಸುವಂತೆಯೂ, ಕಥೆಯಲ್ಲಿ ಯುದ್ಧವೂ, ಮರುಭೂಮಿಯಲ್ಲಿ ಜಲವೂ ಸಹ ಗೋಚರವಾಗುವಂತೆಯೂ, ನಾನೂ ನೀನೂ ಈ ಪ್ರಪಂಚವೆಲ್ಲವೂ ಕೂಡ ಆ ಬ್ರಾಹ್ಮಣನ ಜೀವಾಕಾಶದ ಒಂದೆಡೆಯಲ್ಲಿ ಪ್ರಕಾಶಿಸುತ್ತಿರುವವು. ಅಸತ್ಯವಾದ ಈ ಸೃಷ್ಟಿಯು ಸತ್ಯದಂತೆ ಕಾಣುತ್ತಿರುವದು. ಬಿಸಿಲುದೊರೆಯಲ್ಲಿ ತೆರೆಯೆಂಬಾತೆ ಅಸತ್ಯದಿಂ ಪುಟ್ಟಿದ್ದು ಅಸತ್ಯವೇ ಆಗುವದು. ಸತ್ಯದಿಂ ಪುಟ್ಟಿದ್ದು ಸತ್ಯವಾಗಿಯೇ ಇರುವದು. ಕಾರಣಕ್ಕೆ ಭಿನ್ನಗುಣವಾಗಿ ಕಾರ್ಯವಾಗಲಾರದಾದ್ದರಿಂದ ಚಿದಾಕಾಶದಲ್ಲುಂಟಾದ ಈ ಸೃಷ್ಟಿಯನ್ನು ಚಿದಾಕಾಶವೆಂತಲೇ ತಿಳಿಯುವಳಾಗು. ಸ್ವಪ್ನದಲ್ಲಿ ಯಾವ ಚಿತ್ತು ಇರುವದೋ ಜಾಗ್ರದಲ್ಲಿಯೂ ಅದೇ ಚಿತ್ತು ಇರುವದ್ದರಿಂದ ಸ್ವಪ್ನದಲ್ಲಿ ಉಂಟಾದ ಪ್ರಪಂಚದಂತೆ ಜಾಗ್ರತೆಯಲ್ಲಿ ಉಂಟಾದ ಪ್ರಪಂಚವನ್ನು ಅಸತ್ಯವೆಂತಲೇ ತಿಳಿಯತಕ್ಕದ್ದು. ಸೂಕ್ಷ್ಮವಾದ ಕನ್ನಡಿಯಲ್ಲಿ ಪಟ್ಟಣವು ಹ್ಯಾಗೆ ಪ್ರತಿಫಲಿಸುವದೋ, ಅತಿಸೂಕ್ಷ್ಮವಾದ ಕಣ್ಣು ಜಗವೆಲ್ಲವಂ ಹ್ಯಾಗೆ ವ್ಯಾಪಿಸಿ ಪಿಡಿಯುವದೋ, ಪರಮಾಣುರೂಪವಾದ ಮನದಲ್ಲಿ ಪ್ರಪಂಚವು ಹ್ಯಾಗೆ ಇರುವದೋ, ಹಾಗೆ ಪರಮಾಣುವಿಗಿಂತಲೂ ಪರಮಾಣುವಾದ ಆತ್ಮನಲ್ಲಿಯೂ, ಪ್ರಪಂಚವೆಲ್ಲವೂ ಪ್ರಕಾಶಿಸುತ್ತಿರುವದು. ಅವನು ಎಲ್ಲೆಲ್ಲಿರುವನೋ, ಅಲ್ಲಲ್ಲಿ ಎಲ್ಲಾ ಕಡೆಯಲ್ಲೂ ಈ ಪ್ರಪಂಚಗಳಿರುವವೆಂದು ನಿಶ್ಚಯಿಸುವಳಾಗು. ಆಕಾಶದಲ್ಲಿ ಮತ್ತೊಂದು ಪದಾರ್ಥಕ್ಕೆ ಸಂಬಂಧವಾಗುವದಿಲ್ಲವಾದುದರಿಂದ ಚಿದಾಕಾಶಕ್ಕೆ ಸಂಬಂಧಪಟ್ಟಿರುವ ಈ ಪ್ರಪಂಚವು ಚಿದಾಕಾಶವೆಂತಲೇ ತಿಳಿಯತಕ್ಕದ್ದು. ಸ್ವಪ್ನದಲ್ಲಾಗಲೀ ಜಾಗ್ರತೆಯಲ್ಲಾಗಲೀ ದೃಷ್ಟಿದರ್ಶನ ದೃಶ್ಯಗಳಲ್ಲಿ ಒಂದೇಚಿತ್ತು ವ್ಯಾಪಿಸಿಕೊಂಡಿರುವದರಿಂದಲೂ, ತೇಜಸ್ತಿಮಿರಗಳಂತೆ ಚಿದಚಿತ್ತುಗಳಿಗೆ ಸಂಬಂಧವಿಲ್ಲವಾದುದರಿಂದಲೂ, ಸರ್ವವನ್ನು ಬ್ರಹ್ಮವೆಂತಲೇ ತಿಳಿಯುವಳಾಗು. ಈ ಚಿತ್ತು ಒಳ್ಳೆಯದೆಂತಲೂ ಕೆಟ್ಟದೆಂತಲೂ, ಸ್ಥೂಲವೆಂತಲೂ, ಸೂಕ್ಷ್ಮವೆಂತಲೂ, ಸುಖವೆಂತಲೂ, ದುಃಖವೆಂತಲೂ,

ನೀಚನೆಂತಲೂ, ಉತ್ತಮನೆಂತಲೂ, ಸತ್ಯವೆಂತಲೂ, ಅನೃತವೆಂತಲೂ, ಹೇಗೆ ಹೇಗೆ ಭಾವಿಸುವುದೋ ಹಾಗ ಹಾಗೆ ಅನುಭವಿಸುವುದು. ಹೀಗಿರುವಲ್ಲಿ ಚಿದಾಕಾಶದ ಏಕದೇಶದೊಳು ಈ ಪ್ರಪಂಚವಿರುವದೆಂಬುವದರಲ್ಲಿ ಸಂದೇಹ ಪಡುವದಕ್ಕೆ ನಿಮಿತ್ತವೇನಿರುವದು? ತಿಳಿದಂಥಾವರು ಸರ್ವವ್ಯಾಪಿಯಾದುದರಿಂದ ಮಹತ್ತರವಾದ, ಪದಾರ್ಥಗಳಿಗಿಂತಲೂ ಮಹತ್ತೆಂದು ಚಿದಾಕಾಶವಂ ಪೇಳುವರು. ತಿಳಿಯುವದಕ್ಕೆ ಅಶಕ್ಯವಾದುದರಿಂದ ಪರಮಾಣುವಿಗಿಂತಲೂ ಪರಮಾಣುವೆಂದು ಹೇಳುವರು. ದೇಶದ ವಿಸ್ತಾರ ಸಂಕೋಚಗಳಿಗೆ ಹೇಗೆ ವ್ಯವಸ್ಥೆ ಇಲ್ಲವೊ, ಅದೇಪ್ರಕಾರ ಕಾಲಕ್ಕೂ ವಿಸ್ತಾರಸಂಕೋಚಗಳ ವ್ಯವಸ್ಥೆಯಿಲ್ಲವೆಂದು ತಿಳಿಯಬೇಕು. ಆದುದರಿಂದ ದುಃಖಪಡುವನಿಗೆ ಘಳಿಗೆಯು ವರ್ಷಪ್ರಾಯವಾಗುವದು. ಸುಖಪಡುವನಿಗೆ ಹಗಲು ರಾತ್ರೆ ಸಹ ಒಂದು ನಿಮಿಷದಂತೆ ಆಗುವದು. ಈ ವಿಶ್ವಾಮಿತ್ರಮುನೀಶ್ವರನು ಸತ್ಯವಂ ಪರೀಕ್ಷಿಸುವಲ್ಲಿ ಹರಿಶ್ಚಂದ್ರನಿಗೆ ಒಂದು ರಾತ್ರಿಯೇ ಹನ್ನೆರಡು ವರ್ಷವಾಯಿತು. ಹೀಗಿರುವಲ್ಲಿ ಕಾಲನಿಬಂಧನೆಯೆಂತೆಂದು ಹೇಳಬೇಕು. ಜಲಕ್ಕೆ ತರಂಗಗಳಂತೆ ಸ್ಮೃತಿಭಾವನೆ ಕಲ್ಪನೆಗಳು ಚಿದಾಕಾಶಕ್ಕೆ ಅಭಿನ್ನವಾಗಿರುವಾದುದರಿಂದ ಸ್ಮೃತ್ಯಾದಿಗಳಿಂದ ಹುಟ್ಟದ ಪ್ರಪಂಚವೆಲ್ಲವೂ ಚಿದಾಕಾಶರೂಪವೆಂತಲೇ ತಿಳಿಯತಕ್ಕದ್ದು. ಮರಣ ಮೋಹವಲ್ಲಿ ಈ ಚಿತ್ತಿಗೆ ಪೂರ್ವದೇಹಾದಿಗಳ ಸ್ಮರಣೆ ತಪ್ಪುವದರಿಂದಲೂ ಅನೇಕಜನ್ಮಾಂತರಗಳಿಂದ ರೂಢಮೂಲವಾಗಿವೃದ್ಧಿ ಹೊಂದಿರುವ ಸಂಸಾರಸ್ಮರಣೆ ದೃಢವಾಗಿರುವದರಿಂದಲೂ, ಕರ್ಮಾನುಗುಣವಾಗಿ ಬಂದ ದೇಹವಲ್ಲಿಯೇ ತನ್ನದೆಂತಲೂ, ತಾನೆಂತಲೂ, ಬುದ್ಧಿಯುಂಟಾಗುವದು. ಬಳಿಕ ಸ್ವಪ್ನದಲ್ಲಿ ಮತ್ತೊಂದು ಸ್ವಪ್ನದಂತೆ ಇವಳು ತಾಯಿ, ಇವನು ತಂದೆ, ಇವರು ಬಂಧುಗಳು ಇವರು ಮಿತ್ರರೆಂದು, ಹೊಸಹೊಸದಾಗಿ ಆ ಸ್ಮೃತಿಯೇ ವಿಚಿತ್ರವಾಗಿ ಆವಿರ್ಭವಿಸುವದು. ಸತ್ಸಹವಾಸಾದಿಗಳಿಂದ ಈ ಸಂಸಾರದ ಸ್ಮರಣೆ ತಿರುಗಿ ಬಾರದಂತೆ ನಿಶ್ಶೇಷವಾಗಿ ಹೋಗುವದೇ ಮುಕ್ತಿಯೆನಿಸಿಕೊಳ್ಳುವದು. ಮುಕ್ತರಾಗದವರಿಗೆ ಈ ಸ್ಮೃತಿಯೇ ಸಂಸಾರಕಾರಣವಾಗುವದು. ಪೂರ್ವ ಪಿತಾಮಹನು ಮುಕ್ತನಾದುದರಿಂದ ಹೊಸದಾಗಿ ಬರುವ ಪಿತಾಮಹನಿಗೆ ಸ್ಮೃತಿಯು ಕಾರಣವಾಗಲಿಲ್ಲ. ಜಗದ್ರೂಪವಾಗಿ ತೋರುವ ಸ್ವಭಾವವುಳ್ಳ ಪರಮಾತ್ಮನ ಸಂಕಲ್ಪರೂಪನಾದ ಹೊಸಪಿತಾಮಹನು ಸ್ವೇಚ್ಛೆಯಿಂದ ಆಕಾರವಂ ಪರಿಗ್ರಹಿಸಿ ಶ್ರುತಿಯಲ್ಲಿ ಹೇಳಿರುವಂತೆ ಸಮಸ್ತಪ್ರಪಂಚಗಳ ಸೃಷ್ಟಿಯಂ ಮಾಡುವನು. ಯಾವನು ವಿಚಾರದಿಂದ ಪರಮಾತ್ಮನ ಅಖಂಡಭಾವವಂ ತಿಳಿದು ತಾನೂ ಅವನೆಂದು

ಭಾವಿಸುತ್ತಾ ಪ್ರಪಂಚ ಭ್ರಾಂತಿಯು ಬಿಡುವಂತೆ ವಿವೇಕವಿಚಾರಾತ್ಮಕವಾದ ಸಾಧನೆಯಂ ಮಾಡುವನೋ ಅವನು ಕ್ರಮವಾಗಿ ಸಂಸಾರ ಭ್ರಾಂತಿಯಂ ಬಿಟ್ಟು ಮುಕ್ತನಾಗುವನು. ಸಮಾಧಿಯೊಳ್ ನೀನುಕಂಡ ಪ್ರಪಂಚದಲ್ಲಿ ಇರುವ ಜನಗಳೆಲ್ಲರು ಇರುವದಕ್ಕೆ ನಿನ್ನ ಕಾಂತನ ಸ್ಮೃತಿಯೇ ಕಾರಣವೆಂದು ತಿಳಿಯುವಳಾಗು. ಸ್ವಪ್ನದಲ್ಲಿ ತನ್ನ ಮರಣದಂತೆ ಅನನುಭೂತವಾದದ್ದೂ, ಗೋಚರವಾಗುವಲ್ಲಿ ಅನುಭವಿಸಿದ್ದು, ಗೋಚರವಾಗುವದಕ್ಕೆ ಅಡ್ಡಿಯೇನಿರುವದು? ಸ್ವಪ್ನಮನೋರಥ ಪ್ರಪಂಚಗಳಿಗೆ ನಮ್ಮ ಸ್ಮೃತಿಯೇ ಹೇಗೆ ಕಾರಣವೋ, ಹಾಗೆ ಪಿತಾಮಹನ ಸ್ಮೃತಿಯೇ ಈ ಬ್ರಹ್ಮಾಂಡಗಳಿಗೆ ಕಾರಣವೆಂದು ತಿಳಿಯುವಳಾಗು. ಸ್ವಭಾವದಿಂದಲೇ ಸೃಷ್ಟ್ಯಾದಿಗಳಿಂದ ಕ್ರೀಡಿಸುತ್ತಿರುವ ಶಾಶ್ವತನಾದ ಪರಮಾತ್ಮನಿಗೆ ಹೊಸಹೊಸದಾದ ಸೃಷ್ಟಿಗಳಲ್ಲಿ ಪೂರ್ವಾನುಭವವಿದ್ದಾಗ್ಯೂ ಅವನು ನಿರ್ವಿಕಲ್ಪಜ್ಞಾನಸ್ವರೂಪನಾಗಿ ನಿತ್ಯಮುಕ್ತನಾಗಿರುವನಾದುದರಿಂದವನಿಗೆ ಸ್ಮೃತಿಯಿಲ್ಲ. ಅದರಿಂದ ಅವನ ಸ್ಮೃತಿಯು ಪಿತಾಮಹನ ಸೃಷ್ಟಿಗೆ ಕಾರಣವೆನಲಾಗದು. ಪಿತಾಮಹನ ಸೃಷ್ಟಿಯಲ್ಲಿ ನಟನು ವೇಷಾಂತರ ವಹಿಸುವಂತೆ ಸ್ವೇಚ್ಛಾಶಕ್ತಿಯಿಂದ ಪರಮಾತ್ಮನೇ ಪಿತಾಮಹನ ರೂಪವಂ ಧರಿಸಿರುವನೆಂದು ತಿಳಿಯತಕ್ಕದ್ದು. ಹೀಗೆ ಪರಮಾತ್ಮನೇ ಜಗದ್ರೂಪನಾಗುವದರಿಂದ ಸೃಷ್ಟಿಯೆಂಬುವದು ಬಿಸಲುದೊರೆಯಂತೆ ಭ್ರಾಂತಿಮಾತ್ರವಲ್ಲದೆ ಪರಮಾರ್ಥವಲ್ಲವೆಂದು ತಿಳಿಯತಕ್ಕದ್ದು. ಎಂದು ಸರಸ್ವತಿಯು ಹೇಳುತ್ತಿರುವಲ್ಲಿ ಎಲೌ ಪರದೇವತೆಯೇ! ಪ್ರಾತಃಕಾಲದ ಪ್ರಭೆಯಿಂದ ಪದಾರ್ಥವಂ ಗ್ರಹಿಸುವ ದೃಷ್ಟಿಶಕ್ತಿಯುಂಟಾಗುವಂತೆ ನಿನ್ನಿನವೆನಗೆ ಪರಮಾರ್ಥವಂ ಗ್ರಹಿಸುವ ಜ್ಞಾನದೃಷ್ಟಿಯುಂಟಾದುದು. ಈ ದೃಷ್ಟಿಯು ದೃಢವಾದ ಬಳಿಕ ದೃಗ್ದೃಶ್ಯವಿವೇಕವೇ ತಪ್ಪುವದಾದ್ದರಿಂದ ಇದು ದೃಢವಾಗುವಷ್ಟರಲ್ಲಿಯೇ ಅರುಂಧತೀ ವಶಿಷ್ಟರ ಗ್ರಾಮವನ್ನು ನನ್ನ ಕಾಂತನಿರುವ ಪ್ರದೇಶವನ್ನೂ ಸಹಾ ತೋರಿಸೆಂದು ಲೀಲೆಯು ಹೇಳಲಾ ವಾಗ್ದೇವತೆಯು ಮರಳಿ ಇಂತೆಂದಳು.

ಎಲೌ ಲೀಲೆಯೇ! ನೀನು ನಿರ್ವಿಕಲ್ಪಸಮಾಧಿಯಿಂದ ಬ್ರಹ್ಮಭಿನ್ನವಾದ ಪದಾರ್ಥವಿಲ್ಲವೆಂದು ದೃಷ್ಟಿಯಂ ಪಡೆದು ಭ್ರಮಾತ್ಮಕವಾದ ಈ ಶರೀರವಂ ಬಿಟ್ಟರೆ ಮನುಷ್ಯನ ಸಂಕಲ್ಪವು ಗಗನಾಂತಃಪುರವಂ ಹೊಂದುವಂತೆ ಚಿದಾಕಾಶದಲ್ಲಿರುವ ಆ ಪ್ರಪಂಚವಂ ಹೊಂದುವೆ? ಅನಾದಿಯಾದ ಅವಿದ್ಯೆಯಿಂದ ನಿರಾಕಾರವಾದ ಬ್ರಹ್ಮವೇ ಸಾಕಾರವಾಗಿ ತೋರುತ್ತಿರುವದು. ವಿಚಾರದಿಂದ ಅವಿದ್ಯೆಯೇ ಇಲ್ಲವೆನಿಸುವಲ್ಲಿ ದೃಕ್ಕಿನ ತೇಜವು ದೃಶ್ಯವಾಗಿರುವಂತೆ ಬ್ರಹ್ಮವೇ

ಸ್ವೇಚ್ಛೆಯಿಂದ ಜಗದಾಕಾರವಾಗಿರುವದೆಂತಲೂ, ಹೀಗಿರುವದ್ದರಿಂದ ಬ್ರಹ್ಮ ಜಗತ್ತುಗಳಿಗೆ ಕಾರ್ಯಕಾರಣ ಭಾವವಿಲ್ಲವೆಂತಲೂ ಸ್ಪಷ್ಟವಾಗುವದು. ಬೇರೆ ಬೇರೆಯಾಗಿ ತನ್ಮಾತ್ರೆಗಳ ಅಂಶಗಳಿಂದ ಇಂದ್ರಿಯಗಳೂ, ವಿಷಗಳೂಸಹ ಹುಟ್ಟಿರುವದರಿಂದ ಆಯಾ ಇಂದ್ರಿಯಗಳು ಆಯಾ ವಿಷಗಳನ್ನೇ ಹಿಡಿಯುವವು. ತನ್ಮಾತ್ರಸಮಷ್ಟ್ಯಂಶದಿಂದಂತಃಕರಣ ಹುಟ್ಟಿರುವದ್ದರಿಂದ ಅಂತಃಕರಣವು ವಿಷಯಗಳೆಲ್ಲವನ್ನೂ ಗ್ರಹಿಸುವದು. ಸ್ವಚೈತನ್ಯಕ್ಕೆ ಸರ್ವತ್ರ ವ್ಯಾಪ್ತಿಯಿರುವದರಿಂದ ಅಂತಃಕರಣದ ರೀತಿಗಳನ್ನೂ, ಇಂದ್ರಿಯ ವಿಷಯಗಳ ರೀತಿಗಳನ್ನು ಸಹ ಆತ್ಮನು ತಿಳಿಯುವನು. ಯೋಗಿಯ ಚಕ್ಷುರಿಂದ್ರಿಯವು ಅಂತರ್ಲಕ್ಷ್ಯ ಬಹಿರ್ಲಕ್ಷ್ಯಗಳಂ ನೋಡುವಲ್ಲಿ ಸ್ವಪ್ರಕಾಶವಂ ಕಾಣುವಂತೆ ನಿಜವಾದ ಚೈತನ್ಯವನ್ನೇ ದೃಶ್ಯವೆಂದು ನಾನು ನೋಡುತಲಿಧೇನೆ. ಬ್ರಹ್ಮವು ಬ್ರಹ್ಮವನ್ನೇ ನೋಡುವದು. ಬ್ರಹ್ಮದಲ್ಲಿಯೇ ಇರುವದು, ಬ್ರಹ್ಮವನ್ನೇ ಹಿಡಿಯುವದಲ್ಲದೆ ಮತ್ತೊಂದನ್ನು ಗ್ರಹಿಸುವದಿಲ್ಲ. ಆದುದರಿಂದ ಬ್ರಹ್ಮಕ್ಕೆ ದೃಶ್ಯವಾಗಿರುವ ಈ ಪ್ರಪಂಚವೆಲ್ಲವನ್ನೂ ಬ್ರಹ್ಮವೆಂತಲೇ ತಿಳಿಯತಕ್ಕದ್ದು. ಹೀಗಿರುವದ್ದರಿಂದ ಪ್ರಪಂಚವೆಲ್ಲವೂ ಮರುಮರೀಚಿಕೆಯಲ್ಲಿ ಜಲದಂತೆ ಅಜ್ಞಾನದಿಂದ ಕಲ್ಪಿತವಾಗಿರುವದೆಂದು ನಿಶ್ಚಯಿಸತಕ್ಕದ್ದು. ಚಿನ್ನವನ್ನುಂಗುರವೆನ್ನುವಂತೆ ದೃಶ್ಯವಂ ಜಗವೆಂದು ಅಜ್ಞಾನಿಗಳೇ ಹೇಳುವರೆಂದು ತಿಳಿಯುವಳಾಗು. ಈ ಅರ್ಥಕ್ಕೆ ವೇದಾಂತಶಾಸ್ತ್ರವೂ, ಗುರೂಪದೇಶವೂ, ಅನುಭವವೂಸಹ ಪ್ರಮಾಣವಾಗಿರುವದ್ದರಿಂದ ನೀನು ಸಂದೇಹಪಡಬೇಡ. ಸಮುದ್ರದಲ್ಲಿ ಧೂಳಿಯಂತೆ ಬ್ರಹ್ಮದಲ್ಲಿ ಜಗವಿಲ್ಲವೆಂದು ನಿಶ್ಚೈಸುವಳಾಗು. ಯಾವಾಗ ಆತ್ಮನು ವಿಚಾರದಿಂ ತಿಳಿಯುವನೋ ಆಗ ಸರ್ವವ್ಯಾಪಕಭಾವದಿಂ ಪರಮಾತ್ಮನೆನಿಸುವನು. ಚಿದಚಿದ್ವಿವೇಕದಿಂ ಪದಾರ್ಥಗಳ ವಿಭಾಗವಂ ತಿಳಿದು ನಿತ್ಯಾನಿತ್ಯವಿಚಾರದಿಂದವುಗಳ ಸತ್ವವಂ ನಿಶ್ಚೈಸಿ ಪರಮಾತ್ಮನ ಸತ್ವವೇ ಎಲ್ಲಾಕಡೆಯಲ್ಲೂ ವ್ಯಾಪಿಸಿಕ್ಕೊಂಡಿರುವದೆಂಬ ಭಾವದಿಂ "ತಾನು" "ತನ್ನದೂ" "ಇತರ"ವು ಸಹ ಬ್ರಹ್ಮನೆಂದು ಅಖಂಡಾಕಾರವೃತ್ತಿಯಂ ಪಿಡದಿರುವ ಪುರುಷನಿಗೆ ಅವಿದ್ಯೆಯಿಂದುಂಟಾದ ಶರೀರದ ಸಂಬಂಧವು ತಪ್ಪುವದ್ದರಿಂದ ಇಚ್ಛಾನುಸಾರವಾಗಿ ಲೋಕಾಂತರಪ್ರಾಪ್ತಿಯುಂಟಾಗುವದು. ಮಣ್ಣೇ ಕೆಸರಾಗಿ ಹೆಂಟೆಯಾಗಿ ಕಲ್ಲಾಗುವಂತೆ ಜ್ಞಾನಸ್ವರೂಪವಾದ ಬ್ರಹ್ಮವೇ ಅಜ್ಞಾನವಾಗಿ ಸೂಕ್ಷ್ಮಶರೀರವಾಗಿ ಸ್ಥೂಲವಾಗಿರುವದೆಂದು ತೋರುತಲಿಧೆ. ತೇಜಸ್ಸು ಎಂದಿಗೂ *ತಿಮಿರವಾಗಲಾರದಾದ್ದರಿಂದ ಜ್ಞಾನ

*ತಿಮಿರ=ಅಂಧಕಾರ (ಕತ್ತಲೆ.)

ವಜ್ಞಾನವಾಗಿ ಎಂದಿಗೂ ಪರಿಣಮಿಸಲಾರದು. ಬ್ರಹ್ಮವು ಅದ್ವಿತೀಯವಾದ್ದರಿಂದ ಅದಕ್ಕೆ ಸ್ವಜ್ಞಾನವಿಲ್ಲದೆ ಸ್ವಾಜ್ಞಾನವು ಸಹಜವಾಗಿರುವದು. ಅದರಿಂದಲೂ, ದ್ವಿತೀಯ ಪದಾರ್ಥವಿಲ್ಲದ್ದರಿಂದಲೂ, ತಾನೇ ದ್ವಿತೀಯವಾಗಿ ತೋರುತ್ತಾ ಸ್ವರೂಪವಂ ತಿಳಿದು ಜ್ಞಾನಕ್ಕೆ ಸಹಜವಾಗಿರುವ ಅಜ್ಞಾನವಂ ಹೋಗಲಾಡಿಸಿಕೊಂಡು ಅಖಂಡಾನಂದರೂಪದಿಂ ನಾನಾಪ್ರಕಾರವಾಗಿ ವಿಹರಿಸುತ್ತಿರುವದು. ಇದು ದ್ವಿತೀಯ ಪದಾರ್ಥವಂ ನೋಡಲಿಚ್ಛೈಸಿದಾಗಲೇ ಜ್ಞಾನೇಚ್ಛಾಕ್ರಿಯಾಶಕ್ತಿಮಯವಾದ ಸಗುಣರೂಪವಂ ವಹಿಸಿ ಈಶ್ವರನೆನಿಸುವದು. ಇದನ್ನೇ ಕಾರಣಶರೀರವೆನ್ನುವರು. ಈಶ್ವರನ ಇಚ್ಛೆಯಿಂದುಂಟಾದ ಲಿಂಗಶರೀರವೇ ಆತಿವಾಹಿಕವೆನಿಸುವದು. ಇದು ಐಚ್ಛಿಕವಾದ್ದರಿಂದ ಇಚ್ಛಾನುಸಾರವಾಗಿ ಗಮನಾದಿಯೋಗ್ಯತೆಯುಳ್ಳದ್ದಾಗಿರುವದು. ಈ ಸೂಕ್ಷ್ಮಶರೀರವು ಭೋಗಸಾಧನವಲ್ಲದೆ ಭೋಗಾಯತನವಾಗಲಾರದಾದ್ದರಿಂದ ಭೋಗಾಪೇಕ್ಷೆಯುಳ್ಳ ಜ್ಞಾನಿಗಳು ಸ್ವೇಚ್ಛೆಯಿಂದ ಭಾವನಾಮಾತ್ರದಿಂ ಸಿದ್ಧವಾದ ಸ್ಥೂಲಶರೀರವಂ ವಹಿಸಿ ಯಥೇಚ್ಛವಾಗಿ ಕ್ರೀಡಿಸುತ್ತಿರುವರು. ಪಾಂಚಭೌತಿಕವಾದ ಈ ಸ್ಥೂಲಶರೀರವು ಐಚ್ಛಿಕವಾದ್ದರಿಂದ ಬ್ರಹ್ಮಾತ್ಮೈಕ್ಯಜ್ಞಾನವುಳ್ಳ ಮಹಾತ್ಮರಿಗೆ ಇಚ್ಛಾನುಸಾರವಾಗಿರುತ್ತಾ ಆತಿವಾಹಿಕಕ್ಕೆ ಸಮಾನವಾಗಿರುವದು. ಅಜ್ಞಾನಿಗೆ ಈ ಶರೀರವು ಕರ್ಮಾನುಗುಣವಾಗಿ ಬಂದದ್ದಾದ್ದರಿಂದ ಇದಂ ಬಿಡದೆ ಲೋಕಾಂತರಗಮನಯೋಗ್ಯತೆಯುಂಟಾಗಲಾರದು. ಅಖಂಡಭಾವದಿಂ ಕರ್ತೃ ಕರಣ ಕಾರ್ಯವಿಕಲ್ಪವಿಲ್ಲದ ಸ್ವರೂಪದಜ್ಞಾನವಿಲ್ಲದ್ದರಿಂದುಂಟಾದ *ದೇಹಾತ್ಮಜ್ಞಾನದಿಂದಹಂಕಾರವಂ ಪಿಡಿದು ಮಾಡಿದ ಕರ್ಮವೆಲ್ಲವೂ ಬಂಧಕವಾಗುವದು. ಆದ್ದರಿಂದ ಬಂಧಕ್ಕೆ ಕಾರಣವಾದ್ದು ಕರ್ಮವು, ಅದಕ್ಕೆ ಅಹಂಕಾರವು, ಅದಕ್ಕೆ ದೇಹಾತ್ಮಜ್ಞಾನವು, ಅದಕ್ಕೆ ಸ್ವರೂಪಜ್ಞಾನವೆಂದು ಪರಂಪರೆಯಾಗಿ ಕಾರಣವು ಹೀಗಿರುವದ್ದರಿಂದ ಬಂಧಕ್ಕೆ ಅಜ್ಞಾನವೇ ಆದಿಕಾರಣವೆನಿಸುವದು. ಇದಕ್ಕೆ ಬ್ರಹ್ಮಾತ್ಮೈಕ್ಯ ಜ್ಞಾನವೇ ಮೃತ್ಯುವಾದ್ದರಿಂದ ವಿವೇಕವಿಚಾರಾದಿಗಳಿಂದಾಜ್ಞಾನವಂ ಸಾಧಿಸಿದವನು ಮುಕ್ತನಾಗುವನು. ಈ ಜ್ಞಾನವೇ ನಿರ್ವಿಕಲ್ಪಸಮಾಧಿಯೆಂತಲೂ, ಅಖಂಡಾಕಾರವೃತ್ತಿಯೆಂತಲೂ, ಪೇಳಲ್ಪಡುವದು. ನಮಗೆ ಬ್ರಹ್ಮೋತ್ತರಜ್ಞಾನವಿಲ್ಲದ್ದರಿಂದ ಕರ್ಮಜವಾದ †ಆಧಿಭೌತಿಕ ಶರೀರವು ಸಂಭವಿಸುವದಿಲ್ಲ. ಪರ

*ಶರೀರವನ್ನೇ ನಾನುಯೆಂದು ತಿಳಿಯುವಿಕೆ.

†ಪೃಥಿವೀ ಅಪ್ಪು ತೇಜಸ್ಸು ವಾಯು ಆಕಾಶವೆಂಬ ಪಂಚಭೂತಗಳಿಂದುಂಟಾದ ಶರೀರಕ್ಕೆ "ಆದಿಭೌತಿಕ" ಶರೀರವೆಂದು ಹೆಸರು.

ಮೇಶ್ವರನಿಂ ಕ್ಲೃಪ್ತವಾದ ಅಧಿಕಾರದಲ್ಲಿರುವರಾದ್ದರಿಂದ ಪ್ರಕೃತೋಚಿತವಾದ ಐಹಿಕಶರೀರಗಳಂ ಧರಿಸಿ, ಅಹಂಭಾವವಿಲ್ಲದೆ ಆಯಾಯ ಕಾರ್ಯ್ಯಗಳಂ ನಡಿಸುತ್ತಾ ಕರ್ಮಬಂಧಕ್ಕೆ ಒಳಗಾಗದೆ ಇರುವೆವು. ನಮ್ಮ ಶರೀರವು ಸಂಕಲ್ಪನಗರದಂತೆ ವ್ಯೋಮರೂಪವಾದ್ದರಿಂದ ನಾವು ಎಲ್ಲಿಗೆ ಪೋಗುವದಕ್ಕೂ ತಡೆಯಿಲ್ಲದೆ ಇರುವದು. ಲೋಕಾಂತರ ಪ್ರಾಪ್ತಿಗೆ ನಮ್ಮ ಶರೀರವೆ ತಡೆಯಾಗಿರುವದ್ದರಿಂ ಜಡಭೌತಿಕವಾದ ಈ ಶರೀರವು ಬಿಡತಕ್ಕದ್ದಾಗಿರುವದು. ಭಯಪಡುವನಿಗೆ ಭ್ರಾಂತಿಪಿಶಾಚವು ಬಲವಾಗುವಂತೆ ಅಜ್ಞಾನಿಗೆ ಆತಿವಾಹಿಕದೇಹವೇ ದೃಢವಾದ ಭಾವನೆಯಿಂದ ಆಧಿಭೌತಿಕವಾಗಿ ಬಾಧಕವಾಗಿರುವದು. ವಿಚಾರದಿಂದುಂಟಾದ ಬ್ರಹ್ಮಾತ್ಮಜ್ಞಾನದಿಂದ ಈ ವಾಸನೆಯಡಗಲು, ಪುನಃ ಆತಿವಾಹಿಕಭಾವವೇ ಉಂಟಾಗುವದು. ಪ್ರಕೃತದಲ್ಲಿ ನಿರ್ವಿಕಲ್ಪಸಮಾಧಿಯಿಂದ ನೀನು ಈ ಕರ್ಮ ಶರೀರಸಂಬಂಧವಂ ಬಿಟ್ಟರೆ ನಿನ್ನ ಜನ್ಮಾಂತರ ಪ್ರದೇಶವಂ ನೋಡಬಹುದು. ಎಂದು ಸರಸ್ವತಿಯು ಪೇಳುತ್ತಾ ಎಲೌ ದೇವಿಯೇ! ಈ ಆಧಿಭೌತಿಕ ಶರೀರವು ಭಾವನಾಬಲದಿಂದ ಆತಿವಾಹಿಕವಾಗುವದೋ ಇದಕ್ಕೆ ನಾಶವಾಗುವದೋ ಎಂದು ಲೀಲೆಯು ಕೇಳಲು ಮರಳಿ ಪೇಳಿದಳದಂತೆನೆ, ಎಲೌ ಬಾಲೆಯೇ! ಯಾವದು ಇರುವದೋ ಅದಕ್ಕೆ ನಾಶವಾಗಬಹುದು. ವಸ್ತುತಃ ಇಲ್ಲದಿರುವದಕ್ಕೆ ನಾಶವೆಂದರೇನು, ವಿಚಾರದಿಂ ರಜ್ಜುವೆಂದು ತಿಳಿದಬಳಿಕ ಅವಿಚಾರದಿಂದುಂಟಾಗಿದ್ದ ಸರ್ಪವು ಹೋಗುವಂತೆ ಈ ಆಧಿಭೌತಿಕವೂ ಹೋಗುವದು. ಇಲ್ಲಿ ಅಜ್ಞಾನದೊಡನೆ ಆ ಪದಾರ್ಥಕ್ಕು ನಾಶವೆಂದು ತಿಳಿಯತಕ್ಕದ್ದು. ಅನಾದಿಯಾದ ಅಜ್ಞಾನದಿಂ ತೋರಿದ್ದಾದ್ದರಿಂದ ಕಲ್ಪನೆಯಿಂದುಂಟುಮಾಡಲ್ಪಟ್ಟ ಪದಾರ್ಥದಂತೆ ಹೋಯಿತೆಂತಲೂ, ಪೇಳುವದಕ್ಕೆ ಆಗುವದಿಲ್ಲ. ಬಾಳೇಕಂಭದಲ್ಲಿ ಪಟ್ಟೆಗಳಂತೆ ವಳಗೊಳಗಿರುವ ಅನ್ನಮಯಾದಿ ಪಂಚಕೋಶಗಳೂ, ಕಲ್ಲಿನಲ್ಲಿ ಪರೆಗಳಂತೆಯೂ, ಜಲದಲ್ಲಿ ತರಂಗಗಳಂತೆಯೂ, ಪರಿಪೂರ್ಣವಾದ ಬ್ರಹ್ಮದಲ್ಲಿಯೇ ಅಭಿನ್ನವಾಗಿರುವವೆಂದು ನಾವು ತಿಳಿದಿರುವೆವು. ಬಹುರೂಪದಿಂ ಕ್ರೀಡಿಸಲಿಚ್ಛೈಸಿದ ಪರಮಾತ್ಮನು ದೃಕ್ಕೆಂತಲೂ, ಅಂತಃಕರಣವೆಂತಲೂ, ಬಾಹ್ಯಕರಣವೆಂತಲೂ, ದೃಶ್ಯವೆಂತಲೂ, ಪಂಚೀಕರಣ ಕಲ್ಪನೆಯಿಂದ ಹ್ಯಾಗೆ ನಿಯಮಿಸಿರುವನೋ ಈಗಲೂ, ಅದೇಪ್ರಕಾರ ರೂಢವಾಗಿರುವದು. ಆದರೆ ಅವಿವೇಕಿಗಳಾದ ಜನಗಳಿಗೆ ವಿವೇಕಾರ್ಥವಾಗಿ ಈ ಕಲ್ಪನೆಗಳು ಪೇಳಲ್ಪಡುವವಲ್ಲದೆ ದಿಗ್ದೇಶಕಾಲಾದಿ ವಿಭಾಗವಿಲ್ಲದ ಅಖಂಡಸ್ವರೂಪನಾದ ಪರಮಾತ್ಮನಲ್ಲಿ ಈ ಕಲ್ಪನೆ ಹ್ಯಾಗೆ ಉಂಟಾದೀತು? ಹಾಲು, ಮೊಸರು, ಬೆಣ್ಣೆ,

ತುಪ್ಪಗಳಂತೆ ಹಿಂತಿರುಗತಕ್ಕ ರೀತಿಯಿಲ್ಲದೆ ಪದಾರ್ಥವಿಶೇಷಗಳುಂಟಾಗಿದ್ದಲ್ಲಿ ಕಲ್ಪನೆಯೆಂದು ಪೇಳಬಹುದು. ಇಲ್ಲಿ ಜ್ಞಾನಕ್ಕೆ ವಿಕಾರವಲ್ಲದೆ ಪದಾರ್ಥಕ್ಕೆ ವಿಕಾರವಿಲ್ಲದ್ದರಿಂದ ಈ ಪ್ರಪಂಚೋತ್ಪತ್ತಿಗೆ ಅಜ್ಞಾನವೇ ಮೂಲವೆಂದು ಪೇಳುವರು. ಜ್ಞಾನವುಂಟಾದಬಳಿಕ ಸೃಷ್ಟ್ಯಾದಿ ಕ್ರೀಡೆಗಳಿಂ ಕ್ರೀಡಿಸುವದು. ಪರಮಾತ್ಮನಿಗೆ ಸ್ವಾಭಾವಿಕವೆಂದು ಗೊತ್ತಾಗಲು, ಅಜ್ಞಾನದ ಪ್ರಸ್ತಾಪವು ಕೂಡ ಪರಿಹಾಸಕ್ಕೆ ಆಸ್ಪದವಾಗುವದು. ವಿಚಾರವಿಲ್ಲದ ಜನಗಳೇ ಸ್ಥೂಲವೆಂತಲೂ, ಸೂಕ್ಷ್ಮವೆಂತಲೂ, ಕಾರಣವೆಂತಲೂ, ಸಾಕ್ಷಿಯಂತಲೂ, ಬಂಧವೆಂತಲೂ, ಮೋಕ್ಷವೆಂತಲೂ, ಭ್ರಮೆಪಡುತ್ತಿರುವರು. ವಿಚಾರಬಲದಿಂ ನಮಗೆ ಈ ಭ್ರಾಂತಿಗಳಿಲ್ಲದ್ದರಿಂದ ನಮ್ಮ ಶರೀರಗಳು ಜಲದಲ್ಲಿ ಜಲದಂತೆಯೂ, ಅಗ್ನಿಯಲ್ಲಿ ಅಗ್ನಿಯಂತೆಯೂ, ವಾಯುವಿನಲ್ಲಿ ವಾಯುವಿನಂತೆಯೂ, ಆ ಪರಮಾತ್ಮನಲ್ಲಿಯೇ ಅಭಿನ್ನವಾಗಿರುತ್ತಾ ತಡೆಯಿಲ್ಲದೆ ಬೇಕಾದೆಡೆಗೆ ಪೋಗುವದು. ಎಲೌ ಲೀಲೆಯೇ ! ಈಗ ನಿನ್ನ ಹೃದಯದಲ್ಲಿ ವಿಚಾರದಿಂ ಜ್ಞಾನಬೀಜ ಉಂಟಾಗಿರುವದು. ಇದು ವೃದ್ಧಿಯಾಗುತ್ತಾಗುತ್ತ ದೃಶ್ಯಭ್ರಮೆಯು ನಿರ್ವಾಸನೆಯಾಗಿ ಪೋಗುವದು. ಏಕಾಗ್ರಬುದ್ಧಿಯಿಂದೀಜ್ಞಾನಬೀಜವಂ ವೃದ್ಧಿಹೊಂದಿಸುವಳಾಗು. ಬ್ರಹ್ಮೇತರಪದಾರ್ಥವಿಲ್ಲವೆಂಬ ನಿಶ್ಚಯವುಂಟಾಗುವಂತೆ ನಿರಂತರವಾಗಿ ವಿಚಾರಿಸುತ್ತಾ ರಾಗದ್ವೇಷಾದಿಗಳಂ ಬಿಟ್ಟು ಪ್ರತಿಪದಾರ್ಥದಲ್ಲೂ, ಅದರ ಜ್ಞಾನದಲ್ಲೂ, ಬ್ರಹ್ಮಾಭೇದಭಾವವಂ ವಿಚಾರಿಸುತ್ತಿರುವದೇ ಬ್ರಹ್ಮಾಭ್ಯಾಸವೆನಿಸುವದು. ಇದರಿಂದ ನಿಶ್ಶೇಷವಾಗಿ ದೃಶ್ಯಭ್ರಾಂತಿಯಳಿಯಲು ಹಾವು ಪರೆಯಂ ಬಿಡುವಂತೆ ಈ ದೇಹವು ಸ್ಥೂಲಭಾವವಂ ಬಿಟ್ಟು ಸೂಕ್ಷ್ಮಭಾವದಿಂದಾತಿವಾಹಿಕವೆನಿಸುವದು. ಬದುಕಿರುವಂತೆಯೂ, ಸತ್ತಂತೆಯೂ, ದೇಹ ಕಾಣಿಸುವದಲ್ಲದೆ ಸ್ವಪ್ನಸಂಕಲ್ಪಸದೃಶವಾದ ಈ ಭ್ರಾಂತಿಯಲ್ಲಿ ಜೀವನ ಮರಣಗಳೆಂಬುವದು ಹ್ಯಾಗೆ ಸಂಭವಿಸುವದು ? ಎಂದು ಪೇಳುತ್ತಿದ್ದ ಸರಸ್ವತಿಯು ಸಮಾಧಿಯೋಗ್ಯವಾದ ಸ್ಥಳಕ್ಕೆ ಕರದುಕೊಂಡು ಪೋಗಿ ಸಮಾಧಿಸಾಧನವಾದ ಆಸನಲಕ್ಷ್ಯಾದಿಗಳಂ ತೋರಿಸುತ್ತಾ ಆ ಲೀಲೆಯೊಡನೆ ತಾನೂ ಸಮಾಧಿಗೆ ಕುಳಿತುಕೊಂಡಳು. ಬಳಿಕ ನಿರ್ವಿಕಲ್ಪಸಮಾಧಿಯಂ ಪಡದ ಲೀಲೆಯೂ, ಸ್ಥೂಲಶರೀರವಂ ಬಿಟ್ಟು ತೇಜೋಮಯವಾದ ಸೂಕ್ಷ್ಮಶರೀರದಿಂ ಚಂದ್ರಕಳೆಯಂತೆ ಮೇಲಕ್ಕೆ ಏಳಲು ಪೂರ್ವಶರೀರದಿಂದಲೇ ಆ ಸರಸ್ವತಿಯು ಸಖಿಯಂತ ಲೀಲೆಯಂ ಹಿಡಿದುಕೊಂಡು ಗಗನಮಾರ್ಗದಲ್ಲಿ ಸಂಚರಿಸುತ್ತಾ ಸಮುದ್ರದಂತಿರುವ ಆ ಗಗನದಲ್ಲಿ ತೆರೆಗಳಂತಿರುವ ಮೇಘಗಳನ್ನು ಬಡಬಾಗ್ನಿಯಂತೆಸೆವ ತೇಜೋ

ಮಂಡಲವನ್ನು ರತ್ನಗಳಂತಿರುವ ನಕ್ಷತ್ರಗಳನ್ನು ಜಲಮಾನುಷನಂತೆ ಸಂಚರಿಸುವ ಸಿದ್ಧವಿದ್ಯಾಧರಾದಿಗಳನ್ನು ಪತಗುಗಳಂತಿರುವ ವಿಮಾನಗಳನ್ನು ಸೀರಾನೆಗಳಂತೆ ಆಡುತ್ತಿರುವ ದೇವಗಜಗಳನ್ನು ಮೀನು, ಮೊಸಳೆ, ಆಮೆ, ಹಾವುಗಳಂತೆ ತಿರುಗುತ್ತಿರುವ ವಿಚಿತ್ರಾಕಾರಗಳಾದ ಪ್ರಾಣಿಗಳನ್ನು ಅತ್ಯಾಶ್ಚರ್ಯಕರವಾದ ಸಂಪತ್ತುಗಳು ಪ್ರಕಾಶಿಸುತ್ತಿರುವ ದಿಕ್ಪಾಲಕಪುರಗಳನ್ನು ತೇಜೋಮಯುವಾದ ಸ್ವರ್ಗಾದಿ ಲೋಕಗಳನ್ನು ಅಲ್ಲಲ್ಲಿ ಕ್ರೀಡಿಸುತ್ತಿರುವ ಕಿನ್ನರ ಕಿಂಪುರುಷ ಯಕ್ಷರಾಕ್ಷಸಾದಿಗಳನ್ನೂ, ಪುಣ್ಯಕ್ಷಯದಿಂ ದೀನರಾಗಿ ಬೀಳುತ್ತಿರುವ ಕರ್ಮದೇವತೆಗಳನ್ನೂ, ಧರ್ಮಪ್ರಾಬಲ್ಯದಿಂದಘ್ನನಿರೋಧಮಯುವಾದ ವಿಮಾನಗಳನ್ನೇರಿ ಸ್ವರ್ಗಾದಿ ಲೋಕಗಳಂ ಹೊಂದುತ್ತಿರುವ ಪುಣ್ಯಾತ್ಮರನ್ನೂ, ಸಕಲ ಲೋಕಾಧಾರವಾಗಿರುವ ಮೇರುಪರ್ವತವನ್ನೂ, ಹರಿಹರಾದಿಗಳಿಗೆ ಕ್ರೀಡಾಸ್ಥಾನವಾಗಿರುವ ಅದರ ಶಿಖರಗಳನ್ನೂ, ಸುತ್ತಮುತ್ತಲೂ ಕುಳಿತಿರುವ ಕಾಡಾನೆಗಳಂತೆ ಕಾಣುತ್ತಿರುವ ಮಂದರಗಂಧಮಾದನಾದಿ ಪರ್ವತಗಳನ್ನೂ, ಜಂಬೂದ್ವೀಪ ಮೊದಲಾದ ದ್ವೀಪಗಳಿಗೆ ಆವರಣಗಳಂತಿರುವ ಸಪ್ತಸಮುದ್ರಗಳನ್ನೂ, ಸಕಲ ಗ್ರಹನಕ್ಷತ್ರಗಳಿಗೆ ಆಧಾರವಾಗಿರುವ ಶಿಂಶುಮಾರಚಕ್ರವನ್ನೂ, ಚಕ್ರಪಾಣಿಯ ಪ್ರಸಾದದಿಂ ಸ್ಥಿರವಾಗಿರುವ ಧ್ರುವನ ಮಂಡಲವನ್ನೂ, ನೋಡುತ್ತಾ ಅಲ್ಲಲ್ಲಿರುವ ವಿಶೇಷಗಳನ್ನು ಲೀಲೆಗೆ ತೋರಿಸಿ ಹೇಳುತ್ತಲೂ ಹಿರಣ್ಮಯುವಾದ ಬ್ರಹ್ಮಾಂಡಗೋಳಕವನ್ನು ಅಸಂಗಭಾವದಿಂ ನಿರೋಧವಿಲ್ಲದೆ ಅತಿಕ್ರಮಿಸಿ ಮತ್ತೊಂದು ಬ್ರಹ್ಮಾಂಡವನ್ನು ಹೊಂದಿ, ಅಲ್ಲಿ ಅರುಂಧತೀ ವಸಿಷ್ಠರಿಗೆ ಆಶ್ರಯವಾಗಿದ್ದ ಗಿರಿಗ್ರಾಮವನ್ನು ಕಂಡು ಸರೋವರವನ್ನು ಕಂಡ ಹಂಸೆಯಂತೆ ಇಳಿಯುತ್ತಿರಲು ಆಗ ಆ ಗ್ರಾಮವು ಅಗಸ್ತ್ಯಮುನಿಯಿಂ ಹೀರಲ್ಪಟ್ಟ ಸಮುದ್ರದ ಹಳ್ಳದಂತೆಯೂ, ಕಾಡುಗಿಚ್ಚಿನಿಂದರ್ಧ ದಗ್ಧವಾಗಿ ನಿಂದಿರುವ ಉದ್ಯಾನವನದಂತೆಯೂ, ಹರಶರಜ್ವಾಲೆಯಿಂ ಭಸ್ಮೀಕೃತರಾದ ನಾಯಕರುಳ್ಳ ಅಸುರರಪುರದಂತೆಯೂ, ರೋದನಧ್ವನಿಯಿಂದತಿದೀನವಾಗಿ ಕಾಣುತ್ತಿರಲು ಅಲ್ಲಿ ಪಿತೃಕರ್ಮೋದ್ಯುಕ್ತರಾದ ಜ್ಯೇಷ್ಠಶರ್ಮ ಮೊದಲಾದ ಮಕ್ಕಳಂ ಲೀಲೆಗೆ ಸಂಸಾರಭ್ರಾಂತಿಯೆಳೆಯದಿರುವದ್ದರಿಂದ ಪುತ್ರಪ್ರೇಮ ವುಂಟಾಗಲಿಲ್ಲ. ವಿಚಿತ್ರವಂ ನೋಡಬೇಕೆಂಬ ಕುತೂಹಲದಿಂ ಬಾಹ್ಯವಾಸನೆಯಿದ್ದದ್ದರಿಂದಲೂ, ಬ್ರಹ್ಮಜ್ಞಾನವು ಸಿದ್ಧವಾಗಿರುವದ್ದರಿಂದಲೂ, ಅಜ್ಞಾನದಿಂ ದುಃಖಪಡುವ ಸಾಧುಜನಗಳಲ್ಲಿ ಜ್ಞಾನಿಗಳಿಗೆ ಕರುಣೆಯುಂಟಾಗುವಂತೆ ಅನುಗ್ರಹಿಸಲಪೇಕ್ಷೆಯುಂಟಾಗಿ ನಮ್ಮಿಬ್ಬರನ್ನು ಈ ಗ್ರಾಮಜನಗಳು ನೋಡಲೆಂದು ಅಪೇಕ್ಷಿಸಿದಳು.

ಬ್ರಹ್ಮಜ್ಞಾನಮಹಿಮೆಯಿಂದಿಷ್ಟಾಸಿದ್ಧಿಯುಂಟಾಗಿದ್ದದ್ದರಿಂದ ಲೀಲೆಯು ಅಪೇಕ್ಷಾನುಗುಣವಾಗಿ ಜ್ಯೇಷ್ಠಶರ್ಮಾದಿಗಳು ಲಕ್ಷ್ಮೀಗೌರಿಯರಂತೆಯೂ, ವಸಂತಮಾಸ ಲಕ್ಷ್ಮಿಯರಂತೆಯೂ, ಶ್ರೀವಿದ್ಯಾಭಿಮಾನಿ ದೇವತೆಗಳಂತೆಯೂ, ಪ್ರತ್ಯಕ್ಷವಾಗಿರುವ ಆ ಲೀಲಾಸರಸ್ವತಿಗಳನ್ನು ಕಂಡು, ಎಲೌ ಪರಾನುಗ್ರಹಪರಾಯಣರಾದವನ ಲಕ್ಷ್ಮಿಗಳಿರಾ ಶರಣಾಗತರಾದ ನಮ್ಮನ್ನನುಗ್ರಹಿಸಬೇಕೆಂದು ಸ್ವಜನರಿಂದೊಡಗೂಡಿ ಅವರ ಚರಣಗಳಮೇಲೆ ಪುಷ್ಪಾಂಜಲಿಗಳಂ ಸಮರ್ಪಿಸಿದರು. ಬಳಿಕ ನೀವು ಏನುಕಾರಣ ದುಃಖಿತರಾಗಿದ್ದೀರೆಂದು ಲೀಲಾ ಸರಸ್ವತಿಯರು ಕೇಳಲು, ಜ್ಯೇಷ್ಠಶರ್ಮನಿಂತೆಂದನು.

ಎಲೌ ಪರದೇವತೆಗಳಿರಾ ! ನಮ್ಮ ತಾಯಿ ತಂದೆಗಳಾದ ಅರುಂಧತೀ ವಸಿಷ್ಠರೆಂಬ ಮುನಿದಂಪತಿಗಳು ಇಲ್ಲಿ ಸಕಲ ಪ್ರಾಣಿಗಳಿಗೂ, ಜೀವನಾಧಾರವಾಗಿ ಅತಿಥ್ಯಭ್ಯಾಗತರಿಗೂ, ಸಂತೋಷಕರರಾಗಿದ್ದರು. ಅವರು ಸ್ವರ್ಗಸ್ಥರಾದ್ದರಿಂದ ಅರಾಜಕವಾದ ನಗರದಂತೆಯೂ, ದೀಪವಳಿದ ಮನೆಯಂತೆಯೂ, ಈ ಗ್ರಾಮವು ದುಃಖಾಕುಲವಾಗಿರುವದು. ಅನಾಥರಾದ ನಮಗೆ ಮೂಜಗವೂ ಶೂನ್ಯವಾಗಿರುವಂತೆ ಕಾಣುತ್ತಿರುವದು. ಗುಹೆಗಳಲ್ಲಿರುವ ಪ್ರಾಣಿಗಳು ಗುರುಗುರು ಧ್ವನಿಯಿಂದಲೂ, ತಡೆಯಿಲ್ಲದೆ ಹೊರಡುತ್ತಿರುವ ಪ್ರವಾಹಗಳಿಂದಲೂ, ಗಿರಿಗಳು ಅಳುವಂತಿರುವವು. ನದಿಗಳು ದುಃಖವಂ ತಾಳಲಾರದೆ ಸಮುದ್ರವಂ ಪ್ರವೇಶಿಸುವಂತೆ ತೋರುತ್ತಿರುವವು, ಪೂಗುತ್ತಿಗಳಿಂದ * ಮಕರಂದವಂ ಸುರಿಯುವ ಬಳ್ಳಿಗಳು ಕಣ್ಣೀರುಗಳಂ ಬಿಡುವಂತೆ ಕಾಣುತ್ತಿರುವವು. ದೀನವಾಗಿ ಧ್ವನಿಗೈಯ್ಯುವ ಪಕ್ಷಿಗಳಿಂದ ವೃಕ್ಷಗಳು ರೋದನವಂ ಮಾಡುವಂತಿರುವವು. ಗಿರಿನದಿಗಳು ಕೆಳಗಿನ ಜರಿಗಳಲ್ಲಿ ಬೀಳುತ್ತಾ ಭೃಗುಪತನವಂ ಮಾಡುವಂತೆ ಕಾಣುತ್ತಿರುವವು. ಮನೆಗಳಲ್ಲಿ ಹೆಂಗಸರು, ವನಗಳಲ್ಲಿ ಬಳ್ಳಿಗಳೂ ಕೂಡ ಪಾಣಿಪಲ್ಲವಗಳಿಂದ ಹೃದಯವಂ ಬಡಿಯುತ್ತಾ ವಿಸ್ವರದಿಂದಳುತ್ತಿರುವರು. ಈ ಸ್ವರ್ಗಲೋಕವು ಸತ್ಸಮಾಗಮದಿಂದಾನಂದ ಮಹೋತ್ಸವಯುಕ್ತವಾಗಿರುವದೆಂದು ತಿಳಿಯುತ್ತೇನೆ. ಮಹಾತ್ಮರ ದರ್ಶನವು ಅಮೋಘವಾದ್ದರಿಂದ ನಮಗೆ ದುಃಖಪರಿಹಾರವಾಗುವಂತೆ ಅನುಗ್ರಹಿಸಬೇಕು. ಎಂದು ಪ್ರಾರ್ಥಿಸುವ, ಜೇಷ್ಠಶರ್ಮನ ತಲೆಯಮೇಲೆ ಹಸ್ತವನ್ನಿಟ್ಟು ಸುಖವಾಗಿರೆಂದು ಲೀಲೆಯು ಆಶೀರ್ವಾದವಂ ಮಾಡಲು, ಜೇಷ್ಠಶರ್ಮನು ತತ್ವಜ್ಞಾನವಂ ಪಡದು, ವರ್ಷಾಕಾಲದ ಮೇಘದ ಸಂಬಂಧದಿಂ ಗ್ರೀಷ್ಮತಾಪವಡಗಿದ ಪರ್ವತದಂತೆ ದುಃಖರ

* ಪುಷ್ಪರಸವನ್ನು.

ಹಿತನಾದನು. ಆ ದೇವಿಯರ ಕೃಪಾಕಟಾಕ್ಷದಿಂದಲ್ಲಿರುವ ಜನರೆಲ್ಲರೂ ತಂಗಾಳಿಯುಳ್ಳ ಚಂದ್ರಿಕೆಯಲ್ಲಿ ಕುಳಿತಿರುವರಂತೆ ಸಂತಾಪರಹಿತರಾದರು. ಬಳಿಕ ಅಂತರ್ಧಾನವಂ ಪಡದ ಲೀಲೆಯಂ ಕುರಿತು ಸರಸ್ವತಿ ಇಂತೆಂದಳು.

ಎಲೌ ಲೀಲೆಯೇ ! ನೀನು ಪೂರ್ವದಲ್ಲಿ ಮಾಡಿಕೊಂಡಿದ್ದ ಲೀಲಾಮಂಟಪವಿಮ, ಇಲ್ಲಿದ್ದ ವಸಿಷ್ಠನ ಚೈತನ್ಯವೇ ನಿಮ್ಮ ರಾಜ್ಯಭಾರವಂ ಮಾಡಿತು. ಈಗಿನ ಗಂಡನಾದ ಪದ್ಮರಾಯನ ಶರೀರವು ಈಗ ಪುಷ್ಪಶಯನದಲ್ಲಿರುವದು. ಆ ಚೈತನ್ಯವು ಮತ್ತೊಂದು ಬ್ರಹ್ಮಾಂಡದಲ್ಲಿ ರಾಜ್ಯಾಧಿಪತ್ಯವಂ ಮಾಡುತ್ತಿರುವದು. ಈ ಕಾಲದೇಶಗಳ ಸಂಕೋಚ ವಿಕಾಸರೀತಿಯು ವಿದಿತವಾಯಿತೆ? ಪೂರ್ವದಲ್ಲಿ ನೀನು ಬ್ರಹ್ಮಾಂಡಾಂತರದಲ್ಲಿ ಆಧಿಪತ್ಯವಂ ಮಾಡುವ ರಾಯನಂ ಸಮಾಧಿಯೊಳ್ ನೋಡುತ್ತಿರುವಲ್ಲಿ, ಚಿದಾಕಾಶರೂಪಳಾಗಿದ್ದಾಗ್ಯೂ, ವಿಚಾರವಿಷಯದಲ್ಲಿ ಅಭ್ಯಾಸವಿಲ್ಲದ್ದರಿಂದ ಇಚ್ಛೈಸಿದಾಗ್ಯೂ, ಅವನಿಗೆ ನೀನು ಗೋಚರಳಾಗಲಿಲ್ಲ. ಈಗ ನಿನಗೆ ಅಭ್ಯಾಸಬಲದಿಂದಿಚ್ಛಾಸಿದ್ಧಿಯಾಗಿದ್ದದ್ದರಿಂದ, ನಿನ್ನ ಇಚ್ಛೆಯಿಂದ ನನ್ನ ರೂಪವು ಕೂಡ ಗೋಚರವಾಗಬೇಕಾಯಿತು. ಸಂಸಾರವಾಸನೆ ತಪ್ಪಿದ್ದರಿಂದ ನಿನಗೆ ಪುತ್ರಬುದ್ಧಿಯುಂಟಾಗಲಿಲ್ಲ. * ಮೈತ್ರೀಕರುಣಾಮುದಿತೋಪೇಕ್ಷೆಗಳು ಪುಟ್ಟುವದೇ ಜ್ಞಾನೋದಯಕ್ಕೆ ಚಿಹ್ನೆಯಾದ್ದರಿಂದ, ನಿನಗೆ ಈ ಜನಗಳಮೇಲೆ ದಯವುಂಟಾದುದು. ಆದ್ದರಿಂದವರಿಗೂ ದುಃಖನಾಶವಾಯಿತು. ಇದೇ ಸತ್ಪುರುಷರ ಲಕ್ಷಣವೆಂದು ತಿಳಿಯುವಳಾಗು. ಸ್ವರೂಪಾವಿರ್ಭಾವತಿರೋಭಾವಗಳು ಈಗ ಹ್ಯಾಗೆ ನಿನಗೆ ಇಚ್ಛಾಧೀನವಾಗಿರುವವೋ ಹೀಗೆ ಬ್ರಹ್ಮಕ್ಕ ಇರುವದ್ದರಿಂದ, ದೃಶ್ಯವಾಗಿಯೂ, ಅದೃಶ್ಯವಾಗಿಯೂ, ದೃಕ್ಕಾಗಿಯೂ, ದೃಷ್ಟಿರೂಪವಾಗಿಯೂ, ಸ್ವೇಚ್ಛೆಯಿಂ ಕ್ರೀಡಿಸುತ್ತಿರುವದು. ಹೀಗಿರುವಲ್ಲಿ ದೃಶ್ಯವ್ಯಾವದೊ, ಎಲ್ಲಿರುವದೊ, ನೀನೇ ಆಲೋಚಿಸುವಳಾಗೆಂದು ಸರಸ್ವತಿಯು ಹೇಳುತ್ತಿದ್ದಳೆಂಬಲ್ಲಿಗೆ, ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿಪ್ರಕರಣದೊಳ್ ಲೀಲೆಗ ಪೂರ್ವಜನ್ಮಸ್ಥಾನ ಪ್ರದರ್ಶನ ನಿರೂಪಣವೆಂಬ ಮೂರನೇ ತರಂಗಕ್ಕೆ ಮಂಗಳಮಹಾ.



* ತನಗೆ ಸಮಾನರಲ್ಲಿ ಮೈತ್ರೀ; (ಸ್ನೇಹ;) ದುಃಖಪಡುವವರಲ್ಲಿ ಕರುಣೆ; ತನಗೆ ಮೇಲಾಗಿ ಬದುಕುವವರನ್ನು ನೋಡಿ ಮುದಿತಾ (ಸಂತೋಷ) ತನಗೆ ಆಗದ ಶತ್ರುಗಳ ವಿಷಯದಲ್ಲಿ ಉಪೇಕ್ಷೆ (ಉದಾಸೀನತೆ.)

## ಚತುರ್ಥತರಂಗ ಪ್ರಾರಂಭ.



ಇಂತು ಸರಸ್ವತಿಯ ವಚನವಂ ಕೇಳಿದ ಲೀಲೆಯು, ಎಲೌ ಜಗನ್ಮಾತೆಯೇ! ಹಿರಣ್ಯಗರ್ಭನ ಸಂಕಲ್ಪದಿಂದುಂಟಾದ ಸ್ಥೂಲ ಶರೀರವಂ ಪಡದ ನಾನು ಪೂರ್ವಕಲ್ಪದ ಕರ್ಮಾನುಗುಣವಾಗಿ ಪ್ರಥಮತಃ ವಿದ್ಯಾಧರಿಯಾದೆನು. ಬಳಿಕ ವಾಸನಾದೋಷದಿಂ ಮಾನುಷಿಯಾದೆನು, ಅನಂತರದಲ್ಲಿ ನಾಗಕನ್ಯೆಯಾದೆನು, ಬಳಿಕ ಕಿರಾತಿಯಾದೆನು, ವನವಾಸನೆಯಿಂದ ಬಂದು ಮುನ್ಯಾಶ್ರಮದಲ್ಲಿ ಲತೆಯಾಗಿ ಪುಟ್ಟಿದೆನು, ಚನ್ನಾಗಿ ಸಾಕಿದ ಆ ಮುನಿಯ ಮೇಲಣ ಅಭಿಮಾನದಿಂದಾಮುನೀಶ್ವರನಿಗೆ ಮಗಳಾದೆನು, ಅಲ್ಲಿ ಕರ್ಮವಿಶೇಷದಿಂ ಸ್ತ್ರೀಭಾವವಂ ಬಿಟ್ಟು ಸುರಾಷ್ಟ್ರದೇಶಕ್ಕೆ ರಾಜನಾದೆನು. ಕಾಮಕ್ರೋಧಾತ್ಮಕವಾದ ಐಶ್ವರ್ಯದ ಆವೇಶದಿಂದುಂಟಾದ ದೋಷಗಳಿಂ ನಾನು ಒಂಭತ್ತು ವರ್ಷ ಮುಂಗಳಿಯಾದೆನು, ಪುನಃ ಸ್ತ್ರೀಭಾವವಂ ಪಡದ ನಾನು ಅದೇ ಸುರಾಷ್ಟ್ರದಲ್ಲಿ ಹಸುವಾದೆನು, ಬಳಿಕ ಪಕ್ಷಿಯಾಗಿ ಕಿರಾತರ ಬಲೆಯಲ್ಲಿ ಕೆಲವುಕಾಲ ಬಿದ್ದಿದ್ದೆನು, ಹೀಗೆ ವಾಸನಾವಿಶೇಷದಿಂ ನಾನಾಪ್ರಕಾರವಾಗಿ ಪುಟ್ಟುತ್ತಿರುವ ನನಗೆ ಎಂಟುನೂರು ಜನ್ಮಗಳಾದವು. ಈಗ ಪರದೇವತೆಯಾದ ನಿನ್ನ ಅನುಗ್ರಹದಿಂ ಬ್ರಹ್ಮಜ್ಞಾನವಂ ಪಡದು ವ್ಯಾಪಕಭಾವದಿಂದಿರುವದ್ದರಿಂದ, ಪೂರ್ವಜನ್ಮಗಳಲ್ಲನುಭವಿಸಿದ ಸುಖದುಃಖಗಳೆಲ್ಲವನ್ನು ಸ್ವಪ್ನ ಸಂಕಲ್ಪ, ಮಹೇಂದ್ರಜಾಲ ವಿಲಾಸಗಳನ್ನಾಗಿ ಸ್ಮರಿಸುವೆನೆಂದು ಪೇಳುತ್ತಿದ್ದಳೆಂದು ವಸಿಷ್ಠನು ಪೇಳುವಲ್ಲಿ, ವಜ್ರಕ್ಕಿಂತಲೂ ದೃಢವಾದ ಬ್ರಹ್ಮಾಂಡದ ಗೋಡೆಯನ್ನವರು, ಹ್ಯಾಗೆ ಭೇದಿಸಿಕೊಂಡು ಮತ್ತೊಂದು ಬ್ರಹ್ಮಾಂಡವಂ ಪ್ರವೇಶಿಸಿದರೆಂದು ಶ್ರೀರಾಮನು ಕೇಳುವಲ್ಲಿ, ಮರಳಿ ವಸಿಷ್ಠನಿಂತೆಂದನು. ಎಲೈ ರಾಮಭದ್ರನೇ! ಬ್ರಹ್ಮಾಂಡವೆಲ್ಲಿರುವದು? ಅದರ ಗೋಡೆ ಎಲ್ಲಿರುವದು? ಅದಕ್ಕೆ ವಜ್ರಕ್ಕಿಂತಲೂ ಅಧಿಕವಾದ ಕಾಠಿನ್ಯವೆಲ್ಲಿರುವದು? ಆ ಲೀಲಾ ಸರಸ್ವತಿಯರು ಅಂತಃಪುರದ ಮಧ್ಯಾಕಾಶದಲ್ಲಿ ನೆಡಲ್ಪಟ್ಟ ಮೊಳೆಗಳಂತೆ ಸ್ಥಿರವಾಗಿರುವರು. ವಸಿಷ್ಠನೆಂಬ ಬ್ರಾಹ್ಮಣನು ಅರುಂಧತಿಯ ಲೀಲಾಮಂಡಪದ ಆಕಾಶದಲ್ಲಿ ಏಕದೇಶವನ್ನೇ ಚತುಸ್ಸಮುದ್ರಾಂತವಾದ ಭೂಮಂಡಲವನ್ನಾಗಿ ಅನುಭವಿಸುತ್ತಿರುವನು. ಅರುಂಧತಿಯು ಪ್ರಾದೇಶಮಾತ್ರವಾದ ಅಲ್ಲಿಯ ಆಕಾಶದಲ್ಲೆ ಲೀಲಾರೂಪದಿಂ ಸರಸ್ವತಿಯೊಡನೆ ಬ್ರಹ್ಮಾಂಡಾಂತರಕ್ಕೆ ಹೋಗಿಬಂದಿರುವಳು. ಹಾಸಿಗೆಯಲ್ಲಿ ಮಲಗಿರುವನು ಸ್ವಪ್ನದಲ್ಲಿ ಸ್ವಪ್ನಾಂತರವಂ ಕಾಣುವಂತೆಯೂ ಅಲ್ಲಿ ದೇಶಾಂತರಗಳಿಗೆ ಪೋಗಿಬರುವಂ

ತೆಯು ಬ್ರಹ್ಮಾಂಡಾಂತರ ಗಮನಗಳು ಉಂಟಾದವು, ಇದು ಮನಸ್ಸಿನ ಕಲ್ಪನಾಮಾತ್ರವಲ್ಲದೆ ಮತ್ತೇನೂಯಿಲ್ಲ. ಅಖಂಡಜ್ಞಾನಸ್ವರೂಪನಾಗಿ ಸರ್ವವ್ಯಾಪಕನಾಗಿರುವ ಪರಮಾತ್ಮನಿಗೆ ಗಮನಾಗಮನಗಳೆಂಬುವದು ಮನೋರಥ, ಕಲ್ಪನಾ ವಿಶೇಷಗಳಲ್ಲದೆ ಮತ್ತೊಂದಲ್ಲ. ಈ ಸ್ವರೂಪವನ್ನು ಯಾವನು ತಿಳದಿರುವನೊ ಅವನಿಗೆ ಸರ್ವವು ಆಕಾಶಕ್ಕಿಂತಲು ಶೂನ್ಯವಾಗಿರುವದು. ಯಾವನು ಅರಿಯನೊ ಅವನಿಗೆ ವಜ್ರದ ಸಾರವಾಗಿಯೂ, ಪರ್ವತ ಮಯವಾಗಿಯು ಇರುವದು, ಸಂಕಲ್ಪ ಕಲ್ಪನಾಮಯವಾದ ಮನಸ್ಸು ಒಂದೇ ಪ್ರಕಾಶಿಸುತ್ತಿರುವದಲ್ಲದೆ ಯಾವ ಬ್ರಹ್ಮಾಂಡವು ಇಲ್ಲ, ಯಾವಸಂಸಾರವು ಇಲ್ಲ. ಕಾಮಿಯ ಮನೋರಥ ಕಲ್ಪನೆಗಳಂತೆಯೆ ಪರಮಾತ್ಮನಿಗೂ ಕಲ್ಪನೆಗಳು ಇರುವವು. ಅವನು ಸತ್ಯಸಂಕಲ್ಪನಾದ್ದರಿಂದ ಅವನು ಇಚ್ಛೈಸಿದ್ದೆಲ್ಲವು ಸಿದ್ಧವಾಗುವದು. ಅವನ ಅಖಂಡಭಾವವಂ ತಿಳದು ಯಾವನು ನಿರಹಂಕಾರನಾಗಿ ರಾಗದ್ವೇಷಾದಿಗಳಂ ಬಿಡುವನೋ ಅವನು ಸತ್ಯಸಂಕಲ್ಪನಾಗುವನು. ಸ್ವಪ್ನವಂ ನೋಡುವಂಥಾವನು ಸ್ವಪ್ನದಲ್ಲಿರುವ ಜನಗಳನ್ನು ಪದಾರ್ಥಗಳನ್ನು ಸಹ ತಿಳಿಯುವನು. ಸ್ವಪ್ನ ಪ್ರಪಂಚದ ಜನಗಳಾದರೋ ಸ್ವಪ್ನವಂ ನೋಡುವ ಪುರುಷನಂ ತಿಳಿಯುವದಿಲ್ಲ. ಹೀಗೆ ಜ್ಞಾನಶಕ್ತಿಯ ಮಹಿಮೆಯಿಂದ ಅಮೋಘವಾದ ಇಚ್ಛಾಕ್ರಿಯೆಗಳುಳ್ಳ ಪರಮಾತ್ಮನ ಕಲ್ಪನೆಗೆ ಒಳಗಾದ ಪ್ರಾಣಿಗಳು ಅವನಂ ಕಾಣರು. ಆ ಪರಮಾತ್ಮನಾದರೋ ಇವರೆಲ್ಲರನ್ನು ನೋಡುತ್ತಿರುವನು. ಪರಮಾತ್ಮನು ಸರ್ವತ್ರ ಪೂರ್ಣನಾಗಿರುವದ್ದರಿಂದ, ಜ್ಞಾನದಿಂದಾಗಲೀ, ಅಜ್ಞಾನದಿಂದಾಗಲೀ ಕಲ್ಪಿತವಾದ ವಸ್ತುಗಳು ತಮ್ಮತಮ್ಮ ಯೋಗ್ಯತೆಗೆ ಸರಿಯಾಗಿ ಫಲವನ್ನುಂಟುಮಾಡುವವು. ಆದ್ದರಿಂದ ಭ್ರಾಂತಿಪಿಶಾಚಿಗಳಿಂದ ಅನೇಕಜನ ವ್ಯಥೆ ಪಡುತ್ತಿರುವರು. ಸ್ವಪ್ನಾಂಗನಾ ಸಂಗವು ಕೂಡ ಕಾರ್ಯಕಾರಿಯಾಗುವದು. ರಜ್ಜುಭುಜಂಗವು, ಬಿಸಲು ದೊರೆಯೂ ಕೂಡ ಭ್ರಾಮಕವಾಗುವದು. ಪರಮಾತ್ಮನ ಅಖಂಡಭಾವವು ತಿಳದಲ್ಲದೆ ದೃಶ್ಯಪಿಶಾಚವು ಬಿಡಲಾರದಾದ್ದರಿಂದ ಅವನ ಮಹಿಮೆಯಂ ಚನ್ನಾಗಿ ತಿಳಿಯುವನಾಗು. ಪರಮಾತ್ಮನು ಜ್ಞಾನಸ್ವರೂಪನಾದ್ದರಿಂದ, ಜ್ಞಾನಶಕ್ತಿಯಿಂದುಂಟಾದ ಪದಾರ್ಥಗಳೆಲ್ಲವು ಅವನಂತೆಯೇ ನಿಶ್ಚಯಿಸತಕ್ಕದ್ದು. ಮತ್ತೂ ಅವನಿಲ್ಲದ ಪದಾರ್ಥವು ಇಲ್ಲವೇಯಿಲ್ಲವಾದ್ದರಿಂದಲೂ, ಅವನು ಇತರ ಪದಾರ್ಥದಲ್ಲಿರತಕ್ಕವನಲ್ಲವಾದ್ದರಿಂದಲೂ, ಸರ್ವವು ಆ ಪರಮಾತ್ಮನೆಂತಲೇ ತಿಳಿಯತಕ್ಕದ್ದು. ಹೀಗಿರುವದ್ದರಿಂದ ಚಿನ್ನದಲ್ಲಿ ಕಟಕದಂತೆಯೂ, ಮರುಭೂಮಿಯಲ್ಲಿ ಜಲದಂತೆಯೂ, ಪರಮಾತ್ಮನಲ್ಲಿರುವ ಈ ಪ್ರಪಂಚವು

ಸುಳ್ಳಾದಾಗ್ಯೂ ಯಥಾರ್ಥದಂತೆ ಕಾಣುತ್ತಿರುವದೆಂದು ತಿಳಿಯುವನಾಗು. ಬಳಿಕ ಲೀಲೆಯು ತನ್ನ ಕಾಂತನು ಆಧಿಪತ್ಯವಂ ಮಾಡುತ್ತಿರುವ ಸ್ಥಳವಂ ತೋರಿಸೆಂದು ಪ್ರಾರ್ಥಿಸಲಾಗ ಸರಸ್ವತಿಯು ಸೂಕ್ಷ್ಮರೂಪದಿಂ ಭೂಲೋಕಕ್ಕೆ ಬಂದಿರುವ ಸ್ವರ್ಗದಂತೆ ಪ್ರಕಾಶಿಸುವ ಆ ಗಿರಿಗ್ರಾಮದ ಸೊಬಗಂ ಲೀಲೆಗೆ ತೋರುತ್ತಲೂ, ಅಲ್ಲಲ್ಲಿ ಆ ಲೀಲೆಯು ಪೇಳಿದ ಜನ್ಮಾಂತರ ಸುಖ ದುಃಖಗಳಂ ಕೇಳುತ್ತಲೂ, ಅವಳೊಡನೆ ಪುನಃ ಗಗನಮಾರ್ಗವಂ ಹೊಂದಿ ನಾರಾಯಣಮೂರ್ತಿಯಂತೆ ಜನಗಳಿಗೆ ಜೀವನಾಧಾರವಾದ ಮೇಘಮಂಡಲವಿದು. ಜಗತ್ಪ್ರದೀಪನಾದ ಸೂರ್ಯನ ಮಂಡಲವಿದ್ದು ವಿಯೋಗ ಸಂಭೋಗ ಶೃಂಗಾರ ರಸಾಂಧರಾದ ರಾಗಿಗಳಿಗೆ ಸಂತಾಪ ಸಂತೋಷಕಾರಣವಾದ ಚಂದ್ರಮಂಡಲವಿದು. ಗಗನವೆಂಬ ರತ್ನಾಕರಕ್ಕೆ ರತ್ನಾಕಾರವಾಗಿ ಕಾಣುತ್ತಿಹ ನಕ್ಷತ್ರಮಂಡಲವಿದು, ಇವುಗಳೇ ಪ್ರಾಣಿಗಳ ಕರ್ಮಾನುಸಾರವಾಗಿ ನಿಲ್ಲುವ ಕುಜಾದಿಗ್ರಹಗಳು, ಇದುಗೋ ಸುಕೃತಶಾಲಿಗಳಿಗೆ ಭೋಗಸ್ಥಾನವಾದ ಸ್ವರ್ಗಲೋಕಗಳು, ಇಲ್ಲಿಯೆ ಗಜರಾಜವರದನಾದ ನಾರಾಯಣನವರ ಪ್ರಭಾವದಿಂ ಧ್ರುವನಿರುವನು, ಇದೇ ಶ್ರಾದ್ಧ ದೇವತೆಗಳಿಗೆ ನಿವಾಸಸ್ಥಾನವಾದ ಪಿತೃಲೋಕವು, ಇದೇ ಸೂರ್ಯಮಂಡಲವಂ ಭೇದಿಸಿಕೊಂಡು ಬರುವ ವೀರಸನ್ಯಾಸಿಗಳಿಗೆ ಪ್ರಾಪ್ಯವಾದ ಬ್ರಹ್ಮಲೋಕವು, ಯಥಾವಿಧಿಯಾಗಿ ಗೋದಾನ ಗೋಸೇವೆಗಳಂ ಮಾಡುವರಿಗೆ ಲಭ್ಯವಾಗಿ ರಾಧಾಕೃಷ್ಣರಿಗೆ ವಿಲಾಸಸ್ಥಾನವಾಗಿರುವ ಗೋಲೋಕವಿದೆಂದು ಆಯಾಯಪ್ರದೇಶಗಳಂ ಲೀಲೆಗೆ ತೋರಿಸುತ್ತಾ ತರಂಗರಹಿತವಾದ ಸಮುದ್ರದಂತೆಸೆವ ಗಗನಮಾರ್ಗವನ್ನೇರಿ, ಎಲೌ ಬಾಲೆಯೆ! ಇತ್ತನೋಡು, ಕಗ್ಗತ್ತಲೆಯಿಂಕೂಡಿದ ಪಾಳುಭಾವಿಯಲ್ಲಿ ಮಿಣುಗುವ ಮಿಂಚುಹುಳುಗಳಂತೆ ಸೂರ್ಯಾದಿ ತೇಜೋಮಂಡಲಗಳು ಕೊಂಚಕೊಂಚವಾಗಿ ಕಾಣುತ್ತಿರುವವು. ಇದೇ ಬ್ರಹ್ಮಾಂಡ ಗೋಳಕದಲ್ಲಿರುವ ಮೇಲ್ಗಡೆಯ ಆಕಾಶವು, ಇದುಗೋ ಹಿರಣ್ಮಯವಾದ ಬ್ರಹ್ಮಾಂಡಗೋಳಕದ ಗೋಡೆ ಇದೆಂದು ತೋರುತ್ತಾ ಅಸಂಗಭಾವದಿಂ ತಡೆಯಿಲ್ಲದೆ ಬ್ರಹ್ಮಾಂಡವನ್ನತಿಕ್ರಮಿಸಿ ಅದಕ್ಕಿಂತಲೂ, ಉತ್ತರೋತ್ತರ ದಶಗುಣಾಧಿಕವಾಗಿರುವ, ಜಲಾಗ್ನಿ ವಾತಾಕಾಶಮಯವಾದ ಆವರಣಗಳಂ ದಾಟಿ ಅಪರಿಮಿತವಾದ ಬಾಹ್ಯಾಕಾಶವಂ ಸೇರಿ ಎಲೌ ಲೀಲೆಯೇ! ಈ ಅಖಂಡಾಕಾಶವಂ ನೋಡುವಳಾಗು. ಇಲ್ಲಿ ಸಮುದ್ರದೊಳ್ತೆರೆಗಳಂತೆ ಜ್ಞಾನಗಳು ಗುಳ್ಳೆಗಳಂತೆ ಬ್ರಹ್ಮಾಂಡಗಳು ಪ್ರಕಾಶಿಸುವವು. ಇಲ್ಲಿ ಯಾರಾರಿಗೆ ಹ್ಯಾಗೆಹ್ಯಾಗೆ ಜ್ಞಾನಗಳುಂಟಾಗು

ವವೋ ಹಾಗೆಹಾಗೆ ರೂಪಗಳುಂಟಾಗುವವು. ಇಲ್ಲಿ ಊರ್ಧ್ವಾಧೋಭಾಗ ನಿಯಾಮಕವಾದ ಭೂಮಿಯಿಲ್ಲದ್ದರಿಂದಲೂ, ಸೂರ್ಯಾದ್ಯುದಯಗಳಿಲ್ಲದ್ದರಿಂದಲೂ, ದಿಗ್ವಿಭಾಗಗಳಿಲ್ಲದೆ ಇರುವದು ಆದಾಗ್ಯೂ ಜ್ಞಾನಕಲ್ಪಿತವಾದ ನಿಯಮದಿಂದ ಮೇಲಕ್ಕೂ ಕೆಳಕ್ಕೂ ಅಡ್ಡಲಾಗಿಯೂ, ಚಲಿಸುವ ಬ್ರಹ್ಮಾಂಡಗಳಂ ನೋಡುವಳಾಗು. ಇಲ್ಲಿ ಬಾಲಕರ ಸಂಕಲ್ಪಜಾಲದಂತೆ ಜ್ಞಾನಗಳೇ ಹುಟ್ಟಿ ಹುಟ್ಟಿ ಶಾಂತವಾಗುತಲಿರುವವು. ಬ್ರಹ್ಮ ವಿಷ್ಣು ಮಹೇಶ್ವರಾದಿಗಳು ಸಮಸ್ತ ಪ್ರಾಣಿಗಳು ಸಹ ಇಲ್ಲಿಯೇ ಪುಟ್ಟುವರೆಂದು ಪೇಳುತ್ತಾ ಬಿಸಲು ಗೋಲಿನಲ್ಲಿ ತ್ರಸರೇಣುಗಳಂತೆ ಅಲ್ಲಿ ಕಾಣುತ್ತಿರುವ ಬ್ರಹ್ಮಾಂಡಗಳಲ್ಲಿ ಒಂದು ಬ್ರಹ್ಮಾಂಡವಂ ಪ್ರವೇಶಿಸಿ ಅಲ್ಲಿ ಅಂತಃಪುರದೊಳ್ ಪದ್ಮರಾಜನ ಶರೀರವಿರುವದನ್ನು ಜನರೆಲ್ಲರು ನಿದ್ರಾಂಧರಾಗಿರುವದನ್ನು ಕಂಡು ಲೀಲೆಯು ಸಂಸಾರವಾಸನೆಯಂ ಪೊಂದುವಷ್ಟರಲ್ಲಿಯೇ ಆ ಬ್ರಹ್ಮಾಂಡದಿಂ ಮತ್ತೊಂದು ಬ್ರಹ್ಮಾಂಡವನ್ನಾಲೀಲೆಯೊಡನೆ ಪ್ರವೇಶಿಸಲು ಅಲ್ಲಿ ಅತಿ ಭಯಂಕರವಾದ ಯುದ್ಧವಾಗುತ್ತಿರುವಲ್ಲಿ ಅದಂ ನೋಡಲೋಸುಗ ಅಂತರಿಕ್ಷದಲ್ಲಿ ದೇವಸಮೂಹವೆಲ್ಲವು ಸೇರಿರಲು ಅಲ್ಲಿ ಪರಾಕ್ರಮಶ್ಲಾಘನಾಸಕ್ತರಾದವರ ಮಹಾವೀರರ ಯುದ್ಧಚಮತ್ಕಾರವಂ ನೋಡಿ ಪುಷ್ಪವೃಷ್ಟಿಯಂ ಕರೆಯುತ್ತಿರಲು ಒಂದೆಡೆಯೊಳ್ ಮಹಾಶೂರರಂ ದೇವದೂತರು ಮೇಲಕ್ಕೆ ಕರತರುವದನ್ನು ಮತ್ತೊಂದೆಡೆಯೊಳ್ ಗಂಧರ್ವ ಚಾರಣಾದಿಗಳು ಅವರಿಗೆ ಸಮ್ಮಾನವಂ ಮಾಡುವದನ್ನು ಅವರಿಗೆ ಅಪ್ಸರೆಯರ ಸೇವೆಯನ್ನು ಸಹ ನೋಡಿದ ಲೀಲೆಯು ಯುದ್ಧವಂ ನೋಡಬೇಕೆಂಬ ಕುತೂಹಲದಿಂ ದಿವ್ಯಾಕ್ಲಿಪ್ತವಾದ ವಿಮಾನವನ್ನೇರಿ ಸರಸ್ವತಿಯೊಡನೆ ಆ ಯುದ್ಧವಂ ನೋಡುತ್ತಿದ್ದಳೆಂದು ವಸಿಷ್ಠನು ಪೇಳುತ್ತಿರುವಲ್ಲಿ ಲೋಕದಲ್ಲಿ ಶೂರನೆಂದು ಯಾವನು ಪೊಗಳಿಸಿಕ್ಕೊಳ್ಳುವನು. ಯಾವನು ಶೂರರಲ್ಲಿ ಅಯೋಗ್ಯನೆನಿಸುವನು ವಿವರಿಸುವನಾಗೆಂದು ಶ್ರೀರಾಮನು ಕೇಳಲು ವಸಿಷ್ಠ ನಿಂತೆಂದನು.

ಎಲೈ ರಘುವೀರನೇ ! ಶಾಸ್ತ್ರೋಕ್ತವಾದ ನಡತೆಯುಳ್ಳ ರಾಜನಿಗೋಸ್ಕರ ಯಾವನು ಯಥಾಶಾಸ್ತ್ರವಾಗಿ ಯುದ್ಧವಂ ಮಾಡುವನೋ ಅವನೇ ಶೂರನೆನಿಸಿಕೊಳ್ಳುವನು. ಅವನು ಕೀರ್ತಿಯಂ ಸಾಧಿಸಿದವನಾದ್ದರಿಂದ ಸತ್ತರೂ ಬದುಕಿರುವನೆಂದು ತಿಳಿಯತಕ್ಕದ್ದು. ಅವನಿಗೆ ಶಾಶ್ವತವಾದ ವೀರಸ್ವರ್ಗವಹುದು. ಯಾವನು ದುರ್ಮಾರ್ಗದಿಂ ಯುದ್ಧವಂ ಮಾಡುವನೋ, ಯಾವನು ದುರ್ಮಾರ್ಗನಾದ ರಾಜನಿಗೋಸುಗ ಯುದ್ಧವಂ ಮಾಡುವನೋ ಅವನಿಗೆ ನರಕವು ತಪ್ಪ

ದು. ಗೋಬ್ರಾಹ್ಮಣನಿಮಿತ್ತವಾಗಿಯೂ, ಮಿತ್ರನನಿಮಿತ್ತವಾಗಿಯೂ, ಶರಣಾಗತರಕ್ಷಣಾರ್ಥವಾಗಿಯೂ ಯಾರು ರಣದಲ್ಲಿ ಪ್ರಾಣವಂ ಬಿಡುವರೋ ಅವರು ವೀರಲೋಕವನ್ನೈದುವರು. ಅವರಿಗೋಸುಗವೇ ಅಪ್ಸರೆಯರು ವರಣಮಾಲೆಯುಂ ಪಿಡಿದು ನಿಂದಿರುವರು. ರಣದಲ್ಲಿ ಸತ್ತ ವೀರರಿಗೆಲ್ಲರಿಗೂ ಸ್ವರ್ಗವಹುದೆಂದು ಅಜ್ಞಾನಿಗಳೇ ಪೇಳುವರು. ಯಾರು ಶಾಸ್ತ್ರಮಾರ್ಗಕ್ಕೆ ಸರಿಯಾಗಿ ಯುದ್ಧವಂಮಾಡುತ್ತಾ ಶಸ್ತ್ರಪ್ರಹಾರವಂ ಸಹಿಸುವರೋ ಅವರೇ ಶೂರರೆನಿಸಿಕೊಳ್ಳುವರು. ಕಡಮೆಯುವರೆಲ್ಲರೂ ವಯೋಧಿಕರಾದಾಗ್ಯೂ ಹುಡುಗರೆನಿಸಿಕೊಳ್ಳುವರು. ಎಲೈ ರಾಮಭದ್ರನೇ ! ಕಲ್ಪಾಂತವಾತದಿಂದಿಗ್ಭಾಗವಾಗಿ ಮಾಡಲ್ಪಟ್ಟ ಸಮುದ್ರದಂತೆಯೂ, ಇಂದ್ರನಿಂ ಕತ್ತರಿಸಲ್ಪಟ್ಟು ಇತ್ತಂಡವಾಗಿ ಬಿದ್ದಿರುವ ಮೇರುವಿನ ರೆಕ್ಕೆಗಳಂತೆಯೂ, ಚಕ್ರ ಶಕಟ ಗರುಡ ಶ್ಯೇನ ಮೊದಲಾದ ವ್ಯೂಹಕ್ರಮದಿಂ ನಿಲ್ಲಿಸಲ್ಪಟ್ಟ ಉಭಯಸೇನೆಗಳು ಯುದ್ಧೋನ್ಮುಖವಾಗಿರುವಲ್ಲಿ ಲೀಲಾವತಿಯಾದ ವಿದೂರಥನು ಪ್ರತಿಥನಾದ ಸಿಂಧುರಾಜನ ಉರವಣೆಯುಂ ಸೈರಿಸಲಾರದೆ ರಥವಲ್ಲಿದ್ದ ಮುದ್ಗರಾಯುಧವಂ ಹಸ್ತದಿಂ ಪಿಡಿಯುವಲ್ಲಿ ಉಭಯ ಸೇನಾಸಮೂಹಗಳಲ್ಲಿ ವಿಜೃಂಭಿಸಿದ ರಣಭೇರಿಗಳ ಭಾಂಕಾರದಿಂದಲೂ, ಜಯಶಂಖಗಳ ಭಂಕಾರದಿಂದಲೂ, ಭಟರ ಹೂಂಕಾರದಿಂದಲೂ, ಕುದುರೆಗಳ ಹೂಹೂಕಾರದಿಂದಲೂ, ಗಜಗಳ ಘೀಟ್ಕಾರದಿಂದಲೂ, ರಥಚಕ್ರಗಳ ಕ್ರೇಂಕಾರದಿಂದಲೂ, ಧನುಸ್ಸುಗಳ ಟಂಕಾರದಿಂದಲೂ, ಸಡಗರದಿಂ ಪೊರಮಡುವ ಸರಳುಗಳ ಚೀತ್ಕಾರದಿಂದಲೂ, ವೀರರ ಸಿಹ್ಮನಾದದಿಂದಲೂ, ಕರಾಳವಾದ ಕರವಾಳವಂ ಝುಳಪಿಸುವರ ಕಂಕಣಗಳ ಖಣಖಣಶಬ್ದದಿಂದಲೂ, ಕುಂತಿಗಳಿಂದೆತ್ತಲ್ಪಟ್ಟ ಕುಂತಗಳಲ್ಲಿರುವ ಗಗ್ಗರಗಳ ಗರಗರಾರವದಿಂದಲೂ, ಜಗವೆಲ್ಲವೂ ಮೊಳಗುತ್ತಿರೆ ಉಭಯ ಸಮುದ್ರಗಳು ಸೇರುವಂತೆ ಮೊರೆಯುತ್ತಿರುವ ಆ ಸೇನೆಗಳಿಗೆ ಪರಸ್ಪರ ಸಮಾಗಮವುಂಟಾಗಲು ರಕ್ತಬೀಜಾಸುರನ ಶರೀರನಿಕರವಂ ಕಬಳೀಕರಿಸುವ ಮಹಾಕಾಳಿಯಂತೆ ಮೃತ್ಯುದೇವತೆಯು ಬಾಯುತೆರದು ನಿಂದಿರಲು ಶಸ್ತ್ರಬಲದಿಂದಲೂ, ಅಸ್ತ್ರಕೌಶಲದಿಂದಲೂ, ಯುದ್ಧೋತ್ಸಾಹದಿಂದಲೂ, ವೀರಪಾಣದಿಂದಲೂ, ಕಾಲವಿಶೇಷದಿಂದಲೂ, ಮತ್ತರಾಗಿರುವ ವೀರರು ಮೈಮರೆದು ಹಿಂಮೆಟ್ಟದೆ ಯುದ್ಧವಂ ಮಾಡುತ್ತಿರುವಲ್ಲಿ ಭಲ್ಲೆಗಳ ತಿವತದಿಂದಲೂ, ಪರಿಘಗಳ ಅರತದಿಂದಲೂ, ಪಟ್ಟಾಕತ್ತಿಗಳ ಪೆಟ್ಟಿನಿಂದಲೂ, ಚಕ್ರಗಳ ಹರತದಿಂದಲೂ, ಪರಶ್ವಥಗಳ ಪ್ರಹಾರದಿಂದಲೂ, ಬಾಣಗಳ ಪೋಣಿಕೆಯಿಂದಲೂ, ಭೃಶುಂಡಿಗಳ ಖಂಡನಗಳಿಂದಲೂ, ಮುಸಲಗಳ ಎಸೆ

ಯಾಟದಿಂದಲೂ, ಈಟಿಗಳ ಏಟುಗಳಿಂದಲೂ, ಲಗುಡಗಳ ಹೊಡತದಿಂದಲೂ, ಪಡಲುಗಳು ಪಡೆಯುತ್ತಿರಲು ತಾರುಮಾರಾಗಿ ತೆರಳುವ ತೇರುಗಳ ಹರಿತದಿಂ ಕುದುರೆಗಳು ಗುಂಪುಬೆದರಿ ಚದುರಿ ಚತುರರಾದ ಸಾರಥಿಗಳು ನಿಲ್ಲಿಸಿದರೂ ನಿಲ್ಲದೆ ತಲ್ಲಣಗೊಳುತ ಕೀಳ್ಗವಿಗಳುಳ್ಳ ಕಡಿವಾಣಗಳ ತಡತದಿಂ ನಮಗೀಪಾಡಾದುದೆಂದು ಅವುಗಳಂ ಬಿಡಿಸಿಕೊಳ್ಳಲೋಸುಗ ಕಾಲ್ಗೊರಸುಗಳಿಂದ ಮೊಗದ ಪಟ್ಟಿಗಳಂ ಕಳದು ಕತ್ತುಗಳನ್ನೆತ್ತಿಹಾಕುತ ಓಡುತ್ತಿರಲು ಮದವಿಡದ ಮದಾವಳಗಳು ಮದಮುರಿದರೂ ಮೈಮರೆದು ಧರಣಿಯು ಆಶೆ ತೋರದಿದ್ದರೂ ರೋಷಾವೇಶದಿಂ ಹಿಂದೆಮುಂದೆ ತೋರದಿದ್ದದ್ದರಿಂದ ಕುಂತಗಳಂತಿರುವ ದಂತಗಳಿಂದವನಿಯಂ ತಿವಿದು ಮುದರಿಕೊಳ್ಳುತ್ತಿರಲು, ಕಾಲಾಳುಗಳು ಕಾಲ್ಗೆಟ್ಟಾಗ್ಯೂ ಕಾಲಿಗೆ ಬುದ್ಧಿಯಂ ಪೇಳುತ್ತಿರಲು, ಮಹಾವೀರರ ಶರಪರಂಪರೆಗಳು ಪ್ರತಿಭಟರ ತಲೆಗಳಂ ಚಂಡಾಡುತ್ತಿರಲು, *ರುಧಿರದಲಹರಿಗಳು ಹರಿಯುತ್ತಿರಲು ನಾಯಿ ನರಿ ಹದ್ದು ಕಾಗೆಗಳು ಮಾಂಸಗಳಿಗೆ ಯರಗುತ್ತಿರಲು ರಕ್ತಪಾನದಿಂ ಮತ್ತವಾದ ರಣಪಿಶಾಚಗಳು ಮೊತ್ತವಾಗಿ ರಾತ್ರಿಯಲ್ಲಿ ಕಗ್ಗತ್ತಲೆಯಂತೆ ಸುತ್ತಮುತ್ತಲೂ ಮುತ್ತಿಕೊಳ್ಳುತ್ತಿರಲೂ ಪಟ್ಟಾಕತ್ತಿಗಳಿಂದ ಸಾರಥಿಗಳಂ ಕೆಡುಹಿ ಅವರ ಕುದುರೆಗಳನ್ನೇರಿ ಹಾರಾಡಿಸುತ್ತ ತಾವೂ ಹಾರಿ ಮಾವುತರಂ ಕೆಡುಹಿ ಮದ್ದಾನೆಗಳ ಮೇಲೆ ಕುಳಿತು ಕುಂಭಸ್ಥಲಗಳಂ ತಟ್ಟುತಲಿರುವ ವೀರರನ್ನಚ್ಚರಿಯಿಂ ನೋಡುತ್ತಿರುವ ಅಚ್ಚರೆಯರ ಉಡಿಧಾರಗಳಂ ಸಡಲುತ್ತಿರಲು ಆಗ ಯುದ್ಧೋತ್ಸುಕರಾದ ಧೊರೆಗಳು, ಮಂತ್ರಿಗಳು, ಸೇನಾಪತಿಗಳು, ಯುದ್ಧವನ್ನೋಡುವ ದೇವಗಂಧರ್ವಾದಿಗಳು ಸಹ ಇಂತು ಮಾತನಾಡಿದರು ಅದೆಂತೆಂದರೆ:—

ಎಲೈ ಮಿತ್ರರೆ! ಇತ್ತನೋಡಿ, ರಣಾಂಗಣದಿಂ ಹಾರಿಬಾದ ಶೂರರ ಶಿರಗಳಿಂದೀ ಗಗನವು ಕಮಲಾಕರದಂತೆಯೂ, ಅವರ ಕಿರೀಟಗಳಿಂದ ನಕ್ಷತ್ರಗಳಂ ಕೂಡಿರುವಂತೆಯೂ ಕಾಣುತ್ತಿರುವದು. ರಕ್ತಪ್ರವಾಹ ಕರಗಳಂ ಹೊತ್ತುಕೊಂಡು ಬರುತ್ತಿರುವ ಮಾರುತನಿಂದೀಸೂರ್ಯಕಿರಣಗಳು ಸಂಧ್ಯಾರಾಗದಿಂ ಕೂಡಿದುವಂತೆ ತೋರುತ್ತಿರುವವು. ಇತ್ತ ವೀರರ ತಲೆಗಳು ಪಕ್ಷಿಗಳಂತೆ ಅಂತರಿಕ್ಷಕ್ಕೆ ಹಾರುತ್ತಿರುವವು. ಪ್ರತಿಭಟರ ಶರೀರಗಳಂ ಭೇದಿಸಿಕೊಂಡು ಮೇಘಮಂಡಲವಂ ಸೇರಿರುವ ಶರಪರಂಪರೆಗಳು ಸಂಧ್ಯಾಕಾಲದ ಮೇಘಗಳಂತೆ ಶೋಭಿಸುತ್ತಿರುವವು. ಎಷ್ಟು ಧರಣೀ ರೇಣುಗಳು ಭಟರ ರಕ್ತದಿಂ ಸಿಕ್ತವಾ

*ರಕ್ತಪ್ರವಾಹಗಳು.

ಗುವವು. ಅಷ್ಟುಸಾವಿರ ವರ್ಷಗಳು ಆ ಭಟನು ಸ್ವರ್ಗದಲ್ಲಿ ಸೌಖ್ಯಪಡುವರು. ಎಲೈ ಶೂರರಾ! ನೀಲೋತ್ಪಲಶ್ಯಾಮಳಗಳಾದ ಕರವಾಳಗಳ ಝಳಪಿನಿಂದ ನೀವು ಭಯಪಡಬೇಡಿ, ಇವುಗಳು ವೀರಸ್ವರ್ಗ ಲಕ್ಷ್ಮೀಕಟಾಕ್ಷಗಳೆಂದು ತಿಳಿಯಿರಿ, ನಂದನೋದ್ಯಾನದಲ್ಲಿ ವಲ್ಲಿಗಳಂತಿರುವ ಅಪ್ಸರೆಯರು ವೀರರು ಬರುವವಂ ಕಂಡು, ಮಧುಪಾನವಂ ಮಾಡಿ, ಮಧುರವಾಗಿ ಪಾಡುತ್ತಾ ಕುಣಿಯುತ್ತಿರುವರು. ಸಮುದ್ರದಿಂದುದಯಿಸಿದ ಲಕ್ಷ್ಮಿಯು ನಾರಾಯಣನ ಹೃದಯವಂ ಸೇರಿದಂತೆ ನಂದನವನದಿಂ ಬಂದ ಈ ಸುಂದರಿಯು ಈ ಮಹಾವೀರನ ಹೃದಯವನ್ನೈದುವಳು. ಇತ್ತಲೋರ್ವನ ಶಿರವು ಕೇತುವಿನಂತೆ ಸೂರ್ಯಮಂಡಲವಂ ಹೊಂದುವದು, ಇತ್ತಲೊಬ್ಬನ ಶಿರವು ಗಗನದಲ್ಲಿ ಪಕ್ಷಿಯಂತೆ ಹಾರಾಡುತ್ತಿರುವದು. ಇತ್ತ ಯಾವನೋ ಒಬ್ಬನು ಕಾಲಯಮನಂತೆ ಸೇನೆಗಳಂ ಹಾಳುಮಾಡುತ್ತಾ ದಕ್ಷಿಣದಿಂ ಬರುವನು. ಇವನು ಶೂರನಂತೆ ತೋರುತ್ತಿರುವನಾದ್ದರಿಂದ ಇವನಂ ತಡದು ಕೆಣಿಸೋಣ, ಇತ್ತ ತಲೆ ಹೋದ ಮುಂಡಗಳು ಕತ್ತಿನ ರಂಧ್ರದಮೇಲೆ ಕುಳಿತಿರುವ ಹಕ್ಕಿಗಳಿಂದ ಬಹುಮುಖದ ವೇಷವಂ ಧರಿಸಿರುವಂತೆ ಕುಣಿಯುತ್ತಿರುವವು. ಆದರೆ ಈ ಭಟಾಧಿಪತಿಯು ನದಿಗಳಂ ಸಮುದ್ರದಂತೆ ಬಂದ ಸೇನೆಗಳೆಲ್ಲವಂ ಕೆಳಕೊಳ್ಳುವನು. ಇತ್ತ ತೇಜೋಮಯವಾದ ಶರಪರಂಪರೆಗಳು ಸ್ವರ್ಗಲೋಕದ ಸೋಪಾನದಂತೆ ಕಾಣುತ್ತಿರುವವು. ಎಲೆಲೋ ಮೂಢರಾ! ನಿಮ್ಮವರನ್ನೇ ನೀವು ಏಕೆ ತುಳಿಯುತ್ತೀರಿ, ಪ್ರಾಣಶೇಷರಾದವರಂ ಶಿಬಿರವಂ ಹೊಂದಿಸಿ, ಮೂರ್ಛಿತರನ್ನು ಬಿದ್ದಿರುವರನ್ನು, ಓಡುವವರನ್ನೂ ಯಾಕೆ ಹೊಡೆಯುತ್ತೀರಿ, ಎಲೈ ಶೂರನೇ! ಶ್ರಾಂತನಾದೆನೆಂದು ಹಿಮ್ಮೆಟ್ಟಬ್ಯಾಡ, ನಂದನವನದಲ್ಲಿ ಹರಿಯುವ ಮಂದಾಕಿನಿಯ ದಡದಲ್ಲಿ ಬೃಂದಾರಕ ಸುಂದರಿಯರು ಶ್ರಮವಂ ಪರಿಹರಿಸುವರು. ಈ ಅಪ್ಸರೆಯು ಪುಷ್ಪಮಾಲೆಗಳನ್ನೆತ್ತು ವಲ್ಲಿಯೇ ಒಬ್ಬ ವೀರನು ಅದೇ ಮಾಲೆಗಳನ್ನವಳ ತಲೆಗೆಮುಡಿಸಿ ಆಲಿಂಗಿಸುವನು. ಈ ಅಪ್ಸರೆಯು ಪೂರ್ವದಲ್ಲಿ ಬಂದವನಂ ಮುದುಕನೆಂದು ಧಿಕ್ಕರಿಸಿ, ಮತ್ತೊಬ್ಬನಂ ಹೊಂದುವಳು. ಆನೆಗಳ ಗಂಡಸ್ಥಲಗಳಲ್ಲಿ ಬೀಳುವದ್ದರಿಂದ ಬಾಣಗಳಿಗೆ ಶಿಲೀಮುಖಗಳೆಂಬ ಪೆಸರು ಸಾರ್ಥಕವಾದುದು. ಅಂತರಿಕ್ಷಕ್ಕೆ ಹಾರಿದ ಛತ್ರ ಚಾಮರಗಳು ಸ್ವರ್ಗಲೋಕದಲ್ಲುಂಟಾದ ಕೀರ್ತಿಗಳಂತೆ ಪ್ರಕಾಶಿಸುತ್ತಿರುವವು. ಶತ್ರುವಿನ ಶಸ್ತ್ರದಿಂ ಸೀಳಲ್ಪಟ್ಟ ಶರೀರವು ಬೀಳುವಲ್ಲಿಯೇ ಸ್ವಪ್ನಪುರದಂತೆ ದಿವ್ಯಶರೀರವು ಸಿದ್ಧವಾಗುವದು. ಇವನಿಗೆ ಯುದ್ಧದಲ್ಲಿ ಹಿಮ್ಮೆಟ್ಟದಿರುವದ್ದರಿಂದುಂಟಾದ ಯಶವೇ ಶ್ವೇತಛತ್ರ

ವಾಗುವದು. ಶಸ್ತ್ರಗಳಿಂ ಕತ್ತರಿಸಲ್ಪಡುವ ಛತ್ರ ಚಾಮರಗಳು ಹಂಸಗಳಂತೆ ಹಾರುತ್ತಿರುವವು. ಶಸ್ತ್ರಪ್ರಹಾರದಿಂ ಕವಚದಲ್ಲುಂಟಾದ * ಠೆಂಕಾರಗಳಿಂ ಮೃತ್ಯುವಿನ ಹುಂಕಾರಗಳಂತೆ ಭಯಂಕರವಾಗಿರುವವು. ಎಲೆಲಾ ಇತ್ತನೋಡು! ಶಸ್ತ್ರ ಸಂಘಗಳ ಸಂಘಟ್ಟನೆಗಳಿಂದುಂಟಾದ ಕಿಡಿಗಳಿಂದಲೇ ಶೋಣಿತಪ್ರವಾಹವು ಶುಷ್ಕವಾಗುವದು. ಇತ್ತ ರಕ್ತದ ಮಡುವಿನಲ್ಲಿ ಸಾರಥಿ ತುರಂಗ ಪತಾಕೆಗಳಿಂ ಕೂಡಿದ ರಥಗಳೇ ಮುಳುಗುತ್ತಿರುವವು. ರಥ, ಗಜ, ತುರಗ, ಪದಾತಿಗಳಿಂ ಪೊರಮಡುವ ರಕ್ತಧಾರಾ ಕಣಗಳಂ ವಹಿಸುವ ವಾಯುವಿನಿಂದ ದಿಕ್ಕುಗಳೆಲ್ಲವು ಸಂಧ್ಯಾರಾಗದಿಂ ಕೂಡಿರುವಂತೆ ಕಾಣುತ್ತಿರುವವು. ಧನುರ್ಗುಣಗಳ ಠೇಂಕಾರವು ರಣಾಂಗಣವೆಂಬ ರಂಗಸ್ಥಳದಲ್ಲಿ ನರ್ತಿಸುತ್ತಿರುವ ಕಾಳರಾತ್ರಿಗೆ ವೀಣಾಗುಣಧ್ವನಿಯಂತೆ ಸಂತೋಷಕರವಾಗಿರುವದು. ಇತ್ತ ಮಹತ್ತರವಾದ ರಕ್ತಪ್ರವಾಹಗಳಲ್ಲಿ ಸರ್ಪಗಳಂತೆ ಕತ್ತರಿಸಲ್ಪಟ್ಟ ಭುಜಗಳು, ಮೊಸಳೆಗಳಂತೆ ಆನೆ ಸೊಂಡಿಲುಗಳು, ಆಮೆಗಳಂತೆ ಗುರಾಣಿಗಳು, ಹಾವು ಮೀನುಗಳಂತೆ ಕತ್ತಿಗಳು, ಸಾಧಾರಣ ಮೀನುಗಳಂತೆ ಕಠಾರಿಗಳು, ನಾವೆಗಳಂತೆ ರಥಗಳು, ತೃಣಗಳಂತೆ ಶರಗಳು, ನೀರುಗುಳ್ಳೆಗಳಂತೆ ತಲೆಬುರುಡೆಗಳು, ನೊರೆಗಳಂತೆ ಛತ್ರಚಾಮರಗಳು, ಸುಳಿಗಳಂತೆ ರಥಚಕ್ರಗಳು, ಕೋಣಗಳಂತೆ ಆನೆಗಳು ಕಾಣುತ್ತಿರುವವು. ಈ ಪ್ರವಾಹಗಳಲ್ಲಿ ಯಕ್ಷರಕ್ಷಪಿಶಾಚಗಳ ಜಲಕ್ರೀಡೋತ್ಸಾಹವು ಬಣ್ಣಿಸಲಶಕ್ಯವಾಗಿರುವದು. ಎಂದು ದಿಕ್ಕು ವಿದಿಕ್ಕುಗಳಲ್ಲೂ ಜನಗಳ ಮಾತುಗಳು ಕೇಳುತ್ತಿರುವಲ್ಲಿ ರಥ, ಗಜ, ತುರಗ, ಪದಾತಿಗಳ ಮಧ್ಯದಲ್ಲಿ ಮಹಾರಥರಿಗೆ ದ್ವಂದ್ವಯುದ್ಧಗಳು ನಡೆಯುತ್ತಿರಲು ಅಂಗ, ವಂಗ, ಕಳಿಂಗ, ಕಾಶ್ಮೀರ, ಸಿಂಧು, ಸೌವೀರ, ಸೌರಾಷ್ಟ್ರ, ಮಹರಾಷ್ಟ್ರಾದಿ ನಾನಾ ದೇಶಪ್ರಸಿದ್ಧರಾದ ಮಹಾವೀರರಿಂ ಭೇದಿಸಲ್ಪಟ್ಟ ಮಂಡಲಉಳ್ಳವನಂತೆ ಮಾರ್ತಾಂಡನಸ್ತಂಗತನಾಗುತ್ತಿರುವಲ್ಲಿ ಪರಸ್ಪರ ರಾಜಸಂಕೇತದಿಂದೊಬ್ಬಯೋಧನು ಮಹತ್ತರವಾದ ರಥದ ಕೇತುವಿನ ಶಿರೋಭಾಗವನ್ನೇರಿ ಕಾಲಪುರುಷನು ಚಂದ್ರಮಂಡಲವಂ ತೋರಿಸುವಂತೆ ಶುಭ್ರವಾದ ಅಂಬರವಂ ತಿರುಗಿಸಲು ರಣವಾದ್ಯಗಳು ಜಯಲಕ್ಷ್ಮಿಗೆ ಮಂಗಳವಂ ಪೇಳುವಂತೆ ಧ್ವನಿಗೈಯುತ್ತಿರಲು ಉಭಯ ಸೈನಿಕರು ತಮ್ಮತಮ್ಮ ಶಿಬಿರವಂ ಸೇರಿದರು. ಬಳಿಕ ನಾಲ್ಕು ದಿಕ್ಕುಗಳಿಂದಲೂ, ಮಾಂಸಭಕ್ಷಣಾರ್ಥವಾಗಿ ಜ್ವಾಲಾರೂಪವಾದ ನಾಲಿಗೆಗಳನ್ನಳ್ಳಾಡಿಸಿಕೊಂಡು ಓಡೋಡಿ ಬರುತ್ತಿರುವ ರಣಪಿಶಾಚಗಳ ನಾಲಿಗೆಗಳ ಕಾಂತಿಯಂತೆ

* ಟ್ಟಣ್ ಟ್ಟಣ್, ಎಂಬ ಧ್ವನಿಗಳು.

ಉದಯಿಸಿದ ಸಂಧ್ಯಾರಾಗದಿಂ ದಿಕ್ಕುಗಳು ಕೆಂಪಾಗುತ್ತಿರಲು ರಣವೈದ್ಯರು ಕ್ಷತಾಂಗರಾದವರಿಗೆ ಚಿಕಿತ್ಸೆಯಂ ಮಾಡುತ್ತಿರಲು ಸೇನಾಪತಿಗಳು ತಮ್ಮವರ ಕ್ಷೇಮಸಮಾಚಾರವಂ ವಿಚಾರಿಸುತ್ತಾ ತಮ್ಮ ತಮ್ಮ ಬಿಡಾರಗಳಂ ಸೇರುತ್ತಿರಲು ಕಾಲೋಚಿತವಾದ ಆಹಾರಗಳಂ ಸೇವಿಸಿದ ವೀರರು ಬೆಳ್ದಿಂಗಳಲ್ಲಿ ಶ್ರಮಪರಿಹಾರವಂ ಮಾಡಿಕೊಳ್ಳುತ್ತಿರಲು ರಾತ್ರಿಕಾಲ ಸಖಿಯಾದ ನಿದ್ರೆಯ ಸಂಯೋಗಸುಖದಿಂ ಜನರೆಲ್ಲರೂ ಪರವಶರಾಗುತ್ತಿರಲು ನಿಶ್ಶಬ್ದವಾದ ಅಂತಃಪುರದಲ್ಲಿ ಬೆಳಗ್ಗೆ ಮಾಡತಕ್ಕ ಕಾರ್ಯವನ್ನಾಲೋಚಿಸಿದ ವಿದೂರಥನು ಮಂತ್ರಿಗಳನ್ನವರವರ ಮನೆಗೆ ಕಳುಹಿ ದೀರ್ಘವಾದ ಚಂದ್ರಮಂಡಲದಂತಿರುವ ಹಂಸತೂಲಿಕಾತಲ್ಪದಲ್ಲಿ ನಿದ್ರೆಗೈಯುತ್ತಿರಲು ಲೀಲಾ ಸರಸ್ವತಿಯರು ವಿಮಾನವಂ ಬಿಟ್ಟು ವಾತಾಯನರಂಧ್ರಮಾರ್ಗದಿಂದ ಆ ರಾಯನ ಮನೆಯಂ ಪ್ರವೇಶಿಸಿದರೆಂದು ವಸಿಷ್ಠನು ಪೇಳುತ್ತಿರುವಲ್ಲಿ ಶ್ರೀರಾಮಚಂದ್ರನು ಎಲೈ ಗುರುವೇ ! ಅಪರ ಶರೀರವು ಎಷ್ಟು ಪ್ರಮಾಣವಿದ್ದುದು ಯಾವ ರಂಧ್ರದಿಂ ಪ್ರವೇಶಿಸಿದರೆಂದು ಕೇಳುವಲ್ಲಿ ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ ! ಯಾವನಿಗೆ ಆಧಿಭೌತಿಕ ಶರೀರವುಳ್ಳವನು ನಾನು, ಈ ಸೂಕ್ಷ್ಮರಂಧ್ರದಲ್ಲಿ ಹೋಗಲಾರೆನೆಂದು ನಿಶ್ಚಯವಿರುವದೋ ಅವನು ತನಿಗೆ ಅಸಮ್ಮತವಾದ ಮಾರ್ಗದಲ್ಲಿ ಹೋಗಲಾರನು. ಯಾವನಿಗೆ ಸೂಕ್ಷ್ಮಶರೀರನಾದ ನಾನು ಈ ಸೂಕ್ಷ್ಮರಂಧ್ರದಲ್ಲಿ ಹೋಗುವೆನೆಂದು ಬುದ್ಧಿಯಿರುವದೋ ಅವನು ಹಾಗೆ ಸಂಚರಿಸುವನು. ಹೀಗೆ ಸ್ಥೂಲದೇಹ ಬುದ್ಧಿಯಿಲ್ಲದ ಪಿಶಾಚಾದಿಗಳು ವಾಯುವಿನಂತೆ ಸೂಕ್ಷ್ಮಮಾರ್ಗದಿಂ ಸಂಚರಿಸುತ್ತಿರುವಲ್ಲಿ ನಿರಾಕಾರನಾದ ಪರಮಾತ್ಮನೇ ನಾನೆಂಬ ಜ್ಞಾನದಿಂ ಸ್ವಚ್ಛಂದವಾಗಿ ಪ್ರವರ್ತಿಸುವ ಇಚ್ಛಾಸಿದ್ಧಿಯುಳ್ಳ ಮಹಾತ್ಮರಿಗೆ ಎಲ್ಲಿಯಾದರೂ ನಿರೋಧವುಂಟಾದೀತೆ ? ಯಾರಿಗೆ ಹ್ಯಾಗೆ ನಿಶ್ಚಯವಿರುವದೋ, ಅವರಿಗೆ ಹಾಗೇ ಮನಸ್ಸು ಚಲಿಸುವದು. ಕ್ರಿಯೆಯೂ ಹಾಗೇ ಸಿದ್ಧವಾಗುವದು. ಎಂದು ಸರ್ವರಿಗೂ ಅನುಭವಸಿದ್ಧವಾಗಿರುವಲ್ಲಿ ಸ್ವಪ್ನ ಸಂಕಲ್ಪಪುರುಷನಿಗೆ ಸಮಾನವಾದ ಆಕಾರವುಳ್ಳ ಮಹಾತ್ಮರು ಹ್ಯಾಗೆ ಸಂಚರಿಸುವರೆಂದು ತಿಳಿಯತಕ್ಕದ್ದು. ತೇಜಸ್ಸಿಗೆ ಊರ್ಧ್ವಗತಿಯು, ಜಲಕ್ಕೆ ಅಧೋಗತಿಯು, ವಾಯುವಿಗೆ ಅಡ್ಡಗತಿಯೆಂದು ಕ್ಲುಪ್ತಹಾಗಿರುವದು. ಹೀಗೆ ಯಾವಯಾವರೀತಿಯಿಂದ ಚಿತ್ತು ಪೂರ್ವದಲ್ಲಿ ಪ್ರವರ್ತಿಸಿತೋ ಈಗಲೂ ಅದು ಅದೇಪ್ರಕಾರವಿರುವದು. ಚಿತ್ತಿಗೆ ಸ್ವರೂಪಜ್ಞಾನದಿಂ ಬಂದಿರುವ ಚಿತ್ತಾವಸ್ಥೆಯು ರಜ್ಜು ಸರ್ಪದಂತೆ ವಿಚಾರಬಲದಿಂ ಹೋಗುವಲ್ಲಿ

ಚಿತ್ತು ಸ್ವಸ್ವಭಾವವನ್ನೇ ಹೊಂದುವದು. ಸರ್ವರಿಗೂ ಚಿತ್ತಮಾತ್ರವೇ ಶರೀರವಲ್ಲದೆ ಮತ್ತೊಂದಿಲ್ಲ. ಇದರ ಉದಯಾಸ್ತಮಯಗಳು ಚಿತ್ತಿನ ಇಚ್ಛಾನುಸಾರವಾಗಿಯೇ ಉಂಟಾಗುವವು. ಅವಿಚಾರದಿಂದಿದು ಉದಯಿಸುವಲ್ಲಿ ಸಮಸ್ತ ಪದಾರ್ಥಗಳು ಭಿನ್ನಭಿನ್ನವಾಗಿ ಉಂಟಾಗುವವು. ಬಳಿಕ ವಿಚಾರದಿಂದೈಕ್ಯವಾಗುವದು. ಚಿದಾಕಾಶ ಚಿತ್ತಾಕಾಶ ಬಾಹ್ಯಾಕಾಶಗಳು ಮೂರೂಕೂಡ ಸತ್ವದ ಐಕ್ಯದಿಂದಲೂ, ಅವಿನಾಭಾವಸಂಬಾಧದಿಂದಲೂ, ಒಂದೇ ಎಂದು ತಿಳಿಯತಕ್ಕದ್ದು. ಈ ಚಿತ್ತಕ್ಕೆ ಪೂರ್ವವಾಸನಾನುಸಾರವಾಗಿ ಇಚ್ಛೆಯುಂಟಾಗುವದ್ದರಿಂದ ಅದೇಪ್ರಕಾರ ಜಡಾಜಡವಾದ ನಾನಾಪ್ರಾಣಿಗಳ ರೂಪಗಳಂ ವಹಿಸಿದ ಚಿತ್ತವು ಪರ್ವತ ಪರಮಾಣು ಮೊದಲಾದ ಸ್ಥೂಲ ಸೂಕ್ಷ್ಮರೂಪಗಳಿಂದಲೂ, ಖೇಚರ ಭೂಚರ ರೂಪಗಳಿಂದಲೂ, ಜಗನ್ನೆಲ್ಲವಂ ವ್ಯಾಪಿಸಿಕೊಂಡಿರುವದು. ಇದು ಸೃಷ್ಟ್ಯಾದಿಯಲ್ಲಿ ಪಂಚಭೂತ ಸಮಷ್ಟಿರೂಪದಿಂದಿದ್ದು, ಬಳಿಕ ವ್ಯಷ್ಟಿರೂಪಗಳಂ ಧರಿಸುವದು. ಇದರ ಭಾವನೆಯಿಂದ ಸುಳ್ಳುಪಿಶಾಚವು, ಶುಕ್ತಿರಜತವೂಕೂಡ ಪುಟ್ಟುವಲ್ಲಿ ಪುಟ್ಟದೇ ಇರತಕ್ಕದ್ದು ಯಾವದೆಂದು ತಿಳಿಯಬೇಕು. ಇದು ಭಾವಿಸಿದಾತೆ ಇಲ್ಲದ ಪದಾರ್ಥವುಕೂಡ ಸಿದ್ಧವಾಗಿ ಅನುಭವ ಗೋಚರವಾಗುವದೆಂದು ಪೇಳುತ್ತಿರುವಲ್ಲಿ ಶ್ರೀರಾಮಚಂದ್ರನು ಪ್ರಶ್ನೆಗೈದನದೆಂತೆನೆ:—

ಎಲೈ ಗುರುವೇ! ಮಣ್ಣು ಘಟವಾದಂತೆ ಚಿತ್ತವೇ ಜಗದ್ರೂಪವಾದಲ್ಲಿ ಬ್ಯಾರೆ ಚಿತ್ತವಿಲ್ಲದಿರಬೇಕಾಗುತ್ತೆ. ಹಾಗೆ ಅನುಭವವಿಲ್ಲವಾದ್ದರಿಂದಲೂ, ಚಿತ್ತಕ್ಕೆ ಅನುಸಾರವಾಗಿ ಜಗತ್ತು ಕಾಣುವದ್ದರಿಂದಲೂ, ಚಿತ್ತವೇ ಸ್ವಾಂಶಗಳಿಂದ ಜಗದ್ರೂಪವಾಗಿ ಮುಖ್ಯಾಂಶದಿಂ ಬೇರೆಯಾಗಿರುವದೆಂದು ತೋರುತಲಿಧೆ. ಒಂದೇ ಚಿತ್ತವು ಪ್ರಾಣಿಕರ್ಮಭೇದದಿಂ ಬೇರೆಬೇರೆಯಾಗುವದೋ ಬೇರೆಬೇರೆಯಾಗಿಯೇ ಚಿತ್ತವಿರುವದೋ ಚಿತ್ತವು ಬ್ಯಾರೆಬ್ಯಾರೆಯಾದಲ್ಲಿ ಜಗತ್ತೂ ಬ್ಯಾರೆಬ್ಯಾರೆಯಾಗಬೇಕಾಗುತ್ತೆ. ಒಂದೇ ಚಿತ್ತವಾದಲ್ಲಿ ಪ್ರಾಣಿಗಳ ಸುಖದುಃಖಾದ್ಯನುಭವಗಳು ಸಮಾನವಾಗಿರಬೇಕಾಗುತ್ತೆಯಾದ್ದರಿಂದ ಇದರ ವಿವರವಂ ನಿರೂಪಿಸಬೇಕೆಂದು ಪ್ರಶ್ನೆಯಂ ಮಾಡುವಲ್ಲಿ ವಸಿಷ್ಠನಿಂತೆಂದನು.

ಎಲೈ ಸುಮತಿಯೇ! ಪ್ರಾಣಿಗಳಿಗೆ ಚಿತ್ತವು ಪ್ರತ್ಯೇಕಪ್ರತ್ಯೇಕವಾಗಿಯೇ ಇರುವದು. ಆದ್ದರಿಂದಲೇ ಒಂದು ಕ್ಷಣವು ಒಬ್ಬನಿಗೆ ಕಲ್ಪವಾಗುವದು. ಮತ್ತೊಬ್ಬನಿಗೆ ಕಲ್ಪವು ಕ್ಷಣವಾಗುವದು. ಅದೇಪ್ರಕಾರ ಪ್ರಾಣಿಗಳಿಗೆ ಜಗತ್ತಿನ ಉದಯಾಸ್ತಮಯಗಳಾಗುವವು. ಮರಣಮೋಹವಳಿದ ಬಳಿಕ ಆಯಾಯ

ಪ್ರಾಣಿಗಳಿಗೆ ವಾಸನಾನುಸಾರವಾಗಿ ಬೇರೆಬೇರೆ ಸೃಷ್ಟಿಗಳಾಗುವವು. ಜೀವರಿಗೆ ಮರಣಮೋಹವೇ ಮಹಾಪ್ರಳಯವೆನಿಸಿಕೊಳ್ಳುವದು. ಅದರಕಾಲ ಕಳೆದಬಳಿಕ ಅವರಿಗೆ ಉದಯಾಭಿಮುಖವಾದ ಅವಸ್ಥೆಯೇ ಪ್ರಕೃತಿಯೆಂತಲೂ, ಪ್ರಧಾನವೆಂತಲೂ, ಅವ್ಯಕ್ತವೆಂತಲೂ, ಆಕಾಶವೆಂತಲೂ ಹೇಳಲ್ಪಡುವದು. ಅದರ ಅಭ್ಯುದಯವೇ ಮಹತ್ತತ್ವವೆನಿಸುವದು. ಇದರಿಂದ ಅಹಂಕಾರವುಂಟಾಗಲು, ಪೂರ್ವೋಕ್ತವಾದ ಆಕಾಶದ್ದೆಶೆಯಿಂದ ದಿಕ್ಕಾಲ ತನ್ಮಾತ್ರ ಮೊದಲಾದದ್ದೆಲ್ಲವೂ ಪುಟ್ಟುವದು. ಅಂತಃಕರಣ ಬಾಹ್ಯಕರಣ ಪ್ರಾಣಸಮೂಹವೇ ಆತಿವಾಹಿಕದೇಹವೆನಿಸುವದು. ಸ್ವಪ್ನ ಜಾಗರಗಳಲ್ಲಿ ಗೋಚರವಾದ ಈ ದೇಹದಲ್ಲಿಯೇ ಬಾಲಕನ ಭ್ರಾಂತಿಪಿಶಾಚದಂತೆ ಆಧಿಭೌತಿಕವೆಂಬ ಬುದ್ಧಿಯುಂಟಾಗುವದು. ಬಳಿಕ ದಿಕ್ಕಾಲಾದಿ ಕಲ್ಪನೆಗಳಿಂದ ಭ್ರಮಾತ್ಮಕವಾದ ಜಗತ್ತು ಉಂಟಾಗುವದು. ಈಪ್ರಕಾರ ಆಕಾಶವೇ ಜಗದಾಕಾರವಾಗುವದು. ಆಕಾಶರೂಪನಾದ ಜೀವನಿಗೆ ಆಧಿಭೌತಿಕದೇಹವೇ ತಾನೆಂಬ ಜ್ಞಾನದಿಂ ತಾನು ಪುಟ್ಟಿದೆನೆಂಬ ಜ್ಞಾನವುಂಟಾಗಲು, ತಂದೆ, ತಾಯಿ, ಬಂಧು, ಬಳಗ ಮುಂತಾದ ಭ್ರಾಂತಿಗಳು ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷಾದಿ ಬುದ್ಧಿಗಳು ಸಹ ಉಂಟಾಗುವವು. ಹೀಗೆ ಪ್ರತಿಪ್ರಾಣಿಗಳಿಗೂ ಪ್ರತ್ಯೇಕಪ್ರತ್ಯೇಕ ಪ್ರಪಂಚಗಳುಂಟಾಗುವವು. ಯಾವನು ಎಲ್ಲಿ ಸಾಯುವನೋ ಅವನು ಅಲ್ಲಿಯೇ ಇದೆಲ್ಲವನ್ನು ನೋಡುವನು. ಹೀಗೆ ಪ್ರಪಂಚಗಳುಂಟಾಗುವಲ್ಲಿ ಬ್ರಹ್ಮ, ವಿಷ್ಣು, ರುದ್ರಾದಿಗಳು ಅನೇಕಕೋಟಿ ಸಂಖ್ಯೆಯಾಗಿ ಆಗಿಹೋಗುತ್ತಿರುವದು. ಪ್ರಪಂಚವೆಲ್ಲವು ಮನನಮಾತ್ರದಿಂದುಂಟಾಗುವದಾದ್ದರಿಂದ ಸಮಸ್ತವು ಮನೋಮಯವೆನಿಸಿಕೊಳ್ಳುವದು. ಆ ಮನವು ಚಿದಾಕಾಶರೂಪನಾದ ಆತ್ಮನ ಸಂಕಲ್ಪರೂಪವಾದ್ದರಿಂದಲೂ, ವೃತ್ತಿ ವೃತ್ತಿಮಂತರಿಗೆ ದೀಪಜ್ಯೋತಿಗಳಂತೆ ಅಭೇದವಾದ್ದರಿಂದಲೂ, ಸಂಕಲ್ಪ ವಿಕಲ್ಪಗಳಿಲ್ಲದ ಆತ್ಮನೇ ಪರಮಾತ್ಮನೆನಿಸಿಕೊಳ್ಳುವದ್ದರಿಂದಲೂ, ಸರ್ವವು ಬ್ರಹ್ಮವೆಂತಲೇ ನಿಶ್ಚಯಿಸುವನಾಗು. ಜಲಕ್ಕೆ ಸುಳಿಯಂತೆ ದ್ರಷ್ಟೃವಾದ ಬ್ರಹ್ಮದಲ್ಲಿ ಈ ದೃಶ್ಯವಿರುವದ್ದರಿಂದ ಸರ್ವವೂ ದೃಗ್ರೂಪವಾದ ಬ್ರಹ್ಮವೆಂತಲೇ ತಿಳಿಯತಕ್ಕದ್ದು. ಸಮಸ್ತ ಪ್ರಾಣಿಗಳಿಗೂ ಆಧಾರವಾಗಿರುವ ದೃಶ್ಯಪ್ರಪಂಚವೆಲ್ಲವು ಜ್ಞಾನಿಗೆ ಸುಖರೂಪವಾಗಿಯೂ, ಅಜ್ಞಾನಿಗೆ ದುಃಖರೂಪವಾಗಿಯೂ, ಮನೋಧೀನವಾಗಿರುವದ್ದರಿಂದ ಚಿತ್ತಭೇದದಿಂ ಬೇರೆಬೇರೆಯಾಗಿರುವ ಪ್ರಪಂಚದಂತೆ ಇದೂ ಬ್ರಹ್ಮಾಭಿನ್ನವೆಂತಲೇ ತಿಳಿಯುವನಾಗು. ಇಂದ್ರಜಾಲದ ಮಣಿಯಂತೆ ಬ್ರಹ್ಮವೇ ನಾನಾರೂಪವಾಗಿ ತೋರುವದೆಂದು ನನಗೆ

ನಿಶ್ಚಯವಿರುವದು. ಅಚೇತನವಾದ ಈ ಜಗತ್ತಿಗೆ ಪ್ರೇರಕವಾಗಿ ಚಿನ್ಮಾತ್ರ ರೂಪವಾಗಿರುವ ಬ್ರಹ್ಮವು ಬೇರೆ ಇರುವದೆಂದು ನಿನಗೆ ನಿಶ್ಚಯಿಸುವಿಥೆ. ಹೀಗಿರುವದ್ದರಿಂದ, ನಾನು ತಿಳಿದಿರುವ ಜಗಚ್ಛಬ್ದಾರ್ಥವು ನಿಶ್ಚಯವಾಗುವದು. ನೀನು ತಿಳಿದಿರುವದು ಇಲ್ಲದೇನೇ ಹೋಗುವದು. ಸರ್ವವೂ ಬ್ರಹ್ಮವೆಂಬ ನಿಶ್ಚಯದಿಂ ಬ್ರಹ್ಮಾಭಿನ್ನರಾಗಿ, ಆಕಾಶದಂತೆ ಸರ್ವಾತ್ಮಕವಾಗಿರುವ ಆತಿವಾಹಿಕ ಶರೀರವಂ ಧರಿಸಿರುವ ಆ ಲೀಲಾ ಸರಸ್ವತಿಯರ ಗಮನಾಗಮನಗಳಿಗೆ ಯಾವದು ತಾನೆ ನಿರೋಧವಾದೀತು. ತಿಳಿಯಲಶಕ್ಯವಾದ್ದರಿಂದ ಪರಮಾಣುವಿಗಿಂತಲೂ, ಪರಮಾಣುವೆಂತಲೂ, ವ್ಯಾಪಕಭಾವದಿಂದ ಮಹತ್ತಿಗಿಂತಲೂ ಮಹತ್ತೆಂತಲೂ, ಬ್ರಹ್ಮವು ಪೇಳಲ್ಪಡುವದಲ್ಲದೆ, ಆಕಾರ ಪ್ರಮಾಣದಿಂ ಪೇಳಲ್ಪಡುವದಿಲ್ಲ. ಅದಂ ತಿಳಿದು ಜ್ಞಾನರೂಪದಿಂದಿರುವ ಪರಮಾತ್ಮರು ಅಖಂಡಸ್ವರೂಪರಾಗಿದ್ದಾಗ್ಯೂ, ಪರಮಾತ್ಮನ ವಿಲಾಸಾನುಸಾರವಾಗಿ ಖಂಡಜ್ಞಾನವಂ ಪಿಡಿದು ಪ್ರಕೃತೋಚಿತ ವ್ಯವಹಾರಗಳಂ ನಡೆಸುವರಾದ್ದರಿಂದ, ಅವರಿಬ್ಬರೂ ವಿದೂರಥನ ಅರಮನೆಗೆ ಪ್ರವೇಶಿಸಿದ ಮಾರ್ಗವಂ ಪೇಳಿದವನಾದೆನು. ಆಗ ಸರಸ್ವತಿಯು ಲೀಲೆಗೆ ಆ ವಿದೂರಥನ ಸ್ಥಿತಿಯಂ ತಿಳುಪಲೋಸುಗ, ಆ ರಾಜನೊಡನೆ ಮಾತನಾಡಬೇಕೆಂದು ಅಪೇಕ್ಷಿಸಿದ್ದರಿಂದ, ಚಂದ್ರಕಲೆಗಳಂತೆ ಅವರ ಶರೀರವು ಪ್ರಕಾಶಿಸಿತು. ಅವುಗಳ ಕಾಂತಿಯಿಂದ ಅರಮನೆಯಲ್ಲವು ನಿರ್ಮಲವಾಗಿ ಕೈಲಾಸದಲ್ಲಿರುವ ಪರಮೇಶ್ವರನ ಲೀಲಾಗೃಹದಂತೆ ಪ್ರಕಾಶಿಸಿತು. ಸರಸ್ವತಿಯ ಇಚ್ಛಾನುಸಾರವಾಗಿ ರಾಜ ಮಂತ್ರಿಗಳಿಗೆ ಎಚ್ಚರಿಕೆಯು, ಇತರರಿಗೆ ಗಾಢನಿದ್ರೆಯು ಸಹ ಉಂಟಾದುದು. ಬಳಿಕ ಅಮೃತರಸ ಪ್ರವಾಹದಿಂದಭಿಷಿಕ್ತನಾದವನಂತೆ ಎಚ್ಚರಗೊಂಡ ವಿದೂರಥನು ಎದುರಿಗೆ ಚಂದ್ರಕಲಾದ್ವಯದಂತೆ ಪ್ರಕಾಶಿಸುತ್ತಾ, ಆಸನದಮೇಲೆ ಕುಳಿತಿರುವ ಲೀಲಾ ಸರಸ್ವತಿಯರಂ ಕಂಡು, ದೇವತಾವಿಶೇಷಜ್ಞಾನದಿಂ ಝುಗ್ಗನೆ ಎದ್ದು ಅಂಗವಸ್ತ್ರಾದಿಗಳಂ ಸರಿಮಾಡಿಕೊಂಡು ಮಂಚದ ಸಮೀಪದಲ್ಲಿದ್ದ ಹಿರಣ್ಮಯಪಾತ್ರದಿಂ ಪುಷ್ಪಗಳಂ ತೆಗದುಕೊಂಡು ಅವರಿಗೆ ಪುಷ್ಪಾಂಜಲಿಯಂ ಸಮರ್ಪಿಸಿ, ಅವರ ಆಜ್ಞೆಯಿಂದೆದುರಿಗೆ ಕುಳಿತುಕೊಳ್ಳಲು, ಆಗ ಸರಸ್ವತಿಯು ಎಲೈ ಮಹಾರಾಜನೇ ! ನೀನು ಯಾರವಂಶವನ್ನಲಂಕರಿಸಿದ್ಧೀಯೆ ? ನಿನ್ನ ನಾಮಧೇಯವೇನೆಂದು ಕೇಳಲು ? ಆ ರಾಜೇಂದ್ರನಿಂ ನೋಡಲ್ಪಟ್ಟ ಮಂತ್ರಿಯು ಬದ್ಧಾಂಜಲಿಯಾಗಿ, ಆ ದೇವಿಯರಂ ಕುರಿತು ವಿಜ್ಞಾಪಿಸಿದರದೆಂತೆನೆ.

ಎಲೌ ದೇವಿಯರಾ ! ಇಕ್ಷ್ವಾಕುಮಹಾರಾಜನ ವಂಶದಲ್ಲಿ ಕುಂದರಥನೆಂಬ

ರಾಜೇಂದ್ರನು ಪುಟ್ಟಿದನು. ಆತನಿಗೆ ಭದ್ರರಥನು, ವಿಶ್ವರಥನು, ಬೃಹದ್ರಥನು, ಸಿಂಧುರಥನು, ಶೈಲರಥನು, ಕಾಮರಥನು, ಮಹಾರಥನು, ವಿಷ್ಣುರಥನು, ನಭೋರಥನು ಎಂದು ಕ್ರಮವಾಗಿ ಪುತ್ರರಾದರು. ಆ ನಭೋರಥನಿಗೆ ಸುಮಿತ್ರಾದೇವಿಯಲ್ಲಿ ವಿದೂರಥನೆಂಬ ಈ ಮಹಾರಾಜನು ಜನಿಸಿದನು. ಈತನು ಹತ್ತುವರ್ಷದವನಾಗಿರುವಲ್ಲಿಯೇ ಈತನಿಗೆ ಪಟ್ಟಾಭಿಷೇಕವಂ ಮಾಡಿ ನಭೋರಥರಾಜನು ಸನ್ಯಾಸಧರ್ಮದಿಂದರಣ್ಯವಂ ಪ್ರವೇಶಿಸಿದನು. ಆಗಿನಾರಭ್ಯ ಕುಮಾರಸ್ವಾಮಿಯಂತೆ ಪರಾಕ್ರಮಶಾಲಿಯಾದ ಈ ರಾಜೇಂದ್ರನು ಧರ್ಮದಿಂ ರಾಜ್ಯಬಾರವಂ ಮಾಡುತ್ತಿರುವನು. ಈಗ ತಮ್ಮ ದರ್ಶನದಿಂ ನಾವು ಕೃತಾರ್ಥರಾದೆವು ಎಂದು ಮಂತ್ರಿಯು ಪೇಳುತ್ತಿರುವಲ್ಲಿ, ಎಲೈ ರಾಜೇಂದ್ರನೇ ! ನಿನ್ನ ಪೂರ್ವಜನ್ಮ ವೃತ್ತಾಂತವಂ ಸ್ಮರಿಸೆಂದು, ಆ ವಿದೂರಥನ ತಲೆಯಮೇಲೆ ಸರಸ್ವತಿಯು ಹಸ್ತವನ್ನಿಡಲು, ಆ ಜ್ಞಪ್ತಿದೇವತೆಯು ಅನುಗ್ರಹದಿಂದಾರಾಜೇಂದ್ರನು ದಿವ್ಯಜ್ಞಾನವಂ ಪಡದು, ಪೂರ್ವದಲ್ಲಿ ತಾನು ಪದ್ಮನೆಂಬ ನಾಮದಿಂ ಪ್ರಸಿದ್ಧವಾಗಿದ್ದದ್ದನ್ನು ತನ್ನ ಪತ್ನಿಯಾದ ಲೀಲೆಯ ಚರಿತ್ರವನ್ನು, ಸರಸ್ವತಿಯ ಅನುಗ್ರಹವನ್ನು ಸಹ ಸ್ಮರಿಸಿ, ವಿಸ್ಮಿತನಾಗಿ, ಎಲೌ ದೇವಿಯೇ ! ಇದೇನು ಆಶ್ಚರ್ಯವು? ನಾನು ಪದ್ಮನಾಮಕವಾದ ಶರೀರವಂ ಬಿಟ್ಟು ಒಂದು ತಿಂಗಳಾಗಿರುವದು, ಇಲ್ಲಿ ನನಿಗೆ ಇಪ್ಪತ್ತುವರ್ಷವಾಗಿರುವದು, ಇದರಿಂದ ಸರ್ವವು ಭ್ರಮಾತ್ಮಕವೆಂತಲೇ ನನಿಗೆ ತೋರುತಲಿದೆ ಎಂದು ಪೇಳುತ್ತಿರಲು, ಸರಸ್ವತಿ ಇಂತೆಂದಳು.

ಎಲೈ ರಾಜನೇ ! ನದೀಪ್ರವಾಹವು ಒಂದು ಸುಳಿಯಂ ಬಿಟ್ಟು ಮತ್ತೊಂದುಸುಳಿಯಂ ಹೊಂದುವಂತೆ, ಜ್ಞಾನಪ್ರವಾಹವು ಒಂದು ಜನ್ಮವಂ ಬಿಟ್ಟು ಮತ್ತೊಂದು ಜನ್ಮವಂ ಹೊಂದುವದು. ಸುಳಿಗಳಂತೆ ಜನ್ಮಗಳು ಒಂದಕ್ಕೊಂದು ಮಿಶ್ರವಾಗಿಯೂ, ಭಿನ್ನವಾಗಿಯೂ ಉಂಟಾಗುವವು. ಸ್ವಪ್ನದಲ್ಲಿ ಒಂದು ಕ್ಷಣಮಾತ್ರದೋಳ್ ಅನೇಕ ವರ್ಷಗಳಾಗುವಂತೆಯೂ, ಜೀವನ ಮರಣಗಳು ಸಂಭವಿಸುವಂತೆಯೂ, ಹ್ಯಾಗೆ ಹ್ಯಾಗೆ ಭ್ರಾಂತಿಗಳುಂಟಾಗುವವೋ ಹಾಗೆ ಜಾಗ್ರದಲ್ಲಿಯೂ ಉಂಟಾಗುವವು. ನಾವೆ ನಡೆಯುವಲ್ಲಿ ತೀರದಲ್ಲಿರುವ ವೃಕ್ಷಪರ್ವತಗಳ ಚಲನದಂತೆಯೂ, ವಾತ ಪಿತ್ತಾದಿ ವಿಕಾರದಲ್ಲಿ ಪರ್ವತದ ನರ್ತನದಂತೆಯೂ, ಮನಸ್ಸಿನ ಕಲ್ಪನೆಯಿಂದ ಈ ಭ್ರಾಂತಿಯುಂಟಾಗಲು, ಗಂಧರ್ವನಗರದ ಮನೆಗಳಂತೆ ಜನನ ಮರಣಾತ್ಮಕವಾದ ಈ ಸಂಸಾರಗಳು ಉಂಟಾಗುವವು. ಇವುಗಳ ಸತ್ವವಂ ವಿಚಾರಿಸುವಲ್ಲಿ ಚಿದ್ರೂಪನಾದ ಆತ್ಮನ ಪ್ರಕಾಶವೇ ಇವೆಂದು ನಿಲ್ಲುವದ್ದರಿಂದ ಪರಮಾರ್ಥವಾಗಿ ನಿನಗೆ ಉತ್ಪತ್ತಿ ಮರಣ

ಗಳು ಇಲ್ಲವೆಂತಲೇ ನಿಶ್ಚಯಿಸತಕ್ಕದ್ದು. ಭ್ರಾಂತಿ ಸಿದ್ಧವಾದ ಮರಣಕಾಲದಲ್ಲಿ ಉಂಟಾದ ಮನೋರಥ ಕಲ್ಪನೆಯಿಂದಲೇ ಈ ಸಂಸಾರವೆಲ್ಲವೂ ಉಂಟಾಗಿರು ವದೆಂದು ತಿಳಿಯುವನಾಗು. ನಾನು, ನೀನೆಂಬುವದೇ ಮೊದಲಾದ ಈ ಪ್ರಪಂ ಚಗಳೆಲ್ಲವು ಗಿರಿ ಗ್ರಾಮದಲ್ಲಿರುವ ಅರುಂಧತೀ ಲೀಲಾ ಮಂಟಪದ ಆಕಾಶದಲ್ಲಿ ವಸಿಷ್ಠನೆಂದು ಪ್ರಸಿದ್ಧವಾಗಿದ್ದ ಚಿದಾಕಾಶದ ಕಲ್ಪನೆಯಿಂದುಂಟಾಗಿ ಅಲ್ಲಿಯೇ ಪ್ರಕಾಶಿಸುತ್ತಿರುವವು, ಎಂದು ಸರಸ್ವತಿಯು ಹೇಳುತ್ತಿರುವಲ್ಲಿ, ಎಲೌ ದೇವಿ ಯೆ ! ನೀನು ಹೇಳುವದಂ ನೋಡುವಲ್ಲಿ, ಪೂರ್ವದಲ್ಲಿ ನಾನೆ ವಸಿಷ್ಠನಾಮಕ ನಾಗಿದ್ದೆನೆಂತಲೂ, ನನಿಗೆ ಅನುಸಾರಿಗಳಾದ ಜನಗಳು ಕಲ್ಪಿತರೆಂತಲೂ ತೋ ರುತ್ತಿರುವದು. ಕಲ್ಪಿತರಾದ್ದರಿಂದ ಅಸತ್ಯರಾದ ಈ ಜನರು ಸತ್ಯಸ್ವರೂಪ ನಾದ ಆತ್ಮನಲ್ಲಿರುವದು ಹ್ಯಾಗೆ ಎಂದು ವಿದೂರಥನು ಕೇಳಲು, ಸರಸ್ವತಿ ಇಂ ತೆಂದಳು. ಚಿನ್ಮಾತ್ರವೆಂದು ಸ್ವಸ್ವರೂಪವಂ ತಿಳಿದು ಆ ಜ್ಞಾನದಿಂ ಸರ್ವಕಾಲ ದಲ್ಲೂ ಜಾಗರೂಕನಾಗಿರುವನಿಗೆ ಜನನ ಮರಣ ಭ್ರಾಂತಿಗಳು ಪುನಃ ಉಂಟಾ ಗುವವೇ ಸರ್ಪವಲ್ಲವೆಂದು ಚನ್ನಾಗಿ ತಿಳಿದ ಬಳಿಕ ರಜ್ಜುವು ಹ್ಯಾಗೆ ಭಯಂಕ ರವಾದೀತು ? ಯಾವವರಿಗೆ ವಿವೇಕ ವಿಚಾರಗಳಿಂ ಸ್ವರೂಪವು ವಿದಿತವಾಗಿ ಅದರಲ್ಲಿ ದೃಢವಾದ ಅಭ್ಯಾಸವಾಗುವದಿಲ್ಲವೊ ಅವರಿಗೆ ಜಗವೆಲ್ಲವು ಸ್ವಪ್ನವಂ ನೋಡುವನಿಗೆ ಸ್ವಪ್ನಪದಾರ್ಥದಂತೆ ಸತ್ಯವಾಗಿಯೇ ಕಾಣುತ್ತಿರುವದು. ಚಿನ್ನ ವನ್ನರಿಯದವನಿಗೆ ಕಟಕದಲ್ಲಿರುವ ಕಟಕಭಾವವೇ ಹ್ಯಾಗೆ ಸತ್ಯವಾಗಿರುವ ದೋ ಹಾಗೆ ಬ್ರಹ್ಮವನ್ನರಿಯದವನಿಗೆ ಜಗದಲ್ಲಿರುವ ಜಗದ್ಭಾವವೇ ಸತ್ಯವಾ ಗಿರುವದು. ಸರ್ಗಾದಿಯಲ್ಲಿ ಆತ್ಮನು ಮನೋರಥದಿಂ ಕಲ್ಪನೆಯಂ ಮಾಡುತ್ತಾ, ಯಾವ್ಯಾವದಂ ಹ್ಯಾಗೆ ಹ್ಯಾಗೆ ಭಾವಿಸಿದನೋ, ಆಯಾಯ ಪದಾರ್ಥವು ಹಾಗೆ ಹಾಗೆ ಅನುಭವ ಗೋಚರವಾಗುತ್ತಿರುವದು. ಸ್ವಪ್ನದಲ್ಲಿ ಉಂಟಾಗಿರುವ ಪುರು ಷರು ಪರಸ್ಪರವಾಗಿ ಹ್ಯಾಗೆ ಸತ್ಯವಾಗಿ ಕಾಣುತ್ತಿರುವರೋ, ಹಾಗೆ ಆತ್ಮನ ಕಲ್ಪನೆಯಿಂ ಪುಟ್ಟಿದ ಈ ಪ್ರಪಂಚದಲ್ಲಿ ನಾವುಗಳು ಪರಸ್ಪರವಾಗಿ ಸತ್ಯವೆಂದು ತಿಳಿಯುವೆವು. ಸ್ವಪ್ನವಂ ನೋಡಿದವನು ಎಚ್ಚರವಾದ ಬಳಿಕ ಸ್ವಪ್ನವಂ ಸು ಳ್ಳೆಂದು ತಿಳಿಯುವಂತೆ ಕಲ್ಪನೆಯಂ ಮಾಡಿದ ಆತ್ಮನು ಕಲ್ಪನಾರೀತಿಯಂಬಿಟ್ಟು ನೋಡುವಲ್ಲಿ, ಕಲ್ಪಿತವಾದ ಪದಾರ್ಥವೆಲ್ಲವನ್ನು ಸುಳ್ಳೆಂತಲೇ ತಿಳಿಯುವನು. ಆದ್ದರಿಂದ ಆತ್ಮದೃಷ್ಟಿಯಿಂದ ಇದು ಅಸತ್ಯವೆಂತಲೂ, ನಮ್ಮ ದೃಷ್ಟಿಯಿಂದ ಇದು ಸತ್ಯವೆಂತಲೂ ತಿಳಿಯತಕ್ಕದ್ದು. ಸ್ವಪ್ನವಂ ನೋಡುವನಿಗೆ ಎಚ್ಚರವಾ ದಾಗ್ಯೂ ಸ್ವಪ್ನದಲ್ಲಿ ಕಂಡ ಪದಾರ್ಥವು ಜ್ಞಾನಗೋಚರವಾಗಿರುವಂತೆ ಕಲ್ಪನೆ

ಯಿಂದುಂಟಾದ ಪ್ರಪಂಚವು ಆತ್ಮನು ಕಲ್ಪನೆಯಂ ಬಿಟ್ಟಾಗ್ಯೂ ಜ್ಞಾನಗೋಚರವಾಗಿಯೇ ಇರುವದು. ಜಾಗ್ರತ್ಪದಾರ್ಥದ ವಾಸನೆಯು ಬಲವಾದ ಬಳಿಕ ಸ್ವಪ್ನವಾಸನೆಯು ಮರೆಯಾಗುವಂತೆ ಬ್ರಹ್ಮವಾಸನೆಯು ದೃಢವಾದ ಬಳಿಕ ಪ್ರಪಂಚವಾಸನೆಯು ಪೋಗುವದು. ಆದ್ದರಿಂದ ಸ್ವಪ್ನದಂತೆ ಜಾಗ್ರವನ್ನು ಸುಳ್ಳೆಂತಲೇ ತಿಳಿಯುವನಾಗು, ಮತ್ತು ಜಾಗ್ರದಲ್ಲಿ ಸ್ವಪ್ನದಂತೆ ಸ್ವಪ್ನದಲ್ಲಿ ಜಾಗ್ರವು ಸುಳ್ಳಾಗುವದು. ಸುಷುಪ್ತಿಯಲ್ಲಿ ಸ್ವಪ್ನ ಜಾಗ್ರಗಳೆರಡೂ ಸುಳ್ಳಾಗುವವು. ಬ್ರಹ್ಮಜ್ಞಾನದಲ್ಲಿ ಇವು ಮೂರು ಸುಳ್ಳಾಗುವದ್ದರಿಂದ ಜ್ಞಾನಸ್ವರೂಪದಿಂ ಸರ್ವಸಾಕ್ಷಿಯಾದ ಬ್ರಹ್ಮ ಒಂದೇ ಸತ್ಯವೆಂದು ನಿಶ್ಚಯಿಸುವನಾಗು. ಎಂದು ಸರಸ್ವತಿಯು ಹೇಳುತ್ತಿರುವಲ್ಲಿ ಮೇಲ್ಗಡೆಯಲ್ಲಿನಿಂದು ಶತ್ರುಗಳ ಸ್ಥಿತಿಕ್ರಮವಂ ನೋಡುವ ದೂತನು ಅತಿವೇಗದಿಂದ ಬಂದು ಎಲೈ ಮಹಾರಾಜನೇ ಪರಬಲವೆಂಬ ಸಮುದ್ರವು ಜನಗಳ ಸಾಲುಗಳೆಂಬ ತರಂಗಗಳಿಂದ ಪೊರಮಡುವ ಶಸ್ತ್ರಗಳೆಂಬ ತುಂತುರುಗಳಿಂದ ನಮ್ಮ ಪುರವಂ ಪಾಳುಮಾಡಲುಜ್ಜಗಿಸಿ ಬರುತ್ತಿರುವದು ; ಅದರಿಂದ ಕಳುಹಿಸಲ್ಪಟ್ಟ ಬಡಬಾಗ್ನಿಯಂತಿರುವ ಅಗ್ನಿಯು ನಮ್ಮ ಪಟ್ಟಣವಂ ಜ್ವಾಲೆಗಳಿಂ ವ್ಯಾಪಿಸುತ್ತಿರುವದೆಂದುಪೇಳಲು ಆ ವಿಧೂರಥನು ಆ ದೇವಿಯರೂ ಸಹ ಗವಾಕ್ಷದಿಂದಾಪುರವಂ ನೋಡುವಲ್ಲಿ ದೇವಲೋಕದಲ್ಲಿರುವ ಗಂಗೆಯಂನೋಡಲೋಸುಗ ಭೂಲೋಕದಿಂ ಪೊರಮಟ್ಟ ಯಮುನೆಯಂತೆ ಧೂಮಪರಂಪರೆಯು ಕಾಣುತ್ತಿದ್ದುದು. ಒಂದೆಡೆಯೊಳ್ ಧೂಮಾವೃತವಾದ ಮನೆಗಳಲ್ಲಿ ಮೇಘಗಳಲ್ಲಿ ಮಿಂಚುಗಳಂತೆ ಅಗ್ನಿಜ್ವಾಲೆಗಳು ಪ್ರಕಾಶಿಸುತ್ತಿದ್ದುವು. ಪ್ರಳಯಕಾಲದಲ್ಲಿ ವಿಮಾನಗಳಂತೆ ಚಂದ್ರಶಾಲೆಗಳು ಮುರಿದು ಬಿದ್ದವು. ಪಂಜುಗಳಂ ಪಿಡಿದು ಮನೆಮನೆಗಳಂ ನುಗ್ಗುತ್ತಿರುವ ಶತ್ರುಭಟರು ಕೊಳ್ಳೀ ಪಿಶಾಚಿಗಳಂತೆ ಕಾಣುತ್ತಿದ್ದರು. ಮತ್ತೊಂದೆಡೆಯೊಳ್ ಮಡದಿಗಳಂ ತಬ್ಬಿಕೊಂಡು ಮಕ್ಕಳಗಳನ್ನೆತ್ತಿಕೊಂಡು ಮನೆಗಳಿಂದೋಡಿಬರುವ ಜನರು ಅನೇಕಮುಖರಾದ ಪಿಶಾಚಗಳಂತೆ ಕಾಣುತ್ತಿದ್ದರು. ಉರಿಯುವ ಉಟ್ಟಬಟ್ಟೆಯಂ ಕೊಡಹುತ್ತ ಪೋಡಿಬರುವ ಬೆಡಗಿಯರಂ ಕಂಡ ವಿಟಪುರುಷರು ಅಗ್ನಿಸಂತಾಪವನ್ನವರಿಗೆ ತಪ್ಪಿಸುವಂತೆ ಅವರ ಬಟ್ಟೆಗಳಂ ಸೆಳದು ಅಪ್ಪಿಕೊಂಡು ಪೋದಿದರು. ಮಾನಿನಿಯರು ಉಟ್ಟಬಟ್ಟೆ ಉರಿದುಹೋಗಲು ಮಾನಹಾನಿಗಿಂತಲೂ ಪ್ರಾಣಹಾನಿಯೇ ಯೋಗ್ಯವೆಂದು ಉರಿಯುತ್ತಿರುವ ಮನೆಗಳನ್ನೇನುಗ್ಗಿದರು ಇನ್ನೊಂದೆಡೆಯೊಳ್ ಅಗ್ನಿಯು ಕಾಮಿನಿಯರ ವೇಣಿಗಳಂ ಪಿಡಿಯುತ್ತಲು ಮೊಗಮಂ ಮುದ್ದಿಡುತ್ತಲೂ, ಕುಚಗಳಂ ಜ್ವಾಲಾಹಸ್ತಗಳಿಂ ಬಡಿಯುತ್ತಲೂ

ಉಟ್ಟಬಟ್ಟೆಯಂ ಕಳೆಯುಸುತ್ತಲೂ, ಬಾರಿಬಾರಿಗೂ ಚರಣಗಳಂ ಪಿಡಿಯುತ್ತಲೂ, ವಿಚಿತ್ರ ವಿಲಾಸಿಯಾದ ಕಾಮಿಯಂತೆ ಕಾಣಲ್ಪಟ್ಟಿತು. ಧನಕನಕ ವಸ್ತ್ರರತ್ನಾಭರಣಗಳನ್ನು ಕದ್ದು ಕೊಂಡು ಹೋಗುವರು, ಪರರಿಂದ ಕಡಿಯಲ್ಪಡಲುಯುಚಿತಲ್ಪಟ್ಟ ಧನಾದಿಗಳಿಂದ ತುಂಬಿರುವ ರಾಜಬೀದಿಗಳು ನಕ್ಷತ್ರವೀಧಿಗಳಂತೆ ಪ್ರಕಾಶಿಸಿದವು. ಕೆಲವು ಮಾನಿನಿಯರು ಶತ್ರುಗಳ ಹಿಂಸೆಯಂ ತಾಳಲಾರದೆ ಮಕ್ಕಳನ್ನು ಕಟ್ಟಿಕೊಂಡು ಬೆಂಕಿಯ ಉರಿಯಲ್ಲಿಬಿದ್ದರು. ಎಲೆಲಾ ! ಇದೇನು ಧರ್ಮವು ? ರಾತ್ರಿಯಲ್ಲಿ ಜನರೆಲ್ಲರು ಮಲಗಿರುವಾಗ ಕಳ್ಳರಂತೆ ಶೂರರು ಪಟ್ಟಣವಂ ನುಗ್ಗುವರೆ? ಮಲಗಿರುವರೂ ಶವಗಳಸಮಾನರಾದ್ದರಿಂದ ಶವಗಳಂ ಶಳೆಯುವ ನಾಯಿ ನರಿಗಳಿಗೆ ಮಲಗಿರುವರಂ ಶಳೆಯುವ ಈ ಶೂರರು ಸಮಾನರೆನಿಸುವರು. ಶೂರರಾದವರು ನಿರಾಯುಧರಾಗಿರುವವರ ಮೇಲೆ ಶಸ್ತ್ರವಂ ಪ್ರಯೋಗಿಸಲು ಹಿಂತೆಗೆಯುವರು. ಹೀಗಿರುವಲ್ಲಿ ಮಲಗಿರುವರಮೇಲೂ, ಹೆಂಗಸರಮೇಲೂ, ಮಕ್ಕಳಮೇಲೂ, ಶಸ್ತ್ರವಂ ಪ್ರಯೋಗಿಸುವ ಈ ಸೇನಾ ಜನಗಳು ಎಂಥಾ ಶೂರರೋ ತಿಳಿಯಕೂಡದು. ಇವರಿಗೆ ಸ್ವದೋಷದಿಂದಲೇ ಅಪಜಯವುಂಟಾಗುವದು. ಒಂದುವೇಳೆ ಕಾಲಗತಿಯಿಂದಲಾಗಲಿ ದೈವಬಲದಿಂದಲಾಗಲಿ ಜಯವಾದಾಗ್ಯೂ ಅಪಯಶಸ್ಸು ಶಾಶ್ವತವಾಗಿ ನಿಲ್ಲುವದೆಂದು ಹೇಳಿಕೊಂಡರು. ಹಾ ನನ್ನಮನೆಬಿದ್ದುಹೋಯಿತು. ಹಾ ನನ್ನಮಡದಿ ಮಕ್ಕಳು ಉರಿಯಲ್ಲಿ ಶಿಕ್ಕಿರುವರು, ಹಾ ನನ್ನಮಗುವನ್ನಿವನು ಕೊಂಡುಹೋಗುವನು, ಹಾಹಾ ಹೆಮ್ಮಕ್ಕಳಮೇಲೆ ಕೈಮಾಡುವದಂ ನಿಲ್ಲಿಸು ? ಕಟಕಟಾ ಇದೇನು ಕಟಕನಂತೆ ಮಕ್ಕಳ ಕತ್ತಂಕುಯ್ಯುತ್ತೀಯೆ ನಿನಗೆ ಬೇಕಾದ ವಡವೆಗಳಂ ತೆಗೆದುಕೊಂಡು ಮಕ್ಕಳಂ ಬಿಟ್ಟುಬಿಡು. ಎಲಾ ಹೆಮ್ಮಕ್ಕಳಂಹೊಡೆಯುವದು ಉಚಿತವಲ್ಲ. ಶೂರನಾದರೆ ಎದುರಿಗೆ ನಿಲ್ಲು ನನ್ನ ಪರಾಕ್ರಮವ ತೋರುವೆನು ಎಲೆಲಾ ಇವರ ಪಂಜುಗಳನ್ನೇ ಕಿತ್ತುಕೊಂಡು ಇವರಂ ಸುಡಿ ? ಇವರ ಮೀಸೆ ಗಡ್ಡಗಳನ್ನೆ ಸುಟ್ಟರೆ ಕೇಶಪಾಶಕ್ಕೆ ಹತ್ತಿದ ಉರಿಯಿಂದ ಸುಂದರಿಯರನುಭವಿಸುವ ದುಃಖವು ಇವರಿಗೆ ಅನುಭವಕ್ಕೆ ಬರುವದು. ಇದಂತಿರಲಿ, ಮನೆಯನ್ನೇರಿ ಹಂಜರಗಳಂ ಕಡಿಯುತ್ತಾ ಅದನ್ನೇ ಇವರ ಮೇಲೆ ಹಾಕುವರಾಗಿಹೋದದ್ದು ಹೋಗಲಿ ಇದ್ದದ್ದನ್ನಾದರೂರಕ್ಷಿಸೋಣ. ಕೊಡಗಳಿಂದಲೂ, ಗಡಿಗೆಗಳಿಂದಲೂ, ಹರವಿಗಳಿಂದಲೂ, ನೀರುಹಾಕುತ್ತಾ ಉರಿಯುವ ಮನೆಗಳನ್ನಾರಿಸಿ ಎಂದು ನಾನಾಪ್ರಕಾರವಾಗಿ ಜನಗಳು ಕೂಗಿಕೊಳ್ಳುತ್ತಿರುವಲ್ಲಿಯೇ ನಾಲ್ಕುಕಡೆಯಲ್ಲೂ, ಮನೆಗಳು ಹತ್ತಿಕೊಂಡದ್ದರಿಂದ ಆನೆ, ಕುದುರೆ, ಎತ್ತು,

ದನ, ಕರುಗಳು ಹಗ್ಗಗಳಂ ಕಿತ್ತುಕೊಂಡು ಬೀದಿಗಳಲ್ಲಿ ಪ್ರೋಡಾಡುವದ್ದರಿಂದಲೂ ಮನೆಯ ಉರಿಗಳಂ ತಾಳಲಾರದೆ ಹೊರಹೊರಟು ಆಬಾಲವೃದ್ಧರಾದ ಜನಗಳು ಶತ್ರುಗಳ ಶಸ್ತ್ರಪ್ರಹಾರಗಳಂ ಬೀಳುವದ್ದರಿಂದಲೂ, ಧನಕನಕವಸ್ತು ವಾಹನ ವನಿತಾವಸ್ತ್ರಾಭರಣಗಳಂ ಕೊಂಡುಹೋಗುವ ಕಳ್ಳರ ಆರ್ಭಟಯಿಂದಲೂ, ಸುಟ್ಟಿರುವ ಉಟ್ಟಿದ್ದಬಟ್ಟೆಯಂ ಬಿಟ್ಟು ಮಾನಗೆಟ್ಟು ಪ್ರೋಡುವ ಸ್ತ್ರೀಯರಂ ನೋಡುವ ಶೂರರ ಪರಿಹಾಸ್ಯಶಬ್ದದಿಂದಲೂ, ತಾರುಮಾರಾಗಿ ಶರಗಳಂ ಬೀರುತ್ತಿರುವ ಶತ್ರುಸೇನಾಜನಗಳ ಸಿಹ್ಮನಾದಗಳಿಂದಲೂ, ಅವರ ಪ್ರಹಾರಗಳಂ ತಾಳಲಾರದೆ ಕೂಗಿಕೊಳ್ಳುವ ಪುರಜನರ ಹಾಹಾಕಾರದಿಂದಲೂ, ಶತ್ರುಗಳಂ ತಡೆಯಲು ಪೊರಮಡುವ ಸೇನಾಪತಿಗಳ ಸಂಭ್ರಮದಿಂದಲೂ, ಕಲ್ಪಾಂತಕಾಲ ಮೇಘಗಳ ಗರ್ಜನೆಯಂತೆ ಭಯಂಕರವಾಗಿರುವ ವಿಜಾತೀಯವಾದ ಬಾದಾನೊಂದು ಕೋಲಾಹಲ ಪುಂಟಾಗಲು ಆಗ ವಿಧೂರಥನ ಪತ್ನಿಯಾದ ಲೀಲೆಯು ಸಖಿಯರಿಂದಲೂ, ದಾಸಿಯರಿಂದಲೂ, ಕೂಡಿಕೊಂಡು ಪ್ರೋಡಿಬಂದು ವಿದೂರಥನ ಪಾದಗಳಮೇಲೆ ಬೀಳುವಲ್ಲಿ ಅವಳಸಖಿಯರಲ್ಲೋರ್ವಳು ಗದ್ಗದ ಧ್ವನಿಯಿಂದಿಂತೆಂದಳು.

ಎಲೈ ರಾಜೇಂದ್ರನೇ! ಶತ್ರುಗಳು ಕಳ್ಳರಂತೆ ನಮ್ಮ ಅರಮನೆಯನ್ನುಗ್ಗಿ ಕಾದುಕೊಂಡಿರುವ ಜನರನ್ನು ಶಸ್ತ್ರಗಳಿಂದ ದು ನಮ್ಮ ಸ್ತ್ರೀಯರಂ ಕೊಂಡು ಹೋಗುತ್ತಿರುವದಂ ಕಂಡು ಈ ಪಟ್ಟಮಹಿಷಿಯೊಡನೆ ನಾವು ಪ್ರೋಡಿಬಂದಾ ತಮ್ಮ ಚರಣವಂ ಶರಣು ಹೊಂದಿರುವೆವು. ನಮಗೆ ಶತ್ರುಬಾಧೆಯಂ ತಪ್ಪಿಸಿ ಆಶ್ರಿತರಾದ ಜನರಂ ರಕ್ಷಿಸುವನಾಗು. ಎಂದು ಆ ಸಖಿಯು ಪೇಳಿದಮಾತಂ ಕೇಳಿದ ವಿಧೂರಥನು ಎಲೌ ದೇವಿಯರಾ! ಈ ನನ್ನ ಪತ್ನಿಯಂ ನೀವು ಸಂರಕ್ಷಿಸಿ ನಾನು ಯುದ್ಧಕ್ಕೆ ಹೋಗಿಬರುವೆನೆಂದು ಪೇಳುತ್ತಲೆ ಸಡಗರದಿಂ ಪೊರಮಟ್ಟನು, ಆಗ ಪದ್ಮಪತ್ನಿಯಾದ ಲೀಲೆಯು ತನ್ನಂತಿರುವ ಈ ಲೀಲೆಯಂ ಕಂಡು ವಿಸ್ಮಿತಳಾಗಿ ಎಲೌ ವಾಗ್ದೇವಿಯೇ! ನನ್ನ ಪ್ರತಿ ಬಿಂಬದಂತಿರುವ ಈ ಲೀಲೆಯು ಯಾರು ನನಗೆ ಇದು ರೂಪಾಂತರವ್ರೋ ನಮ್ಮ ಪುರದಲ್ಲಿದ್ದ ಜನರೆಲ್ಲರು ಇಲ್ಲಿರುವದು ಹ್ಯಾಗೆ ಇದಂ ಪೇಳಬೇಕೆನಲಾ ಸರಸ್ವತಿ ಇಂತೆಂದಳು,—

ಎಲೌ ಬಾಲೆಯೇ! ನಿನಗೆ ಇದು ರೂಪಾಂತರವೆ ಅಹುದೆಂದು ತಿಳಿಯುವಳಾಗು. ಮರಣಕಾಲದಲ್ಲಿ ಪ್ರಾಣಿಯು ಹ್ಯಾಗೆ ಹ್ಯಾಗೆ ಭಾವಿಸುವದೋ ಅದೇ ಪ್ರಕಾರ ಬರುವಜನ್ಮದಲ್ಲಿ ಅನುಭವಿಸುವದು. ಚಿತ್ತವು ಸಂಕಲ್ಪಮಾತ್ರದಿಂದಿಷ್ಟಾರ್ಥವಂ ಕಾಣುವಂತೆ ಚಿಚ್ಛಕ್ತಿಯು ಭಾವಿಸಿದ್ದನ್ನನುಭವಿಸುವದು. ಅದ್ದ

ರಿಂದ ನಿಮ್ಮ ಪುರದಲ್ಲಿ ಮರಣವಂ ಪಡದ ಪದ್ಮರಾಜನು ಭಾವಿಸಿದಂತೆ ಈ ವಿ
ಧೂರಥನ ರೂಪದಿಂದನುಭವಿಸುವನಾದ್ದರಿಂದ ಅವನ ಭಾವನಾನುಸಾರವಾಗಿ
ನೀನು ಮೊದಲಾಗಿ ಈ ಜನಗಳೆಲ್ಲರು ಪುಟ್ಟಿರುವರು. ಪದ್ಮಶರೀರವು ನಿಮ್ಮ
ಪುರದಲ್ಲಿ ಪುಷ್ಪಕಲ್ಪದಲ್ಲಿರುವದಷ್ಟೆ! ವಿದೂರಥನೆಂದು ನಾಮಮಾತ್ರದಿಂ ಭಿನ್ನ
ವಾದ ಅದೇ ರೂಪವು ಇಲ್ಲಿ ಹ್ಯಾಗಿರುವದೋ? ಅದೇಪ್ರಕಾರ ಆ ಪಟ್ಟ
ಣವಲ್ಲಿದ್ದ ನಿನ್ನ ರೂಪವು ಇಲ್ಲಿ ಪುಟ್ಟಿರುವದು. ಈಪ್ರಕಾರ ಇತರರಾದ ಅಲ್ಲಿದ್ದ
ಜನಗಳೂ ಸಹ ನಿನ್ನ ಪ್ರಾಣಕಾಂತನ ಸಂಕಲ್ಪಾನುಸಾರವಾಗಿ, ಇಲ್ಲಿ ರೂಪಾಂ
ತರಗಳಂ ಪಡದಿರುವರೆಂದು ತಿಳಿಯುವಳಾಗು. ಆತ್ಮೈಕವಿದ್ದಾಗ್ಯೂ ಉಪಾಧಿ
ಯಾದ ಮನಸ್ಸಿನ ಭೇದದಿಂದ ನಾನಾಪ್ರಕಾರವಾಗಿ ಪ್ರಾಣಿಗಳಿರುವರು. ಆದಾ
ಗ್ಯೂ ಕೆಲವು ಕೆಲವು ವಿಷಯಗಳಲ್ಲಿ ಭಾವಗಳಿಗೆ ಐಕ್ಯವಾಗುವದ್ದರಿಂದ ಒಬ್ಬನು
ಸ್ವಪ್ನವಂ ಕಾಣುವಂತೆ ಮತ್ತೊಬ್ಬನು ಕಾಣುವನು. ಒಬ್ಬನು ಪೇಳಿದಂತೆ ಮ
ತ್ತೊಬ್ಬನೂ ಪೇಳುವನು. ಒಬ್ಬನರೂಪಸಕ್ಕೆ ಸರಿಯಾಗಿ ಮತ್ತೊಬ್ಬನ ರೂಪ
ವಿರುವದು. ಕೆಲವರಿಗೆ ಸ್ವಲ್ಪವಿಷಯದಲ್ಲಿಯೂ, ಕೆಲವರಿಗೆ ಅನೇಕವಿಷಯಗಳಲ್ಲಿ
ಯೂ, ಸಾಮ್ಯವು ಸಂಭವಿಸುವದ್ದರಿಂದ, ಒಬ್ಬನಿಗೆ ತೋರಿದ ಪದಾರ್ಥಗಳು
ಅನೇಕಜನಗಳಿಗೆ ತೋರುವವು. ರಾಜಾಜ್ಞೆಯಿಂದ ಅನೇಕ ಜನಗಳು ಏಕಕಾ
ರ್ಯಕ್ಕೆ ಪ್ರವರ್ತಿಸುವಂತೆ ಮುಖ್ಯವಾದವನ ಸಂಕಲ್ಪದಿಂ ಸಿದ್ಧವಾದದ್ದನ್ನು ಅನೇ
ಕರು ಪರಿಗ್ರಹಿಸುವರು. ಪ್ರಥಮತಃ ಪದಾರ್ಥಗಳುಂಟಾಗುವಲ್ಲಿ ವಾಸನಾನುಗು
ಣವಾದ ಭಾವನೆಯಿಂದಲೇ ಉಂಟಾಗಿ, ಅದೇ ಗೋಚರವಾಗುತ್ತಾ ವ್ಯವಹಾ
ರಕ್ಕೆ ವಿಷಯಗಳಾಗುವವು. ಸಮಾನವಾದ ಭಾವನೆಯುಳ್ಳ ಜನಗಳಿಗೂ ಅವೇ
ಗೋಚರವಾಗುವವು. ಭಯಪಟ್ಟ ಬಾಲಕನಿಗೆ ಕತ್ತಲೆಯೇ ಪಿಶಾಚವಾಗು
ವಂತೆಯೂ, ಮೋಟುಮರವೇ ಕಳ್ಳನಾಗುವಂತೆಯೂ, ಗೋಚರವಾದ ಪದಾ
ರ್ಥವೇ ಭಾವವಿಶೇಷಗಳಿಂ ನಾನಾಪ್ರಕಾರವಾಗುವದು. ಪುಟ್ಟುವ ಪದಾರ್ಥ
ಗಳಲ್ಲಿ ಆಕಾಶದಂತೆ ಚೈತನ್ಯವು ವ್ಯಾಪಿಸುವದ್ದರಿಂದ, ಶರೀರಭೇದದಿಂ ಚೈತ
ನ್ಯಕ್ಕೆ ಭೇದ ಸಂಭವಿಸುವದು. ಅಲ್ಲಿ ಭಾವನಾನುಸಾರವಾಗಿ ಚಿತ್ತಕ್ಕೆ ಭೇದ
ವೂ ಅಭೇದವೂ ಕೂಡ ಸಂಭವಿಸುವದು. ಯೋಗಿಯು ಕಾಯಕೂಟವಂ
ವಹಿಸುವಲ್ಲಿ ಚಿತ್ತೈಕವಿದ್ದಾಗ್ಯೂ ಭಾವನಾಭೇದದಿಂದೊಂದೊಂದೆಡೆಯಲ್ಲಿ
ಚಿತ್ತಭೇದವುಂಟಾಗುವದು. ಸರ್ವಾಧಾರವಾದ ದಿಗ್ದೇಶಕಾಲಗಳೇ ವ್ಯತ್ಯಾಸ
ವಾಗುತ್ತಿರುವಲ್ಲಿ ಯಾವದು ಏಕರೀತಿಯಾಗಿರುವದೆಂದು ನಂಬುವವಕ್ಕೆ ಯೋ
ಗ್ಯವಾದೀತು. ಸದಸದ್ವಿಲಕ್ಷಣವಾದ್ದರಿಂದ ಅನಿರ್ವಚನೀಯವಾದ ಈ ಮಾ

ಯಾಪ್ರಪಂಚದಲ್ಲಿ ಅಘಟನಘಟನೆ ಎಂಬುವದು ಸ್ವಾಭಾವಿಕವಾದ್ದರಿಂದ, ಯಾವದೂ ಆಶ್ಚರ್ಯಪಡುವದಕ್ಕೆ ಯೋಗ್ಯವಾಗುವದಿಲ್ಲ. ಆದ್ದರಿಂ ತಿಳಿದವರು ಈ ಭ್ರಾಂತಿ ಎಲ್ಲವನ್ನು ಬಿಟ್ಟು ಪರಮಾರ್ಥ ಸತ್ಯವಿಚಾರದಿಂದೀ ಜಗಗಳ ಉತ್ಪತ್ತಿ ಸ್ಥಿತಿ ನಾಶಗಳಿಗೆ ಸ್ಥಾನವಾದ ಬ್ರಹ್ಮವನ್ನೇ ಸಮಸ್ತ ಪದಾರ್ಥರೂಪದಿಂ ಪ್ರಕಾಶಿಸುವದೆಂದು ನಿಶ್ಚಯಿಸಿ ನಿರಾತಂಕರಾಗಿರುವರು. ಸ್ವಪ್ನದಲ್ಲಿ ಜಾಗ್ರತ್ತು ಅಸತ್ತಾಗುವಂತೆ, ಜಾಗ್ರದಲ್ಲಿ ಸ್ವಪ್ನವಸತ್ತಾಗುವದು. ಇದೇಪ್ರಕಾರ ಜನ್ಮದಲ್ಲಿ ಮರಣವು ಮರಣದಲ್ಲಿ ಜನ್ಮವು ಸಹ ಅಸದ್ರೂಪವಾಗಿರುವದು. ಮರುಭೂಮಿಯಲ್ಲಿ ಬಿದ್ದ ಬಿಸಲು ಜಲರೂಪದಿಂ ಕಾಣಿಸಿಕೊಳ್ಳುವಂತೆ ಸದ್ರೂಪವಾದ ಬ್ರಹ್ಮದ ಪ್ರಕಾಶವು ಪ್ರಪಂಚರೂಪದಿಂ ಕಾಣಿಸಿಕೊಳ್ಳುವದಾದ್ದರಿಂದ ಪ್ರಪಂಚವು ಭ್ರಾಂತಿಮಾತ್ರವೆನಿಸುವದು. ಜೀವನು ಎಲ್ಲೆಲ್ಲಿದ್ದಾಗ್ಯೂ ಅಗ್ನಿಗೆ ಉಷ್ಣತ್ವದಂತೆ ಈ ಕಲ್ಪನಾಪ್ರಪಂಚವು ಸಿದ್ಧವಾಗಿರುವದು. ಇರುವಪದಾರ್ಥವೆಂತಲೂ, ಇಲ್ಲದಪದಾರ್ಥವೆಂತಲೂ, ಗ್ರಾಹ್ಯವೆಂತಲೂ, ತ್ಯಾಜ್ಯವೆಂತಲೂ, ಸ್ಥೂಲವೆಂತಲೂ, ಸೂಕ್ಷ್ಮವೆಂತಲೂ, ಚರವೆಂತಲೂ, ಸ್ಥಿರವೆಂತಲೂ, ಕಲ್ಪನೆಗಳು ನಿರಾಕಾರವಾದ ಬ್ರಹ್ಮದಲ್ಲಿ ಉಂಟಾಗಿರುವವು. ಈ ಜಗವು ಬ್ರಹ್ಮಕ್ಕೆ ಅಭಿನ್ನವಾದ್ದರಿಂದ ನಿರಾಕಾರವೆಂತಲೇ ತಿಳಿಯತಕ್ಕದಾದ್ದರಿಂದ ಕಾಣುವ ಆಕಾರವು ಬಿಸಲುದೊರೆಯಂತೆ ಭ್ರಾಂತಿಮಾತ್ರವೆನಿಸುವದು. ನಿಜಾಜ್ಞಾನದಿಂದಿದು ಸತ್ಯವಾಗಿ ಪರಮಾರ್ಥಭಾವದಿಂದ ಅಸತ್ಯವಾದ್ದರಿಂದ ಅನಿರ್ವಚನೀಯವೆನಿಸುವದು. ಈ ಮಾಯೆಯಿಂ ಪರವಶವಾಗಿ ಸ್ವರೂಪವಂ ವಿಚಾರಿಸದಿರುವ ಚಿತ್ತೇ ಜೀವವೆನಿಸಿಕೊಂಡು ದೃಶ್ಯವೆಲ್ಲವನ್ನು ಸತ್ಯವೆಂದು ತಿಳಕೊಂಡಿರುವದು. ಮತ್ತು ತನ್ನ ಅನುಭವಕ್ಕೆ ಸರಿಯಾಗಿಯೂ, ವಿಷಮವಾಗಿಯೂ, ಅರ್ಧಸಮವಾಗಿಯೂ, ದೃಶ್ಯವಂ ನೋಡುತ್ತಿರುವದು. ನಿನ್ನ ಗಂಡನ ಭಾವಾನುರೂಪವಾಗಿ ಹುಟ್ಟಿರುವ ಈ ಮಂತ್ರಿ ಪೌರಾದಿಗಳು ಪೂರ್ವಾನುಭವದಿಂ ನಿನಗೆ ಗೋಚರರಾಗುತ್ತಿರುವರು. ಹೀಗೆ ಪ್ರಕಾಶಿಸುವಂಥಾದ್ದೇ ಚಿದಾಕಾಶಕ್ಕೆ ಸ್ವಭಾವವು. ಕಲ್ಪನಾರೂಪದಿಂದೊಳಗೆ ಪ್ರಕಾಶಿಸಿದ್ದೇ ಹೊರಗೆ ಪ್ರತಿಬಿಂಬವಂತೆ ಗೋಚರವಾಗುವದು. ಪರಮಾರ್ಥ ದೃಷ್ಟಿಯಿಂನೋಡುವಲ್ಲಿ ನಾನು ನೀನೆಂಬುವದೇ ಮೊದಲಾದ ಈ ಪ್ರಪಂಚವೆಲ್ಲವು ಬ್ರಹ್ಮಪ್ರಕಾಶರೂಪವಾಗಿಯೇ ಕಾಣುವದ್ದರಿಂದ ನೀನು ಮಿಥ್ಯಾಕಲ್ಪನೆಗಳಂ ಬಿಟ್ಟು ರಾಗದ್ವೇಷಾದಿ ದೋಷಗಳಿಲ್ಲದೆ ಶಾಂತಭಾವದಿಂದಿರುವಳಾಗು. ಈ ವಿದೂರಥನು ರಣರಂಗದಲ್ಲಿ ಭಾಗವಂಹೊಂದಿ ಪುನಃ ಪದ್ಮರಾಜನ ಶರೀರವಂ ಪಡದು ನಿಮ್ಮರಾಜ್ಯಭಾರಸುಖವನ್ನೇ ಅನು

ಭವಿಸುವನು. ಎಂದು ಸರಸ್ವತಿಯು ಪೇಳುತ್ತಿರುವಲ್ಲಿ ಎರಡನೇ ಲೀಲೆಯು ಆ ದೇವಿಗೆ ನಮಸ್ಕರಿಸಿ ಎಲೌ ಪರದೇವತೆಯೆ ನಾನು ಪ್ರತಿದಿವಸದಲ್ಲಿಯೂ, ಜ್ಞಪ್ತಿದೇವಿಯಂ ಪೂಜಿಸುವೆನು. ಆಗಾಗ್ಯೆ ಆ ದೇವಿಯ ದರ್ಶನವು ನನಗೆ ಸ್ವಪ್ನದಲ್ಲಿ ಆಗುತ್ತಿರುವದು. ಆಕಾರಸಾಮ್ಯದಿಂದಾಜ್ಞಪ್ತಿಯೇ ನೀನೆಂದು ತಿಳಿಯುತ್ತೇನೆ. ನನ್ನತಿಳವಳಿಕೆ ಸತ್ಯವೋ ಅಸತ್ಯವೋ ಪೇಳಬೇಕೆಂದು ಬೆಸಗೊಳ್ಳಲಾ ಸರಸ್ವತಿಯು ಎಲೌ ಬಾಲಕಿಯೆ ನಿನ್ನ ಅನನ್ಯಭಕ್ತಿಯಿಂ ನಾನು ಗೋಚರಳಾಗಿರುವೆನು. ನಿನಗೆ ಬೇಕಾದ ವರವಂಬೇಡಿಕೊಳ್ಳುವಳಾಗೆನಲು ಆಗ ಎರಡನೇ ಲೀಲೆಯು ಎಲೌ ಲೋಕಮಾತೆಯೆ ಇಲ್ಲಿ ಮೃತನಾದ ನನ್ನ ಗಂಡನು ಎಲ್ಲಿ ಪುಟ್ಟುವನೊ ಅಲ್ಲಿ ಇದೇ ಶರೀರದಿಂದವನಿಗೆ ನಾನು ಪತ್ನಿಯಾಗಿರುವಂತೆ ವರವಂ ಕೊಡಬೇಕೆಂದು ಬೆಸಗೊಳ್ಳಲು ಆಗ ಹಾಗೆ ಆಗಲೆಂದು ಪೇಳುವ ಸರಸ್ವತಿಯಂ ಕುರಿತು ಪೂರ್ವ ಲೀಲೆಯು ಎಲೌ ಜಗದಂಬಿಕೆಯೇ ಸತ್ಯಕಾಮಳಾಗಿರುವ ನಿನಗೆ ಇಚ್ಛಾಸಿದ್ಧಿಯಿರುವಲ್ಲಿ ಪೂರ್ವಶರೀರವಂ ಬಿಡಿಸಿ ನನ್ನನ್ನಿಲ್ಲಿಗೆ ಕರತರುವದಕ್ಕೆ ಕಾರಣವೇನು ? ಪೇಳಬೇಕೆಂದು ಕೇಳಲಾ ಸರಸ್ವತಿ ಇಂತೆಂದಳು.

ಎಲೌ ಬಾಲೆಯೇ ! ಜೀವರೂಪದಿಂದಿರುವ ಚಿಚ್ಛಕ್ತಿಯು ಹ್ಯಾಗೆ ಹ್ಯಾಗೆ ಭಾವಿಸಿ ಕಾರ್ಯಗಳಂ ಮಾಡುವದೊ ಹಾಗೆ ಹಾಗೆ ಕಾರ್ಯಸಿದ್ಧಿಯಾಗುವದರಲ್ಲಿ ಸಂದೇಹವಿಲ್ಲ. ಜಗತ್ಕಾರಣವೆನಿಸುವ ಬ್ರಹ್ಮಸ್ವರೂಪದಿಂ ಸರ್ವಸಮಳಾಗಿ ತಟಸ್ಥಳಾಗಿರುವ ನಾನು ಉಪಾಸನಾನುಗುಣವಾಗಿ ಜನಗಳಿಗೆ ವರವಂ ಕೊಡುವಂಥಾವಳಾದ್ದರಿಂದ ನನ್ನವರದಿಂದವರವರ ಕರ್ಮಫಲವೇ ಅವರವರಿಗೆ ಸಿದ್ಧವಾಗುವದೆಂದು ನಿಶ್ಚಯಿಸುವಳಾಗು. ನೀನು ಮುಕ್ತಿಯಾಗಬೇಕೆಂದು ನನ್ನಂಭಜಿಸಿದವಳಾದ್ದರಿಂದ ನಿನಗೆ ಕರ್ಮಶರೀರವಂ ಬಿಡಿಸಿ ಮುಕ್ತಿಸಾಧಕವಾದ ಆಯಾಯ ಯುಕ್ತಿಗಳಿಂದ ನಿನಗೆ ಜ್ಞಾನವನ್ನುಂಟುಮಾಡಿದೆನು. ಈ ಲೀಲೆಯು ಈ ಶರೀರದಿಂದಲೇ ಪತಿಯ ಸಮೀಪದಲ್ಲಿರಬೇಕೆಂದು ನನ್ನಂ ಭಜಿಸಿದವಳಾದ್ದರಿಂದ ಅದೇಪ್ರಕಾರ ಇವಳಿಗೆ ಸಿದ್ಧಿಯಾಗುವದು. ಹೀಗೆ ನಿನ್ನಗಂಡನಿಗೆ ಮುಕ್ತಿಯೇ ಆಗುವದು. ಇವನ ಶತ್ರುವಾದ ಸಿಂಧುರಾಜನಿಗೆ ಜಯವೇ ಆಗುವದೆಂದು ಸರಸ್ವತಿಯು ಪೇಳುತಿದ್ದಳೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಲೀಲೆಗೆ ಪತಿಸ್ಥಾನಪ್ರದರ್ಶನವೆಂಬ ನಾಲ್ಕನೇ ತರಂಗಕ್ಕೆ ಮಂಗಳಮಹಾ.



## ಪಂಚಮತರಂಗ ಪ್ರಾರಂಭಃ.



ಬಳಿಕ ವಸಿಷ್ಠನಿಂತೆಂದನು. ಎಲೈ ಶ್ರೀರಾಮಚಂದ್ರನೇ ! ಗಜಗಳ ತುಳಿ
ದಾಟದಿಂದ ಕೇಸರಿಯಂತೆ ಶತ್ರುಗಳ ತುಂಟತನದಿಂ ಕುಪಿತನಾದ ವಿದೂರಥನು
ಅತಿತ್ವರೆಯಿಂದಂತಃಪುರದಿಂ ಪೊರಮಟ್ಟು ಶತ್ರುಗಳಿಂದುಂಟಾದ ಘಾತಪಾತ
ಗಳಂ ಪೇಳುವ ಚಾರರ ವಚನವಂ ಕೇಳುತ್ತಾ ಯುದ್ಧಸನ್ನದ್ಧರಾಗಿ ನಿಂದಿ
ರುವ ಸೇನಾಪತಿಗಳನ್ನಾಯಾಯ ಯುದ್ಧಕಾರ್ಯಗಳಿಗೆ ನೇಮಿಸುತ್ತಾ, ಶತ್ರು
ಗಳಿಂ ಭಗ್ನರಾದ ಅರಮನೆ ಕಾವಲು ಜನಗಳಿಗೆ ಸಮಾಧಾನವಂ ಮಾಡುವಂತೆ
ಧನಾಧಿಪತಿಯಂ ನಿಯಮಿಸುತ್ತಾ, ಸ್ತ್ರೀಭೂಷಣಾದಿಗಳಂ ತೆಗದುಕೊಂಡು
ಪೋಗುವ ಶತ್ರುಗಳಂ ಹಿಡತರುವಂತೆಯೂ, ಅವರಿಗೆ ತಕ್ಕ ಶಿಕ್ಷೆಯಂ ಮಾಡಿ
ಸುವಂತೆಯೂ, ಆಸ್ಥಾನಾಧಿಪತಿಗೆ ಪೇಳುತ್ತಾ, ಶತ್ರುಗಳಿಗೆ ಅವಕಾಶವುಂಟಾ
ಗುವಂತೆ ಎಚ್ಚರ ತಪ್ಪಿರುವದಕ್ಕೆ ಕಾರಣವೇನೆಂದು ಪುರಾಧಿಪತಿಯಂ ಧಿಕ್ಕ
ರಿಸಿ, ದಾನಮಾನಾದಿಗಳಿಂದ ಪೌರರಂ ಸಮಾಧಾನಪಡಿಸುವಂತೆ ಅವನನ್ನೇ
ಪ್ರೇರಿಸುತ್ತಾ, ಅರಮನೆಯಿಂ ಪೊರಮಡುವಲ್ಲಿ ನೃಸಿಹ್ಮಾವಿರ್ಭಾವದಿಂ ದೈತ್ಯ
ರಂತೆ ಶತ್ರುಗಳು ದಿಕ್ಕೆಟ್ಟು ಓಡಿದರು. ಅವರು ಬಿಸುಟ ಪಂಜುಗಳ ಬೆಳಕಿನಿಂ
ದಲೇ ಅವರು ಎಲ್ಲಿಯೂ ಹೊಕ್ಕೊಳ್ಳುವದಕ್ಕೆ ಅವಕಾಶವಾಗಲಿಲ್ಲ. ಅಷ್ಟ
ರೊಳು ಸುತ್ತಮುತ್ತಲೂ ನೀರುಗಳು ಬೀಳುವದ್ದರಿಂದ ಉಪ್ಪರಿಗೆಗಳ ಮೇ
ಲ್ಗಡೆಯೊಳುರಿಗಳಂ ಕೂಡಿ ಮಿಂಚುಗಳಂ ಕೂಡಿದ ಮೇಘಗಳಂತೆ ಪ್ರಕಾಶಿಸು
ತ್ತಿದ್ದ ಧೂಮಸಮೂಹಗಳಡಗಿದವು. ಆಗ ಹೊಡೆಯಲ್ಪಟ್ಟ ಪ್ರಯಾಣದುಂ
ದುಭಿಗಳ ಘೋಷವು ಶತ್ರುಗಳಿಂದ ಪೌರನಾರಿಯರಂ ಬಿಡಿಸುತ್ತಾ, ಪಿಶಾಚಗ
ಳಂನೋಡಿಸುವ ಮಹಾಮಂತ್ರದಂತೆ ಪುರಜನರಿಗೆ ಶ್ಲಾಘ್ಯವಾದುದು. ವಿದೂ
ರಥನು ರಥವನ್ನೇರುವಷ್ಟರಲ್ಲಿಯೆ ಪುರವನ್ನುಗ್ಗಿ ಬರುವ ಸಿಂಧುರಾಜನ ಸೇನೆ
ಗಳಿಗೂ, ವಿದೂರಥನ ಸೇನೆಗಳಿಗೂ, ಅತಿ ಭಯಂಕರವಾದ ಯುದ್ಧವಾಗುವಲ್ಲಿ
ಉರಿಯುತ್ತಿರುವ ನಾಲಿಗೆಗಳಂ ನೀಡಿಕೊಂಡು ರಣಪಿಶಾಚಿಗಳು ಬರುತ್ತಿರಲು,
ಪೂರ್ವದಂತೆ ಪಂಜಿನಕಳ್ಳರು ಬಂದರೆಂತಲೂ, ಅವರಲ್ಲವೆಂತಲೂ, ಯುದ್ಧವ
ನ್ನೋಡುವ ಜನಸಮೂಹದಲ್ಲಿ ಕೋಲಾಹಲವುಂಟಾಯಿತು. ಸೇನೆಗಳ ಗಮ
ನಾಗಮನಗಳಿಂದುಂಟಾದ ಧೂಳುಗಳು ರಕ್ತಧಾರೆಗಳಿಂದಡಗಿದವು. ಶಸ್ತ್ರಗಳ
ಪರಸ್ಪರ ಸಂಘರ್ಷಣದಿಂದುಂಟಾದ ಜ್ವಾಲೆಗಳಿಂದ ಅಂಧಕಾರವು ಶಾಂತವಾಯಿ
ತು. ಆ ಕಾಲದಲ್ಲಿ ನಮ್ಮಂ ನಾನಾಪ್ರಕಾರವಾಗಿ ಘಾಸಿಪಡಿಸಿದರೆಂಬ ರೋಷ

ದಿಂ ಪರವಶರಾಗಿ ವಿಧೂರಥನ ಸೇನೆಯವರು ಹೊಡೆಯುತ್ತಿರಲು, ಲೂಟಿಯ ಕೊಬ್ಬಿನಿಂದುಬ್ಬಿದ್ದ ಸಿಂಧುರಾಜನ ಸೈನಿಕರು ಭಗ್ನರಾದರು. ರೋಷಾವೇಶ ದಿಂದ ಶತ್ರುಪ್ರಹಾರಗಳೆನ್ನೆಣಿಸದೆ ಹೊಡೆಯುತ್ತಿರುವ ವಿಧೂರಥನ ಸೈನಿಕರ ಪ ರಾಕ್ರಮ ಚಮತ್ಕಾರವಂ ನೋಡಲೋಸುಗವೋ ಎಂಬಂತೆ ಸೂರ್ಯನು ಉದ ಯಾಚಲವನ್ನೇರಲು, ತಮಸ್ಸಿನಿಂದೆತ್ತಲ್ಪಟ್ಟಂತೆ ಪ್ರಪಂಚವು ಪ್ರಕಾಶಿಸುತ್ತಿ ರಲು, ರಕ್ತಧಾರೆಗಳಂತೆ ಕೋಟೆ ಕೊತ್ತಲೆಗಳಮೇಲೆ ಸೂರ್ಯನ ಕಿರಣಗಳು ಬೀಳುತ್ತಿರಲು, ಸಂಧ್ಯಾರಾಗದೊಡನೆ ಗಗನವಂ ವ್ಯಾಪಿಸಿರುವ ಶಸ್ತ್ರಜ್ವಾಲಾ ಪ್ರಭೆಯು ಯುದ್ಧವಂ ನೋಡಲು ಬಂದಿರುವ ದೇವತೆಗಳಿಗೋಸುಗ ಹಾಸಿ ರುವ ತಪ್ತಕಾಂಚನಮಯವಾದ ಉಲ್ಲಾರದಂತೆ ಕಾಣುತ್ತಿರಲು, ಸೇನಾಮ ಧ್ಯದೋಳ್ನುಗ್ಗಿ ಬಂದ ವಿದೂರಥನ ಶರಪ್ರಹಾರದಿಂ ಸಿಂಧುರಾಜನ ವಾಹಿನಿ ಗಳು ಮಾರನಿಂ ಹೊಡೆಯಲ್ಪಟ್ಟ ಕಾಮಿನಿಗಳಂತೆ ಸ್ತಂಭಪ್ರಳಯ ರೋಮಾಂ ಚಾದಿ ದಶಾವಸ್ಥೆಗಳಿಂ ಕೂಡಿ ವಿದೂರಥನಂ ಕಾಮಿಸಿ ಬಂದ ಜಯಲಕ್ಷ್ಮಿ ಯಿಂದ ಆವಿಷ್ಟವಾಗಿರುವಂತೆ ಕಾಣುತ್ತಿರಲು, ಅದಂ ಕಂಡು ಕೋಪಗೊಂಡ ಸಿಂಧುರಾಜನು ಪ್ರಳಯಕಾಲದ ರುದ್ರನಂತಿರುವನು. ನಿಮಿಷಮಾತ್ರದಿಂ ನಮ್ಮ ಸೇನೆಗಳೆಲ್ಲವನ್ನು ಭಸ್ಮವಾಗಿ ಮಾಡುವೆನೆಂಬ ದಿಗಲಿನಿಂದೋಡಿಬಂದು ಸೇನೆ ಗಳಮೇಲೆ ಬೀಳುತ್ತಿರುವ ಶರಧಾರೆಗಳಂ ಬಿರುಗಾಳಿಯಂತೆ ಬಾಣಗಳಂ ಹಾರಿ ಸಲು, ಇದಂ ಕಂಡ ವಿದೂರಥನು ಅವನೆದುರಾಗಿ ರಥವಂ ತಿರುಗಿಸಿ ಸರಿಯಾ ದವನು ಬಂದನೆಂದಾನಂದಪಡುತ್ತಾ, ತನ್ನ ಚಮತ್ಕಾರವಂ ತೋರಿಸಲುಪಕ್ರ ಮಿಸಿ, ವಿಚಿತ್ರವಾದ ಒಂದು ಬಾಣವಂ ಪ್ರಯೋಗಿಸಲು, ಆ ಬಾಣವು ಪರ ಮಾತ್ಮನ ಇಚ್ಛಾಶಕ್ತಿಯಂತೆ ದಶಗುಣವಾಗಿಯು, ಶತಗುಣವಾಗಿಯೂ, ಸಹ ಸ್ರಗುಣವಾಗಿಯೂ, ಗಮನವಿಲಾಸದಲ್ಲಿ ವೃದ್ಧಿಹೊಂದುತ್ತಾ ಸೂರ್ಯನ ಕಿರಣ ದಂತೆ ಜಗವೆಲ್ಲವಂ ಪ್ರಭಾವಿಶೇಷದಿಂ ವ್ಯಾಪಿಸುತ್ತಾ, ಸೇನಾಸಮೇತನಾದ ಸಿಂ ಧುರಾಜನಂ ಮುಚ್ಚುವಲ್ಲಿ ಅಂತಃಪುರದಲ್ಲಿ ಗವಾಕ್ಷಗಳಿಂ ನೋಡುತ್ತಿದ್ದ ಲೀಲೆ ಯರಿಬ್ಬರು ವಿದೂರಥನ ಕುಮಾರಿಯೂ, ಸರಸ್ವತಿಯೂ ಕೂಡ ಆಶ್ಚರ್ಯಪಡು ತ್ತಿರಲು, ವಿದೂರಥನೆಂಬ ಅಗಸ್ತ್ಯನು ಸಿಂಧುರಾಜನಂ ಪಾನಮಾಡುವನೆಂದು ಸೇನಾಜನರು ಕೂಗುತ್ತಿರಲು, ವಿಸ್ಮಿತರ ವೈಮಾನಿಕರು ವಿದೂರಥನಮೇಲೆ ಪೂಮಳೆಯಂ ಗರೆಯುತ್ತಿರಲು, ಕಳ್ಳತನದ ಕವನಕ್ಕೆ ಫಲವಾದುದೆಂದು ಸಿಂಧು ರಾಜನ ಸೇನಾಪತಿಗಳು ಪೇಳುತ್ತಿರಲು, ಆ ಬಾಣಗಳಿಂ ಕತ್ತರಿಸಿ ಹಾರಿಸಲ್ಪ ಟ್ಟ ವೀರಾಗ್ರೇಸರರ ಶಸ್ತ್ರಸಹಿತವಾದ ತೋಳುಗಳು ಆನೆಗಳ ಸೊಂಡಿಲುಗಳೂ

ಕೂಡ ಒಂದುಕ್ಷಣವಂತರಿಕ್ಷದಲ್ಲಿ ಯುದ್ಧವಂ ನೋಡಲೋಸುಗ ಬಂದ ನಾಗಲೋಕದಂತೆ ಕಾಣುತ್ತಿರಲು, ಮುಖಗಳಿಂದ ಗಗನಮಂಡಲವು ಪದ್ಮಾಕರದಂತೆ ಶೋಭಿಸುತ್ತಿರಲು, ಜಯಕಾಲವಾದ್ದರಿಂದತಿಧೀರನಾದ ಸಿಂಧುರಾಜನು ಸುತ್ತುಮುತ್ತಲೂ ಬರುವ ನದಿಗಳಂ ತೆರೆಗಳಿಂದ ಸೆಳೆಕೊಳ್ಳುವಂತೆ ಆ ಬಾಣಪ್ರವಾಹಗಳಂ ತನ್ನ ಬಾಣಗಳಿಂದಡಗಿಸಿಕೊಂಡನು. ಆಗ ಇವನು ಸಿಂಧುರಾಜನೇ ಅಲ್ಲ, ಸಿಂಧುರಾಜನಿಂ ಪುಟ್ಟಿ ಬಂದ ಬಡಬಾಗ್ನಿಯೇ ಈ ರೂಪದಿಂದಿರುವದು, ಇಲ್ಲದಿರೆ ಈ ವಿದೂರಥನ ಶರಪ್ರವಾಹಗಳು ತೊಲಗುವವೇ ಎಂದು ನೋಡುವವರು ನುಡಿಯುತ್ತಿರಲು, ಸಿಂಧುರಾಜನ ಧನುವಿನಿಂದ ತರಂಗತರಂಗವಾಗಿ ಪೊರಮಟ್ಟ ಶರಪರಂಪರೆಗಳು ವಿದೂರಥನಂ ಹೊಂದಿ ಜಹ್ನುಮುನಿಯ ಸಮೀಪಕ್ಕೆ ಬಂದ ಗಂಗಾಪ್ರವಾಹದಂತೆ ಅದೃಶ್ಯವಾಗುತ್ತಿರಲು, ಪರಸ್ಪರ ಸಮಾನರಾದ ಅವರ ಯುದ್ಧವಂ ನೋಡುವ ನಾರದಮುನಿಯು ಹರಿಹರರೆಂದು ಅವರನ್ನೇ ಕೊಂಡಾಡಿದನು. ಕಾಡುಗಿಚ್ಚಿನಿಂದ ಕಿಡಿಗಳಂತೆಯೂ, ಮೇಘದಿಂದ ಮಳೆ ಹನಿಗಳಂತೆಯೂ, ಸಮುದ್ರದಿಂದ ತೆರೆಗಳಂತಯೂ, ಬಿರಿಗಾಳಿಯಿಂದ ಹೊಡೆಯಲ್ಪಟ್ಟ ವೃಕ್ಷಗಳಿಂದ ಪುಷ್ಪಗಳಂತೆಯೂ, ಸೂರ್ಯನಿಂದ ಕಿರಣಗಳಂತೆಯೂ, ಅವರೀರ್ವರ ಧನುಗಳಿಂದ ಶರಗಳು ಪೊರಮಡುತ್ತಿರಲು, ಅವರ ಚಮತ್ಕಾರವಂ ನೋಡಲೋಸುಗ ಸೈನಿಕರೂ ಕೂಡ ಯುದ್ಧದಲ್ಲಿ ತಟಸ್ಥರಾಗುತ್ತಿರಲು, ಸಿಂಧುರಾಜನು ಶತ್ರುಸಮೂಹ ಸರ್ವ್ವೋಪಹರವಾದ ಒಂದು ಶರವಂ ಪ್ರಯೋಗಿಸಿದನು. ಅದು ನೂರಾರು ಶವಗಳಂ ಪಿಡಿದುಕೊಂಡು ರಾಕ್ಷಸರೂಪದಿಂ ಬಾಯು ತೆರೆದುಕೊಂಡು ಹಾರಿಬರುತ್ತಾ, ಪರಮೇಶ್ವರನಿಂದ ಮೃತ್ಯುವಿನಂತೆ ವಿದೂರಥನಿಂದ ತಿರಸ್ಕೃತವಾಗಲು, ಸಿಂಧುರಾಜ ಪ್ರಯುಕ್ತವಾದ ಗಂಧರ್ವಾಸ್ತ್ರದಿಂದ ಸಮಸ್ತಜನರು ಮುಗ್ಧರಾಗಿ ಚಿತ್ರದಲ್ಲಿ ಬರದಿರುವಂತೆ ಕಾಣಲ್ಪಟ್ಟರು. ಜ್ಞಾನಿಯಾದವನು ಮಹೇಶ್ವರನ ಮಾಯೆಗೂ ಪರವಶನಾಗದೆ ಪ್ರಕೃತೋಚಿತವಾದ ಲೋಕವ್ಯವಹಾರಗಳಂ ನಡೆಸುವನಾದ್ದರಿಂದ ಆ ಗಂಧರ್ವಮಾಯೆಯಿಂ ಮೋಹಪಡದ ವಿದೂರಥನು ಪ್ರಬೋಧಾಸ್ತ್ರದಿಂ ಜನಗಳಿಗೆ ಮೋಹವಂ ತಪ್ಪಿಸಿದನು. ಬಳಿಕ ಸಿಂಧುರಾಜನು ಪ್ರಯೋಗಿಸಿದ ನಾಗಾಸ್ತ್ರವನ್ನು ಗರುಡಾಸ್ತ್ರದಿಂದಲೂ, ತಾಮಸಾಸ್ತ್ರವನ್ನು ಸೌರಾಸ್ತ್ರದಿಂದಲೂ, ರಾಕ್ಷಸಾಸ್ತ್ರವನ್ನು ನಾರಾಯಣಾಸ್ತ್ರದಿಂದಲೂ, ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದಲೂ, ಶೋಷಣಾಸ್ತ್ರವನ್ನು ಪರ್ಜನ್ಯಾಸ್ತ್ರದಿಂದಲೂ, ವಾಯವ್ಯಾಸ್ತ್ರವನ್ನು ಪರ್ವತಾಸ್ತ್ರದಿಂದಲೂ, ವಜ್ರಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೂ, ಪಿಶಾಚಾಸ್ತ್ರವನ್ನು ರಾಕ್ಷಸಾ

ಸ್ತ್ರದಿಂದಲೂ, ವೈಷ್ಣವಾಸ್ತ್ರವನ್ನು ವೈಷ್ಣವಾಸ್ತ್ರದಿಂದಲೂ, ತಡೆಯುತ್ತಿದ್ದ ವಿದೂರಥನು ನಾನಾಪ್ರಕಾರವಾದ ರೂಪಗಳಿಂ ಬಡದಾಡುತ್ತಿರುವ ಆ ಅಸ್ತ್ರಗಳ ಆಟೋಪವಂ ನೋಡುತ್ತಾ, ಬೆರಗಾಗಿರುವ ಸಿಂಧುರಾಜನಮೇಲೆ ಆಗ್ನೇಯಾಸ್ತ್ರವಂ ಪ್ರಯೋಗಿಸಲಾಗ, ಆ ಸಿಂಧುರಾಜನ ರಥವು ಸಿಡಿಲುಸಿಂ ಪೆಟ್ಟುಬಿದ್ದ ಶುಷ್ಕವೃಕ್ಷದಂತೆ ಉರಿಯುತ್ತಿರುವಲ್ಲಿ, ವಾರುಣಾಸ್ತ್ರದಿಂದ ಅಸ್ತ್ರಜ್ವಾಲೆಗಳನ್ನು ಹಗಿಸಿ ಅರ್ಧಭಸ್ಮವಾದ ಆ ರಥದಿಂ ಖಡ್ಗವಂ ಪಿಡಿದು ಹಾರಿದ ಸಿಂಧುರಾಜನು ವಿದೂರಥನ ರಥಾಶ್ವಗಳ ಕಾಲ್ಗಳಂ ಕತ್ತರಿಸಲು, ಖಡ್ಗಬೆಟ್ಟಗಳಂ ಪಿಡಿವ ವಿದೂರಥನು ರಥದಿಂ ಧುಮುಕಿ ಸಿಂಧುರಾಜನೆದುರಿಗೆ ನಿಲ್ಲಲು, ಬಳಿಕ ಮಂಡಲಾಕಾಕಾರಗತಿ ವಿಶೇಷಗಳಿಂ ತಿರುಗುತ್ತಾ, ಪರಸ್ಪರವಾಗಿ ಹೊಡೆಯುತ್ತಿರುವಲ್ಲಿ, ಸುತ್ತಲೂ ನಿಂತು ನೋಡುವ ವೀರಸಮೂಹವು ಸಮುದ್ರ ಮಧ್ಯದಲ್ಲುಂಟಾದ ದೊಡ್ಡ ಸುಳಿಯಂತೆ ಪ್ರಕಾಶಿಸಿತು. ಅವರೀರ್ವರ ಖಡ್ಗಗಳು ಪರಸ್ಪರ ಪ್ರಹಾರಗಳಿಂ ಗರಗಸಗಳಂತೆ ಪ್ರಕಾಶಿಸುತ್ತಿರಲು, ವೇಗಶಾಲಿಯಾದ ವಿದೂರಥನು ತನ್ನ ರಥದಮೇಲಿದ್ದ ಶಕ್ತಿಯಂ ತೆಗೆದುಕೊಂಡು ಸಿಂಧುರಾಜನಮೇಲೆ ಪ್ರಯೋಗಿಸಲು, ಅದರಿಂ ಭಿನ್ನವಾದ ವಕ್ಷಸ್ಥಲವುಳ್ಳ ಸಿಂಧುರಾಜನಿಗೆ ಪ್ರಾಣವು ಮಹಾವಿಷ್ಣುವಿನ ವರಬಲದಿಂ ಶರೀರವಂ ಬಿಡಲಿಲ್ಲ, ಗಿರಿಯಿಂದ ಪ್ರವಾಹ ಹೊರಡುವಂತೆ ಅವನ ಹೃದಯದಿಂ ರಕ್ತಪ್ರವಾಹವು ನಾಲ್ಕುಕಡೆಯಲ್ಲು ಪ್ರವಹಿಸಿತು. ಆ ಶಕ್ತಿಯು ಅವನ ಎದೆಯಂ ಭೇದಿಸಿಕೊಂಡು ಆಚೆಗೆ ಹೋಗಲು, ವರಬಲದಿಂ ಸಂಜ್ಞೆಯಂ ಪಡದ ಸಿಂಧುರಾಜನು ಮತ್ತೊಂದು ರಥವನ್ನೇರಿ ವಿದೂರಥನಿಗೆ ಸಿದ್ಧವಾಗಿ ಬಂದ ರಥವಂ ಮುಸಲದಿಂ ಹೊಡದು ಅನೇಕ ಬಾಣಗಳಿಂದ ವಿದೂರಥನಂ ವ್ಯಥೆಪಡಿಸಿದನು. ಅಷ್ಟರೊಳ್ ಪುನಹ ಸಿದ್ಧವಾಗಿ ಬಂದ ರಥವಂ ವಿದೂರಥನು ಏರುತ್ತಿರುವಲ್ಲಿಯೇ ಸಿಂಧುರಾಜನು ರಥದಿಂ ಧುಮುಕಿಬಂದು ಖಡ್ಗದಿಂದವನ ಹೆಗಲಮೇಲೆ ಹೊಡದನು. ಅದರಿಂದವನು ಹಿಂತಿರುಗಿ ಕತ್ತಿಯನ್ನೆತ್ತುವಷ್ಟರೊಳ್ ಅವನ ಕಾಲ್ಗಳಂ ಕತ್ತರಿಸಿ ಅವನ ಪೆಟ್ಟುಗಳಂ ತಪ್ಪಿಸಿಕೊಳ್ಳುತ್ತಾ ನಿಜರಥವನ್ನೇರಿ ಕೈಗೆ ಸಿಕ್ಕಿದ ಶಸ್ತ್ರಗಳಂ ಪ್ರಯೋಗಿಸುತ್ತಾ ರಥದ ಕೆಳಗೆ ಬಿದ್ದಿರುವ ವಿದೂರಥನ ಕತ್ತಿಗೆ ಅತಿತೀಕ್ಷ್ಣವಾದ ಶರವಂ ಪ್ರಯೋಗಿಸಿದನು. ಅರ್ಧಭಿನ್ನವಾದ ಕಂಠವುಳ್ಳವನಾದಾಗ್ಯೂ ಆ ವಿದೂರಥನು ರಥದೆಡೆಯೊಳ್ ಬಿದ್ದಿರುವ ಘೋರವಾದ ಮುದ್ಗರವಂ ತೆಗೆದು ಬಿಸುಡಲು, ಸಿಂಧುರಾಜನು ಆ ಮುದ್ಗರವಂ ಭೇದಿಸುವಷ್ಟರೊಳ್ ವಿದೂರಥನ ಸಾರಥಿಯು ಝುಗ್ಗನೆ ರಥದಿಂ ಧುಮುಕಿ ವಿದೂರಥನಂ ರಥದಮೇಲೆ ಹಾತ

ಕೊಂಡು ಅತಿವೇಗದಿಂದರಮನೆಯಂ ಪ್ರವೇಶಿಸಿದನು. ಆ ರಥವಂ ಬೆಂಬಿಡಿದು ಬಂದ ಸಿಂಧುರಾಜನು ಸರಸ್ವತೀಪ್ರಭಾವದಿಂದ ಅರಮನೆಯಂ ನುಗ್ಗುವದಕ್ಕೆ ಸಮರ್ಥನಾಗದೆ, ಜ್ವಾಲಾಸಮೂಹವಂ ಕಂಡ ಕರಡಿಯಂತೆ ಹಿಂತಿರುಗಿ ಪೋಗುತ್ತಾ, ಜಯಭೇರಿಯಂ ಹೊಡೆಸಿದನು. ಕೂಡಲೆ ಹಾ ಹಾ ಮಹಾರಥಸಮೂಹಾಗ್ರಣಿಯಾದ ವಿದೂರಥ ಮಹಾರಾಜನು ಶತ್ರುವಿನಿಂ ಹತನಾದನೆಂದು ಅರಮನೆಯೊಳ್ ಹಾಹಾಕಾರವುಂಟಾಗಲು, ಲೂಟಿಯ ಜನರ ಹಾರಾಟದಿಂದ ಆ ರಾಜಧಾನಿಯು ಕಾಸರಗಳಿಂ ಸರಸಿಯಂತೆ ರಸಾಭಾಸವಾಗಿ ಕಾಣುತ್ತಿರಲು, ರಾಜ್ಯವೇ ಸ್ವಾಧೀನವಾದಬಳಿಕ ಲೂಟಿಯಿಂದುಪಯೋಗವೇನು? ಇದರಿಂದ ಜನರಿಗೆ ಘಾಸಿಯಲ್ಲದೆ ಮತ್ತೊಂದಿಲ್ಲನೆಂದು ಸಿಂಧುರಾಜನು ಆಜ್ಞಾಪಿಸುವಲ್ಲಿ ಆ ರಾಜಧಾನಿಯಂ ಪೂರ್ವದಂತೆ ಸಜ್ಜುಗೊಳಿಸುವದಕ್ಕೆ ಅವನ ಮಂತ್ರಿಗಳು ಉಜ್ಜುಗಿಸುತ್ತಿರಲು ಸರಸ್ವತಿಯ ಸನ್ನಿಧಿಯಂ ಪಡದು ವಿದೂರಥನು ಆ ದೇವಿಯಂ ನೋಡುತಲೇ ಪ್ರಾಣವಂ ಬಿಡುತ್ತಿರಲು ಎರಡನೇ ಲೀಲೆಯು ಎಲಾ ಜಗದಂಬಿಕೆಯೇ ಮನೋಹರವಾಗಿದ್ದ ಈ ಜಗವೆಲ್ಲವು ಈಗ ಇಲ್ಲದಂತೆ ಇರುವದೆನಲು ಸರಸ್ವತಿ ಇಂತೆಂದಳು.

ಎಲೌ ಬಾಲೆಯೇ! ನಿನ್ನಗಂಡನ ಈ ಪ್ರಪಂಚವೆಲ್ಲವು ಪದ್ಮರಾಜನ ಅಂತಃಪುರದ ಮನೆಯ ಮಧ್ಯಭಾಗದಲ್ಲಿರುವದು. ಆ ಪ್ರಪಂಚವೆಲ್ಲವು ಗಿರಿಗ್ರಾಮದ ವಸಿಷ್ಠನ ಲೀಲಾಮಂಟಪದ ಮಧ್ಯದಲ್ಲಿರುವದು. ಹೀಗಿದ್ದಾಗ್ಯೂ ಈ ಭ್ರಮೆಯು ನೋಡುವನಿಗೆ ಭಿನ್ನವಾಗಿಲ್ಲದ್ದರಿಂದ ಸತ್ತಾಹೀನವಾಗಲಾಗಿರುವದು. ಇದು ಭ್ರಮೆ ಎಂದು ತಿಳಿಯುವವರಿಗೆ ಭ್ರಾಂತಿಪದಾರ್ಥಕ್ಕೆ ಸತ್ವವಿರುವದು. ಬಳಿಕ ಆ ಪದಾರ್ಥವಿದ್ದರೂ ಬ್ರಹ್ಮಾತ್ಮಕವಾಗಿ ಇರುವದಲ್ಲದೆ ಪೂರ್ವ ಸತ್ವವಂಪಿಡಿದು ಇರತಕ್ಕದ್ದಲ್ಲವಾದ್ದರಿಂದಲೂ, ನಿನ್ನ ಪ್ರಾಣಕಾಂತನಾದ ವಿದೂರಥನು ಜ್ಞಾನಿಯಾದ್ದರಿಂದಲೂ, ಇದೊಂದೂ ಇಲ್ಲವೆಂತಲೇ ತಿಳಿಯುವಳಾಗು? ಬಾಳೇಕಂಭದ ಪಟ್ಟೆಗಳಂತೆ ಒಂದರೊಳಗೊಂದಾಗಿ ಈ ಪ್ರಪಂಚಗಳಿರುವವು. ಇವೆಲ್ಲವು ಸ್ವಪ್ನಮನೋರಥ ರಾಜ್ಯದಂತೆ ಮನದಲ್ಲಿರುವವು. ಆ ಮನವು ಚಿದಾಕಾಶದ ಏಕದೇಶದಲ್ಲಿ ಪರಮಾಣುವಾಗಿರುವದು. ಕಲ್ಪನಾಮಯವಾದ ಮನವು ಇರುವವರಿಗೆ ಚಿತ್ತು ಜೀವವೆನಿಸಿಕೊಳ್ಳುವದು. ಈ ಮನವು ಇಚ್ಛಾಶಕ್ತಿಯ ಪರಿಣಾಮವೆಂತಲೂ, ಇಚ್ಛಾಶಕ್ತಿಯು ಜ್ಞಾನಶಕ್ತಿಗೆ ಸಹಜವೆಂತಲೂ, ಜ್ಞಾನಶಕ್ತಿಯು ಜ್ಞಾನಸ್ವರೂಪವಾದ ಬ್ರಹ್ಮಕ್ಕೆ ಸ್ವಾಭಾವಿಕವೆಂತಲೂ, ತಿಳಿದಕೂಡಲೇ ಸರ್ವವು ಬ್ರಹ್ಮಾತ್ಮಕವೆಂದು ನಿಶ್ಚಯವಾಗುವದು. ಮನಸ್ಸಿಗೆ

ದೇಶ ಕಾಲ ದೀರ್ಘಗಳು ಏನೂ ಇಲ್ಲವಾದ್ದರಿಂದ ಮನೋಮಯವಾದ ಆತಿವಾಹಿಕ ಶರೀರದಿಂ ಬಂದಿರುವ ಈ ಲೀಲೆಯು ನಿನ್ನ ಸವತಿಯೆಂದು ತಿಳಿಯುವಳಾಗು. ಎಂದು ವಾಗ್ದೇವಿಯು, ಪೇಳುತ್ತಾ ಎಲೌ ದೇವಿಯೇ! ಈ ಲೀಲೆಯು ನನಿಗೆ ಸವತಿಯಾಗುವದು ಹ್ಯಾಗೆ? ಇವಳು ಎಂಥಾರೂಪದಿಂ ಪದ್ಮರಾಜನ ಮನೆಯಲ್ಲಿದ್ದಳೆಂದಾ ಲೀಲೆಯು ಕೇಳಲು, ಮರಳಿ ಸರಸ್ವತಿ ಇಂತೆಂದಳು. ಎಲೌ ಬಾಲಕಿಯೇ! ಪದ್ಮರಾಜನ ಮನದಲ್ಲಿ ಈ ಪ್ರಪಂಚರೂಪವಾದ ಭ್ರಾಂತಿಯುಂಟಾಗುವಲ್ಲಿ ಲೀಲೆಯು ಸಂಬಂಧಿಸಿಯಿದ್ದದ್ದರಿಂದ ಇವಳಿಗೆ ಪ್ರತಿಛಾಯೆಯಂತೆ ಇಲ್ಲಿ ನೀನು ಪುಟ್ಟಿದವಳಾದೆ, ಇಲ್ಲಿ ನೀನು ಹ್ಯಾಗೆ ಇದ್ದೀಯೋ ಅಲ್ಲಿಯೂ ಹಾಗೆ ಈ ಲೀಲೆಯಿದ್ದಳು. ಆ ಪ್ರಪಂಚವು ಈ ಪ್ರಪಂಚವು ಈ ಯುದ್ಧಕ್ರಮವು ನಾನು ನೀನೂ ಕೂಡ ಸ್ವಪ್ನದಂತೆ ಭ್ರಾಂತಿಮಯವೆಂತಲೇ ತಿಳಿಯುವಳಾಗು. ಗಿರಿಗ್ರಾಮದಲ್ಲಿದ್ದ ವಸಿಷ್ಠನಿಗೆ ಸ್ವಪ್ನದಂತೆ ಪದ್ಮರಾಜನ ಪ್ರಪಂಚವುಂಟಾದುದು. ಅದರಲ್ಲಿ ಮತ್ತೊಂದು ಸ್ವಪ್ನದಂತೆ ಈ ವಿದೂರಥ ಪ್ರಪಂಚವುಂಟಾದುದು. ಸ್ವಪ್ನದಲ್ಲಿ ಸ್ವಮರಣವಂ ಕಾಣುವಂತೆ ಅಲ್ಲಿ ಮೃತನಾದ ಪದ್ಮನು ಇಲ್ಲಿ ವಿದೂರಥನೆನಿಸಿಕೊಂಡನು. ಇಲ್ಲಿ ಮೃತನಾದ ಈ ರಾಜೇಂದ್ರನು ಅಲ್ಲಿ ಪುನಃ ಏಳುವನು. ಸಂಸಾರಕ್ರಮವೆಲ್ಲವು ಇದೇರೀತಿಯಿಂ ಭ್ರಾಂತಿಮಯವಾಗಿರುವದಲ್ಲದೆ ಮತ್ತೇನೂ ಇಲ್ಲವೆಂದು ನಿಶ್ಚಯಿಸುವಳಾಗು. ಇಂಥಾದ್ದೆಂದು ತಿಳಿದಮಾತ್ರದಿಂದೀಪ್ರಪಂಚವು ದೃಶ್ಯಭಾವವಂ ಬಿಟು ನೃಕ್ಸ್ವರೂಪವೆನಿಸುವದು. ದೃಗ್ದೃಶ್ಯಗಳಲ್ಲಿ ಒಂದನ್ನುಬಿಟ್ಟು ಮತ್ತೊಂದು ಇರತಕ್ಕದ್ದಲ್ಲವಾದ್ದರಿಂದ ದೃಗ್ದೃಶ್ಯಭಾವಗಳೆರಡೂ ಶಾಂತವಾಗಿ ಅಖಂಡವಾಗಿ ಪ್ರಕಾಶಿಸುವ ಸಚ್ಚಿದಾನಂದಸ್ವರೂಪವಾದ ಬ್ರಹ್ಮಸ್ವರೂಪದಿಂ ನಿಲ್ಲುವದು; ಆತಿವಾಹಿಕಸ್ವರೂಪದಿಂದಿರುವ ಜೀವನ ಮನಕ್ಕೆ ಆಧಿಭೌತಿಕಭ್ರಾಂತಿ ಯಾವಾಗ ಉಂಟಾಗುವದೋ ಆಗ ಈ ಪ್ರಪಂಚವೆಲ್ಲವು ಸತ್ಯವೆನಿಸಿಕೊಳ್ಳುವದು. ಯಾವಾಗ ವಿಚಾರದಿಂ ಸ್ವರೂಪಜ್ಞಾನ ಉಂಟಾಗುವದೋ ಆಗ ಆತಿವಾಹಿಕವೂ ಕೂಡ ಅಸತ್ಯವೆನಿಸಿಕೊಳ್ಳುವದು. ಭಾವಸಾಮ್ಯವಿದ್ದವರಿಗೆ ಪರಸ್ಪರಸಂಬಂಧವಾಗುವದ್ದರಿಂದ ನೀವೆಲ್ಲರೂ, ಈ ಪ್ರಪಂಚಗಳಲ್ಲಿ ಶೇರಿಕೊಂಡಿದ್ದೀರಿ, ನಿಮ್ಮ ಭಾವಾನುಸಾರದಿಂ ನಾನೂ ಇಲ್ಲಿ ಸಿದ್ಧವಾಗಿರುವೆನು. ಜ್ಞಾನಸ್ವರೂಪವಾದ್ದರಿಂ ಹೀಗೆ ನೀಗೆ ಪ್ರಕಾಶಿಸುವದೇ ಬ್ರಹ್ಮಸ್ವಭಾವವು. ತೇಜೋವಂಶಗಳ ಆಧಿಕ್ಯದಿಂ ನೀರಸವಾಗಿರುವ ಮರುಭೂಮಿಯಲ್ಲಿ ಬಿದ್ದ ಬಿಸಲು ಹೊಳೆಯುವಂತೆ ಜ್ಞಾನೇಚ್ಛಾಕ್ರಿಯಾಶಕ್ತಿ ಪ್ರಕಾಶರೂಪವಾದ ಪ್ರಪಂಚದಲ್ಲಿ ಸರ್ವವ್ಯಾಪಕ

ವಾದ ಬ್ರಹ್ಮವು ಥೋಳೆಯುತ್ತಿರುವದು. ಪಶುಗಳಿಗೆ ಮರುಮರೀಚಿಯಲ್ಲಿ ಜಲ ಭ್ರಾಂತಿಯುಂಟಾಗುವಂತೆ ಈ ಬ್ರಹ್ಮಪ್ರಕಾಶವಲ್ಲಿ ಅಜ್ಞಾನಿಗಳಿಗೆ ಜಗದ್ಭ್ರಾಂತಿಯುಂಟಾಗುವದು. ಈ ಜಗವು ಗಗನದಲ್ಲಿರುವ ಮೇಘವಂತೆ ಭಾವಾನುಸಾರವಾಗಿ ಕಾಣುತ್ತಿರುವದು. ಇಲ್ಲಿ ಮೃತಿಮೋಹಾನಂತರದಲ್ಲಿ ಪ್ರಾಣಿಗಳು ವಾಸನಾನುಸಾರವಾದ ಕಲ್ಪನೆಯಿಂ ತಂದೆ ತಾಯಿ ಬಂಧು ಬಳಗಂಗಳಂ ಪಡೆಯುವರು. ಚೇತನಧರ್ಮಿಣಿಯಾದ ನನ್ನನ್ನು ಚೇತನಾಂಶರಾದ ನೀವು ಯಾವ ಯಾವ ಭಾವದಿಂ ಪೂಜಿಸಿದರೋ ಅದಕ್ಕೆ ಸರಿಯಾದ ಫಲವನ್ನನುಭವಿಸುತ್ತೀರಿ, ನನ್ನವರದಿಂ ನಿನ್ನ ಕುಮಾರಿಯು, ವಿದೂರಥನ ಮಂತ್ರಿಯೂಕೂಡ ಪದ್ಮರಾಜನ ರಾಜಧಾನಿಗೆ ಬರುವರು. ಇಲ್ಲಿ ಮೃತನಾದ ಈ ರಾಜನ ಜೀವವು ಚಪಲವಾದ ಮನದಿಂ ಪ್ರಾಣರೂಪವಂ ಧರಿಸಿ ಪದ್ಮರಾಜನ ಶರೀರವಂ ಪ್ರವೇಶಿಸುವದು. ಎಂದು ಪೇಳುತ್ತಿರುವ ಸರಸ್ವತಿಯು ವಿದೂರಥನ ದುರವಸ್ಥೆಯಂ ನೋಡಲಾರದೆ ಮೂರ್ಛಿತಳಾದ ಆ ಲೀಲೆಯೊಡನೆ ರೂಪಾಂತರವಂ ವಹಿಸಿ ಗಗನಮಾರ್ಗದಿಂ ಪೊರಮಟ್ಟು ಪದ್ಮರಾಜನ ಅರಮನೆಗೆ ಅವಳಂ ಶೇರಿಸಿದಳು. ವಿದೂರಥನಿದ್ದ ಬ್ರಹ್ಮಾಂಡದಿಂ ಸ್ಥೂಲಶರೀರದಿಂದಲೇ ಪದ್ಮರಾಜನು ಇದ್ದ ಬ್ರಹ್ಮಾಂಡವಂ ಲೀಲೆಯು ಶೇರುವಲ್ಲಿ ಸರಸ್ವತಿಯು ವರಪ್ರಭಾವದಿಂ ಕ್ರಿಮಿಯು ಯಲಚೀಹಣ್ಣಂ ಪ್ರವೇಶಿಸುವಂತೆ ಸೂಕ್ಷ್ಮಮಾರ್ಗದಿಂ ಪ್ರವೇಶಿಸಿದಳು. ಅದಂಕಂಡು ಆದಿಲೀಲೆಯು ಎಲೌ ದೇವಿಯೇ ! ಈ ಲೀಲೆಯಂತೆ ನಾನು ಯಾಕೆ ಬ್ರಹ್ಮಾಂಡಾಂತರವಂ ಪೂರ್ವಶರೀರದಿಂದಲೇ ಹೊಂದಲಿಲ್ಲವೆಂದು ಪುನಃ ಕೇಳಲು ಸರಸ್ವತಿ ಇಂತೆಂದಳು.

ಎಲೌ ಬಾಲೆಯೇ ! ಮಹಾಪ್ರಳಯದಲ್ಲಿ ಸರ್ವಪದಾರ್ಥಗಳಿಗೂ ಲಯಸ್ಥಾನವಾಗಿ ನಿಂದಿದ್ದ ಪರಬ್ರಹ್ಮವು ಸರ್ಗಾದಿಯಲ್ಲಿ ಸ್ವೇಚ್ಛೆಯಿಂದಲೇ ತಾನು ತೇಜಸ್ಸ್ವರೂಪವಾಗಿರುವೆನೆಂದು ಭಾವಿಸುವಲ್ಲಿ ಒಂದು ತೇಜಸ್ಸಿನ ಕಣವುಂಟಾಯಿತು. ಅದೇ ಸ್ಥೂಲವಾಗಿ ಬ್ರಹ್ಮಾಂಡವೆನಿಸಿಕೊಂಡಿತು. ಅದರಲ್ಲಿ ದೇಶ ಕಾಲ ದಿಗ್ಭೂವ್ಯಾಕಾಶಾದಿ ರೂಪಗಳನ್ನು ಬ್ರಹ್ಮಾದಿ ಚೇತನರೂಪಗಳನ್ನು ನಿಯಾಮಕವಾದ ಶಾಸ್ತ್ರರೂಪವನ್ನು ಸಹ ಆ ಬ್ರಹ್ಮವೇ ಭಾವನಾಬಲದಿಂ ಹೊಂದಿರುವದ್ದರಿಂದ ಬ್ರಹ್ಮೇತರಪದಾರ್ಥ ಒಂದೂ ಇಲ್ಲವೆಂದು ಪ್ರಾಜ್ಞರು ಪೇಳುವರು. ಇದು ಹೀಗಿರತಕ್ಕದ್ದು. ಇದರಿಂದ ಹೀಗೆ ಆಗತಕ್ಕದ್ದೆಂದು ಆ ಬ್ರಹ್ಮವು ನಿಯಮಿಸಿರುವಂತೆಯೇ ಸರ್ವವು ನಡೆವದು. ಅದರಿಂದ ಸರ್ವವ್ಯವಹಾರಗಳಲ್ಲೂ ದೇಶ ಕಾಲ ಕ್ರಿಯಾ ದ್ರವ್ಯಶುದ್ಧಿಯಿಂದಲೇ ಆಯುರ್ವೃದ್ಧಿ

ಯಾಗುವದು. ಅದರ ಅಶುದ್ಧಿಯಿಂದಲೇ ಆಯುಸ್ಸು ಕ್ಷೀಣವಾಗಿ ಅದರಿಂದ ಗರ್ಭದಲ್ಲಿಯೇ ಕೆಲವರು ಪೋಗುವರು. ಕೆಲವರು ಬಾಲ್ಯದಲ್ಲೂ, ಕೆಲವರು ಯೌವನದಲ್ಲೂ, ಕೆಲವರು ವೃದ್ಧತ್ವದಲ್ಲೂ, ವೃತರಾಗುವರು. ಈ ಆಯುಸ್ಸಿನಂತೆಯೇ ಜಾತಿಭೇದವು ಸುಖದುಃಖಗಳೂ ಸಹ ಕರ್ಮಗಳಿಂದಲೇ ಉಂಟಾಗುವವು. ಸ್ಥೂಲ ಸೂಕ್ಷ್ಮದೇಹಗಳಿಗೆ ವಿಯೋಗವಾಗುವದೇ ಮರಣವೆನಿಸಿಕೊಳ್ಳುವದು. ಅದು ಉತ್ತಮ ಮಧ್ಯಮಾಧಮ ಭೇದದಿಂ ಮೂರುಪ್ರಕಾರವಾಗಿರುವದು. ಪರಕಾಯಪ್ರವೇಶಾದಿ ಸಾಮರ್ಥ್ಯವುಳ್ಳ ಯೋಗಿಗೆ ಸ್ವೇಚ್ಛೆಯಿಂದಾಗುವ ಮರಣವು ಉತ್ತಮವೆನಿಸುವದು. ನಾಭಿ, ಹೃದಯ, ಕಂಠಭ್ರೂಮಧ್ಯ, ಬ್ರಹ್ಮರಂಧ್ರಗಳಲ್ಲಿ ಪ್ರಾಣ ಮನೋಧಾರಣೆಯನ್ನಭ್ಯಾಸವಂ ಮಾಡುವನಿಗೆ ನಾಡೀ ಶುದ್ಧಿಯಾಗಿರುವದ್ದರಿಂದ ಆಯಾಸ ಲೇಶವಿಲ್ಲದ ಮರಣವು ಮಧ್ಯಮವೆನಿಸುವದು. ಜನ್ಮಾಂತರದಲ್ಲೂ, ಶಾಸ್ತ್ರಗಂಧವಿಲ್ಲದೆ ಪಶುವಿನಂತೆ ನಿದ್ರಾಹಾರವಿಹಾರಪರಾಯಣನಾದ ಅಜ್ಞಾನಿಗೆ ವೈಷ್ಣವಜ್ವರಾದಿಗಳಿಂ ಕಾದಿರುವ ಪಿತ್ತಶ್ಲೇಷ್ಮಗಳಿಂದ ನಾಡೀದ್ವಾರಗಳು ನಿರುದ್ಧವಾಗಿರಲು ಕಂಠಕ್ಕೆ ಕಫವಡಗಿ ಅತ್ಯಂತಾಯಾಸದಿಂದಾಗುವ ಮರಣವು ಅಧಮವೆನಿಸುವದು. ಕರ್ಮಾನುರೂಪವಾದ ವಾಸನೆಯಿಂದ ಮನಸ್ಸು ಪರವಶವಾಗಿ ಕಂಠಕ್ಕೆ ಕಫವಡಗಿದ್ದರಿಂದಲೂ, ನೇತ್ರ ಮೊದಲಾದ ಇಂದ್ರಿಯಗಳಿಗೆ ಶಕ್ತಿ ತಪ್ಪಿದ್ದರಿಂದಲೂ, ಅಜ್ಞಾನಿಯಾದವನು ಪೇಳಲಶಕ್ಯವಾದ ದೈನ್ಯವಂ ಪಡೆಯುವನು. ಮರಣಕಾಲ ಸನ್ನಿಹಿತವಾಗಲು ಕಣ್ಣುಕತ್ತಲೆಯಾಗುವಲ್ಲಿ ಹಗಲೇ ನಕ್ಷತ್ರಗಳು ಕಾಣಿಸುವವು. ಮೇಘದಿಂ ಮುಚ್ಚಿಕೊಂಡಿರುವಂತೆ ದಿಕ್ಕುಗಳು ಕಾಣುವವು. ಆಕಾಶವೆಲ್ಲವು ಕಗ್ಗತ್ತಲೆಯಿಂ ತುಂಬಿರುವಂತೆ ತೋರುವದು. ದೃಷ್ಟಿಭ್ರಮಣದಿಂದ ಭೂವ್ಯಾಕಾಶದಿಕ್ಕುಗಳು ವ್ಯತ್ಯಾಸವಾಗಿ ಕಾಣುವವು. ಸಮುದ್ರದಲ್ಲಿ ತೇಲಿಕೊಂಡು ಹೋಗುವನಂತೆಯೂ, ಆಕಾಶದಲ್ಲಿ ತೆಗದುಕೊಂಡು ಹೋಗಲ್ಪಡುವನಂತೆಯೂ, ನಿದ್ರೆಯ ಮೊಬ್ಬಿನಿಂ ಕೂಡಿರುವನಂತೆಯೂ, ಕತ್ತಲೆ ಭಾವಿಯಲ್ಲಿ ಬಿದ್ದಿರುವನಂತೆಯೂ, ಕಲ್ಲಿನಲ್ಲಿ ಸೇರಿಸಲ್ಪಟ್ಟಿರುವನಂತೆಯೂ, ಸ್ತಬ್ಧವಾದ ವಾಕ್ಕುಳ್ಳವನಂತೆಯೂ, ಹೃದಯದಲ್ಲಿ ಛಿನ್ನನಾಗಿರುವನಂತೆಯೂ, ಗಗನದಿಂ ಬೀಳುವನಂತೆಯೂ, ಸುಂಟರಗಾಳಿಗೆ ಸಿಕ್ಕಿರುವನಂತೆಯೂ, ಓಡುವ ರಥವಮೇಲೆ ಕುಳತಿರುವನಂತೆಯೂ, ಮಂಜುಗಲ್ಲಿನ ಓಲ್ಲಾಪರಿ ಬೀಳುವನಂತೆಯೂ, ಸಂಸಾರದುಃಖವಂ ಜನರಿಗೆ ತೋರಿಸುವನಂತೆಯೂ, ಬಂಧುಗಳಂ ಮುಟ್ಟದಿರುವನಂತೆಯೂ, ವಾತಯಂತ್ರದಮೇಲೆ ಕುಳುತಿರುವನಂತೆಯೂ, ಸಿಲಾಯಂತ್ರದಿಂ ತಿರಿಗಿಸಲ್ಪ

ಡುವನಂತೆಯೂ, ಚಕ್ರಭ್ರಮಣದಲ್ಲಿ ಸಿಲುಕಿರುವನಂತೆಯೂ, ಹಗ್ಗದಿಂ ಶೆಳೆಯಲ್ಪಡುವನಂತೆಯೂ, ಸಮುದ್ರದ ಸುಳಿಯಲ್ಲಿ ಬಿದ್ದಿರುವನಂತೆಯೂ, ಶಸ್ತ್ರಮಯವಾದ ಯಂತ್ರದಲ್ಲಿ ಕುಳ್ಳಿರಿಸಲ್ಪಟ್ಟವನಂತೆಯೂ, ಬಿರುಗಾಳಿಯಿಂ ಹಾರಿಸಲ್ಪಡುವನಂತೆಯೂ, ಗಿರಿಪ್ರವಾಹದಿಂ ಸಮುದ್ರಕ್ಕೆ ಬೀಳುವನಂತೆಯೂ, ಗಗನಕ್ಕೆ ಹಾರುವನಂತೆಯೂ, ಪಾತಾಳಕ್ಕೆ ಇಳಿಯುವನಂತೆಯೂ, ಮರಣಕಾಲದಲ್ಲಿ ನಾನಾವಿಧ ಭ್ರಾಂತಿಯನ್ನನುಭವಿಸುವನು. ವ್ರಣಯುಕ್ತವಾದ ಸರ್ವೇಂದ್ರಿಯಸ್ಥಾನವುಳ್ಳವನಾಗಿ ಉಸ್ಸುಉಸ್ಸೆಂದು ಸಂಕಟಪಡುತ್ತಿರುವನು. ಸೂರ್ಯಾಸ್ತಮಯದಲ್ಲಿ ದಿಕ್ಕುಗಳಂತೆ ಅವನಿಗೆ ಇಂದ್ರಿಯಗಳು ಮರೆಯಾಗುವವು. ಪೂರ್ವಾಪರಸ್ಮರಣೆಯು ಮನಸ್ಸಿನ ಕಲ್ಪನೆ ಸಹ ತಪ್ಪಿ ಮೂರ್ಛಾವಾಯುವಿನಿಂದ ಮಹತ್ತಾದ ಮೋಹದಲ್ಲಿ ಬೀಳುವನು. ಆಗ ಅಂಗಧಾರಣಶಕ್ತಿಯಿಲ್ಲದೆ ಪ್ರಾಣಾಪಾನಗಳು ಸ್ವಾಧೀನವಾಗದೆ ಇರುವಲ್ಲಿ ಮೂರ್ಛೆಯಿಂದಲೂ, ರೋಗವೇದನೆಯಿಂದಲೂ, ಬುದ್ಧಿಭ್ರಮಣದಿಂದಲೂ, ಪರವಶನಾಗಿ ಪುರುಷನು ಪಾಷಾಣದಂತೆ ಜಡನಾಗುವನು. ಈ ಕಾಲದಲ್ಲಿ ಹೀಗೆ ಆಗತಕ್ಕದ್ದೆಂದು ಸೃಷ್ಟಿಯ ಆದಿಭಾಗದಲ್ಲಿಯೆ ಪರಮೇಶ್ವರನ ನಿಯಮವಿರುವದ್ದರಿಂದ ಇಂಥಾ ದುರ್ದಶೆ ಉಂಟಾಗುವದು. ಈ ನಿಯಮಕ್ಕೆ ತನ್ನ ಸ್ವಚ್ಛಂದಾಚಾರವೇ ಕಾರಣವಾದ್ದರಿಂದ ಆ ದುಃಖವಂ ತಾನೆ ಅನುಭವಿಸುವನು. ಸ್ವೇಚ್ಛೆಯಿಂದ ನಿಯಮವನ್ನುಂಟುಮಾಡಿದ ಪರಮೇಶ್ವರನು ತನ್ನ ಆಜ್ಞೆಯು ವ್ಯರ್ಥವಾಗಬಾರದೆಂಬ ಅಭಿಮಾನದಿಂ ತಾನೆ ಅವಿದ್ಯೆಗೆ ಸ್ವಾಧೀನವಾಗಿ ಕರ್ಮಫಲವನ್ನು ಅನುಭವಿಸುವನೆಂದು ಪ್ರಾಜ್ಞರು ಪೇಳುವರು. ಕರ್ಮಾನುಸಾರವಾಗಿ ಬಂದ ರೋಗಗಳಿಂ ವಿಷಮವಾದ ಪಿತ್ತಶ್ಲೇಷ್ಮಗಳಿಂದ ನಾಡಿಗಳು ಪೂರಿತವಾಗಿ ಭುಕ್ತವಾದ ಆಹಾರವಂ ವಿಷಮವಾಗಿ ಗ್ರಹಿಸುವದ್ದರಿಂದ ಆಹಾರಪಚನಕ್ಕೆ ಸಾಧನವಾದ ಸಮಾನವಾಯುವು ನಾಭೀಸ್ಥಾನವಂ ಬಿಡುವದು. ಆಗ ನಾಡೀದ್ವಾರಗಳಲ್ಲಿ ಪ್ರಾಣಾದಿವಾಯುಗಳು ಸರಿಯಾಗಿ ನಡೆಯುವದಿಲ್ಲವಾದ್ದರಿಂದ ಇಂದ್ರಿಯಪಾಟವ ತಪ್ಪುವದು. ಅದರಿಂದ ಸ್ಮೃತಿಯೂ ತಪ್ಪುವದು. ಯಾವಾಗ ನಿಶ್ಶೇಷವಾಗಿ ಪ್ರಾಣಾಪಾನಗಳಿಗೆ ಗತಿ ತಪ್ಪುವದೋ ಆಗ ಮರಣವಾಯಿತೆಂಬ ವಾರ್ತೆಯುಂಟಾಗುವದು. ಇಷ್ಟು ದಿವಸ ಇಷ್ಟುಹೊತ್ತಿಗೆ ನಾಶವಾಗತಕ್ಕದ್ದೆಂದು ಸೃಷ್ಟಿಯಲ್ಲಿ ನಿಯಮವಿರುವಂತೆಯೇ ನಾಶವಾಗುವದು. ಹೀಗೆ ಹುಟ್ಟತಕ್ಕದ್ದು, ಹೀಗಿರತಕ್ಕದ್ದು, ಹೀಗೆ ನಾಶವಾಗತಕ್ಕದ್ದೆಂದು ಕರ್ಮವಿದ್ದಂತೆಯೇ ಸರ್ವವೂ ನಡೆಯುವದ್ದರಿಂದ ಜನ್ಮ ಮೃತ್ಯುಗಳಿಗೆ ತನ್ನ ಅಜ್ಞಾನವೇ ಆದಿಕಾರಣವೆಂದು

ತಿಳಿಯತಕ್ಕದ್ದು. ಒಂದೆಡೆಯಲ್ಲಿ ಸುಳಿಯುಳ್ಳದ್ದಾಗಿಯೂ, ಒಂದೆಡೆಯಲ್ಲಿ ಸೌಮ್ಯವಾಗಿಯೂ, ಹ್ಯಾಗೆ ನದೀಜಲವು ಪ್ರವಹಿಸುವದೋ ಹಾಗೆ ಜೀವನು ಒಂದೆಡೆಯಲ್ಲಿ ಜಡವಾಗಿಯೂ, ಒಂದೆಡೆಯಲ್ಲಿ ಚೇತನವಾಗಿಯೂ, ಆಗುವನು. ಚಿದ್ರೂಪನಾದ ಪುರುಷನಿಗೆ ಎಂದಿಗೂ ಜನ್ಮಮೃತ್ಯುಗಳಿಲ್ಲ. ಆದಾಗ್ಯೂ *ದೇಹಾಹಂಭಾವದಿಂದ ಇವನಿಗೆ ಜನ್ಮಮೃತ್ಯುಗಳೆಂದು ಲೋಕದಲ್ಲಿ ಪ್ರತೀತಿ ಇರುವದು. ಶಾಶ್ವತವಾದ ಚೈತನ್ಯವೇ ಪುರುಷನೆನಿಸಿಕೊಳ್ಳುವದಲ್ಲದೆ ಜಡವಾದ ಅಂತಃಕರಣಪ್ರಾಣಾದಿಗಳು ಪುರುಷನೆನಿಸಿಕೊಳ್ಳಲಾರವು. ಒಂದೇ ಚೈತನ್ಯಕ್ಕೆ ಅನೇಕ ಶರೀರಗಳು ಸಂಭವಿಸುವವಾದ್ದರಿಂದ ಶರೀರಕ್ಕೆ ನಾಶವಲ್ಲದೆ ಚೈತನ್ಯಕ್ಕೆ ನಾಶವಿಲ್ಲವೆಂದು ತಿಳಿಯತಕ್ಕದ್ದು. ಮದಕರವಾದ ದ್ರವ್ಯಗಳ ಕೂಡುವೆಯಿಂದುಂಟಾದ ಮದ್ಯದಲ್ಲಿ ಮದಶಕ್ತಿಯಂತೆ ಪೃಥಿವ್ಯಪ್ತೇಜೋವಾಯುಗಳ ಕೂಡುವೆಯಿಂದುಂಟಾದ ದೇಹದಲ್ಲಿ ಚೈತನ್ಯವುಂಟಾಗುವದೆಂದು ಕೆಲವರು ಹೇಳುವರು. ಮದಕರದ್ರವ್ಯಗಳಲ್ಲಿ ಬೇರೆಬೇರೆಯಾಗಿದ್ದ ಮದಶಕ್ತಿಯು ಒಟ್ಟಾಗಿ ಕೂಡಿದ ಆ ಪದಾರ್ಥಗಳಲ್ಲಿ ಅಧಿಕವಾಗಿ ಉಂಟಾಯಿತಲ್ಲದೆ ಅವುಗಳಲ್ಲಿ ಇಲ್ಲದ ಶಕ್ತಿಯುಂಟಾಗಲಿಲ್ಲವಾದ್ದರಿಂದ ಆ ಯುಕ್ತಿಯು ಸರಿಯಾಗುವದಿಲ್ಲ. ಮತ್ತೆ ಕೆಲವರು ಅಚೇತನವಾದ ಜಗತ್ತಿಗೆ ಅಚೇತನವೇ ಕಾರಣವಾಗಬೇಕೆಂದು ನಿಯಮವಂ ಹಿಡಿದು ಜಗತ್ತಿಗೆ ಕಾರಣವಾದದ್ದು ಪರಮಾಣುವೆಂತಲೂ, ಪ್ರಕೃತಿಯೆಂತಲೂ, ಮಾಯೆಯೆಂತಲೂ ಹೇಳುವರು. ಬ್ರಹ್ಮೇತರ ಪದಾರ್ಥವೇ ಇಲ್ಲದಿರುವಲ್ಲಿ †ನಿಮಿತ್ತಕಾರಣವು ಬ್ರಹ್ಮವೆಂತಲೂ, ‡ಉಪಾದಾನಕಾರಣವು ಮಾಯಾದಿಗಳೆಂತಲೂ, ಬೇರೆಬೇರೆಯಾಗಿ ಕಲ್ಪಿಸಿಕೊಳ್ಳುವದಕ್ಕೆ ಪ್ರಮಾಣವಿಲ್ಲವಾದ್ದರಿಂದ ಅವರ ಮಾತನ್ನು ಪರಿಗ್ರಹಿಸಲಾಗದು. ಬ್ರಹ್ಮೇತರ ಪದಾರ್ಥವೇ ಇಲ್ಲವೆನ್ನುವದಕ್ಕೆ ಅನೇಕ ಪ್ರಮಾಣಗಳು ಅನುಭವವೂ ಸಹ ಇರುವದ್ದರಿಂದ §ನಿಮಿತ್ತಕಾರಣ ಉಪಾದಾನ ಕಾರಣಗಳೆರಡೂ ಬ್ರಹ್ಮವೆಂತಲೂ, ಅಚೇತನವಾದ ಈ ಜಗತ್ತು ಚಿದ್ರೂಪವಾದ ಬ್ರಹ್ಮದ ವಿವರ್ತವೆಂತಲೂ, ಪ್ರಾಜ್ಞರು ಹೇಳುವರು. ಇದರ ವಿಚಾರದಿಂದ ಜಗತ್ತು ಇಲ್ಲವೇ ಇಲ್ಲವೆಂತಲೂ, ದೃಗ್ದೃಷ್ಟಿ ದೃಶ್ಯರೂಪದಿಂ ಬ್ರಹ್ಮವೇ ಪ್ರಕಾಶಿಸುತ್ತಿರುವದೆಂತಲೂ, ಬ್ರಹ್ಮಬ್ರ

---

*ಶರೀರವನ್ನು ನಾನು ಎಂದು ಭಾವಿಸೋಣದರಿಂದ.

†Agent, ‡Material cause.

§ಮಡಿಕೆಗೆ ಕುಂಬಾರನು ನಿಮಿತ್ತಕಾರಣನೆನಿಸಿಕೊಳ್ಳುವನು; ಮಣ್ಣು ಉಪಾದಾನಕಾರಣವೆನಿಸಿಕೊಳ್ಳುವದು.

ಷ್ಮೇತರ ಪದಾರ್ಥಗಳಿಗೆ ತೇಜಸ್ತಿಮಿರಗಳಂತೆ ಸಂಬಂಧವಿಲ್ಲವೆಂತಲೂ, ಅನುಭವ ಪ್ರಮಾಣಗಳಿಗೆ ಅವಿರುದ್ಧವಾದ ಸಿಶ್ಚಯ ಉಂಟಾಗಲು ಅಜ್ಞಾನದಿಂದುಂಟಾದ ಬಂಧವು ತಪ್ಪುವದು. ಕೆಲವರು ಆತ್ಮನು ಒಬ್ಬನೇ ಆದಲ್ಲಿ ಒಬ್ಬನ ಸುಖದುಃಖಗಳಿಂದ ಎಲ್ಲರಿಗೂ ಸುಖದುಃಖಗಳಾಗಬೇಕಾಗುತ್ತೆಯಾದ್ದರಿಂದ ಆತ್ಮರು ಅನೇಕರೆಂದು ಪೇಳುವರು. ಮತ್ತು ಅವರು ಜ್ಞಾನಿಯಾದವನ ದೃಷ್ಟಿಯಿಂ ಜಗತ್ತು ಇಲ್ಲದಿದ್ದಾಗ್ಯೂ ಅಜ್ಞಾನಿಗಳ ದೃಷ್ಟಿಯಿಂದಿರುವದ್ದರಿಂದ ಜಗತ್ತು ಸತ್ಯವೆಂದು ಸ್ಥಾಪಿಸುವರು. ಒಬ್ಬ ಸೂರ್ಯನು ತರಂಗಭೇದದಿಂದನೇಕವಾಗಿ ಕಾಣುವಂತೆ ವಾಸನಾತ್ಮಕವಾದ ಮನಸ್ಸಿನ ಭೇದದಿಂದಾತ್ಮನೊಬ್ಬನೇ ನಾನಾ ಪ್ರಕಾರವಾಗಿ ಕಾಣುವದ್ದರಿಂದ ಔಪಾಧಿಕಭೇದವಂ ವಾಸ್ತವವೆಂದೆಣಿಸಲಾಗದು. ಜಗತ್ಸತ್ಯತ್ವಸ್ಥಾಪಕವಾದ ಈ ಯುಕ್ತಿಯಲ್ಲಿ ಜಗತ್ಸತ್ಯವೆಂಬವನು ಜ್ಞಾನಿಯೋ ಅಜ್ಞಾನಿಯೋ ಅವರೇ ನೋಡಿಕೊಳ್ಳಬಹುದು. ಹೀಗೆ ಆತ್ಮನಿಗೆ ಸತ್ಯತ್ವವು, ಅದ್ವಿತೀಯತ್ವವು, ಜಗತ್ತಿಗೆ ಮಿಥ್ಯಾತ್ವವು, ಸಿದ್ಧವಾಗುವದ್ದರಿಂದ ದೇಹಕ್ಕೆ ಜನ್ಮಮರಣಗಳೆಂದು ನಿಶ್ಚೈಸತಕ್ಕದ್ದು. ನಾಡೀರಂಧ್ರಗಳು ಮಲಪೂರಿತವಾದ್ದರಿಂದ ಗಮನಾಗಮನ ಯೋಗ್ಯತೆ ಇಲ್ಲದ ಪ್ರಾಣಗಳು ಬಾಹ್ಯವಾಯುವಿನ ಭಾವವಂ ಹೊಂದಲಾಗಿ ವಾಯುವಂ ಸೇರುವ ಪುಷ್ಪದ ಪರಾಗದಂತೆ ಪರಮಾತ್ಮ ತತ್ವವಂ ಹೊಂದಿದ ಚಿತ್ತು ಶಾಂತವಾದಂತೆ ತೋರುವದು. ವಾಸನಾಯುಕ್ತವಾದ್ದರಿಂ ಜೀವನೆನಿಸುವ ಈ ಚಿತ್ತು ಆಗ ಪ್ರೇತಶರೀರ ಸಂಬಂಧದಿಂ ಪ್ರೇತವೆನಿಸುವದು. ಇದು ಪುಣ್ಯಪಾಪಗಳಲ್ಲಿ ಉತ್ತಮ ಮಧ್ಯಮ ಸಾಮಾನ್ಯಗಳೆಂಬ ಭೇದದಿಂದಾರುಪ್ರಕಾರವಾಗಿ ಪೇಳಲ್ಪಡುವದು. ಪುಣ್ಯ ಪಾಪ ವಿಶೇಷಗಳ ತಾರತಮ್ಯದಿಂದುತ್ತಮಾದಿ ಭೇದಗಳು ಕ್ರಮದಿಂದಲಾಗಲಿ, ವ್ಯತ್ಯಾಸದಿಂದಲಾಗಲಿ, ಒಬ್ಬನಿಗೂ ಸಂಭವಿಸುವವು. ಪಾಪಗಳಲ್ಲಿ ಉತ್ತಮವಾದ ಮಹಾಪಾಪದಿಂ ಕೂಡಿದವನು ವರ್ಷಪರ್ಯಂತವಾಗಿ ಮರಣಮೋಹವನ್ನನುಭವಿಸುವನು. ಕಾಲದಿಂದೆಚ್ಚರಗೊಂಡ ಈ ಜೀವನು ಅನೇಕಕಾಲ ನರಕದುಃಖಗಳನ್ನನುಭವಿಸಿ ಅನೇಕ ಯೋನಿಗಳಲ್ಲಿ ಪುಟ್ಟಿ ಬಹುಕಾಲಕ್ಕೆ ಶಾಂತಿಯಾಂ ಪಡೆಯುವನು. ಅಥವಾ ತೃಣವೃಕ್ಷಾದಿ ಜಡಜನ್ಮಗಳಂ ಪಡದು ಬಳಿಕ ನರಕದುಃಖಗಳನ್ನನುಭವಿಸಿ ಪುನಃ ಪಶ್ವಾದಿ ಜನ್ಮಗಳಂ ಪಡದು ವಿವೇಕ ವಿಚಾರ ಯೋಗ್ಯತೆಯುಳ್ಳ ಮಾನುಷಜನ್ಮ ಬಂದಾಗ ಕೃತಾರ್ಥನಾಗುವನು. ಮಧ್ಯಮಪಾಪಿಯು ಕೆಲವುಕಾಲ ಜಡನಾಗಿದ್ದು ಕಾಲದಿಂದೆಚ್ಚರವಾದ ಬಳಿಕ ತಿರ್ಯಗ್ಯೋನಿ ಕ್ರಮವಾಗಿ ಜನ್ಮಗಳಂ ಪಡೆಯುವನು. ಸಾಮಾನ್ಯಪಾಪಿಯಾದವನು ಮರಣ

ಮೋಹ ತೀರಿದಕೂಡಲೆ ಸ್ವಪ್ನದಲ್ಲಿ ಕಾಣುವಂತೆ ವಾಸನಾನುಸಾರವಾದ ಸ್ಮೃತಿ ಸಂಕಲ್ಪಗಳಿಂದ ಶರೀರವಂ ಪಡೆವನು. ಉತ್ತಮ ಪುಣ್ಯಶಾಲಿಯು ಮರಣಮೋಹವಳಿದ ಸಂಗಡಲೆ ಸ್ಮೃತಿಯಿಂದ ಸ್ವರ್ಗಸೌಖ್ಯವನ್ನನುಭವಿಸುವನು. ಮಹಾಪುಣ್ಯದ ಭೋಗವಾದ ಬಳಿಕ ಭೋಗಭೂಮಿಯಾದ ಕಿಂಪುರುಷಾದಿವರ್ಷಗಳಲ್ಲಿ ಪುಟ್ಟಿ ಅಲ್ಲಿಯೂ ಸೌಖ್ಯವನ್ನನುಭವಿಸಿ ಬಳಿಕ ಕರ್ಮಭೂಮಿಯಲ್ಲಿ ಸಜ್ಜನರಾದ ಶ್ರೀಮಂತರ ಮನೆಯಲ್ಲಿ ಪುಟ್ಟುವನು. ಮಧ್ಯಮಪುಣ್ಯನಾದವನು ಕಿನ್ನರ ಕಿಂಪುರುಷಾದಿ ಶರೀರದಿಂ ನಂದನ ಚೈತ್ರರಥಾದಿವನಗಳಲ್ಲಿ ಪುಣ್ಯಫಲವನ್ನನುಭವಿಸಿ ಪುರುಷರ ಹೃದಯಮಂ ಸೇರಿ ರೇತೋರೂಪದಿಂ ಗರ್ಭವಂ ಸೇರಿ ವಾಸನಾನುರೂಪವಾದ ಜನ್ಮವಂ ಪಡೆಯುವನು. ಸಾಮಾನ್ಯ ಪುಣ್ಯಶಾಲಿಗಳಿಗೂ ಇದೇಪ್ರಕಾರ ಗತಿಯಾಗುವದು. ಅದರಲ್ಲಿ ಪುಣ್ಯ ಕಡಮೆಯಾದ್ದರಿಂದ ಸೌಖ್ಯವು ಕಡಮೆಯಾಗುವದು. ಈ ಪ್ರೇತಗಳು ಮರಣಮೂರ್ಛೆ ಕಳೆದಬಳಿಕ ನಾವು ಮೃತರಾದೆವೆಂತಲೂ, ಬಂಧುಗಳು ಪಿಂಡಾದಿಗಳಂ ಕೊಟ್ಟದ್ದರಿಂದ ತಾವು ಪುಟ್ಟಿದೆವೆಂತಲೂ, ತಮ್ಮನ್ನು ಯಮಭಟರು ಕರದುಕೊಂಡು ಪೋಗುವರೆಂತಲೂ ತಿಳಿಯುವರು. ಇವರಿಗೆ ಪುಣ್ಯಪಾಪಾನುಸಾರವಾಗಿ ಆ ಮಾರ್ಗದಲ್ಲಿ ಸುಖದುಃಖಗಳುಂಟಾಗುವವು. ಬಳಿಕ ಯಮಪುರಕ್ಕೆ ಹೋದಂತೆಯೂ, ಅಲ್ಲಿ ಪುಣ್ಯ ಪಾಪ ವಿಚಾರಣೆಯಾಗುವಂತೆಯೂ, ಬಳಿಕ ಫಲಾನುಭವಕ್ಕೋಸುಗ ಸ್ವರ್ಗ ನರಕಗಳಿಗೆ ಹೋಗುವಂತೆಯೂ, ಬಳಿಕ ಧ್ಯಾನರೂಪದಿಂ ಪುರುಷರಂ ಪೊಂದಿ ಜನ್ಮವಂಪಡೆಯುವಂತೆಯೂ, ಬಾಲ್ಯ, ಯೌವನ, ವಾರ್ಧಕ ಸುಖದುಃಖಗಳನ್ನನುಭವಿಸುವಂತೆಯೂ, ಪುನಃ ಮರಣವಾಗುವಂತೆಯೂ, ಮರಳಿ ಯಮಪುರಿಗೆ ಹೋಗುವಂತೆಯೂ, ಜ್ಞಾನಮಾತ್ರದಿಂ ಸಮಸ್ತವನ್ನೂ ಅನುಭವಿಸುವರು. ಆಕಾಶರೂಪನಾದ ಈ ಜೀವನು ವಾಸನಾವೇಶದಿಂ ಕೇವಲ ಶೂನ್ಯನಾದ ಆಕಾಶದಲ್ಲೇ ಸಮಸ್ತವನ್ನೂ ಅನುಭವಿಸುವನಲ್ಲದೆ, ಯಾವದೂ ಇಲ್ಲವೆಂದು ತಿಳಿಯುವನಾಗು, ಈ ಸಂಸಾರಚಕ್ರಭ್ರಮಣವು ಮೋಕ್ಷಾಂತವಾಗಿ ತಪ್ಪುವದಿಲ್ಲ. ಆದಿಸೃಷ್ಟಿಯಲ್ಲಿ ಪರಮೇಶ್ವರನು ಸ್ವೇಚ್ಛೆಯಿಂತಾನೆ ಪಂಚಭೂತರೂಪಗಳಂತಾಳಿ ಬ್ರಹ್ಮಾದಿರೂಪದಿಂ ನಿಯಾಮಕನಾಗಿ ಪ್ರಕಾಶಿಸಿದನು. ಆಗ ಸಂಕಲ್ಪದಿಂದ ಆದದ್ದೆಲ್ಲವು ಬಿಂಬರೂಪವಾದವು, ಅವುಗಳು ಹಿರಣ್ಯಗರ್ಭನ ಚಿತ್ತದಲ್ಲಿ ಪ್ರತಿಬಿಂಬಿಸಿ ಪ್ರಕಾಶವಾಗಿ ಈಗಲೂ ಏಕರೀತಿಯಾಗಿರುವವು. ಸ್ವಪ್ನಪ್ರಪಂಚದಂತೆ ಸಂಕಲ್ಪಪ್ರಪಂಚವೇ ಸುಳ್ಳಾಗುವಲ್ಲಿ ಅದಕ್ಕೆ ಪ್ರತಿಬಿಂಬವಾದ ಈ ಪ್ರಪಂಚವು ಸತ್ಯವೆಂದು ನಂಬತಕ್ಕದ್ದು. ಹ್ಯಾಗೆ ದೇಹರಂಧ್ರದಲ್ಲಿರುವ ನಾ

ಯುವು ಚಲಿಸುವದ್ದರಿಂದಲೂ, ಚಲಿಸದಿರುವದ್ದರಿಂದಲೂ, ಪ್ರಾಣಿಗಳು ಚರಸ್ಥಿರಗಳೆನಿಸುವವು. ಹೀಗೆ ಪರಮೇಶ್ವರನೇ ಭಾವನಾಮಾತ್ರದಿಂ ಸರ್ವಪ್ರಾಣಿರೂಪಗಳಂ ತಾಳಿರುವನು. ಇದರಲ್ಲಿ ಸ್ವತಃಪ್ರಕಾಶಿಸುವದು ಚಿತ್ತು ಅದರಿಂದ ಪ್ರಕಾಶಿಸುವದು ಜಡವೆಂದು ತಿಳಿಯತಕ್ಕದ್ದು. ಬುದ್ಧಿಮಾರ್ಗದಿಂ ಚಕ್ಷುರಾದೀಂದ್ರಿಯಗಳು ಹೊಂದಿ ಆಯಾಯುವ್ಯಾಪಾರಗಳಂ ನಡಸುವದ್ದರಿಂದ ಚಿತ್ತಿಗೆ ಬುದ್ಧಿಯೇ ಮುಖ್ಯೋಪಾಧಿಯುನಿಸುವದು. ಆದ್ದರಿಂದಲೇ ಸಂಕಲ್ಪಾನುಸಾರವಾಗಿ ಪುಟ್ಟಿದ ಈ ಪ್ರಪಂಚವು ಭೂಮಿಎಂತಲೂ, ಆಕಾಶವೆಂತಲೂ, ಪುಟ್ಟುವಲ್ಲಿ ಸಂಕಲ್ಪವುಂಟಾದಂತೆ ಈಗಲು ಪ್ರಖ್ಯಾತವಾಗಿರುವದು. ಒಬ್ಬನಿಂದ ಕಲ್ಪಿತವಾದ್ದು ಮತ್ತೊಬ್ಬನಿಂ ತಿಳಿಯುವದಕ್ಕೆ ಅಶಕ್ಯವಾದ್ದರಿಂದ ಲೋಕದಲ್ಲಿ ವ್ಯವಹಾರಾರ್ಥವಾಗಿ ಸಂಕೇತಗಳುಂಟಾಗಿರುವವು. ಪರಮೇಶ್ವರನು ಸರ್ವಕ್ಕು ಕಲ್ಪಕನಾದ್ದರಿಂದ ಸರ್ವಜ್ಞನಾಗಿರುವನು. ಮೋಹಾದಿ ವಿಸ್ಮೃತಿಕಾಲಗಳಲ್ಲಿ ಪುನಃ ಪದಾರ್ಥಜ್ಞಾನ ಉಂಟಾಗಲೋಸುಗ ಲೋಕದಲ್ಲಿ ಸ್ವಸಂಕೇತವಂ ಸ್ಥಾಪಿಸಿರುವನು. ಶಾಸ್ತ್ರಸಂಕೇತದಿಂದ ಕಲ್ಲಿನವಳಗಿರುವ ಕಪ್ಪೆಯು ತಿಳಿಯುವಂತೆ ಸಂಕೇತವಿಂದಲೇ ಒಬ್ಬನ ಆಶಯುವು ಮತ್ತೊಬ್ಬನಿಗೆ ಗೋಚರವಾಗುವದು. ಹೀಗೆ ಕಲ್ಪನಾಮಾತ್ರದಿಂದೀಶ್ವರ ಜೀವಾದಿ ಭಾವಗಳಂ ಬ್ರಹ್ಮವೇ ಹೊಂದಿರುವದ್ದರಿಂದ ಸರ್ವವು ಬ್ರಹ್ಮವೆಂತಲೇ ತಿಳಿಯುವಳಾಗು, ಈಗ ಈ ವಿದೂರಥನು ದೂರವಾದ ಲೋಕಾಂತರಕ್ಕೆ ಹೋಗುವನೆಂಬ ಮನುಷ್ಯವಾಸನೆಯಿಂದ ಹೊರಟು ಶವವಾಗಿರುವ ಪದ್ಮರಾಜನ ಹೃದಯುವಂ ಪೊಂದುವನು. ಎಂದು ಮಾತನಾಡುವ ಲೀಲಾ ಸರಸ್ವತಿಯರು ದಿವ್ಯದೃಷ್ಟಿಯಿಂದ ಪಕ್ಷಿಯಂತೆ ಶರೀರವಂ ಬಿಟ್ಟು ಗಗನವಂ ಶೇರಿರುವ ವಿದೂರಥನ ಚೈತನ್ಯವಂ ಕಂಡು ವಾಯುವಿನಲ್ಲಿ ಶೇರಿರುವ ಪುಷ್ಪಪರಾಗವನ್ನನುಸರಿಸುವ ಭ್ರಮರಿಗಳಂತೆ ಪ್ರಾಣವಾಯುವಿನಿಂದ ಹೋಗುತ್ತಿರುವ ಆ ಜೀವವನ್ನನುಸರಿಸಿಹೊರಟರು. ಆ ವಿದೂರಥನಿಗೆ ಮರಣಮೋಹವಳಿದ ಬಳಿಕ ಯಮಭಟರು ತನ್ನಂಕರದುಕೊಂಡು ಪೋಗುವಂತೆಯು, ತನಗೆ ಬಂಧುಗಳು ಕೊಟ್ಟ ಪಿಂಡಾದಿಗಳಿಂದ ಶರೀರವುಂಟಾಗಿರುವಂತೆಯೂ, ತಿಳಿದನು. ಅವನಂಕಂಡ ಯಮನು ಇವನು ಸರಸ್ವತೀ ವರದಿಂ ವೃದ್ಧಿಹೊಂದಿರುವಂಥಾವನು. ಇವನಿಗೆ ದುಷ್ಕರ್ಮವು ಯಾವದೂಇಲ್ಲ ಇವನು ಈಗ ಪದ್ಮನ ಶರೀರವಂ ಹೊಂದತಕ್ಕವನಾದ್ದರಿಂದ ಇವನಂ ಬಿಟ್ಟುಬಿಡಿ. ಎಂದು ಆಜ್ಞಾಪಿಸಲು, ಯಮಭಟರಿಂ ಬಿಡಲ್ಪಟ್ಟ ಆ ವಿದೂರಥನು ಯಸೆಯಲ್ಪಟ್ಟ ಕಲ್ಲಿನಂತೆ ಕೆಳಕ್ಕೆ ಬೀಳುತ್ತಿರಲು ಲೀಲಾ ಸರಸ್ವತಿಯರು ಅವನ್ನನುಸರಿಸಿ

ಬರುತ್ತಿರಲು, ಆ ವಿದೂರಥನಿಗೆ ಯಮನ ಆಜ್ಞೆಯಿಂದ ಪದ್ಮರಾಜ ವಾಸನೆಯು ಉದ್ಬುದ್ಧವಾಗಲಾಗಿ ದೇಶಾಂತರದಲ್ಲಿಟ್ಟಿರುವ ಪದಾರ್ಥವಂ ಮನುಷ್ಯನು ಹೊಂದುವಂತೆ ಅವನು ಪದ್ಮರಾಜನ ಶರೀರವಂಹೊಂದಿದನು. ಎಲೈ ಶ್ರೀರಾಮಚಂದ್ರನೇ! ಯಾವನಿಗೆ ನಮ್ಮ ಬಂಧುಗಳು ಪಿಂಡಾದಿಗಳಂ ಕೊಡುವರೆಂಬ ವಾಸನೆ ಇರುವದೋ ಅವನೇ ಪಿಂಡಾದಿಗಳಂಪಡೆಯುವನು. ಯಾವನಿಗೆ ಆ ವಾಸನೆ ಇಲ್ಲವೊ ಅವನಿಗೆ ಬಂಧುಗಳುಪಿಂಡಾದಿಗಳಂ ಕೊಟ್ಟರೂ ಕೊಡದಿರುವಂತೆಯೇ ಆಗುವದು. ವಾಸನೆಯಿದ್ದವನಿಗೆ ಕೊಡದಿದ್ದರೂ ಕೊಟ್ಟಂತೆ ಸಂತೋಷವು ಆಗುವದು. ಭಾವನೆಯಿಂದ ವಿಷವಮೃತವು ಅಮೃತವಿಷವೂ ಆಗುವಂತೆ ಪಿಂಡಪ್ರದಾನಾದಿಗಳು ಪ್ರಾಪ್ತವಾಗುವವು. ಮೃತನಾದವನಿಗೆ ನಮ್ಮವರು ಧರ್ಮವಂ ಮಾಡುವರೆಂಬ ವಾಸನೆ ಇಲ್ಲದಿದ್ದಾಗ್ಯೂ ಅವನ ಸುಹೃತ್ತಾದವನು ದೇಶ ಕಾಲ ದ್ರವ್ಯಶುದ್ಧಿಯಿಂದ ಬಲವಾಗಿ ಮಾಡಿದ ಧರ್ಮವು ಅವನಿಗೆ ಭಾವನೆಯನ್ನುಂಟುಮಾಡಿ ತನ್ನ ಫಲವನ್ನವನ ಅನುಭವಕ್ಕೆ ಬರುವಂತೆ ಮಾಡುವದು. ಧರ್ಮವಾಸನೆಯಿದ್ದವನಿಗೆ ಅವನ ಬಂಧುಗಳು ಧರ್ಮವಂ ಮಾಡದಿದ್ದರು ಅವನ ಧರ್ಮವಾಸನೆಯಿಂದಲೇ ಸ್ವಾನುಭವಮಾತ್ರ ಗೋಚರವಾದ ಫಲವುಂಟಾಗುವದು. ಜನ್ಮಾಂತರದಲ್ಲಿ ಮಾಡಿದ ಕರ್ಮವು ಬಲವಾಗಿದ್ದರೆ ಅದರ ಫಲವು ಇತರ ಜನರು ಕಾಣುವಂತೆ ಅನುಭವಗೋಚರವಾಗುವದು. ಸಾಧಾರಣವಾಗಿದ್ದರೆ ಸ್ವಪ್ನಮನೋರಥಾದಿಗಳಲ್ಲಿ ಅದರಫಲ ವುಂಟಾಗುವದು. ಈಪ್ರಕಾರವೇ ಸತ್ತವನಿಗೆ ಬಂಧುಗಳು ಮಾಡಿದ ಕರ್ಮವು ಫಲಕಾರಿಯಾಗುವದೆಂದು ತಿಳಿಯತಕ್ಕದ್ದು. ವಾಸನೆಯಿದ್ದವನು ಸಂತೋಷಶಾಲಿಯಾದ ಜ್ಞಾನಿಯಂತೆ ಸ್ವವಾಸನೆಯಿಂದುಂಟಾದ ಫಲವನ್ನನುಭವಿಸುವನಾದ್ದರಿಂದ ಪ್ರಯತ್ನಪೂರ್ವಕವಾಗಿ ಶುಭವಾಸನೆಯಂ ವೃದ್ಧಿಹೊಂದಿಸತಕ್ಕದ್ದು. ಎಂದು ವಸಿಷ್ಠನು ಪೇಳುತ್ತಿರುವಲ್ಲಿ ಎಲೈ ಮಹಾಮುನಿಯೆ! ದೇಶ ಕಾಲ ಕ್ರಿಯಾ ದ್ರವ್ಯ ಸಂಪತ್ತುಗಳಿಲ್ಲದೆ ವಾಸನೆಯುಂಟಾಗುವದಿಲ್ಲ. ಅದರಿಂದಲೇ ಭಾವನೆಯೂ ಉಂಟಾಗುವದಿಲ್ಲ. ಹೀಗಿರುವಲ್ಲಿ ವಾಸನಾಮಯವಾದ ಈ ಪ್ರಪಂಚವು ಪರಮಾತ್ಮನಿಂ ಪುಟ್ಟಿದ್ದು ಹ್ಯಾಗೆ ಎಂದು ಶ್ರೀರಾಮಚಂದ್ರನು ಕೇಳಲು ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ! ಸರ್ಗಾದಿಯಲ್ಲಿ ದೇಶಕಾಲಾದಿಗಳು ಒಂದೂ ಇಲ್ಲದ್ದರಿಂದಲೇ ಆ ಪರಮಾತ್ಮನಿಗೆ ದೃಶ್ಯವಾಸನೆಯುಂಟಾಗಲಿಲ್ಲ. ಅದರಿಂದಲೇ ಈ ದೃಶ್ಯವೂ ಉಂಟಾಗಲಿಲ್ಲ. ಪೂರ್ವದಲ್ಲಿಲ್ಲದ್ದರಿಂದ ಈಗಲೂ ಇಲ್ಲವೆಂತಲೆ ತಿಳಿಯತಕ್ಕದ್ದು. ಇದ್ದದ್ದಕ್ಕೆ ಪ್ರಕಾಶವಲ್ಲದೆ ಇಲ್ಲದ್ದಕ್ಕೆ ಪ್ರಕಾಶವಿಲ್ಲದ್ದರಿಂದ

ಎಂದಿಗೂ ಇರುವ ಬ್ರಹ್ಮವೇ ಈಗಲೂ ದೃಶ್ಯರೂಪದಿಂ ಪ್ರಕಾಸಿಸುವದೆಂದು ನಿಶ್ಚಯಿಸುವನಾಗು. ವಿದೂರಥ ಚೈತನ್ಯವನ್ನನುಸರಿಸಿ ಬರುವ ಲೀಲಾಸರಸ್ವತಿಯರು ಪದ್ಮರಾಜನ ಅಂತಃಪುರವಂ ಶೇರಿ ಅಲ್ಲಿ ಶವ ಸಮೀಪದಲ್ಲಿ ಯೋಗನಿದ್ರೆಯುಲ್ಲಿರುವ ನಾರಾಯಣನ ಸಮೀಪದೊಳ್ ಲಕ್ಷ್ಮಿಯಂತೆ ಪ್ರಕಾಶಿಸುವ ಎರಡನೇ ಲೀಲೆಯುಂ ಕಂಡರು. ಅವಳಿಗೆ ಪರಮಾರ್ಥಜ್ಞಾನವಿಲ್ಲದ್ದರಿಂದ ಇವರಂ ಕಾಣಲಿಲ್ಲ ಎಂದು ಪೇಳುವ ವಸಿಷ್ಠಮುನಿಯು ಧ್ಯಾನಾರೂಢಳಾಗಿದ್ದ ಲೀಲಾ ಶರೀರವೇನಾಯಿತೆಂದು ಕೇಳುವ ರಾಮನಂ ಕುರಿತಿಂತೆಂದನು. ಎಲೈ ರಾಮಭದ್ರನೇ ! ಲೀಲೆಗೆ ಶರೀರವೆಲ್ಲಿದ್ದದು ? ಅದಕ್ಕೆ ಸತ್ಯತ್ವವು ಹ್ಯಾಗೆ ? ಮರುಭೂಮಿಯ ಪ್ರಕಾಶವು ಜಲವಾಗಿ ಕಾಣುವಂತೆ ಭ್ರಾಂತಿಯಿಂ ಕಾಣುತ್ತಿದ್ದ ಆ ಶರೀರವು ಅವಳಿಗೆ ಜ್ಞಾನೋದಯವಾದ ಕೂಡಲೇ ಬಿಸಲಿನಲ್ಲಿ ಹಿಮ ಕಣದಂತೆ ನಷ್ಟವಾಯಿತು. ಅಂತಃಕರಣಗಳಿಗೂ ಇಂದ್ರಿಯಗಳಿಗೆ ಸಹ ವಿಷಯವಾದ್ದೆಲ್ಲವು ಬ್ರಹ್ಮವಲ್ಲದೆ ಮತ್ತೊಂದಲ್ಲನೆಂದು ಎಷ್ಟುಭಾರಿ ಪೇಳಿವಾಗ್ಯೂ ಪೂರ್ವಭ್ರಾಂತಿಯು ನಿನ್ನಂ ಬಿಡಲಿಲ್ಲ, ಆತಿವಾಹಿಕಶರೀರವೇ ರಜ್ಜುಸರ್ಪದಂತೆ ಆಧಿಭೌತಿಕವಾಗಿರುವದು. ಆತಿವಾಹಿಕದೇಹದಿಂ ಕಾಣಲ್ಪಟ್ಟ ಪದಾರ್ಥಗಳೇ ಭೂಮ್ಯಾದಿಶಬ್ದದಿಂ ಪ್ರಸಿದ್ಧವಾಗಿರುವವು. ಸ್ವಪ್ನದಲ್ಲಿ ಮೃಗ ತಾನೆಂಬ ಜ್ಞಾನದಿಂ ಬಾದಿದ್ದ ಮೃಗಭಾವವು ಎಚ್ಚರವಾದಬಳಿಕ ಹ್ಯಾಗೆ ಇರುವದಿಲ್ಲವೊ ಹಾಗೆ ಜ್ಞಾನೋದಯವಾದಬಳಿಕ ಆ ಜ್ಞಾನಿಕಪದಾರ್ಥಗಳು ಇರುವದಿಲ್ಲವೆಂದು ತಿಳಿಯುವನಾಗು. ಯಾರಿಗೆ ದೇಹಭ್ರಾಂತಿ ಇರುವದೋ ಅವರಿಗೆ ಮರಣದಲ್ಲಿ ದೇಹಾಂತರಪ್ರಾಪ್ತಿಜ್ಞಾನವು ದೇಹವು ಸಹ ವುಂಟಾಗುವದು. ಯೋಗಿಗೆ ಜ್ಞಾನೋದಯದಿಂ ಪೂರ್ವದೇಹಭ್ರಾಂತಿಯಳಿದಿದ್ದರಿಂದ ಇತರ ದೇಹಪ್ರಾಪ್ತಿಯಾಗುವದಿಲ್ಲ. ಯೋಗಿಯು ಐಚ್ಛಿಕವಾದ ದೇಹಗಳಂ ಧರಿಸಿ ಧರಿಸಿ ಬಿಡುತ್ತಿರುವಲ್ಲಿ ಅವನ ಅತಿವಾಹಿಕದೇಹವು ಇತರ ಯೋಗಿಗಳಿಗೆ ತಮ್ಮ ತಮ್ಮ ವಾಸನಾತ್ಮಕವಾದ ರೂಪದಿಂದಲೇ ಗೋಚರವಾಗುವದು.

ಎಲೈ ರಾಮಭದ್ರನೇ ! ಲೋಕದಲ್ಲಿ ಯಾವ ದೇಹವಿರುವದು ? ಅದಕ್ಕೆ ಯಾವ ಸತ್ವವಿರುವದು? ಇಲ್ಲದಿರುವದಕ್ಕೆ ನಾಶವೆಂದರೇನು? ಇದೆಲ್ಲವು ಭ್ರಾಂತಿಯಾದ್ದರಿಂದ ಯಾವದು ಶಾಶ್ವತವಾದದ್ದೊ ಅದೇ ಇರುವದು. ಎಂದಿಗೂ ಇಲ್ಲದ್ದು ಇಲ್ಲವೇ ಇಲ್ಲವೆಂದು ನಿಶ್ಚಯಿಸುವನಾಗು. ಜ್ಞಾನೋದಯದಿಂ ಭ್ರಾಂತಿಸರ್ಪ ಹೋದಬಳಿಕ ರಜ್ಜುವಿನಂತೆ ಆಧಿಭೌತಿಕ ಭ್ರಾಂತಿಯಳಿದ ಬಳಿಕ ಆತಿವಾಹಿಕದೇಹವು ನಿಲ್ಲುವದು. ಸ್ವಪ್ನಜಾಡ್ಯದಂತೆ ಆಧಿಭೌತಿಕಜಾಡ್ಯ ಹಳಿದಿದ್ದ

ರಿಂದ ಯೋಗಿಯು ದೇಹವು ಹತ್ತಿಯಂತೆ ಲಘುವಾಗಿ ಗಗನ ಗಮನ ಯೋಗ್ಯತೆಯಂ ಪಡೆವದು. ಅತಿಮೂಢರಾದ ಜನರಿಗೂಕೂಡ ಸ್ಥೂಲಶರೀರಪಾತವಾಗುವಲ್ಲಿ ಆತಿವಾಹಿಕ ಶರೀರದೊಳ್ ಸ್ಥಿತಿಯುಂಟಾಗುವದು. ಹೀಗೆ ಇರುವಲ್ಲಿ ಜ್ಞಾನಿಗಳಿಗೆ ಈ ಅರ್ಥವಾಗುವದರಲ್ಲಿ ಆಶ್ಚರ್ಯವೇನು ? ಸ್ವಪ್ನದಲ್ಲಿ ಶರೀರವು ಗಗನ ಮಿಥ್ಯವಾಗುವಂತೆ ಜ್ಞಾನಿಗೆ ಎಚ್ಚರದಲ್ಲಿಯೇ ಆಗುವದು. ಭ್ರಾಂತಿಮಯವಾದ ಆಧಿಭೌತಿಕದೇಹವು ನಷ್ಟವಾದ್ದರಿಂದ ಯಾರಿಗೇನು ನಷ್ಟವಾಗುವದು. ಸ್ವಪ್ನಪದಾರ್ಥವು ಬುದ್ಧಿಯಲ್ಲಡಗುವಂತೆ ಭ್ರಾಂತಿಮಯವಾದ ಆಧಿಭೌತಿಕವು ಆತಿವಾಹಿಕದಲ್ಲಡಗುವದ್ದರಿಂದ ಮಹಾತ್ಮರಾದ ಯೋಗಿಗಳು ದೃಶ್ಯರಾಗಿಯೂ, ಅದೃಶ್ಯರಾಗಿಯೂ, ಸ್ವೇಚ್ಛೆಯಿಂ ಸಂಚರಿಸುವರು. ಸ್ವಪ್ನವು ಸ್ವಪ್ನಪದಾರ್ಥಗಳೂ ಸಹ ಜಾಗ್ರದಲ್ಲಿ ಅಸತ್ಯವಾಗುವವು. ಅದೇಪ್ರಕಾರ ಸ್ವಪ್ನಜಾಗ್ರಗಳು ಸುಷುಪ್ತಿಯಲ್ಲಿ ಅಸತ್ಯವಾಗುವವು. ಜ್ಞಾನದಲ್ಲಿ ಈ ಮೂರೂ ಅಸತ್ಯವಾದಾಗ್ಯೂ ಜೀವನ್ಮುಕ್ತರು ಅವುಗಳಲ್ಲಿ ಸಾಕ್ಷಿಭಾವದಿಂದಿರುತ್ತಾ ದೃಶ್ಯವೆಲ್ಲವನ್ನು ಬ್ರಹ್ಮಪ್ರಕಾಶವೆಂತಲೇ ನಿಶ್ಚಯಿಸುವರು. ಆದ್ದರಿಂದ ಲೀಲೆಗೆ ಭ್ರಾಂತಿಜನ್ಯವಾದ ಆ ಶರೀರವು ಜ್ಞಾನೋದಯದಲ್ಲಿಯೇ ನಷ್ಟವಾಯಿತು. ಜನಗಳ ದೃಷ್ಟಿಯಿಂದಾಸನದಲ್ಲಿದ್ದ ಅವಳ ಶರೀರವು ಹದಿನೈದು ದಿವಸಕ್ಕೆ ಅತಿಯಾಗಿ ಬೆವರುವಂತೆ ನೀರಾಗಿ ಹರಿಯುವದಕ್ಕೆ ಆರಂಭಿಸಲು ಅದಂಕಂಡ ಮಂತ್ರಿ ಮೊದಲಾದವರು ದೊರೆ ಹೆಂಡತಿಯು ಸತ್ತಳೆಂದು ಅಳುತ್ತಾ ಮನೆಯಿಂದಾಶರೀರವಂ ತೆಗದುಕೊಂಡು ಹೋಗಿ ಚಂದನಕಾಷ್ಠಗಳಿಂ ಭಸ್ಮವಂ ಮಾಡಿದರು. ಅವರು ಮಾಡಿದ ಔರ್ಧ್ವದೈಹಿಕಕರ್ಮವು ಅವಳು ಮುಕ್ತಳಾಗಿದ್ದದ್ದರಿಂದ ಪ್ರೇತಶರೀರವನ್ನುಂಟುಮಾಡದೇ ಅವರ ಪಾಪಪರಿಹಾರಕ್ಕೂ ಋಣಾನುಬಂಧತೀರುವದಕ್ಕೂ ಸಾಧಕವಾಯಿತು. ಪ್ರಾರಬ್ಧಭೋಗಶೇಷವಿದ್ದದ್ದರಿಂದಲೂ, ಸರಸ್ವತಿಯ ಅನುಗ್ರಹದಿಂದಲೂ, ಪದ್ಮರಾಜನ ಶರೀರವು ಸ್ವಲ್ಪವೂ ವಿಕಾರವಂ ಹೊಂದಲಿಲ್ಲ. ತಿಂಗಳಮೇಲೆ ಹಿಂತಿರುಗಿ ಬಂದ ಆ ಸರಸ್ವತಿಯು ಇದೇ ಅರ್ಥವನ್ನಾಲೀಲೆಗೆ ಹೇಳುತ್ತಾ ಇಲ್ಲಿಯ ಜನರು ತಮ್ಮನ್ನ ಕಾಣಲೆಂದು ಇಚ್ಛಿಸಲಾಗ ವಿದೂರಥ ಲೀಲೆಯು ಇವರಂ ಕಂಡು ಭಕ್ತಿಯಿಂ ಪ್ರಣಾಮವಂಗೈದು ಎಲೌ ದೇವಿಯರಾ ! ನನಗೆ ಶುಭೋದಯವಾಗಲೋಸುಗವೇ ಬಂದಿರುವ ನೀವು ಸರ್ವೋತ್ತಮರಾಗಿರುವರಾಗಿ ಎಲೌ ಜೀವನಪ್ರದರಾದ ದೇವಿಯರಾ ನಿಮ್ಮ ಸೇವಕಳಾದ ನಾನು ನಿಮ್ಮ ಸೇವಾರ್ಥಕವಾಗಿ ಪೂರ್ವದಲ್ಲಿಯೇ ಇಲ್ಲಿಗೆ ಬಂದಿರುವೆನು. ಇತ್ತ ದಯಮಾಡಿಸಬೇಕೆಂದು ಹೇಳಲಾ ಸರಸ್ವತಿಯು ಆ

ಇಬ್ಬರು ಲೀಲೆಗಳೊಡನೆ ಆಸನಗಳಮೇಲೆ ಕುಳಿತು ಎಲೌ ಬಾಲೆಯೇ ! ನೀನು ಇಲ್ಲಿಗೆ ಹ್ಯಾಗೆ ಬಂದವಳಾದೆಯೋ ಆ ವೃತ್ತಾಂತವಂ ಹೇಳುವಳಾಗೆಂದು ವಿದೂರಥ ಲೀಲೆಯುಂ ಕೇಳಲು ಅವಳು ವಿಜ್ಞಾಪಿಸಿದಳದೆಂತೆನೆ:—

ಎಲೌ ದೇವಿಯೇ ! ಪೂರ್ವದಲ್ಲಿ ನಿಮ್ಮ ಸಮೀಪದಲ್ಲಿಯೇ ನಾನು ಯುದ್ಧದಲ್ಲಿ ಪ್ರಾಣಕಾಂತನಿಗೆ ಶತ್ರುವಿನಿಂದುಂಟಾದ ಮರ್ದಶೆಯುಂ ನೋಡಿ ದುಃಖದಿಂ ಪ್ರಳಯಾಗ್ನಿಜ್ವಾಲೆಯಿಂ ಹೊಡೆಯಲ್ಪಟ್ಟ ಚಂದ್ರಕಳೆಯಂತೆ ಮೂರ್ಛಿತಳಾದೆನಲ್ಲವೇ ? ಬಳಿಕ ಎಚ್ಚರವಾದಕೂಡಲೆ ಮಹಾಭೂತವಾಯುವಿನಲ್ಲಿ ಗಂಧದ ಹುಡಿಯಂತೆ ತಗಲಿಕೊಂಡಿರುವ ಶರೀರವಂ ನೋಡುತ್ತಾ ಆ ವಾಯುವಿನಿಂದಲೇ ಈ ಮನೆಯುಂ ಹೊಂದಿಸಲ್ಪಟ್ಟೆನು. ಇಲ್ಲಿ ವಸಂತನಂತೆ ಪುಷ್ಪಸಮೂಹದಲ್ಲಿರುವ ಈ ಪ್ರಾಣನಾಯಕನಂ ಕಂಡು ಯುದ್ಧಶ್ರಮ ಪರಿಹಾರಾರ್ಥವಾಗಿ ಮಲಗಿರುವನೆಂದು ನಿದ್ರಾಭಂಗವಂ ಮಾಡದೆ ಚಾಮರದಿಂ ಸೇವಿಸುತ್ತಿದ್ದು ಈಗ ನಿಮ್ಮಂ ಕಂಡೆನು. ಎಂದು ಆ ಲೀಲೆಯ ವಚನವಂ ಕೇಳಿದ ಸರಸ್ವತಿಯು ಎಲೌ ಬಾಲೆಯರಾ ! ಶವತಲ್ಪದಿಂದೀ ರಾಜೇಂದ್ರನನ್ನೆಬ್ಬಿಸೋಣವೆಂದು ಹೇಳುತ್ತಾ ವಿದೂರಥನ ಚೈತನ್ಯವನ್ನು ಪದ್ಮರಾಜನ ಶವದಸಮೀಪದ ಸಮೀಪದಲ್ಲಿ ಪಿಡಿಯಲು ವಾಯುರೂಪದಿಂ ಚಲಿಸುತ್ತಿದ್ದ ಆ ಚೈತನ್ಯವು ಬಿದರಿನಲ್ಲಿ ನುಗ್ಗುವ ಗಾಳಿಯಂತೆ ನಾಸಾದ್ವಾರದಿಂ ಪ್ರವೇಶಿಸಿ ಆ ಶವದ ಹೃದಯವಂ ಸೇರಲು, ಸಮುದ್ರವು ರತ್ನಗಳಂ ಧರಿಸಿರುವಂತೆ ನಾನಾಪ್ರಕಾರವಾದ ವಾಸನೆಗಳಂ ವಹಿಸಿರುವ ಚೈತನ್ಯದ ವ್ಯಾಪನೆಯಿಂದ ಆ ಪದ್ಮರಾಜನ ಮುಖವು ಪ್ರಾತಃಕಾಲದ ಪದ್ಮದಂತೆ ಪ್ರಕಾಶಿಸಿತು. ರಾತ್ರಿಯ ಸಂಬಂಧದಿಂ ಚಂದ್ರನಂತೆ ಅವನ ಶರೀರವು ತೇಜೋಯುಕ್ತವಾಯಿತು. ಬಳಿಕ ವಸಂತನು ಪುಷ್ಪಪಲ್ಲವ ಲತೆಗಳನ್ನಲ್ಲಾಡಿಸುವಂತೆ ಅಂಗಗಳನ್ನಲ್ಲಾಡಿಸಿದನು. ಅನಂತರದಲ್ಲಿ ಸೂರ್ಯಪ್ರಕಾಶದಿಂ ಶೋಭಿಸುವ ಕಮಲಾಕರವು ಭ್ರಮರಗರ್ಭವಾದ ಕಮಲಗಳ ಮುಖವಂ ತೆರೆಯುವಂತೆ ಚಲಿಸುತ್ತಿರುವ ಕೃಷ್ಣತಾರೆಗಳಿಂ ಕೂಡಿದ ನೇತ್ರಗಳಂ ಬಿಟ್ಟನು. ಯೋಗನಿದ್ರೆಯುಂ ಬಿಟ್ಟು ಶೇಷಶಯನದಿಂದೇಳುವ ನಾರಾಯಣನಂತೆ ಪುಷ್ಪತಲ್ಪದಿಂದೆದ್ದ ಆ ಪದ್ಮರಾಜನು ಯಾರು ಇಲ್ಲಿರುವರೆಂದು ನುಡಿಯಲು, ಮೇಘದುಂದುಭಿನಾದ ಆ ರಾಯನ ವಚನವಂ ಕೇಳಿದ ಇಬ್ಬರು ಲೀಲೆಯರು ಮಹಾವಿಷ್ಣುವಿನ ಎದುರಿಗೆ ಶ್ರೀಭೂಮಿಯರಂತೆ ಆ ರಾಯನ ಎದುರಿಗೆ ಬದ್ಧಾಂಜಲಿಗಳಾಗಿನಿಂದು ಅಪ್ಪಣೆಯಾಗಬಹುದೆಂದು ನುಡಿಯಲು, ಆ ರಾಯನು ಆಸರೀರ್ವರಂ ಕಂಡು ವಿಸ್ಮಿತನಾಗಿ ನೀನು ಯಾರು ? ಇವಳು

ಯಾರೆಂದು ಕೇಳಲು, ಪೂರ್ವ ಲೀಲೆಯು ಎಲೈ ಪ್ರಾಣಕಾಂತನೇ ! ಅರ್ಥಕ್ಕೆ ವಾಕ್ಕಿನಂತೆ ನಿನಗೆ ಅಭಿನ್ನಳಾಗಿದ್ದ ಲೀಲೆಯು ನಾನು, ಸೂರ್ಯನ ವಿನೋದಾರ್ಥವಾಗಿ ಸಂಜ್ಞಾದೇವಿಯು ಛಾಯೆಯಂ ಕಲ್ಪಿಸಿದಂತೆ ನಿನ್ನ ವಿಲಾಸಾರ್ಥವಾಗಿ ನಾನು ಪ್ರತಿಬಿಂಬದಂತೆ ಸಮಾನರೂಪಳಾದ ಈ ಲೀಲೆಯಂ ಸಂಪಾದಿಸಿರುವೆನು. ನಮ್ಮ ಪುಣ್ಯಾತಿಶಯದಿಂ ಪ್ರತ್ಯಕ್ಷವಾಗಿ ಬಂದಿರುವ ಜಗಜ್ಜನನಿಯಾದ ವಾಗ್ದೇವಿಯು ಇಲ್ಲಿ ದಯಮಾಡಿಸಿರುವಳೆಂದು ಹೇಳಲು, ಆ ರಾಜೇಂದ್ರನು ಝುಗ್ಗನೆ ಎದ್ದು ಸರಸ್ವತಿಯ ಪಾದಗಳಿಗೆ ಪ್ರಣಾಮವಂ ಮಾಡಿ ಎಲೌ ಸರಸ್ವತಿಯೇ ! ನಿನಗೆ ನಮಸ್ಕಾರವಾಗಲಿ, ಸರ್ವಹಿತಪ್ರದಾಯಕಿಯೆ ಇಲ್ಲಿ ದಯಮಾಡಿಸುವಳಾಗು.

ಎಲೌ ವರದೇವಿಯೇ ! ನಿರ್ಮಲವಾದ ಬುದ್ಧಿಯನ್ನು ದೀರ್ಘವಾದ ಆಯುಸ್ಸನ್ನು, ಅಪರಿಮಿತವಾದ ಧನವನ್ನೂ, ಕೊಡುವಳಾಗೆಂದು ಪ್ರಾರ್ಥಿಸಿದನು. ಆಗ ಸರಸ್ವತಿಯು ಅತ್ಯಂತ ವಾತ್ಸಲ್ಯದಿಂದಾರಾಜೇಂದ್ರನ ಅಂಗವಂ ತಡವುತ್ತಾ ಎಲೈ ಮಗನೇ ನಿನ್ನ ಇಷ್ಟಾರ್ಥಗಳು ಫಲಿಸಲಿ, ನಿನಗೆ ಪಾರಮಾರ್ಥಿಕ ಸ್ಥಿತಿಯುಂಟಾಗಲಿ, ನಿಮಗೆ ಬರುವ ಆಪತ್ತುಗಳು ದುರ್ವೃಷ್ಟಿಗಳು ಸಹ ಶಾಂತವಾಗಲಿ, ಅಖಂಡವಾದ ಸುಖಗಳು ನಿಮಗೆ ಸಿದ್ಧವಾಗಲಿ, ನಿಮ್ಮ ಜನಸಮೂಹವು ನಿತ್ಯಸಂತೋಷವಾಗಿರಲಿ, ನಿಮ್ಮ ರಾಷ್ಟ್ರದಲ್ಲಿ ಅನೇಕ ಸ್ವರೂಪಗಳಾದ ಲಕ್ಷ್ಮಿಯು ಸ್ಥಿರವಾಗಿರಲಿ ಎಂದು ಆಶೀರ್ವಚನಗಳಂ ಹೇಳುತ್ತಾ ಹೊಳೆವ ಮಿಂಚಿನಂತೆ ಅಲ್ಲಿಯೇ ಅಂತರ್ಧಾನವಾಗಲು, ಆಗ ರಾಜೇಂದ್ರನ ಧ್ವನಿಯಂ ಕೇಳಿದ ಜನರ ಮುಖದಿಂ ಮೃತಿಯಾದ ಮೂವತ್ತೊಂದನೇ ದಿವಸ ಪುನಃ ಪದ್ಮರಾಜನು ಬದುಕಿದನೆಂಬ ವಾರ್ತೆಯು ನಿಮಿಷಮಾತ್ರದಿಂದಾಪಟ್ಟಣವಂ ವ್ಯಾಪಿಸಲು, ಅನಾವೃಷ್ಟಿಯಿಂ ದುಃಖಿಸುತ್ತಿದ್ದ ಜನಗಳು ಮುಂಗಾರು ಮೇಘದ ಧ್ವನಿಯಂ ಕೇಳಿದಂತೆ ಆ ವಾರ್ತೆಯಂ ಕೇಳಿದ ಪೌರಜನರು ಸಂತುಷ್ಟರಾಗಿ ಅತಿಸಂತೋಷದಿಂದರಮನೆಗೆ ಬರುತ್ತಿರಲು, ಆ ಜನ ಕೋಲಾಹಲವಂ ಕೇಳಿದ ರಾಜನು ಇದೇನೆಂದು ವಿಚಾರಿಸುತ್ತಾ ಲೀಲೆಯ ಮುಖದಿಂ ತನ್ನ ವೃತ್ತಾಂತವೆಲ್ಲವನ್ನು ತಿಳಿದು ಅದಂ ಮಂತ್ರಿ ಮೊದಲಾದವರಿಗೆ ನಿರೂಪಿಸುತ್ತಾ ಅಮಂಗಳ ಪರಿಹಾರಾರ್ಥವಾಗಿ ಪುನಃ ಪಟ್ಟಾಭಿಷೇಕವಂ ಮಾಡಿಸಿಕೊಂಡು ಶ್ರೀಭೂದೇವಿಗಳೊಡನೆ ನಾರಾಯಣನಂತೆ ಆ ಲೀಲೆಯರೊಡನೆ ವಿಹರಿಸುತ್ತಾ ಎಂಭತ್ತು ಸಾವಿರ ವರ್ಷಗಳು ಜೀವನ್ಮುಕ್ತಸ್ಥಿತಿಯಿಂ ರಾಜ್ಯಭಾರವಂ ಮಾಡುತ್ತಿದ್ದನೆಂದು ವಸಿಷ್ಠನು ಹೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ

ತ್ತಿಪ್ರಕರಣದೊಳ್ ಪದ್ಮರಾಜ ಪುನರಭ್ಯುದಯ ನಿರೂಪಣವೆಂಬ ಐದನೇ ತರಂಗಕ್ಕೆ ಮಂಗಳಮಹಾ.



## ೬ನೇ ತರಂಗ ಪ್ರಾರಂಭ.

### ಪದ್ಮರಾಜ ಸರಸ್ವತೀಪ್ರಾರ್ಥನ ಪುನಃ ಪಟ್ಟಾಭಿಷೇಕ ಪ್ರಾರಂಭಃ.



ಬಳಿಕ ವಸಿಷ್ಠನು ಶ್ರೀರಾಮಚಂದ್ರನ ಕುರಿತು ಇಂತೆಂದನು. ಎಲೈ ರಾಮಭದ್ರನೇ! ದೃಶ್ಯಭ್ರಾಂತಿಯು ಹೋಗಲೋಸುಗ ನಿನಗೆ ಈ ಉಪಾಖ್ಯಾನವಂ ಪೇಳಿದೆನು ; ಇದನ್ನು ನೀನು ಚನ್ನಾಗಿ ಭಾವಿಸಿ, ಜಗತ್ತು ಸತ್ಯವೆಂಬ ಬುದ್ಧಿಯಂ ಬಿಡುವನಾಗು. ಇದ್ದದ್ದನ್ನು ಹೋಗಲಾಡಿಸುವದಕ್ಕೆ ಪ್ರಯಾಸವಲ್ಲದೆ ಇಲ್ಲದ್ದನ್ನು ಹೋಗಲಾಡಿಸುವದಕ್ಕೆ ಪ್ರಯಾಸವಿಲ್ಲವಾದ್ದರಿಂದ, ಇಲ್ಲದ ಜಗತ್ತಿನ ಸತ್ಯವಂ ಪಿಡಿದು ಯಾಕೆ ವ್ಯಥೆಪಡುತ್ತೀಯೋ, * ಜೀವನ ಭೋಗಾರ್ಥವಾಗಿ ಜ್ಞಾನಸ್ವರೂಪನಾದ ಬ್ರಹ್ಮನು ಪರಬ್ರಹ್ಮಪ್ರಕಾಶವನ್ನೇ ಜಗವಾಗಿ ಕಲ್ಪಿಸಿರುವನು. ಪೃಥಿವ್ಯಾದಿಗಳೊಂದೂ ಇಲ್ಲದ ಸರ್ಗಾದಿಯಲ್ಲೇ ಹೀಗೆ ಕಲ್ಪನೆಯಾದ್ದರಿಂದಲೂ, ಕಲ್ಪಿತವಾದ್ದೆಲ್ಲವೂ ಸುಳ್ಳಾದ್ದರಿಂದಲೂ, ಬ್ರಹ್ಮ ಜಗತ್ತುಗಳಿಗೆ ಅಭೇದವು ಸಿದ್ಧವಾಗಿರುವದು. ಇಲ್ಲಿ ಪದಾರ್ಥಗಳು ಐಂದ್ರಜಾಲಿಕದಂತೆ ಮಾಯಿಕವಾದ್ದರಿಂದಲೂ, ಮಾಯೆಯೆಂತಲೂ, ಮಾಯಾಮಯವೆಂತಲೂ, ಬೇರೆಪದಾರ್ಥವಿಲ್ಲದ್ದರಿಂದಲೂ ಸರ್ವವೂ ಸುಳ್ಳೆಂತಲೇ ತಿಳಿಯಬೇಕಾಗುತ್ತೆ. ಬಿಸಲಿನಲ್ಲಿ ತೋರೆಯಂತೆಯೂ, ಶುಕ್ತಿಯಲ್ಲಿ ರಜತದಂತೆಯೂ, ಕಲ್ಪಿತವಾದ ಈ ಜಗತ್ತಿಗೆ ಸ್ವತಃ ಸತ್ಯವು ಯಾವದೊ ? ಅದರ ವಾಸನೆ ಎಂಥಾದ್ದೋ ? ಅದರ ಅಪೇಕ್ಷೆಯಿಂದೇನೋ ? ಅದರಲ್ಲಿ ಪ್ರವರ್ತಿಸುವ ನಿಯತಿ ಎಂಥಾದ್ದೋ? ಇಲ್ಲಿ ಹೀಗೆ ಆಗತಕ್ಕದ್ದೆಂಬ ನಿಯಮವೆಂಥಾದ್ದೊ? ನೀನೇ ಆಲೋಚಿಸಬಹುದು. ಇದು ಭಾವನಾದಾರ್ಢ್ಯವಿದ್ದಂತೆ ಫಲಕಾರಿಯಾಗುವದ್ದರಿಂದ ತಿಳಿದಂಥಾವರು ಇದನ್ನು ಬ್ರಹ್ಮಾಭಿನ್ನವೆಂದು ನಿಶ್ಚಯಿಸಿ, ಆಕಾಶದಂತೆ ನಿರ್ಲೇಪನಾಗಿರುವರು. ಎಂದು ವಸಿಷ್ಠನು ಪೇಳುತ್ತಿರುವಲ್ಲಿ, ಎಲೈ ಗುರುವೆ ! ದಾವಾಗ್ನಿಯಿಂದಗ್ಧವಾದ ಕಾಡಿಗೆ ಪುನಸ್ಸಂಜೀವಕವಾದ ಚಂದ್ರನ ಕಳೆಯಂತೆ ಭವಭ್ರಾಂತಿಯಿಂ ದುಃಖಪಡುವರಿಗೆ ಆನಂದಪ್ರದವಾದ ಈ ಜ್ಞಾನದೃಷ್ಟಿಯು ನನಗೆ ತೋರಿಸಲ್ಪಟ್ಟದ್ದರಿಂದ, ಬ್ರಹ್ಮಾನಂದಸಮುದ್ರದಲ್ಲಿ ಕ್ರೀಡಿ

* ಜೀವಾತ್ಮನ.

ಸುವನಂತೆ ಪರವಶನಾಗಿರುವೆನು. ಶ್ರುತಿರಸಾಯನವಾದ ನಿನ್ನ ಮಾತುಗಳಂ ಶ್ರುತಿಗಳಿಂ ಕುಡಿಯುವ ನನಿಗೆ ತೃಪ್ತಿಯಾಗುವದಿಲ್ಲವಾದ್ದರಿಂದ, ಈ ನನ್ನ ಸಂದೇಹವನ್ನು ಪರಿಹರಿಸುವನಾಗು. ದೇವತೆಗಳ ಒಂದು ದಿವಸವೇ ಮನುಷ್ಯರಿಗೆ ವರ್ಷವೆಂತಲೂ, ಅದೇ ಕ್ಷುದ್ರರಿಗೆ ಅನೇಕ ವರ್ಷಗಳೆಂತಲೂ, ಜಾತಿಭೇದದಿಂ ಪೇಳುವಾಥಾದ್ದು ಯುಕ್ತವಾಗುವದು. ಒಂದು ಮನುಷ್ಯಜಾತಿಯಲ್ಲೇ ಒಂದುಕಡೆಯಲ್ಲಿ ಎಂಟುದಿವಸವು, ಮತ್ತೊಂದು ಕಡೆಯಲ್ಲಿ ತಿಂಗಳೂ, ಇನ್ನೊಂದೆಡೆಯಲ್ಲಿ ಅನೇಕ ವರ್ಷಗಳಾದನೆಂಬುವದು ಅತ್ಯಾಶ್ಚರ್ಯವಾಗಿಧೆ ಎಂದು ಶ್ರೀರಾಮಚಂದ್ರನು ಕೇಳಲು ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ ! ದೇಶಕಾಲ ವಸ್ತುವೈಚಿತ್ರ್ಯಗಳಿಗೆ ಮನೋವಿಲಾಸವೇ ಕಾರಣವಲ್ಲದೆ ಜಾತಿಕಾರಣವಾಗಲಾರದು. ಚಿದ್ವಸ್ತುವನ್ನು ಯಾವನು ಹ್ಯಾಗೆ ಭಾವಿಸುವನೋ ಅವನಿಗೆ ಹಾಗೆ ಆಗುವದಾದ್ದರಿಂದ, ಚಿದ್ವಸ್ತುವಿಗೆ ಭಿನ್ನವಾದ ದೇಶ ಕಾಲವಸ್ತುಗಳೂ ಕೂಡ ಭಾವನಾನುಸಾರವಾಗಿ ಫಲಕಾರಿಗಳಾಗುವವು. ಆದ್ದರಿಂದಲೇ ದೃಢವಾಗಿ ನಂಬಲ್ಪಟ್ಟ ಶತೃವೂ ಕೂಡ ಮಿತ್ರನಾಗುವನು. ಸಾಧಿಸಿದ ವಿಷವು ಅಮೃತವಾಗುವದು. ಹಿತಭಾವನೆ ಇಲ್ಲದವನಿಗೆ ಶರ್ಕರೆಯೂಕೂಡ ಕಹಿಯಾಗುವದು. ಮಿತ್ರನೂಕೂಡ ಶತ್ರುವಾಗುವನು. ವಿರಹಿತನಿಗೆ ಚಂದ್ರಕಾಂತಿಯು ಅಗ್ನಿಜ್ವಾಲೆಯಾಗುವದು. ದುಃಖಿತನಿಗೆ ಉದ್ಯಾನವೂ ಕೂಡ ಪಾಳಾಗಿ ಕಾಣುವದು. ಸ್ತ್ರೀಸಮಾಗಮದಲ್ಲಿ ಮರುಭೂಮಿಯೂ ಕೂಡ ನಂದನೋದ್ಯಾನದಂತೆ ಪ್ರಕಾಶಿಸುವದು. ವಿಯೋಗಿಗೆ ನಿಮಿಷನೇ ಕಲ್ಪಪ್ರಾಯವಾಗುವದು. ಅವಿಯೋಗಿಯಾಗಿ ವಿಹರಿಸುವನಿಗೆ ಕಲ್ಪವೂ ಕೂಡ ನಿಮಿಷಪ್ರಾಯವಾಗುವದು. ಸ್ವಪ್ನದಲ್ಲಿ ನೂರಾರು ಯೋಜನವೂ ಕೂಡ ಅತಿಸ್ವಲ್ಪವಾಗುವದು. ಹೋಗಲಪೇಕ್ಷೆ ಇಲ್ಲದವನಿಗೆ ಸ್ವಲ್ಪಮಾರ್ಗವು ಅತಿದೂರವಾಗುವದು. ಹರಿಶ್ಚಂದ್ರನಿಗೆ ಒಂದು ರಾತ್ರಿಯೇ ಹನ್ನೆರಡುವರ್ಷವಾದುದು. ಲವಣರಾಜನಿಗೆ ಎರಡುಮುಹೂರ್ತವೇ ನೂರುವರ್ಷವಾಯಿತು. ಮತ್ತು ಸ್ವಪ್ನದಲ್ಲಿ ಕಲ್ಪವು ಕ್ಷಣವು; ಕ್ಷಣವು ಕಲ್ಪವೂ ಸಹ ಆಗುವದು. ಚಿನ್ಮಾತ್ರವಾದ ಬ್ರಹ್ಮವು ಕೇವಲವಾಗಿ ಪ್ರಕಾಶಸ್ವಭಾವವಾದ್ದರಿಂದ, ಸ್ವೇಚ್ಛೆಯಿಂದಲೇ ಪ್ರಕಾಶಿಸುವದು. ಪ್ರಕಾಶಿಸಿದ್ದೇ ಬಹು ಕಾಲಾಭ್ಯಾಸದಿಂ ಫಲಕಾರಿಯಾಗಿ ಅನುಭವಗೋಚರವಾಗುವದು. ಇದರಿಂದಲೇ ಕಾಲದೇಶ ವ್ಯವಸ್ಥೆಗಳು ಉಂಟಾಗಿರುವವು. ಮನುವಿನ ಪುರುಷಾಯುಸ್ಸೇ ಬ್ರಹ್ಮನಿಗೆ ಮುಹೂರ್ತವು, ಬ್ರಹ್ಮನ ಪುರುಷಾಯುಸ್ಸೇ ವಿಷ್ಣುವಿಗೆ ಹಗಲು,

ವಿಷ್ಣುವಿನ ಪುರುಷಾಯುಸ್ಸೇ ರುದ್ರನಿಗೆ ಹಗಲು, ಧ್ಯಾನಬಲದಿಂ ನಿರ್ವಿಕಲ್ಪ ಚಿನ್ಮಾತ್ರನ ಭಾವನಾಗಿ ಚಿತ್ತಹೀನನಾಗಿರುವನಿಗೆ ಕಾಲದೇಶಗಳ ಪ್ರಸ್ತಾವವೇ ಇಲ್ಲದಿರುವದು. ಎಂದಿಗೂ ತಿಳಿಯದ ಶಾಸ್ತ್ರಗಳೂ ಕೂಡ ಅಭ್ಯಾಸಬಲದಿಸರಳವಾಗುವವು. ಇದೇಪ್ರಕಾರ ಮನದ ಕಲ್ಪನೆಯೇ ಬಾಲಕರಿಗೆ ತಮಃ ಪಿಶಾಚದಂತೆ ಫಲಕಾರಿಯಾಗುವದು. ದೊಡ್ಡವರಿಗೂ ಕೂಡ ವಿನೋದಾರ್ಥವಾಗಿ ಕಲ್ಪಿತವಾದ ಉನ್ಮಾದವು ಪಿಶಾಚಾವೇಶವೂ ಸಹ ಅಭ್ಯಾಸಬಲದಿಂ ಯಥಾರ್ಥವಾಗುವದು. ವಾಸನಾಮಾತ್ರದಿಂ ಸ್ವಪ್ನದಲ್ಲಿ ಕಂಡ ಕಾಮಿನಿಯು ಜಾಗ್ರದಂತೆಯೇ ಭೋಗ್ಯವಾಗುವಳು. ಇದಕ್ಕೆಲ್ಲವು ಅಭ್ಯಾಸವೇ ಕಾರಣವಲ್ಲದೆ ಮತ್ತೊಂದಿಲ್ಲ. ನಾವೆಯಲ್ಲಿ ತಿರಗುವನಿಗೆ ಗಗನಭ್ರಮೆಯಂತೆ ವಾಸನೆಯಿಂದುಂಟಾಗಿರುವ ಈ ಜಗದ್ಭ್ರಮೆಯಲ್ಲಿ ಅವ್ಯವಸ್ಥೆಯೇ ವ್ಯವಸ್ಥೆಯಲ್ಲದೆ ಮತ್ತೊಂದಿಲ್ಲವೆಂದು ನಿಶ್ಚಯಿಸುವನಾಗು.

ಎಲೈ ರಾಮಭದ್ರನೇ ! ಗಗನದಲ್ಲಿ ನೂರು ಮೊಳದುದ್ದವಾದ ನೆರಳಿನಬೊಂಬೆ ಕುಣಿಯುವಂತೆ ಚಿನ್ಮಾತ್ರವಾದ ಆಕಾಶದಲ್ಲಿ ಉಂಟಾಗಿರುವ ಸುಳ್ಳಾದ ಮನಸ್ಸಿನ ಕಲ್ಪನೆಯಿಂದ ಈ ಪ್ರಪಂಚವು ಉದಯಿಸಿರುವದು. ಜಾಗ್ರತ್ಸ್ವಪ್ನದಂತೆ ಅನುಭವಗೋಚರವಾಗುತ್ತಿರುವದು. ಈ ಕಲ್ಪನೆ ಎಲ್ಲವು ಚಿತ್ಪ್ರಕಾಶವಾದ್ದರಿಂದಲೂ, ಆ ಪ್ರಕಾಶವು ಚಿತ್ತಿಗೆ ಸ್ವಾಭಾವಿಕವಾದ್ದರಿಂದಲೂ, ಮರದೊಳಗೆ ಬೊಂಬೆ ಇರುವಂತೆ ಬ್ರಹ್ಮದಲ್ಲಿಯೇ ಈ ಪ್ರಪಂಚವಿಧೆ ಎಂದು ತಿಳಿಯತಕ್ಕದ್ದು. ತೇಜದಲ್ಲಿ ತಿಮಿರವಿರತಕ್ಕದ್ದು ಸರಿಯಾದ್ದಲ್ಲವಾದ್ದರಿಂದ ಕಾರ್ಯಕಾರಣ ಭಾವವನ್ನೂ ಆಧಾರಾಧೇಯ ಭಾವವನ್ನೂ ಸಹ ಚನ್ನಾಗಿ ಆಲೋಚಿಸಿ ಸರ್ವವು ಬ್ರಹ್ಮವೆಂತಲೇ ಜ್ಞಾನಿಗಳು ಪೇಳುವರು.

ಎಲೈ ರಘುಕುಲೋತ್ತಮನೇ ! ಸಾಧಾರಣವಾದ ಘಾಳಿಗಳು ಮಹಾ ವಾತವನ್ನನುಸರಿಸುವಂತೆ ಸಾಮಾನ್ಯವಾದ ಬುದ್ಧಿಗಳು ಮುಖ್ಯವಾದ ಬುದ್ಧಿಯನ್ನನುಸರಿಸುವರಾದ್ದರಿಂದ ವಿದೂರಥನಿಗೆ ತೋರಿದಂತೆಯೇ ಅವನ ಪುರದಲ್ಲಿದ್ದ ಮಂತ್ರಿಗಳಿಗೂ ಇತರ ಜನರಿಗೂ ಸಹ ವಿದೂರಥನ ಕುಲಕ್ರಮವು ಏಕರೀತಿಯಾಗಿ ಪ್ರಕಾಶಿಸಿತು. ಯಾವಯಾವ ಸರ್ಗದಲ್ಲಿ ಎಷ್ಟೆಷ್ಟು ಪ್ರಾಣಿಗಳು ಪುಟ್ಟುವರೋ ಅವರ ಬುದ್ಧಿಗಳು ಕನ್ನಡಿಗಳಂತೆ ಪರಸ್ಪರಭಾವಗಳಂ ಪಿಡಿಯುವವು. ಆದ್ದರಿಂದ ಪ್ರಜೆಗಳು ರಾಜರೀತಿಯನ್ನನುಸರಿಸುವಂತೆ ಸಕಲರು ಸ್ರಷ್ಟೃವಿನ ನಿಯಮವನ್ನನುಸರಿಸುವರು. ಜ್ಞಾನಿಯ ಬುದ್ಧಿಮಾತ್ರವು ಬ್ರಹ್ಮಾಭ್ಯಾಸಬಲದಿಂ ಮೋಕ್ಷಾಂತವಾಗಿ ಏಕರೀತಿಯಾಗಿಯೇ ಇರುವದು. ಹೀಗೆ

ಜೀವಕೂಟದೊಳ್ ಸಮವಿಷಮವಾದ ಸೃಷ್ಟಿ ಸಹಸ್ರಗಳಾಗುತ್ತಿರುವಲ್ಲಿ ಬಬ್ಬನಿಂದೊಂದು ಪ್ರಾಪ್ತವಾದ್ದೂ ಇಲ್ಲ, ಬಿತ್ತಲ್ಪಟ್ಟದ್ದೂ ಇಲ್ಲ. ಆದ್ದರಿಂದ ಜಾಗ್ರತ್ಸ್ವಪ್ನದಂತೆ ಅನುಭವಿಸಲ್ಪಟ್ಟಾಗ್ಯೂ ಈ ಸೃಷ್ಟಿಗಳೆಲ್ಲವೂ ಸುಳ್ಳೆಂತಲೇ ತಿಳಿಯುತಕ್ಕದ್ದು. ಪತ್ರಫಲ ಪುಷ್ಪಾದಿರೂಪದಿಂ ವೃಕ್ಷದಂತೆ ಈಪ್ರಕಾರವಾದ ನಾನಾರೂಪದಿಂ ಪ್ರಕಾಶಿಸುತ್ತಿರುವ ಪರಮಾತ್ಮನಲ್ಲಿ ನಾನು ನೀನೆಂಬುವದೇ ಮೊದಲಾದ ಪ್ರಮಾತೃಪ್ರಮಾಣ ಪ್ರಮೇಯಗಳು ಯಾವವೂ ಇಲ್ಲದ್ದರಿಂದ ದ್ವೈತಾದ್ವೈತ ಸಂಕಲ್ಪವಿಕಲ್ಪಗಳು ಹ್ಯಾಗೆ ಇರುವವೋ ನೀನೇ ಚನ್ನಾಗಿ ಆಲೋಚಿಸುವನಾಗು. ಚಕ್ಷುಸ್ಸಿನ ವಿಕಾರದಿಂದಾಕಾಶದ ಶೂನ್ಯತ್ವವೇ ಮುಕ್ತಾಫಲಶ್ರೇಣಿಯ ಆಕಾರದಿಂ ಕಾಣುವಂತೆ ಅವಿದ್ಯಾಕಾಮಕರ್ಮವಾಸನಾತ್ಮಕವಾದ ಮನಸ್ಸಿನ ವಿಕಾರದಿಂದಹಂಕಾರ ಮಮಕಾರಾತ್ಮಕವಾದ ಜಗದ್ರೂಪದಿಂ ಚಿನ್ಮಾತ್ರವಾದ ಬ್ರಹ್ಮದ ಪ್ರಕಾಶನೇ ಕಾಣುತ್ತಿರುವದೆಂದು ನಿಶ್ಚಯಿಸುವನಾಗು. ಎಂದು ಪೇಳುತ್ತಿರುವಲ್ಲಿ ಎಲೈ ಗುರುವೇ ಚಕ್ಷುಸ್ಸಿನ ವಿಕಾರವು ಆಕಾಶದ ಶೂನ್ಯತ್ವವೂ ಸಹ ಶೇರುವಲ್ಲಿಯೇ ಮೌಕ್ತಿಕಾದ್ಯಾಕಾರಗಳು ಕಾಣುವವು. ಅದೇಪ್ರಕಾರ ಮನಸ್ಸಿನ ವಿಕಾರವು ಬ್ರಹ್ಮಪ್ರಕಾಶವೂ ಸಹ ಶೇರುವಲ್ಲಿ ಜಗತ್ತು ಗೋಚರವಾಗುವದು. ಆದರೆ ನಿರ್ವಿಕಲ್ಪವಾದ ಬ್ರಹ್ಮದಲ್ಲಿ ಮನೋವಿಕಾರವು ಒಳಗೆ ವ್ಯಾಪಿಸಿ ನೆಲಸದೇ ಇಂಥಾ ಮಹತ್ತಾದ ಜಗತ್ತು ಹ್ಯಾಗೆ ಉಂಟಾಗುವದೋ ನಿರೂಪಿಸಬೇಕೆಂದು ಶ್ರೀರಾಮನು ಪ್ರಶ್ನೆಯಂ ಮಾಡಲು ಮರಳಿ ವಸಿಷ್ಠನಿಂತೆಂದನು.

ಎಲೈ ಮಹಾಮತಿಯೇ ! ಆಕಾಶವೃಷ್ಟಿಗಳಂತೆ ಬ್ರಹ್ಮಜೀವಗಳೆಂಬ ಎರಡು ಪದಾರ್ಥವಿದ್ದರೆ ನೀನು ಕೇಳಿದ ಮಾತು ಸರಿಯಾಗಬಹುದು. ದೃಷ್ಟಾಂತವಂ ಪೇಳದೇ ತಿಳಿಯುವದಿಲ್ಲವಾದ್ದರಿಂದ ಬ್ರಹ್ಮಜ್ಞಾನವಿಷಯದಲ್ಲಿ ದೃಷ್ಟಾಂತಗಳು ಪೇಳಲ್ಪಡುವವು. *ಉಪಾದಾನವು ನಿಮಿತ್ತವೂ ಸಹ ತಾನೇ ಆದ್ದರಿಂದ ಅಸಮಾನವಾದ ಬ್ರಹ್ಮಕ್ಕೆ ದೃಷ್ಟಾಂತಗಳಲ್ಲಿ ಏಕದೇಶ ಸಾಮ್ಯವು ಸಂಭವಿಸುವದಲ್ಲದೆ ಪೂರ್ಣೋಪಮಾನವು ಘಟಿಸಲಾರದು. ಆದ್ದರಿಂದೇಕಾಂಶ ಸಾಮ್ಯವಂ ಪಿಡಿಯುತ್ತಾ ತಿಳಿಯತಕ್ಕ ಮುಖ್ಯಾರ್ಥವಂ ತಿಳಿದುಕೊಳ್ಳುವನಾಗು. ಚಿನ್ಮಾತ್ರಸ್ವರೂಪವಾದ ಬ್ರಹ್ಮಕ್ಕೆ ಶಬ್ದಾರ್ಥದೃಷ್ಟಿಗಳೇ ಪ್ರಕಾಶವೆನಿಸುವವು. ಜಲದಲ್ಲಿ ತರಂಗದಂತೆ ಈ ಪ್ರಕಾಶವು ಅಭಿನ್ನವಾಗಿದ್ದಾಗ್ಯೂ ಮೇಲೆ ಕಾಣು

---

*ಉಪಾದಾನ=ಪ್ರಕೃತಿರೂಪಕಾರಣ (Material cause.)
ನಿಮಿತ್ತ=ನಿಮಿತ್ತಕಾರಣ (instrumental cause.)

ತ್ತಿರುವದಲ್ಲದೆ ಒಳಗೆ ಇಲ್ಲವಾದ್ದರಿಂದ ಸರ್ವದಲ್ಲಿ ಬ್ರಹ್ಮವು ಬ್ರಹ್ಮದಲ್ಲಿ ಸರ್ವವೂ ಸಹ ಅಂಗಾಂಗೀಭಾವದಿಂದಿಲ್ಲವೆಂತಲೂ, ಬ್ರಹ್ಮವೇ ಸರ್ವರೂಪದಿಂ ಪ್ರಕಾಶಿಸುವದೆಂತಲೂ, ಹೇಳುವರು. ಆದ್ದರಿಂದ ಆ ಬ್ರಹ್ಮವು ಸ್ವಾಭಿನ್ನವಾದ ಪ್ರಪಂಚವಂ ಭಾವವೈಚಿತ್ರ್ಯದಿಂ ನಾನಾಪ್ರಕಾರವಾಗಿ ಭಾವಿಸುತ್ತಿರುವದೆಂದು ತಿಳಿಯುವನಾಗು. ಬ್ರಹ್ಮವು ನಿರ್ವಿಕಲ್ಪವಾದ್ದರಿಂದಲೂ, ಪ್ರಪಂಚವು ಸವಿಕಲ್ಪವಾದ್ದರಿಂದಲೂ, ಬ್ರಹ್ಮದ ರೂಪಾಂತರವೇ ಪ್ರಪಂಚವೆಂದು ನಿಶ್ಚಯಿಸುವ ನಾನು ಕೇವಲ ಜ್ಞಾನಸ್ವರೂಪವಾದ ಬ್ರಹ್ಮವೇ ಅಭಿನ್ನವಾದ ಜ್ಞಾನಶಕ್ತಿಯಂ ಸ್ವೇಚ್ಛೆಯಿಂ ಭಿನ್ನವಾಗಿ ಭಾವಿಸಿದ್ದರಿಂದ ಆ ಜ್ಞಾನಶಕ್ತಿಯೇ ಮೂಲಾಜ್ಞಾನರೂಪವಾದ ಮಾಯೆಯೆನಿಸಿಕೊಂಡಿತು. ಈ ಮಾಯೆಯಿಂ ಕೂಡಿದ ಬ್ರಹ್ಮವೇ ಈಶ್ವರನೆನಿಸಿಕೊಂಡಿತು. ಈಶ್ವರನು ಬಹುರೂಪನಾಗಿ ಕ್ರೀಡಿಸಬೇಕೆಂದಿಚ್ಛೈಸುವಲ್ಲಿ ಸತ್ವಪ್ರಧಾನವಾದ ಈ ಮಾಯೆಯು ತಮಃಪ್ರಧಾನವಾದ ಅವಿದ್ಯೆಯೆನಿಸಿಕೊಂಡಿತು. ಈ ಅವಿದ್ಯೆಯಿಂ ಕೂಡಿದ ಈಶ್ವರನೆ ಜೀವನೆನಿಸಿಕೊಳ್ಳುವನು. ಈ ಜೀವನು ಬಹುರೂಪನಾಗಬೇಕೆಂದು ಸಂಕಲ್ಪಿಸುವಲ್ಲಿ ಆ ಸಂಕಲ್ಪವೇ ಭಾವನಾತ್ಮಕವಾದ ಮನವೆನಿಸಿಕೊಂಡಿತು. ಅದರ ಕಲ್ಪನೆಯಿಂ ಶೂನ್ಯಸ್ವರೂಪವಾದ ಆಕಾಶ ಪುಟ್ಟಾಯಿತು. ಅದರಿಂ ಚಲನಾತ್ಮಕವಾದ ವಾಯುವಾದುದು. ರೂಪರಹಿತವಾದ ವಾಯುವಿನಿಂದ ಪ್ರಕಾಶರೂಪವಾದ ಅಗ್ನಿಯಿಂದುಂಟಾದುದು. ಉಷ್ಣಸ್ವಭಾವವಾದ ಆ ತೇಜದಿಂ ದ್ರವರೂಪವಾದ ಜಲವುಂಟಾಯಿತು. ಅದರಿಂ ಕಠಿನವಾದ ಭೂಮಿಯುಂಟಾಯಿತು, ಈ ಪಂಚಭೂತಗಳಿಂದಲೇ ಪ್ರಪಂಚವೆಲ್ಲವು ಪುಟ್ಟಿರುವದು. ಈಪ್ರಕಾರ ಮೊದಲಿಂದ ಕೊನೆಗೂ, ಗುಣರೂಪಭೇದದಿಂದಲೇ ಪದಾರ್ಥಗಳು ಪುಟ್ಟಿರುವಲ್ಲಿ ಯಾವ ಕಾರ್ಯದ ಗುಣವು ಯಾವ ಕಾರಣವಲ್ಲಿದೆಯೆಂದು ಹೇಳತಕ್ಕದ್ದು ? ನಿತ್ಯಾನಿತ್ಯವಿವೇಕದಿಂ ಸತ್ವವಂ ವಿಚಾರಿಸುವಲ್ಲಿ, ಬ್ರಹ್ಮದ ಸತ್ವ ಒಂದೇ ಸರ್ವಕ್ಕು ಅವಲಂಬನವಾಗಿರುವದ್ದರಿಂದ ಸರ್ವವು ಬ್ರಹ್ಮವೆಂತಲೆ ತಿಳಿದವರು ಹೇಳುವರು. ಆದ್ಯಂತಗಳಲ್ಲಿಲ್ಲದ ದೃಶ್ಯವು ಮಧ್ಯದಲ್ಲಿ ಹ್ಯಾಗೆ ಕಾಣಬರುವದೋ ಚನ್ನಾಗಿ ಯೋಚಿಸುವನಾಗು ? ಕೊಳ್ಳಿಯು ತಿರುಗುವಲ್ಲಿ ಜ್ವಾಲಾಚಕ್ರವಾಗಿ ಕಾಣುವದು ಕೊಳ್ಳಿಯಲ್ಲದೆ ಮತ್ತೊಂದಲ್ಲ. ಅದರಂತೆ ಸ್ವೇಚ್ಛೆಯಿಂ ಪ್ರಕಾಶಿಸುವ ಬ್ರಹ್ಮವೇ ಪ್ರಪಂಚರೂಪದಿಂ ಕಾಣುತಲಿಧೆ ಎಂದು ನಿಶ್ಚಯಿಸುವನಾಗು ? ಸಮಸ್ತವಾದ ಈ ಪ್ರಪಂಚವು ಚಿದಾತ್ಮಕವಾದ್ದರಿಂದ, ಯಾನಾವನು ಹ್ಯಾಗೆ ಹ್ಯಾಗೆ ಭಾವಿಸುವನೋ ಅವನು ದೃಢಭಾವನೆಯಿಂದ ಹಾಗೆ ಅನುಭವಿಸುವನು.

ವಾಯುವಿನಲ್ಲಿ ಚಲನದಂತೆ ಸ್ವಾಭಾವಿಕವಾಗಿಯೇ ಬ್ರಹ್ಮದಲ್ಲಿ ಈ ಸರ್ಗವಿರುವದು. ಹೀಗೆ ಬ್ರಹ್ಮಕ್ಕೆ ಅಭಿನ್ನವಾದ್ದರಿಂದಲೇ ಸತ್ಯಾಸತ್ಯಾತ್ಮಕವಾದ ಈ ಪ್ರಪಂಚವೆಲ್ಲವೂ ಕೂಡ * ಅಕಾರಣಕವೆನಿಸುವದು, ಹೀಗೆ ಇದು ಅಕಾರಣಕವಾದ್ದರಿಂದ ಉತ್ಪತ್ತಿರಹಿತವಾದಾಗ್ಯೂ, ಮನಸ್ಸಿನ ಸ್ಥಿತಿಯಿಂದ ಹುಟ್ಟುವಂತೆ ತೋರುತ್ತಿರುವದು. ಜ್ಞಾನಯೋಗ ದೃಢಾಭ್ಯಾಸ ಲಕ್ಷಣವಾದ ಪುರುಷ ಪ್ರಯತ್ನದಿಂ ಮನೋನಾಶವಾಗಲು, ಪುನಃ ಪುಟ್ಟುವದಿಲ್ಲವೆಂತಲೂ, ಸರ್ವವೂ ಬ್ರಹ್ಮವೆಂತಲೂ ಗೋಚರವಾಗುವದು. ಮನವಿರುವಪರ್ಯಂತವೂ ಪ್ರತಿಜೀವರುಗಳಲ್ಲೂ ಅನೇಕಪ್ರಕಾರವಾಗಿ ಪ್ರಪಂಚಗಳು ಪುಟ್ಟುತಲಿರುವವು. ಜಲದಲ್ಲಿ ತರಂಗಗಳಂತೆ ಆ ಜೀವರುಗಳಲ್ಲಿ ಜಾಗ್ರದಾವಸ್ಥೆಗಳು ಸಿದ್ಧವಾಗಿರುವವು. ಯಾವಾಗ ಭೋಗಗಳಲ್ಲಿ ವಿರಕ್ತಿಯಿಂದ ವಿಚಾರಪರನಾಗಿ ಸ್ವರೂಪವಂ ತಿಳವನೋ ಆಗ ಅವನು ಪೂರ್ಣಕಾಮನಾಗುವನಾದ್ದರಿಂದ, ಅವನ ಕಾಮಗಳು ಅಣಗಿಪೋಗುವವು. ಪರಮಾಣುವಿಗೆ ಲಕ್ಷಾಂಶವಾದ ಜೀವನ ಕಲ್ಪನೆಯಲ್ಲೂ, ನಿಮೇಷಕ್ಕೆ ಲಕ್ಷಾಂಶವಾದ ಕಾಲದ ಕಲ್ಪನೆಯಲ್ಲೂ, ಬ್ರಹ್ಮಾಂಡ ಸಹಸ್ರಗಳೂ ಕಲ್ಪಸಹಸ್ರಗಳೂ ಸಹ ಉಂಟಾಗುವವು, ಅವುಗಳ ಒಳಗೊಳಗೂ ಚಿದಂಶಗಳಲ್ಲಿ ಇದೇಪ್ರಕಾರವುಂಟಾಗುವವು. ಕಥೆಗಳಲ್ಲಿ ಕಾಣುವ ಪುರಗಿರಿಜನಗಳಂತೆ ಈ ಪ್ರಪಂಚಗಳು ಭ್ರಾಂತಿಯಳಿಯುವವರಿಗೆ ಪುಟ್ಟುತಲೆ ಇರುವವು ಎಂದು ಪೇಳುತ್ತಿರುವಲ್ಲಿ, ಎಲೈ ಗುರುವೇ! ತತ್ವಜ್ಞಾನದಿಂ ಬ್ರಹ್ಮಾತ್ಮೈಕ್ಯಜ್ಞಾನವು ಅನುಭವಸಿದ್ಧವಾದ ಬಳಿಕ ದೈವವಶವಾಗಿರುವಂತೆ ದೇಹವಿರುವದಕ್ಕೆ ಕಾರಣವೇನು? ಆಗ ದೈವವು ಹ್ಯಾಗಿರುವದೆಂದು ಶ್ರೀರಾಮನು ಕೇಳಲು ವಸಿಷ್ಠನಿಂತೆಂದನು. ಎಲೈ ಸುಮತಿಯೇ! ಆದಿಸರ್ಗದಲ್ಲಿ ಈಶ್ವರ ಸಂಕಲ್ಪರೂಪವಾದ ನಿಯತಿಯು ಸಿದ್ಧವಾಗಿರುವದಷ್ಟೆ! ಅದು ಮಹಾ ಸತ್ತೆಯಂತಲೂ, ಮಹಾಚಿತಿಯಂತಲೂ, ಮಹಾಶಕ್ತಿಯಂತಲೂ, ಮಹಾ ದೃಷ್ಟಿಯಂತಲೂ, ಮಹಾಕ್ರಿಯೆಯಂತಲೂ, ಮಹೋದ್ಭವೆಯಂತಲೂ, ಮಹಾಸ್ಪಂದೆಯಂತಲೂ, ಮಹಾತ್ಮೈಕತೆಯಂತಲೂ ಪ್ರಸಿದ್ಧವಾಗಿರುವದು. ಇದು ಹೀಗಿರತಕ್ಕದ್ದೆಂದು ಯಾವಾವದನ್ನು ಹ್ಯಾಗೆಹ್ಯಾಗೆ ನಿಯಮಿಸಿರುವದೋ ಅದೆಲ್ಲವು ಅದೇಪ್ರಕಾರ ನಡೆಯುವದು. ಪರಮಾರ್ಥತಃ ಇದು ಪರಮಾತ್ಮಸ್ವರೂಪವೇ ಆದ್ದರಿಂದ ಇದೇ ಸ್ವರ್ಗರೂಪದಿಂ ಪ್ರಕಾಶಿಸುವದೆಂದು ಪೇಳುವರು. ಸಕಲ ಕಾಲವ್ಯಾಪಿಯಾದ ದೈವವೆಂತಲೂ, ಸಕಲ ಪದಾರ್ಥವ್ಯಾಪಕವಾದ ಚಿತ್ತೆಂತಲೂ ಇದೇ ಪೇಳಲ್ಪಡುವದು.

* ದೃಷ್ಟಕಾರಣ ಶೂನ್ಯವಾಗಿರುವದು.

ಪ್ರಾಣಿಗಳ ಕರ್ಮಾನುಸಾರವಾಗಿ ಈಶ್ವರನಿಗೆ ಸಂಕಲ್ಪವುಂಟಾಗುವದ್ದರಿಂದ, ನಿಯತಿ ಪೌರುಷಗಳಿಗೆ ನಾಮಭೇದವಲ್ಲದೆ ವಸ್ತುಭೇದವಿಲ್ಲವೆಂದು ತಿಳಿಯತಕ್ಕದ್ದು. ಆದರಿಂದ ಈಶ್ವರಪ್ರಸಾದವುಂಟಾಗುವಂತೆ ಪುರುಷನು ಸನ್ಮಾರ್ಗದಿಂ ಪ್ರವರ್ತಿಸಬೇಕೆಂದು ಜ್ಞಾನಿಗಳು ಹೇಳುವರು. ನೀನು ಪ್ರಶ್ನೆಯಂ ಮಾಡಬೇಕೆಂತಲೂ, ನಾನು ಹೇಳಿದಂತೆ ನೀನು ನಡೆಯಬೇಕೆಂತಲೂ, ನಿಯತಿಯು ಬಲವಿರುವದ್ದರಿಂದಲೇ ಹೀಗೆ ನಡೆಯುವದೆಂದು ತಿಳಿಯುವನಾಗು, ಅದೃಷ್ಟವಿದ್ದಂತೆ ನಡೆಯುವದೆಂದು ಮೂರ್ಖನು ಸುಮ್ಮನಿರುವದಕ್ಕೂ, ಪ್ರಾಜ್ಞನು ದೈವವನ್ನೆಣಿಸದೆ ಪೌರುಷದಿಂ ಕಾರ್ಯಗಳಂ ಸಾಧಿಸುವದಕ್ಕೂ, ನಿಯತಿಯೇ ಕಾರಣವೆಂದು ನಿಶ್ಚಯಿಸತಕ್ಕದ್ದು. ಈ ನಿಯತಿಯನ್ನತಿಕ್ರಮಿಸುವದಕ್ಕೆ ಬ್ರಹ್ಮ ವಿಷ್ಣು, ರುದ್ರರೂಕೂಡ ಸಮರ್ಥರಾಗಲಾರರು. ಗಮನಾಗಮನಗಳಿಲ್ಲದ ಹೆಬ್ಬಾವಿಗೆ ದೈವದಿಂದಲೆ ಆಹಾರವು ಸಿದ್ಧವಾಗುತಿದ್ದಾಗ್ಯು ನುಂಗೋಣವೆಂಬ ಪುರುಷಪ್ರಯತ್ನದಿಂದಲೇ ಕ್ಷುತ್ಪರಿಹಾರವಾಗುವದು. ಅದು ಆಹಾರವಿಲ್ಲದಾಗ ಬದುಕಿರುವದಕ್ಕು ಕೂಡ ಪ್ರಾಣಾಪಾನಚಲನಾನುಕೂಲವಾದ ಸ್ಥಿತಿಯೇ ಕಾರಣವಾಗಿರುವದು. ಜ್ಞಾನಮಾರ್ಗದಿಂ ಚಿತ್ತ ವಿಶ್ರಾಂತಿಯಾಗುವಂತೆ ಪ್ರಾಣವಂ ತಡದು ಸಮಾಧಿಯಲ್ಲಿದ್ದಾಗ್ಯು, ಪ್ರಾಣಾದಿಗಳಂ ಮರತಾಗ್ಯು ಮುಕ್ತಿಯಾಗುವದು. ಅದೂ ಪೌರುಷವಲ್ಲದೆ ದೈವವಾಗಲಾರದು. ಎಲೈ ರಘುಪುಂಗವನೇ ! ಯಾವದು ಸಾರ್ವಕಾಲಿಕವೆಂತಲೂ, ಸರ್ವಸ್ವರೂಪವೆಂತಲೂ, ಸರ್ವಾಂತರ್ಯಾಮಿಯೆಂತಲೂ, ಸರ್ವವ್ಯಾಪಿಯೆಂತಲೂ, ಸರ್ವಸಾಕ್ಷಿಯೆಂತಲೂ, ಸರ್ವನಿಯಾಮಕವೆಂತಲೂ, ಬ್ರಹ್ಮವು ಪ್ರಸಿದ್ಧವಾಗಿರುವದೋ ಆ ಈ ಆತ್ಮನೇ ಸರ್ವಶಕ್ತಿಯಾದ್ದರಿಂದ ಒಂದೆಡೆಯಲ್ಲಿ ಜಡಶಕ್ತಿಯನ್ನು, ಮತ್ತೊಂದೆಡೆಯಲ್ಲಿ ಚಿಚ್ಛಕ್ತಿಯನ್ನು, ಇನ್ನೊಂದೆಡೆಯಲ್ಲಿ ಉಲ್ಲಾಸಶಕ್ತಿಯನ್ನು ಪ್ರಕಾಶಪಡಿಸುವನು. ಒಂದೊಂದೆಡೆಯಲ್ಲಿ ಏನು ಇಲ್ಲದಂತಿರುವನು, ಇವನು ಭಾವಿಸಿದಂತೆಯೇ ಸಮಸ್ತವೂ ನಡೆವದು. ಇವು ಶಕ್ತಿಗಳೆಂತಲೂ, ಇವನು ಶಕ್ತಿಮಾತನೆಂತಲೂ, ಮೂಢರ ವಿವೇಕಾರ್ಥವಾಗಿಯೇ ಭೇದವು ಕಲ್ಪಿತವಾಗಿರುವದು. ನಿಮಿತ್ತೋಪಾದಾನ ಕಾರಣಗಳಂ ಪಿಡಿದು ಇವನಿಂದ ಜಗವುಂಟಾಯಿತೆಂತಲೂ, ಇವನ ದೆಶೆಯಿಂದುಂಟಾಯಿತೆಂತಲೂ, ಪ್ರಾಜ್ಞರು ಹೇಳುವಲ್ಲಿ ತೋರುವ ಭೇದವು ಶಾಸ್ತ್ರವ್ಯವಹಾರ ಸಂಪ್ರದಾಯ ಸಿದ್ಧವಾದ್ದರಿಂದ, ಅದನ್ನು ಪರಮಾರ್ಥವೆಂದು ತಿಳಿಯಬೇಡ. ಭೇದವಿಲ್ಲದೆ ವಾಕ್ಕಿಗೆ ಪ್ರವೃತ್ತಿಯಾಗುವದಿಲ್ಲವಾದ್ದರಿಂದ, ಶಾಸ್ತ್ರಗಳು ಆಪ್ರಕಾರ ಪೊರಮಟ್ಟಿರುವವು. ಜಲವು ತರಂಗಾದಿ ರೂಪಗಳಂ ವಹಿಸು

ವಂತೆ ಬ್ರಹ್ಮವೇ ಸರ್ವಸ್ವರೂಪವಾಗಿರುವದೆಂದು ಪೇಳುತ್ತಿರುವಲ್ಲಿ, ಎಲೈ ಗುರುವೆ! ಹೀಗೆ ಅಭೇದವೆ ಅನುಭವಗೋಚರವಾಗಿರುವಲ್ಲಿ, ಜೀವನಿಗೆ ಅಹಂಕಾರವು ಹ್ಯಾಗೆ ಬಂತೆಂದು ಶ್ರೀರಾಮನು ಕೇಳಲು ವಸಿಷ್ಠನಿಂತೆಂದನು.

ಎಲೈ ಸೂಕ್ಷ್ಮಮತಿಯೆ! ತರಂಗವಿಲ್ಲದ ಸಮುದ್ರದಂತೆ ಶಾಂತವಾಗಿ ಜ್ಞಪ್ತಿಮಾತ್ರಸ್ವರೂಪದಿಂ ಪ್ರಕಾಶಿಸುವಂಥಾದ್ದೇ ಪರಬ್ರಹ್ಮವೆನಿಸುವದು. ಅದಕ್ಕೆ ದೀಪಕ್ಕೆ ಜ್ವಾಲೆಯಂತೆ ಜ್ಞಾನಶಕ್ತಿಯು ಸ್ವಾಭಾವಿಕವಾಗಿರುವದ್ದರಿಂದ ತಿಳಿಯಲಿಚ್ಛೆಯುಂಟಾಗುವದು. ತಿಳಿಯತಕ್ಕ ವಸ್ತುವು ಬ್ಯಾರೆ ಇಲ್ಲದ್ದರಿಂದಲೂ, ಆ ಇಚ್ಛೆಯು ಅಮೋಘವಾದ್ದರಿಂದಲೂ, ಕಲ್ಪನಾರೂಪವಾದ ಪರಬ್ರಹ್ಮದ ಪ್ರಕಾಶವೇ ಜ್ಞೇಯವಾಗಿ ನಿಲ್ಲುವದು. ಆಗ ಇದೇನೆಂದು ನೋಡಲು, ತೋರುಡುವ ಬ್ರಹ್ಮವೇ ಜೀವನೆನಿಸುವದು. ಅದಂ ತಿಳಿಯುತ್ತಿರುವ ಜೀವನಲ್ಲಿ ಜ್ಞೇಯವಾಗಿರುವದು ಚನ್ನಾಗಿ ಪ್ರತಿಬಿಂಬಿಸಲು, ಅಹಂಭಾವದಿಂ ಕೂಡಿದ ಆ ಜೀವನು ನಾನು ಜ್ಞಾತೃವೆಂದು ನಿಶ್ಚೈಸುವನು. ಸಮುದ್ರದಲ್ಲಿ ನೀರಿನ ಗುಳ್ಳೆಯಂತೆ ತೋರುಟ್ಟ ಈ ಜ್ಞಾತೃವು ಜ್ಞೇಯವಾಗಿರುವ ಬ್ರಹ್ಮಪ್ರಕಾಶವಂ ದೃಶ್ಯವೆಂದು ತಿಳಿಯಲೂ ಬದ್ಧನೆನಿಸುವನು. ಸ್ವರೂಪ ವಿಚಾರದಿಂ ಸ್ವಾಭಿನ್ನವಿದೆಂದು ನಿಶ್ಚಯಿಸಲು ಮುಕ್ತನೆನಿಸುವನು. ಜ್ಞಾತೃಭಾವನೆಯಿಂದುಂಟಾಗಿದ್ದ ರೂಪವಿಶೇಷವು ಗಳಿತವಾಗಲು, ಪುನಃ ಬ್ರಹ್ಮವೆನಿಸುವನು. ಚಕ್ಷುರಿಂದ್ರಿಯಕ್ಕೆ ಪ್ರಸರಿಸುವ ಯೋಗ್ಯತೆ ತಪ್ಪಿ ಕರೀಗುಡ್ಡಿನಲ್ಲಿ ನಿಂತಿದ್ದರಿಂದ ಆ ಗುಡ್ಡಿನ ಕಪ್ಪೇ ಹೊರಗಿರುವಂತೆ ಕಾಣುವದೆಂಬ ಜ್ಞಾನವಿಲ್ಲದೆ ಆಕಾಶ ಕಪ್ಪೆಂದು ತಿಳಿಯುವಂತೆ ಸ್ವರೂಪಜ್ಞಾನವಿಲ್ಲದ ಜೀವನು ಸ್ವಪ್ರಕಾಶವನ್ನೇ ದೃಶ್ಯವೆಂದು ತಿಳಿಯುವನು. ಸ್ವರೂಪವಿಸ್ಮರಣೆಯಿಂದ ಆಕಾಶವ ಕಪ್ಪಿನಂತೆಯೇ ಈ ಜೀವನಿಗೆ ಅಹಂಭಾವವುಂಟಾಗಿರುವದು. ಈ ಅಹಂಭಾವವೇ ದಿಕ್ಕಾಲಾದಿ ವಿಭಾಗದಿಂ ವಿಭಕ್ತವಾದ ಆಕಾರವುಳ್ಳದ್ದಾಗಿ ಅಹಂಕಾರವಾಗುವದು. ಅಹಂಕಾರವುಳ್ಳ ಜೀವನು ತನ್ಮಾತ್ರೆಗಳ ಕಲ್ಪನೆಯಿಂದ ಸೂಕ್ಷ್ಮಶರೀರವಂ ಪಡೆವನು. ಸರ್ಗಾದಿಯಲ್ಲಿ ಜೀವನು ಈ ಪ್ರಕಾರವಾಗಿ ಸ್ವಸಂಕಲ್ಪದಿಂದಲೇ ಸೂಕ್ಷ್ಮಶರೀರವಂ ಪಡದು, ಬಳಿಕ ಚತುರ್ಮುಖನಿಂದ ಸ್ಥೂಲಶರೀರವಂ ಪಡದನು. ಸಮುದ್ರದ ನೀರಿನಲ್ಲಿ ಸಣ್ಣಸಣ್ಣಾಗಿ ಪುಟ್ಟಿದ ಗುಳ್ಳೆಯು ಹಡದು ನೊರೆಯಾಗಿ ಬಲಿತು ವಣಗಿ ಹಗ್ಗದಿಂ ಕಟ್ಟಿಸಿಕೊಳ್ಳುವಂತೆ ಬ್ರಹ್ಮವೇ ಸ್ವರೂಪ ವಿಸ್ಮೃತಿಯಿಂದ ಕಾರಣ ಸೂಕ್ಷ್ಮಸ್ಥೂಲ ಶರೀರಗಳಂ ಪಡದು ಸ್ವಕರ್ಮಗಳಿಂದಲೇ ಸಕಲ ದುಃಖಗಳಿಗೂ ಪಾತ್ರನಾಗುವನು. ಹೀಗೆ ಸ್ವೇಚ್ಛೆಯಿಂದಲೆ ಸಮುದ್ರದಲ್ಲಿ

ಗುಳ್ಳೆಗಳಂತೆ ಬ್ರಹ್ಮದಲ್ಲೇ ಅನೇಕ ಜೀವರು ಪುಟ್ಟುವರು. ಪುಟ್ಟುವ ಪದಾರ್ಥಗಳಲ್ಲಿ ಆಕಾಶವು ವ್ಯಾಪಿಸುವಂತೆ ಪುಟ್ಟುವ ಕಲ್ಪನೆಗಳಲ್ಲಿ ಅಖಂಡವಾದ ಬ್ರಹ್ಮವು ಭಿನ್ನಭಿನ್ನವಾಗಿ ವ್ಯಾಪಿಸುವದ್ದರಿಂದ ಕಲ್ಪನಾನುಗತವಾದ ಬ್ರಹ್ಮದ ಚಿದಂಶಗಳೇ ಜೀವರೆಂದು ತಿಳಿಯುವನಾಗು, ಬ್ರಹ್ಮೇತರ ಪದಾರ್ಥಜನಕವಾದ ಕಲ್ಪನೆಯೇ ಅಂತಃಕರಣವಾಗಿ ಪರಿಣಮಿಸುವದು. ಅದರ ಸಂಕಲ್ಪದಿಂದಲೇ ಜಗವೆಲ್ಲವೂ ಪುಟ್ಟುವದು. ಜ್ಞಾನಸ್ವರೂಪವಾದ ಬ್ರಹ್ಮದಿಂ ಕಲ್ಪನಾತ್ಮಕವಾಗಿ ಪುಟ್ಟಿ ಅಜ್ಞಾನಾತ್ಮಕವಾದ ಜಗವಂ ಪಿಡದಿರುವದ್ದರಿಂದ, ಸತ್ಯಾಸತ್ಯಾತ್ಮಕವೆನಿಸುವ ಈ ಅಂತಃಕರಣವು ಇರುವವರಿಗೆ ಜೀವತ್ವವು ತಪ್ಪುವದಿಲ್ಲ. ಈ ಅಂತಃಕರಣದ ಭಾವನೆಯಿಂದ ಬ್ರಹ್ಮದಲ್ಲೇ ಈ ಜಗದ್ಭ್ರಮೆಯು ದೀರ್ಘಸ್ವಪ್ನದಂತೆ ಸ್ಥಿರವಾಗಿರುವದು. ಹೀಗೆ ಪ್ರಥಮತಃಜ್ಞೇಯೋನ್ಮುಖವಾದ ಜ್ಞಾನಶಕ್ತಿಯು ಕಲ್ಪನಾರೂಪವಾದ ಚಲನದಿಂ ಚಿತ್ತವುಂಟಾದುದು. ಅದಕ್ಕೆ ಅನುಗತವಾದ ಬ್ರಹ್ಮವೇ ಜೀವವೆನಿಸಿಕೊಂಡಿತು. ಜೀವಭಾವ ಉಂಟಾಗುವಲ್ಲಿಯೇ ಅಹಂಭಾವವುಂಟಾಯಿತು. ಅದೇ ಬಾಹ್ಯಕಲ್ಪನೆಯಿಂ ದೃಢವಾಗಿ ಅಹಂಕಾರವೆನಿಸಿತು. ಆದರ ಸಂಗಡಲೇ ಇಂದ್ರಿಯಗಳು ವಿಷಯಗಳೂ ಸಹ ಪುಟ್ಟಿದವು. ಬಳಿಕ ಚಿತ್ತದ ಸಂಕಲ್ಪಾನುರೂಪವಾದ ಕರ್ಮದಿಂ ಬೀಜದಿಂದಂಕುರದಂತೆ ದೇಹವುಂಟಾಯಿತು. ಕಾರ್ಯಕಾರಣಾಭೇದನ್ಯಾಯದಿಂ ನೋಡುವಲ್ಲಿ ಬ್ರಹ್ಮಜೀವರಿಗೆ ಹ್ಯಾಗೆ ಭೇದವಿಲ್ಲವೋ ಹ್ಯಾಗೆ ಜೀವಚಿತ್ತಗಳಿಗೂ, ಚಿತ್ತಕರ್ಮಗಳಿಗೂ, ಕರ್ಮದೇಹಗಳಿಗೂ, ಭೇದವಿಲ್ಲವೆಂದು ಹೇಳುವರು. ವ್ಯುತ್ಕ್ರಮದಿಂ ನೋಡುವಲ್ಲಿ ದೇಹವೇ ಕರ್ಮವು, ಕರ್ಮವೇ ಚಿತ್ತವು, ಚಿತ್ತವೇ ಜೀವನು, ಜೀವನೇ ಈಶ್ವರನು, ಈಶ್ವರನೇ ಪರಬ್ರಹ್ಮವು ಎಂದು ಸಿದ್ಧವಾಗುವದು. ಆದರಿಂದ ಸರ್ವಸ್ವರೂಪದಿಂ ಬ್ರಹ್ಮವೆಂಬುವದೇ ಸಿದ್ಧಾಂತವಾಗಿ ನಿಲ್ಲುವದು. ಆದ್ದರಿಂದ ಸರ್ವಸ್ವರೂಪದಿಂ ಬ್ರಹ್ಮವೇ ಪ್ರಕಾಶಿಸುತ್ತಿರುವದೆಂದು ನಿಶ್ಚಯಿಸುವನಾಗು. ದೀಪದಿಂದನೇಕ ದೀಪಗಳು ಪುಟ್ಟುವಂತೆ ಬ್ರಹ್ಮದಿಂದಲೇ ಜೀವರುಗಳುಂಟಾಗಿರುವರು. ಜೀವಭಾವಕ್ಕೆ ಆಧಾರವಾಗಿರುವ ಚಿತ್ತದ ಸ್ವರೂಪವಂ ವಿಚಾರಿಸುತ್ತಾ, ಅಸತ್ತಾದ ಜಗದ್ಭ್ರಮೆಯಂ ಬಿಡಲು ಪಾದುಕೆಯನ್ನಂಗೀಕರಿಸಿರುವನಿಗೆ ಭೂಮಿಯೆಲ್ಲವು ಚರ್ಮಮಯವಾಗಿ ತೋರುವಂತೆ ಸರ್ವವೂ ಆನಂದಮಯವಾಗಿಯೇ ಪ್ರಕಾಶಿಸುವದು.

ಎಲೈ ರಾಮಭದ್ರನೇ ! ಛಳಿಬಾಧವನಿಗೆ ಎಷ್ಟು ಹೊದ್ದಿಸಿದರೂ ಶಕೆಯುಂಟಾಗಲಾರದು. ಜ್ವರಬಾಧವನಿಗೆ ಎಷ್ಟು ಬೀಸಿದರು ತಾಪಶಾಂತಿಯಾಗಲಾ

ರದು. ಮಲಿನಚಿತ್ತನಿಗೆ ಯಾವದೂ ಶುದ್ಧವೆಂದು ಕಾಣಲಾರದು. ಶುದ್ಧಚಿತ್ತನಿಗೆ ಸರ್ವವು ಪರಿಶುದ್ಧವಾಗಿಯೇ ಕಾಣುವದಾದ್ದರಿಂದ, ಒಳಗಣ ಗುಣದೋಷಗಳೇ ಮುಖ್ಯವೆಂದು ತಿಳಿಯುವನಾಗು? ಬಾಳೆಕಂಭದಲ್ಲಿ ಪಟ್ಟೆಯಲ್ಲದೆ ಮತ್ತೊಂದು ಹ್ಯಾಗೆ ಇಲ್ಲವೋ ಹಾಗೆ ಜಗದಲ್ಲಿ ಭ್ರಮೆಯಲ್ಲದೆ ಮತ್ತೊಂದೂ ಇಲ್ಲವೆಂದು ನಿಶ್ಚಯಿಸುವನಾಗು? ಉತ್ಪತ್ತಿ ಸ್ಥಿತಿ ಮರಣಗಳೆಂತಲೂ, ಬಾಲ್ಯ ಯೌವನ ವಾರ್ಧಿಕಗಳೆಂತಲೂ, ಸುಖ ದುಃಖಗಳೆಂತಲೂ, ಸ್ವರ್ಗ ನರಕಗಳೆಂತಲೂ, ಬಂಧ ಮೋಕ್ಷಗಳೆಂತಲೂ, * ಚಿತ್ತಮರ್ಕಟವೇ ಕುಣಿಯುತ್ತಿರುವದಲ್ಲದೆ ಮತ್ತೊಂದಿಲ್ಲ. ಈ ಚಿತ್ತವಂ ಪಿಡದಿರುವ ಜೀವನಿಗೆ ಮದಿಸಿದವನಿಗೆ ವೃಕ್ಷಭ್ರಮೆಯಂತೆ ದೃಶ್ಯ ಭ್ರಾಂತಿಯುಂಟಾಗುವದು. ಮತ್ತು ದ್ವೈತಾದ್ವೈತ ಕಲ್ಪನೆಗಳುಂಟಾಗುತ್ತಿರುವವು. ಯಾವಾಗ ಚಿದ್ಭಿನ್ನವಾದ ಪದಾರ್ಥವಿಲ್ಲವೆಂದು ನಿಶ್ಚಯವಾಗುವದೋ ಆಗ ದ್ವೈತಾದ್ವೈತಗಳೆರಡೂ ಹಾರಿಹೋಗುವವು. ಯಾವಾಗ ಜೀವನು ಚಿದೇಕರಸನಾಗಿ ಸ್ಥೈರ್ಯವಂ ಪಡೆವನೋ ಆಗ ಚಿತ್ತಶಾಂತಿಯಿಂದ ವ್ಯವಹಾರಪರನಾಗಿದ್ದರೂ ಶಾಂತನೆನಿಸುವನು. ಸ್ವಲ್ಪ ಮದವೇರಿದವನು ವಿಕಾರಪಡುವಂತೆ ಅಲ್ಪಪ್ರಜ್ಞನಾದವನೇ ಗರ್ವದಿಂ ಹಾರಾಡುವನು. ಪೂರ್ಣವಾದ ಬ್ರಹ್ಮದಲ್ಲಿ ದೃಷ್ಟಿಯುಳ್ಳವನಾದರೋ ದಿನೆದಿನೆ ಉಪಶಾಂತನಾಗಿ ಜೀವನ್ಮುಕ್ತನೆನಿಸುವನು.

ಎಲೈ ರಾಘವನೆ! ಜಗವೆಂಬ ವಾಸನೆಯಂ ನಿಶ್ಶೇಷವಾಗಿ ಬಿಟ್ಟರೆ ಈ ನಿಮಿಷದಲ್ಲಿಯೇ ನೀನು ಮುಕ್ತನಾಗುತ್ತೀಯೆ? ಎಲೈ ರಾಮಭದ್ರನೇ! ಇಚ್ಛೆಗೆ ವಿಷಯವಾದ ಪದಾರ್ಥಕ್ಕೋಸ್ಕರ ಪ್ರಾಣವನ್ನಾದರೂ ಬಿಡುವರಲ್ಲದೆ ಇಚ್ಛೆಯಂ ಬಿಡುವ ಉಪಾಯವನ್ಯಾರೂ ನೋಡುವದಿಲ್ಲ. ಬ್ರಹ್ಮವಿಚಾರದಿಂದೆರಡನೇ ಪದಾರ್ಥವಿಲ್ಲವೆಂದು ತಿಳಿದ ಕೂಡ್ಲೆ ಇಚ್ಛೆಯುಂಟಾಗಲಾರದು. ಆತ್ಮನು ಆತ್ಮನಲ್ಲಿಯೇ ವಿಹರಿಸುವನೆಂದು ಆತ್ಮಾರಾಮ ದೃಷ್ಟಿಯಿಂದಿಚ್ಛೆಯುಂಟಾದಾಗ್ಯೂ ಕರ್ಮೇಂದ್ರಿಯಗಳಿಂದದನ್ನನುಭವಿಸುತ್ತಿದ್ದಾಗ್ಯೂ ಮುಕ್ತನೆನಿಸುವನು. ಚಿತ್ತದ ಸಂಕಲ್ಪವೇ ಸಕಲ ಕಾರಣವಾದ ಸ್ಪಂದವೆನಿಸುವದು. ಸಂಕಲ್ಪಾನುಸಾರವಾದ ವ್ಯಾಪಾರವೇ ಕರ್ಮವೆನಿಸುವದು. ಫಲೋನ್ಮುಖವಾದ ಈ ಕರ್ಮವೇ ದೈವವೆನಿಸುವದು. ಬೀಜವು ವೃಕ್ಷವಾಗುವಂತೆ ಈ ದೈವವೇ ಸುಖದುಃಖಾತ್ಮಕವಾದ ಸಂಸಾರರೂಪದಿಂ ಪರಿಣಮಿಸುವದು. ಚಿತ್ತವೇ ಬಹಿರ್ಭಾವವಂ ಬಿಟ್ಟು ಬ್ರಹ್ಮವಿಚಾರದಲ್ಲಿ ನಿಲ್ಲಲು ಮುಕ್ತಿಗೆ ಸಾಧನವಾಗುವದು. ತಡೆ

* ಮನಸ್ಸೆಂಬ ಕಪಿಯೇ.

ಯದಿರುವದ್ದರಿಂದ ವೃಕ್ಷದ ವೃದ್ಧಿಗೆ ಆಕಾಶಕಾರಣವಾಗುವಂತೆಯೂ, ಸಾನ್ನಿಧ್ಯಮಾತ್ರದಿಂ ಸೂಜಿಯು ಚಲನಕ್ಕೆ ಲೋಹಕಾಂತಕಾರಣವಾಗುವಂತೆಯೂ, ಸ್ವಭಾವದಿಂದಲೇ ಚೈತನ್ಯವನ್ನುಂಟುಮಾಡುವ ಆತ್ಮನು ಚಿತ್ತದ ಸಾನ್ನಿಧ್ಯದಿಂ ಸರ್ವಕರ್ತೃವೆನಿಸುವನು. ಚಿತ್ತವುಂಟಾಗುವರಲ್ಲಿ ಕಾರ್ಯವು ಸ್ವಾಭಿನ್ನವಾದ್ದರಿಂದ ಈ ಆತ್ಮನು ಅಕರ್ತೃವೆನಿಸುವನು, ಹೀಗೆ ನೋಡುವಲ್ಲಿ ಅಂತಃಕರಣ ಬಾಹ್ಯಕರಣ ವಿಷಯರೂಪದಿಂದಾತ್ಮನೇ ವಿಹರಿಸುತಲಿಧಾನೆ ಎಂದು ತಿಳೀಬರುತ್ತೆ. ಆದ್ದರಿಂದ ವೃಕ್ಷರೂಪವಾದ ಬೀಜವು ಪುನಃ ಬೀಜರೂಪದಿಂ ನಿಲ್ಲುವಂತೆ ಜಗದ್ರೂಪದಿಂ ಪ್ರಕಾಶಿಸಿದ ಆತ್ಮನು ಪುನಃ ಆತ್ಮಸ್ವರೂಪದಿಂದಲೇ ನಿಲ್ಲುವನು. ಆದರೆ ಬೀಜವು ವೃಕ್ಷವಾಗಿ ಪರಿಣಮಿಸುವದ್ದರಿಂದ ಪುನಃ ಬೀಜವಾಗುವವರಿಗೆ ಭೇದವು ಕಾಣುವದಿಲ್ಲ; ಬ್ರಹ್ಮವು ಸ್ವರೂಪವಂ ಬಿಡದೇ ಜಗದ್ರೂಪವಾಗಿ ಪ್ರಕಾಶಿಸುವದ್ದರಿಂದ ಜ್ಞಾನಾಜ್ಞಾನರೂಪದಿಂ ಭಿನ್ನವಾಗಿ ಗೋಚರವಾಗುವದು; ಮತ್ತು ಬೀಜದಲ್ಲಿರುವ ವೃಕ್ಷಬೀಜಗಳಲ್ಲಿ ಬೀಜಸ್ವರೂಪವು ತಿಳಿದಾಗ್ಯೂ ತಿಳಿಯದಿದ್ದಾಗ್ಯೂ ಬೀಜವೃಕ್ಷಗಳೆರಡೂ ವ್ಯಾವಹಾರಿಕ ಸತ್ತಾವಲಂಬನವಾದ್ದರಿಂದ ಬೀಜಕ್ಕೆ ವೃಕ್ಷಜನನಶಕ್ತಿಯು ತಪ್ಪುವದಿಲ್ಲ. ಚಿತ್ತದಲ್ಲಿರುವ ಬ್ರಹ್ಮಜಗದಂಶಗಳಲ್ಲಿ ಬ್ರಹ್ಮಕ್ಕೆ ಪಾರಮಾರ್ಥಿಕಸತ್ತೆಯು ಜಗತ್ತಿಗೆ ಪ್ರಾತಿಭಾಸಿಕಸತ್ತೆಯು ಇರುವದ್ದರಿಂದ ಬ್ರಹ್ಮದ ಸ್ವರೂಪವು ಗೋಚರವಾಗಲು ಅದಕ್ಕೆ ಜಗಜ್ಜನನ ಶಕ್ತಿಯು ತಪ್ಪುವದೆಂಬ ವಿಶೇಷವಿರುವದು. ಮತ್ತು ಬೀಜದಲ್ಲಿರುವ ಬೀಜಕ್ಕೂ, ತರುಜನನ ಶಕ್ತಿಗೂ, ಭೇದವಿರುವದು. ಚಿತ್ತದಲ್ಲಾದರೋ ಬ್ರಹ್ಮಕ್ಕೂ, ಜಗಜ್ಜನಕವಾದ ಶಕ್ತಿಗೂ ಭೇದವಿಲ್ಲದೆ ಇರುವದು. ಬ್ರಹ್ಮಸಾನ್ನಿಧ್ಯದಿಂ ಚಿತ್ತವೇ ಜಗತ್ಕಾರಣವೆಂಬ ಪಕ್ಷದಲ್ಲಿಯೂ, ಭರ್ಜಿತವಾದ ಬೀಜಕ್ಕೆ ತರುಜನನಶಕ್ತಿಯು ತಪ್ಪುವಂತೆ ವಿದಿತಸ್ವರೂಪವಾದ ಚಿತ್ತಕ್ಕೆ ಜಗಜ್ಜನನಶಕ್ತಿಯು ತಪ್ಪುವದು. ಭೂಮಿಯು ಯಾವಯಾವ ಭಾಗವು ತೋಡಲ್ಪಟ್ಟಾಗ್ಯೂ ಅಲ್ಲಲ್ಲಿ ಆಕಾಶವು ಶೇರುವಂತೆ ಜ್ಞಾನಮಾರ್ಗವು ಎಲ್ಲೆಲ್ಲಿ ವಿಚಾರಿಸಲ್ಪಟ್ಟಾಗ್ಯೂ ಅಲ್ಲಲ್ಲೇ ಸ್ವರೂಪಸಾಕ್ಷಾತ್ಕಾರವಾಗುವದು. ಶುದ್ಧವಾದ ಸ್ಫಟಿಕದಲ್ಲಿ ಪುಷ್ಪಾದಿಗಳವರ್ಣವು ತೋರುವಂತೆ ಬ್ರಹ್ಮದಲ್ಲಿ ನಾನಾಪ್ರಕಾರವಾದ ಜಗತ್ತು ತೋರುವದಾದ್ದರಿಂದ ಫಲಪತ್ರಲತಾದಿಗಳಿಗೆ ಬೀಜದಂತೆ ನಾನಾಪ್ರಕಾರವಾದ ಜಗತ್ತಿಗೆ ಬ್ರಹ್ಮವೇ ಆಧಾರವಾಗಿರುವದೆಂದು ತಿಳಿಯುವನಾಗು, ಎಂದು ವಸಿಷ್ಠನು ಹೇಳುತ್ತಿರುವಲ್ಲಿ ಅವನ ವಚನಗಳಿಂದಾಶ್ಚರ್ಯಪಟ್ಟು ಶ್ರೀರಾಮನಿಂತೆಂದನು.

ಎಲೈ ಮಹಾಮುನಿಯೇ ! ಬ್ರಹ್ಮಮಾಹಾತ್ಮ್ಯದವಿಚಾರದಲ್ಲಿಯೂ ಕೂಡ ಮನವು ಸತ್ಯಪದಾರ್ಥದಂತೆಯು ವಿಚಿತ್ರವಾದ ಜಗತ್ತು ಇರುವಂತೆಯು, ಅಜ್ಞಾನವು ಸ್ಫುಟವಾಗಿರುವಂತೆಯು, ತೋರುವದ್ದರಿಂದ ಅತ್ಯಾಶ್ಚರ್ಯವಾಗಿದೆ. ಇದರ ತತ್ವಾರ್ಥವಂ ನಿರೂಪಿಸುವನಾಗೆಂದು ಕೇಳಲು ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ ! ನಾನಾಪ್ರಕಾರವಾದ ರೂಪಗಳಂ ವಹಿಸಿಕೊಂಡು ಬ್ರಹ್ಮವೇ ವಿಹರಿಸುತ್ತಿರುವಲ್ಲಿ, ಪರಮಾರ್ಥವಾಗಿ ಜೀವವೆಂತಲೂ, ಮನವೆಂತಲೂ, ಜಗವೆಂತಲೂ, ಯಾವ ಪದಾರ್ಥವನ್ನಾದರೂ ಹೇಳುವದಕ್ಕೆ ಅವಕಾಶವೇನಿರುವದು. ಅವಿವೇಕಿಗಳಾದ ಜನಗಳ ವಿವೇಕಕ್ಕೋಸುಗ ಈ ಪದಾರ್ಥಗಳ ಲಕ್ಷಣವು ಹೇಳಲ್ಪಡುವದು. ಜ್ಞಪ್ತಿ ಸ್ವರೂಪವಾದ ಬ್ರಹ್ಮದಲ್ಲೆ * ಜ್ಞಾತೃಜ್ಞೇಯವೆಂಬ ತ್ರಿಪುಟಿಯುಂಟಾಗುವದು. ಇದರಲ್ಲಿ ಜ್ಞೇಯದಂತೆ ಜ್ಞಾತೃಭಾವವು ಭ್ರಮ ಸಿದ್ಧವಲ್ಲದೇ ವಾಸ್ತವವಲ್ಲ. ವಾಸ್ತವವೆಂದು ಜ್ಞೇಯವನ್ನು ತಿಳಿಯುವ ಜ್ಞಾತೃವೇ ಜೀವವೆನಿಸುವನು. ಇವಂ ಬಾಹ್ಯದೃಷ್ಟಿಯಿಂ ಪದಾರ್ಥಗಳಂ ಭಾವಿಸಿ ಮನನವಂ ಮಾಡುತ್ತಾ ಮನವೆನಿಸಿಕೊಳ್ಳುವನು ಇವನೇ ಕಾಮಸಂಕಲ್ಪಾನುಸಾರವಾಗಿ ಇಂದ್ರಿಯಾದಿ ರೂಪಗಳಂ ವಹಿಸುವಲ್ಲಿ, ಜ್ಞೇಯವೆಂದು ತಿಳಿದ ವಸ್ತುವೇ ಆಯಾಯ ವಿಷಯಸ್ವರೂಪದಿಂ ಗೋಚರವಾಗುವದೆಂದು ಹೇಳುತ್ತಾ ಹೀಗೆ ಸರ್ವವು ಬ್ರಹ್ಮವೇ ಆಗುವಲ್ಲಿ, ಯಾರಿಗೆ ಮೋಕ್ಷವಾಗತಕ್ಕದಿಧೆ, ಏನುಕಾರಣ ವಿಚಾರವಂ ಮಾಡಬೇಕೆಂದು ಶ್ರೀರಾಮನು ಕೇಳಲಾ ವಸಿಷ್ಠನಿಂತೆಂದನು.

ಎಲೈ ಮಹಾಮತಿಯೇ ! ಪುಷ್ಪವು ಮನೋಹರವಾದರೂ ಅಕಾಲದಲ್ಲಿ ಪುಟ್ಟಿದಾಥಾದ್ದು ಹ್ಯಾಗೆ ಶೋಭಿಸುವದಿಲ್ಲವೋ ಹಾಗೆ ನಿನ್ನ ಮಾತು ಸಿದ್ಧಾಂತವಾದದ್ದಾದನೂ ಇದು ವಿಚಾರಕ್ಕೆ ಕಾಲವಾದ್ದರಿಂ ಶೋಭಿಸುವದಿಲ್ಲ. ಅದಂತಿರಲಿ, ಪ್ರಾಣಿಗಳ ಮನವೂ ಕೂಡ ಭಾವಾನುಸಾರವಾಗಿ ಪದಾರ್ಥಗಳಂ ನೋಡುತ್ತಾ, ಅದರ ಸುಖಾಸುಖಗಳನ್ನನುಭವಿಸುತ್ತಿರುವಲ್ಲಿ, ಪರಮೇಶ್ವರನ ಮನೋರೂಪನಾದ ಬ್ರಹ್ಮನು ಇಚ್ಛಾಮಾತ್ರದಿಂ ಸಮಸ್ತ ಜಗಗಳಂ ಸೃಜಿಸಿರುವನೆಂಬುವಲ್ಲಿ ಆಶ್ಚರ್ಯವೇನು. ಆ ಬ್ರಹ್ಮನ ಸಂಕಲ್ಪದಿಂ ಸಿದ್ಧವಾದಾಗ್ಯು, ಈ ಜಗವು ಬ್ರಹ್ಮದಲ್ಲಿಯೇ ರಜ್ಜು ಭುಜಗದಂತೆ ತೋರುತ್ತಿರುವದಾದ್ದರಿಂದ, ಗಗ

* ಜ್ಞಾತೃ—ತಿಳಿಯತಕ್ಕವನು, (the knower)
ಜ್ಞೇಯ—ತಿಳಿಯಲ್ಪಡತಕ್ಕದ್ದು the knowable)
ಜ್ಞಾನ—ತಿಳುವಳಿಕೆ (knowledge).

ಸವಲ್ಲಿ ಕಾಣುವ ಗಂಧರ್ವನಗರದಂತೆಯೇ ಮಿಥ್ಯಾಭೂತವೆಂದು ತಿಳಿಯತಕ್ಕದ್ದು. ಹುಟ್ಟುವದು, ಇರುವದು, ಹೋಗುವದು ಸಹ ಸರ್ವವು ಸುಳ್ಳಲ್ಲದೇ ಒಂದೂ ಯಥಾರ್ಥವಲ್ಲ. ಪ್ರಮಾತೃ ಪ್ರಮಾಣ ಪ್ರಮೇಯಗಳೂ ಕೂಡ ಬ್ರಹ್ಮಭಿನ್ನವಲ್ಲದ್ದರಿಂದ, ದ್ವೈತಾದ್ವೈತವಾದಗಳೂ ಕೂಡ ಶಶಶೃಂಗದ ಹಾರಾಟಕ್ಕೆ ಸಮಾನವೆಂದು ತಿಳಿದವರು ಹೇಳುವರು. ಮತ್ತು ಬ್ರಹ್ಮವೇ ತರಂಗಬುದ್ಬುದಾದಿರೂಪದಿಂ ಜಲದಂತೆ ನಾನಾರೂಪವಾಗಿ ಪ್ರಕಾಶಿಸುತ್ತಿರುವದೆಂತಲೂ ಹೇಳುವರು. ಈಸ್ಥಲದಲ್ಲಿ ಕರ್ಕಟೀಪ್ರಶ್ನರೂಪವಾದ ಇತಿಹಾಸವನ್ನುದಾಹರಿಸುತ್ತಿರುವರೆಂದು ವಸಿಷ್ಠಮಹಾಮುನಿಯು ಹೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿಪ್ರಕರಣದೋಳ್ ಆರನೇತರಂಗಕ್ಕೆ ಮಂಗಳಮಹಾ.



## ೭ನೇ ತರಂಗ ಪ್ರಾರಂಭಃ.

### ಕರ್ಕಟಿಕೋಪಾಖ್ಯಾನ ಸುಜ್ಞಾನರೂಪಪ್ರಾಪ್ತಿ ಪ್ರಾರಂಭಃ.



ಬಳಿಕ ಶ್ರೀರಾಮನಂ ಕುರಿತು ವಸಿಷ್ಠನಿಂತೆಂದನು. ಎಲೈ ರಾಮಭದ್ರನೆ! ಹಿಮವತ್ಪರ್ವತದ ಉತ್ತರಭಾಗದಲ್ಲಿ ಆಕಾರವಂ ಧರಿಸಿದ * ಕಜ್ಜಲಗಿರಿಯಂತೆ ಕರ್ಕಟಿಯೆಂತಲೂ, ಅನ್ಯಾಯಬಾಧಿಕೆಯೆಂತಲೂ, ಎರಡುನಾಮಗಳಿಂ ಪ್ರಸಿದ್ಧಳಾದ ಒಬ್ಬ ರಾಕ್ಷಸಿಯು ಇದ್ದಳು. ಅವಳಿಗೆ ಆಕಾರವು ಅತಿ ಮಹತ್ತಾದ್ದರಿಂದಲೂ, ಜಠರಾಗ್ನಿಯು ಬಡಬಾಗ್ನಿಗಿಂತ ಅಧಿಕವಾಗಿರುವದ್ದರಿಂದಲೂ, ಏನೇನು ತಿಂದರೂ ತೃಪ್ತಿಯಾಗಲಿಲ್ಲ. ಜಂಬೂದ್ವೀಪದಲ್ಲಿರುವ ಪ್ರಾಣಿಗಳೆಲ್ಲವನ್ನು ತಿಂದು ಸಮುದ್ರದಂತೆ ಸಕಲ ನದೀಜಲಗಳನ್ನು ಒಟ್ಟಾಗಿ ಕುಡಿದರೆ ನನಿಗೆ ತೃಪ್ತಿಯಾದೀತು. ಮಂತ್ರೌಷಧ ತಪೋದಾನ ದೇವಪೂಜಾದಿಗಳಿಂ ರಕ್ಷಿತರಾದ ಜನಗಳಿಂ ಬಾಧಿಸುವದು ಯುಕ್ತವಲ್ಲವಾದ್ದರಿಂದ, ನನಿಗೆ ತೃಪ್ತಿಯಾಗುವಂತೆ ಬ್ರಹ್ಮನ ವರವಂ ಪಡೆವೆನೆಂದು ಆ ರಾಕ್ಷಸಿಯಾಲೋಚಿಸಿ ಕಪ್ಪಾದ ಮೇಘಮಾಲೆಯಂತೆ ಆ ಹಿಮವತ್ಪರ್ವತವನ್ನೇರಿ ಅತಿ ಘೋರವಾದ ತಪವಂ ಮಾಡುತ್ತಾ ವರ್ಷ ಸಹಸ್ರಾಂತದಲ್ಲಿ ಪ್ರತ್ಯಕ್ಷವಾಗಿ ಬಂದ ಬ್ರಹ್ಮನಂ ಬೇಡಿದಳೆಂತೆನೆ. ಎಲೈ ಪಿತಾಮಹನೇ! ನನಿಗೆ ನೀನು ವರವಂ ಕೊಡುವನಾದರೆ ಲೋಹಮಯವಾದ ಸೂಜೀರೂಪದಿಂದಲೂ, ರೋಗರೂಪದಿಂದಲೂ,

* ಕಾಡಿಗೆಯಂತೆ ಕಪ್ಪಾದ ಬೆಟ್ಟದಂತೆ.

ವಿಷೂಚಿ ಎಂದು ಪ್ರಸಿದ್ಧಳಾಗಿ ಜನಗಳಂ ಬಾಧಿಸುವಂತೆ ವರವಂ ಕೊಡುವ ನಾಗು. ಎಂದು ಆ ರಾಕ್ಷಸಿಯು ಕೇಳಲು ಬ್ರಹ್ಮನಿಂತೆಂದನು.

ಎಲೌ ಅನ್ಯಾಯ ಬಾಧಿಕೆಯೆ! ನೀನು ಕೇಳಿದಂತೆಯೇ ನಿನಗೆ ಎರಡು ರೂಪವುಂಟಾಗುವವು. ನಿನ್ನ ನಾಮಧೇಯಕ್ಕೆ ಸರಿಯಾಗಿ ನೀನು ಯಾರು ನ್ಯಾಯಮಾರ್ಗವಂ ಬಿಟ್ಟು ದುಷ್ಟವಾದ ಭೋಜನದಲ್ಲಿಯೂ, ಕಾರ್ಯದಲ್ಲಿ ಯೂ, ಸ್ಥಿತಿಯಲ್ಲಿಯೂ, ದೇಶದಲ್ಲಿಯೂ, ಆಸಕ್ತರಾಗಿರುವರೊ ಯಾರು ಮೂ ರ್ಖರೊ, ಯಾರು ದುರ್ಮತಿಗಳೋ ಅವರ ಶರೀರವಂ ಪ್ರಾಣಮಾರ್ಗದಿಂ ಪ್ರವೇಶಿಸಿ, ಹೃದಯಕಮಲಾದಿಯಾಗಿ, ಅಪಾನಾಂತವಾಗಿರುವ ನಾಡಿಗಳಂ ಕೆಳದು ಬಾಧಿಸುತ್ತೀಯೇ, ಸನ್ಮಾರ್ಗದಲ್ಲಿರುವರೆಡೆಗೆ ನೀನು ಹೋಗುವದೇ ಇಲ್ಲ, ಒಂದುವೇಳೆ ಹೋದಾಗ್ಯು ನಿನ್ನ ಬಾಧೆಯು ನಿವೃತ್ತಿಗೋಸ್ಕರ ಈ ಮಂ ತ್ರವಂ ಪೇಳಿರುವೆನು. ಈ ಮಂತ್ರವಂ ಸಾಧಿಸಿದಂಥಾವನು ಈ ಮಂತ್ರವನ್ನೆ ಡಗೈಯಲ್ಲಿ ಒರದುಕೊಂಡು ಬಲಗೈಯಿಂದ ರೋಗಿಯ ಮೈಯ್ಯಂ ತಡವುತ್ತಾ ನಿನ್ನಂ ಹಿಮವತ್ಪರ್ವತಾಭಿಮುಖವಾಗಿ ಓಡಿಹೋದಂತೆಯು, ರೋಗಿಯನ್ನು ಚಂದ್ರಮಂಡಲದೊಳ್ ಅಮೃತರಸದ ಮಧ್ಯದಲ್ಲಿರುವಂತೆಯೂ, ಚಿಂತಿಸುತ್ತಾ ಚಿಕಿತ್ಸೆಯಂ ಮಾಡಲು, ಸನ್ಮಾರ್ಗದಲ್ಲಿರುವನಾದರೆ ಬದುಕುವನೆಂದು ಪೇಳಿ ತನ್ನ ಸಂಗಡ ಬಂದಿರುವ ಸಿದ್ಧಸಾಧ್ಯಾದಿಗಳಿಗೆ ಪ್ರಣವ, ಹ್ರೀಂ ಹ್ರಾಂ ರೀಂ ರಾಂ ವಿಷ್ಣುಶಕ್ತಯೇನಮಃ ಪ್ರಣವ ನಮೋಭಗವತಿ ವಿಷ್ಣುಶಕ್ತಿಮೇನಾಂ ಪ್ರಣವ ಹರ ಹರ ನಯ ನಯ ಪಚ ಪಚ ಮಥ ಮಥ ಉತ್ಸಾದಯದೂರೆ ಕುರುಸ್ವಾಹಾಹಿಮವಂತಂ ಗಚ್ಛ ಜೀವಸಃ ಸಃ ಸಃ ಚಂದ್ರಮಂಡಲಗತೋಸಿ ಸ್ವಾಹಾ ಎಂಬ ಚಿಕಿತ್ಸಾಮಂತ್ರವನ್ನು ಪೇಳಿ ಕೊಟ್ಟು ಅಂತರ್ಧಾನವಾದನು. ಬಳಿಕ ಆ ರಾಕ್ಷಸಿಯ ಶರೀರವು ಕ್ರಮವಾಗಿ ತಗ್ಗುತ್ತಾ ಕಮಲದ ಕೇಸರಕ್ಕೆ ಸಮವಾಗಿ ನಿಂದುದು. ಅವಿದ್ಯಾಕಾಮ ಕರ್ಮಭೂತಸೂಕ್ಷ್ಮ, ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಪ್ರಾಣ, ಅಂತಃಕರಣ ಸಂಘಾತಾತ್ಮಕವಾದ ಪುರ್ಯಷ್ಟಕದಂತೆ ಅವಳ ಶರೀರವು ಅತಿಸೂಕ್ಷ್ಮವಾದುದು, ಆದನೂ ಅವಳ ಆಶೆಯು ಸ್ವಲ್ಪವೂ ಕಡಮೆಯಾಗಲಿಲ್ಲ. ದುಷ್ಕೃತಿಗಳ ಮನೋರಥವು ಸಿದ್ಧಿಸುವದು ದುರ್ಲಭವಾದ್ದ ರಿಂದ ಸೂಚೀರೂಪಳಾದ ಅವಳಿಗೆ ಬಾಯಿ ಹಿಡಿಯತಕ್ಕ ವಸ್ತುವು ದುರ್ಲಭ ವಾಗಲು, ತೃಪ್ತಿಯಾಗುವದಕ್ಕೆ ಮಾರ್ಗವಾಗಲಿಲ್ಲ. ಬೌದ್ಧರು ಪೇಳುವ ಕ್ಷಣಿಕ ವಿಜ್ಞಾನ ಪರಂಪರೆಯಂತೆ ಅತಿವೇಗದಿಂದವಳು ಸೂಕ್ಷ್ಮದೃಷ್ಟಿಗಳಾದ ಜನಗ ಳಿಗೆ ಗೋಚರವಾಗುತ್ತಿದ್ದಳು. ಪುಷ್ಪದ ವಾಸನೆಯಂತೆ ಪ್ರಾಣಿಗಳ ಹೃದಯ

ವನ್ನವಳು ಪ್ರವೇಶಿಸಿದಾಗ್ಯು, ಆಕಾರವು ಸ್ವಲ್ಪವಾದ್ದರಿಂದ, ಸ್ವಲ್ಪವಾದರೂ ಸೂರವಂ ಪೀರುವದಕ್ಕೆ ಸಮರ್ಥಳಾಗಲಿಲ್ಲ ; ಪರ್ವತಸಮಾನವಾದ ಆ ಆಕಾರವೂ ಕೂಡ ಸೂಚೀರೂಪವಾಗುವಲ್ಲಿ, ಸಂಕಲ್ಪದ ಪ್ರಭಾವವನ್ನೆಂತು ಬಣ್ಣಿಸಬಹುದು. ಅವಳು ತಾಮಸಿಯಾದ್ದರಿಂದ, ಅಂಥಾ ಶರೀರವನ್ನಾದರೂ ಬಿಟ್ಟಳಲ್ಲದೆ ಪ್ರಾಣಹಿಂಸಾಪೇಕ್ಷೆಯಂ ಬಿಡಲಿಲ್ಲ. ಅವಳು ಆಯಾಯ ರೋಗಗಳ ಅನುಸರದಿಂ ಪಂಚಪ್ರಾಣಗಳಂ ಪಿಡಿದು ಸರ್ವಾಂಗನಾಡಿಗಳಂ ವ್ಯಾಪಿಸಿದಾಗ್ಯು, ಸ್ವಲ್ಪವಾದ ಮಾಂಸವಂ ತಿನ್ನುವದಕ್ಕೂ, ರಕ್ತವಂ ಕುಡಿಯುವದಕ್ಕೂ ಕೂಡಾ ಸಮರ್ಥಳಾಗಲಿಲ್ಲ. ಆದ್ದರಿಂದವಳ ಆಶೆಗೆ ನಿವೃತ್ತಿಯಾಗದೇ ದುಃಖಿತಳೇ ಆದಳು. ವಿಚಾರವಿಲ್ಲದವರ ನಿಶ್ಚಯವು ಸ್ಥಿರವಾಗಲಾರದಾದ್ದರಿಂದ ಮರಳಿ ಆಲೋಚಿಸಿದಳದೆಂತೆನೆ. ಅಕಟಕಟಾ ! ಇದೇನು ನನಗೆ ಕಷ್ಟಬಂದುದು, ಪರಮಾಣು ಸಮಾನವಾದ ಆಹಾರವೂ ಕೂಡ ನನ್ನ ಬಾಯಿಗೆ ಅಧಿಕವಾಗುವಲ್ಲಿ ನಾನು ತಿನ್ನತಕ್ಕದ್ದೇನು, ನಾನು ಕುಡಿಯತಕ್ಕದ್ದೇನು, ಮೇಘಮಂಡಲಕ್ಕೆ ಸಮಾನವಾದ ನನ್ನ ಕೇಶಪಾಶವು ಅಚಂಚಲವಾದ ಮಿಂಚುಗಳ ಗುಂಪಿಗೆ ಸರಿಯಾದ ನನ್ನ ಉರಿಗಣ್ಣುಗಳು ಸಂಯಮಿನೀ ಪುರದ್ವಾರಕ್ಕೆ ಸಮಾನವಾದ ನನ್ನ ಮುಖವು, ಗಿರಿ ಗುಹಾಪ್ರಕಾಶವಾದ ನನ್ನ ನಾಸಿಕೆಯು, ದಿಗ್ದಂತಿ ದಂತಗಳಗಿಂತಧಿಕವಾದ ನನ್ನ ಕೋರೆದಾಡೆಗಳು, ಅನೇಕ ಸಾಲಪ್ರಮಾಣಗಳಾದ ನನ್ನ ತೋಳುಗಳು, * ವೈಡೂರ್ಯಶೂರ್ಪ ಸನ್ನಿಭಗಳಾದ ಆ ಉಗರುಗಳು, ಮಹಾಗಿರಿ ಪ್ರತಿಭಟವಾದ ಆ ಕುಚಗಳು, ಪಾತಾಳೋದರ ಪ್ರತಿಮವಾದ ಆ ಉದರವು, ಸಮುದ್ರದ ಸುಳಿಗೆ ಪ್ರತಿನಿಧಿಯಾದ ಆ ನಾಭಿಯು, ವಿಂಧ್ಯ ಮಂದರಗಳಿಗೆ ಸರಿಯಾದ ಆ ನಿತಂಬಗಳು ಮೇರುಶೃಂಗ ಸಮಾನವಾದ ಆ ತೊಡೆಗಳು ಅತಿತಾಳಪ್ರಮಾಣಗಳಾದ ಆ ಕಣಗಾಲುಗಳು, ಗಜಪ್ರಮಾಣವಾದ ಬೆರಳುಗಳುಳ್ಳ ಆ ಕೈಗಾಲುಗಳೂ ಕೂಡ ಎಲ್ಲಿಗೆಪೋದವು. ಉಡುವದಕ್ಕೆ ಸರಿಯಾದ ಬಟ್ಟೆಯಿಲ್ಲದ್ದರಿಂದ, ನಾನು ಮುಂಜಿನಮಳೆಯ ಮರೆಯಲ್ಲಿ ಕೆಲವು ಕಾಲವಂ ಕಳದೆನು. ಮೇಘಗಳನ್ನೇ ಜೋಡಿಸಿ ಉಟ್ಟುಕೊಂಡೆನು. ಅಂತಪ್ಪ ಆಕಾರವು ಎಲ್ಲಿಗೆಹೋಯಿತು. ತಪಃಪ್ರಭಾವದಿಂ ಸೂಚಿಕಾರೂಪವಂ ಪಡದ ನಾನು ಎಕ್ಕದ ಹತ್ತಿಯಂತೆ ಊಃಪಂದರೆ ಹಾರುತ್ತಾ, ಮಕ್ಕಳಾಟಕ್ಕೆ ಯೋಗ್ಯಳಾದೆನು. ಕಂಡವರೆಲ್ಲರೂ ನನ್ನನ್ನು ಬೆರಳ ಚಿಮ್ಮಿಗೆಯಿಂದಲೇ ಹಾರಿಸುವರು. ಕಾಲಿಗೆಬಿದ್ದರೂ ಅಲ್ಲಿಯೇ ತುಳಿಯುವರು, ಪ್ರಾಣಗಳಂ ಬಿಡಬೇಕೆಂದರೂ

* ವೈಡೂರ್ಯರತ್ನನಿರ್ಮಿತವಾದ ಮೊರದಂತಿರುವ.

ಅದೂ ಸಂಭವಿಸುವದಿಲ್ಲ, ಗಾಜೆಂಬ ಬುದ್ಧಿಯಿಂದ ಚಿಂತಾಮಣಿಯುಂ ಬಿಟ್ಟಂತೆ ತಾನಾಗಿ ಬಂದಿದ್ದ ಆ ಶರೀರವಂ ಬಿಟ್ಟೆನು. ಕೆಟ್ಟಮಾರ್ಗದಲ್ಲಿ ಬೀಳುವ ಮನವು ಮೊದಲು ಮೋಹವನ್ನುಂಟುಮಾಡಿ,ಬಳಿಕ ಅನರ್ಥಪರಂಪರರೂಪವಾದ ಆಪತ್ತುಗಳನ್ನುಂಟುಮಾಡುವದು. ವಿವೇಕವಿಚಾರಗಳಿಲ್ಲದ್ದರಿಂದಲೇ ನನಗೆ ಇಂಥಾ ಆಪತ್ತು ಸಂಭವಿಸಿತು. ಗಿರಿ ಶಿಖರದಮೇಲೆ ಇರುವನಿಗೆ ಗ್ರಾಮಧೂಳಿಗಳಂತೆ ವಿವೇಕಶಾಲಿಯಾದವನಿಗೆ ಮೋಹಮಾರ್ಗದ ರಜತವು ತಗಲಲಾರದು. ಬಿಸಲಿಗೆ ಬಂದರೂ ಕುರುಡನಿಗೆ ಬೆಳಕಾಗದಿರುವಂತೆ ಅಜ್ಞಾನಸಮುದ್ರದಲ್ಲಿ ಮುಳುಗಿರುವನಿಗೆ ಎಂದಿಗೂ ಅಭ್ಯುದಯುವಾಗುವದಿಲ್ಲ. ನಾನು ಎಷ್ಟುಕಾಲ ಹೀಗೆ ಕಷ್ಟಪಡಬೇಕೋ ತಿಳಿಯಲಿಲ್ಲ. ಮಹತ್ತರರಾದ ಸ್ವಜಾತಿ ಜನರಲ್ಲಿ ಹಾಸ್ಯಾಸ್ಪದವಾಗುವದಕ್ಕಿಂತ ಯಾವ ಕಷ್ಟವನ್ನಾದರೂ ಸಹಿಸಬಹುದು. ಯಾವನು ತನ್ನೈಶ್ವರ್ಯದಿಂ ಸ್ವಜಾತಿಯಲ್ಲಿ ಮೇಲಾಗಿರುವನೋ ಅವನೇ ಧನ್ಯನೆನಿಸುವನು. ಯಾವಾಗ ನಾನು ಪೂರ್ವದಂತೆ ಆಕಾರವಂ ಹೊಂದಿ ಮನುರಕ್ತಕುಂಭ ಸಹಸ್ರಗಳಂ ಹೀರಿ ಮದೋದ್ರೇಕದಿಂ ನಿದ್ರೈಗೈದು, ಶಿಷ್ಟವಾದ ರಕ್ತಮಾಂಸಾಹಾರದಿಂ ಸಂತುಷ್ಟರಾದ ರಕ್ಕಸರಿಂ ಹೊಗಳಿಸಿಕೊಳ್ಳುವೆನೋ, ಆಗ ನಾನು ಪುಟ್ಟಿದ್ದು ಸಾರ್ಥಕವಾಗುವದು. ಓ ಹಸ್ತವೇ ! ಈಗ ಯಾಕೆ ನೀನು ಪುರೋಡಾಶವೆಂದು ಚಂದ್ರನಂ ಪಿಡಿಯಲುಜ್ಜಗಿಸುವದಿಲ್ಲ. ಓ ಕಣ್ಣೇ! ಸೂರ್ಯಮಂಡಲದಂತೆ ನಿಶಾಚರರಿಗೆ ಭಯಂಕರವಾಗಿದ್ದ ನೀನು ಈಗ ಅತಿತುಚ್ಛವಾಗಿದ್ದೀಯೆ, ಓ ಹೊಟ್ಟೆಯೆ ! ವಿಂಧ್ಯದ ಗುಹೆಗಿಂತಲೂ ಅಧಿಕವಾಗಿದ್ದ ನೀನು ಈಗ ಎಲ್ಲಿಗೆ ಹೋಗಿದ್ದೀಯೆ, ಓ ಕಾಲುಗಳಾ ! ನಿಮ್ಮ ಧೂಳುಗಳಂ ಪರದೇವತಾಪ್ರಸಾದವೆಂದು ಶಿರದಿಂ ಧರಿಸುತ್ತಿದ್ದ ಆ ರಕ್ಕಸರೇ ಈಗ ನನ್ನಂ ಕಸಕ್ಕಿಂತಲೂ ಕಡೆಯಾಗಿ ಕಾಲುಂಗುಟದಿಂ ತಳ್ಳುವರು. ರತ್ನಗಳಂ ಬಿಸಟು ಕರೀಮಣಿಯನ್ನಾಭರಣವಾಗಿ ವಹಿಸುವಂತೆ ಮಹತ್ತಾದ ಆಕಾರವಂ ಬಿಟ್ಟು ಈ ಸೂಕ್ಷ್ಮಾಕಾರವಂ ನಾನು ಪಡದೆನು. ಈಗ ಸೊಳ್ಳೆಗಿಂತಲೂ ಕಡೆಯಾಗಿರುವೆನು. ಪುನಃ ಆ ಆಕಾರವಂ ಪಡೆಯದಿದ್ದರೆ ನಾನು ಪುಟ್ಟಿದ್ದೇ ವ್ಯರ್ಥವಾಗುವದೆಂದಾಲೋಚಿಸಿ, ಪುನಃ ತಪಸ್ಸಿಗೋಸುಗ ಅದೇ ಹಿಮವತ್ಪರ್ವತದ ಶಿಖರವನ್ನೇರಿ ಎದ್ರುಚ್ಛೆಯಿಂ ಮರುಭೂಮಿಯಲ್ಲಿ ಪುಟ್ಟದ ತೃಣದಂತೆ ದವಾನಲಗಳ ಮಧ್ಯಭಾಗದಲ್ಲಿ ಬುದ್ಧಿಕಲ್ಪಿತವಾದ ಪಾದದಿನ್ನಿಂದು ತಪವಂ ಮಾಡುತ್ತಿರಲು, ಅಸೂಚಿಯ ರಂಧ್ರದಿಂ ಪೊರಮಡುವ ಸೂರ್ಯಕಿರಣವು ಸತ್ಕರ್ಮವಾತ್ಸಲ್ಯದಿಂದ ಅಳಿಗೆ ಅವಲಂಬನವಾಗಿರುವಂತಿದ್ದುದು. ಮೆಲ್ಮೊಗವಾಗಿ ಸಿಂದಿರುವ ತೃಣ

ಕ್ರಿಮಿಗೆ ಸಮಾನವಾದ ಆ ಸೂಚಿಗೆ ಅವಳ ಚ್ಛಾಯೆಯೇ ಸಹಚರಿಯಾಗಿದ್ದು ದು. ತಪೋನಿಯಮದಿಂದಲೂ, ತುಚ್ಛವಾದ ಆಹಾರದಿಂದೇನೆಂಬ ವಿರಕ್ತಿಯಿಂ ದಲೂ, ಗಾಳಿಯಿಂ ಮುಖದಲ್ಲಿ ತಗಲಿದ ಪುಷ್ಪಪರಾಗವನ್ನೂ ಕೂಡ ಅವಳು ಪರಿಗ್ರಹಿಸದಿರಲು, ತಪೋವಿಘ್ನವಂ ಮಾಡಲಿಚ್ಛೈಸಿದ ಇಂದ್ರನು ಪರಮಾಣು ಪ್ರಮಾಣವಾದ ಮಾಂಸಕಣಗಳಂನವಳ ಮುಖಸಮೀಪದಲ್ಲಿ ಶೇರಿಸಿದನು. ಅದನ್ನು ಅವಳು ಪರಿಗ್ರಹಿಸದಿರುವಲ್ಲಿ ವಾಯ್ವಾದಿ ದೇವತೆಗಳೂ ಕೂಡ ಆಶ್ಚ ರ್ಯಪಟ್ಟರು. ಪ್ರಾಣಾಪಾನನಿರೋಧದಿಂದಲೂ, ಕರ್ಮೇಂದ್ರಿಯವ್ಯಾಪಾರವಡ ಗಿದ್ದರಿಂದಲೂ, ಜ್ಞಾನೇಂದ್ರಿಯಗಳು ಸ್ತಬ್ಧವಾದ್ದರಿಂದಲೂ, ಮನಸ್ಸು ಆತ್ಮಾ ಭಿಮುಖವಾದ್ದರಿಂದಲೂ, ತಾನು ಯಾರೆಂಬ ವಿಚಾರವು ತಾನಾಗಿ ವುಂಟಾಗಲು, ಲಕ್ಷ್ಮೀಕಟಾಕ್ಷಪಾತ್ರನಂ ಗಜಾಶ್ವಾದಿಗಳು ಶೇರುವಂತೆ ಶಮದಮಾದಿ ಗುಣ ಗಳು ಅವಳಂ ಹೊಂದಿದವು. ಅವಳ ದೃಷ್ಟಿಗೆ ಪಾತ್ರವಾದ ಜಡವಾದ ವೃಕ್ಷ ಗಳೂ ಕೂಡ ಸಮೃದ್ಧಿಗಳಾಗುವಲ್ಲಿ, ಅವಳ ಸಮೀಪದಲ್ಲಿದ್ದ ಚೇತನವಾದ ಮೃಗ ಪಕ್ಷಿಗಳು ಸಹಜವಾದ ವೈರವಂ ಬಿಟ್ಟದ್ದೆಂಬುದರಲ್ಲಿ ಆಶ್ಚರ್ಯವೇನು, ಇಂತು ಅವಳು ತಪವಂ ಮಾಡುತ್ತಿರುವಲ್ಲಿ, ಆ ಮುಂಜಿನ ಬೆಟ್ಟವೂ ಕೂಡ ಉರಿಗಳಿಂದಟ್ಟವಾಗಲು, ಜಗತ್ತಿಗೆ ಸಂತಾಪವುಂಟಾದುದು. ತಪೋನಿಷ್ಠಳಾದ ಅವಳಿಂದ ಎರಡು ಸೂಚೀರೂಪಗಳು ಆತ್ಮನು ಸಹ ಗಂಗಾ, ಯಮುನಾ, ಸರ ಸ್ವತಿಗಳಂತೆ ಪರಿಶುದ್ಧವಾಗಿ ಮಾಡಲ್ಪಟ್ಟವು. ಸಕಲ ಕಾರಣಗಳಿಗೂ ಕಾರಣ ವಾಗಿ ಬುದ್ಧಿಪ್ರೇರಣೆಯಿಂದ ಅಜ್ಞಾನ ಪರಿಹಾರಕನಾದ ಪ್ರತ್ಯಗಾತ್ಮನಂ ತಿಳಿದು ಮನನದಿಂದ ಅಸಂಭಾವನಾ ವಿಪರೀತಭಾವನಾ ಸಂಶಯಗಳಂ ತಿರಸ್ಕರಿಸಿ, ನಿದಿ ಧ್ಯಾಸನದಿಂದವನು ಸಾಕ್ಷಾತ್ಕಾರಸುಖವನ್ನನುಭವಿಸುವನೆ ಮುಖ್ಯ ಗುರುವಾ ಗುವನು. ಮಂತ್ರೋಪದೇಶಾದಿಗಳಂ ಮಾಡಿದವರೆಲ್ಲರೂ ತತ್ತ್ವವಂ ತೋರಿಸ ಲಸಮರ್ಥರಾದ್ದರಿಂದ ಸಾಮಾನ್ಯ ಗುರುಗಳೆನಿಸುವರು. ಆದ್ದರಿಂದ ಸ್ವರೂಪ ಸಾಕ್ಷಾತ್ಕಾರ ಸುಖವನ್ನನುಭವಿಸುತ್ತಿದ್ದ ಆ ರಾಕ್ಷಸಿಯು ಜಗದ್ಗುರುವೆನಿ ಯಂಪಡದಳು. ಇಂತು ತಪವಂ ಮಾಡುತ್ತಿದ್ದ ಅವಳ ತಪೋಜ್ವಾಲೆಯಿಂ ಜಗವೆಲ್ಲವು ತರಹರಿಸುತ್ತಿರಲು, ಇಂದ್ರಾದಿ ದೇವತಾಮುಖದಿಂದದಂ ತಿಳಿದ ಬ್ರಹ್ಮನು ಪ್ರತ್ಯಕ್ಷವಾಗಿ ಬಂದು ನಿನಿಗೆ ಬೇಕಾದ್ದಂ ವರಿಸುವಳಾಗೆಂದು ಪೇಳ ಲಾರಾಕ್ಷಸಿಯು ಕರ್ಮೇಂದ್ರಿಯಗಳಿಲ್ಲದ್ದರಿಂದ ಮಾತನಾಡದೇ ಪೂರ್ವದಲ್ಲಿ ನಾನು ದೇಹಾದ್ಯಾತ್ಮಜ್ಞಾನದಿಂ ನಾನಾಪ್ರಕಾರವಾದ ಆಶೆಗಳಂ ವಹಿಸಿದ್ದೆನು. ಈಗ ವಿವೇಕ ವಿಚಾರಗಳಿಂದ ಅಜ್ಞಾನವಳಿದು ಸರ್ವಾತ್ಮಭಾವವು ಪ್ರಕಾಶಿಸುತ್ತಿ

ರುವಲ್ಲಿ, ನಾನು ಕೇಳತಕ್ಕದ್ದೇನಿರುವದೆಂದು ಆಲೋಚಿಸುತ್ತಿರುವಲ್ಲಿ, ಅದಂ ತಿಳಿದ ಬ್ರಹ್ಮದೇವನು ಸಂತುಷ್ಟನಾಗಿ, ಎಲೌ ಬಾಲಕಿಯೇ! ನೀನು ಕಾಮನೆಯಿಂ ತಪಸ್ಸಿಗೆ ಆರಂಭವಂ ಮಾಡಿದವಳಾದಕಾರಣ ಆ ಫಲವು ನಿನಗೆ ತಪ್ಪಲಾರದು. ರಾಕ್ಷಸಶರೀರದಿಂದಲೇ ನೀನು ಕೆಲವುಕಾಲ ಭೂಮಿಯಲ್ಲಿದ್ದು ಬಳಿಕ ಪರಮಪದವಂ ಪೊಂದುವಂತೆ ಪರಮೇಶ್ವರನ ಆಜ್ಞೆ ಇರುವದ್ದರಿಂದ, ಬೀಜದಲ್ಲಿರುವ ಶಕ್ತಿಯಿಂ ವೃಕ್ಷವಾಗುವಂತೆ ನಿನ್ನ ಸಂಕಲ್ಪದಿಂ ಪೂರ್ವಾಕಾರವೇ ಬರುವದು. ಧ್ಯಾನದ ರುಚಿಯಂ ಕಂಡ ನೀನು ಪ್ರಾಯಶಃ ಸಮಾಧಿನಿಷ್ಠಳಾಗಿಯೇ ಇರುತ್ತೀಯೆ, ಯಾವಾಗ ನಿನ್ನ ಚಿತ್ತ ಬಹಿರ್ಮುಖವಾಗುವದೋ ಆಗ ನೀನು ತತ್ವಜ್ಞಳಾದ್ದರಿಂದ, ನ್ಯಾಯಮಾರ್ಗಕ್ಕೆ ವಿರೋಧವಿಲ್ಲದಂತೆಯೇ ಭೂತಗಳಂ ಬಾಧಿಸುತ್ತೀಯೆ ಎಂದು ಬ್ರಹ್ಮನು ಹೇಳಿ ಅಂತರ್ಧಾನವಾಗಲು, ಐಂದ್ರಜಾಲಿಕನು ಬಿತ್ತಿದ ಬೀಜವು ವೃಕ್ಷವಾಗುವಂತೆ ಅವಳ ಆ ಸೂಕ್ಷ್ಮರೂಪವೇ ಕ್ಷಣಮಾತ್ರದಿಂ ವೃದ್ಧಿಹೊಂದಿ, ವರ್ಷಾಕಾಲದ ಮೇಘಮಾಲೆಯಂತೆ ಪ್ರಕಾಶಿಸಿತು. ಬಳಿಕ ಆ ರಾಕ್ಷಸಿಯು ಅಹಂಕಾರ ಮಮಕಾರಗಳಡಗಿ, ಈಶ್ವರನ ಪ್ರೇರಣೆಯಿಂ ಕರ್ಮವಂ ಮಾಡುವ ಆತ್ಮಾರಾಮರು ಯಾವ ಕರ್ಮವಂ ಮಾಡಿದಾಗ್ಯೂ ನಿರ್ಲೇಪನಾಗಿರುವರಲ್ಲವೇ ಆಪ್ರಕಾರ ನಾನು ಬ್ರಹ್ಮನ ಆಜ್ಞೆಯಂ ನಡೆಸುವೆನೆಂದಾಲೋಚಿಸಿ, ಸಮಾಧಿ ಸುಖಜ್ಞಳಾದ್ದರಿಂದ, ಅದಂ ಬಿಡಲಾರದೆ ಪರಮಾಕಾಶದಲ್ಲಿ ದೃಷ್ಟಿಯನ್ನಿಟ್ಟು ರಾಕ್ಷಸಜನ್ಮಕ್ಕೆ ಸಹಜವಾದ ತಾಮಸಭಾವವನ್ನು ಬಿಟ್ಟು ಪರೆಯಂಬಿಟ್ಟ ಹಾವಿನಂತೆ ಪ್ರಕಾಶಿಸುತ್ತಾ, ಬದ್ಧ ಪದ್ಮಾಸನದಲ್ಲಿ ಕುಳಿತು, ಪುನಃ ಸಮಾಧಿನಿಷ್ಠಳಾಗಿ ಆ ಬೆಟ್ಟದೊಳ್ ಇಂದ್ರನೀಲಮಯವಾದ ಕೋಡುಗಲ್ಲಿನಂತೆ ಪ್ರಕಾಶಿಸುತ್ತಿದ್ದಳು. ಹೀಗೆ ಆರುತಿಂಗಳು ನಿರ್ವಿಕಲ್ಪ ಸಮಾಧಿಯಲ್ಲಿದ್ದ ಆ ರಾಕ್ಷಸಿಗೆ ಚಿತ್ತ ಬಹಿರ್ಮುಖವಾಗಲು, ಬಾಹ್ಯದೃಷ್ಟಿಯಲ್ಲಿ ದೇಹಸ್ವಭಾವವು ಯಾರಿಗೂ ಬಿಡಲಾರದಾದ್ದರಿಂದ, ಅವಳಿಗೆ ಕ್ಷುತ್ತು ಉಂಟಾಯಿತು. ಆಗ ಅವಳು ಆಲೋಚಿಸಿದಳದೆಂತೆನೆ;—ಲೋಕದಲ್ಲಿ ಪ್ರಾಣಿಗಳ ಭಕ್ಷಣೆಯಿಂದಲೇ ಪ್ರಾಣಿಗಳಿಗೆ ಜೀವನವೆಂಬುವದು ಸರ್ವಸಾಧಾರಣವಾಗಿದ್ದಾಗ್ಯೂ, ರಾಕ್ಷಸಜಾತಿಯಲ್ಲಿ ಅದೇ ಮುಖ್ಯವಾಗಿರುವದು. ಹೀಗಿರುವಲ್ಲಿ ಪರಹಿಂಸೆಯಿಲ್ಲದೆ ನನಗೆ ಗ್ರಾಸವು ಹ್ಯಾಗೆ ಸಂಭವಿಸೀತು. ಅನ್ಯಾಯಮಾರ್ಗದಿಂ ಭಕ್ಷಿಸಿ ಜೀವಿಸುವದಕ್ಕಿಂತಲೂ ಮರಣವಂ ಪೊಂದುವದೇ ಉತ್ತಮವಾಗಿ ತೋರುತಲಿದೆ. ಅನ್ಯಾಯಾರ್ಜಿತವಾದ ಆಹಾರವು ವಿಷವಾಗಿ ಕೊಲ್ಲುವದರಲ್ಲಿ ಸಂದೇಹವಿಲ್ಲ. ಹಾಗೆ ಅದು ಕೊಲ್ಲುವಲ್ಲಿ ಬಹಳವಾಗಿ ವ್ಯಥೆಪಡಿಸುವದಾದ್ದ

ರಿಂದ, ಯೋಗಬಲದಿಂ ನಿರಾಯಾಸವಾಗಿ ದೇಹವಂ ಬಿಡುವದೆ ಉಚಿತವೆಂದು ತಿಳಿಯುತ್ತೇನೆ. ಲೋಕಸಮ್ಮತವಾದ ಕ್ರಮವಂ ಬಿಟ್ಟು ಸಂಪಾದಿಸಿದ ಆಹಾರದಿಂ ನನಗೆ ಏನು ಪ್ರಯೋಜನವಾದೀತು, ನಾನು ಮನೋಮಾತ್ರವಾದ ಶರೀರದಿಂದಿರುವಳಾದ್ದರಿಂದ, ಈ ದೇಹವಿದ್ದದ್ದರಿಂದಲೂ, ಇಲ್ಲದ್ದರಿಂದಲೂ ಕೂಡ ನನಗೇನೂ ಬಾಧಕವಿಲ್ಲ. ಆದಾಗ್ಯೂ ಬ್ರಹ್ಮನ ಆಜ್ಞೆಯಿಂ ನಾನು ದೇಹವಂ ಹಿಡಿದಿರುವಲ್ಲಿ ಈಗ ಮಾಡತಕ್ಕದ್ದೇನು ಎಂದು ಆ ರಾಕ್ಷಸಿಯು ಆಲೋಚಿಸುತ್ತಿರುವಲ್ಲಿ ಅಂತರಿಕ್ಷವಲ್ಲಿ ಸಂಚರಿಸುತ್ತಿದ್ದ ವಾಯುವು ಪೇಳಿದನದೆಂತೆನೆ.

ಎಲೌ ಅನ್ಯಾಯಬಾಧಿಕೆಯೆ ! ಲೋಕದಲ್ಲಿ ಜ್ಞಾನಿಗಳಾದವರಿಗೆ ಮೂಢರ ನ್ನೆಚ್ಚರಗೊಳಿಸಿ ವಿವೇಕವನ್ನುಂಟುಮಾಡುವದೇ ಮುಖ್ಯಕಾರ್ಯವಾದ್ದರಿಂದ ದುರ್ಮಾರ್ಗದಲ್ಲಿರುವ ಅಜ್ಞಾನಿಗಳಂ ನೀನು ಬಾಧಿಸುವಳಾಗು ಅವರು ನಿನ್ನ ಬಾಧೆಯಂ ತಾಳಲಾರದೆ ಸಾಧುಮಾರ್ಗಕ್ಕೆ ಬಂದಲ್ಲಿ ಸ್ವಬುದ್ಧಿಯಿಂದಲೇ ಬದುಕುವರು. ಅವರು ದುರ್ಮಾರ್ಗವಂ ಬಿಡದಿದ್ದಲ್ಲಿ ಭೂಭಾರಭೂತರಾದ ಅವರ ಭಕ್ಷಣೆಯಿಂದ ನಿನಗೇನೂ ಪಾಪ ಬರಲಾರದು ಎಂದು ವಾಯುವಿನ ಮಾತಂ ಕೇಳಿದ ಆ ರಾಕ್ಷಸಿಯು ಅನುಗ್ರಹಿಸಲ್ಪಟ್ಟೆನೆಂದು ಆ ವಾಯುವಿಗೆ ನಮಸ್ಕರಿಸಿ ಹಿಮವತ್ಪರ್ವತದ ಶಿಖರದಿಂ ಮೇಘಮಾಲೆಯಂತೆ ಇಳಿದು ಅದರ ಉಪಪರ್ವತದಲ್ಲಿರುವ ಕಿರಾತಮಂಡಲಕ್ಕೆ ಬಂದಳು. ಆಗ ಅವಳಿಗೆ ಸಖಿಯಂತೆ ಗಾಢಾಂಧಕಾರಮಯವಾದ ರಾತ್ರಿಯು ಸಿದ್ಧವಾಯಿತು. ಆ ರಾತ್ರಿಯಲ್ಲಿ ಭೇತಾಳಮಂಡಲವಂ ನೋಡಲೋಸುಗ ನಗರದಿಂ ಪೊರಮಟ್ಟ ರಾಜಮಂತ್ರಿಗಳಂ ಕಂಡ ಆ ರಾಕ್ಷಸಿಯು ಆಲೋಚಿಸಿದಳದೆಂತೆನೆ ? ಮೂಢರಾದ ಈ ಮನುಷ್ಯರಿಬ್ಬರು ನನ್ನಾಹಾರಾರ್ಥವಾಗಿಯೇ ಸಿದ್ಧವಾದರು. ಮೂಢನಾದವನು ಇಹದಲ್ಲೂ, ಪರದಲ್ಲೂ ಕೂಡ ದುಃಖಪಡುವದಕ್ಕೋಸ್ಕರವೇ ಬದುಕುವನಾದ್ದರಿಂದ ಭೂಮಿಗೆ ಭಾರವಾದ ಅವನ ದೇಹವಂ ತಿನ್ನುವಲ್ಲಿ ನನಗೇನು ಪಾಪ ಬಂದೀತು ? ಯಾವನು ಸ್ವಸ್ವರೂಪವನ್ನರಿಯನೋ ಅವನ ಜೀವನವೂ ಕೂಡ ಮರಣಪ್ರಾಯವಾಗಿರುವದು. ಆದರೆ ಅವನಿಗೆ ಇಲ್ಲಿ ಪಾಪಸಂಘಟನೆಯಾಗುವದ್ದರಿಂದ ಮರಣದಿಂದಲೇ ಕ್ಷೇಮವೆಂದು ತಿಳೀಬರುತ್ತೆ. ಬ್ರಹ್ಮನು ಸೃಜಿಸುವಲ್ಲಿಯೇ ಹಿಂಸಕರಾದ ಪ್ರಾಣಿಗಳಿಗೆ ಭಕ್ಷಣಾರ್ಥವಾಗಿಯೇ ಮೂಢರಂ ಸೃಜಿಸಿರುವನಾದ್ದರಿಂದ ಇವರಂ ನಾನು ಭಕ್ಷಿಸುವೆನು. ನಿರ್ಭಾಗ್ಯನಲ್ಲದೆ ಸಿದ್ಧವಾದ ಅರ್ಥವನ್ಯಾರೂ ಉಪೇಕ್ಷಿಸಲಾರರು. ಇವರು ಗುಣಿಗಳಾಗಿದ್ದಲ್ಲಿ ಸರ್ವಸ್ವದಾನದಿಂದಲೂ, ಗುಣಿಗಳು ಪೂಜಿಸಲು ಯೋಗ್ಯರಾದ್ದರಿಂದ ಇವರೊಡನೆ ಸ್ನೇಹವಂ ಮಾಡು

ವೆನು. ಸಾಧುಗಳ ಸಮಾರ್ಜನೆಯಿಂದ ಅಕೃತ್ರಿಮವಾದ ಸುಖವು, ಕೀರ್ತಿಯು, ಆಯುರ್ವೃದ್ಧಿಯೂ ಸಹ ಆಗುವದರಲ್ಲಿ ಸಂದೇಹವಿಲ್ಲ. ಸಾಧುಗಳು ತಮ್ಮ ಪ್ರಾಣವನ್ನಾದರೂ ಕೊಟ್ಟು ಪರರಂ ರಕ್ಷಿಸುವರಾದ್ದರಿಂದ ಅವರಿಗೆ ಪ್ರಾಣವ ನ್ನಾದರೂ ನಾನು ಕೊಟ್ಟೇನಲ್ಲದೆ ಅವರಂ ನಾನು ಭಕ್ಷಿಸುವದಿಲ್ಲ. ಸಜ್ಜನರ ಸಹವಾಸದಿಂ ಸ್ವರ್ಗವು ಅಪವರ್ಗವೂಕೂಡ ಸುಲಭವಾಗುವವಲ್ಲದೆ ಮೃತ್ಯು ವೂಕೂಡ ತನ್ನ ಕ್ರೌರ್ಯವಂ ಬಿಟ್ಟು ಮಿತ್ರಭಾವವಂ ಹೊಂದುವನು. ರಾಕ್ಷಸಿ ಯಾದ ನಾನೂಕೂಡ ಹೀಗೆ ದಯಾಯುಕ್ತಳಾಗುವಲ್ಲಿ ಸಾಧುಗಳನ್ನು ಯಾರು ತಾನೇ ಪೂಜಿಸಲಾರರು. ಸುಗುಣರಾದ ಮರುಭೂತಲ ಚಂದ್ರರಂತೆ ಪ್ರಾಣಿಗಳಂ ಸಂತೋಷಪಡಿಸುವರಾದ್ದರಿಂವ ಅವರಂ ತಿರಸ್ಕರಿಸುವದೇ ಮರಣವೆಂತಲೂ, ಅವರಂ ಪೂಜಿಸುವದೇ ಜೀವನವೆಂತಲೂ ತಿಳಿಯುತಲಿಧೇನೆ. ಆಕಾರದರ್ಶನ ಮಾತ್ರದಿಂದಲೇ ಗುಣದೋಷಗಳು ನಿಶ್ಚಯಿಸುವದಕ್ಕೆ ಆಗುವದಿಲ್ಲವಾದ್ದರಿಂದ ಮೊದಲು ಇವರಂ ನಾನು ಪರೀಕ್ಷಿಸುವೆನು ? ಎಂದು ಆ ರಾಕ್ಷಸಿಯು ಆಲೋ ಚಿಸಿ ಭಯಂಕರವಾಗಿ ಸಿಪ್ಮನಾದವಂ ಮಾಡಿ ಓ ಮನುಷ್ಯರಾ ! ನೀವು ಯಾರು? ಸುಬುದ್ಧಿಗಳೋ ದುರ್ಬುದ್ಧಿಗಳೋ ನನ್ನ ಆಹಾರಾರ್ಥವಾಗಿ ಇಲ್ಲಿಗೆ ಬಂದು ಇದ್ದೀರಿ ಎಂದು ಕೂಗಲು ಆಗ ರಾಜನು ಎಲೆಲಾ ಪ್ರಾಣಿಯೇ ನೀನು ಯಾರು ? ದೇಹವಂ ಮರೆಮಾಡಿಕೊಂಡು ಕೂಗುವದಕ್ಕೆ ಕಾರಣವೇನು ? ಧೈರ್ಯವಿದ್ದರೆ ಸ್ವರೂಪವನ್ನು ಶಕ್ತಿಯನ್ನು ತೋರಿಸಬಹುದು ! ನಿನ್ನ ಘರ್ಜನೆ ಯನ್ನು ಭ್ರಮರಧ್ವನಿಗೆ ಸರಿಯಾದ್ದೆಂದು ನಾವು ತಿಳದಿರುವೆವಲ್ಲದೆ ಭಯಪಡತ ಕ್ಕವರಲ್ಲ. ಅಲಸರಾದವರಿಗೆ ಆತ್ಮಕ್ಷಯವಲ್ಲದೆ ಇನ್ನೇನೂ ಸಿದ್ಧಿಸಲಾರದಾದ್ದ ರಿಂದ ನಾವು ಸರ್ವದಾ ಜಾಗರೂಕರಾಗಿಯೇ ಇರತಕ್ಕವರೆಂದು ಪೇಳಲಾ ರಾಕ್ಷಸಿಯು ಆ ಮಾತಿಸಿಂ ಸಂತುಷ್ಟಳಾಗಿ ಅವರ ಎದುರಿಗೆ ಬಂದು ನಿಲ್ಲಲು, ಎಕ್ಷರಾಕ್ಷಃಪಿಶಾಚಾದಿಗಳಿಗೂ ಭಯಂಕರವಾಗಿ ಅಕಾಲಮೃತ್ಯುವಿನಂತೆಯೂ, ಸೂರ್ಯಚಂದ್ರರೊಡನೆ ಯುದ್ಧವಂ ಮಾಡಲೋಸುಗ ರಾಹುವಿನಿಂದ ಸಂಪಾದಿ ಸಲ್ಪಟ್ಟ ಮೂರ್ತಿಯಂತೆಯೂ ಭೂವ್ಯಾಕಾಶಗಳಂ ಶೀಳದು ಪಿಡಿದುಕೊಂಡಿ ರುವ ಕಜ್ಜಲಮಯವಾದ ಸ್ತಂಭದಂತೆಯೂ, ಪ್ರಕಾಶಿಸುತ್ತಾ ಪ್ರಳಯಕಾಲದ ಮೇಘಧ್ವನಿಗೆ ಸಮಾನವಾದ ಘರ್ಜನೆಯಿಂದಲೂ, ಮಿಂಚುಗಳ ಮಂಡಲಕ್ಕೆ ಸಮಾನವಾದ ನೇತ್ರಗಳಿಂದಲೂ, ಏಕೀಭವಿಸಿರುವ ವಿಂಧ್ಯಾರಣ್ಯಗಳ ಪಜ್ತಿ ಯಂತೆ ನಾಡೀಮಯವಾದ ಶರೀರದಿಂದಲೂ, ಊರ್ಧ್ವಮುಖವಾದ ಕೇಶಪಾ ಶಕ್ಕೆ ಆಭರಣವಾಗಿರುವ ವನಕ್ಕೆ ವರಳು ನೇಗಲು ಮೊರಗಳ ಪರಂಪರೆ

ಯಿಂದಲೂ, ಮಹಾಮಾರಿಯಂತೆಯೂ, ಎರಡನೇ ಕಾಳರಾತ್ರಿಯಂತೆಯೂ, ಎದುರಿಗೆ ನಿಂದಿರುವ ಆ ರಾಕ್ಷಸಿಯಂ ಕಂಡು ಆ ರಾಜಮಂತ್ರಿಗಳಿಬ್ಬರು ಭಯ ಪಡದೆ ನಿಂದಿರುವಲ್ಲಿ ಎಲೌ ರಾಕ್ಷಸಿಯೇ ಈ ಆಡಂಬರದಿಂದೇನು? ಅಲ್ಪಬು ದ್ಧಿಗಳೇ ಸ್ವಲ್ಪವಾದ ಕಾರ್ಯಗಳಲ್ಲೂ ಕೂಡ ಮಹತ್ತರವಾದ ಸನ್ನಾಹವಂ ಮಾಡುವರು. ಬುದ್ಧಿಶಾಲಿಗಳಾದರೋ ಸಾಧಾರಣವಾಗಿಯೇ ಸಮವಾದ ಬುದ್ಧಿ ಯಿಂದಲೂ, ಲೋಕಸಮ್ಮತವಾದ ಯುಕ್ತಿಯಿಂದಲೂ, ಸಕಲ ಕಾರ್ಯಗಳನ್ನು ಸಾಧಿಸುವರು. ನೀನು ಮಾಹಾತ್ಮ್ಯವುಳ್ಳವಳಾಗಿ ತೋರುವದ್ದರಿಂದ ನಿನಗೆ ಈ ಆಡಂಬರವು ಉಚಿತವಾಗಿ ಕಾಣುವದಿಲ್ಲ. ನಮ್ಮೆಡಗೆ ಬಂದ ಅರ್ಥಿಯು ವ್ಯರ್ಥ ವಾಗಿ ಹೋದದ್ದು ಸ್ವಪ್ನದಲ್ಲೂ ಇಲ್ಲವಾದ್ದರಿಂದ ನಿನ್ನ ಪ್ರಾರ್ಥಿತವಂ ಬೇಡಿ ಕೊಳ್ಳುವಳಾಗು. ಈ ಕಿರಾತಮಂಡಲಕ್ಕೆ ಇವನು ಮಹಾರಾಜನು ಇವನ ಮಂತ್ರಿಸ್ಥಾನದಲ್ಲಿರುವೆನು. ನಮಗೆ ದುಷ್ಟನಿಗ್ರಹವೇ ಮುಖ್ಯಕಾರ್ಯವಾದ್ದ ರಿಂದ ದಿವಾರಾತ್ರಿಯಲ್ಲೂ ಹೀಗೆ ಸಂಚರಿಸುತ್ತಿರುವೆನೆಂದು ಮಂತ್ರಿಯು ಪೇಳ ಲು, ಅದಂ ಕೇಳಿದ ಆ ರಾಕ್ಷಸಿಯು ಸಂತುಷ್ಟಳಾಗಿ ನದೀಜಲಗಳಂತೆ ವಾಙ್ಮು ಖನೇತ್ರಗಳು ಏಕರೀತಿಯಾಗಿ ಶೇರುವದ್ದರಿಂದ ಇವನು ಕಪಟವಿಲ್ಲದವನಂತೆ ತೋರುತ್ತಲಿಧೆ; ನನ್ನನ್ನು ನೋಡಿದಾಗ್ಯೂ ಭಯಪಡದಿರುವದ್ದರಿಂದ ಇವನು ಆತ್ಮಜ್ಞಾನದಿಂದುಂಟಾದ ಧೈರ್ಯವುಳ್ಳವನಂತೆ ಕಾಣುತಲಿಧೆ. ಪ್ರಾಜ್ಞರು ಬಂದ ವೇಳೆಯಲ್ಲಿ ಕೇಳತಕ್ಕದ್ದಂ ಯಾವನು ಕೇಳದಿರುವನೋ ಅವನು ದುರ್ಮತಿ ಯೆನಿಸುವನಾದ್ದರಿಂದ ಬ್ರಹ್ಮವಿಷಯಕವಾದ ಪ್ರಶ್ನೆಯಂ ಮಾಡುವೆನೆಂದು ನಿಶ್ಚೈಸಿ ಎಲೈ ಮಂತ್ರಿಯೇ ಲೋಕದೊಳ್ ರಾಜಮಂತ್ರಿಗಳಲ್ಲಿ ಒಬ್ಬ ಕೆಟ್ಟ ವನಾದಾಗ್ಯೂ ಇಬ್ಬರೂ ಕೆಡುವರು. ಯಾವನಿಗೆ ಒಳ್ಳೇ ಮಂತ್ರಿಯಿರುವನೋ ಅವನೇ ರಾಜನೆನಿಸುವನು. ಯಾವನಿಗೆ ಒಳ್ಳೇ ರಾಜನಿರುವನೋ ಅವನೇ ಮಂತ್ರಿಯೆನಿಸುವನು. ಪ್ರಜೆಗಳೆಲ್ಲರೂ ರಾಜನ ಆಚಾರವನ್ನೇ ಅನುಸರಿಸುವ ರಾದ್ದರಿಂದ ಬುದ್ಧಿಶಾಲಿಯಾದ ಮಂತ್ರಿಯು ಮೊದಲು ರಾಜನಂ ವಿವೇಕದಲ್ಲಿ ನಿಲ್ಲಿಸಬೇಕು. ಪ್ರಭುತ್ವವು ಸಮದೃಷ್ಟಿತ್ವವೂ ಕೂಡ ರಾಜನಿಗೆ ಸ್ವಧರ್ಮವೆ ನಿಸುವದು. ಇದು ರಾಜವಿದ್ಯೆಯಿಂದಾಗಬೇಕಲ್ಲದೆ ಮತ್ತೊಂದರಿಂದಾಗಲಾ ರದು. ಸಕಲ ವಿದ್ಯೆಗಳಲ್ಲೂ ರಾಜವಿದ್ಯೆಯೆನಿಸುವದು. ಬ್ರಹ್ಮವಿದ್ಯೆಯಲ್ಲದೆ ಮತ್ತೊಂದಲ್ಲ. ಅದಂ ನೀವು ತಿಳಿದಿದ್ದರೆ ನನ್ನ ಪ್ರಶ್ನೆಗಳಿಗೆ ಉತ್ತರವಂ ಪೇಳು ತ್ತೀರಿ, ಉತ್ತರವಂ ಪೇಳಲಾರದಿದ್ದರೆ ನಿಮಗೆ ಶ್ರೇಯಸ್ಸಾಗಲಾರದು. ನಿಮ್ಮ ಮುಖದಿಂದುತ್ತರವಂ ಕೇಳುವದೆ ನನಗೆ ಪ್ರಾರ್ಥನೆಯಾಗಿರುವದೆಂದು ಪೇಳು

ವಲ್ಲಿ ಪ್ರಶ್ನೆಗಳಂ ನಿರೂಪಿಸುವಳಾಗೆಂದು ರಾಜನು ಪೇಳಲು, ರಾಕ್ಷಸಿಯು ಪ್ರಶ್ನೆಗಳಂ ಪೇಳಿದಳು. ಅವುಗಳಿಗೆ ಮಂತ್ರಿಯು ಉತ್ತರಗಳಂ ಪೇಳಿದನ ದೆಂತೆಂದರೆ:—

ಪ್ರಶ್ನೆ—ಒಂದೇ ಆದರೂ ಅನೇಕವಾಗುವ ಯಾವ ಪರಮಾಣುವಿನಲ್ಲಿ ಸಮುದ್ರದಲ್ಲಿ ನೀರುಗುಳ್ಳೆಗಳಂತೆ ಜಗತ್ತುಗಳು ಲೀನವಾಗಿರುವವು. ॥೧॥

ಉತ್ತರ—*ಕನಕವು ಕಟಕಮಕುಟಾದಿ ಭೂಷಣಭೇದದಿಂ ಬಹುರೂಪ ವಾಗಿ ಕಾಣುವಂತೆ ಈ ಪರಮಾತ್ಮನು ಉಪಾಧಿಭೇದದಿಂದನೇಕ ಪ್ರಾಣಿಗಳ ಹೃದಯದಲ್ಲಿ ಪ್ರಕಾಶಿಸುತ್ತಾ ಅನೇಕರೂಪನಾಗಿ ತೋರುವನು. †ಮನಸ್ಸಿ ನೊಡನೆ ಆರಾದ ಜ್ಞಾನೇಂದ್ರಿಯಗಳಿಗೆ ಗೋಚರವಾಗದೆ ಅವುಗಳಿಗೆ ಅಂತರ್ಯಾಮಿ ಯಾಮಕನಾಗಿರುವದ್ದರಿಂದಲೂ, ನಾಮರೂಪರಹಿತನಾದ್ದರಿಂದಲೂ, ಆಕಾಶ ದಂತೆ ಸೂಕ್ಷ್ಮರೂಪನಾಗಿ ಪರಮಾಣುವೆನಿಸುವನು. ಸರ್ವವ್ಯಾಪಕನಾದ ಇವ ನಲ್ಲಿ ಆಕಾಶದಲ್ಲಿ ನಕ್ಷತ್ರಗಳಂತೆ ಬ್ರಹ್ಮಾಂಡಲಕ್ಷಗಳು ಗೋಚರವಾಗಿ ಅಣಗು ತ್ತಿರುವವು. ॥೧॥

ಪ್ರಶ್ನೆ—ಬೀಜದಲ್ಲಿ ವೃಕ್ಷದಂತೆ ಯಾವನಲ್ಲಿ ಜಗತ್ತುಗಳಿರುವವು? ॥೨॥

ಉತ್ತರ—ಸೂಕ್ಷ್ಮಭಾವದಿಂ ಬೀಜದಂತಿರುವ ಈ ಆತ್ಮನಲ್ಲಿ ಇದ್ದದ್ದೇ ಪ್ರಕಾಶಿಸುವದೆಂಬ ನ್ಯಾಯದಿಂ ಸದ್ರೂಪವಾಗಿಯೂ, ದೃಶ್ಯವಾದ ಕಾರ್ಯರೂ ಪದಿಂದ ಸದ್ರೂಪವಾಗಿಯೂ, ಬೀಜದಲ್ಲಿ ವೃಕ್ಷದಂತೆ ಜಗತ್ತುಗಳಿರುವವು. ॥೨॥

ಪ್ರಶ್ನೆ—ಯಾವನಿಂದ ಸತ್ತೆಗಳಿಗೆ ಸ್ವಭಾವಸ್ಥಿತಿಯುಂಟಾಗಿರುವದು?

ಉತ್ತರ—ಸರ್ವಪದಾರ್ಥಗಳ ಸತ್ತೆಯೂ, ಅನುಭವಸತ್ತೆಗೆ ಅಧೀನವಾಗಿ ರುವದು. ಅನುಭವಸತ್ತೆಯೂ, ಅನ್ಯಸತ್ತಾಧೀನವೆನ್ನುವದರಲ್ಲಿ ಆ ಸತ್ತೆಯೂ ಅನ್ಯಾಧೀನವೆಂದು ಅನವಸ್ಥೆ ಬರುವದಾದ್ದರಿಂದ ಅನುಭವಮಾತ್ರ ಸಿದ್ಧವಾದ ಬ್ರಹ್ಮವೇ ಅನುಭವವೆನಿಸಿಕೊಳ್ಳುವದು. ಅದರ ಸತ್ತೆಯಿಂದಲೇ ಸಮಸ್ತ ಪದಾರ್ಥಗಳಿಗೂ ಸ್ವಭಾವಸತ್ತೆ ಸಿದ್ಧವಾಗಿರುವದು.

ಪ್ರಶ್ನೆ—ಆಕಾಶವಲ್ಲದ ಆಕಾಶವು ಯಾವದು?

ಉತ್ತರ—ಯಾವದೂ ಇಲ್ಲದ್ದರಿಂದ ಆಕಾಶಶಬ್ದವು ಶೂನ್ಯಾರ್ಥಕವಾಗಿರು ವದು. ಭಾವಪದಾರ್ಥಗಳು ಯಾವದೂ ಇಲ್ಲದ್ದರಿಂದ ಆಕಾಶವಂತಿರುವ ಈ

*ಚಿನ್ನವು ಕಡಗ ಕಿರೀಟ ಮೊದಲಾದ ಒಡವೆಗಳಾಗಿ ನಾನಾರೂಪದಿಂದ ಕಾಣುವಂತೆ.

†ಮನಸ್ಸೂ ಸೇರಿ ಆರು ಸಂಖ್ಯೆಯುಳ್ಳ.

ಆತ್ಮನು ಜ್ಞಾನಸ್ವರೂಪದಿಂದನುಭವಗೋಚರನಾಗಿರುವದ್ದರಿಂದ ಶೂನ್ಯವೆನಿಸಿಕೊಳ್ಳುವದಿಲ್ಲ. ಅದರಿಂದಲೇ ಆಕಾಶಭಿನ್ನವಾದ ಆಕಾಶವೆನಿಸುವನು.

ಪ್ರಶ್ನೆ—ಯಾವದು ಗಣನೆಗೆ ಸೇರದೆ ಏನೋ ಒಂದೆನಿಸಿಕೊಳ್ಳುತ್ತಿದ್ದರೂ ಸರ್ವವು ಆಗಿರುವದು ?

ಉತ್ತರ—ಗೋಚರವಾದ್ದಕ್ಕೆ ಗಣನೆ ಸಂಭವಿಸುವದಾದ್ದರಿಂದ ತನಗೆತಾನೇ ಗೋಚರವಾಗುವ ಬ್ರಹ್ಮವು ಏನೋ ಒಂದೆನಿಸುವದು. ಸರ್ವರೂಪದಿಂದದೇ ಭೋಕ್ತೃವಾದ್ದರಿಂದಲೂ, ಭೋಗಭೋಗ್ಯರೂಪದಿಂ ಪ್ರಕಾಶಿಸುವದರಿಂದಲೂ, ಸರ್ವಸ್ವರೂಪವಾಗಿರುವದು. ||೫||

ಪ್ರಶ್ನೆ—ಒಂದೂ ಅಲ್ಲದ ಈ ಆತ್ಮನು ಒಂದೆನಿಸುವದು ಹ್ಯಾಗೆ ? ||೬||

ಉತ್ತರ—ಅಂತಃಕರಣಾದಿಗಳಿಗೆ ಅಗಮ್ಯವಾದ್ದರಿಂದ ಒಂದೂ ಅಲ್ಲದಿದ್ದರೂ ದೇಶ ಕಾಲ ವಸ್ತು ಪರಿಚ್ಛೇದವಿಲ್ಲದೆ ಅನಂತವಾಗಿರುವದ್ದರಿಂದ ಕೇವಲ ಭಾವದಿಂ ಒಂದೆನಿಸುವದು. ||೬||

ಪ್ರಶ್ನೆ—ಹ್ಯಾಗೆ ಈ ಆತ್ಮನು ಇದ್ದರೂ ಇಲ್ಲವೆನಿಸುವನು ? ||೭||

ಉತ್ತರ—ಸರ್ವಾತ್ಮಭಾವದಿಂದಿರುವ ಈ ಆತ್ಮನನ್ನು ತಾನು ಯಾರೆಂಬ ಜ್ಞಾನವಿಲ್ಲದ ಅತಿಮೂಢನೇ ಇಲ್ಲವೆಂದು ಹೇಳುವನು. ಆತ್ಮನು ಗೂಢವಾಗಿದ್ದರೂ, ಪಚ್ಚಕರ್ಪೂರದಂತೆ ಪ್ರಕಾಶಿಸುವನಾದ್ದರಿಂದ ಇಲ್ಲವೆಂಬ ಮಾತೇ ಅಸಂಗತವೆಂದು ತಿಳಿಯತಕ್ಕದ್ದು. ||೭||

ಪ್ರಶ್ನೆ—ಇವನು ಸರ್ವರೂಪನಾಗಿದ್ದರೂ ಒಂದೂ ಅಲ್ಲವೆನಿಸುವದು ಹ್ಯಾಗೆ ? ||೮||

ಉತ್ತರ—ಇಂದ್ರಿಯ ವೃತ್ತಿಗಳಿಂ ಸರ್ವತೋಮುಖವಾಗಿ ಹೊರಹೊಮ್ಮಿ ಸರ್ವರೂಪವಾಗಿ ತೋರುತ ಮನದಲ್ಲಿ ಚಿದ್ರೂಪದಿಂ ಗೂಢವಾಗಿರುವನಾದ್ದರಿಂದ ಈ ಆತ್ಮನು ಯಾವದೂ ಅಲ್ಲವೆನಿಸುವನು. ||೮||

ಪ್ರಶ್ನೆ—ಜಗತ್ತೆಂಬ ಮಣಿಗೆ ಯಾವನು ಬೊಕ್ಕಸವಾಗಿರುವನು ? ||೯||

ಜಗತ್ತೇ ಯಾವ ಮಣಿಗೆ ಬೊಕ್ಕಸವಾಗಿರುವದು. ||೧೦||

ಉತ್ತರ—ಬೊಕ್ಕಸದಲ್ಲಿದ್ದ ರತ್ನವು ಯಾವಬಾಧೆಯೂ ಇಲ್ಲದಿರುವಂತೆ ಆತ್ಮಾಧಾರವಾಗಿ ಜಗತ್ತಿರುವದು. ಚಿಜ್ಜಡವಿಭಾಗದಲ್ಲಿ ಅಂತರ್ಯಾಮಿಭಾವದಿಂ ಜಗತ್ತಿನಲ್ಲಿ ಆತ್ಮನಿರುವನು. ಆದರೆ ಮಾತೃಮಾನಮೇಯಾತ್ಮಕವಾದ ಈ ಜಗತ್ತು ಆತ್ಮನಿಗೆ ಅಭಿನ್ನವೆಂದು ಸತ್ತಾವಿಚಾರವಂ ಮಾಡುವಲ್ಲೂ ನಿತ್ಯಾನಿತ್ಯವಿಚಾರದಿಂ ಸಾಕ್ಷಿಯಾದ ಆತ್ಮನಲ್ಲಿ ದೃಷ್ಟಿಯನ್ನಿಡುವಲ್ಲೂ ನಿರ್ಣಯವಾಗುವದು.

ಪ್ರಶ್ನೆ—ಜಲಕ್ಕೆ ತರಂಗದಂತೆ ಯಾವನಿಗೆ ಬಂದೂ ಭಿನ್ನವಾಗಿಲ್ಲದಿರು ವದು. ||೧೧||

ಉತ್ತರ—ಚಿತ್ತರೂಪದಿಂದಿರುವ ಈ ಆತ್ಮನಲ್ಲಿ ಕಲ್ಪನಾತ್ಮಕವಾದ ಈ ಜಗತ್ಪರಂಪರೆಗಳು ಜಲದಲ್ಲಿ ಸುಳಿಗಳಂತೆ ತಿರಗುತ್ತಿರುವದ್ದರಿಂದ ಇವನಿಗೆ ಸರ್ವವೂ ಅಭಿನ್ನವಾಗಿರುವದು. ||೧೧||

ಪ್ರಶ್ನೆ—ನಾನ ನೀನೆನಿಸುವದು ಯಾವದು. ||೧೨||

ನೀನೇ ನಾನೆಸುವದು ಯಾವದು. ||೧೩||

ಉತ್ತರ—ಅಭೇದವು ಸಹಜವಾಗಿದ್ದಾಗ್ಯೂ ವ್ಯವಹಾರದೃಷ್ಟಿಯಿಂದ ನಾನು ನಾನೆ ಆಗಿರುವೆನು. ನೀನು ನೀನಾಗಿಯೇ ಇರುತ್ತೀಯೆ. ಪರಮಾರ್ಥ ದೃಷ್ಟಿಯಲ್ಲಿ ನೀನು ನಾನೆಂಬುವದೆ ಮೊದಲಾದ್ದು ಯಾವದೂ ಇಲ್ಲದ್ದರಿಂದ ಅಖಂಡ ಜ್ಞಾನರೂಪನಾದ ಪರಮಾತ್ಮನೊಬ್ಬನೇ ಪ್ರಕಾಶಿಸುತ್ತಿರುವನು. ಅವನ ವಿಚಾರದಿಂ ಜ್ಞಾನೋದಯವಾಗುವಲ್ಲಿ ನೀನೆ ನಾನೆಂತಲೂ, ನಾನೇ ನೀನೆಂತಲೂ, ಆತ್ಮನೆಂಬ ವಸ್ತುವೇ ಹೇಳಲ್ಪಡುವದು.

ಪ್ರಶ್ನೆ—ಯಾವನು ಹೋಗುತ್ತಿದ್ದರೂ ಹೋಗದಿರುವನು. ||೧೪||

ಉತ್ತರ—ಈ ಆತ್ಮನು ಸ್ವಪ್ನ ಮನೋರಥ ಸಂಕಲ್ಪಗಳಲ್ಲಿ ನೂರಾರು ಯೋಜನಗಳಂ ಹೋಗುತ್ತಿದ್ದರೂ ಆಕಾಶದಂತೆ ವ್ಯಾಪಕನಾಗಿರುವದ್ದರಿಂದ ಚಲಿಸದಿರುವನು. ||೧೪||

ಪ್ರಶ್ನೆ—ಯಾವನು ನಿಂತಿದ್ದರೂ ನಿಲ್ಲದಿರುವನು. ||೧೫||

ಉತ್ತರ—ಆಕಾಶದಂತೆ ವ್ಯಾಪಕನಾದ ಆತ್ಮನಿಗೆ ಶರೀರಚಲನೆಯಿಂದಲೆ ಗತಾಗತಗಳಾದ್ದರಿಂದ ಘಟಾಕಾಶದಂತೆ ಈ ಆತ್ಮನು ಪೂರ್ಣದೃಷ್ಟಿಯಿಂ ನಿಂತಿದ್ದರೂ ಖಂಡದೃಷ್ಟಿಯಿಂ ನಿಲ್ಲದಿರುವನು. ||೧೫||

ಪ್ರಶ್ನೆ—ಯಾವನು ಚೇತನವಾದರೂ ಪಾಷಾಣವೆನಿಸುವನು. ||೧೬||

ಉತ್ತರ—ಚಿಜ್ಜಡವಿಭಾಗದಲ್ಲಿ ಆತ್ಮನ ಅಖಂಡಭಾವಕ್ಕೆ ಅಪಲಾಪವಾಗುವದು; ನಿತ್ಯಾನಿತ್ಯವಿಭಾಗದಲ್ಲಿ ಚಿತ್ತೆ ನಿತ್ಯವಾಗಿ ನಿಲ್ಲುವದ್ದರಿಂದ ಜಡವಿಲ್ಲವೆಂತಲೇ ಹೇಳಬೇಕಾಗುತ್ತೆ. ಹೀಗೆ ಪರಮಾರ್ಥದೃಷ್ಟಿಯಿಂ ನೋಡುವಲ್ಲಿ ಚಿಜ್ಜಡವಿಭಾಗವೇ ಅಸಂಗತವಾಗುವದ್ದರಿಂದ ಚೇತನವಾದರೂ ಪಾಷಾಣವೆಂತಲೂ, ಅಚೇತನವಾದರೂ ಚೇತನವೆಂತಲೂ, ಪ್ರಶ್ನೆಯೇ ಸಂಗತವಾಗುವದಿಲ್ಲ. ಅಥವಾ ವಿಚಿತ್ರವಿಲಾಸನಾದ ಈ ಆತ್ಮನು ಸ್ಪಂದಾಸ್ಪಂದರೂಪಗಳಂ ಪ್ರಕಾಸಿಸುವದ್ದರಿಂದ ಉಭಯರೂಪದಿಂದವನೆ ಇರುವನೆಂದು ತಿಳಿಯತಕ್ಕದ್ದು.

ಪ್ರಶ್ನೆ—ಯಾವನು ಚಿದಾಕಾಶದಲ್ಲಿ ವಿಚಿತ್ರಕಾರ್ಯವಂ ಮಾಡುವನು.

ಉತ್ತರ—ಈ ಆತ್ಮನು ಆಕಾಶರೂಪವಾದ ತನ್ನಲ್ಲೇ ಕಲ್ಪನೆಯಿಂದ ಜಗಚ್ಚಿತ್ರವಂ ಮಾಡಿಕೊಂಡು ಅದಂ ನೋಡುತ್ತಾ ತಾನೆ ಸಂತೋಷಪಡುತ್ತಿರುವನು. ॥೧೭॥

ಪ್ರಶ್ನೆ—ಯಾವನು ವಹ್ನಿಭಾವವಂ ಬಿಡದಿದ್ದರೂ ಸುಡದಿರುವ ವಹ್ನಿಯಾಗಿರುವನು. ॥೧೮॥

ಉತ್ತರ—ವಹ್ನಿಸತ್ತೆಗೆ ಇವನ ಸತ್ತೆಯೇ ಅವಲಂಬನವಾದ್ದರಿಂದ ವಹ್ನಿಭಾವವಂ ಬಿಡದ ಈ ಆತ್ಮನು ಪ್ರಕಾಶಕಭಾವದಿಂ ಸುಡದಿರುವ ವಹ್ನಿಯಾಗಿರುವನು. ॥೧೮॥

ಪ್ರಶ್ನೆ—ವಹ್ನಿಯಿಲ್ಲದ ಯಾವ ಪದಾರ್ಥದಿಂ ವಹ್ನಿ ಪುಟ್ಟುವದು. ॥೧೯॥

ಉತ್ತರ—ಜ್ವಲಿಸುವ ಸೂರ್ಯನಂತೆ ಸರ್ವಪ್ರಕಾಶಕನಾದ್ದರಿಂದೀ ಆತ್ಮನು ತೇಜವೆನಿಸುವನಲ್ಲದೆ ಇವನಲ್ಲಿ ವಹ್ನ್ಯಾದಿಭಾವಗಳು ಇಲ್ಲ. ಸರ್ವಭಾವಾತಿರಿಕ್ತನಾದ್ದರಿಂದಾಕಾಶರೂಪನಾದ ಇವನಿಂದಲೇ ಪರಪ್ರಕಾಶಕವಾದ ಚೈತನ್ಯವು ಪ್ರಸರಿಸುವದಾದ್ದರಿಂದ ವಹ್ನಿಯಿಲ್ಲದ್ದರಿಂ ವಹ್ನಿ ಪುಟ್ಟುವದೆಂಬುವದು ಸಂಗತವಾಗುವದು.

ಪ್ರಶ್ನೆ—ಚಂದ್ರಸೂರ್ಯಾಗ್ನಿ ನಕ್ಷತ್ರಗಳು ಯಾವದೂ ಇಲ್ಲದಿದ್ದರೂ ಯಾವನು ನಾಶವಿಲ್ಲದೆ ಪ್ರಕಾಶಕನಾಗಿರುವನು. ॥೨೦॥

ಉತ್ತರ—ಜ್ಞಾನದಿಂ ಚಂದ್ರಸೂರ್ಯಾದಿಗಳಿಗೂ ಪ್ರಕಾಶಕನಾಗಿರುವ ಸ್ವಯಂಪ್ರಕಾಶನಾದ ಈ ಆತ್ಮನು ಅಸ್ತವಾದ ಚಂದ್ರಸೂರ್ಯಾದಿಗಳಿಗೆ ಪುನಃ ಪ್ರಕಾಶಕನಾಗಿ ಎಂದೆಂದಿಗೂ ನಾಶವಿಲ್ಲದೆ ಸರ್ವಪ್ರಕಾಶಕನಾಗಿರುವನು.॥೨೦॥

ಪ್ರಶ್ನೆ—ನೇತ್ರಕ್ಕೆ ಲಭ್ಯವಾಗದ ಪ್ರಕಾಶವು ಯಾವನಿಂದುಂಟಾಗುವದು ?

ಉತ್ತರ—ಅನುಭವಮಾತ್ರ ಗೋಚರನಾದ ಈ ಆತ್ಮನಿಂದ ಅಹಂಕಾರ ಮನೋನೇತ್ರಾದಿಗಳಿಗೂ ಪ್ರಕಾಶಕವಾದ ಜ್ಞಾನಪ್ರಕಾಶ ಉಂಟಾಗುವದು.

ಪ್ರಶ್ನೆ—ಲತಾದಿಗಳಿಗೂ ಹುಟ್ಟುಕುರುಡರಿಗೂ ಯಾವ ಬೆಳಕಿರುವದು.

ಉತ್ತರ—ಈ ಆತ್ಮನಿಂದುಂಟಾದ ಜ್ಞಾನಪ್ರಕಾಶದಿಂದಂಧಕರು ಮಾರ್ಗವಂ ಬಿಡದೇ ನಡೆಯುವರು. ಲತಾದಿಗಳಿಗೆ ವೃದ್ಧಿ ಮೊದಲಾದ ಜ್ಞಾನಉಂಟಾಗುವದು.

ಪ್ರಶ್ನೆ—ಆಕಾಶಾದಿಗಳಿಗೆ ಜನಕನು ಯಾವನು ? ॥೨೩॥

ಉತ್ತರ—ಕಾಲಾದಿ ವ್ಯವಹಾರದಲ್ಲಿ ಈ ಆತ್ಮನೇ ಆಕಾಶಾದಿಗಳಿಗೆ ಕರ್ತೃವೆಂತಲೂ, ಭೋಕ್ತೃವೆಂತಲೂ, ಹೇಳಲ್ಪಡುವನು. ॥೨೩॥

ಪ್ರಶ್ನೆ—ಯಾವನು ಕತ್ತಲೆಯೂ, ಬೆಳಕೂ ಆಗಿರುವನು ? ॥೨೪॥

ಉತ್ತರ—ಈ ಆತ್ಮನೇ ಸೂರ್ಯಾದಿಪ್ರಕಾಶವಿಲ್ಲದ್ದರಿಂದ ತಮವೆನಿಸುವನು. ಸೂರ್ಯಾದಿಗಳಿಗೂ ಪ್ರಕಾಶಕನಾದ್ದರಿಂದ ಪ್ರಕಾಶವೆನಿಸುವನು.

ಪ್ರಶ್ನೆ—ಯಾವನು ದೂರದಲ್ಲೂ, ಸಮೀಪದಲ್ಲೂ ಇರುವನು. ॥೨೫॥

ಉತ್ತರ—ಇಂದ್ರಿಯಗಳಿಗೆ ಅಗೋಚರನಾದ್ದರಿಂ ದೂರವಾಗಿರುವ ಈ ಆತ್ಮನು ಅನುಭವಗೋಚರನಾದ್ದರಿಂ ಸಮೀಪದಲ್ಲೆ ಇರುವನು. ॥೨೫॥

ಪ್ರಶ್ನೆ—ಯಾವನು ಪ್ರಮಾಣವಾದರೂ ದೊಡ್ಡ ಬೆಟ್ಟವಾಗಿರುವನು ?

ಉತ್ತರ—ತಿಳಿಯಲಶಕ್ಯನಾದ್ದರಿಂದಣುವೆನಿಸುವ ಈ ಆತ್ಮನು ನಾನೆಂಬುವವರಿಂ ಬೆಟ್ಟದಂತೆ ಗೋಚರವಾಗಿರುವನು. ಈ ಅಹಂಕಾರವು ಪ್ರವೃತ್ತಿಮಾರ್ಗದಲ್ಲಿರುವಾಗಲೇ ಜಗತ್ತು ಗೋಚರವಾಗುವದಾದ್ದರಿಂದ ಅಜ್ಞಾನರೂಪವಾದ ಈ ಅಹಂಕಾರವೇ ಜಗದ್ರೂಪವಾಗಿರುವದೆಂದು ಹೇಳುವರು. ನಿವೃತ್ತಿಮಾರ್ಗದಿಂದಹಂಕಾರವು ಪರಾಙ್ಮುಖವಾಗುವಲ್ಲಿ ಯಾವದೂ ಇಲ್ಲವಾಗುವದಾದ್ದರಿಂದ ಈ ಆತ್ಮನೇ ಅಣುವಾದರೂ ಪ್ರಕಾಶರೂಪದಿಂ ಬೆಟ್ಟವಾಗುವನು. ॥೨೬॥

ಪ್ರಶ್ನೆ—ಯಾವನು ನಿಮೇಷರೂಪನಾದರೂ ಕಲ್ಪಸ್ವರೂಪನಾಗುವನು. ಕಲ್ಪರೂಪನಾದರೂ ನಿಮೇಷರೂಪನಾಗುವನು. ॥೨೭॥

ಉತ್ತರ—ಸುಖದುಃಖಗಳಲ್ಲಿ ದೀರ್ಘಕಾಲವು ಸ್ವಲ್ಪವಾಗಿಯೂ, ಸ್ವಲ್ಪಕಾಲವು ದೀರ್ಘವಾಗಿಯೂ ಆಗುವದು. ಹೀಗೆ ಸ್ವಪ್ನದಲ್ಲಿ ದೇಶ ವ್ಯತ್ಯಾಸವಾಗುವದು. ಆದ್ದರಿಂದ ದೇಶ ಕಾಲ ದೀರ್ಘಾದೀರ್ಘಗಳು ಜ್ಞಾನಾಧೀನವೆನಿಸುವವು. ಅದರಿಂದ ಕಾಲಾಭಿನ್ನನಾದ ಈ ಆತ್ಮನು ತನಿಗೆ ತೋರಿದಂತೆಯೇ ನಿಮೇಷವಂ ಕಲ್ಪವಾಗಿಯೂ, ಕಲ್ಪವಂ ನಿಮೇಷವಾಗಿಯೂ ತಿಳಿಯುತ್ತಾ ಆ ರೂಪದಿಂದಲೇ ಅನುಭವಗೋಚರನಾಗುವನು. ॥೨೭॥

ಪ್ರಶ್ನೆ—ಯಾವದು ಎದುರಿಗಿದ್ದರೂ ಪ್ರತ್ಯಕ್ಷವಲ್ಲದಿರುವದು. ॥೨೯॥

ಉತ್ತರ—ಕಟಕಜ್ಞಾನವಿರುವವರಿಗೂ ಕನಕಜ್ಞಾನವಿರುವದಿಲ್ಲ. ಕನಕಜ್ಞಾನದಿಂ ಕಟಕದ ಕೃತ್ರಿಮಭಾವ ತೋರಲು ಕನಕವೇ ನಿಶ್ಚಿತವಾಗುವದು. ಹೀಗೆ ಸತ್ತಾವಿಚಾರದಿಂ ದೃಶ್ಯವೇ ದ್ರಷ್ಟೃವಾಗಿ ತೋರಲು, ದೃಶ್ಯವು ಬ್ರಹ್ಮಾಭಿನ್ನವಾಗುವದ್ದರಿಂದ ದೃಶ್ಯವು ಹೇಯವಾಗುವದಿಲ್ಲ. ದೃಶ್ಯರೂಪದಿಂದೀ ಆತ್ಮನು ಪ್ರತ್ಯಕ್ಷವಾಗಿದ್ದರೂ ದೃಗ್ರೂಪದಿಂ ಪ್ರತ್ಯಕ್ಷವಾಗಿರುವನು. ॥೨೯॥

ಪ್ರಶ್ನೆ—ಯಾವದು ಚೇತನವಾದರೂ ಅಚೇತನವೆನಿಸುವದು ? ॥೩೦॥

ಉತ್ತರ—ಬ್ರಹ್ಮವು ಚಿನ್ಮಾತ್ರಸ್ವರೂಪವಾದರೂ ದೃಶ್ಯರೂಪದಿಂ ಪ್ರಕಾಶಿ

ಸುವದ್ದರಿಂದಅಚೇತನವೆನಿಸುವದು. ಆದರೆ ಜಡಜ್ಞಾನವಿರುವವರಿಗೆ ಚಿಜ್ಜಡಪದಾರ್ಥಗಳೆರಡೂ ಇರುವವು. ಚಿನ್ಮಾತ್ರಜ್ಞಾನದಲ್ಲಿ ಜಡಪದಾರ್ಥವಿಲ್ಲವೆನಿಸುವದು. ಮರುಭೂಮಿಯಲ್ಲಿ ಬಿದ್ದ ಬಿಸಲೇ ತೊರೆಯಾಗಿ ಕಾಣುವಂತೆ ಮುಂಭಾಗದಲ್ಲಿ ತೋರಮಟ್ಟ ಚಿತ್ತಿನ ಪ್ರಕಾಶವೇ ಚೇತ್ಯವೆನಿಸುವದಾದ್ದರಿಂದ ಚಿಚ್ಚೇತ್ಯಕಲ್ಪನೆಗೆ ಅವಕಾಶವೆನಿಸುವದು. ಸೂರ್ಯಪ್ರಕಾಶದಿಂದಾಕಾಶವಲ್ಲಿ ಸುವರ್ಣದಂತೆಯೂ, ಸ್ವಪ್ನಸಂಕಲ್ಪ ಗಂಧರ್ವ ನಗರಗಳಲ್ಲಿ ಗೋಡೆಯಂತೆಯೂ, ಈ ಚೇತ್ಯವು ಸ್ವಸತ್ತಾಬಲದಿಂದಲೇ ಸತ್ತೆನಿಸುವದು. ಇಂಥಾ ನ್ಯಾಯದಿಂ ನೋಡುವಲ್ಲಿ ಯಾವ ಕಲ್ಪನೆಗೂ ಅವಕಾಶವಿಲ್ಲದೆ ಅಖಂಡಜ್ಞಾನಸ್ವರೂಪವಾದ ಪರಬ್ರಹ್ಮ ಒಂದೇ ಪ್ರಕಾಶಿಸುತ್ತಿರುವಲ್ಲಿ ಯಾವ ಪ್ರಶ್ನೆಗಾದರೂ ಏನು ಅವಕಾಶವಿರುವದು. ॥೩೦॥

ಎಂದು ಮಂತ್ರಿಯು ಪೇಳುತ್ತಿರುವಲ್ಲಿ ಆ ರಾಕ್ಷಸಿಯು ಎಲೈ ಮಂತ್ರಿಕುಲೋತ್ತಮನೇ ಪರಮಪಾವನವಾದ ನಿನ್ನ ಮಾತುಗಳಿಂ ನಾನು ಸಂತುಷ್ಟಳಾದೆನು. ನಿಮ್ಮ ರಾಜನು ಎಂತು ಪೇಳುವನೋ ಅದಂ ನಾನು ಕೇಳಲಿಚ್ಛೈಸುವೆನೆಂದು ಪೇಳಲು, ಆಗ ರಾಜನು ಉತ್ತರವಂ ಪೇಳಲುಪಕ್ರಮಿಸಿದನು. ॥೩೧॥

ಪ್ರಶ್ನೆ—ಯಾವನು ವಾಯುವಾದರೂ ವಾಯುವಲ್ಲದಿರುವನು. ॥೩೨॥

ಉತ್ತರ—ಎಲೌ ರಾಕ್ಷಸಿಯೇ ಭ್ರಮಾತ್ಮಕವಾದ ಜಗತ್ತಿನ ಜ್ಞಾನಾತ್ಯಂತಾಭಾವವೇ ಯಾವನ ಜ್ಞಾನವೆನಿಸುವದೋ ಸರ್ವಸಂಕಲ್ಪತ್ಯಾಗವೇ ಯಾವ ಉಪಸರ್ಪಣವೆನಿಸುವದೋ ಆಕಾಶದಲ್ಲಿ ವಾಯುವಿನಂತೆ ಯಾವನಲ್ಲಿ ಚಲಿಸುವ ಜ್ಞಾನಶಕ್ತಿಯ ವಿಕಾಶ ಸಂಕೋಚಗಳೇ ಜಗತ್ತಿನ ಸೃಷ್ಟಿಪ್ರಳಯಗಳೆನಿಸುವವೊ ವಾಕ್ಯಗಳಿಗೆ ಅಗೋಚರನಾದ ಯಾವನು ಸಮಸ್ತ ವೇದಾಂತವಾಕ್ಯಗಳಿಗೂ ನಿಲುಗಡೆಯಾಗಿರುವನೋ ಯಾವನ ಸತ್ತಾಬಲದಿಂದಿರುವದೆಂತಲೂ, ಅವನಿಗೆ ಭಿನ್ನವಾಗಿಲ್ಲವೆಂತಲೂ, ಆದ್ಯಂತಗಳಲ್ಲಿ ಸದಸತ್ತುಗಳಿಗೆ ವಿಲಕ್ಷಣವಾಗಿ ಮಧ್ಯದಲ್ಲಿ ಪ್ರತ್ಯಕ್ಷಾಪ್ರತ್ಯಕ್ಷರೂಪದಿಂ ಪ್ರಕಾಶಿಸುತ್ತಾ ಶೂನ್ಯಾಶೂನ್ಯವಾದ ಗ್ರಸ್ತವಾಗಿ ದೇಶಭೇದದಿಂ ಭಾವಾಭಾವ ಕೋಟಿದ್ವಯಕ್ಕೆ ಮಧ್ಯಸ್ಥಿತವಾಗಿರುವ ಚರಾಚರರೂಪವಾದ ಈ ಜಗವು ಹಿರಣ್ಯಗರ್ಭರೂಪದಿಂದಿರುವ ಯಾವನ ಸಂಕಲ್ಪದ ಲೀಲೆಯೆನಿಸುವದೋ ಯಾವನು ನಾನಾಪ್ರಕಾರವಾದ ಪ್ರಪಂಚರೂಪದಿಂ ಪ್ರಕಾಶಿಸುತ್ತಿದ್ದಾಗ್ಯೂ ಅಖಂಡಸ್ವರೂಪನಾಗಿರುವನೋ ಸತ್ತಾಮಾತ್ರ ಸ್ವರೂಪದಿಂ ಶಾಶ್ವತನಾದ ಆ ಪರಮಾತ್ಮನೇ ನಿನ್ನಿಂದ ಕೇಳಲ್ಪಡುವನು. ಈ ಆತ್ಮನು ಸ್ವಕಲ್ಪನೆಯಿಂದಲೇ ಸ್ಪಂದರೂಪನಾಗಿ ವಾಯುವೆನಿಸಿ

ಕೊಂಡಾಗ್ಯೂ ಅಖಂಡಭಾವದಿಂ ಸ್ಪಂದರಹಿತನಾದ್ದರಿಂದ ವಾಯುವಾಗದಿರುವನು. ॥೩೦॥

ಪ್ರಶ್ನೆ—ಯಾವನು ಶಬ್ದವಾದರೂ ಅಶಬ್ದನು. ॥೩೨॥

ಉತ್ತರ—ಸ್ವಾಭಿನ್ನವಾದ ಶಾಸ್ತ್ರಾದಿರೂಪದಿಂ ಶಬ್ದಸ್ವರೂಪನಾಗಿದ್ದಾಗ್ಯೂ ವಾಙ್ಮನೋತೀತನಾದ್ದರಿಂದ ಶಬ್ದಾರ್ಥಗಳಿಗೆ ದೂರನಾಗಿರುವನು.

ಪ್ರಶ್ನೆ—ಯಾವನು ಸರ್ವರೂಪನಾದರೂ ಒಂದೂ ಅಲ್ಲವೆನಿಸುವನು.

ಉತ್ತರ—ವ್ಯಾಪಕಭಾವದಿಂ ಸರ್ವರೂಪನಾಗಿದ್ದರೂ ಸಾಕ್ಷಿಭಾವದಿಂ ಒಂದೂ ಅಲ್ಲವೆನಿಸುವನು. ॥೩೩॥

ಪ್ರಶ್ನೆ—ನಾನು ಯಾರೆಂಬುವದು ನಾನಿಲ್ಲವೆಂಬುವದು ಯಾವದು.

ಉತ್ತರ—ದೇಹಾದಿತಾದಾತ್ಮ್ಯನಿವರ್ತಕವಾದ ವಿಚಾರದಲ್ಲಿ ನಾನು ಯಾರೆಂತಲೂ, ಅಜ್ಞಾನ ನಾಶವಾದಬಳಿಕ ನಾನೆಂಬುವದು ಸುಳ್ಳೆಂತಲೂ, ಈ ಆತ್ಮನೇ ತಿಳಿಯುವನು. ॥೩೪॥

ಪ್ರಶ್ನೆ—ಅನೇಕ ಜನ್ಮಗಳಲ್ಲಿ ಅನೇಕ ಸಾಧನಗಳಿಂ ಯಾವದರ ಪ್ರಾಪ್ತಿಯಾಗುವದು. ॥೩೫॥

ಪ್ರಶ್ನೆ—ಯಾವದರ ಪ್ರಾಪ್ತಿಯಾದಾಗ್ಯೂ ಏನೂ ಪ್ರಾಪ್ತವಾಗದಂತೆಯೇ ಇರುವದು.

ಉತ್ತರ—ಸಂಸಾರವಾಸನೆಯು ಬಹುಕಾಲದಿಂ ದೃಢಮೂಲವಾಗಿರುವದ್ದರಿಂದ ಈ ಆತ್ಮನ ಪ್ರಾಪ್ತಿರೂಪವಾದ ಅಜ್ಞಾನ ನಾಶಕ್ಕೆ ಅನೇಕ ಸಾಧನೆಗಳು ಬೇಕಾಗುವದು. ॥೩೫॥

ಹೀಗೆ ಅಜ್ಞಾನನಾಶದಿಂ ಸ್ವರೂಪ ಸಾಕ್ಷಾತ್ಕಾರವಾದಾಗ್ಯೂ ನಿತ್ಯಸಿದ್ಧವಾದ ವಸ್ತುವೇ ಲಬ್ಧವಾಯಿತಲ್ಲದೆ ಇನ್ನೇನೂ ಲಬ್ಧವಾಗಲಿಲ್ಲವಾದ್ದರಿಂದ ಯಾವ ಲಾಭವು ಇಲ್ಲದಂತೆಯೇ ಇರುವದು. ಆದರೆ ಸಕಲ ದುಃಖಮೂಲವಾದ ಅಜ್ಞಾನಕ್ಕೆ ನಾಶವಾದ್ದರಿಂದಲೂ ಮೃತನಾದ ಪ್ರಿಯಪುತ್ರನು ಬದುಕಿದಂತೆಯೂ, ಬಹುಕಾಲದಲ್ಲಿ ನಷ್ಟವಾದ ಜೀವರತ್ನವು ದೊರೆತಂತೆಯೂ, ಅಖಂಡವಾದ ಆನಂದವಾವಿರ್ಭವಿಸುವದ್ದರಿಂದಲೂ, ಅಜ್ಞಾನಾಸಿದ್ಧನಾದ ಆತ್ಮನ ಲಾಭಕ್ಕಿಂತ ಮತ್ತೊಂದು ಲಾಭವಿಲ್ಲವೆಂತಲೇ ತಿಳಿಯತಕ್ಕದ್ದು. ॥೩೬॥

ಪ್ರಶ್ನೆ—ಯಾವದು ಸರ್ವಸ್ವರೂಪವಾಗಿದ್ದರೂ ಕಾಣಲ್ಪಡದೆ ಇರುವದು ?

ಉತ್ತರ—ದೃಗ್ರೂಪವಾದ ಬ್ರಹ್ಮವು ದ್ರಷ್ಟೃ ದರ್ಶನ ದೃಶ್ಯರೂಪದಿಂ ಸರ್ವಸ್ವರೂಪವಾಗಿದ್ದರೂ ಅಜ್ಞಾನಿಗಳಿಂದ ಯಥಾಸ್ಥಿತಿಯಾಗಿ ಕಾಣಲ್ಪಡದೆ ಇರುವದು. ॥೩೭॥

ಪ್ರಶ್ನೆ—ಸ್ವಸ್ಥವಾಗಿರುವ ಯಾವನಿಂದ ಆತ್ಮನೇ ಅಪಹೃತನಾದನು.

ಉತ್ತರ—ಬಿಸಲು ದೊರೆಯಂತೆ ದೃಶ್ಯಭಾವವಂ ಹೊಂದಿರುವ ಈ ಆತ್ಮ ನಿಂದ ತಾನೆ ಮೋಹಪಡಿಸಲ್ಪಟ್ಟ ಮೊಂಕುಬೂದಿಯನ್ನೆರಚುವ ಚೋರನಿಂ ಪಥಿಕ ಬಾಲಕನಂತೆ ಅಪಹೃತನಾದನು. ||೩೮||

ಪ್ರಶ್ನೆ—ಅಣುವಾದ ಯಾವನಿಂದ ಮೇರುವು ಒಳಗೆ ಇರಿಸಿಕೊಳ್ಳಲ್ಪಡು ವದು. ||೩೯||

ಉತ್ತರ—ಸೂಕ್ಷ್ಮಸ್ವರೂಪದಿಂದಣುವೆನಿಸುವ ಈ ಆತ್ಮನು ಭಾವನೆಯಿಂ ತನ್ನಲ್ಲಿ ಕಲ್ಪಿತವಾದ ಜಗದಾಧಾರವಾದ ಮೇರುವನ್ನು ಭಾವಗತವಾದ ಪದಾ ರ್ಥವಂ ಕಾಮಿಯಂತೆ ಹೊರಗೆ ನೋಡುತ್ತಾ ವ್ಯಾಪಕಭಾವದಿಂದದಂ ವ್ಯಾಪಿ ಸಿಕೊಂಡಿರುವನು. ||೩೯||

ಪ್ರಶ್ನೆ—ಯಾವನಿಂದ ತ್ರಿಭುವನವೂ ತೃಣವಾಗಿ ಮಾಡಲ್ಪಡುವದು.

ಉತ್ತರ—ಸಹಜಾನಂದವಂ ಕಂಡ ಈ ಆತ್ಮನಿಂದ ತ್ರಿಭುವನವೂ ತೃಣ ವಾಗಿ ತಿಳಿಯಲ್ಪಡುವದು.

ಪ್ರಶ್ನೆ—ಅಣುಮಾತ್ರವಾದ ಯಾವನಿಂದ ನೂರು ಯೋಜನಗಳು ತುಂಬ ಲ್ಪಡುವವು. ||೪೦||

ಉತ್ತರ—ತಿಳಿಯಲಶಕ್ಯನಾದ್ದರಿಂ ಪರಮಾಣುವಿಗಿಂತಲೂ, ಸೂಕ್ಷ್ಮನಾದ ಈ ಆತ್ಮನು ಪೂರ್ಣಭಾವದಿ ಜಗವೆಲ್ಲವನ್ನು ತುಂಬಿಕೊಂಡಿರುವನು. ||೪೦||

ಪ್ರಶ್ನೆ—ಯಾವನು ಅಣುವಾಗಿದ್ದರೂ ನೂರುಯೋಜನಗಳಲ್ಲಿಯೂ, ಅಣ ಗದಿರುವನು. ||೪೨||

ಉತ್ತರ—ವ್ಯಾಪಕಭಾವದಿಂದೀ ಆತ್ಮನು ಜಗದಲ್ಲೇ ಅಣಗದೆ ಹೊರ ಹೊರಡುತ್ತಿರುವನು. ||೪೨||

ಪ್ರಶ್ನೆ—ಯಾವನು ನೋಟದಿಂದಲೇ ಜಗವೆಂಬ ಬಾಲಕನಂ ಕುಣಿಸುವನು.

ಉತ್ತರ—ಈ ಆತ್ಮನಿಗೆ ಆಕಾರವಿಲ್ಲದ್ದರಿಂದ ಸ್ವಾಭಾವಿಕವಾದ ಜ್ಞಾನಶಕ್ತಿ ಯಿಂದಿಚ್ಛೈಸುವದೆ ನೋಟವೆನಿಸುವದು. ಇಚ್ಛಾಮಾತ್ರದಿಂದಿವನು ಅಂತಃಕ ರಣ ಬಾಹ್ಯಕರಣಗಳಿಗೆ ಆಯಾಯ ವ್ಯಾಪಾರ ಯೋಗ್ಯತೆಯನ್ನುಂಟುಮಾಡು ವದ್ದರಿಂದ ನಾಟ್ಯಾಚಾರ್ಯನು ನಾಟ್ಯವಂ ಕಲಿಸುವಂತೆಯೂ, ಸೂತ್ರಧಾರನು ಬೊಂಬೆಯಂ ಕುಣಿಸುವಂತೆಯೂ, ಅಜ್ಞಾನದಿಂ ಬಾಲಕನಂತಿರುವ ಈ ಪ್ರಪಂ ಚವೆಲ್ಲವನ್ನು ಕುಣಿಸುವನು. ||೪೩||

ಪ್ರಶ್ನೆ—ಅಣುವಾದ ಯಾವನಲ್ಲಿ ಗಿರಿಸಮೂಹವಿರುವದು. ||೪೪||

ಉತ್ತರ—ಕೂದಲಿನ ಕೊನೆಯ ಶತಾಂಶದಂತೆ ತಿಳಿಯಲಶಕ್ಯನಾದ ಈ ಆತ್ಮನನ್ನು ಪರಮಾಣುಸಮಾನನೆನ್ನುವರು. ಶುದ್ಧ ಜ್ಞಾನಸ್ವರೂಪದಿಂ ಸರ್ವವ್ಯಾಪಕನಾದ ಇವನಿಗೆ ಪರಮಾಣು ದೃಷ್ಟಾಂತವು * ಮೇರುಸರ್ಷಪಸಾಮ್ಯದಂತೆ ವಿರುದ್ಧವಾಗಿರುವದು. ಮಾಯೆಯಿಂದವನು ಜಗದ್ರೂಪನಾಗಿ ಕಾಣುವನಲ್ಲದೆ ಪರಮಾರ್ಥವಾಗಿ ಆ ಮಹತ್ವವು ಇವನಿಗೆ ಇಲ್ಲದ್ದರಿಂದ ಅಣುತ್ವವಿವನಿಗೆ ಸ್ವಾಭಾವಿಕವೆನಬೇಕು. ಇವನು ವ್ಯಾಪಕಭಾವದಿಂದಲೆ ಮಹತ್ತರನಾದ್ದರಿಂದ ವಸ್ತ್ರದಿಂಪದಾರ್ಥಗಳಂತೆ ಗಿರಿಗಳು ಸಮುದ್ರಗಳು ಜಗತ್ತುಗಳು ಸಹ ಇವನಿಂದ ಮುಚ್ಚಲ್ಪಡುವವು.

ಪ್ರಶ್ನೆ—ಯಾವನು ಅಣುತ್ವವಂ ಬಿಡದಿದ್ದರೂ ಮೇರುವಿಗಿಂತಲೂ ದೊಡ್ಡವನಾಗಿರುವನು. ||೪೫||

ಉತ್ತರ—ಈ ಆತ್ಮನು ಸ್ವರೂಪಸತ್ತೆಯಂ ಬಿಡದೆ ಜಗದ್ರೂಪದಿಂ ಪ್ರಕಾಶಿಸುವದ್ದರಿಂದ ಸೂಕ್ಷ್ಮಭಾವದಿಂದಣುವಾಗಿಯೂ ವ್ಯಾಪಕಭಾವದಿಂ ಮಹತ್ತಾಗಿಯೂ ಪೇಳಲ್ಪಡುವನು. ||೪೫||

ಪ್ರಶ್ನೆ—ಯಾವನು ಪ್ರಕಾಶ ತಮಸ್ಸುಗಳೆರಡಕ್ಕು ಪ್ರಕಾಶಕನಾಗಿರುವನು. ||೪೬||

ಉತ್ತರ—ಸೂರ್ಯಾದಿತೇಜಸ್ಸುಗಳು ಜಗತ್ತಿಗೆ ಶೇರಿದಾದ್ದರಿಂದ ಶುಕ್ಲಾಶುಕ್ಲ ಪದಾರ್ಥಗಳಂತಿರುವ ತೇಜೋವಸ್ತುಗಳು ಇತರವಸ್ತುಗಳು ಸಹ ತೇಜಸ್ತಮಸ್ಸುಗಳೆಂದು ಪೇಳಲ್ಪಡುವವು. ಸೂರ್ಯನು ಕಮಲನೀಲೋತ್ಪಲಗಳನ್ನು ಹಗಲು ರಾತ್ರಿಗಳನ್ನು ಸಹ ತೋರುವಂತೆ ಜ್ಞಾನಾರ್ಕನೆನಿಸುವ ಈ ಆತ್ಮನು ತಮಸ್ತೇಜೋರೂಪವಾದ ಎರಡನೇ ಪದಾರ್ಥಗಳನ್ನು ಪ್ರಕಾಶಪಡಿಸುವನು. ||೪೬||

ಪ್ರಶ್ನೆ—ಯಾವ ಅಣುವಿನಲ್ಲಿ ಅಶೇಷವಾದ ಅನುಭವಜ್ಞಾನದ ಅಣುಗಳಿರುವವು. ||೪೭||

ಉತ್ತರ—ಈ ಜ್ಞಾನಾರ್ಕನಲ್ಲಿ ಕಿರಣಗಳಂತೆ ಸಮಸ್ತ ಪದಾರ್ಥಜ್ಞಾನಗಳು ಇರುತ್ತಾ ಚೈತ್ರಮಾಸದಲ್ಲಿ ಪತ್ರ ಪುಷ್ಪ ಫಲಗಳಂತೆ ಉದಯಕಾಲದಲ್ಲಿ ಪ್ರಕಾಶಿಸುತ್ತಿರುವವು. ||೪೭||

ಪ್ರಶ್ನೆ—ಯಾವದು ರಸವಿಲ್ಲದಿದ್ದಾಗ್ಯೂ ಅಮೃತ ರಸಾಯನದಂತೆ ಸರ್ವದಾ ರುಚಿಸುತ್ತಿರುವದು. ||೪೮||

---

* ಮೇರುಪರ್ವತಕ್ಕೂ ಸಾಸುವೆಕಾಳಿಗೂ ಇರುವ ಹೋಲಿಕೆಯಂತೆ.

ಉತ್ತರ—ಸಮಸ್ತ ರಸಗಳು ಜಗತ್ತಿನಲ್ಲಿ ತೋರುವದಲ್ಲದೆ (ಆತ್ಮನಲ್ಲಿ ಕಾಣುವದಿಲ್ಲ.) ಆದರೆ ಕನ್ನಡಿಯಲ್ಲಿ ಪದಾರ್ಥಗಳಂತೆ ಇವನಲ್ಲಿ ಸಮಸ್ತ ರಸಗಳು ಪ್ರತಿಫಲಿಸಿ ಇವನಿಂದಲೇ ಪ್ರಕಾಶಪಡಿಸುವದಾದ್ದರಿಂದ ಇವನು ಸರ್ವೋತ್ತಮವಾದ ರಸವೆನಿಸುವನು. ॥೪೮॥

ಪ್ರಶ್ನೆ—ಯಾವನು ಸರ್ವವನ್ನು ಬಿಟ್ಟದ್ದಾಗ್ಯೂ ಸ್ವೀಕರಿಶಿರುವನು.

ಉತ್ತರ—ಅಖಂಡಜ್ಞಾನವಾದ ಈ ಆತ್ಮನು ಜಗದ್ಭ್ರಮೆಯಿಂದ ಪದಾರ್ಥಗಳಂ ಗ್ರಹಿಸದೆ ತಾನೆಂಬ ಜ್ಞಾನದಿಂದಲೇ ಪರಿಗ್ರಹಿಸುವನು. ॥೪೯॥

ಪ್ರಶ್ನೆ—ಯಾವನು ತನ್ನನ್ನೇ ಮುಚ್ಚಲಾರದವನಾದಾಗ್ಯೂ ಜಗವೆಲ್ಲನ್ನೂ ಮುಚ್ಚಿಕೊಳ್ಳುವನು. ॥೫೦॥

ಉತ್ತರ—ಸುಷುಪ್ತಿಯಲ್ಲಿ ಹೊದ್ದಿಕೆಯ ಜ್ಞಾನವಿಲ್ಲದ ಬಾಲಕನು ಎಚ್ಚರವಾದಾಗ ಕ್ರೀಡಾಪದಾರ್ಥಗಳಂ ಶೇರಿಸಿ ರಕ್ಷಿಸುವಂತೆ ಪ್ರಳಯಕಾಲದಲ್ಲಿ ಸುಮ್ಮನಿದ್ದ ಈ ಆತ್ಮನು ಸೃಷ್ಟಿಕಾಲದಲ್ಲಿ ಜಗವಂ ಪುಟ್ಟಿಸಿ ರಕ್ಷಿಸುತ್ತಿರುವನು. ಮತ್ತು ತನಗೆ ಆಚ್ಛಾದಕವಾದ ಪದಾರ್ಥ ಮತ್ತೊಂದಿಲ್ಲದ್ದರಿಂದ ತನ್ನಂ ತಾನು ಮುಚ್ಚಿಕೊಳ್ಳಲಾರದೆ ಆಕಾಶದಂತೆ ಜಗವೆಲ್ಲವನ್ನು ಮುಚ್ಚಿಕೊಂಡಿರುವನು. ॥೫೦॥

ಪ್ರಶ್ನೆ—ಜಗವು ಲಯವಾದಾಗ್ಯೂ ಯಾವನಿಂದ ಪುನಃ ಜೀವಿಸುವದು.

ಉತ್ತರ—ಪ್ರಳಯದಲ್ಲಿ ಜಗವು ಚಿತ್ತಸತ್ತಾರೂಪದಿಂದಾತ್ಮನಲ್ಲಿ ಸಂಸ್ಕಾರಶೇಷವಾಗಿ ನಿಲ್ಲುವದ್ದರಿಂದ ವಸಂತಕಾಲದಿಂ ವನಪಜ್ತಿಯಂತೆ ಆತ್ಮನ ಸತ್ತಾಬಲದಿಂ ಪುನಃ ಜೀವಿಸುವದು. ಚಿತ್ತಸತ್ತೆಗೂ ಆತ್ಮಸತ್ತೆಗೂ ಭೇದವಿಲ್ಲದ್ದರಿಂದ ಪಲ್ಲವಾದಿರೂಪದಿಂ ತೋರಮಡುವ ವಸಂತಸತ್ವದಂತೆ ಆತ್ಮಸತ್ವವೇ ಜಗದ್ರೂಪದಿಂ ಪ್ರಕಾಶಿಸುವದೆಂದು ತಿಳಿಯತಕ್ಕದ್ದು. ॥೫೦॥

ಪ್ರಶ್ನೆ—ಯಾವನು ನಿರಾಕಾರನಾದಾಗ್ಯೂ ಕರಲೋಚನ ಸಹಸ್ರಗಳಿಂ ಕೂಡಿರುವನು.

ಉತ್ತರ—ಈ ಆತ್ಮನು ಅಂಡಜೋದ್ಭಿಜ ಸ್ವೇದಜ ಜರಾಯುಜಗಳೆಂಬ ನಾಲ್ಕುಪ್ರಕಾರವಾದ ಪ್ರಾಣಿಗಳ ಆಕಾರಗಳಿಂದಲೆ ಸಾಕಾರನಾಗಿರುವದ್ದರಿಂದ ಸಹಸ್ರಕರಲೋಚನನಾಗಿರುವನು. ॥೫೨॥

ಪ್ರಶ್ನೆ—ಯಾವನ ನಿಮೇಷವು ಕಲ್ಪಕೋಟಿಯಾಗಿ ಪೇಳಲ್ಪಡುವದು.

ಉತ್ತರ—ರುದ್ರನ ಒಂದು ದಿವಸಕ್ಕೆ ನೂರುಜನ ವಿಷ್ಣುಗಳೆಂತಲೂ, ವಿಷ್ಣುವಿನ ಒಂದು ದಿನಕ್ಕೆ ನೂರುಮಂದಿ ಬ್ರಹ್ಮರೆಂತಲೂ, ಬ್ರಹ್ಮನ ಒಂದು ದಿನಕ್ಕೆ

ಚತುರ್ಯುಗ ಸಹಸ್ರವೆಂತಲೂ, ಕ್ಲಿಪ್ತಿಯಿರುವದ್ದರಿಂದ ರುದ್ರರೂಪದಿಂದಿರುವ ಈ ಆತ್ಮನ ನಿಮೇಷಕಾಲವೇ ಇತರರಿಗೆ ಕಲ್ಪಕೋಟಿಗಳಾಗುವವು. ॥೫೩॥

ಪ್ರಶ್ನೆ—ನಿಮೇಷರೂಪದಿಂದಿರುವ ಯಾವನು ಮಹಾ ಕಲ್ಪವೆನಿಸುವನು.

ಉತ್ತರ—ಸ್ವಪ್ನದಲ್ಲಿ ಸ್ವಮರಣವು ತೋರುವಲ್ಲಿ ಮತ್ತೊಂದೆಡೆಯಲ್ಲಿ ಕಂಡ ಮರಣವು ತನ್ನಲ್ಲಿ ಸಂಭವಿಸಿದಂತೆ ಭ್ರಾಂತಿಯಿಂ ತೋರುವದು. ಇದೇಪ್ರಕಾರ ಕಾಲಾಂತರದಲ್ಲಿ ನಡದ ಭೋಜನವು ಸ್ಮೃತಿಯಿಂದ ಸ್ವಪ್ನದಲ್ಲಿ ತೋರುವದು. ಮಂದಾಗ್ನಿದೋಷದಿಂ ತೃಪ್ತನಂತಿದ್ದ ಭ್ರಾಂತನು ಸ್ವಪ್ನಭುಕ್ತಿಯಿಂದ ಜಾಗ್ರದಲ್ಲಿ ಭೋಜನವಂ ಮಾಡದಿದ್ದಾಗ್ಯು ಭೋಜನವಂ ಮಾಡಿರುವನೆಂತಲೆ ತಿಳಿಯುವನು. ಹೀಗೆ ಭ್ರಾಂತಿಗೆ ವ್ಯವಸ್ಥೆ ಇಲ್ಲವಾದ್ದರಿಂದ ದುಃಖಕಾಲದಲ್ಲಿ ನಿಮೇಷವನ್ನೇ ಕಲ್ಪವನ್ನಾಗಿಯು ಸುಖಕಾಲದಲ್ಲಿ ಕಲ್ಪವಂ ನಿಮೇಷವನ್ನಾಗಿಯೂ, ಈ ಆತ್ಮನೇ ತಿಳಿಯುವನು. ಕಾಲಾದಿಗಳಲ್ಲಿರುವ ಸತ್ತೆಯೂ, ಆತ್ಮಸತ್ತೆಗೆ ಅಭಿನ್ನವಾದ್ದರಿಂದ ಕಾಲರೂಪದಿಂದೀ ಆತ್ಮನೇ ಪೇಳಲ್ಪಡುವನು.

ಪ್ರಶ್ನೆ—ಬೀಜದಲ್ಲಿ ಅಂಕುರದಂತೆ ಯಾವನಲ್ಲಿ ನಿಮೇಷಕಲ್ಪಗಳಿರುವವು.

ಉತ್ತರ—ಪಕ್ವಧಾನ್ಯವು ಅಪಕ್ವವಾದ ಧಾನ್ಯದ ಕಣವು ಕೂಡ ಹೊಟ್ಟಿನಿಂದ ವ್ಯಾಪ್ತವಾಗಿರುವಂತೆ ಈ ಆತ್ಮನಿಂದಲೆ ನಿಮೇಷಕಲ್ಪಗಳೆರಡೂ ವ್ಯಾಪ್ತವಾಗಿರುವವು. ॥೫೫॥

ಬೀಜದಲ್ಲಿ ವೃಕ್ಷದಂತೆ ಯಾವನಲ್ಲಿ ಸ್ಫುಟಾಸ್ಫುಟವಾದ ಜಗತ್ತುಗಳಿರುವವು.

ಉತ್ತರ—ಯಾವನಲ್ಲಿ ಯಾವದಿರುವದೋ ಅದೇ ಅವನಿಗೆ ಹೊರಗೆ ತೋರುವದಾದ್ದರಿಂದ ಆತ್ಮನಲ್ಲಿ ಅಸ್ಫುಟವಾಗಿದ್ದ ಭೂತಭವಿಷ್ಯದ್ವರ್ತಮಾನ ಪ್ರಾಣಿಗಳು ಹೊರಗೆ ಸ್ಫುಟವಾಗಿ ಕಾಣುವವು, ॥೫೬॥

ಪ್ರಶ್ನೆ—ಪ್ರಯೋಜನಕರ್ತೃತ್ವಗಳಿಲ್ಲದಿದ್ದರೂ ಯಾವನು ಕಾರಕನಾಗಿರುವನು. ॥೫೭॥

ಉತ್ತರ—ಈ ಆತ್ಮನಿಗೆ ಜಗತ್ಸೃಷ್ಟಿಯಿಂ ಪ್ರಯೋಜನವಿಲ್ಲ. ಜಗತ್ತೆಂಬ ಕಾರ್ಯವು ಸ್ವಭಿನ್ನವಾಗಿಲ್ಲದ್ದರಿಂದ ಕರ್ತೃತ್ವವೂ ಇಲ್ಲ; ಆದಾಗ್ಯು ವ್ಯವಹಾರದೃಷ್ಟಿಯಲ್ಲಿರುವರಿಗೆ ಕರ್ತೃವಾಗಿಯೂ, ಭೋಕ್ತೃವಾಗಿಯೂ ತೋರುತ್ತಿರುವನು. ॥೫೭॥

ಪ್ರಶ್ನೆ—ಯಾವ ದ್ರಷ್ಟೃವು ನೇತ್ರವಿಲ್ಲದವನಾದಾಗ್ಯು ತನ್ನನ್ನೇ ದೃಶ್ಯವಾಗಿ ನೋಡುತ್ತಿರುವನು. ॥೫೮॥

ಉತ್ತರ—ಈ ಆತ್ಮನು ಸ್ವೇಚ್ಛೆಯಿಂದಲೇ ತನ್ನಲ್ಲಿರುವ ಜ್ಞಾನ ಚಮತ್ಕಾ

ಲವಂ ಹೊರಗೆ ದೃಶ್ಯವನ್ನಾಗಿ ನೋಡುವನು. ಸರ್ವವೂ ಜ್ಞಾನಸ್ವರೂಪವಾದ್ದ ರಿಂದ, ಅಜ್ಞಾನಿಬೋಧನಾರ್ಥವಾಗಿ ಪುಟ್ಟಿದವಳ ಹೊರವಿಭಾಗವು ಶಬ್ದದಲ್ಲೇ ನಿಂತಿರುವದು. ಸದ್ರೂಪವಾದ ದೃಕ್ಕಿಗೂ ಅಸದ್ರೂಪವಾದ ದೃಶ್ಯಕ್ಕು ಸಂಬಂಧವಾಗಲಾರದಾದ್ದರಿಂದ, ಸರ್ವವು ಜ್ಞಾನಸ್ವರೂಪವೆಂತಲೇ ತಿಳಿಯತಕ್ಕದ್ದು. ನೇತ್ರದಲ್ಲಿ ನೋಡುವ ಶಕ್ತಿಯು ಆತ್ಮನದಾದ್ದರಿಂದ ಆತ್ಮನೇ ನೇತ್ರವೆನಿಸುವನು. ಈ ಆತ್ಮನು ಸಂಕಲ್ಪಾದಿಯಾಗಿ ವಾಸನಾನಾಶವಾಗುವವರಿಗೂ ದ್ರಷ್ಟೃವೆನಿಸಿಕೊಳ್ಳುವನು. ಪಿತೃಪುತ್ರರಂತೆಯೂ, ಭೋಕ್ತೃ ಭೋಗ್ಯಗಳಂತೆಯೂ, ದ್ರಷ್ಟೃ ದೃಶ್ಯಗಳಿಗೆ ಪರಸ್ಪರ ಸಂಬಂಧವಿರುವದ್ದರಿಂದ, ಒಂದರೊಡನೆ ಮತ್ತೊಂದೂ ಹೋಗುವದು. ಇದರಲ್ಲಿ ವ್ಯವಹಾರ ರೀತಿಯಿಂ ದ್ರಷ್ಟೃವು ಚೇತನವಾದ್ದರಿಂದ, ದೃಶ್ಯ ಸಿದ್ಧಿಗೆ ಕಾರಣವಾಗುವದು. ಕನಕದಿಂದುಂಟಾದ ಕಟಕದಂತೆ ದ್ರಷ್ಟೃವಿನಿಂದುಂಟಾದ ದೃಶ್ಯವು ಭ್ರಮಾತ್ಮಕವೆನಿಸುವದು. ಆದ್ದರಿಂದ ಭ್ರಮೆಯಲ್ಲಿರುವನಿಗೆ ಯಥಾರ್ಥ ತೋರದಿರುವಂತೆಯೂ, ಕಟಕವಂ ನೋಡುವನಿಗೆ ಕನಕ ಕಾಣದಿರುವಂತೆಯೂ, ದೃಶ್ಯದಲ್ಲಿ ದೃಷ್ಟಿ ಇರುವಾಗ ದ್ರಷ್ಟೃವು ಕಾಣುವದಿಲ್ಲ. ದೃಶ್ಯಭಾವದಲ್ಲಿ ಸತ್ತೆಯೂ ಅಸದ್ರೂಪವಾಗಿ ತೋರದಿರುವದ್ದರಿಂದ, ದ್ರಷ್ಟೃವಿಗೆ ಸ್ವರೂಪಜ್ಞಾನ ತಪ್ಪಿರುವದು. ವಿಚಾರದಿಂ ವೇಷಧಾರಿಯಲ್ಲಿ ಪಶುಜ್ಞಾನವಳಿದು ಪುರುಷಜ್ಞಾನಬರುವಂತೆ, ದೃಶ್ಯಜ್ಞಾನವು ತಪ್ಪಿ ದ್ರಷ್ಟೃವಿಗೆ ಸ್ವರೂಪಜ್ಞಾನವುಂಟಾಗಲು, ದ್ರಷ್ಟೃವಾದ ಆತ್ಮನು ಸ್ವಜ್ಞಾನದಿಂ ಸ್ವಾಭಿನ್ನವಾಗಿ ದೃಶ್ಯವನ್ನೋಡುವನು. ॥೫೮॥

ಪ್ರಶ್ನೆ—ಯಾವನು ದೃಶ್ಯವಿಲ್ಲದ ತನ್ನಂ ನೋಡುತ್ತಾ ಪುನಃ ದೃಶ್ಯವನ್ನೋಡದಿರುವನು ? ॥೫೯॥

ಉತ್ತರ—ಚಿನ್ನವಂ ಪರೀಕ್ಷಿಸುವನು ಕಟಕದಮೇಲೆ ದೃಷ್ಟಿಯನ್ನಿಡದೆ ಚಿನ್ನದ ಬಣ್ಣವನ್ನೇ ಹ್ಯಾಗೆ ನೋಡುವನೋ, ಹಾಗೆ ವಿಚಾರದಿಂ ಸ್ವರೂಪವನ್ನು ದೃಶ್ಯಾತಿರಿಕ್ತವೆಂದು ತಿಳಿದ ಪುರುಷನು ಸ್ವಾಭೇದದೃಷ್ಟಿಯಿಂದ ಪ್ರಪಂಚವನ್ನೋಡುವನಲ್ಲದೆ ದೃಶ್ಯಬುದ್ಧಿಯಿಂ ದೃಶ್ಯವನ್ನೋಡುವದಿಲ್ಲ. ॥೫೯॥

ಪ್ರಶ್ನೆ—ದ್ರಷ್ಟೃದರ್ಶನ ದೃಶ್ಯರೂಪವಾದ ತನ್ನನ್ನು ಯಾವನು ದೃಶ್ಯದಂತೆ ಪ್ರಕಾಶಪಡಿಸುವನು ? ॥೬೦॥

ಉತ್ತರ—ದೃಗ್ರೂಪನಾದ ಈ ಆತ್ಮನು ಸ್ವಾಭಾವಿಕವಾದ ಲೀಲೆಯಿಂದ ದ್ರಷ್ಟೃದರ್ಶನ ದೃಶ್ಯ ಮೊದಲಾದ ತ್ರಿಪುಟಿಗಳನ್ನು ಪದಾರ್ಥಗಳಂ ತೋರುವ ದೀಪದಂತೆ ಪ್ರಕಾಶಪಡಿಸುವನು. ॥೬೦॥

ಪ್ರಶ್ನೆ—ಈ ತ್ರಿಪುಟಿಗಳು ಚಿನ್ನದಿಂದಾಭರಣಗಳಂತೆ ಯಾವನಿಂದ ಪ್ರಕಾಶಪಡಿಸಲ್ಪಡುವವು ||೬೦|| ಯಾವನಿಂದ ನುಂಗಲ್ಪಡುವವು. ||೬೨|| ಯಾವನ ವಳಗಿರುವವು. ||೬೩||

ಉತ್ತರ—ದೀಪವು ಪದಾರ್ಥಗಳಂ ತೋರುವಲ್ಲಿ ಸಾಕ್ಷಿಭಾವದಿಂ ತೋರುವದು, ಈ ಆತ್ಮನಾದರೋ ಸಮಸ್ತವನ್ನೂ ಸಂಕಲ್ಪ ಕಲ್ಪನೆಗಳಿಂದ ವಳಗೆ ಧರಿಸುವನು. ಸ್ಥೂಲಸೂಕ್ಷ್ಮರೂಪದಿಂ ಪರಿಣಮಿಸುವನಂತೆ ವೃದ್ಧಿ ಹೊಂದುತ್ತಾ ಪ್ರಪಂಚವೆಲ್ಲವನ್ನು ಪ್ರಕಾಶಪಡಿಸುವನು. ವಿಚಾರದಿಂ ಸ್ವಮಹಿಮೆ ತಿಳಿಯಲು ಸಮಸ್ತವು ಚಿನ್ನವೆಂದು ತಿಳಿದ ಬಳಿಕ ಚಿನ್ನದಲ್ಲಿ ಆಭರಣಗಳು ಲೀನವಾಗುವಂತೆ ಈ ಆತ್ಮನಲ್ಲಿ ಜಗವೆಲ್ಲವು ಲೀನವಾಗುವದು. ಬಳಿಕ ಬ್ರಹ್ಮ ಒಂದೇ ಪ್ರಕಾಶಿಸುತ್ತಿರುವದು. ||೬೦||

ಪ್ರಶ್ನೆ—ಯಾವನಿಗೆ ಜಲಕ್ಕೆ ತರಂಗದಂತೆ ಒಂದೂ ಭಿನ್ನವಾಗಿಲ್ಲ. ||೬೪|| ದ್ವೈತವೂ ಕೂಡ ಅಭಿನ್ನವಾಗಿರುವದು. ||೬೫||

ಉತ್ತರ—ಸರ್ವರಿಗೂ ಆತ್ಮನಾದ್ದರಿಂದಲೂ, ಸರ್ವಾನುಭವರೂಪನಾದ್ದರಿಂದಲೂ, ಇವನ ಇಚ್ಛೆಯಿಂದಲೆ ಸರ್ವವೂ ನಡಯುವದ್ದರಿಂದಲೂ, ದಿಕ್ಕಾಲಗಳಂ * ಪರಿಚ್ಛಿನ್ನನಾಗದ ಪರಮಾತ್ಮನೊಬ್ಬನೆ ಇರುವನು. ಜಗತ್ತಿನಲ್ಲಿ ಪಂಚಭೂತಗಳಿಗೆ ಭಿನ್ನವಾದ್ದು ಹ್ಯಾಗೆ ಒಂದೂ ಇಲ್ಲವೋ ಹಾಗೆ ಈ ಆತ್ಮನಿಗೆ ಭಿನ್ನವಾದ್ದು ಒಂದೂ ಇಲ್ಲ. ||೬೪||

ನೆರಳು ಬಿಸಲುಗಳಂತೆ ಪರಸ್ಪರಸಾಪೇಕ್ಷಗಳಾದ ದ್ವೈತಾದ್ವೈತಗಳು ಬಾಹ್ಯದೃಷ್ಟಿ ಸಿದ್ಧವಾದ್ದರಿಂದ, ಕೇವಲನಾದ ಇವನಲ್ಲಿ ಇಲ್ಲದಿರುವವು. ವ್ಯಾಪಕಭಾವದಿಂ ನೋಡುವಲ್ಲಿ ಅದ್ವೈತವು ಸಹಜವಾಗಿರುವಂತೆ ತೋರುವದು. ದ್ವೈತವು ಭಿನ್ನವಾಗಿ ಕಾಣುವದಿಲ್ಲ. ||೬೫||

ಪ್ರಶ್ನೆ—ಯಾವನು ಸಾಮ್ಯವಂ ಬಿಡದಿದ್ದರೂ ವಿಷಮವಾದ ಜಗತ್ತಿಗೆ ಕಾರಣವಾಗುವನು. ||೬೬||

ಉತ್ತರ—ಈ ಪರಮಾತ್ಮನು ಜನಗಳಿಗೆ ಕರ್ಮಾನುರೂಪವಾಗಿ ಫಲವಂ ಕೊಡುವನಾದ್ದರಿಂದ, ಸತ್ತಾರೂಪದಿಂ ವ್ಯಾಪಕನಾಗಿರುವನು. ಆದ್ದರಿಂ ಸಿದ್ಧವಾಗಿರುವ ಸಾಮ್ಯಭಾವವಂ ಬಿಡದೆ ಪ್ರಾಣಿಕರ್ಮಭೇದದಿಂ ವಿಷಮವಾಗಿರುವ ಜಗತ್ತಿಗೆ ಕಾರಣವಾಗುವನು. ವೃಕ್ಷವಂ ಒಳಗೆ ವಹಿಸಿರುವ ಬೀಜವು ಭಾಂಡದಲ್ಲಿರುವಂತೆ ಈ ಆತ್ಮನಲ್ಲಿ ಜಗದುತ್ಪಾದಕಶಕ್ತಿ ಇರುವದು. ||೬೬||

* ಪರಿಚ್ಛಿನ್ನ=ನಿರ್ಬಂಧಿಸಲ್ಪಟ್ಟ (limited).

ಪ್ರಶ್ನೆ—ಯಾವನು ಬೀಜದಿಂ ವೃಕ್ಷದಂತೆಯೂ, ವೃಕ್ಷದಿಂ ಬೀಜವಂತೆಯೂ ಪುಟ್ಟುತ್ತಿದ್ದಾಗ್ಯೂ ಪುಟ್ಟದೆ ಇರುವನು? ||೬೩||

ಉತ್ತರ—ವೃಕ್ಷವು ಸ್ವರೂಪವಂ ಬಿಡದೆ ಬೀಜರೂಪದಿಂ ಭೂಮಿಯುಂ ಸೇರಿ ಪುನಃ ವೃಕ್ಷವಾಗುವಂತೆ ಈ ಆತ್ಮನು ಸಂಕಲ್ಪರೂಪವಾದ ಬೀಜದಿಂ ಜಗದ್ರೂಪನಾಗುವದ್ದರಿಂದ, ಪುಟ್ಟುವನೆನ್ನುವರು. ವೃಕ್ಷವು ಬೀಜದಿಂ ಪುಟ್ಟುವಲ್ಲೂ, ಪುನಃ ಬೀಜವಾಗುವಲ್ಲೂ ಪರಿಣಾಮಿಯಾದ್ದರಿಂದ ವಿಕಾರಿಯಾಗುವದು. ಆತ್ಮನು ಪರಿಣಾಮಿಯಲ್ಲದ್ದರಿಂದ ಜಗದ್ರೂಪನಾಗಿ ತೋರುವನು. ಅದ್ದರಿಂದ ಪುಟ್ಟಲಿಲ್ಲವೆಂತಲೇ ತಿಳಿಯತಕ್ಕದ್ದು. ||೬೩||

ಪ್ರಶ್ನೆ—ಯಾವದಕ್ಕೆ ತಾವರೆದಂಟಿನ ಧಾರವೂ ಕೂಡ ಮೇರುವೆನಿಸುವದೋ, ಅಂಥಾ ಪರಮಾಣುರೂಪವಾದ ಯಾವನಲ್ಲಿ ಮೇರು ಮಂದರಕೋಟಿಗಳಿರುವವು? ||೬೪||

ಉತ್ತರ—ಕೂದಲಿನ ಕೊನೆಯ ಶತಾಂಶಕ್ಕೆ ಶತಾಂಶದಂತೆ ಈ ಆತ್ಮನು ಅತಿ ಸೂಕ್ಷ್ಮನಾದ್ದರಿಂದ, ದೃಶ್ಯವಾದ ತಾವರೆಧಾರವು ಮೇರುವಿನಂತೆ ದೊಡ್ಡದಾಗುವದು. ಇಂಥಾ ಈ ಪರಮಾಣುವಿನಲ್ಲಿ ಜ್ಞಾನರೂಪದಿಂ ಮೇರುಮಂದರ ಮುಖ್ಯಸ್ವರೂಪವಾದ ತ್ರೈಲೋಕ್ಯ ಪರಂಪರೆಗಳಿರುವದಕ್ಕಿಂತಲೂ ಇನ್ನೊಂದು ಮಾಯೆಯುಂಟೆ? ||೬೪||

ಪ್ರಶ್ನೆ—ಅನೇಕ ಚಿತ್ತಾದ ಈ ಜಗವು ಯಾವನಿಂದ ವ್ಯಾಪ್ತವಾಗಿರುವದು.

ಉತ್ತರ—ವ್ಯಾಪಕ ಸ್ವಭಾವವಾದ ಆಕಾಶವು ಪದಾರ್ಥಭೇದದಿಂ ಬಹುರೂಪವಾಗುವಂತೆ ಈ ಆತ್ಮನು * ಉಪಾಧಿಭೇದದಿಂ ಬಹುರೂಪನಾಗುವನು. ಹೀಗೆ ಅನೇಕ ಚಿನ್ಮಯವಾದ ಈ ಪ್ರಪಂಚವನ್ನು ನಿರುಪಾಧಿಕವಾದ ಸ್ವರೂಪದಿಂ ತಾನೇ ವ್ಯಾಪಿಸಿಕೊಂಡಿರುವನು. ಪರಮಾರ್ಥವಾಗಿ ದ್ವೈತಾದ್ವೈತಗಳು ಬೀಜಾಂಕುರಗಳು ಸ್ಥೂಲ ಸೂಕ್ಷ್ಮಗಳು ಜನ್ಮಾಜನ್ಮಗಳು ಅಸ್ತಿನಾಸ್ತಿ ಭಾವಗಳು ಸೌಮ್ಯಾಸೌಮ್ಯಗಳು ಶೂನ್ಯಾಶೂನ್ಯಭಾವಗಳು ವಿಕಾರಾವಿಕಾರಗಳು ಜಗಜ್ಜಗದ ಭಾವಗಳು ಸಹ ಮಾಯೆಯಿಂದಲೇ ಕಲ್ಪಿತವಾಗಿರುವವಾದ್ದರಿಂದ, ಒಂದೂ ಇಲ್ಲದಿರುವದು. ||೬೫||

ಪ್ರಶ್ನೆ—ಯಾತರ ಬಲದಿಂ ನೀನು ರಾಜ್ಯಭಾರವಂ ಮಾಡುತ್ತೀಯೆ?

---

* ಯಾವಜಡವಸ್ತುವಿನ ಮುಖಾಂತರವಾಗಿ ಚಿದ್ವಸ್ತುವು ಪ್ರಕಾಶಿಸುವದೊ ಆ ಜಡಕ್ಕೆ " ಉಪಾಧಿ ,, ಯಾಂದೂ ಹೆಸರು.

ಉದಾ:—ಅಗ್ನಿಗೆ ಕಟ್ಟಿಗೆ ಉಪಾಧಿ. (Material medium.)

ಉತ್ತರ—ಸಚ್ಚಿದಾನಂದಾತ್ಮಕವಾದ ಸ್ವರೂಪವಂ ಬಿಡದೆ ದ್ವೈತರೀತಿಯಿಂ ವಿಹರಿಸುತ್ತಿರುವ ಈ ಪರಮಾತ್ಮನ ಪ್ರಭಾವದಿಂದಲೇ ಸಮಸ್ತವಾದ ಕರಣಗಳು ಕರಣವುಳ್ಳ ಪ್ರಾಣಿಗಳು ಸಹ ತಮ್ಮತಮ್ಮ ಕಾರ್ಯಗಳಂ ನೆರವೇರಿಸುವದು.

ಪ್ರಶ್ನೆ—ಯಾತರ ದರ್ಶನದಿಂ ನೀನು ಭಿನ್ನವಾಗುವದಿಲ್ಲ? ॥೨೨॥ ಅಥವಾ ಆ ಸ್ವರೂಪವುಳ್ಳವನೇ ಆಗುತ್ತೀಯೆ? ॥೨೨॥

ಉತ್ತರ—ವಿಚಾರದಿಂದಾತ್ಮನ ಮಹಿಮೆಯು ಜ್ಞಾನಗೋಚರವಾಗಲು ಜಗತ್ತೆಂಬ ಭ್ರಾಂತಿಯಳಿದು ದೃಶ್ಯಪ್ರಪಂಚವೆಲ್ಲವು ದೃಗ್ರೂಪನಾದ ಆತ್ಮನಿಗೆ ಅಭಿನ್ನವೆಂದು ನಿಶ್ಚಿತವಾಗುವದು. ಆಗ ಪ್ರಪಂಚದೊಳಗೆ ಇರುವ ತಾನೂ ಕೂಡ ಅಭಿನ್ನವೆಂಬ ಜ್ಞಾನವುಂಟಾಗುವದು॥೨೦॥ ವಿಚಾರ ಪರ್ಯವಸಾನದಲ್ಲಿ ಜೀವಾತ್ಮ ಪರಮಾತ್ಮರ ಭೇದಜ್ಞಾನವು ನಿಶ್ಶೇಷವಾಗಿ ಪೋಗಲು, ಚಿನ್ಮಾತ್ರವಾದ ವಸ್ತು ಒಂದೇ ಕೇವಲವಾಗಿ ಪ್ರಕಾಶಿಸುತ್ತಿರುವದು. ॥೨೨॥

ಎಂದು ರಾಜನು ಪ್ರತ್ಯುತ್ತರಗಳಂ ಪೇಳಲು, ವರ್ಷಾಕಾಲದ ಮೇಘಧ್ವನಿಯಂ ಕೇಳಿದ * ಮಯೂರಿಯಂತೆ ಸಂತುಷ್ಟಳಾದ ಆ ರಾಕ್ಷಸಿ ಇಂತೆಂದಳು. ಎಲೈ ರಾಜಮಂತ್ರಿಗಳಿರಾ ! ಮೇಘಧ್ವನಿಯಿಂ ಬಕಪಕ್ಷಿಗೆ ಗರ್ಭವಾಗುವಂತೆ ನಿಮ್ಮ ವಚನದಿಂದೆನಗೆ ಆನಂದವುಂಟಾಗಿರುವದಾದ್ದರಿಂದ, ಅಧಿಕವಾಗಿದ್ದ † ಕ್ಷುತ್ಪಿಪಾಸೆಗಳು ಕೂಡ ತೋರದಿರುವವು. ಚಂದ್ರನಲ್ಲಿ ಚಂದ್ರಿಕೆಯಂತೆ ನಿಮ್ಮಲ್ಲಿ ನಿರ್ಮಲವಾದ ಬುದ್ಧಿಯು ಪ್ರಕಾಶಿಸುತ್ತಿರುವದು. ವಿವೇಕದಿಂ ಜಗತ್ಪೂಜ್ಯರಾದ ನೀವು ಭೂಮಿ ಭಾಸ್ಕರರಂತೆ ಪ್ರಕಾಶಿಸುತ್ತೀರಾದ್ದರಿಂದ ನಿಮಗೆ ಸನ್ಮಾನವಂ ಮಾಡಲಿಚ್ಛೈಸಿರುವೆನು. ನಿಮಗೆ ಬೇಕಾದ ವರವಂ ಕೇಳಬಹುದೆಂದು ಆ ರಾಕ್ಷಸಿಯು ಪೇಳುತ್ತಿರುವಲ್ಲಿ, ರಾಜನಿಂತೆಂದನು.

ಎಲೌ ರಾಕ್ಷಸಕುಲಾರಣ್ಯಮಂಜರಿಯೆ ! ನಮ್ಮ ದೇಶದಲ್ಲಿ ವಿಷೂಚಿಕೆಯಿಂದ ಜನಗಳಿಗೆ ಹೃದಯಶೂಲವುಂಟಾಗಿರುವದು. ಔಷಧಿಗಳಿಂದದಕ್ಕೆ ಶಾಂತಿಯಾಗದಿರುವಲ್ಲಿ, ದುರ್ಗ್ರಹಗಳಿಂದೀವುಪದ್ರವವು ಉಂಟಾಗಿರಬಹುದೆಂದು ದೊಡ್ಡವರು ಪೇಳಲು, ಆ ಗ್ರಹಗಳಂ ನೋಡಿ ಹಿಡಿದು ಶಿಕ್ಷಿಸಲೋಸುಗ, ರಾತ್ರಿ ಸಂಚಾರಕ್ರಮದಿಂ ನಾನು ಪೊರಮಟ್ಟಿರುವೆನು. ನೀನು ಸಂತುಷ್ಟಳಾಗಿದ್ದರೆ ಜನರಿಗೆ ಹೃದಯಶೂಲೆ ತಪ್ಪುವಂತೆಯೂ, ತಿರುಗಿ ಅದು ಬಾರದಂತೆಯೂ ವರವಂ ಕೊಡಬೇಕೆಂದು ರಾಜನು ಕೇಳಲು, ಪುನಃ ಆ ರಾಕ್ಷಸಿ ಇಂತೆಂದಳು. ಬ್ರಹ್ಮನ ವರದಿಂ ವಿಷೂಚಿಕಾರೂಪವಂ ಪಡೆದಿರುವ ನಾನು ಬಂದಿದ್ದರಿಂದಲೇ

* ಹೆಣ್ಣುನವಿಲು. † ಹಸಿವು, ಬಾಯಾರಿಕೆಗಳು.

ನಿಮ್ಮ ದೇಶದವರಿಗೆ ಹೃದಯಶೂಲೆವುಂಟಾಗಿರುವದು. ಈ ಶೂಲೋಪದ್ರವದಿಂ ಹೃದಯ ನಾಡಿಗಳು ಶಿಥಿಲವಾಗಿರಲು ಅವರಿಂದುಂಟಾದ ಮಕ್ಕಳುಗಳಿಗೂ ಹೃದಯವು ಶಿಥಿಲವಾದ ನಾಡಿಯುಳ್ಳಂಥಾದ್ದಾಗುವದು. ನಿಮಗೆ ನಾನು ಈಗ ವಿಧೇಯಳಾಗಿರುವದ್ದರಿಂದ ನಿಮ್ಮ ಇಚ್ಛಾನುಸಾರವಾಗಿ ಪ್ರಾಣಿಹಿಂಸೆಯಂ ಬಿಟ್ಟು ಮನೆಯಾದ ಹಿಮವಂತನ ಶಿಖರಕ್ಕೆ ಪೋಗುವೆನು. ಆರು ತಿಂಗಳು ಸಮಾಧಿಯಲ್ಲಿದ್ದ ಯನಗೆ ಭೋಜನಾಪೇಕ್ಷೆಯುಂಟಾದ್ದರಿಂದ ನಿಮ್ಮ ದೇಶಕ್ಕೆ ಬಂದೆನು. ಇಲ್ಲಿ ನಿಮ್ಮ ವಚನದಿಂದಲೇ ತೃಪ್ತಳಾದ್ದರಿಂದ ಹಿಂತಿರುಗಿಪೋಗಿ ಅನ್ಯಾತ್ಮಭಾವನಾರೂಪವಾದ ಧಾರಣೆಯಿಂದ ಶರೀರಧಾರಣೆಯಂ ಮಾಡಿಕೊಂಡಿರುವೆನು. ಈ ಉಪದ್ರವಕ್ಕೆ ಶಾಂತಿಕರವಾಗಿ ಬ್ರಹ್ಮನು ಪೇಳಿದ ಮಂತ್ರವನ್ನು ನೀವು ಸಾಧಿಸುವರಾಗಿ ಎಂದು ಪೇಳಿ ನದೀತೀರಕ್ಕೆ ಕರೆದುಕೊಂಡು ಪೋಗಿ ಮಂತ್ರವನ್ನವರಿಗೆ ಪೇಳಿಕೊಡಲು ಆ ರಾಜಮಂತ್ರಿಗಳು ಭಕ್ತಿಯಿಂ ನಮ್ರರಾಗಿ ಎಲೌ ತಾಯಿಯೇ ಪ್ರಶ್ನೋತ್ತರ ಸಂಬಂಧದಿಂ ಸಖಿಯಾಗಿದ್ದ ನೀನು ಈಗ ಗುರುಭಾವವಂ ವಹಿಸಿದ್ದರಿಂದ ಅವಶ್ಯ ಪೂಜ್ಯಳಾಗಿದ್ದೀಯೆ, ಆದ್ದರಿಂ ನೀನು ಸಾಧಾರಣ ಸ್ತ್ರೀರೂಪದಿಂ ನಮ್ಮ ಅರಮನೆಗೆ ಬಂದಿರಬೇಕು. ಪರಿಪರಿಯಾದ ಮಾನುಷಾಹಾರದಿಂ ಪರಿತೋಷವಂ ಪೊಂದುತ್ತಿರುವ ನಿನಗೆ ಸ್ವಲ್ಪ ದಿವಸಗಳಲ್ಲಿಯೇ ರಕ್ಷೋಜಾತ್ಯುಚಿತವಾದ ಆಹಾರವನ್ನುಪಹಾರವಂ ಮಾಡುವೆವೆಂದು ಪ್ರಾರ್ಥಿಸಿ ಆ ರಾಕ್ಷಸಿಯನ್ನರಮನೆಗೆ ಕರದುಕೊಂಡು ಪೋದರು. ಪರಿಪರಿಯಾದ ಉಪಚಾರದಿಂದಲೂ, ಆಹಾರದಿಂದಲೂ ಸಂತುಷ್ಟಳಾಗುತ್ತಿದ್ದ ಅವಳಿಗೆ ಆರುಸಹಸ್ರ ವಧ್ಯಜನರಂ ತಂದುಕೊಟ್ಟರು. ಆ ರಾಕ್ಷಸಿಯು ರಾತ್ರಿ ಕಾಲದಲ್ಲಿ ಸ್ವರೂಪವಂ ಗ್ರಹಿಸಿ ಆ ಜನಗಳಂ ತೆಗದುಕೊಂಡು ಹಿಮವತ್ಪರ್ವತಕ್ಕೆ ಪೋಗಿ ಯಥೇಚ್ಛವಾಗಿ ಭಕ್ಷಿಸಿ ಪುನಃ ಸಮಾಧಿಗೆ ಕುಳಿತುಕೊಂಡಳು. ಚಿತ್ತ ಬಹಿರ್ಮುಖವಾದಾಗ ಪುನಃ ಕಿರಾತಮಂಡಲಕ್ಕೆ ಬಂದ ಆ ರಾಕ್ಷಸಿಗೆ ಆ ರಾಜಮಂತ್ರಿಗಳು ಪೂರ್ವದಂತೆಯೇ ಉಪಚಾರವಂ ಮಾಡಿದರು. ಈಗಲೂ ಆ ಕಿರಾತಮಂಡಲದಲ್ಲಿ ಮಂಗಳೆಯೆಂತಲೂ, ಕಂದರೆಯೆಂತಲೂ, ಪೂಜಿತಳಾಗುವ ಆ ರಾಕ್ಷಸಿಯು ಸಮಸ್ತ ಬಾಧೆಗಳಂ ಪರಿಹರಿಸುವಳು. ಕಿರಾತಮಂಡಲದ ಧೊರೆಗಳು ಪ್ರತಿಮಾರೂಪದಿಂದವಳ ಪ್ರತಿಷ್ಠೆಯಂ ಮಾಡಿ ಪೂಜಿಸುವರು. ಇತರ ದೇಶಗಳಲ್ಲಿ ಚಿತ್ರಪ್ರತಿಮಾರೂಪದಿಂದವಳು ಪರದೇವತೆಯಂತೆ ಪೂಜಿಸಲ್ಪಡುವಳೆಂದು ವಸಿಷ್ಠನು ಪೇಳುತ್ತಿದ್ದ ನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿಪ್ರಕರಣದೊಳ್ ಕರ್ಕಟಿಕೋಪಾಖ್ಯಾನ ನಿರೂಪಣವೆಂಬ ಏಳನೇ ತರಂಗಕ್ಕೆ ಮಂಗಳಮಹ.

## ಎಂಟನೇ ತರಂಗ ಪ್ರಾರಂಭಃ.



### ಐಂದವೋಪಾಖ್ಯಾನ.

ಬಳಿಕ ವಸಿಷ್ಠನು ಶ್ರೀರಾಮಚಂದ್ರನಂ ಕುರಿತಿಂತೆಂದನು. ಎಲೈ ರಘುಕುಲೋತ್ತಮನೇ ನಳ್ಳಿಗೆ ಸರಿಯಾದ ಆಕಾರದಿಂ ಕರ್ಕಟನೆಂದು ಪ್ರಸಿದ್ಧನಾದ ರಾಕ್ಷಸನ ಮಗಳಾದ ಕರ್ಕಟಿಯು ಕಥೆಯುಂ ಕೇಳಿದೆಯಲ್ಲವೆ! ಆ ಪ್ರಶ್ನೋತ್ತರಗಳಂ ಚನ್ನಾಗಿ ಭಾವಿಸುವನಾಗು. ವೃಕ್ಷಗಳಲ್ಲಿರುವ ಅಗ್ನಿಯು ಜ್ವಲಿಸದೆ ಗರ್ಭದಲ್ಲಿದ್ದಾಗ್ಯೂ ಕಪಿ ಮೊದಲಾದ ಪ್ರಾಣಿಗಳಿಗೆ ಹ್ಯಾಗೆ ಸೀತವಂ ಪರಿಹರಿಸುವದೋ ಹಾಗೆ ಪ್ರಕೃತಿಯಲ್ಲಿ ಗೂಢವಾಗಿರುವ ಬ್ರಹ್ಮವು ಪ್ರಾಣಿಗಳಿಗೆ ಭೋಗದುಃಖವಂ ಪರಿಹರಿಸುತ್ತಾ ನಾನಾಪ್ರಕಾರವಾದ ಜಗವನ್ನುಂಟುಮಾಡುವದು. ಇಲ್ಲಿ ಬಾಹ್ಯದೃಷ್ಟಿಯುಳ್ಳವರು ಪ್ರಕೃತಿಯನ್ನೇ ಕಾರಣವೆನ್ನುವರು. ಅಂತರ್ದೃಷ್ಟಿಗಳು ಪುರುಷನೇ ಕಾರಣವೆನ್ನುವರು. ಜಲತರಂಗಗಳಂತೆ ಪ್ರಕೃತಿಪುರುಷರು ಅಭಿನ್ನರಾದ್ದರಿಂದದರಿಂದುಂಟಾದ ಈ ಜಗವು ಜಡದೃಷ್ಟಿಯಿಂ ಭಿನ್ನವಾಗಿಯೂ, ಚೇತನದೃಷ್ಟಿಯಿಂದ ಅಭಿನ್ನವಾಗಿಯೂ, ಕಾಣುತ್ತಿರುವದು. ಜಡವಾದ ಪ್ರಕೃತಿಗೆ ಸ್ವತಃ ಪ್ರಕಾಶಯೋಗ್ಯತೆ ಇಲ್ಲದ್ದರಿಂದಲೂ, ಚಿತ್ತು *ಸ್ವಯಂಪ್ರಕಾಶವಾದ್ದರಿಂದಲೂ, ಚಿನ್ಮಾತ್ರದೃಷ್ಟಿಯವರಿಗೆ ಪ್ರಕೃತಿಯು ನಷ್ಟವಾಗುವದು. ಆದ್ದರಿಂದಾ ಜ್ಞಾನಿಗಳು ಕಾರ್ಯವಾಗಿ ತೋರುವ ಜಗವು ಪರಮಾತ್ಮನಿಗೆ ಅಭಿನ್ನವಾದ್ದರಿಂದ ಕಾರ್ಯವೂ ಇಲ್ಲ, ಕರ್ತೃತ್ವವೂ ಇಲ್ಲವೆಂತಲೇ ಹೇಳುವರು. ಆದ್ದರಿಂದ ಬ್ರಹ್ಮದ ಪ್ರಕಾಶವೇ ಜಗವಾಗಿ ತೋರುತ್ತಿರುವದಲ್ಲದೆ ಜಗತ್ತು ಬೇರೆ ಇಲ್ಲವೆಂದು ನಿಶ್ಚಯಿಸುವನಾಗು. ಬೀಜವೃಕ್ಷಗಳಂತೆಯೂ, ಫಲಬೀಜಗಳಂತೆಯೂ, ಚಿಚ್ಚೈತ್ಯಗಳಿಗೆ ಸತ್ತಾಭೇದವಿಲ್ಲದ್ದರಿಂದ ಆ ವಿಚಾರದಿಂದಲೇ ಭೇದ ತೋರುತ್ತಿರುವದು. ವಿಚಾರದಿಂ ಸ್ವರೂಪವಿದಿತವಾಗಲೂ ಭೇದಜ್ಞಾನ ವಳಿಯುವದೆಂದು ನಿಶ್ಚಯಿಸುವನಾಗು. ಬ್ರಹ್ಮದಿಂದುಂಟಾದ ಈ ಜಗವು ಬ್ರಹ್ಮವಲ್ಲದೇ ಮತ್ತೊಂದಾಗಲಾರದೆಂದು ನನ್ನ ವಚನವಂ ಭಾವಿಸುವ ನೀನು ವಸ್ತುಸ್ವರೂಪವಂ ತಿಳಿಯುತ್ತೀಯೆ ಎಂದು ಹೇಳುತ್ತಾ ಬ್ರಹ್ಮನದೆಸೆಯಿಂ ಜಗ ಉಂಟಾಯಿತೆಂಬುವಲ್ಲಿ ಅಭೇದ

*ಮತ್ತೊಂದು ಪ್ರಕಾಶವಸ್ತುವಿನ ಅಪೇಕ್ಷೆ ಇಲ್ಲದೆ ತಾನೇ ಪ್ರಕಾಶಿಸುವದು ಸ್ವಯಂಪ್ರಕಾಶವೆನಿಸುವದು. ದೃಷ್ಟಾಂತ:--ಕಣ್ಣು ಪರಪ್ರಕಾಶವು. ದೀಪವು ಸ್ವಯಂಪ್ರಕಾಶವು.

ಪಾಚಮಿಯೋ ಭೇದಪಾಚಮಿಯೋ ಎಂದು ಶ್ರೀರಾಮನು ಕೇಳಲು ಪುನಃ ವಸಿಷ್ಠನಿಂತೆಂದನು. ಎಲೈ ಕಾಕುಸ್ಥನೇ ವಾಚ್ಯವನ್ನು ಪಿಡಿದೇ ವಾಚಕವಾದ ವಾಕ್ಕು ಪ್ರವರ್ತಿಸುವದಾದ್ದರಿಂದ ಸಮಸ್ತ ಶಾಸ್ತ್ರವೂ ದ್ವೈತವನ್ನೇ *ಅವಲಂಬಿಸಿ ಪೊರಮಟ್ಟಿರುವದು. ಬಿಳೀಬಟ್ಟೆಯೆಂತಲೂ, ಕರೀಗಡಿಗೆಯಂತಲೂ ಪೇಳುವಲ್ಲಿ ದ್ರವ್ಯಗುಣಗಳ ಭೇದವು ಮಾತಿನಲ್ಲಿ ಸ್ಪಷ್ಟವಾಗಿರುವದು. ಆ ಭೇದವಂ ಪದಾರ್ಥದಲ್ಲಿ ತೋರಬೇಕೆಂದರೆ ಎಂದಿಗೂ ಆಗಲಾರದಾದ್ದರಿಂದ ಭೇದವು ವಾಙ್ಮಾತ್ರಸ್ಥಾಯಿಯೆಂದು ತಿಳಿಯಬರುತ್ತೆ. ವಚನಭೇದಜ್ಞಾನಾರ್ಥವಾಗಿ †ಖಂ, ಖೇ, ಖಾನಿ, ಎಂದು ಶಬ್ದವಂ ಪೇಳುವರಲ್ಲದೆ ಖ ಶಬ್ದಕ್ಕೆ ಅರ್ಥವಾದ ಆಕಾಶದಲ್ಲಿ ದ್ವಿತ್ವಬಹುತ್ವಗಳಂ ತೋರಬೇಕೆಂದರೆ ಯಾರೂ ಸಮರ್ಥರಾಗಲಾರರು. ಇದೇಪ್ರಕಾರ ಕನಕದಿಂ ಕಟಕವಾಯಿತೆಂದು ಕಾರ್ಯಕಾರಣಭಾವವಂ ಪೇಳುವರಲ್ಲದೆ ಅಲ್ಲಿ ಕಾಣುವ ಭೇದವಂ ಯಾರೂ ತೋರಲಾರರು. ಹೀಗಿರುವದ್ದರಿಂದ ವಾಕ್ಕಿನ ಸ್ವಭಾವವೇ ಭೇದ ಬೋಧಕವೆಂದು ತಿಳಿದು ಅಲ್ಲಿಯ ಭೇದವಂ ಪರಿಗ್ರಹಿಸದೆ ಬ್ರಹ್ಮದಿಂ ಜಗವು ಪುಟ್ಟಿತೆಂಬ ವಚನದಲ್ಲಿ ಬ್ರಹ್ಮವೇ ಜಗದ್ರೂಪದಿಂ ಪ್ರಕಾಶಿಸುವದೆಂದು ತಿಳಿಯುವನಾಗು. ಕ್ರೀಡಾಸಹಾಯವಾದ ಎರಡನೇ ಪದಾರ್ಥವಂ ನೋಡಲಿಚ್ಛೈಸಿದ ಪರಮಾತ್ಮನ ಸಂಕಲ್ಪವೇ ಮನೋರೂಪದಿಂದಿರುವದು. ಅದರಲ್ಲಿರುವ ಚಿದಂಶವೆ ಜೀವವೆನಿಸುವದು. ಜಡಾಂಶವಾದ ಮನಸ್ಸಂ ಪಿಡಿದಿರುವ ಜೀವನಿಗೆ ಬ್ರಹ್ಮೇತರ ಪದಾರ್ಥವಿಲ್ಲದ್ದರಿಂದ ವ್ಯಾಪಕಭಾವದಿಂ ತನ್ನ ಸುತ್ತಮುತ್ತಲೂ ಪ್ರಕಾಶಿಸುವ ಬ್ರಹ್ಮದಲ್ಲೇ ಜಗದ್ಭ್ರಾಂತಿಯುಂಟಾಗಿರುವದು. ಆದ್ದರಿಂದ ಅದರ ಭಾವಾನುಸಾರವಾಗಿ ಜಗತ್ತು ವೃದ್ಧಿ ಹೊಂದಿರುವದು. ಹೀಗೆ ಚಿದಚಿದ್ರೂಪವಾದ್ದರಿಂ ಪರಾಪರವೆನಿಸುವ ಈ ಮನವೇ ಸರ್ವದಾ ವಿಚಾರಣೀಯವಾಗಿಯೂ, ಲಾಲನೀಯವಾಗಿಯೂ, ಧಾರಣೀಯವಾಗಿಯೂ ಇರುವದು. ಇದರ ಜಡಾಂಶವೇ ಜಗವಾಗಿ ಪರಿಣಮಿಸುವದು. ಇದಕ್ಕೆ ಇದರ ಚಿದಂಶವೇ ನಿಮಿತ್ತವಾಗುವದು. ಚಿದಚಿದಾತ್ಮಕವಾದ ಈ ಮನವು ರಾಗಾದ್ಯುಪಹತಿಯಿಂ ಸಂಸಾರವಾಗುವದು. ರಾಗಾದಿಗಳು ತಪ್ಪುವದ್ದರಿಂ ಜಡಾಂಶಕ್ಕೆ ನಾಶವಾಗುವದೇ ಮೋಕ್ಷವೆನಿಸುವದು. ಚಿತ್ತ ಬಾಲಕನ ಅಜ್ಞಾನದಿಂದೀ ಜಗದ್ಭ್ರಾಂತಿ ಪಿಶಾಚವು ತೋರುವದು. ಇದಕ್ಕೆ ವಿಚಾರದಿಂ ಸ್ವರೂಪಜ್ಞಾನವುಂಟಾಗಲು ಈ ಪಿಶಾಚವು ನಷ್ಟ

*ಆಶ್ರಯ ಮಾಡಿಕೊಂಡು.

†ಖಂ ಏಕವಚನ. ಖೇ ದ್ವಿವಚನ. ಖಾನಿ ಬಹುವಚನ.

ವಾಗುವದು. ದೃಷ್ಟಾಂತ ಚಮತ್ಕಾರಗಳಿಲ್ಲದ ವಚನವು ಹೃದಯಂಗಮವಾಗದೆ ಬೂದಿಯಲ್ಲಿ ಬಿದ್ದ ಘೃತದಂತೆ ವ್ಯರ್ಥವಾಗುವದು. ಆದ್ದರಿಂದ ಹೃದಯಂಗಮವಾದ ದೃಷ್ಟಾಂತ ಚಮತ್ಕಾರಗಳಿಂ ನಾನು ಪೇಳುವ ಮಾತುಗಳಲ್ಲಿ ವಾಙ್ಮಾತ್ರನಿಷ್ಠವಾದ ಭೇದವಂ ಗ್ರಹಿಸದೆ ಅರ್ಥಮಾತ್ರವಂ ಪರಿಗ್ರಹಿಸುವನಾದರೆ ನಿನಗೆ ವಸ್ತುಸ್ವರೂಪವು ಚನ್ನಾಗಿ ವಿದಿತವಾಗುವದು. ಪ್ರಕೃತದಲ್ಲಿ ಮನೋಮಾತ್ರದಿಂ ಜಗತ್ತುಂಟಾಗುವ ಸಂಗತಿಯು ಗೊತ್ತಾಗಲೋಸುಗ ನನಿಗೆ ಬ್ರಹ್ಮನು ನಿರೂಪಿಸಿದ ಕಥೆಯಂ ಪೇಳುವೆನು, ಸಾವಧಾನವಾಗಿ ಕೇಳುವನಾಗು. ಪೂರ್ವದಲ್ಲಿ ನಾನು ಜಗತ್ಸೃಷ್ಟಿಯು ಹ್ಯಾಗೆ ಆಗುವದೆಂದು ಕೇಳಲು ಬ್ರಹ್ಮನು ನಿರೂಪಿಸಿದನು. ಅದೆಂತೆಂದರೆ:—

ಪೂರ್ವದೋಳ್ ಒಂದಾನೊಂದು ದಿವಸದ ಅಂತ್ಯಭಾಗದಲ್ಲಿ ಸೂರ್ಯನು ಕಿರಣಗಳಂ ಪರಿಗ್ರಹಿಸುವಂತೆ ಪ್ರಪಂಚವೆಲ್ಲವಂ ಸಂಗ್ರಹಿಸಿಕೊಂಡು ಸಮಾಹಿತಚಿತ್ತನಾಗಿದ್ದ ನಾನು ನಿಶಾಂತದಲ್ಲಿ ಪುನಃ ಸೃಜಿಸಬೇಕೆಂಬ ಸಂಕಲ್ಪದಿಂ ಗಗನವಂ ನೋಡುತ್ತಾ ಅಲ್ಲಿ ಅನೇಕ ಪ್ರಪಂಚಗಳನ್ನು ಅವುಗಳಲ್ಲಿ ನನ್ನ ಪ್ರತಿಬಿಂಬದಂತಿರುವ ಹತ್ತು ಜನ *ಪದ್ಮಾಸನರನ್ನು ಕಂಡು ವಿಸ್ಮಿತನಾಗಿ ಅವರೊಳಗಿದ್ದ ಒಬ್ಬ ಸೂರ್ಯನಂ ಕರೆದು ಈ ಪ್ರಪಂಚಗಳು ಹ್ಯಾಗ ಪುಟ್ಟಿರುವವೆಂದು ಕೇಳಲಾ ಸೂರ್ಯನು ನನಿಗೆ ನಮಸ್ಕರಿಸಿ ಎಲೈ ಪಿತಾಮಹನೇ ಜಗತ್ತಿಗೆ ಕಾರಣನಾದ ನೀನು ಜಗತ್ತೆಲ್ಲಿಂದಾಗಿದೆಯೆಂದು ಕೇಳುವದಂ ನೋಡಿದರೆ ಅತ್ಯಾಶ್ಚರ್ಯವಾಗುತಲಿದೆ. ಅಥವಾ ನನ್ನ ಮಾತುಗಳಂ ಕೇಳಲಪೇಕ್ಷೆಯಿದ್ದಲ್ಲಿ ಪೇಳುತಲಿದೇನೆ. ‡ನಿನ್ನ ನಿನ್ನೇದಿನ ಕೈಲಾಸಶೈಲದ ಸಮೀಪದೋಳ್ ಜಂಬೂದ್ವೀಪದಲ್ಲಿ ಸುವರ್ಣಜಟಾಯೆಂದು ಪ್ರಸಿದ್ಧವಾದ ದೇಶದಲ್ಲಿ ಇಂದುವೆಂಬ ಬ್ರಾಹ್ಮಣನಾದನು. ಅಪುತ್ರನಾದ ಆ ಬ್ರಾಹ್ಮಣನು ಪತ್ನಿಯೊಡನೆ ಕೈಲಾಸಪರ್ವತವನ್ನೇರಿ ಸಾಯಂಕಾಲದಲ್ಲಿ ಒಂದು ಆಚಮನಕ್ಕೆ ತಕ್ಕಷ್ಟು ಜಲವಂ ಕುಡಿಯುತ್ತಾ ವೃಕ್ಷವೃತ್ತಿಯಿಂದ ತಪವಂ ಮಾಡಿದನು. ತ್ರೇತಾದ್ವಾಪರ ಎರಡು ಯುಗಗಳು ಕಳೆದಾಗ್ಯೂ ತಪವಂ ಬಿಡದಿರುವ ಅವನ ಸ್ಥಿತಿಗೆ ಮೆಚ್ಚಿದ ಪರಮೇಶ್ವರನು ಕುಮುದಗಳಿಗೆ ಚಂದ್ರನಂತೆ ಅವರಿಗೆ ಪ್ರತ್ಯಕ್ಷನಾಗಿ ಏನುಬೇಕೆಂದು ಕೇಳಲು ಆ ಇಂದುವು ಎಲೈ ಚಂದ್ರಶೇಖರನೆ, ಪುತ್ರರಿಲ್ಲದೆ ನಾನು ಬಹು ದುಃಖಪಟ್ಟಿರುವೆನಾದ್ದರಿಂದ ಪುನಃ ಆ ದುಃಖ ನನಿಗೆ ಬಾರದಂತೆ ಸುಗುಣರಾಗಿ ಮಹಾಜ್ಞಾನಿಗಳಾದ ಹತ್ತು ಜನ ಮಕ್ಕಳಾಗುವಂತೆ ವರವಂ ಕೊಡಬೇಕೆಂದು ಬೇಡಿಕೊಳ್ಳಲಾ

*ಬ್ರಹ್ಮರುಗಳನ್ನು. ‡ಬ್ರಹ್ಮಕಲ್ಪದಿಂದ ನೆನ್ನೇದಿನವೆಂಬರ್ಥವು.

ಜಗದೀಶ್ವರನು ಹಾಗೆ ಆಗಲೆಂದು ಹೇಳಿ ಅಂತರ್ಧಾನವನ್ನೈದಿದನು. ಬಳಿಕ ತಮ್ಮ ಮನೆಗೆ ಬಂದ ಇಂದುವಿಗೆ ಅಗ್ನಿಮಿತ್ರಿಯದೊಡನೆ ಸಪ್ತಗ್ರಹಗಳು ಅವತರಿಸಿದಂತೆ ತೇಜಸ್ವಿಗಳಾದ ಹತ್ತು ಜನ ಮಕ್ಕಳಾದರು. ಏಳನೇ ವರ್ಷದಲ್ಲಿ ಉಪನೀತರಾದ ಆ ಮಕ್ಕಳು ತಮ್ಮ ಪಾಂಡಿತ್ಯದಿಂ ಸಂತೋಷಪಡಿಸುತ್ತಿರುವಲ್ಲಿ ತೃಪ್ತರಾದ ಆ ಮಾತಾಪಿತೃಗಳು ಪರಲೋಕ ಸೌಖ್ಯಾನುಭವಕ್ಕೋಸುಗ ಶರೀರವಂ ಬಿಡಲು, ರಕ್ಷಕರಿಲ್ಲದ ಆ ಮಕ್ಕಳುಗಳು ವರಪ್ರದಾನದಿಂ ಜನಕನಾದ ಜಗದೀಶ್ವರನನ್ನೇ ಶರಣುಹೊಂದೋಣವೆಂದು ಕೈಲಾಸಪರ್ವತವಂ ಸೇರಿದರು ಬಳಿಕ ಅವರು ಆಲೋಚಿಸಿದರದೆಂತೆನೆ.

ಲೋಕದಲ್ಲಿ ಸಕಲಕಷ್ಟಗಳಿಗೂ ಸ್ಥಾನವಾದ್ದರಿಂದ ದಾರಿದ್ರ್ಯಕ್ಕಿಂತಲೂ ಮತ್ತೊಂದು ಕಷ್ಟವಿಲ್ಲವೆಂದು ಹೇಳುವರು. ಅದು ಅನುಭವಸಿದ್ಧವಾದ್ದರಿಂದ ಬುದ್ಧಿಶಾಲಿಯಾದವನು ಅವಕ್ಕೆ ಅವಶ್ಯವಾಗಿ ಪರಿಹಾರವಂ ಮಾಡಬೇಕು. ಜ್ಞಾನದಿಂದಜ್ಞಾನದಂತೆ ಐಶ್ವರ್ಯದಿಂದಲೇ ಅದು ಪೋಗತಕ್ಕದ್ದು. ಇಹಪರಗಳೆರಡರಲ್ಲೂ ಸುಖಪ್ರದವಾದ ಐಶ್ವರ್ಯವೇ ಯೋಗ್ಯವೆನಿಸುವದು. ವಿಷಯಭೋಗಾನಂದದಿಂ ಪರಲೋಕದೃಷ್ಟಿಯಿಲ್ಲದವರ ಐಶ್ವರ್ಯವು ಸಮೀಪಿಸಿರುವ ನರಕಯಾತನೆಗಳುಳ್ಳದಾದ್ದರಿಂದ ದುಃಖವೆಂತಲೇ ವಿವೇಕಿಗಳಿಂ ಹೇಳಲ್ಪಡುವದು. ಸಾಧುಮಾರ್ಗದಿಂದಿಹಪರಲೋಕ ಸುಖಸಾಧಕವಾದ ಐಶ್ವರ್ಯಗಳಲ್ಲಿ ಧನಿಕರು ಮೊದಲಾಗಿ ಇಂದ್ರಸಪರ್ಯಂತವೂ ಶತ್ರುಬಾಧಾಕ್ರಾಂತವಾಗಿರುವಲ್ಲಿ ಯಾವದನ್ನಾದರೂ ಅಪೇಕ್ಷಿಸಬಹುದೆ ಎಂದು ಆಲೋಚಿಸುತ್ತಿರುವಲ್ಲಿ, ಮಹಾಮತಿಯಾದ ಸರ್ವಜ್ಯೇಷ್ಠನು ಎಲೈ ತಮ್ಮಂದಿರಾ ಕಲ್ಪಾಂತಪರ್ಯಂತವಾಗಿ ನಾಶವಿಲ್ಲದ ಐಶ್ವರ್ಯವು ಬ್ರಹ್ಮನದಲ್ಲದೆ ಮತ್ತೊಬ್ಬನದಲ್ಲವಾದ್ದರಿಂದ ನಾವು ಬ್ರಹ್ಮತ್ವವಂ ಹೊಂದಿದರೆ ಸುಖಿಗಳಾಗುವೆವು. ಸುಖವೆಂಬುವದು ಮಾನಸಿಕವಲ್ಲದೆ ಶಾರೀರಕವಾಗಲಾರದು. ಜಗವೆಲ್ಲವೂ ಮಾನಸಿಕವಾದ್ದರಿಂದ ಯಾರ್ಯಾರು ಹ್ಯಾಗೆ ಹ್ಯಾಗೆ ಭಾವಿಸುವರೋ ಅವರವರು ಹಾಗೆ ಹಾಗೆ ಅನುಭವಿಸುವರು. ಆದ್ದರಿಂದ ಬ್ರಹ್ಮಭಾವನೆಯಿಂ ನಾವು ಬ್ರಹ್ಮತ್ವವಂ ಪಡೆಯುವದರಲ್ಲಿ ಸಂದೇಹವಿಲ್ಲವಾದ್ದರಿಂ ನಾವು ಬ್ರಹ್ಮಭಾವನೆಯಿಂದ ತಪವಂ ಮಾಡುವದು ಉಚಿತವಾಗಿ ಕಾಣುತಲಿಥೆ ಎಂದು ಹೇಳಲು ಅದೇ ಅರ್ಥವಂ ನಿಶ್ಚಯಿಸಿದ ಆ ಹತ್ತುಮಂದಿ ಐಂದವರು ಬೇರೆಬೇರೆ ಸ್ಥಳಗಳಲ್ಲಿ ಕುಳಿತು ಇದೆ ನನಿಗೆ ಆಸನವಾಗಿರುವ ಕಮಲವು ಗಾಯತ್ರೀ ಸರಸ್ವತಿಗಳಿಂ ಕೂಡಿರುವ ವೇದಗಳೂ ನನ್ನ ಮುಖಗಳಲ್ಲಿರುವವು. ಸುತ್ತಮುತ್ತಲೂ ಋಷಿಗಳು ನನ್ನನ್ನಾಶ್ರಯಿಸಿಕೊಂಡಿ

ರುವವು. ಇವೇ ತನಗೆ ವಾಹನವಾದ ಹಂಸಗಳು ಶಚೀ ಸಹಾಯನಾದ ಪುರಂದ ರನಿಂ ರಕ್ಷಿತವಾಗಿರುವ ಸ್ವರ್ಗಲೋಕವಿದು? ಅನೇಕ ರಾಜರಿಂ ರಕ್ಷಿಸಲ್ಪ ಡುವ ಭೂಮಂಡಲವಿದು, ದೈತ್ಯದಾನವರಿಗೆ ಆಸ್ಪದವಾದ ಪಾತಾಳಲೋಕ ವಿದು. ಇವೇ ಜ್ಯೋತಿರ್ಮಯವಾದ ಸೂರ್ಯಾದಿಗ್ರಹಗಳು ಇವೆಲ್ಲವನ್ನು ಮನ ದಲ್ಲಿ ಧರಿಸಿ ಕರ್ತೃತ್ವ ಭೋಕ್ತೃತ್ವಗಳಂ ವಹಿಸಿರುವ ಸರ್ವಲೋಕೇಶ್ವರ ನಾದ ಪರಮೇಷ್ಠಿಯೇ ನಾನು, ಈ ಸಂವತ್ಸರವಾದುದು, ಈ ಯುಗವು ಕಳ ದು ಹೋಗುವದು. ಇದೇ ಸೃಷ್ಟಿಕಾಲವು ಈಗ ಸಂರಕ್ಷಣೆಯಂ ಮಾಡತ ಕ್ಕದ್ದು. ಈಗ ಸಂಹಾರಕಾಲ ವದಗಿರುವದು, ಇದುಗೋ ಪುಷ್ಕರಾವರ್ತ ಮೊದಲಾದ ಮೇಘಗಳ ವೃಷ್ಟಿಯಿಂ ಜಲಪ್ರಳಯವಾಗುತ್ತಿರುವದು, ಈಗ ಕಲ್ಪಕ್ಕೆ ಅವಸಾನವಾದುದು, ಈಗ ನನಿಗೆ ಸಾಯಂಕಾಲವಾದುದು, ಈಗ ನಾನು ನಿರ್ವಿಕಲ್ಪಸಮಾಧಿರೂಪವಾದ ನಿದ್ರೆಯಿಂದ ರಾತ್ರಿಯಂ ಕಳೆಯುವೆನು ಈಗ ಪುನಃ ಪ್ರಾತಃಕಾಲವಾದ್ದರಿಂದ ಪೂರ್ವದಂತೆ ಪ್ರಜೆಗಳಂ ಸೃಜಿಸುವೆ ನೆಂದು ಪರಿಪರಿಯಿಂಭಾವಿಸುತ್ತಾ ತಪವಂ ಮಾಡುತ್ತಿರಲು ಅವರಿಂ ಮರೆಯ ಲ್ಪಟ್ಟ ದೇಹಗಳು ಕಾಲಕ್ರಮದಿಂಗಳಿತವಾಗಿ ವನವಾಸಿಗಳಾದ ಮೃಗಪಕ್ಷಿಗಳ ಪಾಲಾದುವು ಭಾವನಾ ಬಲದಿಂದ ನಿನ್ನ ಸಾರೂಪ್ಯವಂ ಪಡದಿರುವ ಆ ಐಂದ ವರು ಈ ಕಲ್ಪಾಂತದಲ್ಲಿ ನಿನ್ನಂತೆಯೇ ಸಮಾಧಿಯುಳ್ಳಿದ್ದು ಈಗ ಬಹಿರ್ಮುಖ ಚಿತ್ತರಾಗುತ್ತಲೇ ಪೂರ್ವಕಲ್ಪಸ್ಮೃತಿಯಿಂದುಂಟಾದ ಕಲ್ಪನೆಯಿಂದ ಹತ್ತು ಪ್ರಪಂಚಗಳಂ ಸೃಜಿಸಿರುವರು. ಅವುಗಳಲ್ಲಿ ಒಬ್ಬನ ಸೃಷ್ಟಿಯೊಳ್ ಕಾಲ ವಿಭಾಗಜ್ಞಾನಾರ್ಥವಾಗಿ ನಾನು ಕ್ಲಿಪ್ತವಾಗಿರುವೆನು. ಎಂದು ಸೂರ್ಯನು ಪೇಳ ಲಾಗ ಬ್ರಹ್ಮನು ಆಲೋಚಿಸಿ ಎಲೈ ಭಾನುವೆ? ಹೀಗೆ ಪ್ರಪಂಚಗಳುಂಟಾಗಿ ರುವಲ್ಲಿ ನನ್ನ ಸೃಷ್ಟಿಯಿಂ ಪ್ರಯೋಜನವೇನೆಂದು ಕೇಳಲು, ಪುನಃ ಸೂರ್ಯ ನಿಂತೆಂದನು.

ಎಲೈ ಮಹೇಶ್ವರನೇ ಈ ಶರೀರವಂ ನಾನೆಂದು ಪರಿಗ್ರಹಿಸುವಲ್ಲೂ, ಬಿಡು ವದರಲ್ಲೂ ಕೂಡ ನಿಷ್ಕಾಮನಾಗಿರುವ ನಿನಗೆ ಈ ಪ್ರಪಂಚಸೃಷ್ಟಿಯಂಬು ವದು ವಿನೋದಮಾತ್ರವಲ್ಲದೆ ಇದರಿಂ ನಿನಗೆ ಪ್ರಯೋಜನವೇನಿರುವದು? *ಅನುಶಯಿಗಳಾದ ಜೀವಗಳಿಗೆ ಭೋಗಮೋಕ್ಷಸಾಧಕವಾದ ಶರೀರ ಉಂ ಟಾಗತಕ್ಕದಾದ್ದರಿಂದ ಜೀವನ್ಮುಕ್ತನ ನಿತ್ಯಕರ್ಮಾನುಷ್ಠಾನದಂತೆ ನೀನು ಮಾ ಡುವ ಸೃಷ್ಟಿಯು ಲೋಕೋಪಕಾರಕವಾಗಿರುವದು. ಸ್ವಪ್ರಯೋಜನವಿಲ್ಲ

*ಧರ್ಮಾಧರ್ಮ ಸಂಸ್ಕಾರಗಳುಳ್ಳ,

ದಿದ್ದಾಗ್ಯೂ *ಮುಕುರವು ಪ್ರತಿಬಿಂಬವಂ ಪಿಡಿಯುವಂತೆ ನಿಷ್ಕಾಮರಾದ ಮಹಾತ್ಮರು ಸ್ವಕರ್ಮವಂ ಬಿಡದೆ ನೆರವೇರಿಸುತ್ತಿರುವರು. ಆದ್ದರಿಂದ ಲೋಕೋಪಕಾರನಿಮಿತ್ತವಾಗಿ ಶರೀರವಂ ಧರಿಸಿರುವ ನೀನು ಶರೀರಧಾರಣೆಗೆ ಉಚಿತವಾದ ನಿತ್ಯಕರ್ಮದಂತೆ ಕ್ಲಿಪ್ತವಾದ ಸೃಷ್ಟಿಕರ್ಮವಂ ಮಾಡಬಹುದು. ಪರಿಜನರಕಾರ್ಯದಿಂ ಸಂತೋಷಪಡುವ ರಾಜನಂತೆ ಐಂದವರಸೃಷ್ಟಿಯಿಂದಲೇ ನೀನು ಸಂತುಷ್ಟನಾಗಿದ್ದೀಯೆ? ಆದರೆ ಅವರ ಚಿತ್ತದಿಂದುಂಟಾದ ಈ ಸೃಷ್ಟಿಯು ಅಲ್ಲಿ ಉಂಟಾದ ಪ್ರಾಣಿಗಳಿಗೂ, ಅವರಿಗೂ ಸಹ ನೇತ್ರಕ್ಕೆ ಗೋಚರವಾಗುವದಲ್ಲದೆ ಇತರರ ನೇತ್ರಕ್ಕೆ ಗೋಚರವಾಗಲಾರದು. ನೀನು ಸರ್ವಜಗತ್ಕಾರಣನಾದ ಪರಮಾತ್ಮನ ಸಂಕಲ್ಪರೂಪನಾದ್ದರಿಂದ ನಿನ್ನ ಸೃಷ್ಟಿಯು ಸರ್ವರಿಗೂ ಗೋಚರವಾಗುವದು. ಯಾರು ಸೃಷ್ಟಿಯಂ ಮಾಡಿದಾಗ್ಯೂ ಸೃಷ್ಟಿಯು ಮನಸ್ಸಿನದಾದ್ದರಿಂದಲೂ ಮನಸ್ಸಮಷ್ಟಿರೂಪನಾದ ನಿನ್ನ ಅಂಶಗಳೇ ಸೂರ್ಯಕಿರಣಗಳಂತೆ ಸರ್ವವ್ಯಾಪಕವಾದ್ದರಿಂದಲೂ, ಸರ್ವವು ನಿನ್ನ ಸೃಷ್ಟಿಯೆಂತಲೇ ತಿಳಿಯತಕ್ಕದ್ದು. ಇತರ ನೇತ್ರಾಗೋಚರವಾದ ಐಂದವಸೃಷ್ಟಿಯಿಂದೇನೆಂದು ನೀನು ಆಲೋಚಿಸಿದಾಗ್ಯೂ ನಿನ್ನಿಂದದು ಪರಿಹರಿಸಲು ಶಕ್ಯವಾಗುವದಿಲ್ಲ. ಮನಸ್ಸೇ ಸರ್ವಕ್ಕು ಕರ್ತೃವಾದ್ದರಿಂದ ಮನಸ್ಸಿನಿಂದುಂಟಾದ ಪ್ರಪಂಚವು ಮನೋಭಾವನೆ ಇದ್ದಂತೆಯೇ ಅನುಭವಿಸಲ್ಪಡುವದು. ಸಾಧಾರಣ ಬ್ರಾಹ್ಮಣರಾದ ಐಂದವರು ಮನೋದಾರಢ್ಯದಿಂ ಬ್ರಹ್ಮಪದವಿಯಂ ಪಡೆಯುವಲ್ಲಿ ಮನಸ್ಸಿನ ಮಹಿಮೆ ಎಂತೆಂದು ಪೇಳತಕ್ಕದ್ದು. ಬಾಹ್ಯವಾದ ಕರ್ಮೇಂದ್ರಿಯಗಳಿಂದ ಯಾವದು ಮಾಡಲ್ಪಡುವದೋ ಅದು ಶಾಪಾದಿಗಳಿಂ ತಡೆಯಲ್ಪಡುವದಲ್ಲದೆ ಮನಸ್ಸಿನಿಂ ನಿಶ್ಚಿತವಾದದ್ದು ತಡೆಯಲ್ಪಡುವದಿಲ್ಲ. ಯಾವನ ನಿಶ್ಚಯದಿಂ ಯಾವದು ಉಂಟಾಗಿರುವದೋ ಅದು ಅವನ ಜ್ಞಾನದಿಂದಲೇ ಹೋಗತಕ್ಕದ್ದಾಗಿರುವದ್ದರಿಂದ, ಸರ್ವಕಾರಣನಾದ ಪರಮೇಶ್ವರನೂ ಕೂಡ ಮನಸ್ಸಿನ ಭ್ರಮೆಯಿಂ ಬಂದ ಬಂಧವು ಪೋಗಲೋಸುಗ ಮನಸ್ಸಿಗೆ ನಿಶ್ಚಯಜ್ಞಾನ ಉಂಟಾಗುವಂತೆ ಜ್ಞಾನಶಾಸ್ತ್ರಗಳಂ ಪೇಳಿದನಲ್ಲದೆ ಇಚ್ಛಾಮಾತ್ರದಿಂ ಜನಗಳ ಬಂಧವಂ ಪೋಗಲಾಡಿಸಲು ಸಮರ್ಥನಾಗಲಿಲ್ಲ. ಬಾಲಕರಿಗೆ ‡ತಮಃ ಪಿಶಾಚಪಭೀತಿಯಿಂದುಪದ್ರವವುಂಟಾಗುವಲ್ಲಿ ಮಹಾತ್ಮರಾದ ಮಾಂತ್ರಿಕರೂ

---

*ಕನ್ನಡಿಯು.

‡ಕತ್ತಲೆಯಲ್ಲಿ ಏನನ್ನೂ ನೋಡದೆ ಇದ್ದಾಗ್ಯೂ ಮನೋವಿಕಾರದಿಂದ ಪಿಶಾಚವನ್ನು ಗ್ರಹಿಸುವದು ಸ್ವಾಭಾವಿಕವಾಗಿದೆ.

ಕೂಡ ನಾನಾಪ್ರಕಾರವಾದ ಉಪಾಯಗಳಿಂ ಭೀತಿಯಂ ತಪ್ಪಿಸಿ ಅವರ ಉಪದ್ರವವಂ ಪರಿಹರಿಸುವರಲ್ಲದೆ ಭೀತಿಯಿರುವಲ್ಲಿಯೇ ಮಂತ್ರಸಾಮರ್ಥ್ಯದಿಂದವರ ಉಪದ್ರವವಂ ಪರಿಹರಿಸುವದಕ್ಕೆ ಸಮರ್ಥರಾಗುವದಿಲ್ಲ. ಮಹಾಯೋಗಿಗಳೂ ಕೂಡ ಮನಸ್ಸು ದೇಹಭಾವನೆಯಿಂ ಬಹಿರ್ಮುಖವಾಗಿರುವಲ್ಲಿಯೇ ಸುಖದುಃಖಗಳಂ ತಿಳಿಯುವರಲ್ಲದೆ ಮನಸಂತರ್ಮುಖವಾಗಿರುವಲ್ಲಿ ಯಾವದನ್ನೂ ತಿಳಿಯಲಾರರು. ಮನವು ಜಗನೆಲ್ಲವಂ ಬ್ರಹ್ಮವೆಂದು ಭಾವಿಸುವಲ್ಲಿ ಆ ಮನವುಳ್ಳ ಜನರು ಬ್ರಹ್ಮಸಾಯುಜ್ಯವಂ ಹೊಂದುವರು. ಇಂಥಾ ಮನಸ್ಸಿಗೆ ಯಾರವರ ಶಾಪಗಳಿಂದೇನು ತಾನೇ ಆದೀತು.

(ಕೃತ್ರಿಮಾಹಲ್ಯೇಂದ್ರೋಪಾಖ್ಯಾನ.)

ಪೂರ್ವದಲ್ಲಿ ಮಗಧದೇಶಾಧಿಪತಿಯಾದ ಇಂದ್ರದ್ಯುಮ್ನನಿಗೆ ಅಹಲ್ಯೆ ಎಂಬ ಪತ್ನಿಯಾದಳು. ಅವನ ನಗರದೊಳ್ವಿಟಾಗ್ರಗಣ್ಯನಾದ ಇಂದ್ರನೆಂಬ ಬ್ರಾಹ್ಮಣನು ಸಕಲ ಕಲಾಪಾಂಡಿತ್ಯದಿಂ ಪ್ರಸಿದ್ಧನಾದನು. ಅಹನರೀತಿಯಂ ಕೇಳಿದ ಅಹಲ್ಯೆಯು ಇಂದ್ರನು ಅಹಲ್ಯೆಗೆ ಜಾರನೆಂದು ಪ್ರಸಿದ್ಧಿಯಿರುವದಷ್ಟೆ? ಇವನು ನನ್ನ ಬಳಿಗೆ ಬರದೆ ಈ ಮಾತು ಉಂಟಾಗುವವಕ್ಕೆ ನಿಮಿತ್ತವೇನು? ಅಥವಾ ಆ ಅಹಲ್ಯೇಂದ್ರರು ಬೇರೆ ಆದಾಗ್ಯೂ ಇವನು ಇಂದ್ರನಾದ ಬಳಿಕ ನನ್ನಬಳಿಗೆ ಬರದ ಇರುವದಕ್ಕೆ ಕಾರಣವೇನೆಂದು ಆಲೋಚಿಸುತ್ತಾ ಕಾಮಾರ್ತಳಾಗಿ ಅವನನ್ನೇ ಸರ್ವದಾ ಚಿಂತಿಸುತ್ತಿದ್ದಳು. ಅವಳ ವ್ಯಥೆಯಂ ನೋಡಲಾರದ ಓರ್ವಸಖಿಯು ಚಾತುರ್ಯದಿಂದಾ ಇಂದ್ರನಂ ಕರತಂದು ಬಿಡಲು, ಈ ಅಹಲ್ಯೇಂದ್ರರಿಗೆ ಪರಸ್ಪರಾನುಷಂಗದಿಂ ಮನಸ್ಸಾಮರಸ್ಯ ಉಂಟಾಗಿ ಅದು ದೃಢವಾಗುತ್ತಿರಲು ಭೋಜನಾದಿ ಕಾಲಗಳಲ್ಲಿ ಬಂದುಕ್ಷಣ ವಿಯೋಗವಾದಾಗ್ಯೂ ಪರಸ್ಪರ ಧ್ಯಾನದಿಂ ತನ್ಮಯವಾಗಿಯೇ ಜಗನೆಲ್ಲವನ್ನೂ ನೋಡುತ್ತಿದ್ದರು. ಅವರ ದುರ್ವ್ಯಾಪಾರವಂ ತಿಳಿದ ರಾಜನು ಹಿಮಗಾಲದಲ್ಲವರನ್ನು ಜಲಾಶಯದಲ್ಲಿ ನಿಲ್ಲಿಸಿದನು. ಬಿಸಲುಗಾಲದಲ್ಲಿ ಹುರಿಯು ಓಡಿನಲ್ಲಿ ಹಾಕಿಸಿದನು. ಕಶೆಗಳಿಂದ ಅವರಂ ಹೊಡೆಸಿದನು. ಆನೇಕಾಲುಗಳಿಗೆ ಕಟ್ಟಿಸಿ ಶೆಳಸಿದನು. ಇನ್ನು ಅನೇಕ ಪ್ರಕಾರವಾಗಿ ಶೀಕ್ಷೆಗಳಂ ಮಾಡಿಸಿದನು. ಆದಾಗ್ಯೂ ಅವರು ದುಃಖಿತರಾಗದಿರುವದಂ ನೋಡಿ ಆಶ್ಚರ್ಯಪಟ್ಟು ಅವರನ್ನೇ ಕರಸಿ ಇಷ್ಟು ಪ್ರಕಾರವಾಗಿ ನಾನು ಶೀಕ್ಷೆಯಂ ಮಾಡಿಸಿದರೂ ನೀವು ಖಿನ್ನರಾಗದಿರುವದಕ್ಕೆ ಕಾರಣವೇನೆಂದು ಕೇಳಲು, ಇಂದ್ರನಿಂತೆಂದನು.

ಎಲೈ ಮಹಾರಾಜನೆ ನಾವೀರ್ವರೂ ಹೃದಯವೆಂಬ ದೇವಾಲಯದಲ್ಲಿ ಪ್ರತಿ

ಷ್ಠಿತರಾದ ದೇವತೆಗಳಂತಿರುವ ನಮ್ಮಗಳ ಧ್ಯಾನದಾರ್ಢ್ಯದಿಂ ಪರಸ್ಪರತಾ
ದಾತ್ಮ್ಯವಂ ಹೊಂದಿ ಆ ಆನಂದದಲ್ಲಿ ಮಗ್ನರಾಗಿರುವೆವಾದ್ದರಿಂದ ನೀನು ಏನು
ಶಿಕ್ಷೆಯಂ ಮಾಡಿಸಿದೆಯೋ ಅದನ್ನಾವು ತಿಳಿದವರಲ್ಲ. ಇವಳು ಜಗವೆಲ್ಲವನ್ನು
ನನ್ನ ಸ್ವರೂಪವಾಗಿ ತಿಳಿದಿರುವಳು. ಇವಳ ಸ್ವರೂಪವಾಗಿಯೇ ನಾನು ತಿಳ
ದಿರುವೆನು. ಸಮಸ್ತ ಪ್ರಪಂಚಗಳಿಗೂ ಕಾರಣವಾದದ್ದು ಮನವಲ್ಲದೆ ಮನಕ್ಕೆ
ಕಾರಣವಾದದ್ದು ಪ್ರಪಂಚವಲ್ಲ. ಮನೋಮಾತ್ರಸ್ವರೂಪದಿಂ ಸಾಮರಸ್ಯ
ವಾಗಿ ಏಕೀಭಾವವಂ ಹೊಂದಿರುವ ನಮಗೆ ದೇಹಮಾತ್ರದಲ್ಲಿ ಸ್ವಮಹಿಮೆ
ಯಂ ತೋರುವ ಶಿಕ್ಷೆಗಳಿಂದೇನುತಾನೇ ಆದೀತು. ದೃಢವಾದ ಭಾವನೆಯಿಂದ
ಅಚಂಚಲವಾದ ಮನಸ್ಸಿಗೆ ವರಶಾಪಾದಿಗಳೂಕೂಡ ಭೇದಕವಾಗಲಾರವು.
ಶರೀರದಮೇಲೆ ಹುತ್ತಬೆಳದಾಗ್ಯೂ ಅದರಮೇಲೆ ಜ್ಞಾನವಿಲ್ಲದೆ ಧ್ಯಾನನಿಷ್ಠರಾದ
ಅನೇಕ ತಪಸ್ವಿಗಳಂ ನೋಡಿದಾಗ್ಯೂ ನೀನು ನಮ್ಮ ಸ್ವರೂಪವಂ ತಿಳಿಯದೆ
ಶಿಕ್ಷೆಯಂ ಮಾಡಿಸಿದೆನೆಂಬುವದೇ ಆಶ್ಚರ್ಯವಾಗಿಧೆ. ನಮ್ಮ ಮನವಿದ್ದಂತೆ
ನಾವು ಅನುಭವಿಸುವೆವಲ್ಲದೆ ನಿನ್ನ ಮನವಿದ್ದಂತೆ ನಾವು ಯಾವದನ್ನೂ ಅನುಭ
ವಿಸಲಾರೆವು. ಶರೀರಭಾವನೆ ಇದ್ದವರಿಗೆ ಆ ಸುಖದುಃಖಗಳು ಸಂಭವಿಸುವವ
ಲ್ಲದೆ ಇತರರಿಗೆ ಸಂಭವಿಸುವಲಾರದಾದ್ದರಿಂದ ನಮ್ಮ ಶಿಕ್ಷಾಭ್ರಾಂತಿಯಂ
ನೀನು ಬಿಡುವನಾಗು ಎಂದು ಇಂದ್ರನ ನುಡಿಯಂ ಕೇಳಿದ ಇಂದ್ರದ್ಯುಮ್ನನು
ಕೋಪದುಃಖಗಳಿಂ ಕೂಡಿ ಇವರು ಹಾಳಾಗುವಂತೆ ಶಾಪವನ್ನಾದರೂ ಕೊ
ಡೆಂದು ಸಮೀಪದಲ್ಲಿದ್ದ ಭರತಮುನಿಗೆ ಪೇಳಲು ಇಂದ್ರನ ವಾಕ್ಯಧಾರ್ಷ್ಟ್ಯದಿಂ
ಕುಪಿತನಾಗಿದ್ದ ಆ ತಪೋಧನನು ನೀವು ವಿನಾಶವಂ ಹೊಂದುವರಾಗಿ ಎಂದು
ಅಹಲ್ಯೇಂದ್ರರಂ ಶಪಿಸಲು, ಎಲೈ ಮುನಿಯೇ ನಿನ್ನ ಶಾಪದಿಂ ನಮಗೆ ಆಗುವ
ದೇನು? ಎಲೆಗಳು ಶೀಳಿಹೋದರೂ ಪುನಃ ಅಂಕುರದಿಂ ಪುಟ್ಟುವಂತೆ ದೇ
ಹವು ಬಿದ್ದುಹೋದಾಗ್ಯೂ ಮನಸ್ಸಿನಿಂದ ಪುನಃ ಪುಟ್ಟುವದೆಂದು ಇಂದ್ರನು
ಪೇಳುತ್ತಿರುವಲ್ಲಿಯೇ ಅಹಲ್ಯೇಂದ್ರರ ಶರೀರಗಳು ವೃಕ್ಷದಿಂ ಬಿದ್ದ ಎಲೆಗಳಂತೆ
ನೆಲದಮೇಲೆ ಬೀಳಲು, ಅನ್ಯೋನ್ಯಬದ್ಧಾನುರಾಗರಾದ ಅವರಿಗೆ ದೇಹಪಾತ
ವಾಗುವಲ್ಲಿ ಇಂದ್ರನು ಮೃಗಾಕ್ಷಿ ಎಂದು ಅಹಲ್ಯೆಯಂ ಧ್ಯಾನಿಸುತ್ತಿದ್ದದ್ದರಿಂದ
ಅವನಿಗೆ ಮೃಗಯೋನಿಯು ಪ್ರಾಪ್ತವಾದುದು. *ಭಾವಾನುಬಂಧದಿಂದವಂ
ತಿಳಿದ ಅಹಲ್ಯೆಯು ಮೃಗಯೋನಿಯಲ್ಲಿ ಪುಟ್ಟಿ ಮೃಗರೂಪನಾದ ಇಂದ್ರನಂ
ಹೊಂದಿದಳು. ಆ ಜನ್ಮಾಂತರದಲ್ಲಿ ಅವರಿಗೆ ಪಕ್ಷಿಜನ್ಮ ಬಂದುದು ಬಳಿಕ ಲತಾ

---

*ಮನೋಭಾವನೆಯ ಸಂಬಂಧವಿರುವದರಿಂದ.

ವೃಕ್ಷಗಳಾದರು. ಅವರು ಭಾವಾನುಬಂಧದಿಂದೆಲ್ಲೆಲ್ಲಿ ಪುಟ್ಟಿದರೂ ದಂಪತಿಭಾವವಂ ಪಡದು ವಿಹರಿಸುತ್ತಿರುವದಂ ಕಂಡ ಲತಾವೃಕ್ಷಗಳಿಗೂಕೂಡ ಶೃಂಗಾರ ಚೇಷ್ಟೆಗಳುಂಟಾದವು. ಈಗ ನಮ್ಮ ಸೃಷ್ಟಿಯಲ್ಲೂ ಅವರು ಬ್ರಾಹ್ಮಣದಂಪತಿಗಳಾಗಿರುವರು. ಮನಕ್ಕೆ ಈಪ್ರಕಾರವಾದ ಮಹಿಮೆಯಿರುವದ್ದರಿಂದ ಅದರಿಂದೈಂದವರು ಮಾಡಿರುವ ಸೃಷ್ಟಿಯ ತಿರಸ್ಕಾರವನ್ನಾಲೋಚಿಸದೆ ಚಿದಾಕಾಶ, ಚಿತ್ತಾಕಾಶ, ಬಾಹ್ಯಾಕಾಶಗಳು ಅತಿವಿಸ್ತಾರವಾಗಿರುವದ್ದರಿಂದ ನಿನ್ನ ಮನಬಂದಂತೆ ನೀನು ಸೃಷ್ಟಿಯಂ ಮಾಡಬಹುದೆಂದು ಪೇಳಲಾ ಬ್ರಹ್ಮನು ಎಲೈ ಭಾಸ್ಕರನೇ ನೀನು ಪೇಳಿದ್ದು ಯುಕ್ತವಾಗಿದೆ. ಯಾರು ಸೃಷ್ಟಿಯಂ ಮಾಡಿದರೂ ಮನದಿಂದಲೇ ಮಾಡಬೇಕಾಗಿರುವದ್ದರಿಂದ ಸೃಷ್ಟಿಯೆಲ್ಲವು ಮಾನಸಿಕವೇ ಆಗಿರುವದು. ಆದರಿಂ ಸೃಷ್ಟಿಯಲ್ಲಿ ಭೇದವಿಲ್ಲದ್ದರಿಂದ ನೀನೇ ನನ್ನ ಸೃಷ್ಟಿಯೊಳ್ ಪ್ರಾಥಮಿಕನಾಗಿ ,ಮುಂದಿನ ಸೃಷ್ಟಿಯಂ ಮಾಡೆಂದು ಪೇಳಲಾ ಸೂರ್ಯನು ಪೂರ್ವಶರೀರದಿಂದಲೇ ಕಾಲಾಧಿಪತ್ಯವಂ ಮಾಡುತ್ತಾ ಮನುನಾಮಕವಾದ ಎರಡನೇ ಶರೀರವಂ ಧರಿಸಿ ಪ್ರಜೆಗಳಂ ಸೃಜಿಸಿದನು. ಎಂದು ಬ್ರಹ್ಮನು ಪೇಳುತ್ತಿರುವಲ್ಲಿ ಎಲೈ ಪರಮೇಷ್ಠಿಯೇ ಶಾಪಮಂತ್ರಾದಿ ಶಕ್ತಿಗಳು ಅಮೋಘವೆಂದು ನಿನ್ನಿಂದಲೇ ಪೂರ್ವದಲ್ಲಿ ಪೇಳಲ್ಪಟ್ಟಿತು. ಈಗ ಮನಸ್ಸಿನಮೇಲೆ ಒಂದೂ ನಡೆಯುವದಿಲ್ಲವೆಂದು ಪೇಳುವದು ಅತ್ಯಾಶ್ಚರ್ಯವಾಗಿಥೆ ಎಂದು ನಾನು ಕೇಳಲು ಮರಳಿ ಬ್ರಹ್ಮನಿಂತೆಂದನು.

ಎಲೈ ಬಾಲಕನೇ ಶುಭವಾದ ಪೌರುಷದಿಂ ಸಾಧಿಸಲಶಕ್ಯವಾದ್ದು ಯಾವದೂ ಇಲ್ಲ. ಲೋಕದಲ್ಲಿ ಸಮಸ್ತ ಪ್ರಾಣಿಗಳಿಗೂ ಸೂಕ್ಷ್ಮಸ್ಥೂಲಗಳಾದ ಎರಡು ಶರೀರಗಳಿರುವವು. ಅವುಗಳಲ್ಲಿ ಮನಃಪ್ರಧಾನವಾದ ಸೂಕ್ಷ್ಮಶರೀರವು ಚಪಲವಾಗಿಯೂ, ಶೀಘ್ರಕಾರಿಯಾಗಿಯೂ ಇರುವದು. ಮಾಂಸಮಯವಾದ ಸ್ಥೂಲಶರೀರವು ಹಕ್ಕಿಗೆ ಗೂಡಿನಂತೆ ಅದಕ್ಕೆ ಆಶ್ರಯವಾಗಿರುವದ್ದರಿಂದ ಧೊರೆಯ ಸಮೀಪದಲ್ಲಿರುವನು. ಧೊರೆಯೆನಿಸುವಂತೆ ಶರೀರವೆನಿಸುವದು. ವರಶಾಪಮಂತ್ರಾದಿಗಳಿಗೆ ಜಡವಾಗಿಯೂ, ಭೋಗರೋಗಾಯತನವಾಗಿಯೂ, ಕ್ಷಣಿಕವಾಗಿಯೂ, ಕರ್ಮಾಧೀನವಾಗಿಯೂ, ಸ್ವತಂತ್ರವಾಗಿ ಕಾರ್ಯಗಳಂ ಮಾಡಲ ಸಮರ್ಥವಾದ ಈ ಶರೀರದಲ್ಲಿ ಸ್ವಸಾಮರ್ಥ್ಯ ನಡೆಯುವದ್ದರಿಂದ ವರಾದಿಗಳು ಅಮೋಘವೆನಿಸುವವು. ಮನೋಮಯವಾದ ಸೂಕ್ಷ್ಮಶರೀರವು ವಿಚಾರಪರರಾದ ಸಾಧಕರಿಗೆ ಅಧೀನವಾಗುವದಲ್ಲದೆ ಇನ್ನಾರಿಗೂ ಅಧೀನವಾಗಲಾ

ರದು. ಇದು ಭಾವಿಸಿದಂತೆ ಸಕಲ ಸೌಖ್ಯವನ್ನೂ ಅನುಭವಿಸುವದಾದ್ದರಿಂದ ವಿಚಾರಿದಿಂದ ಇದಂ ಪಿಡದಿದ್ದ ಅಹಲ್ಯೇಂದ್ರರು ಯಾವ ದುಃಖವನ್ನೂ ಅನುಭವಿಸಲಿಲ್ಲ. ದೀರ್ಘತಪಸ್ಸೆಂಬ ಋಷಿಯು *ಅಂಧಕೂಪದಲ್ಲಿದ್ದಾಗ್ಯೂ ಮನವಂ ಪಿಡಿದು ಭಾವನಾಮಯವಾದ ಯಜ್ಞಗಳಿಂದ ದೇವಭಾವವಂ ಹೊಂದಿದನು. ಆಣಿಮಾಂಡವ್ಯಮುನಿಯು ಈ ಮನದ ಧೈರ್ಯದಿಂದ ಶೂಲದ ವ್ಯಥೆಯನ್ನನುಭವಿಸಲಿಲ್ಲ. ಇದಂ ಪಿಡಿದ ಐಂದವರಿಂದ ಬ್ರಹ್ಮಾಧಿಪತ್ಯವೇ ಮಾಡಲ್ಪಟ್ಟಿತು. ಈ ಮನಸ್ಸಿಗೆ ಅನೇಕ ರೂಪವಾಗುವ ಯೋಗ್ಯತೆ ಇರುವದ್ದರಿಂದ ದುರ್ವಿಚಾರರೂಪವಾದ ತನ್ನಿಂದತಾನೇ ಹಳ್ಳಕ್ಕೆ ಬೀಳುವದು. ಸದ್ವಿಚಾರರೂಪವಾದ ತನ್ನ ಪೌರುಷದಿಂದಲೇ ತಾನು ಜಿತವಾಗಿ ಸದ್ಗತಿಯಂ ಪಡೆಯುವದು. ಈ ಮನವು ಚಂದ್ರನಲ್ಲಿ ಜ್ವಾಲೆಯನ್ನು ಸೂರ್ಯನಲ್ಲಿ ಕತ್ತಲೆಯನ್ನು ಅಗ್ನಿಯಲ್ಲಿ ಶೈತ್ಯವನ್ನು ವಾಯುವಿನಲ್ಲಿ ಸ್ಥೈರ್ಯವನ್ನು ಶೂನ್ಯದಲ್ಲಿ ಉದ್ಯಾನಪುರಗಳನ್ನು ಸಹ ಭಾವಿಸಿದಾಗ್ಯೂ ಅದು ಅಲ್ಲಿ ಉಂಟಾಗಿ ಸ್ವಸ್ವಕಾರ್ಯವಂ ತೋರುವದು. ಮಣ್ಣು ಮಡಿಕೆಯಾಗುವಂತೆಯೂ, ಜಲವು ತರಂಗವಾಗುವಂತೆಯೂ, ಭಾವನಾಬಲದಿಂ ತಾನೇ ಆಯಾಯ ಪದಾರ್ಥವಾಗಿ ಅದಂ ತಾನೇ ಅನುಭವಿಸುವದು. ಸುಖದುಃಖಗಳು ಜ್ಞಾನಾಜ್ಞಾನಗಳು, ಬಂಧಮೋಕ್ಷಗಳೂ ಸಹ ಇದಕ್ಕಲ್ಲದೆ ಮತ್ತೊಂದಕ್ಕೆ ಅಲ್ಲ; ಸೂತ್ರಚಲನಾನುಸಾರವಾಗಿ ಬೊಂಬೆಯಳ್ಳಾಡುವಂತೆ ಸೂಕ್ಷ್ಮಶರೀರವನ್ನನುಸರಿಸಿ ಸ್ಥೂಲಶರೀರವು ಚಲಿಸುವದು. ಸಂಕಲ್ಪ ಮನೋರಥಕಲ್ಪನೆಗಳಿಂ ಸೂಕ್ಷ್ಮಶರೀರವು ವೃದ್ಧಿಯಾಗಿ ಕ್ಷಯಿಸುವಂತೆ ಕಾಲಾಹಾರಕ್ರೀಡಾದಿಗಳಿಂ ಸ್ಥೂಲವು ವೃದ್ಧಿಯಂ ಹೊಂದಿ ನಷ್ಟವಾಗುವದು. ವಿಚಾರರೂಪವಾದ ಪೌರುಷದಿಂ ಸದ್ರೂಪವಾದ ಮನದಿಂದ ಸದ್ರೂಪವಾದ ಮನವಂ ಯಾವನು ಜಯಿಸುವನೋ ಅವನೇ ಪರಮಾನಂದ ಸಾಮ್ರಾಜ್ಯವನ್ನನುಭವಿಸುವನೆಂದು ಬ್ರಹ್ಮನು ಪೇಳಿದ್ದನ್ನು ವಸಿಷ್ಠನು ಶ್ರೀರಾಮನಿಗೆ ನಿರೂಪಿಸಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿಪ್ರಕರಣದೋಳ್ ಅಹಲ್ಯೇಂದ್ರೋಪಾಖ್ಯಾನ ಸಹಿತ ಐಂದವೋಪಾಖ್ಯಾನ ನಿರೂಪಣವೆಂಬ ೮ನೇ ತರಂಗಕ್ಕೆ ಮಂಗಳಮಹಾ.



*ಕತ್ತಲೆಯ ಭಾವಿಯಲ್ಲಿ ಅಂದರೆ.

## ೯ನೇ ತರಂಗ ಪ್ರಾರಂಭ.

### ಚಿತ್ತೋಪಾಖ್ಯಾನ.

ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನಿಂತೆಂದನು. ಎಲೈ ರಘುಕುಲಾವತಂಸನೇ ಮಹಾಪ್ರಳಯದೋಳ್ *ಅನಾಮರೂಪವಾಗಿ ನಿಂತಿದ್ದ ಪರಬ್ರಹ್ಮದಿಂದದರ ಸಂಕಲ್ಪವೇ ಮನವೆಂಬ ನಾಮದಿಂ ಪ್ರಕಾಶಿಸಿತು. †ಕಲ್ಪಿತತನ್ಮಾತ್ರೆಗಳುಳ್ಳ ಆ ಮನವನ್ನನುಸರಿಸಿದ ಜ್ಞಾನರೂಪವಾದ ಬ್ರಹ್ಮವೇ ತೈಜಸರೂಪದಿಂ ಬ್ರಹ್ಮನೆನಿಸಿಕೊಂಡಿತು. ಅವನ ಸಂಕಲ್ಪಮಾತ್ರದಿಂದೀ ಪ್ರಪಂಚವೆಲ್ಲವು ಉಂಟಾಯಿತು. ದ್ವಿತೀಯಪದಾರ್ಥವೆಂದು ಕಲ್ಪಿತನಾದ ಆತ್ಮನು ಅನಾತ್ಮಭಾವದಿಂದಿರುವಲ್ಲಿ ಕ್ರೀಡೋಪಯುಕ್ತವಾದ ಪದಾರ್ಥವೆಂಬ ಪ್ರೇಮದಿಂದನ್ನು ಆತ್ಮನೆಂದು ಆ ಪರಮಾತ್ಮನು ಭಾವಿಸಿದ್ದರಿಂದ ಆ ಸಂಪ್ರದಾಯದಿಂದಲೇ ಪ್ರಾಣಿಗಳು ಅನಾತ್ಮವಾದ ದೇಹದಲ್ಲಿ ತಾನೆಂದು ಅಭಿಮಾನಪಡುವರು. ಜಲದಲ್ಲಿ ತರಂಗದಂತೆ ಬ್ರಹ್ಮನಿಂದುಂಟಾಗಿರುವ ಈ ಜಗವು ಕಲ್ಪನಾಮಾತ್ರದಿಂ ಭಿನ್ನವಾಗಿರುವದಲ್ಲದೆ ಪರಮಾರ್ಥವಾಗಿ ಭಿನ್ನವಲ್ಲವಾದ್ದರಿಂದ ವಿಚಾರಪರರಾದವರು ಸರ್ವವನ್ನು ಬ್ರಹ್ಮವೆಂತಲೇ ಭಾವಿಸುವರು. ಪಿತಾಮಹರೂಪವಾದ ಮನದಿಂದಗ್ನಿಯಿಂದ ಕಿಡಿಗಳಂತೆ ಪ್ರಕಾಶಿಸಿದ ಚಿಚ್ಛಕ್ತಿಗಳೇ ಜೀವನಾಮದಿಂ ಪ್ರಸಿದ್ಧವಾಗಿ ಚತುರ್ದಶಲೋಕಗಳಲ್ಲಿ ಪ್ರಕಾಶಿಸುತ್ತಿರುವವು. ಈ ಜೀವರು ಸತ್ವರಜಸ್ತಮೋಗುಣ ಭೇದದಿಂ§ವಾಸನಾನುಸಾರವಾಗಿ ಊರ್ಧ್ವಾಧೋಲೋಕಗಳಂ ಹೊಂದುವರು. ‡ಸೂಕ್ಷ್ಮಭೂತಾತ್ಮಕವಾದ ಶರೀರವುಳ್ಳವರಾದ್ದರಿಂದ ಧಾನ್ಯಾದಿಗಳಂ ಶೇರಿ ಪ್ರಾಣಮಾರ್ಗದಿಂದಾಹಾರರೂಪವಾಗಿ ಪ್ರಾಣಿಗಳಂ ಶೇರಿ ಶುಕ್ಲ ಶೋಣಿತಾದಿರೂಪದಿಂ ಪರಿಣಮಿಸಿ ಸ್ಥೂಲಶರೀರಕ್ಕೆ ಬೀಜವಾಗಿ ಗರ್ಭದಲ್ಲಿ ನೆಲಸಿ ವೃದ್ಧಿಯಂ ಪಡದು ಗರ್ಭದ್ವಾರದಿಂ ಜನಿಸಿ ಪ್ರಾಣಿಗಳೆನಿಸುವರು. ಇವರು ಕಾಕತಾಳೀಯನ್ಯಾಯದಿಂದುತ್ಪನ್ನವಾದ ವಾಸನಾಪ್ರವಾಹದಲ್ಲಿ ಬಿದ್ದು ಆಯಾಯ ಕರ್ಮಗಳಂ ಮಾಡುತ್ತಾ ಕರ್ಮಬದ್ಧವಾದ ಸೂಕ್ಷ್ಮಶರೀರದಿಂ ಸ್ವರ್ಗನರಕಾದಿಗಳಂ ಹೊಂದುವರು. ಇದೆಲ್ಲಕ್ಕು ಪರಮಾತ್ಮನ ಇಚ್ಛೆಯೇ ಮೂಲವಾದ್ದರಿಂದ ಸಮಸ್ತ ಪ್ರಾಣಿಗಳು ಇಚ್ಛಾರೂಪರೆನಿಸುವರು. ಜಗನ್ನಿ

*ನಾಮರೂಪಗಳಿಲ್ಲದೆ ನಾಮವೆಂದರೆ ಹೆಸರು, ರೂಪವೆಂದರೆ ಆಕಾರ.

†ಪುರವಣಿಯಲ್ಲಿ ವ್ಯಾಖ್ಯಾನವನ್ನು ನೋಡಿರಿ.

§ಪುರವಣಿಯನ್ನು ನೋಡಿರಿ. ‡ಪು. ನೋಡಿರಿ.

ಯಾಮಕವಾದ ಪರಮೇಶ್ವರನ ಇಚ್ಛೆಯಿದ್ದಂತೆ ಪ್ರಾಣಿಗಳಿಗೆ ವಾಸನೆಯುಂಟಾಗುವದು. ಅದಕ್ಕೆ ಸರಿಯಾಗಿ ನಡದ ಕರ್ಮಗಳಿಂದ ಬದ್ಧರಾಗಿ ಸ್ವರ್ಗನರಕಗಳಲ್ಲಿ ತಿರಗಾಡುತ್ತಿರುವರು. ಕೆಲವರು ಸಹಸ್ರಜನ್ಮಪರ್ಯಂತವಾಗಿ ಸಂಸಾರದಲ್ಲೇ ಬದ್ಧರಾಗಿ ಸುಂಟರಗಾಳಿಗೆ ಶಿಕ್ಕಿದ ಜೀರ್ಣಪರ್ಣಗಳಂತೆ ಭ್ರಾಂತರಾಗಿರುವರು. ಕೆಲವರು ಅನೇಕ ಕಲ್ಪಶತಗಳಾದರೂ ಸ್ವರೂಪವಿಚಾರವಿಲ್ಲದೆ ಕತ್ತಲೆ ಭಾವಿಯಲ್ಲಿರುವ ಗುಂಗುರುಗಳಂತೆ ಭ್ರಮಿಸುತ್ತಿರುವರು. ಕೆಲವರು ಕೆಲವು ಜನ್ಮವಾದ ಬಳಿಕ ಸತ್ಕರ್ಮಪರಾಯಣರಾಗಿ ದಾತೃವಿನಂತೆ ಸಕಲ ಶ್ಲಾಘ್ಯರಾಗುವರು. ವಿಚಾರದಿಂ ಸ್ವರೂಪ ಸಾಕ್ಷಾತ್ಕಾರವಾದ ಜನಗಳು ಗಾಳಿಯಿಂ ಹಾರಿದ ತುಂತುರುಗಳು ಮರಳಿ ಸಮುದ್ರವಂ ಹೊಂದುವಂತೆ ಪರಮಾತ್ಮನಲ್ಲಿ ಐಕ್ಯವಾಗುವರು. ಸ್ವರೂಪಜ್ಞಾನವೆಂಬ ವೃಕ್ಷಕ್ಕೆ ಕುಠಾರವಾಗಿ ಜಗವೆಂಬ ವನಕ್ಕೆ ಬೀಜಪರಂಪರೆಯಂತಿರುವ ವಾಸನೆಯೇ ಈ ಸಂಸಾರಕ್ಕೆ ಮೂಲವಾದ್ದರಿಂದ ಅದಂ ಛೇದಿಸಿದವರು ಪುನರ್ಜನ್ಮವಂ ಪಡೆಯುವದಿಲ್ಲ. ಈ ವಾಸನೆಯು ಸತ್ವಾದಿಗುಣಭೇದದಿಂ ಮೊದಲು ಮೂರುಪ್ರಕಾರವಾಗುವದು. ಜ್ಞಾನವೇ ಸತ್ವವು, ಇಚ್ಛೆಯೇ ರಜವು, ಅಜ್ಞಾನವೇ ತಮವು. ಸತ್ಯಜ್ಞಾನಾನಂತಸ್ವರೂಪನಾದ ಪರಮಾತ್ಮನಲ್ಲಿ ಜ್ಞಾನೇಚ್ಛಾ ಕ್ರಿಯಾಶಕ್ತಿರೂಪದಿಂದಭಿನ್ನವಾಗಿರುವ ಈ ಗುಣಗಳು ಅಂತಃಕರಣಗಳಲ್ಲಿ ವೃತ್ತಿಜ್ಞಾನರೂಪದಿಂದಲೂ, ಇಂದ್ರಿಯಗಳಲ್ಲಿ ಪ್ರಕಾಶಪ್ರವೃತ್ತಿ ನಿವೃತ್ತಿಸ್ಥಿತಿರೂಪದಿಂದಲೂ, ಇಂದ್ರಿಯ ಗೋಚರವಾದ ಪದಾರ್ಥಗಳಲ್ಲಿ ಸುಖದುಃಖ ಮೋಹಕರಸ್ವಭಾವವಾದ ಲಾಘವ ಚಾಪಲ ಗೌರವಸ್ವರೂಪದಿಂದಲೂ ಇರುವವು. ಮನೋನುಸಾರಿಯಾದ ಇಂದ್ರಿಯ ಪ್ರವೃತ್ತಿಯಿಂದ ಇವುಗಳೇ ವಿಷಯರೂಪವಾಗಿ ಪರಮಾಣುರೂಪದಿಂದನುಭವ ಗೋಚರವಾಗುವವು. ಇವುಗಳ ಪರಿಣಾಮವೇ ಜಗದ್ರೂಪದಿಂ ಪ್ರಕಾಶಿಸುತ್ತಿರುವದು. ಈ ಗುಣಗಳ ಸಮಷ್ಟಿಯೇ ಮಾಯೆಎಂತಲೂ, ಪ್ರಕೃತಿಎಂತಲೂ ಹೇಳಲ್ಪಡುವದು. ಈ ಗುಣಾತ್ಮಕವಾದ ಮನಸ್ಸಿನ ವೃತ್ತಿವಿಶೇಷವೇ ವಾಸನೆಯೆನಿಸುವದು. ಪರಮಾತ್ಮನ ಇಚ್ಛಾಶಕ್ತಿರೂಪವಾದ ಕಾಲದ ಪ್ರಭಾವದಿಂ ಪರಸ್ಪರ ಸಂಯೋಗವಂ ಪಡದಿರುವ ಈ ಗುಣಗಳಿಗೆ ಸ್ವಮಾತ್ರಾವಸ್ಥಾನವಿಲ್ಲದಿದ್ದಾಗೂ ಸ್ವಪ್ರಾಧಾನ್ಯದಿಂದ ನಿಜನಾಮಗಳಿಂ ಹೇಳಲ್ಪಡುವವು. *ಅಭಿವ್ಯಕ್ತಿ ಮೊದಲು ನಾಶಾಂತವಾಗಿ ಚಲಿಸುತ್ತಿರುವದ್ದರಿಂದ ಅಂತಃಕರಣಾದಿಗಳಿಗೆ ಬಹಿಃಪ್ರಚಾರವೇ ಸ್ವಾಭಾವಿಕವಾಗಿರುವದು. ಅದರಿಂದ ವಾಸನೆಯು

*ಇಂದ್ರಿಯ ಗೋಚರವಾಗುವಂತೆ ಕಾಣಿಸಿಕೊಳ್ಳುವಿಕೆ.

ಸಾತ್ವಿಕೀ, ಸಾತ್ವಿಕಸಾತ್ವಿಕೀ, ಸಾತ್ವಿಕರಾಜಸೀ, ಸಾತ್ವಿಕತಾಮಸೀ, ಸಾತ್ವಿಕಾತ್ಯಂತತಾಮಸೀ, ರಾಜಸೀ, ರಾಜಸಸಾತ್ವಿಕೀ, ರಾಜಸರಾಜಸೀ, ರಾಜಸತಾಮಸೀ, ರಾಜಸಾತ್ಯಂತತಾಮಸೀ, ತಾಮಸೀ, ತಾಮಸಸಾತ್ವಿಕೀ, ತಾಮಸರಾಜಸೀ, ತಾಮಸತಾಮಸೀ, ತಾಮಸಾತ್ಯಂತತಾಮಸೀ, ಎಂದು ಹದಿನೈದು ಪ್ರಕಾರವಾಗುವದು. ಅಭಿವ್ಯಕ್ತಿಪ್ರಚಾರಗಳೆರಡನ್ನು ಪಿಡಿದು ಈ ನಾಮಗಳುಂಟಾಗಿರುವವು. ಈ ವಾಸನೆಯುಳ್ಳ ಪ್ರಾಣಿಗಳೂ ಇದೇ ನಾಮಗಳಿಂ ಪೇಳಲ್ಪಡುವರು. ಜನ್ಮಾಂತರೀಯವಾಸನೆಯಿಲ್ಲದೆ ಪರಮಾತ್ಮನ ಇಚ್ಛೆಯಿಂದಲೇ ಪ್ರಥಮತಃ ಪುಟ್ಟಿದ ಜೀವರು ಇದಂ ಪ್ರಥಮರೆನಿಸುವರು. ಇವರ್ಗೆ ಪರಮಾತ್ಮನಂತೆಯೇ ಕಾರ್ಯಾರ್ಥವಾಗಿ ದ್ವಿತೀಯ ಪದಾರ್ಥಜ್ಞಾನ ಉಂಟಾಗುವದು. ಆದಾಗ್ಯೂ ಅವರು ನಿಜಮಹಿಮಜ್ಞಾನದಲ್ಲಿಯೇ ನೆಲಸಿರುವರಾದ್ದರಿಂದ ತೆರೆಗಳಿಂ ಸಮುದ್ರದಂತೆ ಬ್ರಹ್ಮವೇ ನಾನಾರೂಪಗಳಿಂದಾಡುತ್ತಿರುವದೆಂದು ನಿಶ್ಚಯಿಸಿರುವರು. ಅಧಿಕಾರಮೂರ್ತಿಗಳಾದ ಈಸನಕಾದಿಗಳಿಗೆ ಶರೀರಸಂಬಂಧವು ಐಚ್ಛಿಕವಾದ್ದರಿಂದ ನಿತ್ಯಮುಕ್ತರೆನಿಸುವರು. ಜನ್ಮಾಂತರಗಳಲ್ಲಿ ನಾನಾಪ್ರಕಾರವಾದ ಶ್ರವಣ ಮನನಾದಿಗಳಿಂ ಶಮದಮಾದಿ ಸಾಧನಗಳು ಸಿದ್ಧವಾಗಿರುವಲ್ಲಿ ಪ್ರಾರಬ್ಧಶೇಷದಿಂ ಸ್ವರೂಪ ಸಾಕ್ಷಾತ್ಕಾರ ಸಿದ್ಧವಾದ ಮಹಾವಾಕ್ಯಾರ್ಥಾನುಭವವಾಗದೆ, ಜನ್ಮವಂ ಪಡೆದಿರುವರಿಗೆ ಗುರೂಪದೇಶಮಾತ್ರದಿಂ ಬ್ರಹ್ಮಸಾಕ್ಷಾತ್ಕಾರವಾಗುವದ್ದರಿಂದ ಸನಕಾದಿಗಳಂತೆಯೇ ಅವರಿಗೂ ಜ್ಞಾನವಿರುವದು. ಅವರು ಚರಮಜನ್ಮದವರೆಂತಲೂ, ಜೀವನ್ಮುಕ್ತರೆಂತಲೂ ಪೇಳಲ್ಪಡುವರು. ಇವರು ಸಾತ್ವಿಕ ಸಾತ್ವಿಕರೆನಿಸುವರು. ಸಾತ್ವಿಕಜನ್ಮದವರಿಗೆ ರಜಸ್ತಮಸ್ಸುಗಳಲ್ಲಿಯೇ ದೃಷ್ಟಿಯಿರುವದು. ಆದಾಗ್ಯೂ ಸಾತ್ವಿಕವಾಸನೆಯು ಬಲವಾಗಿರುವದ್ದರಿಂದ ರಜಸ್ತಮಸ್ಸುಗಳಿಂದವರಂ ಹಿಮ್ಮೆಟ್ಟಿಸುವದು. ಅದರಿಂದವರು ಕ್ರಮವಾಗಿ ದೇವತೋಪಾಸನಾದಿಗಳಿಂದ ವೈರಾಗ್ಯಾದಿಗಳಿಂ ಪಡದು ನೂರು ಜನ್ಮದಬಳಗೆ ಮುಕ್ತರಾಗುವರು. ದೇವತಾಪ್ರಸಾದದಿಂದಲೂ, ಸತ್ಸಹವಾಸದಿಂದಲೂ, ವಿವೇಕ ವೈರಾಗ್ಯ ಮೊದಲಾದ ಸನ್ಮಾರ್ಗದಲ್ಲೇ ಪ್ರವೃತ್ತರಾದ ಈ ಸಾತ್ವಿಕರು ಸಾತ್ವಿಕ ರಾಜಸರೆನಿಸುವರು. ಇವರು ಮೂರು ನಾಲು ಐದಾರು ಎಂಟುಹತ್ತು ಜನ್ಮಗಳೊಳಗೆ ಜ್ಞಾನಸಾಧನ ಬಲವಿದ್ದಂತೆ ಮುಕ್ತರಾಗುವರು. ಈ ಸಾತ್ವಿಕರಿಗೆ ರಜಃಪ್ರಾಚುರ್ಯವಿರಲು ಕಾಮ್ಯಕರ್ಮಪ್ರಧಾನರಾಗಿ ಭೋಗಾಸಕ್ತರಾಗುವದ್ದರಿಂದ ಮುಕ್ತಿಯಾಗುವದಕ್ಕೆ ನೂರು ಜನ್ಮಗಳು ಬೇಕಾಗುವದು. ಇವರಿಗೆ ತಮಃಪ್ರಾಚುರ್ಯವಾಗಲು ಕಾಮ ಕ್ರೋಧ

ದಂಭಾಹಂಕಾರ ಪ್ರಧಾನರಾಗುವದ್ದರಿಂದ ಅಸಂಖ್ಯವಾದ ಜನ್ಮಗಳಿಂದಿವರಿಗೆ ಮುಕ್ತಿಯಾಗುವದು. ಇವರು ಸಾತ್ವಿಕತಾಮಸರೆನಿಸುವರು, ಅತಿತಮಃಪ್ರಾಚುರ್ಯದಿಂ ಸಾತ್ವಿಕಾತ್ಯಂತತಾಮಸರಿಗೆ ಅನೇಕ ಕಲ್ಪಗಳಿಂ ಮುಕ್ತಿಯಾಗುವದು. ರಾಜಸರಿಗೆ ದೃಶ್ಯಪದಾರ್ಥಗಳಲ್ಲೇ ಕಂಡಕಂಡದ್ದರಲ್ಲೆಲ್ಲದರಲ್ಲಿಯೂ ಅಪೇಕ್ಷೆಯುಂಟಾಗಿ ಅದರ ಭೋಗದಲ್ಲೇ ಆಸಕ್ತಿಯಾಗುವದ್ದರಿಂದ ಸತ್ಸಂಗವು ಸಂಭವಿಸಿದಾಗ್ಯೂ ಮನುಷ್ಯಜನ್ಮ ಬರುವದಕ್ಕೆ ಎರಡುಮೂರು ಜನ್ಮಗಳು ಬೇಕಾಗುವದರಿಂದ ಮುಕ್ತಿಗೆ ಬಹಳ ಸಾವಕಾಶವಾಗುವದು. ಇಂಥಾ ಅಪೇಕ್ಷೆಯು ದೃಶ್ಯಾಭಿಮುಖವಾಗದೆ ದ್ರಷ್ಟೃವಿನಲ್ಲಿ ಉಂಟಾಗಲು ಅವರು ಸಾತ್ವಿಕರಾಜಸರೆನಿಸುವರು. ಅವರಿಗೆ ಅತಿಸುಲಭವಾಗಿ ಸತ್ಸಹವಾಸವು ಸಂಭವಿಸುವದ್ದರಿಂದ ಜ್ಞಾನಸಿದ್ಧಿಗೆ ಮುಖ್ಯ ಸಾಧನವಾದ ಚರಮಜನ್ಮವು ಎರಡುಮೂರು ಜನ್ಮಗಳಲ್ಲಿಯೇ ಸಂಭವಿಸುವದು. ದೈವಗತಿಯಿಂದಾ ಜನ್ಮ ಬರುವದಕ್ಕೆ ಸಾವಕಾಶವಾದರೆ ಅವರು ದ್ರಷ್ಟೃದೃಶ್ಯಗಳೆರಡರಲ್ಲೂ ಅಪೇಕ್ಷೆಯುಳ್ಳವರಾದ್ದರಿಂದ ರಾಜಸರಾಜಸರೆನಿಸುವರು. ಅವರಿಗೆ ಎಂಟುಹತ್ತು ಜನ್ಮಗಳಿಂ ಮುಕ್ತಿಯಾಗುವದು. ಇವರಿಗೆ ನೂರಾರು ಜನ್ಮಗಳು ಮುಕ್ತಿಯಾಗುವದಕ್ಕೆ ವಿಳಂಬವಾದಲ್ಲಿ ರಾಜಸತಾಮಸರೆನಿಸುವರು. ಇವರು ಅತ್ಯಂತ ತಾಮಸರಾದಾಗ್ಯೂ ಸತ್ಯಾವಲಂಬನಾದ ದ್ರಷ್ಟೃವಿನಲ್ಲಿ ದೃಷ್ಟಿಯುಳ್ಳವಾದ್ದರಿಂದ ಸಾವಿರಾರು ಜನ್ಮಗಳಲ್ಲಿ ಭೋಗಾಸಕ್ತರೇ ಆಗಿದ್ದು ಬಹುಜನ್ಮಗಳಿಂ ಮುಕ್ತರಾಗುವರು. ತಾಮಸಜನ್ಮವುಳ್ಳವರಿಗೆ ರಜಸ್ತಮಸ್ಸುಗಳಲ್ಲಿ ದೃಷ್ಟಿಪ್ರಚಾರವಿರುವದ್ದರಿಂದ ರಜೋದೃಷ್ಟಿ ಪ್ರಚುರವಾಗಿರಲು ದುರ್ಮಾರ್ಗದಿಂ ಭೋಗಾಸಕ್ತರಾಗಿದ್ದು ಅದರಲ್ಲಿ ಘಾತಪಾತಾದಿಗಳಿಂ ವಿರಕ್ತರಾಗಿ ಸಾವಿರಾರು ಜನ್ಮಗಳಿಂ ಮುಕ್ತರಾಗುವರು ಸಾತ್ವಿಕದೃಷ್ಟಿಯುಂಟಾಗಲು ಅವರು ತಾಮಸಸಾತ್ವಿಕರೆನಿಸುವರು. ಕಂಡದ್ದಂ ಬಿಡುವರಲ್ಲವಾದ್ದರಿಂದ ಕರ್ಕಟೀಪ್ರಹ್ಲಾದಾದಿಗಳಂತೆ ಅದೇ ಜನ್ಮದೋಳ್ ಜೀವನ್ಮುಕ್ತಿಯಂ ಪಡದು ಪ್ರಾರಬ್ಧಭೋಗಾಂತದಲ್ಲಿ ದೇಹಪಾತವಾಗಲು ವಿದೇಹಮುಕ್ತರಾಗಿ ಘಟಾಕಾಶವು ಮಹಾಕಾಶವಂ ಶೇರುವಂತೆ ಪರಮಾತ್ಮನಂ ಪೊಂದುವರು. ಇವರಿಗೆ ರಜೋದೃಷ್ಟಿಯುಂಟಾಗಲು ತಾಮಸರಾಜಸರೆನಿಸುವರು. ಇವರು ಕೇವಲ ಭೋಗದಲ್ಲೇ ಅತ್ಯಂತಾಸಕ್ತರಾಗಿ ಅದರಲ್ಲಿ ದುಃಖಾಧಿಕ್ಯದಿಂ ಜುಗುಪ್ಸೆಯುಂಟಾಗಲು ಎರಡುಮೂರು ಜನ್ಮಗಳಿಂದಲೇ ಮುಕ್ತರಾಗುವರು. ಇವರಿಗೆ ಜನ್ಮಾನುಗುಣವಾದ ತಾಮಸ ಪದಾರ್ಥದಲ್ಲೇ ದೃಷ್ಟಿ ನಿಲ್ಲಲು ತಾಮಸತಾಮಸರೆನಿಸುವರು. ಇವರು ದೈವಗ

ತಿಯಿಂ ಮನುಷ್ಯಜನ್ಮವಂ ಪಡೆದಾಗ್ಯೂ ದುರ್ಮಾರ್ಗದಿಂ ಭೋಗದಲ್ಲೆ ಆಸಕ್ತರಾಗಿ ದ್ಯೂತಮೃಗಯಾಪಾನ ಪರಸ್ತ್ರೀರಿಗೆ ಅಧೀನವಾದ ಮನಸ್ಸು ಉಳ್ಳವರಾಗಿ ಪಾಂಡಿತ್ಯಗರ್ವದಿಂ ಮೆರೆವ ಅಧಮಾಧಮ ಚಾರ್ವಾಕರಂತೆ ತಮಗೆ ತೋರಿದ್ದನ್ನೆ ಯಥಾರ್ಥವೆಂದು ನಿಶ್ಚಯಿಸಿ ನಡೆಯುತ್ತಾ ಅನೇಕಲಕ್ಷ ಜನ್ಮಗಳಿಂದಲೂ ಮೋಕ್ಷಮಾರ್ಗವಂ ಪೊಂದಲಾರರು. ಇವರಿಗೆ ಮನುಷ್ಯಜನ್ಮವೂ ಕೂಡ ದುರ್ಲಭವಾದಲ್ಲಿ ತಾಮಸಾತ್ಯಂತ ತಾಮಸರೆನಿಸುವರು. ವಿವೇಕ ವೈರಾಗ್ಯಾದಿಯಾಗಿ ಅಖಂಡಾಕಾರವೃತ್ತಿಪರ್ಯಂತವಾದ್ದು ಸಾತ್ವಿಕಜ್ಞಾನವು. ಭೋಗಯೋಗಾಸಕ್ತಿಯೇ ರಾಜಸಜ್ಞಾನವು. ದಂಭಾಹಂಕಾರಾದಿಗಳೇ ತಾಮಸಜ್ಞಾನವು. ಕ್ರಿಯೆಗಳಲ್ಲಿ ಚಿತ್ತಶುದ್ಧಿ ದ್ವಾರವಾಗಿ ಜ್ಞಾನಸಾಧನವಾದ್ದು ಸಾತ್ವಿಕವು. ಭೋಗಸಾಧಕವಾದ್ದು ರಾಜಸವು. ಲೌಕಿಕ ಪ್ರತಿಷ್ಠಾಮಾತ್ರಕ್ಕೆ ಸಾಧಕವಾದ್ದು ತಾಮಸವು. ಇದೇಪ್ರಕಾರ ಆಹಾರಾದಿ ಭೋಗ್ಯಪದಾರ್ಥಗಳಲ್ಲೂ ತಿಳಿಯತಕ್ಕದ್ದು. ದೇಹಾದಿಪ್ರಕೃತ್ಯಂತವಾದ ಜಡಪದಾರ್ಥಗಳಲ್ಲಿ ತಾನೆಂಬ ಬುದ್ಧಿಯೆ ಅಜ್ಞಾನವೆನಿಸುವದು. ಚಿದ್ರೂಪನಾದ ಆತ್ಮನಿಗೆ ಈ ಜಡಪದಾರ್ಥಗಳ ಸಂಬಂಧವಾಗುವಲ್ಲಿ ಸ್ವರೂಪಾಜ್ಞಾನದಿಂದಹಂಕಾರ ವುಂಟಾಗುವದು. ಇದನ್ನೇ ಬಂಧವೆನ್ನುವರು. ಇದರಿಂದುಂಟಾದ ಮಮತೆಯು ಪ್ರಚಾರದಿಂ ಸಂಸಾರವುಂಟಾಗುವದು. ಜ್ಞಾನಸ್ವರೂಪನಾದ ಪರಮಾತ್ಮನು ಅಖಂಡನಾಗಿರುವಲ್ಲಿ ತಾನುಬೇರೆಯಲ್ಲಿರುವೆನೆಂಬ ಬುದ್ಧಿಯೆ ಜ್ಞಾನವೆನಿಸುವದು, ಇದರಿಂದ ಅಜ್ಞಾನಕ್ಕೆ ನಿಶ್ಶೇಷವಾಗಿ ನಾಶವಾಗುವದೆ ಮುಕ್ತಿಯನಿಸುವದು. ಬಾಲ್ಯವು ಕಳೆದಬಳಿಕ ಪ್ರತಿಬಿಂಬಚ್ಛಾಯೆಗಳನ್ನೆರಡನೆ ಪದಾರ್ಥವೆಂದು ಹ್ಯಾಗೆ ಜನಗಳು ತಿಳಿಯುವದಿಲ್ಲವೊ ಹಾಗೆ ಅಜ್ಞಾನವಳಿದಬಳಿಕ ಜನಗಳು ದೃಶ್ಯವಂ ಜಗವೆಂದು ತಿಳಿಯಲಾರರು. ಸಮುದ್ರದಿಂ ತೆರೆಗಳಂತೆಯೂ ಅಗ್ನಿಯಿಂದ ಕಿಡಿಗಳಂತೆಯೂ, ಚಂದ್ರನಿಂದ ಕಿರಣಗಳಂತೆಯೂ, ಕಲ್ಪವೃಕ್ಷದಿಂ ಪುಷ್ಪಗಳಂತೆಯೂ, ಕನಕದಿಂದಾಭರಣಗಳಂತೆಯೂ, ಪ್ರವಾಹದಿಂ ಜಲಕಣಗಳಂತೆಯೂ, ಆಕಾಶದಿಂ ಘಟಗೃಹಮಠಾದ್ಯಾಕಾಶಗಳಂತೆಯೂ, ಬಿಸಲಿನಿಂದ ಮರುಮರೀಚಿಗಳಂತೆಯೂ, ಪರಮಾತ್ಮನಿಂದಲೇ ಈ ಜೀವಜಾತಿಗಳು ದೃಶ್ಯಸೃಷ್ಟಿಗಳು ಸಹ ಉಂಟಾಗುವವು. ಎಲೈ ರಾಮಭದ್ರನೆ ವೃಕ್ಷದಿಂದ ಅಭಿನ್ನವಾದ ಪುಷ್ಪಪರಿಮಳಗಳು ಉಂಟಾಗುವಂತೆ ಪರಮಾತ್ಮನಿಂದಲೇ ಕರ್ಮಗಳೂ ಕರ್ತೃಗಳೂ ಸಹ ವುಂಟಾಗುವವು. ಆಕಾಶದಲ್ಲಿ ಕಪ್ಪಿನಂತೆ ಅಜ್ಞರದೃಷ್ಟಿಗೆ ಬ್ರಹ್ಮದಲ್ಲಿ ಜೀವರು ಪುಟ್ಟುವಂತೆ ತೋರುವದು. ಪ್ರಾಜ್ಞದೃಷ್ಟಿಯಿಂ ನೋಡುವಲ್ಲಿ ಜಗತ್ತು ಪುಟ್ಟು

ವವರಿಂದಲೂ ಪುಟ್ಟಿದಾಗ್ಯೂ ಅಭಿನ್ನವಾಗಿರುವದ್ದರಿಂದಲೂ, ಪುಟ್ಟುವದೆಂತಲೂ ಇಲ್ಲನೆಂತಲೂ ಪೇಳುವದಕ್ಕೆ ಅಶಕ್ಯವಾಗಿರುವದು. ದ್ವಿತೀಯಪದಾರ್ಥ ಕಲ್ಪನೆ ಹೊರ್ತಾಗಿ ಉಪದೇಶಕ್ಕೆ ಮಾರ್ಗವಿಲ್ಲದ್ದರಿಂದ ಪರಮಾರ್ಥಪ್ರತಿಪಾದಕವಾದ ಶಾಸ್ತ್ರದಲ್ಲಿ ಜೀವಜಗತ್ತುಗಳ ಉತ್ಪತ್ತಿಯು ಪೇಳಲ್ಪಡುವದು. ಸಮುದ್ರದ ತೆರೆಗಳಲ್ಲಿ ಹಾರಿದಂಥಾದ್ದಾಗಿಯೂ ಹಾರತಕ್ಕದ್ದಾಗಿಯೂ ಜಲಕಣಗಳು ಇರುವಂತೆ ಪರಮಾತ್ಮನಲ್ಲೆ ಈ ಜೀವಗಳು ಪುಟ್ಟಿ ಅಲ್ಲೇ ಐಕ್ಯವಾಗುತ್ತಿರುವವು. ಈ ಜೀವಜಗಗಳ ಉತ್ಪತ್ತಿಗೆ ಸ್ವರೂಪವಿಸ್ಮೃತಿಯೇ ಕಾರಣವೆಂದು ವಸಿಷ್ಠನು ಪೇಳುತ್ತಿರುವಲ್ಲಿ ಶ್ರೀರಾಮನಿಂತು ಪ್ರಶ್ನೆಯಂಮಾಡಿದನು.

ಎಲೈ ಮಹಾ ಮುನಿಯೆ! ಕರ್ಮಮಾರ್ಗಕ್ಕು ಬ್ರಹ್ಮಮಾರ್ಗಕ್ಕು ಸಹ ಪ್ರಮಾಣವಾದ ಶ್ರುತಿಗಳ ರಹಸ್ಯವಂ ತಿಳಿದ ಮಹಾಮುನಿಗಳು ನಿಶ್ಚಯಿಸಿ ಪೇಳಿದ ಗ್ರಂಥವೇ ಶಾಸ್ತ್ರವೆನಿಸುವದು. ಬ್ರಹ್ಮಸಾಕ್ಷಾತ್ಕಾರದಿಂ ಸಮದೃಷ್ಟಿಗಳಾದ ಮಹಾತ್ಮರು ಪರಮೇಶ್ವರನ ಆಜ್ಞಾರೂಪವಾದ ಶ್ರುತಿಗಳನ್ನತಿಕ್ರಮಿಸಲಾಗದೆಂದು ಮಾಡಿದ ಆಚಾರವೇ ಸತ್ಸಂಪ್ರದಾಯವೆನಿಸುವದು. ಇದೆರಡೂ ಲೋಕಗಳಲ್ಲಿ ಪ್ರಮಾಣವಾಗಿರುವದು. ಇದನ್ನತಿಕ್ರಮಿಸಿದವನು ಬಹಿಷ್ಕಾರಕ್ಕೆ ಯೋಗ್ಯನಾಗುವನು. ಶಾಸ್ತ್ರದಲ್ಲಿ ಪಾಪವಂ ಮಾಡಿದವನು ಪಾಪಿಯಾಗುವನೆಂತಲೂ, ಪುಣ್ಯವಂ ಮಾಡಿದವನು ಸುಖಿಯಾಗುವನೆಂತಲೂ, ಇವರು ಕರ್ಮಾನುರೂಪವಾದ ಜನ್ಮವಂ ಪಡೆಯುವರೆಂತಲೂ. ಕರ್ಮ ಕರ್ತೃಗಳು ಬೀಜವೃಕ್ಷಗಳಂತೆ ಪರಸ್ಪರಾನುಬಂಧಿಗಳಾಗಿ ವೃದ್ಧಿಯಂಪಡೆಯುತ್ತಿರುವರೆಂತಲೂ, ಶಾಸ್ತ್ರೋಕ್ತವಾದ ಅರ್ಥವು ಜ್ಞಾನಿಗಳಿಗೂ ಸಂಮ್ಮತವಾಗಿರುವಲ್ಲಿ ಸಮಸ್ತವು ಬ್ರಹ್ಮದಿಂದಲೆ ಪುಟ್ಟುತ ಅಲ್ಲೇ ಅಣಗುತಲಿಧೆ ಎಂಬುವದು ವಿರುದ್ಧವಾಗಿ ಕಾಣುತಲಿಧೆ. ಹಿರಣ್ಯಗರ್ಭಾದಿಯಾಗಿ ಸ್ಥೂಲಸೂಕ್ಷ್ಮಗಳಾದ ಪ್ರಾಣಿಗಳಿಗೆ ಕರ್ಮಾನುರೂಪ ಫಲ ಭೋಗವೆಂಬುವದು ಪ್ರಸಿದ್ಧವಾಗಿದ್ದಾಗ್ಯೂ ನಿಮ್ಮ ವಚನರೀತಿಯಿಂ ಸುಳ್ಳಾಗಿ ತೋರುವದು. ಕರ್ಮಾನುರೂಪವಾದ ಜನ್ಮಭೋಗಗಳು ಆಗುತಲಿವೆಯೆಂಬುವದು ಯಥಾರ್ಥವೊ ಸುಳ್ಳೊ ನಿಶ್ಚಯವಾಗಿ ಪೇಳಬೇಕು. ಕರ್ಮಮಾರ್ಗವು ಸುಳ್ಳಾಗುವಲ್ಲಿ ವರ್ಣಸಾಂಕರ್ಯವು ಮಾತ್ಸ್ಯನ್ಯಾಯವು ಸಹ ಉಂಟಾಗುವದು ಎಂದು ಕೇಳಲು ವಸಿಷ್ಠನಿಂತೆಂದನು?

ಎಲೈ ರಘುಕುಲೋತ್ತಮನೆ ಪರಮಾತ್ಮನಿಂದ ಸಂಕಲ್ಪರೂಪವಾಗಿ ಪುಟ್ಟಿದ ಮನಕ್ಕೆ ಕುಸುಮಕ್ಕೆ ಪರಿಮಳದಂತೆ ಅಭಿನ್ನವಾಗಿ ಕಲ್ಪನಾಶಕ್ತಿ ಇರುವದು. ಕ್ರಿಯಾರೂಪವಾದ ಆ ಕಲ್ಪನೆಯೇ ಕರ್ಮವೆನಿಸುವದಾದ್ದರಿಂದ ಮನಃಕರ್ಮಗ

ಳಿಗೆ ಭೇದವಿಲ್ಲವೆಂದು ತಿಳಿಯತಕ್ಕದ್ದು. ಮನಸ್ಸಿನಲ್ಲಿ ಕರ್ಮಸಂಸ್ಕಾರರೂಪ ದಿಂದಿದ್ದ ಕ್ರಿಯಯೇ ದೇಹರೂಪವಾಗಿಯೂ, ಕರ್ಮಫಲರೂಪವಾದ ಸ್ವರ್ಗ ನರಕಾದಿ ರೂಪವಾಗಿಯೂ ಪರಿಣಮಿಸುವದು. ಆದ್ದರಿಂದ ಸಮಸ್ತ ಪ್ರಪಂಚ ಕ್ಕೆ ಮನಸ್ಸೇ ಪೂರ್ವರೂಪವೆಂದು ಹೇಳಲ್ಪಡುವದು. ಕಪ್ಪಿನೊಡನೆ ಕಾಟಿಗೆ ಪೋಗುವಂತೆ ಕರ್ಮನಾಶವಾದ ಕೂಡ್ಲೆ ಮನಸ್ಸೂ ಪೋಗುವದು ಈ ಮನೋ ನಾಶವೆ ಮುಕ್ತಿಯನಿಸುವದು. ವಹ್ನಿಉಷ್ಣಗಳಂತೆ ಮನಸ್ಸು ಕರ್ಮಗಳು ಶೇರಿ ಕೊಂಡಿರುವದ್ದರಿಂದ ಇದರಲ್ಲಿ ಒಂದು ಹೋದರೂ ಎರಡೂ ಹೋಗುವದು. ಐಹಿಕವಾಗಲೀ ಪ್ರಾಕ್ತನವಾಗಲಿ ಯಾವದು ಸಾಂಗವಾಗಿಯೂ ಯಥಾವಿಧಿ ಯಾಗಿಯೂ ಕರ್ಮವು ಮಾಡಲ್ಪಟ್ಟತೊ ಅದೇ ಪೌರುಷವೆನಿಸಿಕೊಳ್ಳುವದು ಅದು ಎಂದಿಗೂ ನಿಷ್ಫಲವಾಗಲಾರದು. ಆದ್ದರಿಂದ ಕರ್ಮಮೂಲಕವಾದ್ದು ಪ್ರಪಂ ಚವೆಂದು ಹೇಳಲ್ಪಡುವದು ಕರ್ಮಮನಸ್ಸುಗಳಿಗೆ ಭೇದವಿಲ್ಲದ್ದರಿಂದಲೂ ಮನಸ್ಸು ಸಂಕಲ್ಪರೂಪವಾದ್ದರಿಂದಲೂ ಸಂಕಲ್ಪವೆನ್ನುವದು ಆತ್ಮನದಾದ್ದ ರಿಂದಲೂ ಆತ್ಮನಿಂದಲೇ ಪ್ರಪಂಚವಾಯಿತೆಂದು ಹೇಳಲ್ಪಡುವದು. ವಿಚಾರ ರೂಪವಾದ ಸತ್ಕರ್ಮದಿಂದ ಸಂಕಲ್ಪರೂಪವಾದ ದುಷ್ಕರ್ಮವು ಪೋಗಲೂ ಅಕರ್ಮತೆಯುಂಟಾಗುವದು. ಮುಕ್ತನಿಗಲ್ಲದೆ ಇನ್ಯಾರಿಗೂ ಆಗಲಾರದು ಎಂದು ಹೇಳುವಲ್ಲಿ ಜಡಾಜಡರೂಪವಾಗುವ ಮನಸ್ಸಿನ ಸ್ವರೂಪವಂ ನಿರೂಪಿ ಸಬೇಕೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು.

ಎಲೈ ಶ್ರೀರಾಮಭದ್ರನೇ ! ಸರ್ವಶಕ್ತಿಯಾದ ಪರಮಾತ್ಮನ ಸಂಕಲ್ಪ ಶಕ್ತಿ ಯಿಂದುಂಟಾದ ಸ್ವರೂಪವಿಶೇಷವೇ ಮನವೆನಿಸಿಕೊಳ್ಳುವದು. ಸ್ಥಾಣುವೋ ಪುರುಷನೋ ಎಂಬುವದೇ ಮೊದಲಾದ ಸಂದೇಹಸ್ಥಾನದಲ್ಲಿ ಎರಡು ಪದಾರ್ಥ ಗಳ ಮಧ್ಯದಲ್ಲಿ ಕಲ್ಪನಾರೂಪವಾಗಿ ಡೋಲೆಯಂತೇ ತೂಗಾಡುತ್ತಿರುವ ಪುರುಷರ ಭಾವರೂಪವಾಗಿರುವದ್ದರಿಂದ ಈ ಮನವು ಸಂಶಯಾತ್ಮಕವೆನಿಸು ವದು. ಚಪಲಸ್ವಭಾವವಾದ ಈ ಮನದಿಂದಲೇ ಜ್ಞಾನರೂಪದಿಂ ಪ್ರಕಾಶಿಸುವ ಆತ್ಮನು ನಾನರಿಯೆನೆಂಬ ಜ್ಞಾನವು ಸ್ವೇತರ ಪದಾರ್ಥವಿಲ್ಲದ್ದರಿಂದ ಅಕರ್ತೃ ವಾದ ಆತ್ಮನಲ್ಲಿ ಕರ್ತೃತ್ವಜ್ಞಾನವು ಸಹ ಉಂಟಾಗುವದು. ಗುಣವಿಲ್ಲದ ಗುಣಿ ಯಂತೆ ಕಲ್ಪನೇ ಇಲ್ಲದ ಮನವು ಇಲ್ಲದ್ದರಿಂದ ಇದಕ್ಕೆ ಕಲ್ಪನೆಯೇ ಸ್ವಾಭಾ ವಿಕ ಕರ್ಮವೆನಿಸಿಕೊಳ್ಳುವದು. ವಹ್ನಿ ಉಷ್ಣತ್ವಗಳಿಗೆ ಹ್ಯಾಗೆ ಬೇರೇ ಸತ್ವವಿ ಲ್ಲವೋ ಅದೇ ಪ್ರಕಾರ ಮನಃಕರ್ಮಗಳಿಗೆ ಬೇರೇಸತ್ವವಿಲ್ಲ. ಇದೇಪ್ರಕಾರ ಆತ್ಮಮನಸ್ಸುಗಳಿಗೂ ಬೇರೇಸತ್ವವಿಲ್ಲದ್ದರಿಂದ ಬಾವಕ್ಕೊಂದು ಅಭಿನ್ನವಾಗಿ

ರುವದು. ಕಲ್ಪನಾಶಕ್ತಿಯಿಂದೀ ಮನವು ಭಾವಿಸಿದಂತೆ ತಾನೇ ಜಡರೂಪವಾಗಿ ಅನುಭವ ಗೋಚರವಾಗುವದು. ವಾಸನೇ ಎಂಬ * ವಲ್ಲಿಗೆ ಕರ್ಮವೇ ಬೀಜವು ಮನಸ್ಸು ಶರೀರವು ಕ್ರಿಯೆಗಳೂ ಕೂಡ ಕವಲುಗಳೆನಿಸುವವು ಮನಸ್ಸುಭಾವಿಸಿದ್ದನ್ನು ಕರ್ಮೇಂದ್ರಿಯಗಳು ಸಿದ್ಧಪಡಿಸುವದ್ದರಿಂದ ಕರ್ಮೇಂದ್ರಿಯಗಳ ವ್ಯಾಪಾರವೆಲ್ಲವು ಮನವೆಂದು ಹೇಳಲ್ಪಡುವದು. ಸ್ವಾಭಾವಿಕವಾದ ದ್ವಿತೀಯ ಪದಾರ್ಥ ಕಲ್ಪನೆಯೊಡನೇ ಮನಸ್ಸಿನ ನಾಮವಿವರಣ ಕಾಕತಾಳೀಯ ನ್ಯಾಯದಿಂದ ಅಕಸ್ಮಿಕವಾಗಿ ಸ್ವರೂಪ ಮಹಿಮ ವಿಸ್ಮೃತಿಯಾದ್ದರಿಂದ ಪ್ರಪಂಚಾಭಿಮುಖವಾದ ಚಿದ್ವಸ್ತುವಿಗೆ ಮನವೆಂತಲೂ, ಬುದ್ಧಿಯೆಂತಲೂ, ಚಿತ್ತವೆಂತಲೂ, ಅಹಂಕಾರವೆಂತಲೂ, ಕರ್ಮವೆಂತಲೂ, ಅರ್ಥಕಲ್ಪನೆಯೆಂತಲೂ, ಸಂಸೃತಿಯೆಂತಲೂ, ವಾಸನೆಯೆಂತಲೂ, ಅವಿದ್ಯೆಯೆಂತಲೂ, ಪ್ರಯತ್ನವೆಂತಲೂ, ಸ್ಮೃತಿಯೆಂತಲೂ, ಇಂದ್ರಿಯವೆಂತಲೂ, ಪ್ರಕೃತಿಯೆಂತಲೂ, ಮಾಯೆಯೆಂತಲೂ, ಕ್ರಿಯೆಯೆಂತಲೂ ಇನ್ನೂ ನಾನಾಪ್ರಕಾರವಾದ ಕಲ್ಪನಾನಾಮಧೇಯಗಳು ಉಂಟಾಗಿರುವವು.

ಎಲೈ ರಾಘವನೇ! ಯಾವಾಗ ಚಿದ್ವಸ್ತುವು ಅವಿದ್ಯೆಯಿಂ ಕೂಡಿರುವಂತೆ ಪ್ರಪಂಚಕಲ್ಪನೋನ್ಮುಖವಾಗಿ ಪ್ರಕಾಶಿಸುವದೋ ಆಗಮನವೆನಿಸುವದು. ಈ ಕಲ್ಪನೆಯಲ್ಲಿ ಇದು ಇಷ್ಟೇ ಸರಿಯೆಂದು ನಿಶ್ಚಯಾತ್ಮಕವಾದ ಸ್ಥಿತಿಯಿಂದ ಬುದ್ಧಿಯೆನಿಸುವದು. ಕಲ್ಪಿತಪದಾರ್ಥದಲ್ಲಿ ತಾನೆಂಬ ಅಭಿಮಾನದಿಂದಹಂಕಾರವೆನಿಸುವದು. ಒಂದು ಆಟವಂ ಪಿಡಿದ ಶಿಶುವು ಮತ್ತೊಂದು ಆಟವಂ ಸ್ಮರಿಸಿ ಪೋಗುವಂತೆ ಒಂದರಲ್ಲೂ ನಿಲ್ಲದೆ ಬೇರೆಬೇರೆ ಪದಾರ್ಥಗಳಂ ಸ್ಮರಿಸಿ ಪೋಗುವದ್ದರಿಂದ ಚಿತ್ತವೆನಿಸುವದು. ಚಲಸ್ವಭಾವವಾದ್ದರಿಂ ಶರೀರವನ್ನಿತ್ತತ್ತಲಾಗಿ ಶೆಳೆಯುತ ಶೂನ್ಯವಾದ್ದನ್ನು ಕೂಡ ವಸ್ತುವಾಗಿ ತೋರುವದ್ದರಿಂದ ಕರ್ಮವೆನಿಸುವದು. ಸ್ವರೂಪದ ಅಖಂಡಭಾವವನ್ನೆಣಿಸದೆ ಕಾಕತಾಳೀಯನ್ಯಾಯದಿಂದಿಷ್ಟವಾಗಿ ತೋರಿದ ಪದಾರ್ಥವನ್ನೇ ಪಿಡಿಯುವದ್ದರಿಂದ ಕಲ್ಪನೆಯೆನಿಸುವದು. ಪೂರ್ವದಲ್ಲಿ ಕಂಡಿದ್ದದ್ದನ್ನಾದರೂ ಕಾಣದಿದ್ದದ್ದನ್ನಾದರೂ ಕಂಡಿರುವ ಪದಾರ್ಥದಂತೆ ಸ್ಮರಿಸಿ ಪ್ರಸರಿಸುವದ್ದರಿಂದ ಸಂಸೃತಿಯೆನಿಸುವದು. ಯಾವಾಗ ಪೂರ್ವೋತ್ತರ ವಿಚಾರವಿಲ್ಲದೆ ತೋರಿದ ಪದಾರ್ಥವನ್ನೇ ಕ್ಲಿಪ್ತವಾಗಿ ಪಿಡಿದು ನಿಂದಿರುವದೋ ಆಗ ವಾಸನೆಯೆನಿಸುವದು. ಅಪರಿಚ್ಛಿನ್ನವಾದ ಆತ್ಮತತ್ವವೇ ಸ್ಫುರಿಸುತ್ತಿರುವಲ್ಲಿ ಸ್ವರೂಪಜ್ಞಾನವಿಲ್ಲದೆ ಇಲ್ಲದಿರುವ ಎರಡನೇ

* ವಲ್ಲಿ=ಬಳ್ಳಿ. (creeper.)

ಪದಾರ್ಥದ ದೃಷ್ಟಿಯಂ ಪಿಡಿದು ಪೊರವಮಡುವದ್ದರಿಂದ ಅವಿದ್ಯೆಯೆನಿಸುವದು. ಆವರಣ ವಿಕ್ಷೇಪಶಕ್ತಿಗಳರೀತಿಯಿಂ ದ್ವಿತಿಯ್ಯಪದಾರ್ಥ ದೃಷ್ಟಿಯಲ್ಲಿ ಸ್ವರೂಪ ವಿಚಾರವಿಲ್ಲದ್ದರಿಂದ ಪ್ರಯತ್ನವೆಂದು, ಮನವೆಂದು ಪೇಳಲ್ಪಡುವದು. ಸ್ವದೃಷ್ಟಿಯಿಲ್ಲದೆ ದ್ವಿತೀಯಪದಾರ್ಥದಲ್ಲೇ ದೃಷ್ಟಿಯಿರುವದ್ದರಿಂದ ಸ್ಮೃತಿಯೆಂದು ವಿಸ್ಮೃತಿಯೆಂದು ಪೇಳಲ್ಪಡುವದು. ಶ್ರವಣಾದಿ ವ್ಯಾಪಾರಗಳಿಂದಿಂದ್ರನೆಂದು ಶೃತಿಗಳೊಳ್ಪ್ರಸಿದ್ಧನಾದ ತನ್ನಂತಾನೆ ಆನಂದಪಡಿಸುವದ್ದರಿಂದ ಇಂದ್ರಿಯವೆನಿಸುವದು. ಆತ್ಮಜ್ಞಾನವಿಲ್ಲದಿರುವಲ್ಲಿ ಪ್ರಪಂಚವಂ ಪ್ರಕೃತವಾಗಿ ಪರಿಗ್ರಹಿಸುವದ್ದರಿಂ ಪ್ರಕೃತಿಯೆನಿಸುವದು. ಇರುವದನ್ನಿಲ್ಲದ್ದನ್ನಾಗಿಯೂ ಇಲ್ಲದ್ದನ್ನಿರುವದನ್ನಾಗಿಯೂ, ಸಾಧುವನ್ನಸಾಧುವನ್ನಾಗಿಯೂ, ಅಸಾಧುವಂ ಸಾಧುವನ್ನಾಗಿಯೂ, ಸಕಲಪದಾರ್ಥವನ್ನು ವಿರುದ್ಧವಾಗಿ ಗ್ರಹಿಸುವದ್ದರಿಂದ ಮಾಯೆಯೆನಿಸುವದು. ಶ್ರವಣಸ್ಪರ್ಶಾದಿ ಕ್ರಿಯಾರೂಪದಿಂ ಕಾರ್ಯಕಾರಣಭಾವವಂ ಪಡೆಯುವದ್ದರಿಂದ ಕ್ರಿಯೆಯೆನಿಸುವದು. ಪ್ರಪಂಚಕಲ್ಪನೋನ್ಮುಖವಾದ ಚಿದ್ವಸ್ತುವಿಗೆ ಸ್ವಸಂಕಲ್ಪಗಳಿಂದಲೇ ಈ ಪೆಸರುಗಳು ರೂಢವಾಗಿರುವವು. ಇನ್ನೂ ಅನೇಕವೃತ್ತಿಗಳಿಂ ಪರಿಪರಿಯಾದ ಪೆಸರುಗಳುಂಟಾಗಿರುವವು. ಚಿನ್ಮಾತ್ರವಾದ ಸ್ವರೂಪಜ್ಞಾನವಿಲ್ಲದೆ ಜಡವಾದ ಜಗವಂ ಪಿಡಿದು ಮಧ್ಯದೊಳ್ ಡೋಲೆಯಂತೆ ತೂಗಾಡುತ್ತಿರುವದ್ದರಿಂದ ಚಿತ್ತೆಂತಲೂ, ಜಡವೆಂತಲೂ ನಿಶ್ಚಯಿಸಲಶಕ್ಯವಾಗಿರುವ ಚಿದ್ವಸ್ತುವೇ ಚಿತ್ತವೆನಿಸುವದು. ಇದರಿಂದಲೆ ಈ ಪ್ರಪಂಚವೆಲ್ಲವು ಉಂಟಾಗಿರುವದು. ಈ ಮನವು ವೇಷಭೇದದಿಂ ನಟನಂತೆಯೂ, ಅಧಿಕಾರಭೇದದಿಂ ಮನುಷ್ಯನಂತೆಯೂ, ವೃತ್ತಿಭೇದದಿಂ ನಾನಾಪ್ರಕಾರವಾದ ಪೆಸರುಗಳಂ ಪಡೆವದು. ನಾನು ಪೇಳಿದ ಸಂಜ್ಞೆಗಳನ್ನೆ ಕೆಲವು ಪ್ರಾಜ್ಞರು ಮತ್ತೊಂದುಪ್ರಕಾರವಾಗಿ ಪೇಳುವರು. ಈ ಮನವಂ ಕೆಲವರು ಜಡವೆಂತಲೂ, ಕೆಲವರು ಬುದ್ಧಿಯಂತಲೂ, ಕೆಲವರು ಅಹಂಕಾರವೆಂತಲೂ, ಕೆಲವರು ಜೀವವೆಂತಲೂ, ಪೇಳುವರು. ಅಹಂಕಾರಾಭಿನ್ನವಾದ ಜೀವನು ದ್ರವ್ಯವೆಂತಲೂ, ಸಮಸ್ತವಾದ ಮೂರ್ತಿಯುಕ್ತದ್ರವ್ಯಗಳ ಸಂಯೋಗದಿಂ ವಿಭುವೆಂತಲೂ, ಅಣುದ್ರವ್ಯರೂಪವಾದ ಮನವು ಈ ಜೀವಸ್ವರೂಪ ಸಾಕ್ಷಾತ್ಕಾರ ಸಾಧನವೆಂತಲೂ, ಜೀವನಿಗೆ ಗುಣವಾದ ಬುದ್ಧಿಯು ಉತ್ಪತ್ತಿಸ್ಥಿತಿನಾಶ ಕ್ಷಣತ್ರಯದಲ್ಲೂ ಇರತಕ್ಕದ್ದೆಂತಲೂ, ನೈಯಾಯಿಕರು ಪೇಳುವರು. ಸತ್ವರಜಸ್ತಮೋಗುಣಗಳು ಜಗತ್ತಿಗೆ ಕಾರಣವಾದ ಪರಮಾಣುಗಳೆಂತಲೂ, ರಜ್ಜುವಿನಂತೆ ಬಂಧಕವಾದ್ದರಿಂದ ಗುಣವೆಂದು ಪ್ರಸಿದ್ಧವಾಗಿರುವವೆಂತಲೂ,

ಈ ಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿಯೆಂತಲೂ, ಇದರ ಕಾರ್ಯವಾದ ಮಹತ್ತತ್ವವೇ ಬುದ್ಧಿಯೆನಿಸಿಕೊಳ್ಳುವದೆಂತಲೂ, ಇದರ ಕಾರ್ಯವಾದ ಅಹಂಕಾರದಿಂದ ಮನವು, ದಶೇಂದ್ರಿಯಗಳು, ಪಂಚತನ್ಮಾತ್ರೆಗಳು ಸಹ ಪುಟ್ಟುವದೆಂತಲೂ, ಪಂಚತನ್ಮಾತ್ರೆಗಳಿಂದ ಪಂಚಮಹಾಭೂತಗಳು ಪುಟ್ಟುವವೆಂತಲೂ, ಪುರುಷನು ತಟಸ್ಥನೆಂತಲೂ ಸಾಂಖ್ಯರು ಪೇಳುವರು. ಜಡಬೋಧಾತ್ಮಕನಾಗಿ ಅಹಂಕಾರಾಭಿನ್ನನಾಗಿರುವ ಆತ್ಮನ ಚಿದಂಶವೇ ಬುದ್ಧಿಯೆಂತಲೂ, ಮನಸ್ಸು ವಿಭುದ್ರವ್ಯವೆಂತಲೂ, ಅನ್ನಮಯವೆಂತಲೂ, ಮೀಮಾಂಸಕರು ಪೇಳುವರು. ಅಹಂಕಾರಸ್ವರೂಪನಾದ ಆತ್ಮನೇ ದೇಹವೆಂತಲೂ, ದೇಹದ ಚೈತನ್ಯಗುಣವೇ ಬುದ್ಧಿಯೆಂತಲೂ, ಪೂರ್ವಾಪರ ಪ್ರತಿಸಂಧಾನವಂ ಮಾಡುವದು ಮನವೆಂತಲೂ, ಚಾರ್ವಾಕರು ಪೇಳುವರು. ಮಧ್ಯಮ ಪರಿಮಾಣುವಾಗಿ ಚಿದ್ರೂಪನಾಗಿರುವನೇ ಜೀವನೆಂತಲೂ, ಅಸ್ತಿಕಾಯವೇ ಅಹಂಕಾರವೆಂತಲೂ, ಅವನ ವಿಷಯಾಭಿಲಾಷೆಯೇ ಮನವೆಂತಲೂ, ಅರ್ಥಕಾರಿಯಾದ್ದು ಬುದ್ಧಿಯೆಂತಲೂ ಜೈನರು ಪೇಳುವರು. ಕ್ಷಣಿಕವಾದ ಆಲಯ ವಿಜ್ಞಾನವೆಂಬ ಬುದ್ಧಿಯ ಸಂತತಿಯೇ ಅಹಂಕಾರಾಭಿನ್ನನಾದ ಆತ್ಮನೆಂತಲೂ, ಪ್ರವೃತ್ತಿ ವಿಜ್ಞಾನಾತ್ಮಕವಾದ ಬುದ್ಧಿಯೇ ಬಾಹ್ಯಾರ್ಥಾಕಾರವಾಗುವದೆಂತಲೂ, *ಆನಂತರಿಕಪ್ರತ್ಯಯವೇ ಮನವೆಂತಲೂ ಬೌದ್ಧರು ಪೇಳುವರು. ಬುದ್ಧಿಯೇ ಸ್ಮೃತಿಪ್ರತ್ಯಕ್ಷಾನುಮಾನ ವಿಪರ್ಯಯ ವಿಕಲ್ಪಭೇದದಿಂದೈದುಪ್ರಕಾರವಾಗುವದೆಂದು ವೈಶೇಷಿಕರು ಪೇಳುವರು. ವಾಸುದೇವನೇ ಪರಮಾತ್ಮನು, ಸಂಕರ್ಷಣನೇ ಜೀವನು, ಪ್ರದ್ಯುಮ್ನನೇ ಅಹಂಕಾರವು, ಅನಿರುದ್ಧನೇ ಬುದ್ಧಿಯೆಂದು ಪಾಂಚರಾತ್ರ ಮತದವರು ಪೇಳುವರು. ನದಿಗಳಿಗೆ ಸಮುದ್ರದಂತೆಯೂ, ಪಥಿಕರಿಗೆ ರಾಜಧಾನಿಯಂತೆಯೂ, ಹೊಂದತಕ್ಕದ್ದು ಬ್ರಹ್ಮ ಬಂದೇ ಆದ್ದರಿಂದ ಇನ್ನೂ ಅನೇಕ ಪ್ರಕಾರವಾಗಿ ಕಲ್ಪನಾಭೇದದಿಂ ಪ್ರಾಜ್ಞರು ಪೇಳುವರು. ಇದರಲ್ಲಿ ಪರಮಾರ್ಥವಂ ತಿಳಿದವರು ಸಾಮರಸ್ಯಜ್ಞಾನದಿಂ ವರಮಾಸಂದರಾಗಿರುವರು. ತಿಳಿಯದವರು ವಿಪರೀತಜ್ಞಾನದಿಂ ಸ್ವಮಾರ್ಗವನ್ನೇ ಸ್ಥಾಪಿಸುತ್ತಾ ನಿರರ್ಥಕವಾಗಿ ವಿವಾದವಂ ಮಾಡುತ್ತಿರುವರು. ಇವರು ಕರ್ಮಮನಶ್ಚಿತ್ತಾದಿಗಳಿಗೆ ಸ್ವಕಲ್ಪನಾಭೇದದಿಂ ಭೇದವಂ ಪೇಳುವರು. ಸ್ನಾನದಾನ ಪರಿಗ್ರಹಾದಿಗಳಿಂ ಪುರುಷನಿಗೆ ಭೇದವಿರುವಂತೆ ಇವುಗಳಿಗೆ ಭೇದವಲ್ಲದೆ ವಸ್ತುತಃ ಭೇದವಿಲ್ಲವೆಂದು ತಿಳಿ

---

*ಆನಂತರಿಕ ಪ್ರತ್ಯಯವೆಂದರೆ ವಸ್ತುಗಳ ದರ್ಶನವಾದಮೇಲೆ ತದಾಕಾರವಾದ ವೃತ್ತಿಜ್ಞಾನವಾಗುವದು ಯಾವದುಂಟೊ ಅದಕ್ಕೆ ಹೆಸರು.

ಯುತಕ್ಕದ್ದು. ಮನಸ್ಸಿದ್ದವನೇ ಸರ್ವವನ್ನು ನೋಡುವನಲ್ಲದೆ ಅದು ಇಲ್ಲದವನು ಯಾವದನ್ನೂ ಮಾಡಲಾರನಾದ್ದರಿಂದ ವಾಸನಾಜೀವ ಕರ್ಮಾದಿ ನಾಮಗಳಂ ಮನವೇ ಪೇಳಲ್ಪಡುವದೆಂದು ನಿಶ್ಚಯಿಸುವನಾಗು. ಪದಾರ್ಥ ದರ್ಶನಕ್ಕೆ ಬೆಳಕಿನಂತೆ ಸರ್ವಪದಾರ್ಥಜ್ಞಾನಕ್ಕೂ, ಸರ್ವಕರ್ಮಾನುಷ್ಠಾನಕ್ಕೂ ಮನವೇ ಕಾರಣವಾಗಿರುವದು. ಮನಸ್ಸು ರಾಗದಿಂ ಬದ್ಧವಾಗಲು ಪುರುಷನು ಬದ್ಧನೆನಿಸುವನು. ಅದು ವೈರಾಗ್ಯದಿಂ ನಿವೃತ್ತವಾಗಲು ಮುಕ್ತನೆನಿಸುವನು. ಯಾವನು ಮನವಂ ಜಡವೆನ್ನುವನೋ ಅವನೇ ಅತಿಜಡನು. ಯಾವನಿಗೆ ಮನವು ಚೇತನವೋ ಅವನಿಗೆ ಸರ್ವವು ಚೇತನವಾಗಿ ಕಾಣುವದು. ಯಾವಾಗ ಜಡಾಜಡವಾದ ಮನವು ಪುಟ್ಟಿತೋ ಆಗಲೇ ವಿಚಿತ್ರವಾದ ಈ ಪ್ರಪಂಚವು ಪುಟ್ಟಿತು. ಮನವು ಜಡವಾದರೂ ಚೇತನವಾದರೂ, ಸಂಸಾರಕ್ಕೆ ಕಾರಣವಾಗಲಾರದು. ಅದು ಜಡಾಜಡಭಾವ ಮಿಶ್ರನಾದ್ದರಿಂದಲೇ ವಿಚಿತ್ರಸುಖದುಃಖ ರಾಗದ್ವೇಷಾತ್ಮಕವಾದ ಈ ಸಂಸಾರವುಂಟಾಗಿರುವದು. ಚಿತ್ತವಿಲ್ಲದಾಗ ಇತರ ಪದಾರ್ಥಜ್ಞಾನವುಂಟಾದರೂ ಅಹಂಕಾರಾದಿಗಳಿಂದಾಗುವ ಸುಖದುಃಖಾದಿಗಳುಂಟಾದರೂ ಚಿತ್ತಕ್ಕಿಂತ ಜೀವಾದಿಗಳು ಬೇರೆಯೆಂದು ಪೇಳಬಹುದು. ಸಮಸ್ತ ಶಕ್ತಿಗಳೂ ಪರಮಾತ್ಮನಲ್ಲೇ ಇರುವದಾದ್ದರಿಂದ ಸ್ವಕಲ್ಪನೆಯಿಂದ ಭೇದವಂ ಪೇಳುವ ಶಾಸ್ತ್ರಕಾರರು ಅಭಿಜ್ಞರಲ್ಲವೆಂತಲೇ ತಿಳಿಯುತಕ್ಕದ್ದು. ಇವರು ತಮ್ಮ ತಮ್ಮಗಳಿಂದುತ್ಪ್ರೇಕ್ಷಿತವಾದ ವಿಷಯಗಳಲ್ಲಿ ಶ್ರದ್ಧಾಜಾಡ್ಯದಿಂ ವಿವಾದಪಡುವರಾದ್ದರಿಂದ ಶಾಸ್ತ್ರವೈಚಿತ್ರ್ಯವುಂಟಾಗಿರುವದು. * ಜಾಡನೆಂಬ ಹುಳುವಿನಿಂದ ತಂತು ಉಂಟಾಗುವಂತೆ ಚಿದ್ರೂಪನಾದ ಪರಮಾತ್ಮನಿಂದ ಜಡವಾದ ಮನವುಂಟಾಗಲು ಅದರಲ್ಲಿ ಅಭೇದಜ್ಞಾನದಿಂ ಚೈತನ್ಯವೇ ಚಿತ್ತವೆನಿಸುವದು. ಆದ್ದರಿಂದ ಜೀವ ಮನೋಬುಧ್ಯಹಂಕಾರಾದಿ ನಾಮಗಳು ಚೈತನ್ಯಕ್ಕೆ ಉಂಟಾಗಿರುವದೆಂದು ನಿಶ್ಚಯಿಸುವನಾಗು. ಎಂದು ಪೇಳುವಲ್ಲಿ ಎಲೈ ಮಹಾಮುನಿಯೆ! ನಿಮ್ಮ ವಚನದಿಂ ಕರ್ಮವೆಂಬ ಸಂಜ್ಞೆಯು ಮನಕ್ಕೆ ಆಗುವದೆಂದು ಶ್ರೀರಾಮನು ಪೇಳಲು ಮರಳಿ ವಸಿಷ್ಠನಿಂತೆಂದನು? ಎಲೈ ರಘುಪುಂಗವನೇ ! ನೀನು ಪೇಳಿದಂತೆಯೇ ಈ ಮನವು ಬಿಸಲಿನಿಂ ಮರುಭೂಮಿಯಂತೆ ಅಜ್ಞಾನ ಜಾಡ್ಯದಿಂ ವ್ಯಾಪ್ತವಾಗಿ ಅದು ಜಲರೂಪದಿಂ ತೋರುವಂತೆ ಸಕಲ ಪ್ರಪಂಚರೂಕದಿಂದಿನೆ ತೋರುತ್ತಿರುವದು. ಸುರನರೋರಗಾದಿ ಶರೀರಗಳಿಗೆ

---

*ಊರ್ಣನಾಭಿಎಂದು ಕರೆಯಲ್ಪಡುವ ಚೇತನರೂಪವಾದ ಜಾಡನೆಂಬಹುಳುವಿನಿಂದ ಜಡವಾದನೂಲು ಉತ್ಪತ್ತಿಯಾಗುವಂತೆ.

ಇದೇ ಕಾರಣವಾದ್ದರಿಂದ ಕರ್ಮವೆನಿಸುವದು. ಲೋಹಕಾಂತ ಪ್ರಭಾವದಿಂ ಲೋಹವು ಚಲಿಸುವಂತೆ ಸರ್ವಾತೀತನಾದ ಆತ್ಮರ ಪ್ರಭಾವದಿಂದೀಮನವು ಚಲಿಸುತ್ತಾ ಪರಾಪರ ಸ್ವರೂಪವಾಗಿರುವದ್ದರಿಂದ ಇದನ್ನೆ ವಿಚಾರಿಸತಕ್ಕದ್ದು. ಸರ್ವರೂಪವಾಗುವ ಈ ಮನಕ್ಕೆ ಜನನ ಮರಣಾದಿಗಳೂಕೂಡ ಉಂಟಾಗುವವು. ಈ ವಿಕಾರಗಳಿಲ್ಲವದ್ದರಿಂದ ಆತ್ಮನು ಇವಕ್ಕಿಂತ ಭಿನ್ನನೆನಿಸುವನು. ವಿಚಾರದಿಂದೀಮನವು ನಷ್ಟವಾಗಲು ಪುನರ್ಜನ್ಮವುಂಟಾಗುವದಿಲ್ಲ. ಎಂದು ಹೇಳುವಲ್ಲಿ ನಿರ್ವಿಕಾರನಾದ ಆತ್ಮನಿಂದ ಸವಿಕಾರವಾದ ಮನವು ಹ್ಯಾಗೆ ಪುಟ್ಟಿತೆಂದು ಶ್ರೀರಾಮನು ಕೇಳಲು ಪುನಃ ವಸಿಷ್ಠನಿಂತೆಂದನು.

ಎಲೈ ರಾಜೀವಾಕ್ಷನೇ ! ಚಿದಾಕಾಶ ಚಿತ್ತಾಕಾಶ ಭೂತಾಕಾಶಗಳು ಯಲ್ಲಾ ಕಡೆಯಲ್ಲೂ ಇರುವವು. ಎಲ್ಲಾ ಕಡೆಯಲ್ಲೂ ಪ್ರಕಾಶಿಸುವದ್ದರಿಂದಲೆ ಆಕಾಶಶಬ್ದವು ಪ್ರಸಿದ್ಧವಾಗಿರುವದು. ಇವರಲ್ಲಿನ ಸ್ವರೂಪದಿಂ ಸತ್ಯಾಸತ್ಯಗಳಿಗೆ ಬೋಧಕವಾಗಿರುವದೆ ಆತ್ಮನೆನಿಸುವದು. ಕೇವಲ ಜಡರೂಪದಿಂ ವಾಯುಮೇಘಾದಿಗಳಿಗೆ ಆಧಾರವಾಗಿರುವದೆ ಭೂತಾಕಾಶವು. ಈ ಎರಡರ ಮಧ್ಯದಲ್ಲಿ ದಿಕ್ಕಾಲಾದಿ ಕಲ್ಪನಾತ್ಮಕವಾಗಿ ಜಡಾಜಡಸ್ವರೂಪದಿಂ ಬಾಧ ಮೋಕ್ಷಗಳಿಗೆ ಸಾಧನವಾಗಿರುವದೆ ಚಿತ್ತಾಕಾಶವೆನಿಸುವದು. ಪ್ರತಿಬಿಂಬದಿಂ ಸ್ವರೂಪಜ್ಞಾನವುಂಟಾಗುವಂತೆ ಎರಡನೇಪದಾರ್ಥದಿಂದಲೆ ಸ್ವರೂಪಜ್ಞಾನವಾಗತಕ್ಕದ್ದಾದ್ದರಿಂದ ಅದ್ವಿತೀಯನಾದ ಆತ್ಮನಿಗೆ ತಾನು ಜಡನೋ ಚೇತನನೋ ಯೆಂದು ಸಂದೇಹವುಂಟಾಗುವದು. ಆದರಿಂದ ಮಲಿನವಾದ ಚಿದಾಕಾಶವೇ ಜಡಾಜಡರೂಪದಿಂ ಚಿತ್ತಾಕಾಶವೆನಿಸುವದು. ಇದೇ ಭಾವನಾಬಲದಿಂ ಭೂತಾಕಾಶವಾಗುವದು. ಹೀಗೆ ಪರಮಾತ್ಮನೇ ಸಸ್ವರೂಪನಾಗಿರುವನಲ್ಲದೆ ಅವನಿಗೆ ಭಿನ್ನವಾದ್ದು ಯಾವದೂ ಇಲ್ಲ. ಉಪದೇಶಕ್ಕೆ ಅಜ್ಞಾನಿಗಳೇ ಪಾತ್ರರಾದ್ದರಿಂದ ಅವರ ಜ್ಞಾನಕ್ಕೋಸುಗ ಈ ವಿವೇಕವು ಹೇಳಲ್ಪಡುವದು. ಶುಕ್ತಿಯಲ್ಲಿ ರಜತದಂತೆ ಸ್ವಾಜ್ಞಾನದಿಂದಲೇ ಪರಮಾತ್ಮನಲ್ಲಿ ಚಿತ್ತಾದಿ ಪ್ರಪಂಚವುಂಟಾಗಿರುವದು. ಈ ಅಜ್ಞಾನದ ಸ್ಥಿತಿಯೇ ಬಂಧವೆಂತಲೂ, ಇದರ ನಾಶವೇ ಮೋಕ್ಷವೆಂತಲೂ ಹೇಳಲ್ಪಡುವದು. ಚಿತ್ತದ ಮುಂಭಾಗದಲ್ಲಿ ವಾಸನಾತ್ಮಕವಾದ ಪ್ರಪಂಚವು ಹಿಂಭಾಗದಲ್ಲಿ ನಿರ್ವಿಕಾರನಾದ ಆತ್ಮನು ಇರುವದ್ದರಿಂದ ಆತ್ಮನಲ್ಲಿ ನಿಲ್ಲಿಸಿದ ಮನವು ಆತ್ಮನ ಮಹಿಮೆಯಂ ವಿಚಾರಿಸುತ್ತಾ ವಾಸನಾ ಶೂನ್ಯವಾಗುವದು. ವಾಸನೆ ಇಲ್ಲದವನೇ ಮುಕ್ತನೆನಿಸುವನು. ವಿವೇಕ ವಿಚಾರಗಳಿಲ್ಲದೆ ವಾಸನಾಬಲದಿಂ ಪ್ರಪಂಚದಲ್ಲಿ ಬಿದ್ದಿರುವನೇ ಬದ್ಧನಾಗಿ ನಾನಾವಿಧ ದುಃಖಗಳನ್ನನು

ಭವಿಸುವನು. ಈ ವಿಷಯದಲ್ಲಿ ಬ್ರಹ್ಮನು ಪೇಳಿದ ಉಪಾಖ್ಯಾನವಂ ಪೇಳು ವೆನು ಸಾವಧಾನನಾಗಿ ಕೇಳುವನಾಗು!

ಜೀ ವೋ ಪಾ ಖ್ಯಾ ನ.

ಎಲೈ ರಾಜೇಂದ್ರನೇ! ಈ * ಭೂತಾಕಾಶಕ್ಕಿಂತಲೂ ಅತಿ ವಿಸ್ತಾರವಾಗಿ ಒಂದೆಡೆಯಲ್ಲಿ ಸುವರ್ಣಮಯವಾದ ಬಾಳೇತೋಟಗಳಿಂದತಿಮನೋಹರವಾಗಿಯುಂ, ಮತ್ತೊಂದೆಡೆಯಲ್ಲಿ ಮುಳ್ಳು ಪೊದೆಗಳಿಂದ ಭಯಂಕರವಾಗಿಯುಂ, ಇನ್ನೊಂದೆಡೆಯಲ್ಲಿ ಕತ್ತಲೆ ಭಾವಿಗಳಿಂದ ಪೊದಲಶಕ್ಯವಾಗಿಯುಂ, ಘೋರ ಶಾಂತವಾದ ಒಂದು ಅರಣ್ಯವಿರುವದು. ಅದರಲ್ಲಿ ಅನೇಕ ಸಹಸ್ರ ಹಸ್ತಗಳಿಂ ಪರಿಘಗಳಂ ಪಿಡಿದು ತನ್ನಂ ತಾನೇ ಹೊಡಕೊಳ್ಳುತ್ತಲಿವ ಒಬ್ಬ ಪುರುಷನಿರುವನು. ಇಂದ್ರನಂತೆ ಸಹಸ್ರ ನೇತ್ರಗಳಿಂದ ಅತ್ತಿತ್ತ ನೋಡುತ್ತಾ † ಉನ್ಮತ್ತನಂತೆಯೂ, ‡ಮತ್ತನಂತೆಯೂ, §ಪ್ರಮತ್ತನಂತೆಯೂ ವ್ಯಾಕುಲವಾದ ಬುದ್ಧಿಯುಳ್ಳವನಾಗಿ ರಾಕ್ಷಸನಂತೆ ಭಯಂಕರವಾಗಿಯು, ಮಹತ್ತರವಾಗಿಯುಂ, ಅತಿ ದೀರ್ಘವಾಗಿಯುಂ ವಿಕಾರವಾದ ಆಕಾರವುಳ್ಳ ಆ ಪುರುಷನು ತನ್ನ ಪೃಷ್ಠಭಾಗವಂ ತಾನೇ ಹೊಡಕೊಳ್ಳುತ್ತಾ ಪೋಡಾಡುತ್ತಿರುವನು. ನಾನಾಪ್ರಕಾರವಾಗಿ ರೋದನವಂ ಮಾಡುತ್ತಾ ನಿಮಿಷಮಾತ್ರದಿಂದನೇಕ ಶತಯೋಜನಗಳನ್ನೋಡಿ ಹೋಗಿ ಶೀಳಿದ ಅಂಗಗಳಿಂ ಶ್ರಮ ಪರವಶನಾಗಿ ಕಗ್ಗತ್ತಲೆಯಿಂ ಘೋರವಾಗಿ ಅತಿ ಗಂಭೀರವಾಗಿರುವ ಒಂದು ಹಾಳುಭಾವಿಗೆ ಆ ಪುರುಷನು ಬಿದ್ದನು. ಅಲ್ಲಿಂದ ಬಹುಕಾಲಕ್ಕೆ ಮೇಲಕ್ಕೆ ಹಾರಿಬಂದು ತನ್ನಂತಾನೇ ಹೊಡದುಕೊಳ್ಳುತ್ತಾ ಬಹುದೂರದಿಂದೋಡಿಬಂದು ಕಾಡುಗಿಚ್ಚಿಗೆ ಬೀಳುವ ಪತಂಗದ ಹುಳುವಿನಂತೆ ಮುಳ್ಳುಪೊದೆಯಂ ನುಗ್ಗಿದನು. ಕ್ಷಣಮಾತ್ರದಿಂದದರಿಂದೀಚೆಗೆ ಬಂದ ಆ ಪುರುಷನು ಚಂದ್ರಕಿರಣದಂತೆ ಅತಿ ಶೀತಳವಾಗಿ ಮನೋಹರವಾಗಿರುವ ಬಾಳೇತೋಟವಂ ಪ್ರವೇಶಿಸಿದನು. ಅಲ್ಲಿ ಕೆಲವುಕಾಲ ಅತಿ ಸಂತೋಷದಿಂ ನಗುಮೊಗನಾಗಿ ಕುಣಿಯುತ್ತಿದ್ದು ಮದದಿಂ ವ್ಯಮರತವನಂತೆ ಪುನಃ ಪಾಳುಭಾವಿಗೆ ಬಿದ್ದನು. ಅಲ್ಲಿಂದೆದ್ದವನು ತನ್ನಂತಾನೇ ಹೊಡಕೊಳ್ಳುತ್ತಾ

* ಭೂತಾಕಾಶಕ್ಕೆ ಪ್ರತಿದ್ವಂದ್ವಿ ಭೌತಿಕಾಕಾಶ; ಇದನ್ನು ಆಕಾಶ ತನ್ಮಾತ್ರೆ ಅಥವಾ ಶಬ್ದ ತನ್ಮಾತ್ರವೆಂದು ಸಾಂಖ್ಯರು ಹೇಳುತ್ತಾರೆ. ಇದಕ್ಕೆ ಅ ಪಂಚೀಕೃತ ಅಥವಾ ಭೂತಸೂಕ್ಷ್ಮವೆಂದು ನಾಮಾಂತರ.

†ಉನ್ಮತ್ತ=ಹುಚ್ಚನು. ‡ ಮತ್ತ=ಮದ್ಯಪಾನಮಾಡಿದವನು.

§ ಪ್ರಮತ್ತ=ಜಾಗರೂಕನಲ್ಲದೆ ಪ್ರಮಾದವುಳ್ಳವನು.

ಮುಳ್ಳುಪೊದೆಯುಂ ನುಗ್ಗಿದನು. ಅಲ್ಲಿಂದ ಮರಳಿ ಕದಳೀವನವಂ ಪ್ರವೇಶಿಸಿದನು. ಈಪರಿಯಿಂ ಮರುಳನಂತೆ ಮರಳಿಮರಳಿ ತಿರುಗುತ್ತಿರುವ ಆ ಪುರುಷನಂ ನಾನು ಕಂಡು ನೀನು ಯಾರೆಂದು ಕೇಳಲು ಅವನು ನನ್ನೊಡನೆ ಮೊಗವಂ ಕೊಟ್ಟು ಮಾತನಾಡದೆ ಸ್ವೇಚ್ಛೆಯಿಂದಲೇ ಓಡಾಡುತ್ತಿದ್ದನು. ಬಳಿಕ ನಾನು ಅವನಂ ಬಲಾತ್ಕಾರದಿಂ ನಿಲ್ಲಿಸಿ ಕೇಳಲು ನಾನು ಯಾವನೂ ಅಲ್ಲ? ನನಿಗೆ ಗಮ್ಯವಾಗಿದ್ದ ಕದಳೀವನ ಮೊದಲಾದ್ದು ಇದು ಯಾವದೂ ಇಲ್ಲ? ನಾನೂ ಒಂದೂ ಮಾಡುವದಿಲ್ಲ, ಮೃತ್ಯುವಿನಂತೆ ಬಂದ ಶತ್ರುವಾದ ನಿನ್ನ ದೃಷ್ಟಿಮಾತ್ರದಿಂದಲೇ ನಾನು ಕೆಟ್ಟೆನೆಂದು ಪೇಳುತ್ತಾ ವಿವರವಾದ ತನ್ನ ಅಂಗಗಳಂ ನೋಡಿಕೊಂಡು ಗುಡುಗುವ ಮೇಘದಂತೆ ಒಂದುಕ್ಷಣ ರೋದನವಂ ಮಾಡಿದನು. ಮರಳಿ ತನ್ನ ಅಂಗಗಳಂ ನೋಡುತ್ತಾ ಸೌಂದರ್ಯದಿಂ ಗರ್ವಿತನಾದ ಪುರುಷನಂತೆ ಅತ್ಯಂತ ಸಂತೋಷದಿಂದಟ್ಟಹಾಸವಂ ಮಾಡಿದನು. ಬಳಿಕ ಅವನ ತಲೆಯು ಕತ್ತರಿಸಿಬಿದ್ದುದು. ಅದೇಪ್ರಕಾರ ಭುಜಗಳು ಉದರೆಯು ಹೊಟ್ಟೆಯು ಸಹ ಬೀಳಲು ಸರ್ವಾಂಗಗಳಂ ಬಿಟ್ಟು ಆ ಪುರುಷನು ದೈವಗತಿಯಿಂದೆಲ್ಲಿಗೋ ಪೋಗಲು ಸಿದ್ಧವಾದನು. ಹೀಗೆ ಆ ಅರಣ್ಯದಲ್ಲಿ ಅನೇಕ ಪುರುಷರಂ ನಾನು ಕಂಡೆನು. ಅವರಲ್ಲಿ ಕೆಲವರು ಕತ್ತಲೆಭಾವಿಗೆ ಬಿದ್ದು ಪುನಃ ಏಳಲಿಲ್ಲ. ಕೆಲವರು ಮುಳ್ಳುಪೊದೆಯಲ್ಲೇ ತಗಲಿಕೊಂಡು ಇದ್ದರು. ಕೆಲವರು ಕದಳೀವನದಲ್ಲೇ ನೆಲಸಿದ್ದರು. ಕೆಲವರು ಭ್ರಾಂತರಂತೆ ಒಂದುಕ್ಷಣವಾದರೂ ಒಂದೆಡೆಯಲ್ಲಿ ನಿಲ್ಲದೆ ತಿರುಗುತ್ತಿದ್ದರು. ಆ ಕಾಡಿನಲ್ಲಿರುವರೆಲ್ಲರಿಗೂ ತಮ್ಮಿಂ ತಾವು ಹೊಡಕೊಳ್ಳುವದು ಸ್ವಭಾವವಾಗಿರುವದು. ಅಲ್ಲಿ ನನಿಗೆ ಯಾರು ಮೊಗವಂ ಕೊಟ್ಟು ಮಾತನಾಡಿದರೂ ಅವರೆಲ್ಲರೂ ಶರೀರವಂ ಬಿಟ್ಟು ಎಲ್ಲಿಗೋ ಪೋದರು. ನನ್ನನ್ನುಪೇಕ್ಷಿಸಿದವರು ಇನ್ನು ತಿರುಗುತಲೇ ಇರುವರು. ಆ ಅರಣ್ಯವಂ ನೀನು ಕಂಡಿದ್ದಾಗ್ಯೂ ಬಾಲ್ಯದಿಂ ಸ್ಮರಿಸದೆ ಇದ್ದೀಯೆ! ಎಂದು ಪೇಳುತ್ತಾ ಆ ಅರಣ್ಯವು ಎಲ್ಲಿರುವದೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ ಜನನಮರಣ ಪರಂಪರೆಯಿಂದತಿಘೋರವಾಗಿ ವಿಚಾರರೂಪವಾದ ದೀಪದಿಂ ಪ್ರಕಾಶವಾಗತಕ್ಕಂಥಾ ಮೋಹಾಂಧಕಾರಮಯವಾದ ಸಂಸಾರರೂಪದಿಂದಿರುವ ಅಜ್ಞಾನನೇ ಅರಣ್ಯವೆನಿಪುದು. ಮನಗಳೇ ಅಲ್ಲಿರುವ ಪುರುಷರು. ದುರಾಲೋಚನೆಗಳೇ ಅವುಗಳ ದೃಷ್ಟಿಗಳು. ಕುಕಲ್ಪನೆಗಳೇ ಭುಜಪ್ರಹಾರಗಳು. ವಾಸನೆಯಿಂದ ಚಲಿಸುವದೇ ಪೋಡಾಟವು. ಆಕಾರಬಾ

ಹುಳ್ಳಿಯಿಂದ ಅನೇಕಸಹಸ್ರ ಕರಗಳೆಂತಲೂ ತಿಳಿಯತಕ್ಕದ್ದು. ನೀನು ಯಾರೆಂದು ಕೇಳಿದವನೇ ವಿವೇಕವು. ಚನ್ನಾಗಿ ವಿವೇಕವುಂಟಾಗಲಿಲ್ಲವಾದ್ದರಿಂದ ಭೋಗಗಳಂ ಬಿಡಲಾರದೆ ದುಃಖಪಟ್ಟದ್ದು ಪರಮಾರ್ಥಜ್ಞಾನದಿಂ ಸ್ವರೂಪ ಸಾಕ್ಷಾತ್ಕಾರವಾದ್ದರಿಂದ ಸಂತೋಷವು ಸಂಕಲ್ಪ ವಿಕಲ್ಪಾತ್ಮಕವಾದ ಸ್ವರೂಪದ ನಾಶವೇ ಪರಮಾನಂದರೂಪವಾದ ಮೋಕ್ಷವು. ಆ ಅರಣ್ಯದಲ್ಲಿ ಬಾಳೇ ತೋಟವೇ ಸ್ವರ್ಗವು. ಪಾಳುಭಾವಿಗಳೇ ನರಕಗಳು. ಮುಳ್ಳುಪೊದೆಗಳೇ ಪತ್ನೀಪುತ್ರಾದಿ ಸಂಸಾರಗಳು. ಮುಂದೆ ಬರುವ ಸುಖದುಃಖಜ್ಞಾನವಿಲ್ಲದೆ ಪ್ರವರ್ತಿಸುವದೇ ತನ್ನಂತಾನು ಹೊಡಕೊಳ್ಳುವದು. ಹೀಗೆ ಮೇಧ್ಯಾಮೇಧ್ಯ ಜ್ಞಾನವಿಲ್ಲದೆ ವಿಹರಿಸುವ ಶಿಶುವಿನಂತೆ ಓಡಾಡುವ ಮನಸ್ಸಿಗೆ ಜೀವನೆಂಬುವದು ಪರ್ಯಾಯನಾಮವೆನ್ನುವರು. ಸರ್ವಶಕ್ತಿಯಾದ ಪರಮಾತ್ಮನ ಮನನಶಕ್ತಿಯೇ ಮನವೆನಿಸುವದು. ಶೂನ್ಯತಾಶಕ್ತಿಯೇ ಆಕಾಶವು, ಸ್ಪಂದಶಕ್ತಿಯೇ ವಾಯುವು. ಪ್ರಕಾಶಶಕ್ತಿಯೇ ತೇಜವು. ದ್ರವಶಕ್ತಿಯೇ ಜಲವು. ಕಾಠಿನ್ಯಶಕ್ತಿಯೇ ಭೂಮಿಯೆಂದು ಹೇಳುವರು. ಜಡಪದಾರ್ಥದಲ್ಲಿ ಜಡಶಕ್ತಿಯು ಚೇತನಪದಾರ್ಥಗಳಲ್ಲಿ ಚೇತನಶಕ್ತಿಯು, ಉತ್ಪತ್ತಿಯಲ್ಲಿ ಉತ್ಪಾದನಶಕ್ತಿಯು, ಸ್ಥಿತಿಯಲ್ಲಿ ಸ್ಥೈರ್ಯಶಕ್ತಿಯು, ನಾಶದಲ್ಲಿ ನಾಶಶಕ್ತಿಯು, ಶೋಕವುಳ್ಳವರಲ್ಲಿ ಶೋಕಶಕ್ತಿಯು, ಆನಂದಪಡುವರಲ್ಲಿ ಆನಂದಶಕ್ತಿಯು, ಜ್ಞಾನಿಗಳಲ್ಲಿ ಜ್ಞಾನಶಕ್ತಿಯು, ಇಚ್ಛೈಸುವರಲ್ಲಿ ಇಚ್ಛಾಶಕ್ತಿಯು, ಕಾರ್ಯಾಸಕ್ತರಲ್ಲಿ ಕ್ರಿಯಾಶಕ್ತಿಯು. ಇದೇಪ್ರಕಾರ ವಿಕಾರ್ಯವಿಕಾರಿಗಳಾದ ಆಯಾಯ ಪದಾರ್ಥಗಳಲ್ಲಿ ಆಯಾಯ ಶಕ್ತಿಗಳು ಪ್ರಕಾಶಿಸುತ್ತಿರುವವು. ದೀಪಕ್ಕೆ ಜ್ವಾಲೆಯಂತೆಯೂ, ವಾಯುವಿಗೆ ಚಲನದಂತೆಯೂ, ಜಲಕ್ಕೆ ದ್ರವದಂತೆಯು, ಶಕ್ತಿ ಶಕ್ತಿಮಂತರಿಗೆ ಭೇದವಿಲ್ಲದ್ದರಿಂದ ಭಯಾಭಯ ವಿಕಾರಾವಿಕಾರ, ಜನನಮರಣ, ಬಂಧಮೋಕ್ಷ, ಸುಖದುಃಖ, ಜ್ಞಾನಾಜ್ಞಾನ, ಸಾಧು ಅಸಾಧು, ಶುಚಿ ಅಶುಚಿ, ಯೋಗ್ಯಾಯೋಗ್ಯ, ಕಾರ್ಯಾಕಾರ್ಯ, ವಾಚ್ಯಾವಾಚ್ಯವೆಂಬುವದೇ ಮೊದಲಾದ ಸಮಸ್ತ ಪದಾರ್ಥಗಳೂ ಬ್ರಹ್ಮವಲ್ಲದೆ ಮತ್ತೊಂದಲ್ಲ. ಅಲೆಸುಳಿಗಳು ಜಲಕ್ಕೆ ಭಿನ್ನವೆಂದು ಹೇಳುವರಂತೆ ಜಡಪದಾರ್ಥದಲ್ಲಿ ದೃಷ್ಟಿಯುಳ್ಳವರು ಪ್ರಪಂಚ ಪರಮಾತ್ಮರಿಗೆ ಭೇದವಂ ಹೇಳುವರು. ಜಲದಲ್ಲಿ ದೃಷ್ಟಿಯುಳ್ಳವರಿಗೆ ಅಲೆಸುಳಿಗಳು ಭಿನ್ನವಾಗದಿರುವಂತೆ ಬ್ರಹ್ಮದಲ್ಲಿ ದೃಷ್ಟಿಯುಳ್ಳವರಿಗೆ ಪ್ರಪಂಚವೆಲ್ಲವು ಬ್ರಹ್ಮರೂಪದಿಂ ಪ್ರಕಾಶಿಸುವದು. ನಾನು ನನ್ನದೆಂಬುವದೇ ಮೊದಲಾದ ಭೇದವೆಲ್ಲವು ಕಲ್ಪಿತವಾದಂಥಾದ್ದು. ಸಮಸ್ತ ಪ್ರಪಂಚವು ಮನಃಕಲ್ಪನಾತ್ಮಕವಾದ್ದರಿಂದ

ಮನಸ್ಸಿಗೆ ಅಧೀನವಾಗಿರುವದು. ಅದರಿಂದ ಜಗವೆಲ್ಲವೂ ಮನವೆಂತಲೇ ಪೇಳಲ್ಪಡುವದು. ಆ ಮನವು ವಿಚಾರದಿಂ ಬ್ರಹ್ಮದಲ್ಲಿ ನೆಲಸಿ ಜಡಭಾವವಂ ಬಿಡಲು ಸರ್ವವು ಬ್ರಹ್ಮವೆಂಬುವದು ಅನುಭವಸಿದ್ಧವಾದ್ದರಿಂದ ಬಂಧ ಮೋಕ್ಷ ಮೊದಲಾದ್ದು ಯಾವದೂ ಸತ್ಯವಲ್ಲವೆಂದು ವಸಿಷ್ಠನು ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿಪ್ರಕರಣದೊಳ್ ಚಿತ್ರೋಪಾಖ್ಯಾನ ನಿರೂಪಣವೆಂಬ ಒಂಭತ್ತನೇ ತರಂಗಕ್ಕೆ ಮಂಗಳಮಹಾ.

## ಹತ್ತನೇ ತರಂಗ ಪ್ರಾರಂಭಃ.

### ಲವಣರಾಜ ಮೋಹ ನಿವೃತ್ತಿ ನಿರೂಪಣ.

ಬಳಿಕ ಶ್ರೀರಾಮಚಂದ್ರನು ವಸಿಷ್ಠನಂ ಕುರಿತಿಂತೆಂದನು. ಎಲೈ ಗುರುವೇ ಪರಮಾತ್ಮನ ಮನನಶಕ್ತಿಸ್ವರೂಪಮಾದ ಮನವು ಯಾವದನ್ನು ಹ್ಯಾಗೆ ನಿಶ್ಚಯಿಸುವದೋ ಅದು ಹಾಗೆ ಆಗುವಂಥಾದ್ದೆಂದು ಅನುಭವಸಿದ್ಧವಾಗುವಲ್ಲಿ ಮನಸ್ಸಿನಿಂದ ಕಲ್ಪಿತವಾದ ಬಂಧವು ಹ್ಯಾಗೆ ಸತ್ಯವಾಗಲಾರದೆಂದು ಕೇಳಲು ವಸಿಷ್ಠನಿಂತೆಂದನು ?

ಎಲೈ ಸೂಕ್ಷ್ಮಮತಿಯೇ ಬ್ರಹ್ಮೇತರಪದಾರ್ಥಸ್ಫುರಣವೇ ಅಜ್ಞಾನವೆನಿಸುವದು. ಅದು ಸಂಶಯ ವಿಪರೀತಭಾವನಾ ಅಸಂಭಾವನೆಗಳೆಂದು ಮೂರುಪ್ರಕಾರವಾಗಿ ಪೇಳಲ್ಪಡುವದು. *ಶುಕ್ತಿಯೋ ರಜತವೋ ಎಂದು ಎರಡು ಪದಾರ್ಥಗಳಂ ಪಿಡಿದಿರುವಂಥಾದ್ದೇ ಸಂಶಯವು, ವ್ಯಾವಹಾರಿಕ ಸತ್ವವನ್ನವಲಂಬಿಸಿರುವ ಶುಕ್ತಿ ರಜತಗಳಲ್ಲಿ ಶುಕ್ತಿಸ್ಮರಣೆಯಿಲ್ಲದೇ ಇದು ರಜತವೆಂಬಂತೆ ಒಂದರಲ್ಲಿ ಮತ್ತೊಂದರ ಕೋರಿಕೆಯೋ ವಿಪರೀತಭಾವನೆಯು ಶುಕ್ತಿ ರಜತದ ಕಟಕವೆಂಬಂತೆ ಸಂಭವಿಸದಿರುವ ಅರ್ಥದಲ್ಲಿ ವಾಙ್ಮಾತ್ರದಿಂ ಸಂಭಾವಿತವೆಂದು ತೋರುವದೇ ಅಸಂಭಾವನೆಯು, ಈ ವಿಪರೀತ ಭಾವನಾ ಸಂಭಾವನಗಳನ್ನೇ ವಿಪರ್ಯಯ ವಿಕಲ್ಪಗಳೆಂದು ಕೆಲವರು ಪೇಳುವರು. ವ್ಯಾವಹಾರಿಕಜ್ಞಾನದಲ್ಲಿಯೂ, ವಿಚಾರದಿಂದಲ್ಲದೆಹೋಗುವ ಪದಾರ್ಥದಲ್ಲಿ ಇದೇ ಎಂದು ತೋರುವದು ವಿಪರೀತಭಾವನಾ ವಿಶೇಷನೆಂತಲೇ ಕೆಲವರು ಪೇಳುವರು. ಅವರ ಮತದಲ್ಲಿ ಸಂಭಾವಿತನಾದ್ದನ್ನಂಗೀಕರಿಸದಿರುವದೇ ಅಸಂಭಾವನೆ ಎನಿಸುವದು. ಮಾತಿನ ಚಮತ್ಕಾರದಿಂದಿದ್ದದ್ದನ್ನಿಲ್ಲವೆಂತಲೂ ಇಲ್ಲದ್ದನ್ನಿದೆಯೆಂತಲೂ ತಿಳಿಯು

*ಶುಕ್ತಿ=ಕಪ್ಪೆಚಿಪ್ಪು; ರಜತ=ಬೆಳ್ಳಿ.

ವದೆ ವಿಕಲ್ಪವೆಂದು ಪರಿಗ್ರಹಿಸತಕ್ಕದ್ದು. ಪ್ರಪಂಚವು ಅದರ ಉತ್ಪತ್ತಿಪ್ರಳಯಗಳು ಬಂಧಮೋಕ್ಷಗಳೂ ಕೂಡ ಅಜ್ಞಾನಿಗಳಿಗೆ ಉಪದೇಶಾರ್ಥವಾಗಿ ಪೊರಮಟ್ಟಿರುವ ಶಾಸ್ತ್ರವಿಶೇಷಗಳು ವಾಕ್ಯಗಳಿಂದಲೇ ವಾಸ್ತವವಾಗಿ ತೋರುತಲಿರುಪವು. ಪಶುಸಮಾನರಾದ ಬಾಲಕರಿಗೆ ಸಮ್ಮತವಾಗುವ ಈ ಅರ್ಥವಂ ಪ್ರಾಜ್ಞನು ಪರಿಗ್ರಹಿಸಲಾಗದು ಪೂರ್ವದೋಳ್ ಒಬ್ಬ ಚತುರೆಯು ತಾನು ಸಾಕುತ್ತಿದ್ದ ಮೊಗುವಿನ ವಿನೋದಾರ್ಥವಾಗಿ ಒಂದು ಕಥೆಯಂ ಪೇಳಿದಳು ಅದೆಂತೆಂದರೆ ?

ಎಲೈ ಮಗುವೇ ! ಒಂದಾನೊಂದೆಡೆಯೋಳ್ ಗಗನವಂತೆ ವಿಸ್ತಾರನಾಗಿಯು ಶೂನ್ಯವಾಗಿಯುಂ ಒಂದು ನಗರವಿರುವದು ಅಲ್ಲಿ ನಾಮರೂಪನೆಂಬ ರಾಜನಿಗೆ ಇರುವಳೆಂತಲೂ, ಇಲ್ಲವೆಂತಲೂ, ಪೇಳಲಶಕ್ಯಳಾದ ಪತ್ನಿಯಲ್ಲಿ ಪುಟ್ಟದೆ ಇರುವರಿಬ್ಬರೂ ಗರ್ಭದಲ್ಲೆ ನಿಲ್ಲದಿದ್ದವನು ಒಬ್ಬನು ಸಹ ಮೂರುಜನಮಕ್ಕಳಾದರು. ಮನೆ, ತೋಟ, ಭಾವಿ, ಕೊಳ, ಕೆರೆ, ಕಟ್ಟೆ, ಕಾಲವೆ, ಹೊಳೆ, ಕೋಟೆ ಕೊತ್ತಳ ಅಗಳು ಅಂಗಡಿ ಬೀದಿ ಮೊದಲಾದ್ದು ಯಾವದೂ ಇಲ್ಲದಿರುವ ಆ ಪಟ್ಟಣದಲ್ಲಿ ಅಂತರಿಕ್ಷದಲ್ಲಿ ಜಲಮಯವಾದ ನಕ್ಷತ್ರಗಳಂತೆ ಪೊಳೆಯುತಲಿರುವ ಮಹಾತ್ಮರಾದ ಆ ರಾಜಕುಮಾರರಿಗೆ ದೈವಗತಿಯಿಂ ತಾಯಿತಂದೆಗಳು ತಪ್ಪಿಹೋಗಿ ರಾಜ್ಯದಲ್ಲೂ ದುರ್ಭಿಕ್ಷದಿಂ ಕ್ಷೋಭೆ ಉಂಟಾಥಲು ಆ ಪುರದಲ್ಲಿದ್ದ ಜನರೆಲ್ಲರು ಒಟ್ಟುಕೂಡಿ ರಾಜ್ಯೈಶ್ವರ್ಯವನ್ನಾಕ್ರಮಿಸಲುದ್ಯೋಗಿಸಲು ಧೈರ್ಯಶೌರ್ಯಾದಿಗಳಿಂದದನ್ನು ನಿಗ್ರಹಿಸುವದಕ್ಕೆ ಶಕ್ತರಾದಾಗ್ಯು ಆ ರಾಜಕುಮಾರರು ಧಾರ್ಮಿಕರಾದ್ದರಿಂದ ಅದನ್ನು ಹಾಗೆ ಹೋಗಲೆಂದು ಬಿಟ್ಟು ಮತ್ತೊಂದು ನಗರವಂ ಸಂಪಾದಿಸಲುದ್ಯುಕ್ತರಾಗಿ ಸಿದ್ಧವಾದ ಐಶ್ವರ್ಯದ ಭಂಗದಿಂ ದುಃಖಿತರಾಗುತ್ತಿರುವಲ್ಲಿ ಒಟ್ಟಾಗಿದ್ದ ಪುರಜನರು ಇವರು ಬದುಕಿದ್ದಲ್ಲಿ ನಮಗೆ ಹಾನಿತಪ್ಪದೆಂದು ಯೋಚಿಸಿ ಅವರ ತಲೆಯಂ ಕತ್ತರಿಸಲು ಅವರು ಮುಖವಿಲ್ಲದವರಾದಾಗ್ಯು ಗಗನದಿಂ ಪೊರಮಡುವ ಬುಧಶುಕ್ರಶನೈಶ್ಚರರಂತೆ ಆ ಶೂನ್ಯ ನಗರದಿಂ ಪೊರಮಟ್ಟರು. ಬಾಗೆಹುವ್ವಿನಂತೆ ಕೋಮಲವಾದ ಅಂಗವುಳ್ಳ ಆ ರಾಜಪುತ್ರರು ಗ್ರೀಷ್ಮಕಾಲದಿ ತಪ್ತವಾಗುವ ಚಿಗರುಗಳಂತೆ ಮಾರ್ಗದಲ್ಲಿ ಸೂರ್ಯಕಿರಣಗಳಿಂ ತಪ್ತರಾದ ಬೆನ್ನುಗಳುಳ್ಳವರಾಗಿ ಬಿಸಲುರುಳದಿಂ ಬೆಂಬೂದಿಯುಂತಿರುವ ಮಾರ್ಗದ ಧೂಳಿನಿಂ ಇಂಪಾದ ಪದ್ಮಗಳು ಬೇಯುವದ್ದರಿಂದಲೂ, ದರ್ಭೆಗಳಿಂದ ಕಾಲುಗಳು ಶೀಳಿಹೋದ್ದರಿಂದಲೂ, ತಂದೆತಾಯಿಗಳಂ ಸ್ಮರಿಸಿಕೊಂಡು ಉಸ್ಸುಉಸ್ಸೆಂದು ನಿಟ್ಟುಸುರುಗಳಂ ಬಿಡುತ್ತಾ

ಬಿಸಲಿನ ತಾಪದಿಂದಲೂ, ಬೆಂದ ಭತ್ತದ ಹೊಟ್ಟಿನಂತಿರುವ ಧೂಳುಗಳು ಬೀಳುವದ್ದರಿಂದಲೂ, ಸಂತಾಪವಧಿಕವಾದ್ದರಿಂದ ಶರೀರ ಸಂಧಿಗಳೆಲ್ಲವೂ ಶಿಥಿಲವಾಗುತ್ತಿರಲು ಬಹುದೂರ ಸಂಚಾರದಿಂ ಬಳಲುತ ದಾರಿಯಲ್ಲಿ ಹುಟ್ಟದೆಯಿರುವ ಎರಡು ಮರಗಳನ್ನು ಹುಟ್ಟಲು ಬೀಜವೇಯಿಲ್ಲದ ಒಂದು ಮರವನ್ನು ಸಹ ಕಂಡರು. ಅವುಗಳ ಗೊಂಚಲು ಚಿಗರುಗಳ ಸೊಬಗನ್ನೋಡಿ ಸಂತುಷ್ಟರಾದ ಆ ಧೊರೆಯ ಮಕ್ಕಳು ಒಂದು ಮರದ ನೆರಳನೊಳ್ಕೊಳತು ಅಮೃತದಂತಿರುವ ಆ ಮರದ ಹಣ್ಣುಗಳಂ ಕುಯಿದು ಅವುಗಳ ರಸವಂಪೀರಿ ಅದರ ಹೂಗುತ್ತಿಗಳ ಮಾಲೆಯಂ ಧರಿಸಿ ಒಂದು ಘಳಿಗೆ ವಿಶ್ರಮಿಸಿಕೊಂಡು ಮರಳಿ ಅಲ್ಲಿಂದ ಹೊರವಟ್ಟು ಬಹುದೂರ ಹೋಗಿ ಮಧ್ಯಾಹ್ನವಾಗಲು ಮಾರ್ಗದಲ್ಲಿ ಮೂರುನದಿಗಳಂ ಕಂಡರು. ಅವುಗಳಲ್ಲಿ ನೀರಿಲ್ಲದ ಎರಡು ನದಿಗಳು, ಒಣಗಿದ ಒಂದು ನದಿಯೂ ಕೂಡ ತುಂಬಿ ತುಳಕಾಡುತ್ತಿರಲು ಹುಟ್ಟುಕುರುಡರಂತೆ ಆ ನದಿಗಳಂ ಕಂಡ ಆ ರಾಜಪುತ್ರರು ಗಂಗೆಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರಂತೆ ಒಣಗಿದ ನದಿಯಲ್ಲಿ ಬಹುಕಾಲ ವೀಜಾಡಿ ಕ್ಷೀರಕ್ಕೆ ಸಮಾನವಾದ ಅದರ ಜಲವಂ ಕುಡಿದು ಕೆಲವುಹೊತ್ತು ವಿಶ್ರಮಿಸಿಕ್ಕೊಂಡು ಅಲ್ಲಿಂದ ಹೊರವಟ್ಟು ಸೂರ್ಯನು ಅಸ್ತಾಚಲವಂ ಹೊಂದುತ್ತಿರಲು, ಮೇಲ್ಗಡೆಯಲ್ಲಿ ಪತಾಕೆಗಳಿಂದಲೂ, ಒಳಗೆ ಹೊರಗೆ ಸುತ್ತಲೂ ಕಮಲಗಳಿಂ ಪೂರ್ಣವಾದ ಸರಸ್ಸುಗಳಿಂದಲೂ, ಆಕಾಶದಂತೆ ಕಪ್ಪಾಗಿ ವಿಸ್ತಾರವಾಗಿರುವ ಜಲಾಶಯಗಳಿಂದಲೂ, ನೆಲದಮೇಲೆ ಇಲ್ಲದಿರುವ ಕೆರೆಕಟ್ಟೆಗಳಿಂದಲೂ, ಪರ್ವತಸಮಾನವಾದ ಕೋಟೆಗಳಿಂದಲೂ, ದೂರದಲ್ಲಿ ಕೇಳತಕ್ಕ ಶ್ರುತಿಸ್ವರವಂ ಹಿಡಿದು ಉಲ್ಲಾಸದಿಂ ಹಾಡುತ್ತಿರುವ ಪುರಜನರಿಂದಲೂ, ಮನೋಹರವಾಗಿರುವ ಭವಿಷ್ಯನ್ನಗರವಂ ಪ್ರವೇಶಿಸಿ ಅಲ್ಲಿ ಗಿರಿಶೃಂಗಗಳಂತೆ ಉನ್ನತವಾಗಿರುವ ಮಣಿಮಯವಾದ ಮೂರು ಮನೆಗಳಂ ಕಂಡರು. ಅವುಗಳಲ್ಲಿ ನಿರ್ಮಾಣವೇ ಇಲ್ಲದ ಎರಡು ಮನೆಗಳು ಗೋಡೆಯಿಲ್ಲದ ಒಂದು ಮನೆಯೂ ಸಹ ತ್ರಿಮೂರ್ತಿಗಳ ಕ್ರೀಡಾಶಾಲೆಗಳಂತೆ ಪ್ರಕಾಶಿಸುತ್ತಿರಲು ಗೋಡೆ ಇಲ್ಲದ ಮನೆಯಂ ಪ್ರವೇಶಿಸಿದ ಆ ರಾಜಸುತರಿಗೆ *ಪುಟಪಾಕ ಪರಿಶುದ್ಧವಾದ ಸುವರ್ಣದ ಪಾತ್ರೆಗಳು ಮೂರು ದೊರಕಿದವು. ಅವುಗಳಲ್ಲಿ ಚೂರುಚೂರಾಗಿದ್ದ ಎರಡು ಪಾತ್ರೆಗಳಂ ಬಿಟ್ಟು ಚೂರ್ಣವಾಗಿದ್ದ ಒಂದು ಪಾತ್ರೆಯಂ ಗ್ರಹಿಸಿ ಬಹು ಭೋಜನಾಪೇಕ್ಷೆಯಿಂದಾಪಾತ್ರೆಯಲ್ಲಿ

*ಪುಟಪಾಕ=ತಾಮ್ರಾದಿ ಲೋಹಮಿಶ್ರವಾದ ಚಿನ್ನವನ್ನು ಅಗ್ನಿಯಿಂದ ಪರಿಶುದ್ಧಿ ಮಾಡುವ ಕ್ರಮವು ಪುಟಪಾಕವೆನಿಸುವದು.

ತೊಂಭತ್ತೊಂಭತ್ತು ಕೊಳಗ ಅಕ್ಕಿಯುಂ ತಂದು ಪಾಕವಂ ಮಾಡಿದರು. ಬಳಿಕ ದೇಹವಿಲ್ಲದ ಇಬ್ಬರನ್ನು ಮುಖವಿಲ್ಲದ ಒಬ್ಬನನ್ನು ಸಹ ಮೂರುಮಂದಿ ಬ್ರಾಹ್ಮಣರನ್ನು ಭೋಜನಕ್ಕೆ ಕರತಂದು ಅವರಿಗೆ ಭೋಜನಕ್ಕೆ ಬಡಿಸಲು ಅವರಲ್ಲಿ ತಲೆಯಿಲ್ಲದ ಒಬ್ಬ ಬ್ರಾಹ್ಮಣನೇ ನೂರುಕೊಳಗ ಅಕ್ಕಿಯ ಅನ್ನವಂ ಭಕ್ಷಿಸಿದನು. ಹೀಗೆ ಸಮಾರಾಧನೆಯುಂ ಮಾಡಿ ಮಿಕ್ಕ ಅನ್ನವಂ ಭಕ್ಷಿಸಿದ ಆ ರಾಜಸುತರು ಸಂತುಷ್ಟರಾಗಿ ಆ ಭವಿಷ್ಯನ್ನಗರವಂ ಸಾಧಿಸಿ ಸುತ್ತಲೂ ಬೇಟೆ ಮೊದಲಾದ ಕ್ರೀಡೆಗಳಂ ವಿಚಿತ್ರವಾಗಿ ಕ್ರೀಡಿಸುತ್ತಾ ಆ ನಗರದಲ್ಲಿ ಸುಖದಿಂ ರಾಜ್ಯಭಾರವಂ ಮಾಡುತ್ತಿದ್ದರು ಎಂದು ಸಾಕುವ ತಾಯಿ ಪೇಳಿದ ಕಥೆಯುಂ ಕೇಳಿದ ಆ ಶಿಶುವು ಸಂತೋಷಪಟ್ಟಿತು. ಈ ಕಥೆಯಂತೆ ಪರಮಾತ್ಮನ ಸಂಕಲ್ಪಮಾತ್ರದಿಂದೀ ಪ್ರಪಂಚವುಂಟಾಗಿರುವದು. ದೃಢವಾದ ಸಂಕಲ್ಪದಿಂದಲೇ ಇದು ಸ್ಥಿತಿಯಂ ಪಡದಿರುಹದು. ಸಮುದ್ರದಲ್ಲಿ ಜಲದಂತೆ ಈ ಪ್ರಪಂಚದಲ್ಲಿ ಸಂಕಲ್ಪವಲ್ಲದೆ ಪುತ್ತೊಂದಿಲ್ಲ. ಅಕ್ಷಯವಾದ ಪರಮಾತ್ಮನಲ್ಲಿ ಕ್ಷಯಿಸುವ ಪದಾರ್ಥಗಳ ಸಂಕಲ್ಪದಿಂದ ಜ್ಞಾನಿಯಾದ ಶಿಶುವು ಮೋಹಪಡುವದಲ್ಲದೆ ಜ್ಞಾನಿಯಾದವನು ಯಾವನೂ ಮೋಹಪಡಲಾರನು. ಆದ್ದರಿಂದ ನೀನು ಪ್ರಪಂಚಭ್ರಾಂತಿಯಂ ಬಿಟ್ಟು ಸರ್ವವನ್ನು ಬ್ರಹ್ಮವೆಂತಲೆ ಭಾವಿಸುವನಾಗು. ಎಂದು ಪೇಳುತ್ತಿರುವಲ್ಲಿ ಎಲೈ ಗುರುವೆ ಈ ಕ್ಷಯಪದಾರ್ಥವಂ ಸಂಕಲ್ಪಿಸಿದವನು ಯಾರು ನಿಮಿತ್ತವೇನೂ ಇಲ್ಲದೆ ಈ ಸಂಸಾರಮೋಹವು ಹ್ಯಾಗೆ ಬಂತೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು.

ಎಲೈ ರಘುಪುಂಗವನೇ ಸ್ವಸಂಕಲ್ಪಕಲ್ಪಿತವಾದ ಈ ಎರಡನೇ ಪದಾರ್ಥದಲ್ಲಿ ಅಭಿಮಾನದಿಂ ಸ್ವಕೀಯಮಹಿಮೆಯುಂ ಮರತ ಪರಮಾತ್ಮನೇ ಭಯಪಟ್ಟ ಬಾಲಕನು ಬೇತಾಳವಂ ಕಲ್ಪಿಸಿಕೊಳ್ಳುವಂತೆ ಕ್ಷಯಸ್ಥಾನವಾದ ಅಹಂಕಾರವಂ ಕಲ್ಪಿಸಿಕೊಂಡಿರುವನು. ಮಮತೆಗೆ ಮೂಲವಾದ್ದರಿಂ *ದ್ವೈತಪ್ರಪಂಚವನ್ನುಂಟುಮಾಡುವ ಈ ಅಹಂಕಾರವು ಆತ್ಮನಿಗೆ ಸ್ವಾಭಾವಿಕವಾದಲ್ಲಿ ಆತ್ಮನ ಅಖಂಡಭಾವಕ್ಕೆ ಹಾನಿ ಬಾದೀತು. ದ್ವೈತವೇ ಸತ್ಯವಾದಲ್ಲಿ ಶ್ರುತಿಗಳೆಲ್ಲವು ಅಪ್ರಮಾಣವಾದಾವು ಅದೇ ಅಪ್ರಮಾಣವಾದಲ್ಲಿ ಲೋಕಮರ್ಯಾದೆಯು ಅವ್ಯವಸ್ಥೆಯಿಂ ಕೆಡುವದಲ್ಲದೆ ಮುಕ್ತಿಸಾಧನವಾದ * ಅಖಂಡಾಕಾರವೃ

---

*"ದ್ವೈತಪ್ರಪಂಚ" ನಾವು ನೋಡುವ ಈ ಜಗತ್ತು ಸುಖದುಃಖ ಪುಣ್ಯಪಾಪ, ಧರ್ಮ ಅಧರ್ಮ ಶೀತ ಉಷ್ಣ ಮೊದಲಾದ ದ್ವಂದ್ವ ಧರ್ಮಗಳಿಂದ ಕೂಡಿದ್ದಾಗಿದೆ ಇದಕ್ಕೆ ದ್ವೈತಪ್ರಪಂಚವೆಂದು ಹೆಸರು.

ತ್ತಿಯು ಯಾರಿಗೂ ಅನುಭವಕ್ಕೆ ಬರದೆ ಇರಬೇಕಾದೀತು. ಅಖಂಡಾಕಾರ ವೃತ್ತಿಯಿಂ ಜೀವನ್ಮುಕ್ತರಾಗಿರುವ ಮಹಾತ್ಮರು ಪ್ರತ್ಯಕ್ಷವಾಗಿರುವದ್ದರಿಂದ ಇಂಥಾ ಕುತರ್ಕವನ್ನಾಲೋಚಿಸಲಾಗದು. ಆದ್ದರಿಂದಲೈ ಸುಮತಿಯೆ ನಶ್ವರವಾದ ದೇಹವನ್ನಾತ್ಮನೆಂದಭಿಮಾನಿಸದೆ ಚಿದ್ರೂಪನಾದ ಆತ್ಮನ ಅಖಂಡಭಾವವನ್ನೇ ವಿಚಾರಿಸುತ್ತಾ ಅಜ್ಞಾನದಿಂ ಪುಟ್ಟಿರುವ ಈ ಅಹಂಕಾರವಂ ಬಿಡುವನಾಗು. ಚೀಲವು ಭಸ್ಮವಾದರೂ ಚೀಲದಲ್ಲಿದ್ದ ವಾಯುವಿಗೆ ಹಾನಿಯಿಲ್ಲದಿರುವಂತೆ ದೇಹಬಿದ್ದುಹೋದರೂ ದೇಹದಲ್ಲಿರುವ ಆತ್ಮನಿಗೆ ನಾಶವಿಲ್ಲವೆಂದು ನಿಶ್ಚಯಿಸುವನಾಗು. ಮೇಘವಾಯುಗಳಿಗೂ, ಕಮಲಭ್ರಮರಗಳಿಗೂ, ಘಟಾಕಾಶಗಳಿಗೂ, ಹ್ಯಾಗೆಸಂಬಂಧವಿರುವದೋ ಹಾಗೆ ದೇಹಾತ್ಮಗಳಿಗೆ ಸಂಬಂಧವಿರುವದೆಂದು ತಿಳಿಯುವವನಾಗು. ದೇಹನಾಶದಿಂ ಜಡಾಜಡವಾದ ಮನಸ್ಸಿಗೆ ನಾಶವಿಲ್ಲದಿರುವಲ್ಲಿ ಚಿನ್ಮಾತ್ರನಾದ ಆತ್ಮನಿಗೆ ಹ್ಯಾಗೆ ನಾಶವಾದೀತು. ಘಟವು ನಷ್ಟವಾಗಲು ಅದರಲ್ಲಿದ್ದ ಎಲಚೀಹಣ್ಣು ಹ್ಯಾಗೆ ಕೈಗೆ ಬರುವದೋ ಹಾಗೆ ದೇಹವು ನಷ್ಟವಾಗಲು ಆತ್ಮನು ಬೇರೇ ನಿಲ್ಲುವನು. ಎಷ್ಟು ಪ್ರಕಾರವಾಗಿ ಅಭಿಮಾನಿಸಿದಾಗ್ಯೂ ಸಂರಕ್ಷಿಸಿದಾಗ್ಯೂ ಮರಣವೆಂಬ ತೆರೆಯಿಂ ಮರೆಯಾಗುತ್ತಲಿರುವ ಅತಿವಂಚಕವಾದ ದೇಹಕ್ಕೋಸುಗ ಅತ್ತು ಪ್ರಯೋಜನವೇನು, ಆದ್ದರಿಂ ನೀನು ಗರುಡನ ಮರಿಯು ತನ್ನ ಮೊಟ್ಟೆಯಂ ಬಿಟ್ಟು ಗಗನಕ್ಕೆ ಹಾರುವಂತೆ ದೇಹ ನಾನೆಂಬ ವಾಸನೆಯುಂಬಿಟ್ಟು ಸ್ವಸ್ವರೂಪದಲ್ಲಿ ನಿಲ್ಲುವನಾಗು. ಅಜ್ಞಾನಾತ್ಮಕವಾದ ಈ ವಾಸನೆಯು ದುಃಖಕ್ಕೋಸುಗವೇ ವೃದ್ಧಿಹೊಂದುತ್ತಿರುವನು ಇಷ್ಟಾನಿಷ್ಟ ಸಂಘಟನೆಯಂ ಮಾಡುವ ಈ ಮಾನಸಶಕ್ತಿಯಿಂದ ಸ್ವಪ್ನದಂತೆ ಭ್ರಾಂತಿಮಯವಾದ ಈ ಪ್ರಪಂಚವು ಕಲ್ಪಿತವಾಗಿ ಅಜ್ಞಾನವಿರುವಪರ್ಯಂತವು ಸತ್ಯವಾಗಿ ತೋರುತ್ತಿರುವದು. ಭಾವನಾಮಾತ್ರಸ್ವರೂಪದಿಂದೀ ಮನವು ಕಾಂತಿಗಳಿಗೆ ಸೂರ್ಯ ಚಂದ್ರರ ಬಿಂಬದಂತೆ ಸಕಲ ಪ್ರಪಂಚ ವ್ಯಾಪಾರಗಳಿಗೂ ಕರ್ತೃತ್ವವಂ ಪಡದಿರುವದು. ಭಾವನಾ

---

* ನಾವು ನೋಡುವ ದೃಶ್ಯಪ್ರಪಂಚದಲ್ಲಿ ಮನೆ ಮಠ ಮೊದಲಾದ ವಸ್ತುಗಳನ್ನು ಖಂಡಖಂಡವಾಗಿ ಎಣಿಕೆಗೆ ತಾರದೆ ಎಲ್ಲಾ ವಸ್ತುಗಳಲ್ಲಿಯೂ ವ್ಯಾಪಕವಾದ ಬ್ರಹ್ಮವಸ್ತುವನ್ನೇ ಅನುಭವಗೋಚರಮಾಡಿಕೊಳ್ಳುವದಕ್ಕೆ ಅಖಂಡಾಕಾರ ವೃತ್ತಿಯಂ ದುಹೆಸರು. ಈ ವೃತ್ತಿಯಲ್ಲಿ ನಮ್ಮ ಮನಸ್ಸು ಬ್ರಹ್ಮಾಕಾರವಾಗಿರುತ್ತದೆ, ಜಗದಾಕಾರವಾಗಿರುವದಿಲ್ಲ. ಈ ವೃತ್ತಿಯು ಸಮಾಧಿಯಲ್ಲಿ ಯೋಗಿಗಳಿಗೆ ಅನುಭವಗೋಚರವಾಗುತ್ತದೆ.

ಮಾತ್ರ ಸ್ವರೂಪದಿಂದಿರುವಂಥಾದ್ದಕ್ಕೆ ವಿಚಾರದಿಂದಲೇ ಲಯವಾಗತಕ್ಕದ್ದಾದ್ದರಿಂದ ನೀನು ಪರಮಾರ್ಥವಿಚಾರದಿಂದಿದನ್ನು ಹೋಗಲಾಡಿಸುವನಾಗು. ಸೂರ್ಯನಿಗೆ ಸೂರ್ಯೋದಯದಿಂ ಹಿಮವು ತಪ್ಪುವಂತೆ ಆತ್ಮನಿಗೂ ಸ್ವಪ್ರಕಾಶದಿಂ ಮನೋಜಾಡ್ಯವು ತಪ್ಪುವದು. ನಿದ್ರಾದಿಗಳಲ್ಲಿ ಮನವು ಹೋದಾಗ್ಯೂ ಅವಿದ್ಯೆ ಇರುವದ್ದರಿಂದ ಶಂಬರಾಸುರನು ಮಾಯೆಯಂ ಮಾಡುವಂತೆ ಮರಳಿ ಮನವಂ ಪ್ರಸವಿಸುವದು. ಸ್ವರೂಪಜ್ಞಾನವಾದ ಸಂಗಡಲೇ ಮಾನಾಭಿಮಾನಿನಿಯಾದ * ಮಾನಿನಿಯಂತೆ ಲಜ್ಜೆಯಿಂದೀ ಅವಿದ್ಯೆಯು ಎಲ್ಲಿಗೋ ಪೋಗುವದು. ದೇಶ ಕಾಲ ವಸ್ತುಗಳಲ್ಲಿ ಸ್ವಲ್ಪವಂ ದೊಡ್ಡದಾಗಿಯು ದೊಡ್ಡದಂ ಸ್ವಲ್ಪವಾಗಿಯು ಇರುವದನ್ನಿಲ್ಲದ್ದಾಗಿಯು ಇಲ್ಲದ್ದನ್ನಿರುವವಾಗಿಯು ಮತ್ತೊಂದು ಪದಾರ್ಥದಂ ಮತ್ತೊಂದಾಗಿಯು ಸುಖವಂ ದುಃಖವಾಗಿಯು, ದುಃಖವಂ ಸುಖವಾಗಿಯು ಮಾಯಾವಿಯಂತೆ ತೋರುವ ಈ ಮನವು ಹುಚ್ಚು ಹಿಡಿದ ನಟನು ಉನ್ಮತ್ತದ ಕಾಯಿಗಳಂ ತಿಂದು ಮದ್ಯವಂ ಕುಡಿದು ಮದವೇರಿ ದೇಹಬೀಳುವದನ್ನು ಕಾಣದೆ ಯಥೇಚ್ಛವಾಗಿ ಕುಣಿಯುವಂತೆ ನಾನಾಪ್ರಕಾರವಾದ ಪ್ರಪಂಚೇಂದ್ರಜಾಲವನ್ನಾಡುತ್ತಾ † ಸ್ವರೂಪಜ್ಞಾನವಾದ ಕೂಡಲೇ ನಷ್ಟವಾಗುವದು. ಮನೋರಥಸಂಕಲ್ಪ ಕಲ್ಪನೆಗಳು ಅಧೀನವಾಗಿರುವದ್ದರಿಂದ ಭಾವಭೇದದಿಂ ನಾನಾರಸಗಳಂ ತೋರುತ್ತಾ ಸ್ವಪ್ನ ಜಾಗರಾದ್ಯವಸ್ಥೆಗಳನ್ನು ಸುಖದುಃಖಗಳನ್ನು, ಜಾಡ್ಯಾಜಾಡ್ಯಗಳನ್ನು ಜನ್ಮ ಮರಣಗಳನ್ನೂ ಕೂಡ ಆ ಕಾಲದಲ್ಲೇ ಪ್ರಕಾಶಪಡಿಸುವದು. ಮನಸ್ಸಿನ ಸಂಕಲ್ಪವು ದೃಢವಾದಂತೆ ತೋರಿದ್ದೆಲ್ಲವು ದೃಶ್ಯವಾಗಿ ನಿಲ್ಲುವದಾದ್ದರಿಂದ, ಸಮಸ್ತ ಸಂಸಾರವು, ಪ್ರಪಂಚವೂ, ಕೂಡ ಮನವೆಂತಲೇ ಪೇಳುವರು. ಈ ವಿಷಯದಲ್ಲಿ ಒಂದು ಉಪಾಖ್ಯಾನವಂ ಪೇಳುವೆನು ಸಾವಧಾನವಾಗಿ ಕೇಳುವನಾಗು.

## ಲ ವ ಣೋ ಪಾ ಖ್ಯಾ ನ .

ಗಗನಮಂಡಲದಲ್ಲಿ ಘಾಳಿಯ ಹೊಡತವಂ ತಾಳಲಾರದೆ ಧರಣಿಯಂ ಶೇರುವ ಮೇಘಮಂಡಲಗಳಂತೆ ವೃಕ್ಷಗಳಿಂ ತುಂಬಿ ಪ್ರಕಾಶಿಸುತ್ತಿರುವ ವನಗಳಿಂದಲೂ, ಸಮುದ್ರದ ಶಿಶುಗಳಂತಿರುವ ಜಲಾಶಯಗಳಿಂದಲೂ, ಮದನ ಮದಾ

---

* ಮಾನಿನೀ=ಹೆಂಗಸು.

† ತಾನು ಸಂಸಾರಿಯಲ್ಲ, ನಿತ್ಯನಾಗಿಯೂ ಜ್ಞಾನರೂಪನಾಗಿಯೂ ಆನಂದರೂಪನಾಗಿಯೂ ಇರುವ ಬ್ರಹ್ಮವಸ್ತುವು ಎಂದು ಸಾಕ್ಷಾತ್ಕರಿಸುವದೇ ಸ್ವರೂಪಜ್ಞಾನವೆನಿಸುವದು.

ಧಿಕ್ಯದಿಂ ಪಾಡುತ್ತಿರುವ ಬೆಡಗುಗಾತಿಯರಾದ ಹುಡುಗಿಯರ ಗಾನದಿಂ ವಿಕಾಸವಂ ಪಡದಿರುವಂತೆ ಸಮೃದ್ಧವಾಗಿ ಬೆಳದಿರುವ ಪೈರುಗಳಿಂ ಪೂರ್ಣವಾದ ಹೊಲ ಗದ್ದೆಗಳಿಂದಲೂ, ಶುಕ, ಶಾರಿಕಾ, ಕಲಕಂಠ, ನೀಲಕಂಠ, ಕಲಹಂಸಾದಿ ಪಕ್ಷಿಗಳ ವಿಲಾಸದಿಂ ಮನೋಹರವಾದ ಉಪವನಗಳಿಂದಲೂ, ಸಿದ್ಧ, ಗಂಧರ್ವ, ಕಿನ್ನರ, ಕಿಂಪುರುಷ, ಯಕ್ಷ, ಚಾರಣ, ವಿದ್ಯಾಧರ ಸುಂದರಿಯರ ವಿಹಾರಸ್ಥಾನವಾದ ಗಿರಿಗಳಿಂದಲೂ, ವಿಹಾರಗಿರಿಗಳ ಗುಹಾಂತರಗಳಲ್ಲಿ ವಿಹರಿಸುವ ನಾಗರಿಕರಗಾನರೀತಿಯಿಂ ನಟಿಸುವ ಕ್ರೀಡಾಮೃಗವಿಹಗಗಳಿಂ ಪೂರ್ಣವಾದ ಗ್ರಾಮಗಳಿಂದಲೂ, ಅಮರಾವತೀ ಮೊದಲಾದ ದಿವ್ಯಪುರಿಗಳ ಸೌಭಾಗ್ಯಗಳಂ ಸಂಗ್ರಹಿಸಿ ನಿರ್ಮಿಸಲ್ಪಟ್ಟಂತಿರುವ ನಗರಗಳಿಂದಲೂ, ಸುಂದರವಾಗಿ ಧಾರ್ಮಿಕರಿಗೆ ವಾಸಯೋಗ್ಯವಾದ ಉತ್ತರಾಪಾಂಡವವೆಂಬ ದೇಶದಲ್ಲಿ ಹರಿಶ್ಚಂದ್ರನವಂಶಕ್ಕೆ ಅಲಂಕಾರಾಸ್ವರೂಪನಾಗಿರುವ ಲವಣನೆಂಬ ಮಹಾರಾಜನು ಭೂಮಿಯಲ್ಲಿ ಅವತರಿಸಿದ ಭಾಸ್ಕರನಂತೆ ಪ್ರಕಾಶದಿಂ ಪ್ರಕಾಶಿಸುತ್ತಾ ರಾಜ್ಯಭಾರವಂ ಮಾಡುತ್ತಿದ್ದನು. ಅವನ ಕೀರ್ತಿಯಿಂಧವಳವಾದ ಗಿರಿಗಳು * ರಜತಾಚಲದ ಸಹೋದರಗಳಂತೆಯೂ, ಸ್ಫಟಿಕರಾಶಿಗಳಂತೆಯೂ, ಭಸ್ಮದಿಂ ಪೂಜಿಸಲ್ಪಟ್ಟ ಶಿವಲಿಂಗಗಳಂತೆಯೂ, ಶೋಭಿಸುತಿದ್ದವು. ಅಂತರಂಗ ಬಹಿರಂಗಗಳಲ್ಲಿ ಶತ್ರುಗಳಂ ನಿಗ್ರಹಿಸಿ ಚತುರತೆಯಿಂದ ಸಜ್ಜನರಂ ರಕ್ಷಿಸುವ ಚಮತ್ಕಾರದಿಂ ಲಕ್ಷ್ಮೀಪತಿಗೆ ಸರಿಯೆನಿಸುವ ಆ ರಾಜೇಂದ್ರನ ಚರಿತ್ರೆಗಳಂ ದೇವತಾಸ್ತ್ರೀರು ಸರ್ವದಾ ಗಾನವಂಮಾಡುವದರಿಂದ ದೇವೋದ್ಯಾನಗಳಲ್ಲಿದ್ದ ಪಕ್ಷಿಗಳೂಕೂಡ ಅವನ ಬಿರುದಾವಳಿ ಪದ್ಯಕಾವ್ಯವಂ ಪಾಡುತ್ತಿದ್ದವು. ಆ ರಾಜನು ಸರ್ವಜ್ಞನಾದರೂ ಕೇಳದವರಿಗೆ ಇಲ್ಲವೆಂಬುವದರಲ್ಲೂ, ಕಪಟ ಕುಟಿಲ ಮಾರ್ಗಗಳಲ್ಲೂ, ಅಜ್ಞನೆನಿಸಿಕೊಂಡನು. ಬ್ರಹ್ಮನ ಹಸ್ತದಲ್ಲಿ ಜಪಮಾಲೆಯಂತೆ ಅವನ ಕರಕಮಲದಲ್ಲಿ ಔದಾರ್ಯಲಕ್ಷ್ಮಿಯು ನಿಯತವಾಗಿ ನೆಲಿಸಿದ್ದಳು. ಒಂದಾನೊಂದು ದಿವಸ ಆ ರಾಜೇಂದ್ರನು ಪ್ರಾತಸ್ಸಂಧ್ಯಾವಂದನಾದಿ ನಿತ್ಯಕರ್ಮಗಳಂ ನೆರವೇರಿಸಿ ಸಭಾಮಂಟಪವನ್ನಲಂಕರಿಸುವಲ್ಲಿ ಎರಡು ಮುಹೂರ್ತವಾಗುತ್ತಿರಲು ಆ ರಾಜನ ವೈಭವವಂ ನೋಡಬೋಸುಗವೋ ಎಂಬಂತೆ ಸೂರ್ಯನು ಸಂಧ್ಯಾರಾಗವೆಂಬ ತೆರೆಯಂ ಚನ್ನಾಗಿ ತೆಗದುಕೊಂಡು ಗಗನವನ್ನೇರುತ್ತಿರಲು, ಮಂಧಿಮಾಗಧರ ಸ್ತುತಿಪಾಠದಿಂದಲೂ, ವಾರನಾರಿಯರ ಗಾನವೈಖರಿಯಿಂದಲೂ, ವೀಣಾವೇಣು ಮುರಜ ಮೃದಂಗಾದಿ ವಾದ್ಯಧ್ವನಿಗಳಿಂದ

* ರಜತಾಚಲದ—ಕೈಲಾಸಪರ್ವತದ.

ಲೂ, ಸೆರೆಥೊರೆಗಳ ನಮಸ್ಕಾರ ಶಬ್ದದಿಂದಲೂ, ಬ್ರಾಹ್ಮಣರ ಆಶೀರ್ವಾದಗಳಿಂದಲೂ, ನಮಿಸುವ ಸೇನಾಪತಿ ದೇಶಾಧಿಪತಿಗಳಂ ತೋರುವ ಕಟ್ಟಿಗೆಯವರ ಕೋಲಾಹಲದಿಂದಲೂ, ಜಯವಿಜಯೀಭವ ಎಂದು ಪೊಗಳುವ ಬಿರುದಾವಳಿ ಪಾಠಕರ ಘೋಷದಿಂದಲೂ, ಸಭಾಮಂಟಪವು ಮೊಳಗುತ್ತಿರೆ ದೇಶಾಂತರ ವೃತ್ತಾಂತವಂ ತಿಳುಪಲೋಸುಗ ಸಮಯವಂ ನೋಡುತಲಿರುವ ಚಾರರು ಸಮೀಪಕ್ಕೆ ಬರುತ್ತಿರಲು, ಪೌರಾಣಿಕರು ಪುರಾಣಗಳಂ ಪಠಿಸುತ್ತಿರಲು, ಮಂತ್ರಿಗಳು ತಮ್ಮ ತಮ್ಮ ರಾಜಕಾರ್ಯಗಳಲ್ಲಿ ಪ್ರವೇಶಿಸುತ್ತಿರಲು, ವಿಚಿತ್ರವಾದ ವೇಷದಿಂದಲೂ, ಘೋಷದಿಂದಲೂ, ಗುಡುಗು ಮಿಂಚು ಇಂದ್ರಚಾಪಗಳಿಂ ಕೂಡಿದ ವರ್ಷಾಕಾಲದ ಮೇಘದಂತೆ ಶೋಭಿಸುತ್ತಿದ್ದ ಒಬ್ಬಾನೊಬ್ಬ ಇಂದ್ರಜಾಲದ ಆಟಗಾರನು ಸಭೆಗೆಬಂದು ಮುಕ್ತಾಮಯವಾದ ಶ್ವೇತಚ್ಛತ್ರದಿಂದಲೂ, ಪಾರ್ಶ್ವಗಳಲ್ಲಿ ವಿಲಾಸಿನಿಯರೂ, ಬೀಸುತ್ತಿರುವ ಚಾಮರಗಳಿಂದಲೂ, ಪ್ರಕಾಶಿಸುತ್ತಾ ಕೆಲಬಲಗಳಲ್ಲಿ ಬೀಳುವ ಬಾಂಬೊಳೆಯ ಪ್ರವಾಹಗಳಿಂದಲೂ ಮೇಲ್ಗಡೆಯಲ್ಲೆಸೆವ ಚಂದ್ರಬಿಂಬದಿಂದಲೂ, ಪ್ರಕಾಶಮಾನವಾದ ಮೇರುವಿನಂತೆ ಶೋಭಿಸುವ ಮಣಿಮಯವಾದ ಸಿಹ್ಮಾಸನದೊಳ್ಕುಳಿತಿರುವ ರಾಜೇಂದ್ರನಂ ಕಂಡು ಕಲ್ಪವೃಕ್ಷವಂಕಂಡ ಕಪಿಯಂತೆ ಓಡಿಬಂದು ಅಭಿವಂದಿಸಿ, ಎಲೈ ಹರಿಶ್ಚಂದ್ರನೇ ! ಚಂದ್ರನು ಭೂಮಿಯಂ ನೋಡುವಂತೆ ನನ್ನ ಇಂದ್ರಜಾಲದ ಆಟವನ್ನೀಡುವನಾಗೆಂದು ಬಿನ್ನವಿಸಿ ಪರಮಾತ್ಮನ ಮಾಯೆಯಂತೆ ಚಿತ್ರವರ್ಣವಾಗಿ ವಿಚಿತ್ರಸೃಷ್ಟಿಕರವಾದ ನವಿಲುಗರಿಯಂ ತಿರುಗಿಸಲು, ಅದರ ಕಾಂತಿಯು ಇಂದ್ರಚಾಪದಂತೆ ಗಗನದಲ್ಲಿ ಪ್ರಕಾಶಿಸುವಲ್ಲಿ ಆ ರಾಜೇಂದ್ರನು ಇಂದ್ರನಂತೆ ನಿಮೇಷರಹಿತನಾಗಿ ನೋಡುತ್ತಿರಲು, ಆಗ ಒಬ್ಬ ಕುದುರೆ ವ್ಯಾಪಾರಿಯು ಧೇನುವಂ ಕರುವಿನಂತೆ ತನ್ನನ್ನನುಸರಿಸಿಕೊಂಡುಬರುವ ದಿವ್ಯವಾದ ಒಂದು ಕುದುರೆಯೊಡನೆ ಆ ಸಭೆಗೆ ಬಂದು ತಾರಕಾಮಂಡಲದಿಂ ಕೂಡಿದ ಗಗನದಲ್ಲಿ ಮೇಘದಂತೆ ಆ ಸಭೆಯಲ್ಲಿ ಶೋಭಿಸುತ್ತಾ ಎಲೈ ರಾಜೇಂದ್ರನೆ ಉತ್ತಮವಾದ ಪದಾರ್ಥವು ಯೋಗ್ಯವಾದ ಸ್ಥಳದಲ್ಲೇ ಇರತಕ್ಕದ್ದಾದ್ದರಿಂದ ಮೂರ್ತಿಯಂ ವಹಿಸಿರುವ ವಾಯುವಿನಂತೆ ವೇಗಶಾಲಿಯಾದ ಈ ಅಶ್ವರತ್ನವನ್ನು ನಮ್ಮ ಧೊರೆಯು ಸ್ವಾಮಿಯವರ ಸನ್ನಿಧಿಗೆ ಒಪ್ಪಿಸಿರುವನೆಂದು ಬಿನ್ನವಿಸುತ್ತಾ ಸಮುದ್ರನು ದೇವೇಂದ್ರನಿಗೆ ಉಚ್ಚೈಶ್ರವವನೊಪ್ಪಿಸುವಂತೆ ಆ ಕುದುರೆಯನ್ನೆದುರಿಗೆ ನಿಲ್ಲಿಸಲು ಎಲೈ ಮಹಾರಾಜನೇ ? ಈ ಕುದುರೆಯನ್ನೇರಿ ಸಪ್ತಾಶ್ವನಂತೆ ನಿಜಪ್ರತಾಪದಿಂ ಪ್ರಕಾಶಿಸುವ ಭುವನವಂ ನೀನು ಸಂಚರಿಸುವ

ನಾಗೆಂದು ಐಂದ್ರಜಾಲಿಕನು ವಿಜ್ಞಾಪಿಸಲು, ಕಾಲಮೇಘವಂ ನವಿಲಿನಂತೆ ಆ ಅಶ್ವವಂ ನೋಡುತ್ತಿದ್ದ ಲವಣಮಹಾರಾಜನು ಆಶ್ಚರ್ಯದಿಂದಲೂ, ಆನಂದದಿಂದ ಲೂ, ಪರವಶನಾದವನಂತೆ ಸ್ತಬ್ಧನಾಗಿರಲೂ ರಾಜೇಂದ್ರನಿಗೆ ಈ ವಿಕಾರವುಂ ಟಾಗುವದಕ್ಕೆ ಕಾರಣವೇನೆಂದು ಛಿಂಶಾತಾರ್ಕಗಳಿಂ ಸಭಾಜನರು ವಿವಶರಾ ಗುತ್ತಾ ಶರತ್ಕಾಲದಿಂದಾಕ್ರಮಿಸಲ್ಪಟ್ಟ ಮೇಘಗಳಂತೆ ವಿವರ್ಣರಾಗುತ್ತಿರುವಲ್ಲಿ ಸ್ತಂಭಿತವಾದ ಚಂದ್ರಕಿರಣಗಳುಳ್ಳ ರಾತ್ರಿಗಳಂತೆ ಚಾಮರಗ್ರಾಹಿಣಿಯರು ಸುಮ್ಮನಿರಲು ಅಗಸ್ತ್ಯಂಕಂಡ ಸಮುದ್ರದಂತೆ ಸ್ತಬ್ಧನಾದ ಆ ರಾಜನು ಅಕಾ ಲನಿದ್ರೆಯಿಂ ಪಿಡಿಯಲ್ಪಟ್ಟವನಂತೆ ಎರಡು ಮುಹೂರ್ತ ಕಣ್ಣುಗಳಂ ಮುಚ್ಚಿ ಕೊಂಡಿದ್ದನು. ಬಳಿಕ ಭೂಕಂಪದಿಂ ಪರ್ವತದಂತೆ ರಾಜನು ಚಲಿಸುವಲ್ಲಿ ಮೇರುವಂ ಕುಲಪರ್ವತಗಳಂತೆ ಎದುರಿಗಿದ್ದ ಜನರು ರಾಜನಂ ಪಿಡಿದು ಕೊಳ್ಳಲು, ಯಚ್ಚರಗೊಂಡ ಆ ರಾಜನು ಈ ದೇಶವು ಯಾವದು? ಯಾರದು ಈ ಸಭೆ? ಎಂದು ಸುತ್ತಲು ನೋಡುತ್ತಿರುವಲ್ಲಿ ಎಲೈ ರಾಜೇಂದ್ರನೆ! ಮಹಾ ತ್ಮನಾದ ನೀನು ನಿರ್ನಿಮಿತ್ತವಾಗಿ ಹೀಗೆ ವಿಕಾರವಂ ಹೊಂದುವಲ್ಲಿ ನಮ್ಮ ಮನಸ್ಸುಗಳು ಹ್ಯಾಗೆ ಭ್ರಾಂತವಾಗಲಾರವು? ವಿವೇಕ ವಿಚಾರಗಳಿಂ ನಿರ್ಮಲ ವಾದ ನಿನ್ನ ಮನವು ಅವಿಚಾರ ರಮಣೀಯವಾದ ಭೋಗದಲ್ಲಿ ಆಸಕ್ತರಾದವರ ಮನದಂತೆ ಮೋಹಪಡುವದಕ್ಕೆ ಕಾರಣವೇನು? ವಿವೇಕಾಭ್ಯಾಸವಿಲ್ಲದ ಮನವೆ ಮಂತ್ರೌಷಧಿ ಮಾಯಾದಿಗಳಿಂ ಭ್ರಮೆಪಡುವದಲ್ಲದೆ ಜ್ಞಾನಿಗಳ ಮನವು ಎಂದಿ ಗೂ ಭ್ರಮೆಪಡಲಾರದೆಂದು ಮಂತ್ರಿಗಳು ಪೇಳುತ್ತಿರುವಲ್ಲಿ ರಾಹುವಿನಿಂದ ಬಿಡಲ್ಪಡುವ ಚಂದ್ರಬಿಂಬದಂತೆ ರಾಜನಮುಖವು ಕಾಂತಿಯುಕ್ತವಾಗಲು ನಗು ಮೊಗನಾದ ಆ ರಾಜೇಂದ್ರನು ಸಾಧಾರಣಸರ್ಪರೂಪದಿಂದಿರುವ ತಕ್ಷಕನು ಮುಂಗಸಿಯಂ ನೋಡುವಂತೆ ಆ ಆಟಗಾರನಂ ನೋಡುತ್ತಾ ಎಲೈ ಮಾಯಾ ಚತುರನಾದ ಐಂದ್ರಜಾಲಿಕನೇ! ಅಲೆಯಿಲ್ಲದ ಸಮುದ್ರಕ್ಕೆ ಚಲನವನ್ನುಂಟು ಮಾಡುವ ಗಾಳಿಯಂತೆ ಪ್ರಸನ್ನವಾದ ನನ್ನ ಮನಸ್ಸಿಗೆ ವಿಕಾರವನ್ನುಂಟುಮಾ ಡುವ ಎಂಥಾ ಆಟವಂ ನೀನು ಆಡಿದವನಾದೆ ಎಂದು ಅವನಂ ನುಡಿದು ಯಲೆ ಲಾ! ಇದೇನು ಅಚ್ಚರಿಯು? ವಿಚಿತ್ರವಿಲಾಸನಾದ ಪರಮಾತ್ಮನ ಶಕ್ತಿಗಳು ನಿಜತತ್ವವಿಚಾರದಿಂ ಧೀರವಾದ ನನ್ನ ಮನವನ್ನೂ ಕೂಡ ಮೋಹಪಡಿಸುವವು ಅಕಟಾ ಜ್ಞಾನಿಗಳ ಮನವೂ ಕೂಡ ತುಚ್ಛವಾದ ವಿಷಯಗಳಿಂದೊಂದುವೇಳೆ ಯಲ್ಲಿ ಮೋಹಪಡುವವು. ಎಲೈ ಸಭಾಜನರುಗಳಿರಾ! ಈ ಮಾಯಾವಿಯಾದ ಆಟಗಾರನು ತೋರಿಸಿದ ಮಾಯಾವಿಲಾಸವಂ ನೀವು ಕೇಳುವರಾಗಿ ಪ್ರಳಯ

ಕಾಲದ ಮೇಘವು ಇಂದ್ರಚಾಪವಂತಿರುಗಿಸುವಂತೆ ಆಟಗಾರನು ನವಿಲುಗರಿಗಳಂ ತಿರುಗಿಸುವಲ್ಲಿ ಬಂದ ಕುದುರೆಯನ್ನು ಮನೋಭ್ರಾಂತಿಯಿಂದೇರಿದ ನಾನು ಗಿರಿಯಮೇಲಣ ಮೇಘದಂತೆ ಪ್ರಕಾಶಿಸುತ್ತಾ ಬೇಟೆಗೆ ಹೊರಟವನಾಗಿ ಅತಿ ವೇಗದಿಂ ಸಮುದ್ರದ ತರಂಗವು ಮರುಭೂಮಿಯಲ್ಲಿ ಬೀಳುವಂತೆ ಗಿಡಗರಿಕೆಗಳೂ ಕೂಡ ಇಲ್ಲದಿರುವ ಒಂದು ಅರಣ್ಯವಂ ಹೊಂದಿದೆನು. ಅತಿದರಿದ್ರನ ಮನೆಯಂತೆ ಶೂನ್ಯವಾಗಿ ಅಜ್ಞಾನಿಯ ಕೋಪದಂತೆ ವಿಷಮವಾಗಿ ಬ್ರಹ್ಮಜ್ಞಾನಿಯ ಮನದಂತೆಯೂ, ಎರಡನೇ ಆಕಾಶದಂತೆಯೂ, ಎಂಟನೇ ಸಮುದ್ರದಂತೆಯು, ಅತಿವಿಸ್ತಾರವಾಗಿ ಸುತ್ತಮುತ್ತಲೂ, ಬಿಸಲುದೊರೆಗಳಿಂ ಕೂಡಿರುವ ಆ ಕಾಡಿನಲ್ಲಿ ಬಡವನಾದ ಗಂಡನಂಪಡದ ಮಾನವತಿಯಾದಹುಡುಗಿಯಂತೆ ಸೂರ್ಯಾಸ್ತಮಯ ಪರ್ಯಂತವು ಬಹು ಕಷ್ಟಪಟ್ಟ ನಾನು ವಿವೇಕದಿಂ ಸಂಸಾರದುಃಖವಂದಾಂಟುವ ಬುದ್ಧಿಶಾಲಿಯಂತೆ ಆ ಕುದುರೆಯಿಂದಲೇ ಆ ಮರುಕಾಂತಾರವಂ ದಾಟಿ ದರಿದ್ರನು ಯಾಚನಾಧನವಂ ಪಡೆವಂತೆ ವೃಕ್ಷಗಳ ಗುಂಪಿನೊಳ್ ಸೊಂಪಿನಿಂ ಇಂಪಾಗಿ ಕೂಗುವ ಹಕ್ಕಿಗಳಿಂದೊಂದೊಂದೆಡೆಯಲ್ಲಿ ಮನೋಹರವಾದ ಮತ್ತೊಂದರಣ್ಯವಂ ಪೊಂದಿದೆನು. ಲೋಕದಲ್ಲಿ ಜನಗಳು ದುಃಖಪಡುವದಕ್ಕಿಂತಲೂ ಸಾಯುವದೇಲೇಸೆಂದು ಪೇಳುವರು. ಮಾನಿನಿಯಾದ ಹೆಂಗಸಾದರೋ ಮಾಂಗಲ್ಯಕ್ಕೆ ಭಂಗ ಬರಬಾರದೆಂಬ ತಾತ್ಪರ್ಯದಿಂ ಗಂಡನು ರೋಗಗಳಿಂ ದುಃಖ ಪಡುತ್ತಿದ್ದಾಗ್ಯು ಪ್ರಾಣಸಹಿತನಾಗಿರಬೇಕೆಂತಲೆ ಪ್ರಾರ್ಥಿಸುವಳು. ಹೀಗೆ ರೋಗಿಯಾದ ಗಂಡನಂಪಡೆದ ಪತಿವ್ರತೆಯಂತೆ ಆ ವನವಂ ಕಂಡ ನನ್ನ ಮನವು ಸ್ವಲ್ಪ ಸಂತೋಷಪಟ್ಟಿತು. ಏಕಾರ್ಣವ ಜಲದಲ್ಲಿ ವಿಹಾರದಿಂ ಬಳಲಿ ಅಲೆಯುತ್ತಿದ್ದ ಮಾರ್ಕಂಡೇಯನುಮಧ್ಯದೊಳ್ ಒಂದು ಬೆಟ್ಟವಂ ಪಡದಂತೆ ಒಂದು ನಿಂಬೇಮರದ ಬುಡವಂ ನಾನು ಶೇರಿದೆನು. ಬಿಸಲಿನ ಝಳದಿಂ ಸಂತಪ್ತನಾಗಿದ್ದ ನಾನು ಹಸಿವು ಬಾಯಾರಿಕೆಗಳಿಂ ಕುದುರೆಯ ಮೇಲೆ ಕುಳ್ಳಿರಲಾರದೆ ತನುವಾಗಿ ಹೆಗಲಿಗೆತಗಲಿದ ಆ ನಿಂಬೆಯ ಕೊಂಬೆಯಂ ಪಿಡಿದೆನು. ಆಗ ಅತಿವೇಗವಾದ ಆ ಕುದುರೆಯು * ಗಂಗಾಸೇವಕನಂ ಬಿಡುವ ಪಾಪಸಮೂಹದಂತೆ ನನ್ನಂ ಬಿಟ್ಟು ಓಡಿಹೋದುದು. ನೀಲವಾದ ಜಲದಮಾಲೆಯಂ ಬಿಸಲಿನಿಂ ಕಾದಿದ್ದ ಬೆಟ್ಟದಂತೆ ಆ ಮರದ ಕೊಂಬೆಯಂ ಪಿಡಿದಿದ್ದ ನಾನು ಆ ಮರದ ಬುಡವಂ ಶೇರಿ

* ಸ್ನಾನಪಾನಾದಿಗಳಿಂದ ಯಾವಾತನು ಗಂಗಾನದಿಯನ್ನು ಸೇವಿಸುತ್ತಾನೊ ಆತನು ಗಂಗಾಸೇವಕನೆನಿಸುವನು.

ಅಸ್ತಾಚಲದಲ್ಲಿ ಸೂರ್ಯನಂತೆ ವಿಶ್ರಮಿಸಿಕೊಂಡೆನು. ಬಳಿಕ ಕ್ಷುದ್ರರಾಜನಂತೆ ಕತ್ತಲೆಯು ಪ್ರಪಂಚವೆಲ್ಲವಂ ವ್ಯಾಪಿಸುತ್ತಿರುವಲ್ಲಿ ಕೇಳಲಸಹ್ಯವಾದ ಕೂಗುಳ್ಳ ರಾತ್ರಿ ಪಕ್ಷಿಗಳು ಸಂಚರಿಸುತ್ತಿರಲು, ಆ ಮರದ ಕೆಳಗಿರುವ ಹುಲ್ಲುಗಳಲ್ಲೇ ನಾನು ಗೂಡಿನಲ್ಲಿಸೇರಿದ ಪಕ್ಷಿಯಂತೆ ಮಲಗಿದೆನು. ಹಸಿವು ಬಾಯಾರಿಕೆಗಳಿಂ ನಿದ್ರೆಬಾರದೆ ಹಾವು ಕಚ್ಚಿದ್ದರಿಂ ಪ್ರಜ್ಞೆತಪ್ಪುವ ಕಪಿಯಂತೆಯೂ, ದುಷ್ಟರಿಗೆಮಾರಲ್ಪಟ್ಟ ಸಾಧುವಿನಂತೆಯೂ. ಕತ್ತಲೆಭಾವಿಯಲ್ಲಿ ಬಿದ್ದವನಂತೆಯೂ, ಮುಗ್ಧನಾಗಿ ಅತಿಕಷ್ಟದಿಂ ಕಲ್ಪಸಮಾನವಾಗಿ ಆ ರಾತ್ರಿಯಂ ಕಳೆದೆನು. ರಾತ್ರಿಯಲ್ಲಿ ಸಂಚರಿಸುವ ದುಷ್ಟಮೃಗಗಳ ಸಮೀಪದಲ್ಲಿರುವ ನಾನು ಚಂಡಾಲ ಗುಂಪಿನಲ್ಲಿ ಬಿದ್ದ ಬ್ರಾಹ್ಮಣನಂತೆ ಸ್ನಾನ ದೇವಾರ್ಚನೆಗಳೇನೂಯಿಲ್ಲದೆ ಶ್ವಪಚನಂತೆಯೇ ಕಾಲಕ್ಷೇಪವಂ ಮಾಡಿದೆನು. ಕರನಾಶದಿಂ ವ್ಯಥೆಪಡುತ್ತಾ ಧೈರ್ಯಗೆಟ್ಟು ಚಿಗರುಗಳೊಡನೆ ನಡುಗುತ್ತಿರುವವ ನನಿಗೆ ಅತಿಕಷ್ಟದಿಂ ದೀರ್ಘವಾದ ಆ ರಾತ್ರಿಯು ಮೆಲ್ಲನೆ ಪೋಗುತ್ತಿರಲು ಉತ್ಪಲಗಳೊಡನೆ ನಕ್ಷತ್ರಗಳು ವಿವರ್ಣವಾಗುತ್ತಿರಲು ಛಳಿಯಿಂ ಗಡಗಡನೆ ನಡುಗುವ ಪ್ರಾಣಿಗಳ ಹಲ್ಲುಸದ್ದುಗಳೊಡನೆ ವೇತಾಳಗಳಕೋಲಾಹಲಗಳಡಗುತ್ತಿರಲು ಕರ್ಮಭ್ರಷ್ಟನಾಗಿರುವ ನನ್ನಂ ನೋಡಿ ನಗುವಂತೆ ಪೂರ್ವದಿಕ್ಕು ಬೆಳುಮೊಗವಾದುದು. ದರಿದ್ರನು ಧನವಂ ಕಾಣುವಂತೆ ಸೂರ್ಯನಂ ಕಂಡ ನಾನು ಜ್ಞಾನವಂ ಪಡೆದ ಅಜ್ಞಾನಿಯಂತೆ ಸಂತುಷ್ಟನಾಗಿ ಮೆಲ್ಲನೆಯೆದ್ದು ಗಜಚರ್ಮವಂ ಕೊಡಹುವ ರುದ್ರನಂತೆ ಹಾಸಿಕೊಂಡಿದ್ದ ಅಂಗವಸ್ತ್ರವಂ ಕೊಡವಿಕೊಂಡು ಜಗದಲ್ಲಿ ಕಾಲನಂತೆ ಆ ವನದಲ್ಲಿ ತಿರುಗುತ್ತಿದ್ದೆನು. ಮೂರ್ಖನಲ್ಲಿ ದೋಷಗಳಂತೆ ವಿಕಾರಿಯಾದ ಮೃಗಪಕ್ಷಿಗಳು ಅಲ್ಲಿ ಗೋಚರವಾದವಲ್ಲದೆ ಗುಣವಂತೆ ಒಬ್ಬ ಮನುಷ್ಯನೂ ಗೋಚರವಾಗಲಿಲ್ಲ. ಹೀಗೆ ನಾನು ತಿರುಗುತ್ತಿರುವಲ್ಲಿ *ಎರಡು ಮುಹೂರ್ತವತಿಕ್ರಮಿಸುತ್ತಿರಲು ಬಳ್ಳಿಗಳಮೇಲೆ ಬಿದ್ದಿದ್ದ ಮಂಜುಗಳು ಒಣಗುತ್ತಿರಲು, ಅನ್ನದಿಂ ತುಂಬಿರುವ ಮಡಿಕೆಯಂ ಪಿಡಿದುಕೊಂಡು ಹೋಗುತ್ತಿದ್ದ ಓರ್ವ ಹುಡಿಗಿಯು ನನಿಗೆ ಗೋಚರವಾದಳು. ಅಮೃತಕುಂಭವಂ ಪಿಡಿದಿರುವ ಮೋಹಿನಿಯಂ ದಾನವನಂತೆ ಅವಳನ್ನನುಸರಿಸುವ ನಾನು ಎಲೌ ಬಾಲೆಯೆ ! ಹಳೇಮರದಲ್ಲಿ ಕೃಷ್ಣಸರ್ಪದಂತೆ ನನ್ನಲ್ಲಿ ಹಸಿವು ವೃದ್ಧಿಹೊಂದುತ್ತಿರುವದ್ದರಿಂದ ನಿನ್ನ ಹಸ್ತದಲ್ಲಿರುವ ಅನ್ನವನ್ನೀ ಆಪತ್ಕಾಲದಲ್ಲಿ ನನಿಗೆ ಕೊಡುವವಳಾಗು. ದೀನನಾಗಿ ಯಾಚಿಸುವ ನನಿಗೆ ಉಪಕಾರವಂ ಮಾಡಿದ್ದ

* ಮುಹೂರ್ತಕ್ಕೆ ಎರಡು ಘಳಿಗೆಗಳು.

ರಿಂದ ನಿನಗೆ ಸಂಪತ್ತು ವೃದ್ಧಿಯಾಗುವದೆಂದು ಬೇಡಿಕೊಂಡೆನು. ಆದಾಗ್ಯೂ ಆ ಹುಡಗಿಯು ಪಾಪಿಯಂ ತಿರಸ್ಕರಿಸುವ ಲಕ್ಷ್ಮಿಯಂತೆ ನನಗೆ ಸ್ವಲ್ಪವಾದರೂ ಕೊಡದೆ ಮರಗಳಲ್ಲಿ ಮರೆಯಾಗಿ ಪೋಗುತ್ತಿದ್ದಳು. ಚಲಿಸುತ್ತಿರುವ ತಾರಕೆಯಿಂದಲೂ, ಮಲಿನವಾದ ಅಂಬರದಿಂದಲೂ, ವೈಗಪ್ಪಿನಿಂದಲೂ, ಮಳೆಗಾಲದ ಕೃಷ್ಣರಾತ್ರಿಯಂತಿರುವ ಆ ಹುಡಗಿಯನ್ನು ಚಂದ್ರನಂತೆ ನಾನು ಬೆಂಬಿಡದೆ ಪೋಗುತ್ತಿರಲು ಎಲೈ ಮನುಜೋತ್ತಮನೇ! ಹಾರಕೇಯೂರಾದ್ಯಾಭರಣಗಳ ಧಾರಣೆಯಿಂ ನೀನು ರಾಜನಂತೆ ತೋರುತ್ತೀಯೆ. ರಾಕ್ಷಸಿಯಂತೆ ಅಶ್ವಗಜಾದಿ ಮಾಂಸಗಳಂ ಭಕ್ಷಿಸುವ ಚಂಡಾಲಿಯೆಂದು ನನ್ನಂ ತಿಳಿಯುವನಾಗು. ದುಷ್ಟವಾದ ಅಭಿಲಾಷೆಯುಳ್ಳ ಗ್ರಾಮ್ಯಜನದೊಡನೆ ಸ್ನೇಹದಂತೆ ನನ್ನಿಂದ ನಿನಗೆ ಅನ್ನವು ವಚನಮಾತ್ರದಿಂ ದೊರೆಯಲಾರದು. ನೀನು ನನ್ನಂ ಪರಿಗ್ರಹಿಸುವನಾದರೆ ನಿನಗೆ ಅನ್ನವಂ ಕೊಡುವೆನೆಂದು ಆ ಹುಡಗಿಯು ನುಡಿದಳು. ಆಪತ್ಕಾಲವಾದ್ದರಿಂ ಹಾಗೆಆಗಲಿ ಹ್ಯಾಗಾದರೂ ಪ್ರಾಣವು ರಕ್ಷಿಸತಕ್ಕದ್ದಲ್ಲ ಎಂದು ನಾನು ಪೇಳಲು ಸಂತುಷ್ಟಳಾದ ಆ ಕನ್ಯೆಯು ತನ್ನ ಮಡಿಕೆಯಲ್ಲಿದ್ದ ಅನ್ನದಲ್ಲಿ ಅರ್ಧಭಾಗವಂ ನನಗೆ ಕೊಟ್ಟಳು. ವಿಷ್ಣುಮೋಹಿನಿಯು ಕೊಟ್ಟ ಅಮೃತವನ್ನಿಂದ್ರನಂತೆ ಆ ಅನ್ನವಂ ತಿಂದು ಜಂಬೂಫಲ ರಸವಂಕುಡಿದು ವಿಶ್ರಮಿಸಿಕೊಂಡಬಳಿಕ ಆ ಕನ್ಯೆಯು ಕೈಯಿಂದ ನನ್ನ ಕೈಯ್ಯಂ ಪಿಡಿದುಕೊಂಡು ನರಕವಂ ಯಾತನೆಯು ಪೊಂದುವಂತೆ ಬಂದು ಶ್ಮಶಾನದಲ್ಲಿ ಧೂಳಿ ಧೂಸರಾಂಗನಾಗಿ ಘೋರವಾದ ಆಕಾರದಿಂ ವೇತಾಳನಂತೆ ಉಳುತ್ತಿರುವ ತಂದೆಯ ಸಮೀಪವಂಪೊಂದಿ ಈ ರಾಜನು ತನಗೆ ವರನಾಗಿ ಬಂದಿರುವನಾದ್ದರಿಂದ ಇವನಿಗೆ ತನ್ನಂ ಕೊಟ್ಟು ಮದುವೆಯಂ ಮಾಡುವನಾಗೆಂದು ಬೇಡಿಕೊಂಡಳು. ಆ ಚಂಡಾಲನು ಹಾಗೆ ಆಗಲೆಂದು ಪೇಳಿ ಸಾಯಂಕಾಲದೊಳ್ ಉಳುತ್ತಿದ್ದ ಎತ್ತುಗಳಂ ಬಿಚ್ಚಿಕೊಂಡು ಬೇರೆಬೇರೆಯಾಗಿ ವಿಭಾಗಿಸಿ ಮಡಗಿರುವ ಕಪಿ, ಕೋಳಿ, ಕಾಗೆ ಮುಂತಾದ ಮಾಂಸಗಳಿಂದಲೂ, ರಕ್ತದಿಂ ನೆನದಿರುವ ಪೈರಿರುವ ಭೂಮಿಗಳಲ್ಲಿ ಜೊಯ್ಯೆನುತ ಸೇರಿಕೊಂಡಿರುವ ನೊಣಗಳಿಂದಲೂ, ಪಶೀಕರಳುಗಳಲ್ಲಿ ಅರ್ಧ ತಲೆಯಂ ತೋರುತ್ತಿರುವ ಹಕ್ಕಿಗಳಿಂದಲೂ, ಹಿತ್ತಲು ತೋಟಗಳಲ್ಲಿರುವ ನಿಂಬೇ ಹೋಳುಗಳಲ್ಲಿ ಬೀಳುತ್ತಿರಲು ಕ್ರೂರವಾದ ಹಕ್ಕಿಗಳ ಕಲಕಲಧ್ವನಿಯಿಂದಲೂ, ಹದ್ದುಕಾಗೆಗಳಿಂದಾಕ್ರಮಿಸಲ್ಪಡುವ ಒಣಗುಹಾಕಿರುವ ವಸಾಪಿಂಡಗಳಿಂದಲೂ, ದೃಷ್ಟಿಮೊದಲಾದ ಅಂಗಗಳಲ್ಲಿ ಸ್ರವಿಸುವ ರಕ್ತದಿಂಕೂಡಿದ ಪಶೀತೊಗಲುಗಳಿಂದಲೂ, ನೊಣಗಳು ಮುತ್ತು

ತ್ತಿರುವ ಮಾಂಸಪಿಂಡಗಳಂ ಪಿಡದಿರುವ ಹುಡುಗರಿಂದಲೂ, ಮಕ್ಕಳ ಕೂಗಾಟವಂ ನಿಲ್ಲಿಸಲೋಸುಗ ಅರಚುತ್ತಿರುವ ಚಾಂಡಾಲರಿಂದಲೂ, ಪಿಶಾಚ ಗೃಹದಂತಿರುವ ಕಿರಾತಗ್ರಾಮಕ್ಕೆ ಬಂದು ಅಲ್ಲಿ ತನ್ನ ಮನೆಯೊಳ್ ಶೀಘ್ರವಾಗಿ ತಂದು ಹಾಕಿದ ಬಾಳೆಯಲೆಯುಳ್ಳ ಪೀಠದಮೇಲೆ ನನ್ನಂ ಕುಳ್ಳಿರಿಸಿ ಕೆಂಗಣ್ಣುಳಾದ ತನ್ನ ಪತ್ನಿಯಂ ಕರದು ನಿನ್ನ ಅಳಿಯನು ಬಂದಿರುವನು ನೋಡೆಂದು ಪೇಳಿದನು. ಅವಳು ನನ್ನಂನೋಡಿ ಸಂತುಷ್ಟಳಾಗಲು, ಚರ್ಮದಮೇಲೆ ಕುಳಿತ ನಾನು ಪ್ರತ್ಯಕ್ಷವಾಗಿ ಬಂದ ಪೂರ್ವಪಾಪಗಳಂತಿರುವ ಚಂಡಾಲಾನ್ನಗಳಂ ಭಕ್ಷಿಸಿದೆನು. ಬಳಿಕ ಆ ಚಂಡಾಲನು ಶುಭದಿವಸದಲ್ಲಿ ಭಯಂಕರವಾದ ತಮಟೆಗಳ ಶಬ್ದಗಳಿಂ ದಿಕ್ಕುಗಳು ಮೊಳಗುತ್ತಿರಲು, ಜನ್ಮಾಂತರ ಪಾಪಸಮೂಹವು ಯಾತನೆಯಂ ಕೊಡುವಂತೆ ನನಗೆ ಆ ಮಗಳಂ ಕೊಟ್ಟು ಮದುವೆಯಂ ಮಾಡಿ ಸ್ವಜಾತ್ಯುಚಿತವಾದ ವಸ್ತ್ರಾಭರಣಗಳಂ ನನಗೆ ಕೊಟ್ಟನು. ಏಳುದಿವಸ ಮದುವೆ ಉತ್ಸವವಾದ ಬಳಿಕ ಅವಳಿಂದ ಕೂಡಿದ ನಾನು ಆ ಶಬರಾಲಯದಲ್ಲೆ ಮನೆಯಂ ಕಟ್ಟಿ ಚಾಂಡಾಲವೃತ್ತಿಯಿಂದಲೇ ವೃದ್ಧಿಹೊಂದುತ್ತಾ ದಿನದಿನಕ್ಕೆ ಪುಷ್ಟನೆನಿಸಿಕೊಂಡೆನು. ಮದುವೆಯಾದ ಎಂಟು ತಿಂಗಳು ಕಳದಬಳಿಕ ಪ್ರೌಢೆಯಾದ ಆ ಹುಡುಗಿಯಿಂದೊಡಗೂಡಿದ ನಾನು ಕೃಷ್ಣಪಕ್ಷದ ರಾತ್ರಿಯಿಂಕೂಡಿದ ಕತ್ತಲೆಯಂತೆ ವೃದ್ಧಿಯಂ ಪಡದೆನು. ದುರ್ಬುದ್ಧಿಯಿಂದ ಅನರ್ಥಗಳಂತೆ ಅವಳಿಂದ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು, ಸಹ ಪ್ರಸವಿಸಲ್ಪಟ್ಟವು. ಅವುಗಳಂ ದೊಡ್ಡ ಸಂಸಾರಿಯಾದ ನಾನು ನರಕದಲ್ಲಿ ಬ್ರಹ್ಮಘ್ನನಂತೆ ಶಬರಾಲಯದಲ್ಲಿ ಅನೇಕ ಯಾತನೆಗಳನ್ನನುಭವಿಸಿದೆನು. ಅಲ್ಪಸರಸ್ಸಿನಲ್ಲಿರುವ ಕೂರ್ಮದಂತೆ ಶೀತ ವಾತಾತಪ ಕ್ಲೇಶಗಳಂ ಸಹಿಸಿದೆನು. ಶರೀರಸಹಿತವಾದ ಪಾಪದಂತಿರುವ ನವದೇಹೊರೆಯು ಹೊರಲ್ಪಟ್ಟಿತು. ಹೇನು ಕೂರೆಗಳಿಂ ತುಂಬಿರುವ ಜೀರ್ಣವಾದ ಕೌಪೀನವಂ ಧರಿಸಿದ ನಾನು ವೃಕ್ಷಗಳ ನೆರಳಿನಲ್ಲಿ ವಿಶ್ರಮಿಸಿಕೊಂಡೆನು. ಮಡದಿಯೊಡನೆ ಜಗಳವಾಡಿ ಆ ವ್ಯಥೆಯಿಂ ದುಃಖಪಡುವ ನನಗೆ ದಿಕ್ಕುಗಳೆಲ್ಲವು ಜ್ವಾಲಾರೂಪವಾಗಿ ಕಾಣುತ್ತಿದ್ದವು. ಕುಟುಂಬಭರಣಕ್ಕೋಸುಗ ನಾನು ಹಿಮಗಾಲದಲ್ಲಿ ಕಪ್ಪೆಯಂತೆ ಛಳಿಘಾಳಿಗಳಂಸಹಿಸಲಾರದೆ ವನಗಳಲ್ಲಿ ಹೊಕ್ಕೊಂಡಿದ್ದೆನು. ಸಂಸಾರ ಕಲಹ ದುಃಖಗಳಂ ನನ್ನ ಕಣ್ಣುಗಳಲ್ಲಿ ಕಂಣೀರರೂಪದಿಂ ರಕ್ತವೇ ಹರಿದುದು. ಹಂದಿಗಳ ಮಾಂಸವಂ ತಿನ್ನುತ್ತಾ ಮಳೆಗಾಲದಲ್ಲಿ ಶಿಲಾತಲದೊಳ್ ಕಾಲವಂ ಕಳದೆವು. ನರಕದಲ್ಲಿರುವರು. ಕರಳುಗಳಂ ಕೊಂಡುಕೊಂಡು ತಿನ್ನುವಂತೆ ಹುಲಿಗಳ

ಮಾಂಸದ ಚೀಲಗಳಂ ತಿಂದೆನು. ಮಡದಿ ಮಕ್ಕಳ ದುರುಳತನದಿಂ ಬಂಧು ಗಳ ಕ್ರೂರೋಕ್ತಿಗಳಿಂ ನನ್ನ ಮುಖವು ಖಿನ್ನವಾದುದು. ಅವರಿಗೆ ಹೆದರಿದ ನಾನು ಬಹುಕಾಲ ಕಂಡವರ ಮನೆಯಲ್ಲಿ ಸೇರಿಕೊಂಡಿದ್ದೆನು. ಬಟ್ಟೆಯಿಲ್ಲದ ನನ್ನ ಶರೀರವಂ ಮೃತ್ಯುವಿನ ಬಾಣಗಳಂತೆ ಹಿಮವಂತನ ಗಾಳಿಗಳು ಶಿಥಿಲವ ನ್ನಾಗಿ ಮಾಡಿದವು. ಬಂಧುಗಳ ಕಲಹದಿಂ ಗ್ರಾಮವಂ ಬಿಟ್ಟನಾನು ವನಗಳಂ ಸೇರಿ ಶ್ರಾವೆಗಳಲ್ಲಿ ಬೇಯಿಸಿದ ಮಾಂಸಗಳಂ ತಿಂದುಕೊಂಡಿದ್ದೆನು. ಕೆಲವು ಕಾಲ ಶಬರ ಗ್ರಾಮಗಳಲ್ಲೇ ಮಾಂಸವಿಕ್ರಯವಂ ಮಾಡುತ್ತಿದ್ದೆನು. ವಿಂಧ್ಯದ ಗುಹೆಗಳಂ ಸೇರಿಕೊಂಡಿದ್ದ ನನಗೆ ಕೆಲವುಕಾಲ ಗುದ್ದಲಿಯೇ ಬಂಧುವಾಗಿ ದ್ದುದು. ಮಾಂಸದಾಶೆಯಿಂಬರುವ ನಾಯಿಗಳನ್ನಟ್ಟುತ್ತಾ ಮಾಂಸಮಯವಾದ ಅನ್ನಗಳಂ ಮಡದಿ ಮಕ್ಕಳುಗಳಿಗೆ ಹಾಕಿದೆನು. ಕೆಲವು ರಾತ್ರಿಗಳಲ್ಲಿ ಕಪಿ ಯಂತೆ ಛಳಿಯಿಂ ನಡುಗುತ್ತಾ ವೃಕ್ಷಗಳಲ್ಲಿ ಸೇರಿಕೊಂಡಿದ್ದೆನು. ಕೆಲವುಕಾಲ ಗಾಣಗಳಿಂದಲೂ, ಬಲೆಗಳಿಂದಲೂ, ಮೃಗ ಪಕ್ಷಿ ಮೀನು ಮೊದಲಾದವುಗಳಂ ಹಿಡಿದು ಮಾಂಸವ್ಯಾಪಾರವಂ ಮಾಡುತ್ತಿದ್ದೆನು. ಆಗ ನನಗೆ ತನುಬಿಸಿಯಾದ ಮೃಗಗಳ ರಕ್ತವು ಮಾತೃವಿನ ಸ್ತನ್ಯಕ್ಕಿಂತಲೂ ರುಚಿಯಾಗಿದ್ದುದು. ಜರೆಯಿಂ ಶಿಥಿಲವಾದ ಶರೀರವುಳ್ಳ ನಾನು ಕ್ಷುತ್ತಂ ತಾಳಲಾರದೇ ಮಾಂಸಖಂಡಗಳಿಗೋ ಸುಗ ಮಡದಿ ಮಕ್ಕಳುಗಳೊಡನೇ ಜಗಳವಾಡಿದೆನು. ಮಲಿನ ಶರೀರನಾಗಿ ಪಿಶಾಚಗಳೊಡನೇ ಕ್ರೀಡಿಸುತ್ತಾ ಕಲ್ಪಕಾಲದಲ್ಲಿ ಪಾಶವಂ ಹಿಡದಿರುವ ಕಾಲ ಯಮನಂತೆ ಬಲೆಗಳಂ ಹಿಡಿದು ವನಗಳಲ್ಲಿ ಸುತ್ತಿದೆನು. ಶ್ಮಶಾನಗಳಲ್ಲಿ ಮಲಭ ಕ್ಷಕನಾಗಿ ರಕ್ತಪಾನಾಶಕ್ತನಾಗಿದ್ದ ನನ್ನಿಂದ ಪಿಶಾಚಗಳೂ ಕೂಡ ಓಡಿಸಲ್ಪ ಟ್ಟವು. ಆಟಗಾರನಂತೆ ಮಾಯಾಮಯ ವ್ಯಾಪಾರದಿಂದನೇಕ ಜನಗಳಿಗೆ ವಂಚ ನೆಯಂ ಮಾಡಿ ಧನವಂ ಸಂಪಾದಿಸಿದೆನು. ಸಕಲ ಪ್ರಾಣಿಗಳಿಗೂ ಮೃತ್ಯುವಿ ನಂತೆ ಭಯಂಕರನಾದೆನು. ಶೌರಿಯು ಶೇಷಶಯನದಲ್ಲಿ ಮಲಗುವಂತೆ ಕೆಲವು ದಿನ ಮೂಢೆಯರ ಕುಚಭಾಗದೊಳ್ ಮಲಗಿದೆನು. ಬಿಸಲು ಬೇಗೆಯಿಂ ದುಂಟಾದ ಕಾಡುಗಿಚ್ಚುಗಳಿಂದಲ್ಲಲ್ಲಿ ಹುಲ್ಲು ಮನೆಗಳು ದಗ್ಧವಾಗುವಲ್ಲಿ ಅಲ್ಲಿ ಪಕ್ವವಾದ ಪ್ರಾಣಿಗಳಂ ತಿಂದುಕೊಂಡು ಅಲ್ಲಲ್ಲಿ ಹೊಸ ಹೊಸ ಮನೆಗಳಂ ಕಟ್ಟಿಕೊಂಡೆನು. ಹೀಗೆ ಅರವತ್ತು ವರ್ಷಗಳು ನರಕದಲ್ಲಿರುವನಂತಿದ್ದ ನನ್ನಿಂದ ಕಳೆಯಲ್ಪಡಲು ನನಗೆ ಚನ್ನಾಗಿ ಜರೆಯುಂಟಾದ್ದರಿಂದ ನನ್ನ ಮೈಕೂದಲು ಗಳು ವಣಹುಲ್ಲುಗಳಂತೆ ಬಿಳುಪಾಗುತ್ತಿರಲು ಜೀರ್ಣವಾದ ಪರ್ಣಗಳಂತೆ ಸುಖದುಃಖಗಳು ನನ್ನಲ್ಲಿ ಬೀಳುತ್ತಿರಲು ಯುದ್ಧದಲ್ಲಿ ಶರಸಮೂಹಗಳಂತೆ

ದುಷ್ಕರ್ಮಗಳು ಸಂಭವಿಸುತ್ತಿರಲು ವಿಂಧ್ಯಭೂಮಿಗೆ ಕ್ರಿಮಿಯಾಗಿ ಎರಡು ಕಾಲಿನ ಕತ್ತೆಯಂತೆ ಮೇಲೆ ಮುಖ್ಯವಾಗಿದ್ದ ನಾನು ಶವದಂತೆ ಪೂರ್ವಜಾತಿಯಂ ಮರೆತು ವೇಷವಿಶೇಷದಿಂ ಮೈಮರೆತವನಂತೆ ಚಂಡಾಲ ಜಾತಿಯವನೆಂತಲೇ ನಿಶ್ಚೈಸಿದೆನು. * ಛಿನ್ನಪಕ್ಷವಾದ ಪರ್ವತದಂತೆ ನನಿಗೆ ಚಂಡಾಲಭಾವವೇ ಸ್ಥಿರವಾಗಲಾಗಿ ಬಂದಾನೊಂದು ಕಾಲದೊಳ್ ಪ್ರಪಂಚಕ್ಕೆ ಅಕಾಲದಲ್ಲಿ ಪ್ರಳಯಬಂದಂತೆಯೂ, ಕಾಡಿನಲ್ಲಿ ಕಿಚ್ಚು ಉಂಟಾದಂತೆಯೂ, ದಡಕ್ಕೆ ಸಮುದ್ರಬಂದಂತೆಯೂ, ಒಣಮರಕ್ಕೆ ಸಿಡಿಲುಬಡಿದಂತೆಯೂ, ಆ ಚಂಡಾಲಮಂಡಲಕ್ಕೆ ಕ್ಷಾಮವುಂಟಾದುದು. ಬಹುಕಾಲ ವೃಷ್ಟಿಯಿಲ್ಲದ್ದರಿಂದಲೂ, ಸುತ್ತುಮುತ್ತಲೂ ಕಾಡುಕಿಚ್ಚಿನ ಗಾಳಿ ಬಡಿಯುವದ್ದರಿಂದಲೂ, ಮಡಗಿದ್ದ ಧನಧಾನ್ಯಗಳು ಅಲ್ಲಲ್ಲೆ ನಷ್ಟವಾದ್ದರಿಂದಲೂ, ವನಗಳು ಬೆಳೆಯಿಲ್ಲದೆ ಪಾಳಾದ್ದರಿಂದಲೂ, ಹುಲ್ಲು ಕಲ್ಲುಗಳೂ ಕೂಡ ಭಸ್ಮವಾಗುವದ್ದರಿಂದಲೂ ಗೆಡ್ಡೆ ಗೆಣಸುಗಳೂ ಕೂಡ ಸುಟ್ಟುಹೋದ್ದರಿಂದಲೂ, ಭಾವಿ ಕೊಳ ಕೆರೆ ಕಟ್ಟೆ ಹೊಳೆಗಳು ಒಣಗಿಹೋದ್ದರಿಂದಲೂ, ಹಶಿವು ಬಾಯಾರಿಕೆಗಳು ತಡೆಯಲಶಕ್ಯವಾದ್ದರಿಂದಲೂ, ಬೆವರಿನಿಂ ಬೆರದು ಬಟ್ಟೆಯಂತೆ ದಟ್ಟವಾದ ಧೂಳುಗಳಿಂ ಮುಚ್ಚಲ್ಪಟ್ಟ ಮೈಯುಳ್ಳ ಆ ಚಂಡಾಲಮಂಡಲವು ದಿಕ್ಕೆಟ್ಟು ಓಡುತ್ತಿರಲು, ದನ ಕರು ಎಮ್ಮೆ ಕೋಣ ಮೊದಲಾದ ಪ್ರಾಣಿಗಳು ಮರುಮರೀಚಿಕಾ ಪ್ರವಾಹಗಳನ್ನೋಡಿನೋಡಿ ಓಡುತ್ತಿದ್ದವು. ಕೆಲವರು ಕಗ್ಗಲಿಯ ಕೆಂಡಗಳಿಂ ಮಾಂಸವೆಂದು ನುಂಗಿದರು. ಕೆಲವರು ಹಿಡಿಯೆಂದು ಕಗ್ಗಲ್ಲುಗಳಿಂ ಕಡಿದರು. ಕೆಲವರು ಮಡದಿ ಮಕ್ಕಳು ನೆಂಟರೊಡನೆ ಗುಂಪುಗೂಡಿ ಈಗ ಜೀವನಕ್ಕೆ ಮಾರ್ಗವೇನೆಂದು ಚಿಂತಿಸಿದರು. ಕೆಲವರು ಹಸಿವು ಬಾಯಾರಿಕೆಗಳಿಂ ತಾಳಲಾರದೆ ತಮ್ಮ ಮೈ ರಕ್ತವನ್ನೇ ಹೀರಿದರು. ತಾಯಿಗೆ ಹೊಟ್ಟೆಯಂ ತೋರುತ ಅಳಲಾರದಿದ್ದ ಬಾಲಕರಿಗೆ ಕಣ್ಣುನೀರುಗಳಿಂದೊಂದುನಿಮಿಷ ಪಾಪ್ಯಾಯನವಾದುದು. ಕೆಲವು ಪ್ರಾಣಿಗಳು ಕೆಮ್ಮಂಣುಗಳಿಂ ಮಾಂಸವೆಂದು ನುಂಗುತ್ತಾ, ಅವು ಗಂಟಲಿಗೆ ಶಿಲುಕಿದ್ದರಿಂದ ಪ್ರಾಣವಂಬಿಟ್ಟವು. ಮದ್ದಾನೆಗಳು ಹಶಿವಂ ತಾಳಲಾರದೆ ಪ್ರಾಣತ್ಯಾಗಕೋಸುಗ ತಾವಾಗಿ ಸಿಹ್ಮವಿರುವ ಗುಹೆಗಳ ಬಾಗಿಲಿಗೆ ಹೋಗಿ ಗರ್ಜಿಸಿದವು. ಗಾಳಿಯು ಕೂಡ ಬಿಸಲುಬೇಸಗೆ ಬೆದರಿದಂತೆ ಚಲಿಸದಿರಲು, ಹಾವುಗಳು ರಕ್ಕೇಗಾಳಿಯ ಕೋರಿಕೆಯಿಂ ನವಿಲುಗಳಿಗೆ ಪೋದವು. ಜೀವರಿಗೆ ಜೀವಗಳಿಂದಲೇ ಜೀವನವೆಂಬ ವಚನವಾಗಿ ಯೆಲ್ಲರಿಗೂ ಅನುಭವಸಿದ್ಧ

* ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ.

ಮಾಂಸದ ಚೀಲಗಳಂ ತಿಂದೆನು. ಮಡದಿ ಮಕ್ಕಳ ದುರುಳತನದಿಂ ಬಂಧುಗಳ ಕ್ರೂರೋಕ್ತಿಗಳಿಂ ನನ್ನ ಮುಖವು ಖಿನ್ನವಾದುದು. ಅವರಿಗೆ ಹೆದರಿದ ನಾನು ಬಹುಕಾಲ ಕಂಡವರ ಮನೆಯಲ್ಲಿ ಸೇರಿಕೊಂಡಿದ್ದೆನು. ಬಟ್ಟೆಯಿಲ್ಲದ ನನ್ನ ಶರೀರವಂ ಮೃತ್ಯುವಿನ ಬಾಣಗಳಂತೆ ಹಿಮವಂತನ ಗಾಳಿಗಳು ಶಿಥಿಲವನ್ನಾಗಿ ಮಾಡಿದವು. ಬಂಧುಗಳ ಕಲಹದಿಂ ಗ್ರಾಮವಂ ಬಿಟ್ಟನಾನು ವನಗಳಂ ಸೇರಿ ಶ್ರಾವೆಗಳಲ್ಲಿ ಬೇಯಿಸಿದ ಮಾಂಸಗಳಂ ತಿಂದುಕೊಂಡಿದ್ದೆನು. ಕೆಲವು ಕಾಲ ಶಬರ ಗ್ರಾಮಗಳಲ್ಲೇ ಮಾಂಸವಿಕ್ರಯವಂ ಮಾಡುತ್ತಿದ್ದೆನು. ವಿಂಧ್ಯದ ಗುಹೆಗಳಂ ಸೇರಿಕೊಂಡಿದ್ದ ನನಗೆ ಕೆಲವುಕಾಲ ಗುದ್ದಲಿಯೇ ಬಂಧುವಾಗಿದ್ದದು. ಮಾಂಸದಾಶೆಯಿಂಬರುವ ನಾಯಿಗಳನ್ನಟ್ಟುತ್ತಾ ಮಾಂಸಮಯವಾದ ಅನ್ನಗಳಂ ಮಡದಿ ಮಕ್ಕಳುಗಳಿಗೆ ಹಾಕಿದೆನು. ಕೆಲವು ರಾತ್ರಿಗಳಲ್ಲಿ ಕಪಿಯಂತೆ ಛಳಿಯಿಂ ನಡುಗುತ್ತಾ ವೃಕ್ಷಗಳಲ್ಲಿ ಸೇರಿಕೊಂಡಿದ್ದೆನು. ಕೆಲವುಕಾಲ ಗಾಣಗಳಿಂದಲೂ, ಬಲೆಗಳಿಂದಲೂ, ಮೃಗ ಪಕ್ಷಿ ಮೀನು ಮೊದಲಾದವುಗಳಂ ಹಿಡಿದು ಮಾಂಸವ್ಯಾಪಾರವಂ ಮಾಡುತ್ತಿದ್ದೆನು. ಆಗ ನನಗೆ ತನುಬಿಸಿಯಾದ ಮೃಗಗಳ ರಕ್ತವು ಮಾತೃವಿನ ಸ್ತನ್ಯಕ್ಕಿಂತಲೂ ರುಚಿಯಾಗಿದ್ದುದು. ಜರೆಯಿಂ ಶಿಥಿಲವಾದ ಶರೀರವುಳ್ಳ ನಾನು ಕ್ಷುತ್ತಂ ತಾಳಲಾರದೇ ಮಾಂಸಖಂಡಗಳಿಗೋಸುಗ ಮಡದಿ ಮಕ್ಕಳುಗಳೊಡನೇ ಜಗಳವಾಡಿದೆನು. ಮಲಿನ ಶರೀರನಾಗಿ ಪಿಶಾಚಗಳೊಡನೇ ಕ್ರೀಡಿಸುತ್ತಾ ಕಲ್ಪಕಾಲದಲ್ಲಿ ಪಾಶವಂ ಪಿಡದಿರುವ ಕಾಲಯಮನಂತೆ ಬಲೆಗಳಂ ಪಿಡಿದು ವನಗಳಲ್ಲಿ ಸುತ್ತಿದೆನು. ಶ್ಮಶಾನಗಳಲ್ಲಿ ಮಲಭಕ್ಷಕನಾಗಿ ರಕ್ತಪಾನಾಶಕ್ತನಾಗಿದ್ದ ನನ್ನಿಂದ ಪಿಶಾಚಗಳೂ ಕೂಡ ಓಡಿಸಲ್ಪಟ್ಟವು. ಆಟಗಾರನಂತೆ ಮಾಯಾಮಯ ವ್ಯಾಪಾರದಿಂದನೇಕ ಜನಗಳಿಗೆ ವಂಚನೆಯಂ ಮಾಡಿ ಧನವಂ ಸಂಪಾದಿಸಿದೆನು. ಸಕಲ ಪ್ರಾಣಿಗಳಿಗೂ ಮೃತ್ಯುವಿನಂತೆ ಭಯಂಕರನಾದೆನು. ಶೌರಿಯು ಶೇಷಶಯನದಲ್ಲಿ ಮಲಗುವಂತೆ ಕೆಲವು ದಿನ ಮೂಢೆಯರ ಕುಚಭಾಗದೊಳ್ ಮಲಗಿದೆನು. ಬಿಸಲು ಬೇಗೆಯಿಂ ದುಂಟಾದ ಕಾಡುಗಿಚ್ಚುಗಳಿಂದಲ್ಲಲ್ಲಿ ಹುಲ್ಲು ಮನೆಗಳು ದಗ್ಧವಾಗುವಲ್ಲಿ ಅಲ್ಲಿ ಪಕ್ವವಾದ ಪ್ರಾಣಿಗಳಂ ತಿಂದುಕೊಂಡು ಅಲ್ಲಲ್ಲಿ ಹೊಸ ಹೊಸ ಮನೆಗಳಂ ಕಟ್ಟಿಕೊಂಡೆನು. ಹೀಗೆ ಅರವತ್ತು ವರ್ಷಗಳು ನರಕದಲ್ಲಿರುವನಂತಿದ್ದ ನನ್ನಿಂದ ಕಳೆಯಲ್ಪಡಲು ನನಗೆ ಚನ್ನಾಗಿ ಜರೆಯುಂಟಾದ್ದರಿಂದ ನನ್ನ ಮೈಕೂದಲುಗಳು ಹಣಹುಲ್ಲುಗಳಂತೆ ಬಿಳುಪಾಗುತ್ತಿರಲು ಜೀರ್ಣವಾದ ಪರ್ಣಗಳಂತೆ ಸುಖದುಃಖಗಳು ನನ್ನಲ್ಲಿ ಬೀಳುತ್ತಿರಲು ಯುದ್ಧದಲ್ಲಿ ಶರಸಮೂಹಗಳಂತೆ

ದುಷ್ಕರ್ಮಗಳು ಸಂಭವಿಸುತ್ತಿರಲು ಮಿಥ್ಯಭೂಮಿಗೆ ಕ್ರಿಮಿಯಾಗಿ ಎರಡು ಕಾಲಿನ ಕತ್ತೆಯಂತೆ ಮೇಲೆ ಮುಖ್ಯವಾಗಿದ್ದ ನಾನು ಶವದಂತೆ ಪೂರ್ವಜಾತಿಯಂ ಮರತು ವೇಷವಿಶೇಷದಿಂ ಮೈಮರೆತವನಂತೆ ಚಂಡಾಲ ಜಾತಿಯವನೆಂತಲೇ ನಿಶ್ಚೈಸಿದೆನು. * ಛಿನ್ನಪಕ್ಷವಾದ ಪರ್ವತದಂತೆ ನನಿಗೆ ಚಂಡಾಲಭಾವವೇ ಸ್ಥಿರವಾಗಲಾಗಿ ಒಂದಾನೊಂದು ಕಾಲದೊಳ್ ಪ್ರಪಂಚಕ್ಕೆ ಅಕಾಲದಲ್ಲಿ ಪ್ರಳಯಬಂದಂತೆಯೂ, ಕಾಡಿನಲ್ಲಿ ಕಿಚ್ಚು ಉಂಟಾದಂತೆಯೂ, ದಡಕ್ಕೆ ಸಮುದ್ರಬಂದಂತೆಯೂ, ಒಣಮರಕ್ಕೆ ಸಿಡಿಲುಬಡಿದಂತೆಯೂ, ಆ ಚಂಡಾಲಮಂಡಲಕ್ಕೆ ಕ್ಷಾಮವುಂಟಾದುದು. ಬಹುಕಾಲ ವೃಷ್ಟಿಯಿಲ್ಲದ್ದರಿಂದಲೂ, ಸುತ್ತುಮುತ್ತಲೂ ಕಾಡುಕಿಚ್ಚಿನ ಗಾಳಿ ಬಡಿಯುವದರಿಂದಲೂ, ಮಡಗಿದ್ದ ಧನಧಾನ್ಯಗಳು ಅಲ್ಲಲ್ಲೆ ನಷ್ಟವಾದ್ದರಿಂದಲೂ, ವನಗಳು ಬೆಳೆಯಿಲ್ಲದೆ ಪಾಳಾದ್ದರಿಂದಲೂ, ಹುಲ್ಲು ಕಲ್ಲುಗಳೂ ಕೂಡ ಭಸ್ಮವಾಗುವದರಿಂದಲೂ ಗೆಡ್ಡೆ ಗೆಣಸುಗಳೂ ಕೂಡ ಸುಟ್ಟುಹೋದ್ದರಿಂದಲೂ, ಭಾವಿ ಕೊಳ ಕೆರೆ ಕಟ್ಟೆ ಹೊಳೆಗಳು ಒಣಗಿಹೋದ್ದರಿಂದಲೂ, ಹಸಿವು ಬಾಯಾರಿಕೆಗಳು ತಡೆಯಲಶಕ್ಯವಾದ್ದರಿಂದಲೂ, ಬೆವರಿನಿಂ ಬೆರದು ಬಟ್ಟೆಯಂತೆ ದಟ್ಟವಾದ ಧೂಳುಗಳಿಂ ಮುಚ್ಚಲ್ಪಟ್ಟ ಮೈಯುಳ್ಳ ಆ ಚಂಡಾಲಮಂಡಲವು ದಿಕ್ಕೆಟ್ಟು ಓಡುತ್ತಿರಲು, ದನ ಕರು ಯಮ್ಮೆ ಕೋಣ ಮೊದಲಾದ ಪ್ರಾಣಿಗಳು ಮರುಮರೀಚಿಕಾ ಪ್ರವಾಹಗಳನ್ನೇಡಿನೋಡಿ ಓಡುತ್ತಿದ್ದವು. ಕೆಲವರು ಕಗ್ಗಲಿಯ ಕೆಂಡಗಳಂ ಮಾಂಸವೆಂದು ನುಂಗಿದರು. ಕೆಲವರು ಹಿಂಡಿಯೆಂದು ಕಗ್ಗಲ್ಲುಗಳಂ ಕಡಿದರು. ಕೆಲವರು ಮಡದಿ ಮಕ್ಕಳು ನೆಂಟರೊಡನೆ ಗುಂಪುಗೂಡಿ ಈಗ ಜೀವನಕ್ಕೆ ಮಾರ್ಗವೇನೆಂದು ಚಿಂತಿಸಿದರು. ಕೆಲವರು ಹಸಿವು ಬಾಯಾರಿಕೆಗಳಂ ತಾಳಲಾರದೆ ತಮ್ಮ ಮೈ ರಕ್ತವನ್ನೇ ಹೀರಿದರು. ತಾಯಿಗೆ ಹೊಟ್ಟೆಯಂ ತೋರುತ ಅಳಲಾರದಿದ್ದ ಬಾಲಕರಿಗೆ ಕಣ್ಣುನೀರುಗಳಿಂದೊಂದುನಿಮಿಷ ಮಾಪ್ಯಾಯನವಾದುದು. ಕೆಲವು ಪ್ರಾಣಿಗಳು ಕೆಮ್ಮಂಣುಗಳಂ ಮಾಂಸವೆಂದು ನುಂಗುತ್ತಾ ಅವು ಗಂಟಲಿಗೆ ಸಿಲುಕಿದ್ದರಿಂದ ಪ್ರಾಣವಂ ಬಿಟ್ಟವು. ಮದ್ದಾನೆಗಳು ಹಸಿವಂ ತಾಳಲಾರದೆ ಪ್ರಾಣತ್ಯಾಗಕೋಸುಗ ತಾವಾಗಿ ಸಿಂಹವಿರುವ ಗುಹೆಗಳ ಬಾಗಿಲಿಗೆ ಹೋಗಿ ಗರ್ಜಿಸಿದವು. ಗಾಳಿಯು ಕೂಡ ಬಿಸಲುಬೇಸಗೆ ಬೆದರಿದಂತೆ ಚಲಿಸದಿರಲು, ಹಾವುಗಳು ರಕ್ಕೇಗಾಳಿಯ ಕೋರಿಕೆಯಿಂ ನವಿಲುಗಳಿಗೆ ಪೋದವು. ಜೀವರಿಗೆ ಜೀವಗಳಿಂದಲೇ ಜೀವನವೆಂಬ ವಚನವಾಗಿ ಯೆಲ್ಲರಿಗೂ ಅನುಭವಸಿದ್ಧ

* ಕತ್ತರಿಸಲ್ಪಟ್ಟ ರೆಕ್ಕೆಗಳುಳ್ಳ.

ವಾದುದು. ಹೆಬ್ಬಾವು ಮೊದಲಾದ ದೊಡ್ಡದೊಡ್ಡ ಜೀವಜಂತುಗಳ ಶರೀರದ ಹೊಗೆಯಿಂ ಕೂಡಿದ ಕಾಡುಗಿಚ್ಚಿನ ಜ್ವಾಲೆಗಳು ಸುತ್ತಮುತ್ತಲೂ ಉತ್ಪಾತ ಸೂಚಕವಾದ ಕೆಮ್ಮೋಡಗಳಂತೆ ಕಾಣುತ್ತಿದ್ದವು. ಮೂರ್ಛೆಯಿಂ ಬಿದ್ದಿರುವ ದೊಡ್ಡಪ್ರಾಣಿಗಳಂ ಚಿಕ್ಕಪ್ರಾಣಿಗಳು ತಿನ್ನುವದ್ದರಿಂದ * ಮಾತ್ಸ್ಯನ್ಯಾಯ ವೂಕೂಡ ಆಗ ವ್ಯತ್ಯಾಸವಾಗಿದ್ದುದು. ಒಂದೊಂದೆಡೆಯಲ್ಲಿ ಗುಹೆಗಳೆಂಬ ತಿದಿಗಳಿಂ ಪೊರಮಡುವ ಗಾಳಿಗೋಸುಗ ಭುಸ್ಸೆನುತ ಪೋಗುವ ಭುಜಗಗಳ ಫೂತ್ಕಾರಗಳು ದಾರಿಗಳಲ್ಲುಂಟಾದ ಕಾಡುಗಿಚ್ಚುಗಳಿಗೆ ವೃದ್ಧಿಕರವಾದವು. ಹೀಗೆ ನಾಲ್ಕುಕಡೆಯಿಂದಲೂ, ಉಂಟಾದ ಬೇಸಿಗೆಯಲ್ಲಿ ಕೆಲವರು ಕಿಚ್ಚುಗಳ ಲ್ಲೂ, ಕೆಲವರು ಪಾಳುಭಾವಿಗಳಲ್ಲೂ, ಬಿದ್ದರು. ಗಿರಿಗಳಮೇಲಿದ್ದ ಕೆಲವರು ಕೆಳಗೆ ಮರುಮರೀಚಿಕಾ ಪ್ರವಾಹಗಳಂಕಂಡು ಲೋಭದಿಂ ಪಾಪಿಗಳಂತೆ ಭೃಗುಪತನವಂ ಮಾಡಿದರು. ಕೆಲವರು ದಿಕ್ಕುದಿಕ್ಕಿಗೆ ಓಡಿಹೋದರು. ಇಂತು ಬಣ್ಣಿಸಲಾಗದ ಕೇಡಿನ ಬೆಳವಳಿಗೆಯಲ್ಲಿ ಮಹತ್ತರವಾದ ಚಮತ್ಕಾರದಿಂ ಕಿಚ್ಚುಗಾಳಿ ಹುಲಿ, ಹಾವು, ಮೊದಲಾದ ಮೃತ್ಯುಗಳೆಲ್ಲವನ್ನು ತಪ್ಪಿಸಿಕೊಂಡು ಮಡದಿ ಮಕ್ಕಳುಗಳೊಡನೆ ಆ ಮಾರ್ಗದಿಂದೋಡುತ್ತಾ ಆ ದೇಶದ ಅಂತ್ಯಭಾಗದಲ್ಲಿರುವ ದೊಡ್ಡ ಪನ್ನೀಮರದ ಬುಡವಂ ಶೇರಿ ಹೆಗಲಿನಿಂದ ಮಕ್ಕಳುಗಳ ನ್ನಿಳುಹಿ ಮಕ್ಕಳು ಮಾಡಿದ ಪುಣ್ಯದಿಂ ನರಕದಿಂ ಹೊರಕ್ಕೆಬಂದವನಂತೆ ಒಂದುಕ್ಷಣ ವಿಶ್ರಮಿಸಿಕೊಂಡೆನು. ನನ್ನ ಹೆಂಡತಿಯಾದ ಚಾಂಡಾಲಿಯುಕೂಡ ವಿಶ್ರಮಿಸಿಕೊಳ್ಳಲಾಗ ಚಿಕ್ಕವನೆಂತಲೂ, ಮಧುರವಾಕ್ಯನೆಂತಲೂ, ಅತಿ ಪ್ರೀತಿ ಪಾತ್ರನಾದ ಪೃಚ್ಛಕನೆಂಬ ನನ್ನ ಮಗನು ಬಹಳ ಹಸಿವಿನಿಂದ ಬಳಲುತ ಓ ತಾದೆಯೇ ತಿನ್ನುವದಕ್ಕೆ ಮಾಂಸವನ್ನೂ, ಕುಡಿಯಲು ರಕ್ತವನ್ನು ಸನಿಗೆ ಕೊಡೆಂದು ನುಡಿಯುತ್ತಾ ನನ್ನ ಮಾಂಸವನ್ನೇ ಬೇಯಿಸಿ ಕೊಡುವೆನು, ಬೇರೆ ಮಾಂಸವು ಇಲ್ಲವೆಂದು ವೈಯ್ಯಂ ಕೊಯ್ಯುವದಕ್ಕೆ ಚೂರಿಯಂತೆಗೆಯುವ ನನ್ನ ಕೈಯ್ಯಂಪಿಡಿದು ತಡದು ಕುಗ್ಗಿದಕಂಠದಿಂದಳಲಾರದಿದ್ದರೂ ತಡೆಯಲಳ ವಲ್ಲದ ದುಃಖದಿಂ ಬಿಕ್ಕಳಿಸಿ ಬಿಕ್ಕಳಿಸಿ ಕಂಣೀರಧಾರೆಯುನಿಕ್ಕುತ ಮೆಲ್ಲನೆ ಅಳುತ್ತಿರಲು, ಆ ಮಗುವಿನ ದುಃಖವಂ ನೋಡಲಾರದ ನಾನು ಸುತ್ತಮುತ್ತಲೂ ಸಿದ್ಧವಾಗಿರುವ ಸವುದೆಗಳಂ ಶೇರಿಸಿ ದೊಡ್ಡಚಿತಿಯುಂಮಾಡಿ ಸಮೀಪದಲ್ಲೆ ಉರಿಯುತ್ತಿದ್ದ ಕಾಡುಗಿಚ್ಚಿನ ಕೊಳ್ಳಿಯಂ ತಾದು ಹಚ್ಚಿಸಿ ಜ್ವಲಿಸುವ ಜ್ವಾ

*ಚಿಕ್ಕಮೀನನ್ನು ದೊಡ್ಡ ಮೀನು ನುಂಗುವದು, ಅದನ್ನು ಅದಕ್ಕಿಂತಲೂ ದೊಡ್ಡ ಮೀನು ನುಂಗುವದು, ಇದೇ "ಮಾತ್ಸನ್ಯಾಯ".

ಲೆಯಿಂದಲೂ, ಚಟಚಟ ಶಬ್ದದಿಂದಲೂ, ನನ್ನಂ ಕರೆಯುವಂತಿರುವ ಆ ಚಿತಿಯಲ್ಲಿ ಬಿದ್ದು ಅವರ ಉರಿಯಂ ತಾಳಲಾರದೆ ಹೊರಳಿ ಬೀಳುವಲ್ಲಿ ಇಲ್ಲಿಯ ಜಯಶಬ್ದದಿಂದೆಚ್ಚೆತ್ತು ಪರಿಜನರಿಂ ಪಿಡಿಯಲ್ಪಟ್ಟಿರುವ ಈ ಶರೀರವಂ ನಾನು ಕಂಡೆನು. ಇಂತು ಈ ಆಟಗಾರನಿಂದೆನಗೆ ಮೋಹ ಉಂಟಾಯಿತೆಂದು ಲವಣರಾಜನು ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿ ಪ್ರಕರಣದೊಳ್ ಲವಣರಾಜ ಮೋಹನಿವೃತ್ತಿ ನಿರೂಪಣವೆಂಬ ಹತ್ತನೇ ತರಂಗಕ್ಕೆ ಮಂಗಳಮಹಾ.

## ಹನ್ನೊಂದನೇ ತರಂಗ ಪ್ರಾರಂಭಃ.

### ಮನಶ್ಚಿತ್ರಸಪ್ತಭೂಮಿಕಾವಿವರಣ.



ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಟನಿಂತೆಂದನು. ಎಲೈ ರಘುವರನೇ ! ಇಂತು ಆ ಲವಣರಾಜನು ಮಂತ್ರಿಗಳಂಕುರಿತು ಪೇಳುವಲ್ಲಿ ಆ ಆಟಗಾರನು ಅದೃಶ್ಯವಾಗಲು ಅದಂಕಂಡು ಆಶ್ಚರ್ಯಪಟ್ಟ ಮಂತ್ರಿಗಳು ಸರ್ವಶಕ್ತಿಯಾದ ಪರಮಾತ್ಮನ ವಿಲಾಸವೇ ಮನವೆನಿಸುವದು. ಆ ಮನದ ವಿಲಾಸವೇ ಸಂಸಾರವೆನಿಸುವದು. ಇದರ ರೀತಿಯಿಂ ತೋರಲೋಸುಗ ಪರಮೇಶ್ವರನ ಮಾಯೆಯೇ ಆಟಗಾರನ ರೂಪದಿಂ ಬಂದುದೆಂದು ತಿಳಿಯತಕ್ಕದ್ದು. ಇವನು ಆಟಗಾರನೇ ಆಗಿದ್ದಲ್ಲಿ ಉಡುಗೆರೆಯಂ ಪಡೆಯದೇ ಪೋಗುವದಕ್ಕೆ ಕಾರಣವೇನೆಂದು ಪೇಳುತ್ತಿದ್ದರು. ಆಗ ಆ ಸಭೆಯಲ್ಲಿದ್ದ ನಾನು ಇದೆಲ್ಲವಂ ಪ್ರತ್ಯಕ್ಷವಾಗಿ ಕಂಡೆನು. ಪದಾರ್ಥಗಳಂ ತೋರಿಸುವದು ಅವುಗಳಂ ಯಥಾಸ್ಥಿತಿಯಾಗಿ ವಿಷಮವಾಗಿಯೂ ಸಹ ತೋರಿಸುವದು, ಮನಸ್ಸೇಅಲ್ಲದೆ ಮತ್ತೊಂದಿಲ್ಲ. ಈ ಮನವು ಕಾಮಿನಿಯಂ ಕಾಮಿಯಂತೆ ವಾಸನೆಯನ್ನನುಸರಿಸಿ ನಡೆಯುವದಾದ್ದರಿಂದ ವಾಸನೆಯಿದ್ದಂತೆ ಪದಾರ್ಥಜ್ಞಾನವುಂಟಾಗುವದು. ಯಾವನಿಗೆ ಬ್ರಹ್ಮವಿಚಾರದಿಂಜ್ಞೇಯವಾಸನೆ ತಪ್ಪುವದೋ ಅವನ ಜ್ಞಾನವು ಮೇಘವರಣವಿಲ್ಲದ ಭಾಸ್ಕರನಂತೆ ಪ್ರಕಾಶಿಸುವದು. ಈ ಮನವೇ ಶ್ರವಣ ಮೊದಲಾದ ಆಯಾಯ ವ್ಯಾಪಾರಗಳಿಂದ ಶ್ರೋತ್ರಾದೀಂದ್ರಿಯನಾಮಗಳಿಂ ಪೇಳಲ್ಪಡುವದು. ಇಂದ್ರಿಯಗಳಿಗೆ ವಿಷಯವಾದ ಪಂಚಭೂತಗಳ ರೂಪದಿಂದ ಮನವೇ ಗೋಚರವಾಗುವದೆಂದು ತಿಳಿಯತಕ್ಕದ್ದು. ಮನವಿದ್ದರೆ ಸಮಸ್ತವು ಉಂಟು. ಮನವಿಲ್ಲದಿರೆ ಏಂದೂ ಇಲ್ಲವಾದ್ದರಿಂದ ಜಗತ್ಕಾರಣವಾದದ್ದು.

ಮನವೆಂತಳೇ ಪೇಳಲ್ಪಡುವದು. ಮನವಿದ್ದಂತೆ ಸ್ತ್ರೀಯು ದೇವತೆಯಾಗಿಯೂ, ದೇವತೆ ಸ್ತ್ರೀಯಾಗಿಯೂ, ಶತ್ರು ಮಿತ್ರನಾಗಿಯೂ, ಮಿತ್ರನು ಶತ್ರುವಾಗಿಯೂ, ವಿಷವಮೃತವಾಗಿಯೂ, ಅಮೃತ ವಿಷವಾಗಿಯೂ, ಇಲ್ಲದ್ದು ಇರುವದಾಗಿಯೂ, ಇರುವದು ಇಲ್ಲದ್ದಾಗಿಯೂ, ಸ್ವಲ್ಪವಧಿಕವಾಗಿಯೂ, ಅಧಿಕವು ಸ್ವಲ್ಪವಾಗಿಯೂ, ಕಪಿ ಶೀಯಾಗಿಯೂ, ಶೀ ಕಪಿಯಾಗಿಯೂ, ಸಮೀಪ ದೂರವಾಗಿಯೂ, ದೂರ ಸಮೀಪವಾಗಿಯೂ, ಸಾಧುವಸಾಧುವಾಗಿಯೂ, ಅಸಾಧು ಸಾಧುವಾಗಿಯೂ, ಘಳಿಗೆ ದಿನವಾಗಿಯೂ, ದಿನವು ಘಳಿಗೆಯಾಗಿಯೂ, ಸುಖವು ದುಃಖವಾಗಿಯೂ, ದುಃಖವು ಸುಖವಾಗಿಯೂ, ತೋರುವದಲ್ಲದೆ ಹಾಗೆ ಅನುಭವಕ್ಕ ಗೋಚರವಾಗುವದು. *ತಂತುವು ದಗ್ಧವಾಗುವಲ್ಲಿ ಮುಕ್ತಿನಸರವು ಶೀಳುವಂತೆ ಮನವು ಜಯಿಸಲ್ಪಡಲು ಇಂದ್ರಿಯ ಸಮೂಹವು ಸ್ವಾಧೀನವಾಗುವದು. ಸರ್ವಭಾವಾನುಸಾರಿಯಾಗಿ ನಿತ್ಯಸಮವಾಗಿ ಸರ್ವಸಾಕ್ಷಿಯಾಗಿಯೂ, ಪ್ರಕಾಶಿಸುವ ಚಿಚ್ಛಕ್ತಿಯ ಮಹಿಮೆಯಿಂದೀಮನವು ಚಲಿಸುವದಾದ್ದರಿಂದ ಇದು ಭಾವಿಸಿದಂತೆಯೇ ಸಮಸ್ತವು ಸಿದ್ಧವಾಗುವದು. ಮನವು ಮತ್ತೊಂದೆಡೆಯಲ್ಲಿರುವಾಗ ಇಂದ್ರಿಯಗಳಿಂ ನಡದ ಕಾರ್ಯವೆಲ್ಲವು ನಡದಂತೆಯೇ ಆಗುವದಿಲ್ಲವಾದ್ದರಿಂದ ಮನಃಪೂರ್ವಕವಾಗಿ ಮಾಡಿದ್ದೇ ಮಾಡಿದ್ದೆಂದು ಪೇಳಲ್ಪಡುವದು. ಯಾವ ಶರೀರದಿಂ ಮಡದಿಯನ್ನಾಲಿಂಗಿಸುವರೋ ಆ ಶರೀರದಿಂದಲೇ ಮಗಳನ್ನು ಆಲಿಂಗಿಸುವರು. ಆದಾಗ್ಯೂ ಮನೋಭಾವನಾಭೇದದಿಂ ಫಲಭೇದವಾಗುವದು. ಮತ್ತು ಮನೆಯಲ್ಲಿ ಶರೀರವಿದ್ದಾಗ್ಯೂ ಮನವು ಗಿರಿಕಂದರ ಮೊದಲಾದ ಯಾವಯಾವ ಸ್ಥಳದಲ್ಲಿರುವದೋ ಅಲ್ಲಲ್ಲಿಯ ಸುಖದುಃಖಗಳೇ ಅನುಭವಿಸಲ್ಪಡುವವು. ಕಥೆಯಂ ಪೇಳುವಲ್ಲಿ ಮನವು ಮತ್ತೊಂದೆಡೆಗೆ ಪೋಗಲು ಆ ಕಥೆಯು ಲತೆಯಂತೆ ಮಧ್ಯದಲ್ಲಿಯೇ ಛೇದಿಸಲ್ಪಟ್ಟಂತೆ ಆಗುವದು. ಮನವು ಧ್ಯಾನಾಸಕ್ತವಾಗಿರುವಲ್ಲಿ ಶರೀರಚಲನದಿಂಮಾಡದ ಪ್ರಾಯಶ್ಚಿತ್ತವು ಸಂಧ್ಯಾವಂದನಾದಿ ನಿತ್ಯಕರ್ಮವಿಚ್ಛಿತ್ತಿಯೂಕೂಡ ಪಾಪನಾಶಕವಾಗಲಾರದೆಂದು ಪೇಳಲ್ಪಡುವದು. ಸ್ವಪ್ನದಲ್ಲಿ ಮನಸ್ಸಿನ ವಿಲಾಸದಿಂ ಗಿರಿ ನದೀ ನಗರ ಗ್ರಾಮ ಮೊದಲಾದ್ದೆಲ್ಲವು ಹೊಸದಾಗಿ ಮಾಡಲ್ಪಡುವದ್ದರಿಂದ ಬೀಜದಲ್ಲಿ ಅಂಕುರದಂತೆ ಮನದಲ್ಲಿ ಸಮಸ್ತ ಪ್ರಪಂಚವೂ ಇರುವದೆಂದು ಸ್ಪಷ್ಟವಾಗಿ ಕಾಣುತಲಿಧೆ. ಚಿನ್ನದಲ್ಲಿ ಒಡವೆಗಳಂತೆ ಜಾಗ್ರತ್ಸ್ವಪ್ನಸುಷುಪ್ತಿಗಳು ಜಲದಲ್ಲಿ ಅಲೆ ನೊರೆಗುಳ್ಳೆ ಸುಳಿಗಳಂತೆ ವಿಚಿತ್ರವಿಲಾಸಗಳೂ

---

*ನೂಲಿನ ಧಾರವು.

ಸಹ ಮನವಲ್ಲೇ ಇರುವವು. ನಟನು ನಾನಾವೇಷಗಳಂ ಧರಿಸುವಂತೆ ಈ ಮನವು ಭಾವಭೇದದಿಂ ನಾನಾಪ್ರಕಾರವಾಗುವದು. ಗಾಣ ತಿರುಗುವದ್ದರಿಂದ ತಿಲದಲ್ಲಿ ತೈಲ ಉಂಟಾಗುವಂತೆ ಮನನವಿಶೇಷದಿಂ ಮನದಲ್ಲಿ ಸುಖದುಃಖಗಳು ತೋರುವವು. ಸಂಕಲ್ಪಮಾತ್ರದಿಂದೀ ಮನನೇ ಉತ್ಪತ್ತಿಸ್ಥಿತಿಲಯಗಳಂ ಬಾರಿಬಾರಿಗೂ ಹೊಂದುತ್ತಿರುವದು. ಮನಸ್ಸಿಗೆ ತೋರಿದ್ದೇ ಸಿದ್ಧಯವಾದ್ದರಿಂದ ಲವಣರಾಜನಲ್ಲಿ ಚಂಡಾಲಭಾವದಂತೆ ಪರಮಾತ್ಮನಲ್ಲಿ ಈ ಪ್ರಪಂಚ ಉಂಟಾಗಿರುವದು. ಮನಸ್ಸಿನ ಸಂಕಲ್ಪವಿದ್ದಂತೆ ದೇವದೈತ್ಯಾದಿ ಭಾವಗಳು ಸಿದ್ಧವಾಗುವವಾದ್ದರಿಂದ ಬ್ರಹ್ಮಭಾವದಿಂದೀಮನವಂ ನಿಲ್ಲಿಸಿದವರು ಜೀವನ್ಮುಕ್ತರಾಗುವರು. ಮನವು ಭಯಗ್ರಸ್ತವಾಗಿರುವಲ್ಲಿ ಶರೀರವು ಸ್ವಸ್ಥವಾಗಿದ್ದರೂ ಕಂಪಸ್ವೇದ ಮೊದಲಾದ ವಿಕಾರ ಉಂಟಾಗುವದು. ಶರೀರಕ್ಕೆ ಆಲಸ್ಯವಾಗಿದ್ದರೂ ಮನಸ್ಸು ಉತ್ಸಾಹದಿಂದಿದ್ದರೆ ಅಸಾಧ್ಯವಾದ ಕಾರ್ಯಗಳೂಕೂಡ ಮಾಡಲ್ಪಡುವವು. ಆದ್ದರಿಂದ ಮನಸ್ಸಿನ ಕಾರ್ಯವೇ ಸಫಲವೆಂತಲೂ, ಶರೀರದ ಕಾರ್ಯ ನಿಷ್ಫಲವೆಂತಲೂ, ತಿಳಿಯತಕ್ಕದ್ದು. ಸ್ತಂಭದಲ್ಲಿ ಕಟ್ಟಲ್ಪಟ್ಟ ಆನೆಯಂತೆ ಯಾವನ ಮನವು ಬ್ರಹ್ಮವಾಸನೆಯಲ್ಲಿ ಸ್ಥಿರವಾಗಿರುವದೋ ಅವನೇ ಪುರುಷನು, ಉಳಿದವರೆಲ್ಲರೂ ಕ್ರಿಮಿಸಮಾನರೆಂದು ತಿಳಿಯತಕ್ಕದ್ದು.

ಎಲೈ ರಘುಕುಲಾಬ್ಧಿಚಂದ್ರನೆ ಈ ಮನವೆಂಬ ರೋಗಕ್ಕೆ ಪೇಳುವ ಚಿಕಿತ್ಸೆಯಂ ಸಾವಧಾನವಾಗಿ ಕೇಳುವನಾಗು? ಕಬ್ಬಿಣದಿಂ ಕಬ್ಬಿಣದಂತೆಯೂ, ವಜ್ರದಿಂ ವಜ್ರದಂತೆಯೂ, ಮನದಿಂದಲೇ ಮನವಂ ಭೇದಿಸಬೇಕಲ್ಲದೆ ಇದಕ್ಕೆ ಮತ್ತೊಂದುಪಾಯವಿಲ್ಲವೆಂದು ನಿಶ್ಚಯಿಸುವನಾಗು. ಮನವು ದುರ್ವಾಸನೆಯಿಂ ವಿಷಯಗಳಂ ಹೊಂದುವಲ್ಲಿ ಸದ್ವಿಚಾರದಿಂದಾವಿಷಯದಲ್ಲಿ ವೈರಸ್ಯವಂ ತೋರುತ್ತಾ ಮನಕ್ಕೆ ಅದರಲ್ಲಿ ಅಪೇಕ್ಷೆಯೂ ತಪ್ಪಿಸತಕ್ಕದ್ದು. ಹೀಗೆ ಬೇಕಾದುದಂ ಬೇಡವೆನುತ್ತಾ ವಿಷಯಾಪೇಕ್ಷೆಯೂ ಬಿಡುತ ಬರುವಲ್ಲಿ ಮನವು ಜಿತವಾಯಿತೆಂದು ತಿಳಿಯತಕ್ಕದ್ದು. ಆಡುವ ಬಾಲಕನಿಗೆ ಲಾಲನೆಯಿಂದ ಮತ್ತೊಂದು ವಿಚಿತ್ರವಾದ ಆಟವಂ ತೋರಲು ಆ ಬಾಲಕನು ಹಿಂತಿರಗುವಂತೆ ವಿಷಯಾಸಕ್ತವಾದ ಮನಸ್ಸಿಗೆ ವಿಷಯಾಸಕ್ತರ ದುಃಖವನ್ನು ವಿರಕ್ತರ ಸೌಖ್ಯವನ್ನು ಸಹ ವಿವರವಾಗಿ ತೋರಿಸಲು ಆ ಮನವು ಹಿಂತಿರುಗುವದು. ಕಾದ ಕಬ್ಬಿಣವು ಕಾಯದ ಕಬ್ಬಿಣಕ್ಕೆ ಸ್ವಾಧೀನವಾಗುವಂತೆ ಸಂತಾಪಪಟ್ಟದ್ದ ಮನವು ಸದ್ವಿಚಾರದಿಂದಿರುವ ಮನಕ್ಕೆ ಶೀಘ್ರವಾಗಿಯೇ ಸ್ವಾಧೀನವಾಗುವದು. ಬಾಲನಂತೆ ಮನವು ಉಪಾಯದಿಂದಲೇ ಸ್ವಾಧೀನವಾಗಿರುವಲ್ಲಿ ಬೇಕಾದುದಂ ಬೇಡವೆನಿಸಿಸ

ಲಾರದ ಪುರುಷನು ಕ್ರಿಮಿಸಮಾನನೆನಿಸುವನು. ಕಠಿಣವಾದ್ದರಿಂ ಮನೋಹರವಲ್ಲದ ಶಾಸ್ತ್ರಾಭ್ಯಾಸಾದಿಗಳಂ ಪರ್ಯವಸಾನವಿಚಾರದಿಂ ಮನೋಹರವಾಗಿ ಭಾವಿಸುವ ಪುರುಷನಿಂದ ಜೆಟ್ಟಿಯಿಂದ ಹುಡುಗನಂತೆ ಮನವು ಜಯಿಸಲ್ಪಡುವದು. *ವಿರುದ್ಧವಿಚಾರದಿಂದಪೇಕ್ಷೆಯಂ ತಪ್ಪಿಸುವ ಉಪಾಯಕ್ಕೆ ಗುರೂಪದೇಶ ಶಾಸ್ತ್ರಾರ್ಥ ಮಂತ್ರಾದ್ಯುಪಾಯಗಳು ತೃಣಪ್ರಾಯವೆಂದು ತಿಳಿಯುವನಾಗು, ಹೀಗೆ ಪದಾರ್ಥಸಂಕಲ್ಪಗಳು ತಪ್ಪುತ್ತ ಬರಲು ಮನನಧರ್ಮವಂ ಬಿಟ್ಟ ಮನವು ವೇಷವಂ ಬಿಟ್ಟ ನಟನಂತೆ ಪೂರ್ವದ ಚಿದ್ರೂಪವನ್ನೇ ಹೊಂದುವದು. ಆಗ ಭೇದಜನಕವಾದ ಮನವಿಲ್ಲದ್ದರಿಂದ ಚಿನ್ಮಾತ್ರವಾದ ಬ್ರಹ್ಮಬಂದೇ ಪ್ರಕಾಶಿಸುತ್ತಿರುವದು. ವಿಚಾರದಿಂ ಬ್ರಹ್ಮಭಿನ್ನವಾದ ಪದಾರ್ಥವಿಲ್ಲವೆಂಬ ಜ್ಞಾನವುಂಟಾಗುವಲ್ಲಿ ತಾನೂ ಬೇರೆಯಲ್ಲವೆಂದು ನಿಶ್ಚಯವಾಗಲು ಬ್ರಹ್ಮಾತ್ಮೈಕ್ಯಜ್ಞಾನದಾರ್ಢ್ಯದಿಂದಿಷ್ಟವಾದ ವಸ್ತುವಿದೆಂಬ ಬುದ್ಧಿಯೇ ತಪ್ಪುವದು. ಈರೀತಿಯನ್ನರಿಯದವನು ಕ್ರಿಮಿಗಿಂತಲೂ ಕಡೆಯೆನಿಸುವನು. ಈ ಬ್ರಹ್ಮವಿಚಾರವಂ ಮಾಡುವ ಪುರುಷನ ಮನವು ಎಲ್ಲೆಲ್ಲಿಗೆ ಪೋದಾಗ್ಯೂ ಅಲ್ಲಲ್ಲಿ ಬ್ರಹ್ಮವೇ ಪ್ರಕಾಶಿಸುವದ್ದರಿಂದ ಬ್ರಹ್ಮೇತರ ಪದಾರ್ಥ ಜ್ಞಾನವಿಲ್ಲದ ಆ ಪುರುಷನು ಪ್ರಾರಬ್ಧಭೋಗಾರ್ಥವಾದ ಶರೀರವಿರುವವರಿವಿಗೆ ಜೀವನ್ಮುಕ್ತನೆನಿಸುವನು. ಇವನು, ಅವನು, ಇದು, ಅದು, ನನ್ನದು, ನಾನೆಂಬ ಜ್ಞಾನಮಾತ್ರವೇ ಮನಸ್ಸಲ್ಲದೆ ಮತೊಂದಿಲ್ಲ. ಇವರ ಮನನಧರ್ಮವು ತಪ್ಪುವದಲ್ಲದೆ ಬ್ರಹ್ಮಪ್ರಾಪ್ತಿಗೆ ಮತ್ತೊಂದುಪಾಯವಿಲ್ಲ. ಈ ಮನೋಭ್ರಾಂತಿಯು ತಪ್ಪುವದಕ್ಕೆ ಬ್ರಹ್ಮಮಹಿಮವಿಚಾರವಲ್ಲದೆ ಮತ್ತೊಂದುಪಾಯವಿಲ್ಲ. ಬ್ರಹ್ಮವಿಚಾರದಿಂ ಮನೋಜನಿತವಾದ ಪದಾರ್ಥಗಳು ಬಿರಿಗಾಳಿಯಿಂ ಮೋಡದಂತೆ ಎಲ್ಲಿಗೋ ಪೋಗುವವು. ಭಯಂಕರವಾದ ಶಸ್ತ್ರಾಗ್ನಿ ವಾಯುಗಳಿದ್ದರೆ ಏನಾದರೂ ಭಯವಾಗಬಹುದು. ಇದು ಒಂದೂಯಿಲ್ಲದೆ ಬಾಲನಂತೆ ಸ್ವಾಧೀನವಾಗಿ ಮನವಿರುವಲ್ಲಿ ಸಂಕಲ್ಪಮಾತ್ರವಂ ಬಿಡುವದಕ್ಕೆ ಏಕೆ ಭಯಪಡಬೇಕು. ಇದು ಅಶ್ರೇಯಸ್ಸೆಂದು ಸಿದ್ಧವಾಗಿರುವದ್ದರಿಂದ ಬುದ್ಧಿಶಾಲಿಯಾದವನು ಬಾಲಪುತ್ರನಂತಿರುವ ಮನವಂ ಶ್ರೇಯಸ್ಸಿನಲ್ಲಿ ನಿಲ್ಲಿಸತಕ್ಕದ್ದು. ಬ್ರಹ್ಮವಿಚಾರದಿಂ ಮನವು ಶಾಂತವಾಗುವಲ್ಲಿ ಪ್ರಳಯವಾಯು ಬೀಸಿದರು ಸಪ್ತಸಮುದ್ರಗಳು ಕೇರಿದರೂ ದ್ವಾ

*ಅಂದರೆ ಗುರೂಪದೇಶ ಶಾಸ್ತ್ರಾರ್ಥವಿಚಾರ ಮಂತ್ರ ಜಪ ಇವುಗಳಿಗಿಂತಲೂ ಸುಖಾದಿಗಳಲ್ಲಿ ದುಃಖಾದಿ ವಿರುದ್ಧವಿಚಾರದಿಂದ ಸಂಸಾರದಲ್ಲಿ ವಿರಕ್ತಿಯನ್ನು ಉಂಟು ಮಾಡುವ ಉಪಾಯವು ಪ್ರಬಲವಾದ ಉಪಾಯವೆಂದಭಿಪ್ರಾಯವು.

ದಶಾದಿತ್ಯರು ಉದಯಿಸಿದರೂ ಮನಸ್ಸಿಲ್ಲದ್ದರಿಂದ ಪುರುಷನಿಗೆ ಯಾವಭಯವೂ ಸಂಭವಿಸಲಾರದು. ಮನವಂ ಜಯಿಸುವದಕ್ಕೆ ಇದಲ್ಲದೆ ಮತ್ತೊಂದುಪಾಯ ವಿಲ್ಲದ್ದರಿಂದ ಅದೃಷ್ಟವಿದ್ದಂತೆ ಆಗುವದೆಂಬ ಮೂಢಬುದ್ಧಿಯಂ ಧಿಕ್ಕರಿಸಿ ಸತ್ಸಂಗಶಾಸ್ತ್ರ ವಿಚಾರಾದಿ ಪುರುಷಪ್ರಯತ್ನದಿಂ ಬ್ರಹ್ಮಮಹಿಮೆಯಲ್ಲಿ ಮನವಂ ನಿಲ್ಲಿಸಿ ಮನಸ್ಸಿನಿಂದಲೇ ಕಲ್ಪಿತವಾದ ಬಂಧವಂ ತಪ್ಪಿಸಿಕೊಳ್ಳುವನಾಗು, ಅಯ್ಯೋ ಮನವಂ ಜಯಿಸುವದು ಪ್ರಯಾಸವಷ್ಟೆ, ಇದಕ್ಕೆ ಮಾಡತಕ್ಕದ್ದೇನೆಂದು ವ್ಯರ್ಥವಾಗಿ ದುಃಖಿಸದೆ ಇದೆಷ್ಟುಮಾತ್ರವೆಂದು ಉತ್ಸಾಹದಿಂ ಸತ್ಸಹವಾಸವಂ ಮಾಡುವಲ್ಲಿ ಈ ಉಪಾಯವು ಸುಲಭವಾಗಿ ತಿಳಿಯುವದು. ನಾನು ಪುಟ್ಟಿದೆನು, ವೃದ್ಧಿಹೊಂದುವೆನು, ಸಾಯುವೆನು, ಬದುಕಿರುವೆನೆಂದು ಮನೋಭ್ರಾಂತಿ ಮೂಲಕವಾದ ದೇಹಾತ್ಮಜ್ಞಾನದಿಂ ಲೋಕವು ದುಃಖಿಸುತ್ತಿರುವದು. ವಿವೇಕದಿಂ ವಿಚಾರಿಸುವಲ್ಲಿ ಜನನ ಮರಣಾದಿ ದುಃಖಗಳೆಲ್ಲವು ಮನಸ್ಸಿಗೆ ಸಿದ್ಧವಾದದ್ದೆಂದು ತಿಳಿಯಬರುತ್ತೆ. ಸುಷುಪ್ತಿ ಮೊದಲಾದ ಮನವಿಲ್ಲದ ಕಾಲದಲ್ಲಿ ಸುಖ ದುಃಖ ಜ್ಞಾನವಾಗದ್ದರಿಂದಲೂ, ಮನವು ಬಹಿರ್ಮುಖವಾಗಿರುವಲ್ಲಿ ಸ್ಫುಟವಾಗಿ ಕಾಣುವದ್ದರಿಂದಲೂ, ಮನಸ್ಸಿಗೆ ಸಂಸಾರವೆಂತಲೂ, ಇದರಿಂದಲೇ ಆ ಸಂಸಾರಕ್ಕೆ ಆವಿರ್ಭಾವವೆಂತಲೂ, ತಿಳಿಯತಕ್ಕದ್ದು. ಆದ್ದರಿಂದ ಮನದ ಸ್ಥಿತಿಯೇ ಬಂಧವೆಂತಲೂ, ಅದರ ನಾಶವೇ ಮೋಕ್ಷವೆಂತಲೂ, ಶೋಕಾದಿ ಧರ್ಮವುಳ್ಳ ಈ ಮನಕ್ಕೆ ಚಿನ್ಮಾತ್ರಸ್ವರೂಪನಾದ ಆತ್ಮನು ಭಿನ್ನನೆಂತಲೂ, ನಿಶ್ಚಯಿಸುವನಾಗು. ಸಂಕಲ್ಪಮಾತ್ರದಿಂ ಸಕಲಾನರ್ಥಮೂಲವಾದ ಮನವನ್ನು ಅಸಂಕಲ್ಪನಮಾರ್ಗದಿಂ ಜಯಿಸಲು ನಿತ್ಯಾನಂದವಾದ ಪರಮಪದವು ಸಿದ್ಧವಾಗುವದು. ಎಲೈ ರಘುವೀರನೇ ಧೊರೆಯಂ ಜಯಿಸಲು ಧೊರೆಯೇ ಸಮರ್ಥನಾದ್ದರಿಂದ ಮನದಿಂದಲೇ ಮನವಂ ಜಯಿಸತಕ್ಕದು. ಅನಂತಶಕ್ತಿಯಾದ ಆತ್ಮನಚಲನ ಶಕ್ತಿಯೇ ಮನವೆನಿಸಿಕೊಳ್ಳುವದಾದ್ದರಿಂದ ಕಾಡಿಗೆಗೆಕಪ್ಪಿನಂತೆಯೂ, ಬೆಂಕಿಗೆಬಿಸಿಯಂತೆಯೂ, ಮನಸ್ಸಿಗೆ ಚಾಪಲ್ಯವು ಸಹಜವಾಗಿರುವದು. ಈ ಚಾಪಲ್ಯವೇ ಅವಿದ್ಯೆಯನಿಸುವದು. ಅವಿದ್ಯೆಯಿಂದ ಪ್ರಪಂಚವುಂಟಾಗಿರುವದು. ಜಡಾಜಡವಾದ ಪ್ರಪಂಚಾತ್ಮರುಗಳಿಗೆ ಮಧ್ಯಸ್ಥವಾಗಿ ಉಭಯಾಂಶಗಳಿಂ ಜಡಾಜಡಸ್ವರೂಪವಾದ ಈ ಮನವು ತ್ರಿಗುಣಾತ್ಮಕವಾದ್ದರಿಂ ವಿಚಿತ್ರವಾದ ಪ್ರಪಂಚದ ಭಾವನೆಯಿಂ ಚಂಚಲವಾಗಿ ಸಕಲ ದುಃಖಗಳಿಗೂ ಕಾರಣವಾಗುವದು. ನಿರ್ಗುಣ ಚಿದ್ರೂಪನಾದ ಆತ್ಮನವಿಚಾರದಲ್ಲಿ ಅಭ್ಯಾಸಬಲದಿಂ ಸ್ಥಿರವಾಗಲು ಪರಮಾನಂದ ಸ್ವರೂಪವಾಗುವದಾದ್ದ

ರಿಂದ ಇದಱಸ್ಥೈರ್ಯವೇ ಮೋಕ್ಷವೆನಿಸುವದು. ಬಂದಬಂದ ಪದಾರ್ಥವಾಸನೆಗಳನ್ನವರವರ ದುಃಖಸ್ಮರಣೆಯಿಂದ ಕಸದಂತೆ ತಳ್ಳುತ್ತಾ ಭೇದವಾಸನೆಯಂ ಬಿಟ್ಟು ಭಾವಾಭಾವಪದಾರ್ಥಗಳಂ ಭಾವಿಸದಿರುವದೇ ಅವಿದ್ಯಾಕ್ಷಯವೆಂತಲೂ, ಮನೋನಾಶವೆಂತಲೂ, ಪೇಳಲ್ಪಡುವದು. ಮನೋವಿಕಾರವಿಲ್ಲದವನು ಸ್ತಬ್ಧನಾಗಿದ್ದರೂ ದೇವತಾಪ್ರತಿಮೆಯಂತೆ ಪೂಜಿಸಲ್ಪಡುವನು. ಶಸ್ತ್ರಗ್ರಹಣಶ್ರಮವೇನೂ ಇಲ್ಲದೆ ಒಳಗೆ ಹೊರಗೆಸಹ ಶತ್ರುಗಳಂ ಜಯಿಸುವನು. ಏನೇನೂ ಇಲ್ಲದವನಾದಾಗ್ಯೂ ನಿತ್ಯಾನಂದನಾಗಿರುವದ್ದರಿಂದ ಸಪ್ತದ್ವೀಪಾಧಿಪತಿಯಾದ ಧೊರೆಯು ತ್ರಿಲೋಕೇಶ್ವರನಾದ ಇಂದ್ರನು ಜಗತ್ಕರ್ತೃವಾದ ಚತುರ್ಮುಖನೂ ಕೂಡ ಇವನಿಗೆ ಸಮಾನವಾಗಲಾರನು. ಎಲೈ ಸೂಕ್ಷ್ಮಮತಿಯೇ! ಪರಮಾರ್ಥವಾಗಿ ತಾನೇ ಇಲ್ಲದಿದ್ದಾಗ್ಯೂ ಮಿಂಚಿನಂತೆ ಸ್ವಪ್ರಕಾಶದಿಂ ಜನಗಳಿಗೆ ಕಣ್ಗತ್ತಲೆಯಂ ಪುಟ್ಟಿಸಿ ಗಾಜಿನ ಚೂರುಗಳಂ ರತ್ನಗಳನ್ನಾಗಿಯೂ, ಕಪ್ಪೆಚಿಪ್ಪಂ ಬೆಳ್ಳಿಯನ್ನಾಗಿಯೂ, ಮೋಟುಮರವಂ ಪುರುಷನನ್ನಾಗಿಯೂ, * ಮರುಮರೀಚಿಕೆಯಂ ಪ್ರವಾಹವನ್ನಾಗಿಯೂ, ಚರ್ಮ ಮಾಂಸಮಯವಾದ ನಾರಿಯಂ ಚಿನ್ನದ ಬೊಂಬೆಯನ್ನಾಗಿಯೂ, ಚಂದ್ರನಂ ಬಡಬಾಗ್ನಿಯನ್ನಾಗಿಯೂ, ಚಂಡಾಂಶುವಂ ಸುಖಕರನನ್ನಾಗಿಯೂ, ಪುಷ್ಪಮಾಲೆಯಂ ಹಾವನ್ನಾಗಿಯೂ, ಭಾವನಾಭಾಮಿನಿಯನ್ನೆದುರಿಗಿರುವಳನ್ನಾಗಿಯೂ, ದಿನವಂ ವರ್ಷವನ್ನಾಗಿಯೂ, ದಿವಸವಂ ಘಳಿಗೆಯನ್ನಾಗಿಯೂ, ಕ್ರೀಡೋದ್ಯಾನವಂ ಮುಳ್ಳುಪೊದೆಯನ್ನಾಗಿಯೂ, ಲತಾಗೃಹವಂ ಮಣಿಮಂದಿರವನ್ನಾಗಿಯೂ, ಸುಖವಂ ದುಃಖವನ್ನಾಗಿಯೂ, ದುಃಖವಂ ಸುಖವನ್ನಾಗಿಯೂ, ಸಮಸ್ತ ವಸ್ತುಗಳಂ ವ್ಯತ್ಯಾಸವಾಗಿತೋರುತ್ತಾ ಅಘಟನ ಘಟನಾಚಾತುರ್ಯದಿಂ ಸರ್ವಪ್ರಪಂಚಗಳಿಗೂ ಕಾರಣವೆನಿಸಿಕೊಳ್ಳುವ ಅನಿರ್ವಾಚ್ಯವಾದ ಅವಿದ್ಯೆಯಂಬಂಣಿಸಲು ಯಾರಾದರೂ ಸಮರ್ಥರಾದರೆ ಪ್ರಾರಬ್ಧವಿರುವಪರ್ಯಂತವು ದೇಹಪಾತವಾಗದಿರುವಂತೆ ಈ ಅವಿದ್ಯೆಯಿರುವವರಿಗೆ ಯಾರಿಗೂ ಬಂಧತಪ್ಪಲಾರದು. ಆತ್ಮಜ್ಞಾನರೂಪದಿಂ ಬಾಹ್ಯಪದಾರ್ಥೇಚ್ಛಾರೂಪವಾಗಿ ತೋರುವದೆ ಅವಿದ್ಯೆಯೆನಿಸುವದು. ಇದು ಆತ್ಮಾಭಿಮುಖವಾಗಲು ಬಿಸಲಂಬಯಿಸಿದ ನೆಳಲಿನಂತೆ ತಾನೇನಷ್ಟವಾಗುವದು. ಮನವೆಂಬ ಗಗನದಲ್ಲಿ ಆತ್ಮನೆಂಬ ಸೂರ್ಯನ ಜ್ಞಾನವೆಂಬಕಿರಣವು ಪಸರಿಸುವಲ್ಲಿ ವಾಸನೆಯೆಂಬ ರಾತ್ರಿಯು ಪೋಗಲು

*ಬೇಸಿಗೆಯ ಕಾಲದಲ್ಲಿ ಮಹಾರಣ್ಯದಲ್ಲಿ ಮಧ್ಯಾಹ್ನದ ಸೂರ್ಯಕಿರಣಗಳು ನಿರ್ಜಲಪ್ರದೇಶಗಳಲ್ಲಿ ಬಿದ್ದು ನೀರಿನ ಪ್ರವಾಹವು ಹರಿಯುವಂತೆ ದೂರಕ್ಕೆ ಕಾಣಿಸಿಕೊಳ್ಳುವಿ

ಜಗನ್ಮಯೆಯೆಂಬ ಕಪ್ಪುಲಯುವಂ ಹೊಂದುವದು. ಬ್ರಹ್ಮಾದಿ * ಕ್ರಿಮಿಪರ್ಯಂತವಾಗಿ ಕಾಣುವ ಪದಾರ್ಥವೆಲ್ಲವು ಬ್ರಹ್ಮವಲ್ಲದೆ ಮತ್ತೊಂದಲ್ಲ. ಈ ಪರಮಾತ್ಮನಿಗೆ ಸ್ವಾಭಾವಿಕವಾದ ಲೀಲೆಯಿಂದುಂಟಾದ ಪ್ರಪಂಚಸಂಕಲ್ಪವೇ ಮನವೆನಿಸುವದು. ಸಮುದ್ರದಿಂ ತೆರೆಯಂತೆ ಈ ಮನಸ್ಸಿನಿಂ ಹೊರಹುಟ್ಟ ಪದಾರ್ಥ ವಿಭಾಗಶಕ್ತಿಯೇ ಅವಿದ್ಯೆಯೆನಿಸುವದು. ಸ್ವಸಂಕಲ್ಪದಿಂದುಂಟಾದ ಈ ವಿದ್ಯೆಯು ಗಾಳಿಯಿಂದಗ್ನಿಜ್ವಾಲೆಯಂತೆ ಸ್ವಸಂಕಲ್ಪದಿಂದಲೇ ನಾಶವಾಗತಕ್ಕದ್ದು. ಪ್ರಪಂಚವಂಪಿಡಿದು ಬಂದ ಸಂಕಲ್ಪವೆ ಸಂಕಲ್ಪವೆನಿಸುವದು; ಸ್ವರೂಪಂ ಪಿಡಿದುನಿಂದ ಸಂಕಲ್ಪವು ಅಸಂಕಲ್ಪವೆನಿಸುವದು. ಮೊನೆಯಾದವಜ್ರದಿಂ ತಟ್ಟೆಯಾದವಜ್ರವು ಭೇದಿಸಲ್ಪಡುವಂತೆ ತಾನು ಬ್ರಹ್ಮವಲ್ಲವೆಂಬ ಸಂಕಲ್ಪದಿಂ ಬದ್ಧವಾದ ಮನವು ತಾನು ಬ್ರಹ್ಮವೆಂಬ ಅಸಂಕಲ್ಪದಿಂ ಮುಕ್ತಿಯಂ ಹೊಂದುವದಾದ್ದರಿಂದ ಬುದ್ಧಿಶಾಲಿಗಳು ರಕ್ತಮಾಂಸಮಯುವಾದ ದೇಹವು ನಾನಲ್ಲದರಿಂದ ದೇಹಧರ್ಮವಾದ ಷಡ್ಭಾವವಿಕಾರಗಳು ನನಿಗೆ ಸಂಭವಿಸಲಾರವು ಚಿನ್ಮಾತ್ರನಾದ ನನಿಗೆಪ್ರಾಣಧರ್ಮವಾದ ಕ್ಷುತ್ಪಿಪಾಸಾದಿಗಳು ಮನೋಧರ್ಮವಾದ ಶೋಕಮೋಹಾದಿಗಳು ಸಹ ಹ್ಯಾಗೆಸಂಭವಿಸ್ಯಾವೆಂದು ಚಿಂತಿಸುತ್ತಾ ಸ್ವರೂಪಮಾತ್ರದಿಂ ಪರಮಾತ್ಮನಿಗೆ ಅಭಿನ್ನವಾದ ನನಿಗೆ ಯಾವದೂ ಭಿನ್ನವಲ್ಲವಾದ್ದರಿಂದ ಕರ್ತೃತ್ವ ಭೋಕ್ತೃತ್ವಗಳೂ ಕೂಡ ಅವಿದ್ಯಾಕಲ್ಪಿತವೆಂದು ನಿಶ್ಚಯಿಸಿ ಸರ್ವಾತೀತವಾದ ಬ್ರಹ್ಮದಲ್ಲಿ ಮನವಂ ನಿಲ್ಲಿಸಿ ಆ ಅಭ್ಯಾಸಬಲದಿಂ ಸರ್ವವನ್ನು ಬ್ರಹ್ಮಭಾವದಿಂ ನೋಡುತ್ತಾ ಜೀವನ್ಮುಕ್ತಸ್ಥಿತಿಯಂ ನಿತ್ಯಾನಂದರಾಗಿ ವಿಹರಿಸುತ್ತಿರುವರು. ಮೇರುಪರ್ವತದೊಳಿರುವ ಇಂದ್ರನೀಲಮಯುವಾದ ಕೋಡುಗಲ್ಲಿನ ಕಾಂತಿಯಂತಲೂ ಸೂರ್ಯನ ಕಿರಣಗಳು ಅದೋಮುಖವಾಗಿಯೇ ಪ್ರಸರಿಸುವದ್ದರಿಂದ ಸೂರ್ಯನಿಂ ಪರಿಹರಿಸಲಶಕ್ಯವಾದ ಮೇಲ್ಗಡೆಯ ಕತ್ತಲೆಯಂತಲೂ ಅವಾಂತರ ಪ್ರಳಯಾಗ್ನಿಯ ಧೂಮದಿಂ ಬ್ರಹ್ಮಾಂಡಕಟಾಹದಲ್ಲಿ ಕಟ್ಟದ ಕಪ್ಪೆಂತಲೂ ಭೂಮಿಯಲ್ಲಿರುವದ್ದರಿಂದ ಆಕಾಶದ ಕಪ್ಪು ಉತ್ಪ್ರೇಕ್ಷಿಸಲ್ಪಡುವಂತೆ ಅನಾತ್ಮ ಪದಾರ್ಥದಲ್ಲಿ ಆತ್ಮಭಾವನಾರೂಪವಾದ ಅವಿದ್ಯೆಯು ಅಜ್ಞಾನಿಗಳಿಂ ಪರಮಾತ್ಮನಲ್ಲಿ ಕಲ್ಪಿತವಾಗಿರುವದೆಂದು ಹೇಳುವಲ್ಲಿ ಆಕಾಶದಲ್ಲಿರುವ ಕಪ್ಪೇನೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು !

ಎಲೈ ರಘುಕುಲೋತ್ತಮನೇ ! ಜಲಾಶಯುವು ಕಪ್ಪಾಗಿಕಾಣುವಂತೆ ಶೂನ್ಯವಾದ ಆಕಾಶವೂ ಕೂಡ ವಸ್ತುಸ್ವಭಾವದಿಂದಲೇ ಕಪ್ಪಾಗಿ ಕಾಣುವದು !

*ಕ್ರಿಮಿ—ಸಣ್ಣ ಹುಳವು.

ಮತ್ತು ಬಾಹ್ಯಕಾರ್ಯವಿಲ್ಲದ ಪುರುಷನು ಮನೆಯಂ ಶೇರಿ ಅದರ ಉಪಪತ್ತಿಯು ತಿಳಿದದ್ದರಿಂದ ಅದೇಪ್ರಕಾರ ಎಲ್ಲರಮನೆಯಲ್ಲೂ ಇರುವದೆಂದು ತಿಳಿವಂತೆ ಅತಿದೂರವಾದ್ದರಿಂ ಗಗನದಲ್ಲಿ ದರ್ಶನಶಕ್ತಿ ತಪ್ಪಿದ ಚಕ್ಷುರಿಂದ್ರಿಯವು ತನಿಗೆ ಸ್ಥಾನವಾದ ಕರೀಗುಡ್ಡಿನಲ್ಲಿ ನಿಂತು ಅದರ ಕಪ್ಪನ್ನೇ ಹೊರಗಿರುವಂತೆ ನೋಡುವದು. ವಸ್ತುಸ್ವಭಾವದಿಂದಾಕಾಶವು ಕಪ್ಪಾಗಿ ಕಾಣುವದಕ್ಕೆ ಇದೂ ಸಹಾಯವಾಗುವದ್ದರಿಂದ ಇಂದ್ರನೀಲದಂತೆ ಆಕಾಶವು ಕಾಣುತ್ತಿರುವದು. ಚಕ್ಷುರಿಂದ್ರಿಯವು ತನ್ನ ಕರೀಗುಡ್ಡಿನ ಕಪ್ಪನ್ನೇ ಆಕಾಶದಲ್ಲಿ ನೋಡುವಂತೆ ವಾಸನಾತ್ಮಕವಾದ ಮನವು ತನ್ನ ವಾಸನೆಯಿದ್ದಂತೆಯೇ ಪರಮಾತ್ಮನಲ್ಲಿ ಪ್ರಪಂಚವಂ ನೋಡುವದು. ಜ್ಞಾನಿಗಳ ಮನವು ಬ್ರಹ್ಮವಾಸನಾಮಯವಾದ್ದರಿಂದ ಬ್ರಹ್ಮಾಭಿನ್ನವಾಗಿಯೇ ಸರ್ವವನ್ನೂ ನೋಡುತ್ತಿರುವದು. ಆದ್ದರಿಂ ನೀನೂ ಅವಿದ್ಯಾಮೂಲಕವಾದ ಪ್ರಪಂಚವಾಸನೆಯಂ ಬಿಟ್ಟು ಬ್ರಹ್ಮಸ್ವರೂಪದಲ್ಲೇ ದೃಷ್ಟಿಯನ್ನಿಟ್ಟು ಸಮಸ್ತ ಪ್ರಪಂಚವನ್ನು ಬ್ರಹ್ಮವೆಂತಲೇ ನೋಡುತ್ತಿರುವನಾಗು, ತಾನು ಜಡನೆಂಬ ಸ್ಮರಣಮಾತ್ರದಿಂ ಜಡವಾದ ಪ್ರಪಂಚಕ್ಕೆ ಕಾರಣವಾದ ಅವಿದ್ಯೆಯು ಶಾಶ್ವತಪದಾರ್ಥದಂತೆ ಬಲವಾಗುವದು. ಸ್ವರೂಪವಿಚಾರದಿಂ ಜಡಭಾವವು ವಿಸ್ಮೃತವಾಗಲು ಆ ಅವಿದ್ಯೆಯು ನಷ್ಟವಾಗುವದು. ರಾಜಾಜ್ಞೆಯಂ ಜನಗಳು ನಡೆಸುವಂತೆ ಮನಸ್ಸು ಅನುಸಂಧಾನವಂ ಮಾಡಿದ್ದನ್ನೇ ಇಂದ್ರಿಯಗಳು ಸಿದ್ಧಪಡಿಸುವವು. ಆದ್ದರಿಂ ವಿಚಾರಿಸುವ ಜನಗಳು ಜಗತ್ತಿನ ಅಸತ್ಯಭಾವವನ್ನೋಡಿ ಎಂದಿಗೂ ಇದ್ದದ್ದೇ ಇರುವದು; ಇಲ್ಲದ್ದು ಇಲ್ಲವೇ ಇಲ್ಲವೆಂದು ನಿಶ್ಚಯಿಸಿ ಸರ್ವವನ್ನೂ ಬ್ರಹ್ಮಭಾವದಿಂದಲೇ ನೋಡುತ್ತಾ ಎರಡನೇ ಪದಾರ್ಥವೇ ಇಲ್ಲದಿರುವದ್ದರಿಂದ ಆಶೆಯಂ ನಿಶ್ಶೇಷವಾಗಿ ಬಿಡುವರು. ಅದು ಇದೆಂಬುವದೇ ಮೊದಲಾಗಿರುವ ಅಜ್ಞಾನಮೂಲಕವಾದ ವಾಸನೆಯಿಂದುಂಟಾದ ಪ್ರಪಂಚವು ಸರ್ವವೂ ಬ್ರಹ್ಮವಲ್ಲದೇ ಮತ್ತೊಂದಿಲ್ಲವೆಂಬ ಜ್ಞಾನದಿಂ ನಿರ್ಮೂಲವಾಗಿ ಹೋಗುವದು. ಈ ಅವಿದ್ಯಾವಿಲಾಸದಿಂದಜ್ಞಾನಿಗಿರುವನಿಗೆ ರಜ್ಜುಸರ್ಪಗಳೆಂಬ ವಿಕಲ್ಪವುಂಟಾಗಿರುವದು. ವಿಚಾರದಿಂ ಸ್ವರೂಪವಂ ತಿಳಿದ ಪ್ರಾಜ್ಞನಿಗೆ ದ್ವೈತಾದ್ವೈತಗಳನ್ನತಿಕ್ರಮಿಸಿದ ಬ್ರಹ್ಮ ಒಂದೇ ಸರ್ವಸ್ವರೂಪವಾಗಿ ಪ್ರಕಾಶಿಸುತ್ತಿರುವದು. ವಿವೇಕದಿಂ ನೋಡುವಲ್ಲಿ ಅರಗು ಮರಗಳಿಗೂ ಹಣ್ಣು ಮಡಕೆಗಳಿಗೂ ಸಂಬಂಧವಿದ್ದಾಗ್ಯೂ ಇಲ್ಲದಂತೆಯೇ ತೋರುತ್ತಿರುವದು. ಹೀಗಿರುವಲ್ಲಿ ಚಿದ್ರೂಪನಾದ ಆತ್ಮನಿಗೂ ಜಡವಾದ ದೇಹಕ್ಕೂ ಎಂಥಾ ಸಂಬಂಧವೋ ದೇಹವು ಹ್ಯಾಗೆ ನಾನೆನಿಸುವದೋ

ನೀನೇ ನೋಡುವನಾಗು. ಚೀಲವು ಭಸ್ಮವಾಗುವಲ್ಲಿ ಚೀಲದಲ್ಲಿದ್ದ ವಾಯುವಿಗೆ ಹ್ಯಾಗೆ ನಾಶವಿಲ್ಲವೊ ಹಾಗೆ ದೇಹನಾಶದಿಂದಾತ್ಮನಿಗೆ ನಾಶವಿಲ್ಲವೆಂದು ನಿಶ್ಚಯಿಸಿ ದೇಹ ನಾನೆಂಬ ಅಜ್ಞಾನವಂ ಬಿಡುವನಾಗು. ಸರ್ವಕ್ಕೂ ಮನವೇ ಕಾರಣವಾದ್ದರಿಂದ ದೇಹ ನಾನೆಂದು ಭಾವಿಸುವನು. ಬದ್ಧನಾಗಿ ದುಃಖಪಡುತ್ತಿರುವನು ಬ್ರಹ್ಮ ನಾನೆಂದು ಭಾವಿಸುವನು. ಜೀವನ್ಮುಕ್ತನಾಗಿ ಆನಂದವನ್ನನುಭವಿಸುತ್ತಿರುವನು. ಎಂದೆಂದಿಗೂ ಪೋಗದ ಸತ್ಯವಾದ ಬ್ರಹ್ಮವು ಎಲ್ಲಿಗೋ ಪೋಗಿ ಎಂದಿಗೂ ಇಲ್ಲದ ಸುಳ್ಳಾದ ಪ್ರಪಂಚವೇ ಪ್ರತ್ಯಕ್ಷಾನುಭವಸಿದ್ಧವಾಗಿರುವಲ್ಲಿ ಅವಿದ್ಯಾಮಹಿಮೆಯನ್ನೆಂತೆಂದು ಬಣ್ಣಿಸಬೇಕು. ಅವಿದ್ಯೆಯಿಂ ದೇಹವಂ ತಾನೆಂದು ಅಭಿಮಾನಿಸುವನಿಗೆ ಮಲಮೂತ್ರಾದಿಸ್ಥಾನವಾದ ನಾರಿಯು ತಾರಕೆಯಂತೆಯೂ, ಮಿಂಚಿನಂತೆಯೂ, ಚಿನ್ನದ ಬಳ್ಳಿಯಂತೆಯೂ, ರತ್ನದ ಬೊಂಬೆಯಂತೆಯೂ ತೋರುವಳು. ಅವಳು ಕಣ್ಣೆದುರಿಗೆ ಇಲ್ಲದಿರುವ ಕ್ಷಣಮಾತ್ರದಲ್ಲಿ ಬೆಳ್ದಿಂಗಳು ಕಾಡುಗಿಚ್ಚಾಗುವದು. ತಂಪಾದ ಸುಳಿಗಾಳಿಯು ಪ್ರಳಯಕಾಲದ ವಿಷಮಾರುತವಾಗುವದು. ಇಂತು ಮನೋಹರವಾದ ಪದಾರ್ಥಗಳೆಲ್ಲವೂ ಪ್ರಾಣಹರವಾಗುವಲ್ಲಿ ಅವಿದ್ಯಾವಿಲಾಸವನ್ನೆಂತು ಪೇಳಬಹುದು. ಅವಿದ್ಯೆಯಿಂದುಂಟಾದ ಸಂಸಾರವಾಸನೆಗಳು ಮನಕ್ಕೆ ಸೇರದಿದ್ದಲ್ಲಿ ಸ್ವಪ್ನ ಜಾಗರಾದ್ಯವಸ್ಥೆಗಳು ಹ್ಯಾಗೆ ದುಃಖಕರವಾದಾವು. ಮೋಹಕರವಾದ ವಿಷದ ಬಳ್ಳಿಯಂತೆ ಅವಿದ್ಯೆಯಿರುವವರಿಗೆ ಯಾವ ದುಃಖವೂ ತಪ್ಪಲಾರದಾದ್ದರಿಂದ ವಿವೇಕ ವಿಚಾರಾದಿಗಳಿಂದ ಅವಿದ್ಯೆಯಂ ನಿಶ್ಶೇಷವಾಗಿ ತೊಲಗಿಸುವನಾಗು. ಇದಕ್ಕೆ ಬ್ರಹ್ಮವಾಸನೆಯೇ ನಿರ್ನಾಮಕವಾದ್ದರಿಂದ ಸರ್ವಾತೀತನಾಗಿರುವ ಸರ್ವವ್ಯಾಪಿಯಾದ ಪರಮಾತ್ಮನಿಗೆ ನಾನು ಅಭಿನ್ನನೆಂದು ಭಾವಿಸುತ್ತಾ ಪ್ರತಿಬಿಂಬವಂ ಪಿಡಿಯುವ ಕನ್ನಡಿಯಂತೆ ವ್ಯವಹಾರದಲ್ಲಿ ಆಯಾಯ ಪದಾರ್ಥಗಳಂ ಪಿಡಿಯುತ್ತಿದ್ದಾಗ್ಯೂ ಅವುಗಳಲ್ಲಿ ಆಸಕ್ತನಾಗದೇ ತಟಸ್ಥನಾಗಿರುವನಾಗೆಂದು ವಸಿಷ್ಠನು ಪೇಳುತ್ತಿರುವಲ್ಲಿ ಬಿರಿಗಾಳಿಯಿಂ ಹಾರಿಸಲ್ಪಟ್ಟ ಮೋಡದಿಂದೀಚೆಗೆ ಬಂದ ಚಂದ್ರನಂತೆ ಶ್ರೀರಾಮಚಂದ್ರನು ಅವಿದ್ಯಾನಾಶದಿಂ ಪ್ರಕಾಶಿಸುತ್ತಾ ಸಂತೋಷಾಶ್ಚರ್ಯಗಳಿಂ ಕೂಡಿ ಪೇಳಿದನದೆಂತೆನೆ.

ಎಲೈ ಜಗದ್ಗುರುವೇ ಇಲ್ಲದಿರುವ ಅವಿದ್ಯೆಯಿಂ ವಶೀಕೃತರಾಗಿರುವ ಜನರಂ ನೋಡುವಲ್ಲಿ ತಾವರೆಯಧಾರದಿಂ ಬೆಟ್ಟಗಳು ಕಟ್ಟಲ್ಪಟ್ಟವೆಂಬುವದೂ ಕೂಡ ಆಶ್ಚರ್ಯಕರವಾಗುವದಿಲ್ಲ. ಇದರಿಂದ ಇಲ್ಲದ ಪ್ರಪಂಚವೂ ಕೂಡ ಸತ್ಯವಾಗಿರುವಂತೆ ಕಾಣುತ್ತಿರುವದು. ಅಮೃತಕಲಶ ಸಂಪರ್ಕದಿಂ ದರ್ಭೆಯು ವಜ್ರವಾ

ದಂತೆ ತೃಣ ಪ್ರಾಯವಾದ ಕಲ್ಪನಾ ಪಿಶಾಚವು ಪರ್ವತಾಕಾರವಾಗುವದು ಭಾವನಾಮಾತ್ರದಿಂದುಂಟಾದ ಸಂಸಾರವು ಸಮುದ್ರದಂತೆ ದಾಟಲಶಕ್ಯವಾಗುವದು. ಪ್ರಪಂಚದಲ್ಲಿ ಮಹಾನದಿಯಂತೆ ಅಖಂಡವಾಗಿ ಪ್ರವಹಿಸುವ ಮಾಯೆಯ ಸ್ವರೂಪವಂ ಮರಳಿ ನನಗೆ ಪೇಳುವನಾಗು ದೇಹಾತ್ಮರುಗಳಲ್ಲಿ ಸಂಸಾರವು ಯಾವದಕ್ಕೊ ಏತಕ್ಕೆ ಹೀಗೆ ಲವಣರಾಜನು ದುಃಖವಂ ಪಡದನೋ ಅವನಿಗೆ ಇಂಥಾ ಆಟದವನ್ನುಂಟು ಮಾಡಿದ ಆಟಗಾರನು ಏತಕ್ಕೆ ಅದೃಶ್ಯವಾಗಿ ಹೋದನೋ ಇದೆಲ್ಲವನ್ನು ಅನುಗ್ರಹದಿಂ ನಿರೂಪಿಸುವನಾಗು ಎಂದು ಕೇಳಲು ವಸಿಷ್ಠನಿಂತೆಂದನು. ಎಲೈ ಸುಬುದ್ಧಿಯೆ ಲವಣರಾಜನ ಶರೀರವು ಸಿಂಹಾಸನದ ಮೇಲೆ ಇರುವಲ್ಲಿಯೇ ಆ ರಾಜನು ಇಂತು ಕಷ್ಟಪಟ್ಟದ್ದರಿಂದ ಗೋಡೆಕಟ್ಟೆಗೆಗಳಿಗೆ ಸರಿಯಾದ ಶರೀರಕ್ಕೆ ಯಾವ ಕಷ್ಟವು ಇಲ್ಲವೆಂದು ಸ್ಪಷ್ಟವಾಗಿಯೆ ಕಾಣುತ್ತಿರುವದು. ಲೋಹಕಾಂತದ ಸಾನ್ನಿಧ್ಯದಿಂ ಲೋಹವು ಚಲಿಸುವಂತೆ ಚಿದ್ರೂಪನಾದ ಆತ್ಮನ ವ್ಯಾಪನೆಯಿಂ ಸ್ವರೂಪಯೋಗ್ಯತೆಯಂಪಡವು ಜೀವನೆನಿಸಿಕೊಂಡ ಚಿತ್ತವೇ ನಾನಾಪ್ರಕಾರವಾದ ಆಕಾರಗಳಂವಹಿಸಿ ನಾನಾರೂಪವಾದ ಸಂಸಾರಗಳನ್ನನುಭವಿಸುವದು. ಕೆಂದಾಸವಾಳದ ಸಾನ್ನಿಧ್ಯದಿಂ ಕೆಂಪಾದ ಸ್ಫಟಿಕದಂತೆ ಚಿತ್ತದ ಅಭಿಮಾನದಿಂದಾತ್ಮನೆ ಜೀವನೆಂತಲೂ, ಅಹಂಕಾರವೆಂತಲೂ, ಮನವೆಂತಲೂ, ಪೇಳಲ್ಪಡುವನು. ಹೀಗಿರುವದ್ದರಿಂದ ದೇಹವುಳ್ಳ ಆತ್ಮನಿಗೆ ಸುಖದುಃಖಗಳೆಂದು ತಿಳಿಯಬರುತ್ತೆ ಆದರೆ ಅವಿದ್ಯೆಯೆಂಬ ನಿದ್ರೆಯಿಂ ಬಿದ್ದಿರುವ ಜೀವನೆ ಸ್ವಪ್ನಸಮಾನವಾದ ಸಂಸಾರ ದುಃಖಗಳನ್ನನುಭವಿಸುವನು. ಇವನಿಗೆ ಜ್ಞಾನೋದಯವಾಗಲು ಸೂರ್ಯೋದಯದಿಂ ಕಮಲದ ಗರ್ಭದಲ್ಲಿದ್ದ ಭ್ರಮರದಂತೆ ಹೃದಯದೊಳಗಿದ್ದ ಅಜ್ಞಾನವು ಪೋಗುವದು. ಸುಷುಪ್ತಿಯಂತೆ ಅಜ್ಞಾನವು ಘನವಾಗಿರುವಲ್ಲಿ ಯಾವವಿಚಾರವು ಸಂಭವಿಸಲಾರದು. ಪೂರ್ವ ಪುಣ್ಯವಿಶೇಷಗಳಂತಿರುವ ಸತ್ಪುರುಷರ ಸಹವಾಸದಿಂದ ಅಜ್ಞಾನವು ಸ್ವಲ್ಪಹರಿಯಲು ಸ್ವಪ್ನದಂತೆ ಶುಭಾಶುಭ ಮಿಶ್ರವಾದ ವಿವೇಕ ವಿಚಾರಾದಿಗಳುಂಟಾಗುವವು. ಅದರಿಂ ನಾನಾಪ್ರಕಾರವಾದ ಕರ್ಮಗಳಂ ಮಾಡುತ್ತಾ ಸಂಸಾರ ಚಕ್ರದಲ್ಲಿ ಭ್ರಮಿಸುತ್ತಿರುವನು. ಅದರಲ್ಲಿ ದುಃಖಪಡಲಾರದೆ ವಿರಕ್ತನಾಗಿ ಸತ್ಪುರುಷರ ಸಹವಾಸದಿಂದಲೇ ಶುದ್ಧವಾದ ವಿವೇಕ ವಿಚಾರಾದಿಗಳುಂಟಾಗಲು ಅದರಿಂ ಜಾಗರದಂತೆ ಜ್ಞಾನೋದಯವಾಗುವದು. ಆಗ ಸೂರ್ಯಪ್ರಕಾಶದಿಂ ಪದಾರ್ಥದಂತೆ ತತ್ವಾರ್ಥವು ಗೋಚರವಾಗಲು ಪುರುಷನು ಸಮಾಹಿತ ಚಿತ್ತನಾಗಿ ಜೀವನ್ಮುಕ್ತನೆನಿಸುವನು. ಪ್ರಕೃತದಲ್ಲಿ ಲವಣರಾಜನ ವೃತ್ತಾಂತ

ದಿಂದಲೇ ಸಂಸಾರದರೀತಿಯು ತಿಳಿಯುವದ್ದರಿಂದದನ್ನೇ ವಿವರಿಸುವೆನು. ಸಾವಧಾನವಾಗಿ ಕೇಳುವನಾಗು. ಈ ಲವಣ ರಾಜೇಂದ್ರನು ಒಂದಾನೊಂದುದಿವಸ ಏಕಾಂತದಲ್ಲಿ ಕುಳಿತು ನಮ್ಮ ಪಿತಾಮಹನಾದ ಹರಿಶ್ಚಂದ್ರನು ರಾಜಸೂಯವಂ ಮಾಡಿ ಸುಧರ್ಮೆಯೊಳಿಂದ್ರನಂತೆ ಶ್ವೇತಚ್ಛತ್ರದಿಂದಲಂಕೃತವಾದ ಸಿಹ್ಮಾಸನವನ್ನಲಂಕರಿಸುತ್ತಿರುವನು. ಹಾಗೆ ನಾನು ಯಜ್ಞವಂ ಮಾಡಬೇಕಾದರೆ ಸಮಸ್ತರಾಜರಿಂದಲೂ ಕೈಗಾಣಿಕೆಗಳು ಬರಬೇಕಾದ್ದರಿಂದ ಅನೇಕಜನರಿಗೆ ಘಾತಪಾತಾದಿಗಳು ಸಂಭವಿಸುವವು. ಕರ್ಮಗಳಲ್ಲಿ *ಮಾನಸಿಕವೇ ಸರ್ವೋತ್ತಮವಾದ್ದರಿಂದಲೂ, ಅದರಲ್ಲಿ ಘಾತಪಾತಗಳಿಲ್ಲದ್ದರಿಂದಲೂ, ಕರ್ತೃವು ಭೋಕ್ತೃವು ಪುರುಷನೂ ಕೂಡ ಮನಸ್ಸೇ ಆದ್ದರಿಂದಲೂ, ನಾನು ಮಾನಸಿಕವಾಗಿ ರಾಜಸೂಯವಂ ಮಾಡುವೆನೆಂದಾಲೋಚಿಸಿ ಮನಃಕಲ್ಪನೆಯಿಂದಲೇ ಸಮಸ್ತ ಪದಾರ್ಥಗಳನ್ನು ಋತ್ವಿಕ್ಕು ಮೊದಲಾದ ಜನಗಳನ್ನು ಸಿದ್ಧಪಡಿಸಿಕೊಂಡು ಭಾವನೆಯಿಂದಲೇ ಆ ಯಜ್ಞವಂ ನೆರವೇರಿಸಿದೆನು. ಯಾವನು ರಾಜಸೂಯವಂ ಮಾಡುವನೋ ಅವನು ಹನ್ನೆರಡು ವರ್ಷ ಕಷ್ಟಪಡತಕ್ಕದ್ದೆಂಬ ನಿಯಮವಿರುವದ್ದರಿಂದ, ಇಂದ್ರನಿಂ ಕಳುಹಿಸಲ್ಪಟ್ಟ ದೇವದೂತನು ಆಟಗಾರನ ರೂಪದಿಂ ಬಂದು ಆ ರಾಜೇಂದ್ರನಿಗೆ ಅಂಥಾ ಮೋಹವನ್ನುಂಟುಮಾಡಿದನು. ಈ ಅರ್ಥವು ಧ್ಯಾನದೃಷ್ಟಿಯಿಂ ನನಗೆ ಗೋಚರವಾದ್ದರಿಂದ ಆಟಗಾರನು ಅದೃಶ್ಯವಾಗುವದಕ್ಕೆ ಕಾರಣವೇನೆಂದು ವಿಚಾರಪಡುತ್ತಿರುವಲ್ಲಿ, ಆ ರಾಜನಿಗೆ ಈ ಅರ್ಥವಂ ನಾನೆ ತಿಳುಪಿದೆನು. ಈ ಕಷ್ಟವು ಸಿದ್ಧವಾದ್ದರಿಂದಾರಾಜೇಂದ್ರನಿಗೆ ರಾಜಸೂಯಫಲವಾದ ಸುರಲೋಕ ಸೌಖ್ಯವೂ ಬೊಕ್ಕಸಕ್ಕೆ ಸೇರಿಸಿದಪಣದಂತೆ ಸಿದ್ಧವಾಗಿರುವದೆಂದು ತಿಳಿಯತಕ್ಕದ್ದು. ವಚನ ಶರೀರಗಳಿಂ ನಡೆದ ಕರ್ಮವೂ ಮನಃಪೂರ್ವಕವಾಗಿದ್ದರೆ ಸಾಂಗವಾಗಿ ಫಲವಾಗುವದು. ಮನವು ಚಪಲವಾಗಿದ್ದರೆ ಅದಕ್ಕೆ ತಕ್ಕಷ್ಟೇ ಫಲವಾಗುವದು. ಆದ್ದರಿಂ ಶಾಸ್ತ್ರವಿಚಾರವೆಂಬ ಸಾಣೆಯಲ್ಲಿ ಮನವೆಂಬ ರತ್ನವಂ ತೇಯುತ್ತಾ ನಿರ್ಮಲವಾಗಿ ಮಾಡಿಕೊಂಡರೆ ಅದರ ಪ್ರಕಾಶದಿಂ ಪರಮಾರ್ಥವಸ್ತುವು ಗೋಚರವಾಗುವದು. ಶಾಸ್ತ್ರವಿಚಾರದಲ್ಲಿ ಮನವು ನಿಲ್ಲಲು ಪ್ರವಾಹದಲ್ಲಿಬಿದ್ದ ಹಸೀಮಡಿಕೆಗಳಂತೆ ಭಾವಗಳೆಲ್ಲವೂ ಒಂದಾಗಿ ಕರಗಿಹೋಗುವವು. ಸಕಲಸಂಸಾರಾಡಂಬರಕ್ಕೆ ಕಾರಣವಾಗಿ ಅತಿಚಪಲವಾಗಿರುವ ಮನವು ಬ್ರಹ್ಮದಲ್ಲಿ ಲೀನವಾಗುವ ಉಪಾಯವಂ ಕೇಳುವನಾಗು. ಕ್ಷೀರಾಬ್ಧಿಶಯನ

* ಮನಸ್ಸಿನ ಧ್ಯಾನದಿಂದ ನೆರವೇರಿಸುವ ಮನೋಮಯಾತ್ಮಕವಾದ ಕರ್ಮಕೆ ಮಾನಸಿಕವೆಂದು ಹೆಸರು.

ಶ್ರೀಮನ್ನಾರಾಯಣನ ಪ್ರಥಮಸಂಕಲ್ಪರೂಪನಾದ ಬ್ರಹ್ಮನು ಮನಸ್ಸಮಷ್ಟಿಸ್ವರೂಪನೆನಿಸುವನು. ಇವನ ಕಲ್ಪನೆಯಿಂದಲೇ ಈ ಬ್ರಹ್ಮಾಂಡ ಉಂಟಾಗಿರುವದು. ಮಹಾಪ್ರಳಯದಲ್ಲಿ ಈ ಬ್ರಹ್ಮನು ಲಯವಾಗಲು ಮತ್ತೊಬ್ಬ ಬ್ರಹ್ಮನಿಂದ ಪುನಸ್ಸೃಷ್ಟಿಯಾಗುವನು. ಇದೇಪ್ರಕಾರ ಅನೇಕಕೋಟಿ ಬ್ರಹ್ಮಾಂಡಗಳಲ್ಲೂ ಸೃಷ್ಟಿಕ್ರಮಗಳು ಸಮುದ್ರದಲ್ಲಿ ತೆರೆಗಳಂತೆ ಆಗುತಲಿರುವವು. ಸತ್ವರಜಸ್ತಮೋಗುಣಭೇದದಿಂ ನಾನಾಪ್ರಕಾರವಾದ ಸೃಷ್ಟಿಯಲ್ಲಿ ಯಾವ ಪುರುಷನು ಬಾಲ್ಯಾದಿಯಾಗಿ ಗುರುಕುಲಶಿಕ್ಷಿತನಾಗಿ ಸತ್ಕರ್ಮಗಳಿಂ ಪರಮೇಶ್ವರನ ಕೃಪೆಗೆ ಪಾತ್ರನಾಗುವನೋ ಅವನಿಗೆ ಮೋಕ್ಷಸಾಮ್ರಾಜ್ಯವೆಂಬ ಉಪ್ಪರಿಗೆಯನ್ನೇರುವದಕ್ಕೆ ಉಪಯುಕ್ತವಾದ ಸೋಪಾನದಂತಿರುವ ಜ್ಞಾನಭೂಮಿಕೆಗಳುಂಟಾಗುವವು. ದೋಷಜ್ಞಾನವಿಲ್ಲದೆ ಗುಣಜ್ಞಾನವಾಗುವದು ದುರ್ಲಭವಾದ್ದರಿಂದ ಮೊದಲು ಅಜ್ಞಾನಭೂಮಿಕೆಗಳಂ ವಿವರಿಸುವೆನು. ಬೀಜಜಾಗ್ರತ್, ಮಹಾಜಾಗ್ರತ್, ಜಾಗ್ರತ್ಸ್ವಪ್ನ, ಸ್ವಪ್ನ, ಸ್ವಪ್ನಜಾಗ್ರತ್, ಸುಷುಪ್ತಿ ಎಂದು ಏಳು ಅಜ್ಞಾನಭೂಮಿಕೆಗಳು ಆತ್ಮನಿಗೆ ವಾಸನಾವಿಶೇಷದಿಂ ಸ್ವರೂಪಸ್ಥಿತಿ ತಪ್ಪಿ ಬಾಹ್ಯವಿಹಾರೇಚ್ಛೆಯುಂಟಾಗುವದೇ ಬೀಜಜಾಗ್ರತ್ ಸ್ಥೂಲದೇಹವು ತಾನೆಂತಲೂ, ಭೋಗ್ಯವಸ್ತುವಿದು ತನ್ನದೆಂತಲೂ ಗ್ರಹಿಸಿರುವದೇ ಜಾಗ್ರತ್ ತಾನು ತನ್ನದೆಂಬ ದೃಢವಾದ ಬುದ್ಧಿಯಿಂ ಪೂರ್ವಸ್ಮರಣೆ ತಪ್ಪಿವ್ಯವಹರಿಸುತ್ತಿರುವದೇ ಮಹಾಜಾಗ್ರತ್ ಈಜಾಗ್ರದವಸ್ಥೆಯಲ್ಲಿ ಪ್ರಕೃತವ್ಯವಹಾರವಂಬಿಟ್ಟು ಮನೋರಥಪರಂಪರೆಯಿಂ ಚಿಂತಿಸುವದು. ಶುಕ್ತಿರಜತಾದಿ ಭ್ರಮೆಯು ಸಹ ಜಾಗ್ರತ್ಸ್ವಪ್ನವು ನಿದ್ರಾವೇಶದಿಂ ಸ್ಥೂಲದೇಹಜ್ಞಾನವಿಲ್ಲದೆ ಸೂಕ್ಷ್ಮಶರೀರದಲ್ಲಿದ್ದುಕೊಂಡು ವಾಸನಾತ್ಮಕವಾದ ವಿಚಿತ್ರ ಪದಾರ್ಥಗಳನ್ನನುಭವಿಸುವದೇ ಸ್ವಪ್ನವು. ಸ್ವಪ್ನದಲ್ಲಿ ಜಾಗ್ರದ್ವಾಸನೆಯಿಂದ ಇಂಥಾಸ್ವಪ್ನವಂ ಕಂಡೆನೆಂದು ತಿಳಿಯುವದೇ ಸ್ವಪ್ನಜಾಗ್ರತ್ ಈ ಅವಸ್ಥೆಗಳು ಅವಾಂತರ ಭೇದಗಳಿಂದನೇಕಪ್ರಕಾರವಾಗುವವು. ಅಜ್ಞಾನಮಯವಾದಕಾರಣಶರೀರವು ಮನವು ಹೊಂದಿಮೂಢವಾಗಿರುವದೇ ಸುಷುಪ್ತಿಯು ಸುಷುಪ್ತಿಯ ಅಂತ್ಯಭಾಗದಲ್ಲಿ ಬೀಜ ಜಾಗ್ರತ್ತು ಉಂಟಾಗುವದು. ಇದರ ಅಂತ್ಯಭಾಗದಲ್ಲೂ ಜಾಗ್ರತ್ತಿನ ಅಂತ್ಯಭಾಗದಲ್ಲೂ ಸ್ವಪ್ನಸ್ವಪ್ನ ಜಾಗ್ರತ್ತುಗಳುಂಟಾಗವವು. ಈ ಸ್ವಪ್ನದ ಕೊನೆಯಲ್ಲಿ ಜಾಗ್ರತ್ ಮಹಾಜಾಗ್ರತ್ ಜಾಗ್ರತ್ಸ್ವಪ್ನಗಳುಂಟಾಗುವವು. ಬುದ್ಧಿಶಾಲಿಯಾದವನು ಈ ಅಜ್ಞಾನಭೂಮಿಕೆಗಳ ವಿವರವಂ ಚನ್ನಾಗಿ ತಿಳಿಯತಕ್ಕದ್ದು. * ಶುಭೇಚ್ಛಾ, ವಿಚಾರಣಾ, ತನು

* ಇವುಗಳ ವಿಸ್ತಾರವಾದ ವ್ಯಾಖ್ಯಾನಕ್ಕೆ ಪುರವಣಿಯನ್ನು ನೋಡುವದು.

ಮಾನಸಾ, ಸತ್ವಾಪತ್ತಿ, ಅಸಂಸಕ್ತಿ, ಪದಾರ್ಥಾಭಾವನೆ, ತುರ್ಯಗಾ ಯೆಂದು ಏಳು ಜ್ಞಾನಭೂಮಿಕೆಗಳು ಇವುಗಳನ್ನೇ ಯೋಗಭೂಮಿಕೆಗಳೆಂತಲೂ ಹೇಳು ವರು. ಇವುಗಳ ಸಿದ್ಧಿಯಿಂ ಮುಕ್ತಿಯಾಗಲು ಪುನರ್ಜನ್ಮದುಃಖವಿಲ್ಲವೆಂದು ತಿಳಿಯತಕ್ಕದ್ದು. ಸಜ್ಜನ ಸಂದರ್ಶನಾದಿಗಳಿಂ ದುರ್ಬುದ್ಧಿಯಳಿಯಲು ತತ್ವಾ ರ್ಥವಂ ತಿಳಿಯಬೇಕೆಂಬ ಅಪೇಕ್ಷೆಯೇ ಶುಭೇಚ್ಛೆಯು. ಸತ್ಪುರುಷರೆಡೆಯಲ್ಲಿ ಶಾಸ್ತ್ರಾರ್ಥವಂ ವಿಚಾರಿಸುತ್ತಾ ಸದಾಚಾರದಲ್ಲಿ ಪ್ರವರ್ತಿಸುವದೇ ವಿಚಾರಣೆ ಯು. ಈ ಎರಡರ ಅಭ್ಯಾಸದಿಂ ವಿಷಯಗಳಲ್ಲಿ ಅಪೇಕ್ಷೆ ತಪ್ಪುವದೇ ತನುಮಾ ನಸೆಯು. ಇದು ವಿಚಾರಣೆಯಿಂದುಂಟಾಗುವಲ್ಲಿ ಸ್ವರೂಪಧ್ಯಾನವು ಸಂಭವಿಸಿ ದಾಗ ಶಬ್ದಾದಿಜ್ಞಾನ ಉಂಟಾಗುವದ್ದರಿಂದ ಇದು ಸವಿಕಲ್ಪಸಮಾಧಿಯೆನಿಸು ವದು. ಈ ಮೂರರ ಅಭ್ಯಾಸದಿಂ ಸ್ವರೂಪಧ್ಯಾನದಲ್ಲಿ ಸ್ಥಿತಿಯುಂಟಾಗಿ ಶಬ್ದಾದಿಜ್ಞಾನವು ಸಂಭವಿಸದಿರುವದೇ ಸತ್ವಾಪತ್ತಿಯು. ಇದೇ ನಿರ್ವಿಕಲ್ಪಸ ಮಾಧಿಯೆನಿಸುವದು. ಈ ನಾಲ್ಕರ ಅಭ್ಯಾಸದಿಂ ಸಹಜಾನಂದವು ಗೋಚರ ವಾಗಿ ಅಂತರಬಾಹ್ಯವಸ್ತುಗಳ ಸಂಬಂಧಾಪೇಕ್ಷೆ ತಪ್ಪುವದೇ ಅಸಂಸಕ್ತಿಯು. ಈ ಐದರ ಅಭ್ಯಾಸದಿಂ ಬ್ರಹ್ಮೇತರ ಪದಾರ್ಥ ವಾಸನೆಯಳಿದು ಸರ್ವವೂ ಬ್ರ ಹ್ಮವೆಂತಲಾಗಲಿ ಬ್ರಹ್ಮಾಭೇದದಿಂ ತಾನೆ ಸರ್ವವೆಂತಲಾಗಲಿ ದೃಢವಾದ ಜ್ಞಾನ ಉಂಟಾಗುವಲ್ಲಿ ಪರಪ್ರೇರಣೆಯಿಂದಲೇ ಪದಾರ್ಥಜ್ಞಾನವಾಗುತ್ತಿರಲಾ ಸ್ಥಿತಿಯೇ ಪದಾರ್ಥಾಭಾವನೆಯೆನಿಸುವದು. ಈ ಆರ್‍ರ ಅಭ್ಯಾಸಬಲದಿಂ ನಿಶ್ಶೇಷವಾಗಿ ಭೇದವಾಸನೆಯಳಿದು ಸ್ವರೂಪಜ್ಞಾನಮಾತ್ರಕ್ಕೆ ಪ್ರಕಾಶವಿರುವದೇ ತುರ್ಯಗೆಯೆ ನಿಸುವದು. ಇದನ್ನೇ ಜೀವನ್ಮುಕ್ತಿಯೆಂಬುವರು. ಈ ಭೂಮಿಕೆಯಲ್ಲಿ ಸ್ಥಿತಿ ಯುಂಪಡದವರು ಬ್ರಹ್ಮೇತರಜ್ಞಾನವಿಲ್ಲದೆ ಸರ್ವಕಾರ್ಯಗಳಂ ಮಾಡುತ್ತಾ ಜೀವ ನ್ಮುಕ್ತರೆಂತಲೂ, ಆತ್ಮಾರಾಮರೆಂತಲೂ, ಮಹಾತ್ಮರೆಂತಲೂ ಪ್ರಖ್ಯಾತರಾಗಿ ರುವರು. ಈ ಭೂಮಿಯನ್ನತಿಕ್ರಮಿಸಿದವರಿಗೆ ಪರರ ದೃಷ್ಟಿಯಿಂ ದೇಹವಿ ದ್ದರೂ ಅವರು ವಿದೇಹಮುಕ್ತರೆನಿಸಿಕೊಳ್ಳುವರಾದ್ದರಿಂದ ಬ್ರಹ್ಮವೆಂತಲೇ ಹೇಳಲ್ಪಡುವರು. ಅದುಕಾರಣ ಆ ಸ್ಥಿತಿಯು ಭೂಮಿಕೆಗಳಲ್ಲಿ ಸೇರಿಸಲ್ಪಡು ವದಿಲ್ಲ. ಶಾಸ್ತ್ರಗಳಲ್ಲಿ ಭೂಮಿಕೆಗಳು ಅನೇಕಪ್ರಕಾರವಾಗಿದ್ದಾಗ್ಯೂ ಈ ಭೂ ಮಿಕೆಗಳು ನನಗೆ ಸಮ್ಮತವಾದ್ದರಿಂದಿವುಗಳಂ ಹೇಳಿರುವೆನು. ಈ ಭೂಮಿಕಾ ಭ್ಯಾಸಿಗಳಲ್ಲಿ ಒಂದೊಂದನ್ನಾಗಿ ಹತ್ತುವಂಥಾವರು ಹತ್ತಿದಂಥಾವರು ಮಧ್ಯ ದಲ್ಲಿರುವಂಥಾವರು ಅಲ್ಲಲ್ಲೇ ನಿಂತಂಥಾವರು ಸಹ ಅನೇಕವಾಗಿರುವರು. ಎಲೈ ರಾಮಚಂದ್ರನೇ ! ಅಖಂಡವಾದ ಸ್ವರೂಪದಲ್ಲಿ ನೆಲೆಸಿರುವದೇ ಮುಕ್ತಿಯು,

ಅದರ ಸ್ಮರಣೆಯಿಲ್ಲದೆ ಭೇದವಾಸನೆಯಿಂ ನಾನೆಂಬ ಬುದ್ಧಿಯುಂಟಾಗುವದೇ ಬಾಧನೆಂದು ಪೇಳಲ್ಪಡುವದು. ಅಖಂಡವಾದ ಚಿನ್ಮಾತ್ರವಸ್ತುವೇ ನಾನೆಂಬ ಜ್ಞಾನದಿಂ ಯಾರಿಗೆ ಭೇದವಾಸನೆಯಿಂದುಂಟಾಗತಕ್ಕ ರಾಗದ್ವೇಷಗಳಣಗುವವೋ ಅವರಿಗೆ ಎಂದಿಗೂ ಅಜ್ಞಾನವು ಸಂಭವಿಸಲಾರದು. ಅಖಂಡವಾದ ಚೈತನ್ಯ ಬಾದೇ ಸರ್ವರೂಪವಾಗಿ ಪ್ರಕಾಶಿಸುತ್ತಿರುವಲ್ಲಿ ಆ ಜ್ಞಾನವಿಲ್ಲದೆ ದೇಹಾಭಿಮಾನದಿಂ ಮನುಷ್ಯಾದಿ ನಾಮಗಳಿಂ ತಮ್ಮಂ ಪೇಳಿಕೊಳ್ಳುವ ಜನರು ತಾವು ಚಿನ್ನವೆಂದು ಪೇಳಿಕೊಳ್ಳುವ ಉಂಗರಗಳಂತೆ ಹಾಸ್ಯಾಸ್ಪದರಾಗುವರು. ಇದ್ದವನಿಗೆ ಬಾದು ಹೋಗುವದೆಂಬ ವಾರ್ತೆ ಸರಿಯಾಗುವದಲ್ಲದೆ ಇಲ್ಲದವನಿಗೆ ಎಂದಿಗೂ ಸರಿಯಾಗದು. ಆದ್ದರಿಂ ಪ್ರಕಾಶವೇ ಉತ್ಪತ್ತಿಯೆಂತಲೂ, ಕಾಣದಿರುವದೇ ನಾಶವೆಂತಲೂ ತಿಳಿಯಬೇಕಾಗುತ್ತೆ.

* ಬಾಹ್ಯಕರಣಾಂತಃಕರಣಗಳಿಗೆ ಗೋಚರವಾದ್ದೆಲ್ಲವೂ ಕೆಲವುಕಾಲವಿರುವವು. ಕೆಲವುಕಾಲವಿಲ್ಲದಿರುವದ್ದರಿಂದ ಶಾಸ್ತ್ರೋಕ್ತಿಯಿಂದಲೂ, ಗುರೂಪದೇಶದಿಂದಲೂ, ವಿಚಾರದಿಂದಲೂಕೂಡ ಎಂದೆಂದಿಗೂಹೋಗದೆ ಶಾಶ್ವತವಾಗಿರುವಂಥಾದ್ದು ಬ್ರಹ್ಮವಲ್ಲದೇ ಮತ್ತೊಂದಲ್ಲವೆಂದು ವಿಚಾರದೃಷ್ಟಿಯುಳ್ಳವರಿಗೆಲ್ಲರಿಗೂ ಗೊತ್ತಾಗಿರುವದು. ಉತ್ಪತ್ತಿಗೆ ಪೂರ್ವದಲ್ಲೂ, ನಾಶಾನಂತರದಲ್ಲೂ, ಮಣ್ಣೆನಿಸಿಕೊಳ್ಳುವ ಪದಾರ್ಥಕ್ಕೆ ಮಧ್ಯದಲ್ಲಿ ಬಂದ ಮಡಕೆಯೆಂಬ ಮಾತು ಸುಳ್ಳೋ ದಿಟವೋ ನೀನೇ ನೋಡುವನಾಗು. ಈ ಮಾತು ಸುಳ್ಳಾಗುವಲ್ಲಿ ರೂಪಕ್ಕೆ ನಾಮವೆಂಬ ಕ್ಲಿಪ್ತಿ ಇರುವದ್ದರಿಂದ ನಾಮದೊಡನೆ ರೂಪವು ಸುಳ್ಳೆನಿಸುವದು. ಮಡಕೆಯು ಆಕಾರವಿರುವ ಪರ್ಯಂತರವೂ ಮಣ್ಣೇ ಆಕಾರ ವಿಶೇಷದಿಂ ಮಡಕೆಯೆನಿಸಿಕೊಳ್ಳುವದೆಂಬ ಅರ್ಥವು ಸಿದ್ಧವಾಗಲು ಮಣ್ಣೆಂಬ ವಾಸನೆಯಿಂದ ಮಡಕೆಯು ರೂಪವಿದ್ದರೂ ಇಲ್ಲದಾತೆಯೇ ಇರುವದು. ಹೀಗೆ ಚಿನ್ಮಾತ್ರವಾದ ಬ್ರಹ್ಮವೇ ಪ್ರಪಂಚವೆನಿಸಿಕೊಳ್ಳುವದಲ್ಲದೆ ಮತ್ತೊಂದಿಲ್ಲ. ಹೀಗೆ ಇರುವದ್ದರಿಂದ ಸರ್ವವೂ ಬ್ರಹ್ಮವೆಂತಲೇ ಜ್ಞಾನಿಗಳು ಸ್ಥಾಪಿಸುವರು. ಹೀಗೆ ಅಖಂಡವಾದ ಬ್ರಹ್ಮ ಬಾದೇ ಪ್ರಕಾಶಿಸುತ್ತಿರುವಲ್ಲಿ ನಾನು ನನ್ನದೆಂಬ ಭೇದವು ಹ್ಯಾಗೆ ಉಂಟಾಯಿತೋ ಚನ್ನಾಗಿ ಚಿಂತಿಸುವನಾಗು. ನಾನೆಂಬುವದೇ ಭ್ರಾಂತಿಯೆನಿಸುವಲ್ಲಿ ನನ್ನದೆಂಬುವದು ಅತ್ಯಂತ ಭ್ರಾಂತಿಯೆನಿಸುವದು. ಈ ಬ್ರಹ್ಮಕ್ಕೆ ರೂಪಾಂತರವಂ ವಹಿಸುವದು. ಮರಳಿ ಸ್ವರೂಪವಂ ತಾಳು

* ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್ ಇವುಗಳು ಬಾಹ್ಯಕರಣಗಳು; ಮನಸ್ಸು ಅಂತಃಕರಣವು.

ವವು ಸವ ಸ್ವಾಭಾವಿಕವಾದ ಲೀಲೆಯಾಗಿರುವದು. ಜಡವಲ್ಲದ ಪದಾರ್ಥವು ಸುಪ್ತ್ಮನಿರೀಲಾದದ್ದರಿಂದ ಬ್ರಹ್ಮವೇ ಹೀಗೆ ಆಡುತ್ತಿರುವದು. ಅದ್ವಿತೀಯ ವಾದ ಬ್ರಹ್ಮವು ಲೀಲೆಗೆ ಉಪಯುಕ್ತವಾದ ಎರಡನೇ ಪದಾರ್ಥವಂ ಸಂಕಲ್ಪಿ ಸುವಲ್ಲಿ ಎರಡನೇ ಪದಾರ್ಥದೊಡನೆಯೇ ಭೇದಭ್ರಾಂತಿಯುಂಟಾಗಿರುವದು. ಆ ಪದಾರ್ಥದೊಡನೆಯೇ ಈ ಭ್ರಾಂತಿಯು ಪೋಗುವದು. ವಿಚಾರದಲ್ಲಿ ಬ್ರಹ್ಮ ಒಂದೇ ನಿಲ್ಲುವದ್ದರಿಂದ ಸಂಕಲ್ಪವಾಗಿಯೂ, ಭ್ರಾಂತಿಯಾಗಿಯೂ, ದ್ವಿತೀಯ ಪದಾರ್ಥವಾಗಿಯೂ, ಬ್ರಹ್ಮವೇ ಪ್ರಕಾಶಿಸುವದೆಂದು ಜ್ಞಾನಿಗಳು ಸ್ಥಾಪಿಸು ವರು. ವಿಚಾರದಿಂದೀ ಅರ್ಥವಂ ತಿಳಿದು ಭೇದವಾಸನೆಯುಂ ಬಿಟ್ಟಿರುವರೇ ಜ್ಞಾನಿಗಳೆನಿಸುವರು. ಇವರಿಗೆ ಜ್ಞಾನಾಭ್ಯಾಸಬಲದಿಂ ಭೇದಜನಕವಾದ ಅಜ್ಞಾ ನವು ನಿಶ್ಶೇಷವಾಗಿ ಅಳಿಯಲು ಜ್ಞಾತೃ, ಜ್ಞಾನ, ಜ್ಞೇಯ, ಕರ್ತೃ, ಕಾರಣ, ಕಾರ್ಯ, ಭೋಕ್ತೃ, ಭೋಗ, ಭೋಗ್ಯ ಮೊದಲಾದ ಸಮಸ್ತ * ತ್ರಿಪುಟಿಗ ಗಳಲ್ಲೂ ಭೇದಬುದ್ಧಿಯಿಲ್ಲದೇ ಪರಾರ್ಥವಾಗಿ ವಿಹರಿಸುವಲ್ಲಿ ಆತ್ಮಾರಾಮ ರೆಂಬ ಪ್ರಸಿದ್ಧಿಯುಂಟಾಗುವದು. ಈ ಮಹಾತ್ಮರಿಗೆ ಅಖಂಡವಾದ ಸಹಜಾ ನಂದವು ಸಾರ್ವಕಾಲಿಕವಾಗಿ ಪ್ರಕಾಶಿಸುವದ್ದರಿಂದ ಈ ಜ್ಞಾನಭೂಮಿಕೆಗಳ ಅಭ್ಯಾಸದಿಂ ದುಃಖಜನಕವಾದ ಅಜ್ಞಾನಭೂಮಿಕೆಗಳಂ ತಿರಸ್ಕರಿಸುತ್ತಾ ಸ್ವರೂ ಪಸ್ಥಿತಿಯಿಂದ ಕೃತಾರ್ಥತೆಯುಂ ಪಡೆಯತಕ್ಕದ್ದೆಂದು ನಿಶ್ಚಯಿಸುವನಾಗು.

ಎಲೈ ರಾಮಭದ್ರನೇ ! ಮಳಲಿನಲ್ಲಿ ತೈಲದಂತೆಯೂ, ಮರುಭೂಮಿಯಲ್ಲಿ ತೊರೆಯಂತೆಯೂ, ಚಿನ್ನದಲ್ಲಿ ಒಡವೆಯಂತೆಯೂ, ಶರೀರದಲ್ಲಿ ಅಹಂಭಾವ ತೋರುತ್ತಿರುವದು. ವಿಚಾರಿಸುವಲ್ಲಿ ಇಲ್ಲದೇ ಇರುವಂತೆ ತೋರುತ್ತಿರುವ ಈ ಅಹಂಭಾವವಂ ಭಾವಿಸುವದೇ ಅವಿದ್ಯೆಯೆಂತಲೂ, ಮಾಯೆಯೆಂತಲೂ, ಸಂ ಸಾರವೆಂತಲೂ ಪೇಳಲ್ಪಡುವದು. ಈ ಅಹಂಭಾವವು ಇರುವದಾಗಲೀ ಇಲ್ಲ ದ್ದಾಗಲೀ ಯಾವನಿಗೆ ಹ್ಯಾಗೆ ತೋರಿರುವದೋ ಅವನಿಗೆ ಹಾಗೆ ಫಲಕಾರಿ ಯಾಗಿರುವದ್ದರಿಂದ ಸ್ವರವಿಕಾರದಿಂ ಬೆದರಿಸಲ್ಪಟ್ಟ ಬಾಲಕನ ಹೃದಯದೋ ಳ್ ಪ್ರಕಾಶಿಸುವ ಭೂತವೇ ಇದಕ್ಕೆ ಸರಿಯೆನಿಸಿಕೊಳ್ಳುವದು. ಇದು ಇರು ವವರಿಗೆ ಯಾರಿಗೂ ದುಃಖ ತಪ್ಪಲಾರದಾದ್ದರಿಂದ ವಿಚಾರದಿಂದಿದಂ ನಿಶ್ಶೇಷ ವಾಗಿ ಹೋಗಲಾಡಿಸುವನೇ ಬುದ್ಧಿಶಾಲಿಯೆನಿಸುವನು. ಸರ್ವವ್ಯವಹಾರ ಕಾ ರಣವಾದ ಈ ಅಹಂಭಾವವೇ ಇಲ್ಲದಿರುವಲ್ಲಿ ಜಾತಿವರ್ಣಾಶ್ರಮ ದೇಶ ಕಾಲ ಭೇದಗಳನ್ನೆಣಿಸುವದು ಹ್ಯಾಗೆ ಎಂದು ಪೇಳುವಲ್ಲಿ, ಎಲೈ ಗುರುವೇ ! ನೀನು

* ತ್ರಿಪುಟಿಯೆಂದರೆ ಮೂರು ವರ್ಗಗಳ ಸಂಸರ್ಗ ಅಂದರೆ ಸಂಬಂಧ.

ಹೇಳುವ ಮಾತು ಸರಿಯಾದದ್ದೆಂದು ತೋರುತ್ತಿದ್ದಾಗ್ಯೂ ಅಹಂಭಾವ ಮೂಲಕವಾದ ಈ ಸರ್ಗವು ತೋರುವದಕ್ಕೆ ಕಾರಣವೇನು, ಇದಂ ಮರಳಿ ನಿರೂಪಿಸುವನಾಗೆಂದು ಶ್ರೀರಾಮನು ಕೇಳಲು, ಪುನಃ ವಸಿಷ್ಠನಿಂತೆಂದನು.

ಎಲೈ ರಾಮಭದ್ರನೇ ! ಜಲವು ದ್ರವಿಸುವಂತೆಯೂ, ತೇಜವು ಪ್ರಕಾಶಿಸುವಂತೆಯೂ, ವಾಯು ಚಲಿಸುವಂತೆಯೂ, ಜ್ಞಾನಸ್ವರೂಪವಾದ ಬ್ರಹ್ಮವು ಸ್ವಸ್ವಭಾವದಿಂದಲೇ ಸುಮ್ಮನಿರಲಾರದೆ ಕ್ರೀಡಾರ್ಥವಾಗಿ ಅಖಂಡವಾದ ತನ್ನಲ್ಲಿ ಇದೆಂಬ ಭೇದವಂ ಕಲ್ಪಿಸಿಕೊಳ್ಳಲು, ಈ ಅಹಂಭಾವವುದಿಸಿತು. ಅದರಿಂದ ಇದೆನಿಸಿಕೊಂಡ ಬ್ರಹ್ಮಾಂಶವೇ ಪ್ರಪಂಚವೆನಿಸಿಕೊಂಡಿತು. ಬ್ರಹ್ಮಭಿನ್ನವಲ್ಲದ ಪ್ರಪಂಚದಲ್ಲಿ ಪ್ರಪಂಚವು ಬ್ಯಾರೆ ಎಂಬ ಕೋರಿಕೆಯೇ ಮಾಯೆಯೆನಿಸಿಕೊಂಡಿತು. ಸಮುದ್ರಮಧ್ಯದ ನೀರಿನೊಳ್ ತೆರೆಯುಂಟಾಗುವಲ್ಲಿ ಸೃಷ್ಟಿಯೆಂಬ ಕೋರಿಕೆ ವುಂಟಾಗುವಂತೆ ಇಲ್ಲಿಯೂ ಉಂಟಾಗಿರುವದು. ವಿಚಾರಿಸುವಲ್ಲಿ ತೆರೆಯೂ ದ್ರವತ್ವವೂ ಕೂಡ ನೀರೆ ಆಗುವದ್ದರಿಂದ ಸರ್ಗವೆಂತಲೂ, ಜಗವೆಂತಲೂ, ಬ್ರಹ್ಮಕ್ಕೆ * ಸಂಜ್ಞಾವಿಶೇಷಗಳೆಂದು ನಿಶ್ಚಿತವಾಗುವದು. ಹೀಗೆ ಇರುವಲ್ಲಿ ಇಲ್ಲಿ ಭೇದಜ್ಞಾನವುಳ್ಳವರು. ಜ್ಞಾನಿಗಳೋ ಅಜ್ಞಾನಿಗಳೋ ನೀನೇ ಆಲೋಚಿಸುವನಾಗು. ನೂತನವಾಗಿ ಕಟ್ಟಲ್ಪಡುವ ಪಟ್ಟಣವು ಕನ್ನಡಿಯಲ್ಲಿ ಪ್ರತಿಫಲಿಸಲು ಅಲ್ಲಿಯು ದೂರಾದೂರ ದಿಗ್ದೇಶಭಾಗಗಳಂತೆ ಇಲ್ಲಿ ಭೇದಗಳು ತೋರುತ್ತಿರುವವು. ಗಗನದಲ್ಲಿ ನಗರದಂತೆಯೂ, ಮರುಭೂಮಿಯಲ್ಲಿ ತೊರೆಯಂತೆಯೂ, ಜ್ಞಾನದಲ್ಲೇ ಈ ಸಂಸಾರವು ತೋರುತ್ತಿರುವದ್ದರಿಂದ ಕೋರಿಕೆಯೇ ಭ್ರಾಂತಿಯೆಂದು ನಿಶ್ಚಯಿಸುವನಾಗು. ಸಕಲ ದುಃಖಕಾರಣವಾದ ಈ ಕೋರಿಕೆಯು ತೋರಿದ ಕೂಡಲೇ ಇಂದ್ರಜಾಲಿಕನು ಬಿತ್ತಿದ ಬೀಜದಂತೆ ಬೆಳೆಯುವದ್ದರಿಂದ ವಿಚಾರವೆಂಬ ಶಸ್ತ್ರದಿಂದದಕ್ಕೆ ಆಧಾರವಾದ ಅಹಂಕಾರವಂ ಭೇದಿಸಿ ಸರ್ವ ವ್ಯವಹಾರದಲ್ಲೂ ಬ್ರಹ್ಮವೇ ಬ್ರಹ್ಮದಲ್ಲಿ ಚಲಿಸುತ್ತಿರುವದೆಂದು ನಿಶ್ಚಯಿಸುವನಾಗು.

ಎಲೈ ಸುಮತಿಯೇ ಚಿನ್ನದಲ್ಲಿ ಒಡವೆಯಂತೆ ಚಿನ್ಮಾತ್ರನಲ್ಲಿ ತೋರಿದ ಅವಿದ್ಯೆಯ ಪ್ರಭಾವವಂ ಕೇಳುವನಾಗು. ಅಂತು ಭ್ರಾಂತಿಪಟ್ಟ ಲವಣಮಹಾರಾಜನು ತಾನು ಸ್ವಪ್ನಪ್ರಾಯವಾಗಿ ಕಂಡ ಪದಾರ್ಥಗಳು ಯಥಾರ್ಥವೋ ಸುಳ್ಳೋ ಎಂದು ನೋಡಲಿಚ್ಛೈಸಿ ತಾನು ಪೋದ ಮಾರ್ಗ ಪ್ರದೇಶಗಳೆಲ್ಲವು ಚಿತ್ರಲಿಖಿತದಂತೆ ತನ್ನ ಮನದಲ್ಲಿ ನಿಂದಿರುವದ್ದರಿಂದ ಮರಳಿ ದಿಗ್ವಿಜಯ ವ್ಯಾ

* ಸಂಜ್ಞಾವಿಶೇಷಗಳು=ನಾಮಭೇದಗಳು, ಅಂದರೆ ಬೇರೆಬೇರೆ ಹೆಸರು.

ಜವಿಂ ಮೂತ್ರಿ ಮೊದಲಾದ ಪರಿವಾರದಿಂದೊಡಗೂಡಿ ಮಾಯಾಮಯವಾದ ಕುದುರೆ ಪೋದ ಮಾರ್ಗದಿಂದಲೇ ಪೊರಮಟ್ಟು ವಿಂಧ್ಯಪರ್ವತವಂ ಸೇರಿ ಅಲ್ಲಿಂದ ಪೂರ್ವದಕ್ಷಿಣ ಪಶ್ಚಿಮ ಸಮುದ್ರಗಳ ದಡಗಳಲ್ಲಿ ತಿರುಗುತ್ತಾ ಅಲ್ಲಿ ಒಂದೆಡೆಯೊಳ್ ತಾನು ವಾಸವಂ ಮಾಡಿಕೊಂಡಿದ್ದ ವನ ಗಿರಿ ಗ್ರಾಮಗಳನ್ನು ಆಯಾಯ ಜನಗಳಂ ಸಹ ಕಂಡು ಅಲ್ಲಿ ಬಗೆಬಗೆಯಾಗಿ ಬಣ್ಣಿಸುತ್ತ ರೋದನವಂ ಮಾಡುತ್ತಿರುವ ತನಗೆ ಅತ್ತೆಯಾಗಿದ್ದ ಮುದುಕಿಯಂ ಕರಸಿ ನೀನು ಅಳುವದಕ್ಕೆ ಕಾರಣವೇನೆಂದು ವಿಚಾರಿಸಲಾಗ ಆ ಮುದುಕಿಯು ಇಲ್ಲಿಗೆ ಒಬ್ಬ ರಾಜಕುಮಾರನು ಬಂದು ತನ್ನ ಮಗಳಂ ಮದುವೆಯಂ ಮಾಡಿಕೊಂಡು ಬಹುಕಾಲವಿಲ್ಲೇ ಇದ್ದು ಅನಾವೃಷ್ಟಿಯಿಂದುಂಟಾದ ಕ್ಷಾಮದ ಬೇಗೆಯಿಂ ದಿಕ್ಕೆಟ್ಟು ಓಡುವ ಜನಗಳೊಡನೆ ಓಡ್ಯಾಡುತ್ತಾ ಪರಿಪರಿಯಾಗಿ ಬಾಧ ದುಃಖಗಳಂ ತಾಳಲಾರದೆ ಈ ಕಾಡಿನೊಳ್ ಚಿತಿಯಂ ಮಾಡಿಕೊಂಡು ಪ್ರಾಣವಂ ಬಿಟ್ಟನು. ತನ್ನ ಮಗಳೂ ಮೃತಳಾದಳೆಂದು ಪೇಳುತ್ತಾ ರೋದನವಂ ಮಾಡುತ್ತಿರುವಲ್ಲಿ ಆಶ್ಚರ್ಯಪಡುತ್ತಾ ಆ ರಾಜನು ಅವಳಿಗೆ ಸಮಾಧಾನವಂ ಪೇಳಿಸಿ ಅಲ್ಲಿಯ ಜನಗಳಿಗೆ ಬೇಕಾದುದಂ ಕೊಡುವದ್ದರಿಂ ಸಂತೋಷವನ್ನುಂಟು ಮಾಡಿ ಪುನಃ ಮಧುರಾಪುರಕ್ಕೆ ಬಂದು ಹೀಗೆ ಸ್ವಪ್ನವು ಯಥಾರ್ಥವಾಗುವದಕ್ಕೆ ಕಾರಣವೇನೆಂದು ನನ್ನಂ ಕೇಳಲು ನಾನು ಆ ರಾಜೇಂದ್ರನಂ ನಿಂತು ಸಮಾಧಾನಪಡಿಸಿದೆನು. ಅದೆಂತೆಂದರೆ ?

ಎಲೈ ರಾಜೇಂದ್ರನೇ ಸ್ವಪ್ನದಲ್ಲಿ ವಾಸನಾತ್ಮಕವಾದ ಮನವೇ ಮುಖ್ಯವಾದ್ದರಿಂದ ಅದರ ವಿಕಾರವಿದ್ದಂತೆ ದೂರಸಮೀಪಗಳಿಗು, ಕಾಲದೇಶಗಳಿಗು, ಪದಾರ್ಥಗಳಿಗೂ ವ್ಯತ್ಯಾಸವಾಗುವಂಥಾದ್ದು ಸರ್ವರಿಗೂ ಅನುಭವಸಿದ್ಧವಾಗಿರುವದು. ತನಿಗೆ ಗತಿವಿಶೇಷವು ರೂಪಾಂತರವು ಮರಣವೂ ಸಹ ಗೋಚರವಾಗುವಲ್ಲಿ ಇನ್ನು ಯಾವದುತಾನೇ ಸಂಭವಿಸಲಾರದು. ಹೀಗಿರುವದ್ದರಿಂದ ಪೂರ್ವದಲ್ಲಿ ಶಬರಾಲಯದಲ್ಲಿ ಇನ್ನೊಬ್ಬ ರಾಜಕುಮಾರನಿಗೆ ನಡದಿದ್ದ ವೃತ್ತಾಂತವು ಸ್ವಪ್ನದೊಳ್ ನಿನ್ನ ಮನಸ್ಸಿಗೆ ಗೋಚರವಾಗಿರಬಹುದು. ಒಬ್ಬನು ಪೇಳಿದಮಾತನ್ನೇ ಅನೇಕ ಜನರು ಪೇಳುವರು. ಒಬ್ಬ ಕಂಡ ಸ್ವಪ್ನವನ್ನೇ ಅನೇಕರು ಕಾಣುವದು ಸಹ ಲೋಕಸಿದ್ಧವಾಗಿರುವದ್ದರಿಂದ ಶಬರರ ಮನಸ್ಸಿಗೆ ತೋರಿದ ಅರ್ಥವು ನಿನಗೆ ತೋರಿರಬಹುದು. ಅಥವಾ ನಿನಗೆ ತೋರಿದ ಅರ್ಥವೇ ಅವರಿಗೂ ತೋರಿರಬಹುದು. ರಸದಿಂ ಕನ್ನಡಿಯಂತೆ ಚಿಚ್ಛಕ್ತಿಯಂ ಪೊಳೆಯುವ ಮನಸ್ಸಿನಲ್ಲಿ ಯಾವದುತಾನೇ ಪ್ರತಿಫಲಿಸಲಾರದು.

ಅಥವಾ ಇದೆಯುಂತಲೂ, ಇಲ್ಲವೆಂತಲೂ, ಪೇಳಲಶಕ್ಯವಾಗಿ ಅಘಟನಘಟನಾ ಸಾಮರ್ಥ್ಯವುಳ್ಳ ಅವಿದ್ಯೆಯ ಪರಿಣಾಮರೂಪವಾದ ಜಗದೊಳ್ ಯಾವದು ತಾನೇ ಸಂಭಾವಿತವಾಗಲಾರದೆಂದು ನಾನು ಪೇಳಲು ಆ ರಾಜೇಂದ್ರನು ಹೀಗೆ ಇರಬಹುದೆಂದು ಅಂಗೀಕರಿಸಿದನು. ಎಲೈ ಮನುಕುಲಚಂದ್ರನೇ ಈ ಅವಿದ್ಯೆಯು ಇರುವವರಿಗೆ ದುಃಖವು ತಪ್ಪಲಾರದಾದ್ದರಿಂದ ಸರ್ವಪ್ರಯತ್ನದಿಂದಲೂ, ಈ ಅವಿದ್ಯೆಯಂ ಪರಿಹರಿಸಬೇಕು. ತಮಸ್ಸಿಗೆ ದೀಪದಂತೆ ಇದಕ್ಕೆ ವಿದ್ಯೆಯೇ ನಾಶಕವಾಗಿರುವದು. ವಿದ್ಯೆಯೆಂಬುವದು ಅಭೇದಜ್ಞಾನರೂಪವಾಗಿರುವದು. ಇದು ವಿಚಾರದಿಂದಲೇ ಪುಟ್ಟುವದಲ್ಲದೆ ಮತ್ತೊಂದರಿಂ ಪುಟ್ಟಲಾರದು. ವಿಚಾರದ ರೀತಿಯುಂತೆಂದರೆ; ಕಣ್ಣು ರೂಪವನ್ನೇ ಪಿಡಿಯುವದು. ಶ್ರೋತ್ರವು ಶಬ್ದವನ್ನೇ ಗ್ರಹಿಸುವದು. ತ್ವಕ್ಕು ಸ್ಪರ್ಶವನ್ನೇ ಪಿಡಿಯುವದು. ರಸನವು ರಸವನ್ನೇ ತಿಳಿಯುವದು. ಘ್ರಾಣವು ಗಂಧವನ್ನೇ ಪರಿಗ್ರಹಿಸುವದು. ಇಂತು ಪಂಚಭೂತಾತ್ಮಕವಾದ ಇಂದ್ರಿಯಗಳು ಭೂತಾಂಶವಾದ ವಿಷಯಗಳನ್ನೇ ಗ್ರಹಿಸುವವಲ್ಲದೆ ಮತ್ತೊಂದು ವಿಷಯವಂ ಪಿಡಿಯಲಾರವು. ಮನವು ವ್ಯಾಪಕವಾದಾಗ್ಯೂ ಆಯಾಯ ಇಂದ್ರಿಯದ ಸಹಾಯದಿಂದಲೇ ಆಯಾಯ ವಿಷಯವಂ ಪಿಡಿವದು. ರೂಪಾದಿನಿಮಿತ್ತಗಳಿಂದಿತರರ ಮನೋಭಾವವನ್ನೂಹಿಸಿ ತಿಳಿಯುವದಾದ್ದರಿಂದ ಮನವು ಮನವನ್ನೇ ಗ್ರಹಿಸುವದೆಂದು ತಿಳಿಯತಕ್ಕದ್ದು. ಈರೀತಿಯಿಂ ನೋಡುವಲ್ಲಿ ಸಕಲ ಪದಾರ್ಥಗಳು ಸ್ವಾಂಶವಾದ ಪದಾರ್ಥಗಳಲ್ಲೇ ಶೇರುವವೆಂದು ನಿಶ್ಚಿತವಾಗುವದು. ಚಿದ್ವಸ್ತುವಿನ ವ್ಯಾಪ್ತಿಯಿಲ್ಲದೆ ಜಡವೆನಿಸುವ ಅಂತಃಕರಣ ಮೊದಲಾದ ಪದಾರ್ಥಗಳಿಗೆ ತಮ್ಮತಮ್ಮ ವ್ಯಾಪಾರವಂ ಮಾಡುವ ಯೋಗ್ಯತೆ ಇಲ್ಲದ್ದರಿಂದಲೂ, *ತಮದಲ್ಲಿ ತೇಜದಂತೆ ಜಡದಲ್ಲಿ ಚಿದ್ವಸ್ತುವು ಶೇರತಕ್ಕದ್ದಲ್ಲವಾದ್ದರಿಂದಲೂ, ಸಮಸ್ತವು ಚಿತ್ತೆಂತಲೇ ಸಿದ್ಧಾಂತವಾಗುವದು. ವಿಚಾರಬಲದಿಂದೀ ಅರ್ಥವು ಅನುಭವಸಿದ್ಧವಾಗುವಲ್ಲಿ ಅಹಂಭಾವಾದಿರೂಪದಿಂ ಭೇದಬೋಧಕವಾಗಿರುವ ಅವಿದ್ಯೆಯು ಸೂರ್ಯೋದಯದಲ್ಲಿ ರಾತ್ರೆಯಂತೆ ಎಲ್ಲಿಗೋ ಪೋಗುವದು. ನಿಶ್ಶೇಷವಾಗಿ ಅವಿದ್ಯೆ ಪೋಗುವದೇ ಅಖಂಡಾನಂದಸ್ವರೂಪವಾದ ಮೋಕ್ಷವೆನಿಸಿಕೊಳ್ಳುವದು. ಆ ಸಹಜಾನಂದವು ಸಿದ್ಧವಾಗಲು ಯಾವ ದುಃಖವು ಮರಳಿ ಸಂಭವಿಸಲಾರದು. ಆದ್ದರಿಂ ಸರ್ವವನ್ನು ಬ್ರಹ್ಮವೆಂದು ವಿಚಾರದಿಂ ನಿಶ್ಚಯಿಸುತ್ತಾ ಅವಿದ್ಯೆಗೆ ಅವಕಾಶವಂ ಕೊಡದಿರುವನಾಗು. ಇಂತು ಪರಿಭಾವಿಸುವಲ್ಲಿ ಜಡಚೇತನವಿಭಾಗಕ್ಕೆ ಅವ

*ತಮದಲ್ಲಿ=ತಮಸ್ಸಿನಲ್ಲಿ=ಕತ್ತಲೆಯಲ್ಲಿ.

ಕಾಶವಿಲ್ಲದ್ದರಿಂದ ಜಾಗ್ರತ್ಸ್ವಪ್ನ ಸುಷುಪ್ತಿಗಳಿಗೆ ಅತೀತವಾಗಿ ಜಡವೆಂತಲೂ, ಚೇತನವೆಂತಲೂ, ಪೇಳಲಶಕ್ಯವಾಗಿ ದೇಶದಿಂ ದೇಶಾಂತರಕ್ಕೆ ಪೋಗುವ ಮನಸ್ಸಿಗೆ ಮಧ್ಯಭಾಗದೊಳ್ ಅವಲಂಬನವಾಗಿರುವ ನಿಜಸ್ವರೂಪವಂ ಚಿಂತಿಸುತ್ತಾ ಎಲ್ಲಿಯೂ ರಾಗದ್ವೇಷಗಳಂ ಮಾಡದೆ ಮನವು ಕ್ಷೋಭೆಪಟ್ಟದ್ದರೂ ಅದರ ವೃತ್ತಿಯನ್ನನುಸರಿಸದೆ ದೇಶಾಂತರದವನಂತೆಯೂ, ಕಾಷ್ಠಾದಿಗಳಂತೆಯೂ ಅಭಿಮಾನವಿಲ್ಲದೆ ಸರ್ವವ್ಯವಹಾರಗಳಂ ನಡೆಸುವನಾಗು. ವಿಚಾರಿಸುವಲ್ಲಿ ಯಾವವಕ್ಕೆ ಸ್ವರೂಪವೆ ಇಲ್ಲದೆ ನಿರ್ನಾಮವಾಗುವದೋ ಅಂಥಾ ಮನದಿಂದುಂಟಾದ ವಿಷಯಗಳಲ್ಲಿ ಯಾವನಿಮಿತ್ತದಿಂದಾಶೆಪಡಬೇಕೆಂದು ಮನೋವೃತ್ತಿಗಳಲ್ಲಿ ತಾಟಸ್ಥ್ಯವಂ ವಹಿಸುವನಾಗು. ಬ್ರಹ್ಮಾಭೇದಜ್ಞಾನದಿಂ ನಾನೇ ಸರ್ವರೂಪನಾಗಿರುವೆನೆಂತಲಾಗಲಿ ಬ್ರಹ್ಮದ ಅಖಂಡಭಾವವಿಚಾರದಿಂ ನಾನೆ ಇಲ್ಲವೆಂತಲಾಗಲಿ, ಆಲೋಚಿಸುತ್ತಿರುವನಿಗೆ ಶಶಶೃಂಗದಂತೆ ಮನವೇ ತುಚ್ಛವಾಗುವದ್ದರಿಂದ ಇಂತಪ್ಪ ಮನವನ್ನನುಸರಿಸುವನಿಗೂ, ಗಗನವಂ ಗುದ್ದುವನಿಗೂ, ಏನೂ ಭೇದವಿಲ್ಲವೆಂದು ತಿಳಿಯುವನಾಗು. ಯಾವನಿಗೆ ಬುದ್ಧಿ ಬಂದ ಕೂಡಲೆ ಪೂರ್ವಪುಣ್ಯದಿಂದಲಾಗಲೀ ಮಹಾತ್ಮರ ಅನುಗ್ರಹದಿಂದಲಾಗಲಿ, ಸತ್ಸಂಗವುಂಟಾಗುವದೋ, ಅವನಿಗೆ ಗ್ರಾಹ್ಯಾಗ್ರಾಹ್ಯ ಜಡಾಜಡ ನಿತ್ಯಾನಿತ್ಯ ವಿವೇಕದಿಂ ಮುಕ್ತನಾಗಬೇಕೆಂಬ ಶುಭೇಚ್ಛೆಯುಂಟಾಗುವದು. ಆಗ ಅವನು ವಿವೇಕಿಯೆನಿಸುವನು. ಬಳಿಕ ಶಾಸ್ತ್ರಾರ್ಥಶ್ರವಣ ಮನನ ನಿದಿಧ್ಯಾಸನಗಳಿಂ ಸರ್ವವು ಬ್ರಹ್ಮವೆಂದು ಸಮ್ಯಗ್ಜ್ಞಾನವುದಿಸುವದು. ಇದಂ ಬಲಪಡಿಸುವನೇ ವಿಚಾರಣೆಯೆಂಬ ಭೂಮಿಕೆಗೆ ಬಂದವನೆನಿಸುವನು. ವಿಚಾರಬಲದಿಂ ಬ್ರಹ್ಮೇತರವಾಸನೆ ತಪ್ಪುತಬರಲು, ತನುಮಾನಸೆಯೆಂಬ ಭೂಮಿಕೆಯಂ ಪೊಂದುವನು. ಬ್ರಹ್ಮೇತರ ಪದಾರ್ಥವಿಲ್ಲವೆಂದು ಸರ್ವದಾ ವಿಚಾರಪರನಾಗಿ ಈ ಭೂಮಿಕೆಯನ್ನೇರಿದವನಿಗೆ ಜ್ಞಾನಾಭಿವೃದ್ಧಿಯಿಂದ ಸತ್ವಾಪತ್ತಿಯೆಂಬ ಭೂಮಿಕೆಯು ಪ್ರಾಪ್ತವಾಗುವದು. ಆಗ ಬ್ರಹ್ಮಭಿನ್ನವಾದ ಪದಾರ್ಥ ಇಲ್ಲವೇಇಲ್ಲವೆಂದು ನಿಶ್ಚಯದಿಂ ರಾಗದ್ವೇಷಗಳಡಗುತಬರುವವು. ಅದರಿಂ ಪದಾರ್ಥಗಳಲ್ಲಿ ತನ್ನದೆಂಬ ಬುದ್ಧಿಯು ತಪ್ಪಲು, ಅಸಂಸಕ್ತಿಯೆಂಬ ಭೂಮಿಕೆಯಂ ಪಡೆವನು. ಆಗ ನಾನೆಂಬ ಜ್ಞಾನವು ತಪ್ಪುವದ್ದರಿಂದ ಯಾವ ಕರ್ಮವಂ ಮಾಡಿದರೂ ಅದರ ಫಲದಿಂ ಬದ್ಧನಾಗುವದಿಲ್ಲ. ಆಗ ಎಲ್ಲಾಕಡೆಯಲ್ಲೂ ಬ್ರಹ್ಮವಂದೇ ಪ್ರಕಾಶಿಸುತ್ತಿರುವಲ್ಲಿ ಬಾಹ್ಯಪದಾರ್ಥಜ್ಞಾನವಿಲ್ಲದೆ ನಾನು ನನ್ನದೆಂಬ ಜ್ಞಾನವೂ ಕೂಡ ಬ್ರಹ್ಮವೆಂದು ಸರ್ವದಾ ಚಿಂತಿಸುತ್ತಿರುವ ಅಸಂಸಕ್ತನಿಗೆ ಅಹಂಭಾ

ಪವೇ ನಿಶ್ಶೇಷವಾಗುತ ಬರುವದ್ದರಿಂದಲೂ, ಯಾವ ಪದಾರ್ಥವೂ ತೋರದಿರುವದ್ದರಿಂದಲೂ, ಪದಾರ್ಥಾಭಾವನೆಯೆಂಬ ಭೂಮಿಕೆಯು ಪ್ರಾಪ್ತವಾಗುವದು. ಅಲ್ಲಿರುವ ಮಹಾತ್ಮನು ಅಹಂಭಾವವು ನಿರ್ನಾಮವಾದ್ದರಿಂದ ಸುಪ್ತನಂತೆಯೂ, ಮೂಢನಂತೆಯೂ, ಸ್ತಬ್ಧನಂತೆಯೂ, ಕಾಣುತ್ತಿರುವನು. ಪರಾರ್ಥವಾಗಿ ಕರ್ಮಗಳಂ ಮಾಡಿದಾಗ್ಯೂ ಅಖಂಡಾಕಾರವೃತ್ತಿಯಿಂದಲೇ ಮಾಡುತ್ತಿರುವನು. ಈ ಆರನೇ ಭೂಮಿಕೆಯಲ್ಲೂ ವ್ಯವಹಾರಪರನಾಗುವಲ್ಲಿ ಒಂದೊಂದು ವೇಳೆಯೋಳ್ ಅಖಂಡಾಕಾರವೃತ್ತಿಗೆ ಸ್ಖಲಿತ್ಯಬರುವದ್ದರಿಂದ ವಿಚಾರಾದಿ ಸಾಧನಾಪೇಕ್ಷೆಯುಂಟಾಗುವದು. ಸರ್ವಕಾಲದಲ್ಲೂ ಅಖಂಡಾಕಾರವೃತ್ತಿಯಲ್ಲೇ ಇರುವನಾದ್ದರಿಂದ ಅಹಂಭಾವಕ್ಕೆ ಮೂಲವಾದ ಅವಿದ್ಯೆಯು ನಿಶ್ಶೇಷವಾಗುತಬರಲು, ತುರ್ಯಗಾಯೆಂಬ ಭೂಮಿಕೆಯಂ ಪೊಂದಿ ಜೀವನ್ಮುಕ್ತನೆನಿಸುವನು. ಸರ್ವಸಾಕ್ಷಿಭಾವದಿಂದಲೂ, ಸರ್ವಾತ್ಮಕಭಾವದಿಂದಲೂ, ವ್ಯವಹರಿಸುತ್ತಿರುವ ಆ ಆತ್ಮಾರಾಮನಿಗೆ ಅವಿದ್ಯೆಯು ನಿರ್ನಾಮವಾದ್ದರಿಂದ ಸಮಸ್ತ ಪದಾರ್ಥವೂ ಮರಳಿ ಬರದಂತೆ ವಿಸ್ಮೃತವಾಗುವದು. ಅವನ ಮನವು ದ್ವೈತಾದ್ವೈತ ಭಾವಗಳೆರಡನ್ನು ಅತಿಕ್ರಮಿಸಲವನು ನಿತ್ಯನಿರತಿಶಯ ನಿಜಾನಂದದಿಂ ಸರ್ವಕಾಲದಲ್ಲೂ ಪೂರ್ಣನಾಗಿರುವನು. ಎಲೈ ರಾಮಚಂದ್ರನೇ ! ಸರ್ವವನ್ನು ತಿಳಿದ ನೀನು ಈ ಜಗದ್ಭ್ರಮೆಯಂ ಹಿಡಿದು ದುಃಖಪಡುವದಕ್ಕೆ ಕಾರಣವೇನು ? ಶರೀರದಲ್ಲಿದ್ದಾಗ್ಯೂ ಅದಕ್ಕೆ ಅತೀತಭಾವದಿಂದಿರುತ್ತಾ ಅದರ ಸಂಬಂಧದಿಂ ಬಂಧುಗಳೆಂತಲೂ, ಬಂಧುಗಳಲ್ಲವೆಂತಲೂ, ಬಂದ ಬಂದ ಸುಖದುಃಖಗಳಿಗೆ ಒಳಗಾಗದೆ ಸಾಕ್ಷಿಭಾವದಿಂದಿರುವನಾಗು. ಸರ್ವಾತ್ಮಭಾವದಿಂ ನಿನಗೆ ಭಿನ್ನವಾದ ಪದಾರ್ಥವೇ ಇಲ್ಲದಿರುವದು. ಸರ್ವಾಂತರ್ಯಾಮಿಭಾವದಿಂ ಸರ್ವರೂ ನಿನಗೆ ಬಂಧುಗಳೇ ಆಗಿರುವರು. ಸರ್ವಸಾಕ್ಷಿಭಾವದಿಂ ಸರ್ವವೂ ನಿನಗೆ ಅಭಿಮಾನಕ್ಕೆ ಪಾತ್ರವಾಗದಿರುವದು. ಹೀಗಿರುವಲ್ಲಿ ಶರೀರಾಭಿಮಾನದಿಂ ನೀನು ದುಃಖಪಡುವದಕ್ಕೆ ಕಾರಣವೇನು. ಘಟಭಂಗದಲ್ಲಿ ಆಕಾಶದಂತೆಯೂ, ಬಿಸಲುದೊರೆಯ ನಾಶದಲ್ಲಿ ಬಿಸಲಿನಂತೆಯೂ, ಶರೀರನಾಶದಲ್ಲಿ ಆತ್ಮನು ನಾಶವಾಗದಿರುವನು. ಆದ್ದರಿಂ ದೇಹಾಭಿಮಾನವಂ ನೀನು ಬಿಡುವನಾಗು ? ಬ್ರಹ್ಮಭಿನ್ನವಾದ ಪದಾರ್ಥವ್ಯಾವದೂ ಇಲ್ಲದಿದ್ದಾಗ್ಯೂ ಅವಿದ್ಯಾತ್ಮಕವಾದ ಚಿತ್ತದ ವಿಲಾಸದಿಂದೆಲ್ಲವು ಇರುವಂತೆ ಕಾಣುತ್ತಿರುವವು. ತೇಜದಿಂ ಪ್ರಕಾಶದಂತೆ ಬ್ರಹ್ಮದಿಂದುದಯಿಸಿದ ಈ ಲೋಕವು ಸ್ವಕಾರಣಾಜ್ಞಾನದಿಂ ಬಹುಕಾಲವಿದ್ದು ವಿಚಾರದಿಂದಿ ಸ್ವರೂಪಜ್ಞಾನವಾಗಲು, ಜಲದಲ್ಲಿ ತೆರೆಯಂತೆಯೂ, ಚಿನ್ನದಲ್ಲಿ ವ

ಡವೆಯಂತೆಯೂ, ಮಣ್ಣಿನಲ್ಲಿ ಘಟಶರಾವಾದಿಗಳಂತೆಯೂ ಬ್ರಹ್ಮದಲ್ಲೇ ಲೀನವಾಗುವದು. ವಿಚಾರದಿಂ ಮನಸ್ಸಿಗೆ ವಾಸನಾಕ್ಷಯರೂಪವಾದ ಶಾಂತಿಯುಂಟಾಗಲು ಕರ್ಮಕಾರಕವಾದ ಮಾಯೆಯು ನಷ್ಟವಾಗುವದು. ಬ್ರಹ್ಮದಿಂ ಪುಟ್ಟಿವದ್ದರಿಂದಲೂ, ಅಲ್ಲೇ ಇರುವದ್ದರಿಂದಲೂ, ಅಲ್ಲಿಯೇ ಲಯವಾಗುವದ್ದರಿಂದಲೂ, ಸಮಸ್ತವಾದ ಜಗವು ಬ್ರಹ್ಮವೆಂತಲೇ ಪೇಳಲ್ಪಡುವದು. ಆ ಬ್ರಹ್ಮವು ಚಿದ್ರೂಪದಿಂ ಸರ್ವಶರೀರಗಳಲ್ಲೂ ಇರುವದ್ದರಿಂದ ಸಮಸ್ತ ಪ್ರಾಣಿಕೂಟವು ಆ ಪರಮಾತ್ಮನ ಕಾಯಕೂಟವೆಂದು ಪೇಳಲ್ಪಡುವದು. ಇಂದ್ರಿಯವಿಷಯ ಸಂಬಂಧದಲ್ಲಿ ಕ್ಷಣಿಕವಾದ ಬಾಹ್ಯಸುಖದುಃಖಗಳ ಸಂಬಂಧವಿಲ್ಲದೆ ಪ್ರಕಾಶಿಸುವ ಆನಂದಮಯವಾದ ಅನುಭೂತಿಯೇ ಆತ್ಮನೆನಿಸುವನು. ಆನಂದೋದಯದಲ್ಲಿ ಬಾಹ್ಯ ಸುಖದುಃಖಗಳಿಗೆ ಆಧಾರವಾಗಿರುವದು ಯಾವದೆಂದು ವಿಚಾರಿಸುವರಿಗೆ ಸ್ವರೂಪವು ಪ್ರಕಾಶವಾಗಿ ತೋರುವದು. ಆಕಾಶಕ್ಕಿಂತಲೂ ಅತಿ ನಿರ್ಮಲವಾದ ಆತ್ಮನಲ್ಲಿ ಸಮಸ್ತವಾದ ವಿಷಯವು ಬೇರೆ ಪದಾರ್ಥದಂತೆ ಪ್ರತಿಫಲಿಸುವದು. ಆಗ ಮಧ್ಯಭಾಗದಲ್ಲಿ ಪ್ರತಿಫಲಿಸಿದ ಅಂತಃಕರಣವೇ ಪ್ರಿಯಾಪ್ರಿಯವಿವೇಕದಿಂ ಲೋಭ ಮೋಹಾದಿಭಾವಗಳಂ ಪೊಂದುವದಲ್ಲದೆ ಆತ್ಮನಿಗೆ ಯಾವ ವಿಕಾರವೂ ಸಂಭವಿಸಲಾರದು. ಆದ್ದರಿಂ ಸರ್ವಾತೀತನಾದ ನೀನು ಅಂತಃಕರಣದ ಅನುಸರಣೆಯಿಂ ದುಃಖಪಡುವದಕ್ಕೆ ಕಾರಣವೇನು? ಅಂತಃಕರಣಾದಿ ಸಕಲಪದಾರ್ಥಗಳೂ ಶೋಕಮೋಹಾದಿಗಳಿಂ ವಿಕಾರಿಯೆನಿಸುವವು. ಇವುಗಳಲ್ಲಿ ಯಾವದಕ್ಕೂ ಸ್ವರೂಪಜ್ಞಾನವುಂಟಾಗಲಾರದಾದ್ದರಿಂದ ಇವುಗಳ ಸ್ವರೂಪಜ್ಞಾನಕ್ಕೋಸುಗ ಯಾವಪದಾರ್ಥವು ಸಿದ್ಧವಾಗಿರುವದೋ ಅದೇ ಆತ್ಮನೆನಿಸುವದು. ಅದು ಚಿತ್ಸ್ವರೂಪನಾದ್ದರಿಂದ ಸ್ವರೂಪವನ್ನು ಪರರೂಪವನ್ನು ಸಹ ಗ್ರಹಿಸುವದು. * ಅದು ಇಲ್ಲವೆಂದು ಕೆಲವುಮೂಢರು ಪೇಳುವರಲ್ಲದೆ ಪೇಳುವರು. ಯಾರೆಂದು ನೋಡುವದಿಲ್ಲವಾದ್ದರಿಂದ ಅವರವಚನವನ್ನಂಗೀಕರಿಸಲಾಗದು. ದೇಹವು ಶಯನದಲ್ಲಿರುವಲ್ಲಿ ಸ್ವಪ್ನದೋಳ್ ದೇಶಾಂತರಗಮನವು ಅನುಭವಸಿದ್ಧವಾದ್ದರಿಂದ ಸೂಕ್ಷ್ಮಶರೀರವು ಬೇರೆಯಿಧೆಯೆಂದು ತಿಳೀಬರುತ್ತೆ. ಇದುವರಿಗೆ ನಾನು ಸುಖವಾಗಿ ಮಲಗಿದ್ದೆನೆಂಬ ಮಾತಿನಿಂದ ಗತಾಗತಾದಿ ವ್ಯಾಪಾರವಿಲ್ಲದ ಅಜ್ಞಾನಾತ್ಮಕವಾದ ಕಾರಣಶರೀರವು ಮತ್ತೊಂದಿರುವದೆಂತಲೂ, ಅದಕ್ಕೆ ಬೇರೆಯಾದ ಆತ್ಮನಿರುವನೆಂತಲೂ, ಸ್ಪಷ್ಟವಾಗಿ ತಿಳಿಯು

* ಆತ್ಮನು ಇಲ್ಲವೆಂದು ಹೇಳತಕ್ಕ ನಾಸ್ತಿಕರು " ಇಲ್ಲ " ವೆಂದು ಹೇಳತಕ್ಕ ತಾವು ಯಾರೆಂದು ವಿಚಾರಮಾಡಿದರೆ ತಾವೇ ಆತ್ಮನೆಂದು ಗೊತ್ತಾಗುವದು.

ತ್ತಲಿರುವಲ್ಲಿ ಈ ದೇಹವೇ ನಾನೆಂದು ಅಭಿಮಾನಿಸುವದಕ್ಕೆ ಮೌಢ್ಯವೇ ಕಾರಣವಲ್ಲದೆ ಮತ್ತೊಂದಲ್ಲವೆಂದು ತಿಳಿಯತಕ್ಕದ್ದು. ಮನೋಮಾರ್ಗವನ್ನತಿಕ್ರಮಿಸಿದ್ದರಿಂ ಶೂನ್ಯದಂತಿರುವ ಆ ಚಿದ್ವಸ್ತುವಿನಲ್ಲಿ ಆಕಾಶದಲ್ಲಿ ವಾಯುವಿನಂತೆ ಅಂತಃಕರಣಾದಿಗಳು ಸಂಚರಿಸುತ್ತಿರುವವಲ್ಲದೇ ಇವುಗಳ ವಿಕಾರವು ಅದಕ್ಕೆ ಏನೂ ಸಂಭವಿಸಲಾರದು. ಸುಷುಪ್ತಿಯಲ್ಲಿ ಆತ್ಮನು ತನಿಗೆ ಬಿಂಬವಾದ ಪರಮಾತ್ಮನಂ ಹೊಂದಿದಾಗ್ಯೂ ಜ್ಞಾನಮಾರ್ಗದಿಂ ಪೊಂದಲಿಲ್ಲವಾದ್ದರಿಂದ ವಾಸನಾವೇಶದಿಂ ಹಿಂತಿರುಗಿಬರುವನು, ಈ ಪ್ರತಿಬಿಂಬ ಭಾವವಂ ಪರಿಗ್ರಹಿಸುವಲ್ಲಿ ಉಪಾಧಿನಾಶದಿಂದುಪಹಿತವಾದ ಚೈತನ್ಯಕ್ಕೂ ನಾಶವಾದೀತೆಂದು ಕೆಲವರು ಪೇಳುವರು. ಉಪಾಧಿಕೃತವಾದ ಜೀವೇಶ್ವರ ಭಾವಗಳಿಗೆ ನಾಶವಲ್ಲದೆ ಶುದ್ಧಚೈತನ್ಯಕ್ಕೆ ನಾಶವಿಲ್ಲವಾದ್ದರಿಂದ ಸತ್ಯಜ್ಞಾನಾನಂದಸ್ವರೂಪನಾದ ಆತ್ಮನನ್ನೇ ನೀನು ಸರ್ವ್ವಕಾಲದಲ್ಲೂ ಭಾವಿಸುತ್ತಾ ಉಪಾಧಿಕೃತವಾದ ವಿಕಾರಗಳೆಲ್ಲವನ್ನೂ ತಿರಸ್ಕರಿಸುವನಾಗು. ಕನ್ನಡಿಯಂತೆ ನಿರ್ಮಲವಾದ್ದರಿಂ ಚಿದ್ವಸ್ತುವಿನಲ್ಲಿ ಜಗವೆಲ್ಲವು ಪ್ರತಿಫಲಿಸುವದಲ್ಲದೆ ಇಚ್ಛಾವಿಶೇಷದಿಂ ಚಿದ್ವಸ್ತುವು ಯಾವವನ್ನೂ ಪಿಡಿಯುವದಿಲ್ಲ, ಸೂರ್ಯ್ಯಸಾನ್ನಿಧ್ಯದಿಂ ಜನಗಳು ತಮ್ಮ ತಮ್ಮ ವ್ಯಾಪಾರವಂ ನಡೆಸುವಂತೆ ಚಿದ್ವಸ್ತುವಿನ ಸಾನ್ನಿಧ್ಯದಿಂದಂತಃಕರಣಾದಿಗಳು ತಮ್ಮ ವ್ಯಾಪಾರವಂ ಮಾಡುತ್ತಿರುವವು. ಪರಮಾತ್ಮನ ಸಂಕಲ್ಪದಿಂ ಪುಟ್ಟಿದ ಮನದ ಕಲ್ಪನೆಯಿಂ ಕತ್ತಲೆಯು ಪಿಶಾಚದಂತೆ ಪುಟ್ಟಿದ ಈ ಜಗವು ಮುಗ್ಧರಿಗೆ ಯಥಾರ್ಥವಾಗಿಯೇ ಕಾಣುತ್ತಿರುವದು. ವಿಚಾರದಿಂದುಂಟಾದ ಅಸಂಕಲ್ಪನ ಮಾರ್ಗದಿಂಮನವು ಗಳಿತವಾಗಲು ಮೇಘಾಡಂಬರವಿಲ್ಲದ ಅಂಬರದಂತೆ ಬ್ರಹ್ಮವೇ ಪ್ರಕಾಶಿಸುತ್ತಿರುವದು, ಎಂದು ಶ್ರೀರಾಮಚಂದ್ರನಂ ಕುರಿತು ವಸಿಷ್ಠಮಹಾಮುನಿಯು ನಿರೂಪಿಸಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉತ್ಪತ್ತಿ ಪ್ರಕರಣದೊಳ್ ಪನ್ನೊಂದನೇ ತರಂಗಕ್ಕೆ ಮಂಗಳಮಹಾ.

ಶ್ರೀರಾಮಚಂದ್ರಾರ್ಪಣಮಸ್ತು.

ಜ್ಞಾನಯೋಗತರಂಗಿಣಿಯೊಳು ವೈರಾಗ್ಯಪ್ರಕರಣ, ಮುಮುಕ್ಷುಪ್ರಕರಣ, ಉತ್ಪತ್ತಿಪ್ರಕರಣವೂ ಸಮಾಪ್ತವಾದವು.



ಶ್ರೀಗಣೇಶಶಾರದಾಗುರುಭ್ಯೋನಮಃ.

# ಸ್ಥಿತಿಪ್ರಕರಣ ಪ್ರಾರಂಭ.

## ಪ್ರಥಮತರಂಗ.

ಶ್ರೀರಾಮಚಂದ್ರನಂ ಕುರಿತು ಈ ಪರಿಯಿಂದುತ್ಪತ್ತಿಪ್ರಕರಣವಂ ನಿರೂಪಿಸಿದ, ವಸಿಷ್ಠಮುನೀಶ್ವರನು ಪುನಃ ನಿರೂಪಿಸಿದನದೆಂತೆನೆ,—

ಎಲೈ ರಾಮಭದ್ರನೆ! ಜ್ಞಾನಮಾತ್ರದಿಂ ಪರಮಾನಂದಪ್ರದವಾದ ಈ ಸ್ಥಿತಿಪ್ರಕರಣವಂ ಕೇಳುವನಾಗು, ಬರೆಯುವನು ಬರೆಯತಕ್ಕ ಬಣ್ಣವು ಸಹ ಇಲ್ಲದೆ ಗಗನದಲ್ಲುಂಟಾದ ಚಿತ್ರದಂತೆಯೂ, ನೋಡುವನಿಲ್ಲದ ಅನುಭವದಂತೆಯೂ, ನಿದ್ರೆಯಿಲ್ಲದ ಸ್ವಪ್ನದಂತೆಯೂ, ಮನದಿಂ ಪುಟ್ಟಿದ ಭವಿಷ್ಯತ್ಪುರದಂತೆಯೂ, ಕಪಿಗಳ ಚಿತ್ತಭ್ರಮೆಯಿಂದುಂಟಾದ ಗುಂಭಾವಸ್ಥಿಯಂತೆಯೂ, ಬಿಸಲಿಲ್ಲದ ಭಾನುವಿನ ತೇಜದಂತೆಯೂ, ಗಗನದಲ್ಲಿ ಗುಂಪಾದ ರತ್ನಗಳ ಕಾಂತಿಯಂತೆಯೂ, ಗೋಡೆಯಿಲ್ಲದ ಗಂಧರ್ವನಗರದಂತೆಯೂ, ತೆರೆಗಳಿಂ ಕೂಡಿದ ಬಿಸಲುದೊರೆಯಂತೆಯೂ, ಗೋಚರವಾಗುತ್ತಿರುವ ಮನೋರಥ ಪುರದಂತೆಯೂ ಕಥಾಗೋಚರವಾದ ರಾಜಧಾನಿಯಂತೆಯೂ, ಸ್ವಪ್ನದಲ್ಲಿ ಕಾಣ್ಬಂದ ಬೆಟ್ಟದಂತೆಯೂ, * ಆಕಾರವುಳ್ಳ ಆಕಾಶದಂತೆಯೂ, ಜನಗಳಿಗೆ ಬಿಸಲಿನತಾಪವಂ ತಪ್ಪಿಸಲೋಸುಗ ಕೆಳಕ್ಕಿಳಿದ ಶರತ್ಕಾಲದ ಮೇಘದಂತೆಯೂ, ಗಗನದ ನೈಲ್ಯದಂತೆಯೂ, ಸ್ವಪ್ನಾಂಗನಾಸಂಗಮದಂತೆಯೂ, ಚಿತ್ರದಲ್ಲಿರುವ ಸೂರ್ಯಚಂದ್ರಾಗ್ನಿಗಳ ತೇಜದಂತೆಯೂ, ಅನುಭವಿಸಲ್ಪಡುವ ಮನೋರಾಜ್ಯದಂತೆಯೂ, ವಿಕಸಿತವಾದ ಚಿತ್ರದ ಕಮಲಾಕರ ಉದ್ಯಾನಗಳಂತೆಯೂ, ಶೂನ್ಯದಲ್ಲುದಿಸಿದ ವರ್ಣವಿಶೇಷದಂತೆಯೂ, ರೂಪವಿಲ್ಲದ ಇಂದ್ರಚಾಪದಂತೆಯೂ, ಮನಃಕಲ್ಪಿತವಾದ ಕಂದಿದ ಬಾಳೇಕಂಭದಂತೆಯೂ, ನೇತ್ರರೋಗದಿಂ ಕಾಣ್ಬರುವ ಅಂಧಕಾರ ಚಕ್ರದಂತೆಯೂ, ವಿಸ್ತಾರವಾದ ನೀರಿನಗುಳ್ಳೆಯಂತೆಯೂ, ಮಂಜಿನ ಗುಡಾರದಂತೆಯೂ, ಚೈತನ್ಯವಂಪಡೆದ ಶೂನ್ಯವಸ್ತುವಿನಂತೆಯೂ, ಕತ್ತಲೆಯ ಪಿಶಾಚದಂತೆಯೂ, ದೃಶ್ಯವಾಗಿದ್ದರೂ ಅದೃಶ್ಯವಾಗುತ್ತಾ ನಿಸ್ಸಾರ

---

* ಆಕಾಶಕ್ಕೆ ರೂಪ ಮೊದಲಾದ ಆಕಾರವಿರುವದಿಲ್ಲ; ಆದರೆ ಮನೋಭಾವನೆಯಿಂದ ನೀಲರೂಪಾದಿಗಳು ಕಾಣುತ್ತವೆ.

ವಾದರೂ ಸಾರವಾಗಿ ತೋರುತ್ತಾ ನಶ್ವರವಾಗಿದ್ದರೂ ಶಾಶ್ವತದಂತೆ ಕಾಣ್ಬರುತ್ತಾ ಅನರ್ಥಕವಾದರೂ ಅರ್ಥಕರದಂತೆ ಪ್ರಕಾಶಿಸುತ್ತಾ ಮಾಯಾಮಯವಾದರೂ ಸತ್ಯದಂತೆ ಗೋಚರವಾಗುತ್ತಾ ಕ್ಷಯೋನ್ಮುಖವಾದರೂ ಬೆಳೆಯುವಂತೆ ಕಾಣುತ್ತಾ ದುಃಖಪ್ರದವಾದರೂ ಸುಖಕರದಂತೆ ಎಸೆಯುತ್ತಾ ಆದ್ಯಂತಗಳಿಲ್ಲದಿದ್ದರೂ, ಮಧ್ಯದಲ್ಲಿ ಪುಟ್ಟ ಶರತ್ಕಾಲದ ಮೋಡದಂತೆ ವ್ಯರ್ಥಾಡಂಬರವಾಗಿ ಸ್ವತಃ ಇಲ್ಲದಿದ್ದರೂ ವಿಚಿತ್ರಫಲಪ್ರದವಾಗಿ ಲೋಭಿಯ ಮಧುರೋಕ್ತಿಯಂತೆ ನಿಸ್ಸಾರವಾಗಿ ವಂಚಕನ ಮೌನದಂತೆ ಫಲಭ್ರಾಂತಿಕರವಾಗಿ, ದಾತೃವಿನ ಕಠಿಣೋಕ್ತಿಯಂತೆಯೂ, ಮುಂಗಾರಿನ ಗುಡಗಿನಂತೆಯೂ ಕೇಳಲಶಕ್ಯವಾಗಿದ್ದರೂ, ಫಲಸೂಚಕವಾಗಿ ಕಲ್ಪನಾಮಯವಾದ್ದರಿಂ ನಾನಾಪ್ರಕಾರವಾಗಿ ಕಾಣ್ಬರುವ ಅವಿಚಾರ ರಮಣೀಯವಾದ ಈ ಪ್ರಪಂಚವು ಶುಕ್ತಿರಜತದಂತೆಯೂ, ಬಿಸಲುದೊರೆಯಂತೆಯೂ, ಐಂದ್ರಜಾಲಿಕನ ಆಟವಂತೆಯೂ ವಸ್ತುತಃಇಲ್ಲದಿದ್ದರೂ ಇರುವಂತೆ ತೋರುತ್ತಿರುವದು. ಕೋರಿಕೆಯಿಂದಲೆ ಸುಖದುಃಖಾದಿವಿಕಾರಗಳನ್ನುಂಟು ಮಾಡುವದು. ವಿಚಾರಮಾತ್ರದಿಂದೆಲ್ಲಿಗೋ ಪೋಗುವದೆಂದು ಪೇಳುತ್ತಿರುವಲ್ಲಿ ಶ್ರೀರಾಮನಿಂತೆಂದನು,—ಎಲೈ ಗುರುವೆ! ಮಹಾಪ್ರಳಯದಲ್ಲಿ ಈ ಪ್ರಪಂಚವು ಬೀಜದಲ್ಲಿ ಅಂಕುರದಂತೆ ಸ್ವಕಾರಣದಲ್ಲಿ ನಿಂದಿದ್ದು ಸೃಷ್ಟಿಕಾಲದಲ್ಲಿ ಪ್ರಕಾಶಿಸುವದೋ, ಯಾದೊಂದಿಗೂ ಇಲ್ಲದಿದ್ದರೂ ಐಂದ್ರಜಾಲಿಕನ ಕಥೆಯಲ್ಲುಂಟಾಗುವ ಪದಾರ್ಥದಂತೆ ತೋರುತ್ತಿರುವದೋ ಸ್ವತಸ್ಸತ್ತಾರಹಿತವಾದ ಈ ಜಗತ್ತಿಗೂ ಕೇವಲ ಸತ್ತಾಮಾತ್ರಸ್ವರೂಪವಾದ ಬ್ರಹ್ಮಕ್ಕು ಹ್ಯಾಗೆ ಸಂಬಂಧವು ಸ್ವಕಾರಣದಲ್ಲಿ ನಿಂದಿರುವದೆಂದು ಪೇಳುವವರು ಪ್ರಾಜ್ಞರೋ ಅಜ್ಞರೋ ಪೇಳುವನಾಗು, ಎಂದು ಕೇಳುವ ಶ್ರೀರಾಮನಂ ಕುರಿತು ವಸಿಷ್ಠನಿಂತೆಂದನು,—ಎಲೈ ಸುಮತಿಯೆ! ಬೀಜದಲ್ಲಂಕುರದಂತೆ ಸ್ವಕಾರಣದಲ್ಲಿ ನಿಂದಿರುವದೆಂದು ಪೇಳುವರಿಗೆ ಅಜ್ಞಾನವಲ್ಲ, ಬಾಲ್ಯವೆಂದು ಪೇಳಬೇಕಾಗುತ್ತೆ. ಇದರ ರೀತಿಯಂ ಕೇಳುವನಾಗು:—ದೃಶ್ಯಕ್ಕೆ ದೃಶ್ಯವೇ ಬೀಜವಾಗತಕ್ಕದ್ದಾದ್ದರಿಂದ ಅಂತಃಕರಣ ಬಾಹ್ಯಕರಣಗಳಿಗೆ ಅಗೋಚರವಾಗಿರುವ ಚಿನ್ಮಾತ್ರವಾದ ಬ್ರಹ್ಮವು ಜಡವಾದ ಈ ಪ್ರಪಂಚಕ್ಕೆ ಧಾನ್ಯದಂತೆ ಬೀಜವಾಗಲಾರದು. ಅದಕ್ಕೆ ಬೀಜಭಾವವೇ ಸಂಭವಿಸದಿರುವಲ್ಲಿ ಇದಕ್ಕೆ ಅಂಕುರಭಾವವು ಹ್ಯಾಗೆ ಸಂಭವಿಸೀತು. ಗಗನಕ್ಕಿಂತಲು ಶೂನ್ಯಪ್ರಾಯನಾದ ಆ ಪರಮಾತ್ಮನಲ್ಲಿ ಬೀಜದಲ್ಲಿ ಅಂಕುರಗಳಂತೆ ಈ ಸುಮೇರು ಸಮುದ್ರಾದಿಗಳು ಇರುವದು ಹ್ಯಾಗೆ, ದೃಶ್ಯದೃಗ್ದೃಷ್ಟಿಗಳಿಗೆ ಅತೀತವಾದ್ದರಿಂ ಸಕಲ

ವಸ್ತುಗಳಿಗೂ ದೂರವಾದ ನಿರಾಕಾರ ವಸ್ತುವಿನಲ್ಲಿ ಸಾಕಾರವಾದ ಈ ಪ್ರಪಂಚವು ಹ್ಯಾಗೆಯಿದ್ದೀತು, ಅಲ್ಲೇಯಿರುವದಾದಲ್ಲಿ ಅದರ ವಿಚಾರದಲ್ಲಿದು ಇಲ್ಲದೆ ಹೋಗುವದಕ್ಕೆ ಕಾರಣವೇನು. ಅಗ್ನಿಯಲ್ಲಿ ಹಿಮದಂತೆಯೂ, ತೇಜದಲ್ಲಿ ತಿಮಿರದಂತೆಯೂ, ವಿರುದ್ಧವಾದ್ದರಿಂ ಬ್ರಹ್ಮದಲ್ಲಿ ಜಗವಿರಲಾರದು. ಸಹಕಾರಿಕಾರಣಗಳಿಲ್ಲದೆ ಕಾರಣಕ್ಕೆ ಸರಿಯಲ್ಲವ ಕಾರ್ಯ ಪುಟ್ಟಲಾರದಾದ್ದರಿಂದಲೂ, ಬ್ರಹ್ಮದಿಂ ಜಗತ್ತು ಪುಟ್ಟುವದಕ್ಕೆ ಸಹಕಾರಿ ಕಾರಣಗಳಿಲ್ಲದ್ದರಿಂದಲೂ, ಬ್ರಹ್ಮದಿಂ ಜಗತ್ತುಂಟಾಯಿತೆಂಬುವದು ಅಸಂಗತವಾಗಿರುವದ್ದರಿಂದ ಗಗನವು ಕಪ್ಪಾಗಿ ಕಾಣ್ಬರುವಂತೆ ಬ್ರಹ್ಮವೇ ಜಗದ್ರೂಪದಿಂ ಕಾಣುತ್ತಿರುವದೆಂದು ನಿಶ್ಚಯಿಸುವನಾಗು. ಸರ್ಗಾದಿಯಲ್ಲಿ ಬ್ರಹ್ಮವು ತನ್ನಲ್ಲಿ ತಾನೇ ಪ್ರಪಂಚರೂಪದಿಂ ಪ್ರಕಾಶಿಸಿತಾದ್ದರಿಂದ ಪ್ರಪಂಚಕ್ಕೆ ಬೇರೆ ಸತ್ವವುಂಟೆಂದು ಪೇಳುವದಕ್ಕೆ ಆಗುವದಿಲ್ಲ; ಬೇರೆ ಸತ್ವವಿದ್ದಲ್ಲಿ ಅದರ ಸಾಕ್ಷಾತ್ಕಾರದಲ್ಲಿ ಇದು ಹೋಗುವದಕ್ಕೆ ಕಾರಣವೇನು ಕೈವಲ್ಯವಾದರೂ ಹ್ಯಾಗ ಸಂಭವಿಸೀತು. ಕೇವಲೀಭಾವದಲ್ಲಿ, ಭೇದರೂಪವಾದ ಅನ್ಯೋನ್ಯಾಭಾವವು ನಿಷಿದ್ಧವಾಗುವದು. ಆದ್ದರಿಂದಾದ್ಯಂತಾವಸ್ಥಾರೂಪವಾದ ಪ್ರಾಗಭಾವ ಪ್ರಧ್ವಂಸಾಭಾವಗಳು ಅಸಿದ್ಧವಾಗುವವು. ಅನುಕಾರಣ ಶುಕ್ತಿಯಲ್ಲಿ ರಜತದಂತೆ ಬ್ರಹ್ಮದಲ್ಲಿ ಕಾಣುವ ಈ ಜಗವು ಅವಿಚಾರಕಾಲದಲ್ಲೇ ಇರುವದಲ್ಲದೆ ವಿಚಾರಕಾಲದಲ್ಲಿರುವದಲ್ಲವಾದ್ದರಿಂದ ಎಂದೆಂದಿಗೂ ಇಲ್ಲವೆಂಬ ಅರ್ಥಕ್ಕೆ ಬೋಧಕವಾದ ಅತ್ಯಂತಭಾವವನ್ನೇ ಇದಕ್ಕೆ ಅಂಗೀಕರಿಸತಕ್ಕದ್ದು. ಅತ್ಯಂತಾಭಾವವೆಂಬುವದು ಸರ್ವಭಾವಾತೀತವಾದ ಬಹ್ಮಕ್ಕೆ ಸ್ವರೂಪವಾದ್ದರಿಂದ ಕೇವಲೀಭಾವಕ್ಕೆ ತಡೆಯಾಗಲಾರದು. ಹೀಗಿರುವಲ್ಲಿ ಜಗತ್ತಿಗೆ ಬ್ಯಾರೆ ಸತ್ವವನ್ನಂಗೀಕರಿಸಿ, ಇದಕ್ಕೆ ಕಾರಣವಾದದ್ದು ಪರಮಾಣುವೆಂತಲೂ, ಚಿತ್ತವೆಂತಲೂ, ಕಾಲವೆಂತಲೂ, ದೈವವೆಂತಲೂ, ಪ್ರಕೃತಿಯೆಂತಲೂ, ಮಾಯೆಯೆಂತಲೂ ಪೇಳುವದು. ಅಸಂಗತವೋ ಸಂಗತವೋ ನೀನೇ ಆಲೋಚಿಸುವನಾಗು. ಪ್ರಪಂಚವು ಅವಿಚಾರಸಿದ್ಧವಾದ್ದರಿಂದ * ಅಜ್ಞಾನವೇ ಇದಕ್ಕೆ ಕಾರಣವೆಂದು ಪೇಳಬಹುದು. ಅಥವಾ ಬ್ರಹ್ಮಭಿನ್ನವಾದ ಪದಾರ್ಥವೆ ಇಲ್ಲದ್ದರಿಂದ ಈ ಸಂಜ್ಞೆಗಳೆಲ್ಲವು ಬ್ರಹ್ಮಕ್ಕೆವ್ಯವಹಾರಾರ್ಥವಾಗಿ ಕಲ್ಪಿತವಾಗಿರುವವೆಂದು ಪೇಳಬಹುದು. ಆದರೆ ಈ ಸಂಜ್ಞೆಗಳೆ

*ಅಜ್ಞಾನವೆಂದರೆ ಜ್ಞಾನವಿಲ್ಲದೆ ಇರುವಿಕೆ ಎಂದರ್ಥವಲ್ಲ, ವಿಪರೀತಜ್ಞಾನವೆಂದು ತಾತ್ಪರ್ಯ. ಉದಾಹರಣೆ:— ಸತ್ಯವನ್ನು ಅಸತ್ಯವನ್ನಾಗಿ ತಿಳಿಯುವದು ಅಜ್ಞಾನದ ಫಲ.

ಲ್ಲವು ಭ್ರಾಂತಿಜನಕವಾದ್ದರಿಂದ ಇದ್ಯಾವದನ್ನು ಅಂಗೀಕರಿಸಲಾಗದು. ದ್ವಿತೀಯಪದಾರ್ಥವನ್ನಂಗೀಕರಿಸುವದಕ್ಕೆ ಶಾಸ್ತ್ರವು ಅನುಭವವು ಸಹ ಸಮ್ಮತವಾಗಿಲ್ಲದ್ದರಿಂದ ಇದು ಅದು ನಾನು ನೀನೆಂಬುವದೇ ಮೊದಲಾದ ಮಾತುಗಳಿಂ ಪ್ರಸಿದ್ಧವಾದ ಈ ಪ್ರಪಂಚದ ರೂಪದಿಂದಲೂ ಇದರ ಸೃಷ್ಟಿಸ್ಥಿತಿ ಪ್ರಳಯಾದಿಕಾಲರೂಪದಿಂದಲೂ ಅವಾಂತರ ದಿಗ್ದೇಶಕಾಲದ್ರವ್ಯಾದಿರೂಪದಿಂದಲೂ ಬ್ರಹ್ಮವೇ ಪ್ರಕಾಶಿಸುತ್ತಿರುವದೆಂದು ನಿಶ್ಚಯಿಸುವನಾಗು ಎಂದು ಪೇಳುತ್ತಿರುವಲ್ಲಿ, ಎಲೈ ಮುನೀಂದ್ರನೇ ! ಮೋಹಾದಿಕಾಲಗಳಲ್ಲಿ ಸ್ಮೃತಿಯೊದಲೇ ಮರಳಿ ಯುಚ್ಚರವಾಗುವದ್ದರಿಂದ ಸುಷುಪ್ತಿಕಾಲದಲ್ಲಿ ಮನದೊಡನೆ ಸ್ಮೃತಿಯಡಗಿಕೊಂಡಿರುವಂತೆ ಮೋಹಕಾಲದಲ್ಲೂ ಮಹಾಪ್ರಳಯದಲ್ಲೂ ಸ್ಮೃತಿಯಡಗಿಕೊಂಡಿರುವದು, ಅದರಿಂದಲೇ ಪುನಃ ಬ್ರಹ್ಮಾದಿ ಸೃಷ್ಟಿಯಾಗುವದೆಂದು ತಿಳಿಯುತ್ತೇನೆಂದು ಪೇಳಲು ಮರಳಿ ವಸಿಷ್ಠನಿಂತೆಂದನು,-ಎಲೈ ರಾಮಭದ್ರನೇ! ಸ್ಮೃತಿಯೆಂಬ ಎರಡನೇಪದಾರ್ಥವಿರುವಲ್ಲಿ ಕೈವಲ್ಯವೆಂತಾಗುವದು, ಕೇವಲೀಭಾವಜ್ಞಾನದಿಂದಾತ್ಯಂತಿಕವಾಗಿ ಸಕಲಪದಾರ್ಥಗಳೂ ನಿರ್ನಾಮವಾಗಿ ಹೋಗುವದೇ ಮಹಾಪ್ರಳಯವೆನಿಸುವದು. ಇದು ಕೈವಲ್ಯವಂ ಪಡೆಯುವರಿಗೆ ಸಂಭವಿಸುವದು. ಕೈವಲ್ಯವಂಪಡೆಯುವ ಯೋಗ್ಯತೆಯಿಲ್ಲದವರಿಗೆ ರುದ್ರಪ್ರಳಯದಲ್ಲಿಯೂ ಇಂಥಾ ಮಹಾಪ್ರಳಯವು ಸಂಭವಿಸಲಾರದಾದ್ದರಿಂದ, ಅವರು ಸುಪ್ತರಂತೆಯೇ ಪುನಸ್ಸೃಷ್ಟಿಕಾಲದಲ್ಲಿ ಪುಟ್ಟುವರು. ಪ್ರಾಣಿಗಳಿಗೆ ಜ್ಞಾನ ಉಂಟಾಗದಿದ್ದಲ್ಲಿ ಎಷ್ಟು ಬ್ರಹ್ಮಕಲ್ಪವಾದರೂ ಮುಕ್ತಿಯಾಗಲಾರದು. ಅಧಿಕಾರಮೂರ್ತಿಗಳಾದ ಬ್ರಹ್ಮಾದಿಗಳು ಪರಮಾತ್ಮನ ಇಚ್ಛಾನುರೂಪವಾಗಿ ಸೃಷ್ಟ್ಯಾದಿಯಾದ ಸ್ವಕಾರ್ಯಗಳಂ ಮಾಡುವರಲ್ಲದೆ ಈ ಪ್ರಾಣಿಗಳಂತೆ ತಾವು ಬದ್ಧರಾಗುವದಿಲ್ಲವಾಗಕಾರಣ ಅವರಿಗೆ ಸ್ವರೂಪಸ್ಥಿತಿ ತಪ್ಪದಿರುವದು. ಸಾಂಖ್ಯಯೋಗಾಭ್ಯಾಸಬಲದಿಂ ಬ್ರಹ್ಮಾದಿಲೋಕಗಳಲ್ಲಿ ಸಾರೂಪ್ಯ ಸಾಲೋಕ್ಯ ಸಾಮೀಪ್ಯ ಮುಕ್ತಿಗಳಂ ಪಡದು ನಿಂದಿದ್ದ ಪ್ರಾಜ್ಞರು ಅಲ್ಲಿಯೆ ಜ್ಞಾನವಂ ಪಡದು ಬ್ರಹ್ಮಾದಿಗಳೊಡನೆ ಮುಕ್ತರಾಗುವರು. ಅಜ್ಞಾನನಾಶವೇ ಮುಕ್ತಿಯಾದ್ದರಿಂದಲೂ ಅಜ್ಞಾನ ನಾಶಕ್ಕೆ ಜ್ಞಾನವೇ ಮುಖ್ಯಕಾರಣವಾದ್ದರಿಂದಲೂ, ಜ್ಞಾನಿಗಳಿಗೆ ಮುಕ್ತಿಯಲ್ಲದೆ ಅಜ್ಞಾನಿಗಳಿಗೆ ಯಾವ ಲೋಕಕ್ಕೆ ಹೋದರು ಮುಕ್ತಿಯಿಲ್ಲವೆಂದು ನಿಶ್ಚೈಸತಕ್ಕದ್ದು. ಪರಮಾತ್ಮನ ಸಂಕಲ್ಪದಿಂ ಪುಟ್ಟಿದ ಬ್ರಹ್ಮನಿಗೆ ಪರಮಾತ್ಮನಿಂದುಪದಿಷ್ಟವಾದ ವೇದಗಳಿಂ, ಪೂರ್ವಕಲ್ಪದ ಬ್ರಹ್ಮನ ವೃತ್ತಾಂತವು ತಿಳಿಯಲು ಅದರ ಸ್ಮರಣೆಯಿಂ ಪ್ರಪಂಚವಂ ಸೃಜಿಸಿದನು. ಅಧಿಕಾರಸ

ಮಾಪ್ತಿಯಲ್ಲಿ ಸ್ಮೃತಿಯುಂ ಬಿಟ್ಟು ಕೈವಲ್ಯವಂ ಪಡದನು. ಮತ್ತೊಬ್ಬ ಬ್ರಹ್ಮನು ಪುಟ್ಟುವಲ್ಲಿ ಪೂರ್ವಬ್ರಹ್ಮನ ಸ್ಮೃತಿಯು ಇವನಿಗೆ ಹ್ಯಾಗ ಸಂಭವಿಸೀತು, ಅಖಂಡಚಿತ್ಪ್ರಕಾಶನಾದ ಪರಮಾತ್ಮನಿಗೆ ಅಭಿನ್ನವಾದ ಚಿಚ್ಛಕ್ತಿಯು ಸ್ಮೃತಿರೂಪವಾದ್ದರಿಂದ ಆ ಪರಮಾತ್ಮನ ಸ್ಮೃತಿಯೇ ಬ್ರಹ್ಮನಾಗಿಯೂ ಜಗತ್ತಾಗಿಯೂ ಪ್ರಕಾಶಿಸುತ್ತಿರುವದು. ಅನಾದಿಕಾಲಸಿದ್ಧವಾದ ಪರಮಾತ್ಮನ ಪ್ರಕಾಶವೆ ಜಗದಾಕಾರನಾದ ವಿರಾಟ್ಪುರುಷನಿಗೆ ಸೂಕ್ಷ್ಮಶರೀರವಾಗಿರುವದು. ಇದೇ ಜಗದಾಕಾರವಾಗಿಯೂ ಪ್ರಕಾಶಿಸುವದು. ದೇಶಕಾಲಕ್ರಿಯಾದ್ರವ್ಯಗಳಿಂ ಕೂಡಿದ ಈ ಪ್ರಪಂಚವು. ಅಲೆಗಳಲ್ಲಿ ಪ್ರತಿಬಿಂಬಿಸುವ ಸೂರ್ಯನಂತೆ ಪ್ರತಿಪರಮಾಣುಗಳಲ್ಲಿಯೂ ಪ್ರಕಾಶಿಸುತ್ತಿರುವದು. ಇಂಥಾ ತ್ರೈಲೋಕ್ಯಪರಮಾಣುಗಳು ಸೂರ್ಯನಲ್ಲಿ ಕಿರಣಗಳಂತೆ ಜ್ಞಾನಸ್ವರೂಪನಾದ ಸೂರ್ಯನಲ್ಲಿ ಅಸಂಖ್ಯವಾಗಿ ಪ್ರಕಾಶಿಸುತ್ತಿರುವವು. ಅಧೋಗತಿಸಾಧನವಾದ ಅಜ್ಞಾನದಿಂದಾಕ್ರಮಿಸಲ್ಪಟ್ಟ ಪುರುಷನಿಗೆ ಈ ಪ್ರಪಂಚಗಳು ಜಡರೂಪದಿಂ ತೋರುವವು. ವಿಚಾರಬಲದಿಂದ ಅಜ್ಞಾನವನ್ನತಿಕ್ರಮಿಸಿದ ಮಹಾಪುರುಷರಿಗೆ ಬ್ರಹ್ಮಾಭಿನ್ನವಾಗಿಯೇ ಪ್ರಕಾಶಿಸುವವು. ಹೀಗಿರುವದ್ದರಿಂದ *ಯಾವದರಿಂ ಯಾವದು ಪುಟ್ಟಿತೊ ಅದು ಅದಕ್ಕೆ ಭಿನ್ನವಲ್ಲವೆಂಬ ನ್ಯಾಯದಿಂ ಬ್ರಹ್ಮದಿಂ ಪುಟ್ಟಿದ ಪ್ರಪಂಚವು ಬ್ರಹ್ಮವೆಂತಲೇ ನಿಶ್ಚೈಸುವನಾಗು, ಎಲೈ ಶ್ರೀರಾಮಚಂದ್ರನೆ ವಿವೇಕ ಸತ್ಸಂಗ ಶಾಸ್ತ್ರವಿಚಾರಾಭ್ಯಾಸಗಳಿಂ ಜಿತೇಂದ್ರಿಯನಾಗಿರತಕ್ಕದ್ದು ಹ್ಯಾಗೆಂದರೆ, ದೃಶ್ಯಾತ್ಯಂತಾಭಾವರೀತಿಯಿಂ ಬೋಧಿಶಿದಲ್ಲದೆ ಮನಸ್ಸಿಗೆ ಭ್ರಮೆ ತಪ್ಪದು. ಅದಕ್ಕೆ ಭ್ರಮೆತಪ್ಪದೆ ಇಂದ್ರಿಯಗಳು ಸ್ವಾಧೀನವಾಗಲಾರವು. ಇಂದ್ರಿಯಗಳು ವಿಷಯಗಳಿಂ ಪಿಡಿಯುವವಲ್ಲದೆ ಅವುಗಳ ಗುಣದೋಷಗಳಿಂ ತಿಳಿಯಲು ಸಮರ್ಥವಾಗಲಾರವು. ಅಂತಃಕರಣಕ್ಕೆ ಇಂದ್ರಿಯಗಳಿಂ ಪಿಡಿಯಲ್ಪಟ್ಟ ವಿಷಯಗಳ ಗುಣದೋಷಗಳಿಂ ತಿಳಿಯುವ ಯೋಗ್ಯತೆ ಇರುವದ್ದರಿಂದ ಮನವೆ ಮುಖ್ಯವೆನಿಸುವದು. ಅದರಿಂದಿದರ ಅಧೀನವಾಗಿ ಇಂದ್ರಿಯಗಳಿರುವವು, ಇದರ ಭಾವನೆಯಿದ್ದಂತೆ ವಿಷಯಗಳೆಲ್ಲವು ಪ್ರಕಾಶಿಸುತ್ತಿರುವವು. ಆದ್ದರಿಂದ ಸಮಸ್ತ ಪ್ರಪಂಚವು ಇದಕ್ಕೆ ಅಧೀನವಾಗಿಧೆಯುಂದು ತಿಳಿಯತಕ್ಕದ್ದು. ಇದು ಪರಾಙ್ಮುಖವಾಗಿರುವಲ್ಲಿ ಎದುರಿಗಿದ್ದ ಪದಾರ್ಥವೂಕೂಡ ಇಲ್ಲದಂತಾಗುವದಾದ್ದರಿಂದ ಇದೇ ಪ್ರಪಂಚರೂಪದಿಂ ಕಾಣಲ್ಪಡುವದೆಂದು ತಿಳಿಯಬ

*ಮಣ್ಣಿನಿಂದ ಗಡಿಗೆ ಹುಟ್ಟುತುತ್ತದೆ, ಮಣ್ಣುಬೇರೆ ಗಡಿಗೆಬೇರೆಯಾಗಿರುವದಿಲ್ಲ. ಮಣ್ಣಿನ ವಿಕಾರವೇ ಗಡಿಗೆ ಎನಿಸುವದು.

ರುತ್ತೆ. ತಿಲದಲ್ಲಿ ತೈಲದಂತೆಯೂ, ಗುಣಿಯಲ್ಲಿ ಗುಣದಂತೆಯೂ, ಧರ್ಮಿಯಲ್ಲಿ ಧರ್ಮದಂತೆಯೂ, ಸೂರ್ಯನಲ್ಲಿ ಕಿರಣದಂತೆಯೂ, ಅಗ್ನಿಯಲ್ಲಿ ದಾಹದಂತೆಯೂ, ಬೀಜದಲ್ಲಿ ಅಂಕುರದಂತೆಯೂ, ಮನಸ್ಸಿನಲ್ಲೇ ಈ ಪ್ರಪಂಚವೆಲ್ಲವೂ ಇರುವದು. ಇದು ಮನನವಂ ಮಾಡುತ್ತಿರುವಲ್ಲಿ ಪ್ರಪಂಚವೆಲ್ಲವು ಉಂಟಾಗುವದು, ಆದ್ದರಿಂದ ಹುಟ್ಟುವದು ಸಾಯುವದು ಇರುವದು ಅಜ್ಞಾನಬಾಧ, ಮೋಕ್ಷಗಳನ್ನನುಭವಿಸುವದು ಸಹ ಮನವೆಂತ ತಿಳಿಯುವನಾಗು. *ದೃಶ್ಯಾತ್ಯಂತಾಭಾವ ಜ್ಞಾನವೆಂಬ ಸಿದ್ಧೌಷಧದಿಂ ಮನನವೆಂಬ ರೋಗವು ಪೋಗುವಲ್ಲಿ ಮನವು ಬ್ರಹ್ಮಭಾವವಂ ಪೊಂದಲು ಸರ್ವವು ಬ್ರಹ್ಮವೆಂಬ ಸಿದ್ಧಾಂತವೆ ಸಿದ್ಧವಾಗುವದು. ಎಂದು ಪೇಳುತ್ತಿರುವಲ್ಲಿ ಎಲೈ ಮಹಾಮುನಿಯೇ ಮನದಲ್ಲಿ ಈ ಸಂಸಾರವು ಹ್ಯಾಗೆ ಇರುವದೋ ಹ್ಯಾಗೆ ಪ್ರಕಾಶಿಸುವದೊ ಅದಂ ನನಿಗೆ ಚನ್ನಾಗಿ ತಿಳಿಯುವಂತೆ ಪೇಳುವನಾಗೆಂದು ಶ್ರೀರಾಮನು ಬೆಸಗೊಳ್ಳಲು ಮರಳಿ ವಸಿಷ್ಠನಿಂತೆಂದನು,—ಎಲೈ ರಾಮಭದ್ರನೆ ಐಂದವರ ಮನದಲ್ಲಿ ಜಗತ್ತುಗಳಂತೆಯೂ, ಲವಣರಾಜನ ಮನದಲ್ಲಿ ಚಂಡಾಲಭಾವದಂತೆಯೂ, ಶುಕ್ರನ ಮನದಲ್ಲಿ ಭೋಗಾಶೆಯಂತೆಯೂ, ಜನಗಳ ಮನದಲ್ಲಿ ಸಂಸಾರವಿರುವದು. ಪ್ರಕೃತದಲ್ಲಿ ಶುಕ್ರನ ವೃತ್ತಾಂತವಂ ಕೇಳುವನಾಗು,-

## ಶುಕ್ರೋಪಾಖ್ಯಾನ.

ಮಂದರಪರ್ವತದಲ್ಲಿ ತಂದೆಯ ಸಮೀಪದಲ್ಲೇ ಸಮಾಧಿಯಲ್ಲಿ ಕುಳಿತಿದ್ದ ಭಾರ್ಗವನು ಒಂದಾನೊಂದುವೇಳೆಯಲ್ಲಿ ಚಿತ್ತ ಬಹಿರ್ಮುಖವಾದ್ದರಿಂದ ಕಣ್ಗಳಂತೆರದು ತನ್ನ ಆಶ್ರಮದೊಳ್ಪುಷ್ಪಾಪಚಯುವಂ ಮಾಡುತಿದ್ದ ಓರ್ವ ಅಪ್ಸರೆಯಂ ಕಂಡನು. ಅವಳ ಸೌಂದರ್ಯ ಲಾವಣ್ಯಾದಿಗಳಂ ನೋಡುವಲ್ಲಿಯೆ, ಸಮಾಧಿಯ ಅಭ್ಯಾಸಬಲದಿಂ ಮರಳಿ ಕಣ್ಗಳು ಮುಚ್ಚಿಕೊಳ್ಳಲು ಆ ದೇವಸ್ತ್ರೀಯಲ್ಲಿ ಪ್ರಸಕ್ತವಾದ ಮನವುಳ್ಳ ಭಾರ್ಗವನು ಇಂತು ಆಲೋಚಿಸುತ್ತಿ

*ದೃಶ್ಯಾತ್ಯಂತಾಭಾವಜ್ಞಾನ=ಮನಸ್ಸು ಕೆಲಸ ಮಾಡುತ್ತಿರುವಾಗ ದೃಶ್ಯವಸ್ತುಗಳು ಅಂದರೆ ಇಂದ್ರಿಯಗೋಚರಗಳಾದ ವಸ್ತುಗಳಿಗೆ ಭಾವವಸ್ತುಗಳಂತೆಯೂ ಮನಸ್ಸು ವಿಶ್ರಾಮಹೊಂದಿದಾಗ್ಯೆ ಈ ವಸ್ತುಗಳಿಗೆ ಅಭಾವವೆಂತಲೂ ಅನುಭವವಿರುತ್ತದೆ. ಮನಸ್ಸು ಅತ್ಯಂತವಾಗಿ ನಾಶವಾಗಲು ದೃಶ್ಯವಸ್ತುಗಳು ಕಾಣದೆ ದೃಶ್ಯಾತ್ಯಂತಾಭಾವವುಂಟಾಗುವದು.

ದ್ದನು. ಅದೆಂತೆಂದರೆ,—ಅಪ್ಸರಸ್ತ್ರೀ ದರ್ಶನದಿಂ ಸ್ವರ್ಗಲೋಕಕ್ಕೆ ಬಂದಿರುವೆನೆಂದು ನಾನು ತಿಳಿಯುತ್ತೇನೆ. ಇದುಗೋ ಮಂದಾರಪುಷ್ಪಗಳಂ ಮುಡಿದು ಕರಗಿದ ಚಿನ್ನದಂತೆಸೆವ ಮೈಬಣ್ಣಗಳುಳ್ಳ ದೇವತೆಗಳು ತಿರುಗುತ್ತಿರುವರು, ಕಣ್ಗಳಕಾಂತಿಯಿಂ ಕನ್ನೈದಿಲೆಗಳಂ ಸುತ್ತಮುತ್ತಲು ಪುಟ್ಟಿಸುತಲಿರುವ ಸುರಸುಂದರಿಯರಿತ್ತಲಿರುವರು. ನಿರ್ಮಲಕಾಂತಿಯಾದ ಶರೀರದಲ್ಲಿ ಪರಸ್ಪರ ಪ್ರತಿಬಿಂಬಗಳಂ ವಿಶ್ವರೂಪನಾದ ನಾರಾಯಣನಂತೆ ಇತ್ತ ಸಪ್ತಮರುತ್ತುಗಳು ಪ್ರಕಾಶಿಸುತಲಿರುವರು. ಐರಾವತದ ಗಂಡಸ್ಥಲದಲ್ಲಿರುವ ಭ್ರಮರಗಳಂ, ಮದೋದಕಪಾನದಲ್ಲೂ ಅಪೇಕ್ಷೆಯಿಲ್ಲದೆ ಕೇಳಲ್ಪಡುತಲಿರುವ ದೇವತಾಸಂಗೀತಶಬ್ದಗಳು ಇಲ್ಲಿಗೆ ಕೇಳಲ್ಪಡುವವು. ತೀರೋದ್ಯಾನಗಳಲ್ಲಿ ಕ್ರೀಡಾಶ್ರಮವಂ ಪರಿಹರಿಶಿಕೊಳ್ಳುತಲಿರುವ ದೇವಶ್ರೇಷ್ಠರಿಂದಲೂ, ಅಲೆಗಳಂ ಚಲಿಸುವ ಕನಕ ಕಮಲಗಳಲ್ಲಿ ಉಯ್ಯಾಲೆಯ ಲೀಲೆಯನ್ನನುಭವಿಸುವ ಸತ್ಯಲೋಕವ ಹಂಸೆಗಳಿಂದಲೂ, ಶೋಭಿಸುವ ಮಂದಾಕಿನೀನದಿಯು ಇತ್ತ ಹರಿಯುತ್ತಿರುವದು. ಶರೀರಕಾಂತಿಯಿಂ ದಿಕ್ಕುಗಳೆಲ್ಲವನ್ನು ಸುವರ್ಣಮಯವಾಗಿ ತೋರುತ್ತಿರುವ ಸೂರ್ಯಚಂದ್ರರು ಇಂದ್ರಾದಿದಿಕ್ಪಾಲಕರು ಸಹ ಈ ಸುಧರ್ಮೆಯಲ್ಲಿ ಭದ್ರಾಸನಗಳನ್ನಲಂಕರಿಸುತ್ತಿರುವರು. ಯುದ್ಧದಲ್ಲಿ ತಿವಿಯಲ್ಪಟ್ಟ ಮದೋದ್ಧತರಾದ ದೈತ್ಯಾಧಿಪತಿಗಳ ರಕ್ತದಿಂ ಕೊನೆಗೆಂಪಾದ ದಂತಗಳಿಂ ಕೂಡಿದ ಐರಾವತವಿತ್ತ ನಿಂದಿರುವದು. ಸತ್ಕರ್ಮಪ್ರಭಾವದಿಂದೀಕರ್ಮದೇವತೆಗಳೇ ನಕ್ಷತ್ರಗಳಂತೆ ಕಾಣುತ್ತಿರುವರು. ದೋಲೋತ್ಸವವನ್ನನುಭವಿಸುವ ಅಪ್ಸರೆಯರ ಶಿರದಲ್ಲಿರುವ ಪಾರಿಜಾತದ ಪೂಗುತ್ತಿಗಳಿಂದೀ ಉಪವನ ವೀಧಿಗಳು ಥಳಥಳಿಸುತ್ತಿರುವವು. ಮೇರುಪರ್ವತದ ಶಿಲೆಗಳಿಗೆ ತಗಲಿ ಹಾರುವ ತೆರೆಗಳ ತುಂತುರಗಳಿಂದೀ ಮಂದಾಕಿನಿಯ ಕಾಲವೆಗಳು, ಪುಣ್ಯಶಾಲಿಗಳ ಕರ್ಮಸಂತಾಪವಂ ಪರಿಹರಿಸುತಲಿರುವವು. ಮಂದಾರಪುಷ್ಪ ಮಕರಂದಗಳಂ ಸುಗಂಧಿಗಳಾದ ಮಂದಮಾರುತಗಳಿಂದೆರಚಲ್ಪಡುವ ಪಾರಿಜಾತಪರಾಗಗಳೆಂಬ ಗಂಧುಡಿಗಳಿಂ ಭ್ರಮರಿಗಳಂತೆ ಮದವೇರುತ್ತಿರುವ ತರುಣಿಯರಿಂದೀನಂದನವನವು ಸಾಂದ್ರವಾಗಿರುವದು. ವೀಣಾಧ್ವನಿಯಂತೆ ಮನೋಹರವಾದ ಕಂಠಸ್ವರದಿಂ ಪಾಡುವ ತುಂಬುರುನಾರದರ ಸಂಗೀತಾನುಸಾರವಾಗಿ ನರ್ತಿಸುವ ದೇವನರ್ತಕಿಯರ ನರ್ತನದಿಂ ಚಿತ್ತ ವಿಮಾನಗಳಿಂ ಬಂದ ಸುಕೃತಿಗಳು ಸಂತೋಷಪಡುತ್ತಿರುವರು. ಮದನಮದಮತ್ತರಾದ ಈ ಮತ್ತಕಾಶಿನಿಯರು ಸುತ್ತಮುತ್ತಲೂ ನಿಂತು ಇತ್ತದೇವೇಂದ್ರನಂನಾನಂದಪಡಿಸುತ್ತಿರುವರು. ಇಲ್ಲಿ ರಮಣೀಯವಾದ ಪೂಗುತ್ತಗ

ಳಿಂದಲೂ, ಪಣ್ಣುಗಳಿಂದಲೂ ಪಾರಿಜಾತ ಮೊದಲಾದ ಕಲ್ಪವೃಕ್ಷಗಳು ವೃಕ್ಷ ಪಙ್ತಿಗಳಲ್ಲಿ ರಾಜಭಾವದಿಂ ಪ್ರಕಾಶಿಸುತ್ತಿರುವವು. ಇಲ್ಲಿ ನಾನು ದೇವೇಂದ್ರನೆಡೆಗೆ ಪೋಗುವೆನೆಂದು ಭಾರ್ಗವನು ಚಿಂತಿಸುತ್ತಿರಲು, ಭೂವ್ಯಾಕಾಶಗಳ ಮಧ್ಯದಲ್ಲಿ ತ್ರಿಶಂಕುಸ್ವರ್ಗದಂತೆ ಅವನ ಚಿತ್ತವು ಚಲಿಸುವ ಗಗನಮಧ್ಯದಲ್ಲಿಯೇ ಒಂದು ಸ್ವರ್ಗಲೋಕವುಂಟಾದುದು. ಭಾರ್ಗವನು ಆಶ್ರಮದಲ್ಲಿದ್ದ ಸ್ಥೂಲ ಶರೀರವನ್ನಲ್ಲೇ ಬಿಟ್ಟು ವಾಸನಾಸಿದ್ಧವಾದ ದಿವ್ಯಶರೀರದಿಂದಿಂದ್ರನ ಸಮೀಪವಂ ಪೊಂದಲು, ಆ ದೇವೇಂದ್ರನು ಸಪರಿವಾರನಾಗಿ ಝುಗ್ಗನೆಯದ್ದು ತನ್ನ ಸಿಂಹಾಸನದಮೇಲೆ ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಗಳಿಂ ಪರಿಪರಿಯಾಗಿ ಪೂಜಿಸಲು, ಆ ಸುಧರ್ಮಾಸಭೆಯಲ್ಲಿ, ಪೂರ್ಣಚಂದ್ರನಂತೆ ಪ್ರಕಾಶಿಸುತ್ತಾ, ಕೆಲವು ಹೊತ್ತು ಸಿಂಹಾಸನದ ಮೇಲೆ ಕುಳಿತಿದ್ದು ಆ ಲೋಕವಂ ನೋಡುವ ವ್ಯಾಜದಿಂದೆದ್ದು ಅತ್ತಿತ್ತನೋಡುತ್ತಾ ಸಾರಸಪಕ್ಷಿಯು ಸರೋವರವಂ ಪೊಂದುವಂತೆ ಅಪ್ಸರೋಮಂಡಲವಂ ಪೊಂದಿದನು. ಅಲ್ಲಿ ತನಗೆ ಇಚ್ಛಾವಿಷಯಳಾದ ಅಚ್ಛರೆಯಂ ಕಂಡ ಶುಕ್ರನು ಶೀಮಾವಿನ ಶಾಖೆಯಂ ಕಂಡ ಕೋಕಿಲದಂತೆ ಸಂತುಷ್ಟನಾಗಿ, ಚಂದ್ರಕಲೆಯಂಕಂಡ ಚಂದ್ರಕಾಂತದಂತೆ * ಸ್ವೇದೋದಕ ಧಾರೆಯಿಂ ಪ್ರಕಾಶಿಸಿದನು. ಇವನಂ ಕಂಡ ಆ ಸುಂದರಿಯು ಚಂದ್ರನಂ ಕಂಡ ಚಂದ್ರಕಾಂತದ ಬೊಂಬೆಯಂತೆ ದ್ರವಿಸಿ ಸಂಕೋಚವಂ ಪೊಂದಿದಳು. ಪ್ರಾತಃಕಾಲದಲ್ಲಿ ಪದ್ಮಿನೀ ಸೂರ್ಯರಂತೆಯೂ, ಚಕ್ರವಾಕ ದಂಪತಿಗಳಂತೆಯೂ, ಅವರೀರ್ವರು ಅನುರಾಗವಂ ಹೊಂದುತ್ತಿರುವಲ್ಲಿ †ಪಂಚಶರನ ಶರಪರಂಪರೆಯಿಂ ತಿವಿಯಲ್ಪಡುವಳಂತೆ ಕಂಪಿಸುವ ಶರೀರವುಳ್ಳ ಆ ಕಾಮಿನಿಯು, ಮಂದಮಾರುತದಿಂ ಚಲಿಸುವ ಯಳೇ ಬಳ್ಳಿಯಂತೆ ಕಾಣುತ್ತಿದ್ದಳು. ‡ ಅನಂಗನಾದ್ದರಿಂ ಜನರು ನೋಡ್ಯಾರೆಂಬ ದಿಗಲಿಲ್ಲದೆ ಅದೃಶ್ಯಾಂಜನವಂ ಧರಿಸಿದ ಚೋರನಂತೆ ನುಗ್ಗಿ ಬಂದು ವ್ಯಥೆಪಡಿಸುವ ಮನ್ಮಥನಿಂದುಂಟಾದ ವಿಕಾರಗಳಂ ಮುಚ್ಚಿ ಕೊಳ್ಳಲಾರದೆ ಸಂಕೋಚಪಡುವ ಆ ಅಚ್ಛರೆಯಂ ಕಂಡ ಶುಕ್ರನು ತೇಜೋಮಯವಾದ ಈ ಲೋಕದೊಳಂಧಕಾರ ಉಂಟಾದರೆ ಈಗ್ಯೆ ಯುಕ್ತವಾಗುವದೆಂದು ಚಿಂತಿಸಿದನು. ಆ ಮುನಿಯು ಸಿದ್ಧಸಂಕಲ್ಪನಾದ್ದರಿಂದಲೂ ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳ ಸಾನ್ನಿಧ್ಯದಿಂದಾಲೋಕವು ಸಂಕಲ್ಪಾನುರೂಪ ಫಲಪ್ರದವಾದ್ದರಿಂದಲೂ, ಲೋಕಾಲೋಕ ಪರ್ವತದ ಹಿಂಭಾಗದಂತೆ ಗಾಢಾಂಧ

* ಬೆವರುನೀರು. † ಮನ್ಮಥನ.

‡ ಶರೀರ ರಹಿತನಾದ್ದರಿಂದ.

ಕಾರದಿಂದಾವೃತವಾದುದು. ಆಗ ದಿನಾಂತದಲ್ಲಿ ಪಕ್ಷಿಗಳಂತೆ ಅವಳ ಸಮೀಪದಲ್ಲಿದ್ದ ಜನಗಳೆಲ್ಲರೂ ಯಥೇಚ್ಛವಾಗಿ ಹೊರಟುಹೋದರು. ಆ ಅಂಧಕಾರವು ಅವಳ ಲಜ್ಜಾಂಧಕಾರಕ್ಕೆ ಸೂರ್ಯನಾಗಲು, ಆ ಅಪ್ಸರೆಯು ಮೇಘಮಂ ನವಿಲಿನಂತೆ ಆ ಶುಕ್ರನಂ ಪೊಂದಿದಳು. ಆಗ ಭಾರ್ಗವನು ಸಂಕಲ್ಪದಿಂದುಂಟಾದ ಸ್ಫಟಿಕದ ಮನೆಯೊಳ್ ಮಣಿಮಯವಾದ ಮಂಚದಮೇಲಿರುವ ಹಂಸತೂಲಿಕಾತಲ್ಪದಮೇಲೆ ಕುಳಿತುಕೊಂಡನು. ಆ ಮುನಿಯ ಕರಾವಲಂಬನದಿಂ ಮಂಚವನ್ನೇರಿದ ಆ ಅಪ್ಸರೆಯು ಕ್ಷೀರಾಬ್ಧಿಯಲ್ಲಿ ಶೇಷಶಯನನಾದ ವಾಸುದೇವನ ಸಮೀಪದಲ್ಲಿರುವ ಲಕ್ಷ್ಮಿಯಂತೆ ಪ್ರಕಾಶಿಸುತ್ತಾ ಮದನವೇದನೆಯಿಂದುದಿಸಿದ ಸ್ವರವಿಕಾರದಿಂ ಕೂಡಿದವಳಾದಾಗ್ಯೂ ಅನುರಾಗಾತಿಶಯದಿಂ ವಿಜ್ಞಾಪಿಸಿಶಿದಳದೆಂತೆನೆ,—ಎಲೈ ಪ್ರಾಣಕಾಂತನೆ! ಎರಡನೇ ಮಹೇಶ್ವರನಾಗಿರುವ ನಿನ್ನ ಮಹಿಮೆಯನ್ನು ಅಬಲೆಯಾದ ನನ್ನ ದೈನ್ಯವನ್ನು ಯೋಚಿಸದೆ ಹರಿಣಿಯಂ ಕಿರಾತನಂತೆ ನನ್ನಂ ಹೊಡೆಯುತ್ತಿರುವ * ಮಾರನಂ ನೋಡುವನಾಗು. ಸತ್ಪುರುಷರಿಗೆ ದೀನಜನರಂ ಸಮಾಧಾನಪಡಿಸುವದೇ ಮುಖ್ಯವ್ರತವಾದ್ದರಿಂದ ಅನನ್ಯಗತಿಯಾಗಿ ಶರಣಮಂ ಹೊಂದಿರುವ ದೀನಳಾದ ನನ್ನಂ ರಕ್ಷಿಸುವನಾಗು. ಸ್ನೇಹದರೀತಿಯಂ ತಿಳಿಯದಿರುವ ಮನುಷ್ಯಪಶುಗಳು ಮೂಢಭಾವದಿಂ ಶರಣಾಗತರೆಂದರಿಯದೆ, ನೆರೆಯೊಡ್ಡಿ ಬೇಡಿಕೊಳ್ಳುವ ನಾರಿಯರಂ ತಿರಸ್ಕರಿಸುವರು. ದೈವೇಚ್ಛೆಯಿಂ ಪರಸ್ಪರಾನುರಾಗಮಂ ಪಡೆದ ನಾಯಕೀನಾಯಕರ ನಡತೆಯು ಶರತ್ಕಾಲದ ಬೆಳ್ದಿಂಗಳಿಗಿಂತಲೂ ಅಧಿಕವಾಗಿ ಆನಂದಪಡಿಸುವದು. ಅನ್ಯೋನ್ಯಾನುರಾಗಮಂ ಘಟಿಸಿದ ಪ್ರಥಮ ಸಮಾಗಮದಂತೆ ಮೂಜಗಗಳಾಧಿಪತ್ಯವು ಕೂಡ ಸಂತೋಷಪಡಿಸಲಾರದು. ಮಾರನ ಕೋಟಲೆಯಂ ತಾಳಲಾರದ ನಾನು ನಿನ್ನ ಚರಣಮಂ ಶರಣುಹೊಂದಿ, ಚಂದ್ರನ ಕರಮಂ ಪಿಡಿದ ಕುಮುದಿನಿಯಂತೆ ವಿಶ್ರಮಿಸಿಕೊಳ್ಳುತಲಿರುವೆನು. ಚಂದ್ರಕರಸ್ಪರ್ಶದಿಂ ಚಕೋರಿಯಂತೆ ನಿನ್ನ ಕರಾವಲಂಬನದಿಂ ಜೀವಿಸಿರುವೆನು. ಚರಣಪಲ್ಲವದೊಳ್ಬಿದ್ದಿರುವ ನನ್ನಂ ಹೃದಯಮಂ ಶೇರಿಸಿ, ಭ್ರಮರಿಯಂ ಕಮಲಾಕರದಂತೆ ಆನಂದಪಡಿಸುವನಾಗು. ಎಂದು ಬೆಸಗೊಳ್ಳುವ ಆ ಬಿಸಜಾಕ್ಷಿಯನ್ನಾ ಮುನಿಶ್ರೇಷ್ಠನು ಕುಸುಮಮಾಲೆಯಂ ವಿಟಶ್ರೇಷ್ಠನಂತೆ ಹೃದಯಮಂ ಶೇರಿಸಿದನು. ಈ ಪರಿಯಿಂ ಪರಸ್ಪರಾನುರಾಗದಿಂ ಶೇರಿದ ಆ ಅಪ್ಸರೋಮುನಿಗಳು ಭ್ರಮರಗಳಂತೆ ಮಂದಾರ ಮಕರಂದಪಾನದಿಂ ಮುದಿಸಿ ನಂದನವನದೊಳ್ವಿಹರಿಸುತ್ತಿದ್ದರು. ಮಾಮಾಕಿಸೀ ಮೊದ

* ಮನ್ಮಥನನ್ನು.

ಳಾದ ದಿವ್ಯನದಿಗಳ ಮಣಲೊಟ್ಟಿಗಳಲ್ಲಿಯೂ, ಚೈತ್ರರಥ ಮೊದಲಾದ ಉದ್ಯಾನಗಳಲ್ಲಿಯೂ, ಗಂಧಮಾದನ ಕೈಲಾಸ ಮೊದಲಾದ ಮಹಾಗಿರಿಗಳ ಗುಹಾಂತರಗಳಲ್ಲಿಯೂ, ಸಿದ್ಧಚಾರಣಾದಿಗಳ ಆಯಾಯ ವಿಹಾರಸ್ಥಾನಗಳಲ್ಲಿಯೂ, ವಿಚಿತ್ರವಿಲಾಸಗಳಿಂ ವಿಹರಿಸುತ್ತಿರುವ ಆ ನಾಯಕೀ ನಾಯಕರಿಗೆ ಎಂಟು ಚತುರ್ಯುಗಗಳು ಕಳದವು. ಬಳಿಕ ಪುಣ್ಯಕ್ಷಯದ ಜೊತೆಯೊಡನೆ ಭೂಮಿಯೋಳ್ಬಿದ್ದ ಆ ಮುನಿಯ ದಿವ್ಯಶರೀರವು ಬಂಡೆಯಮೇಲೆ ಬಿದ್ದ ಗಿರಿಪ್ರವಾಹದಂತೆ ಚೂರು ಚೂರಾದುದು. ಪಕ್ಷಿಯಂತೆ ಆ ಮುನಿಯ ಮನವು ಗಗನದಲ್ಲಿ ಕೆಲವುಕಾಲವಿದ್ದುದು. ಚಂದ್ರನ ಕಿರಣವಂ ಸೇರಿ ಮಂಜಿನರೂಪದಿಂ ಭತ್ತವಂ ಸೇರಿದ ಆ ಶುಕ್ರನು ಆ ಭತ್ತದ ಅನ್ನವಂ ಭಕ್ಷಿಸಿದ ದಶಾರ್ಣದೇಶದ ಬ್ರಾಹ್ಮಣನ ಶರೀರದೊಳ್ * ಶುಕ್ಲವಾಗಿ ಅವನ ಪತ್ನಿಯ ಗರ್ಭವಂಸೇರಿ ಭೂಮಿಯೋಳ್ಪುಟ್ಟಿ ಮಹಾಮುನಿಗಳ ಸಂಗದಿಂ ತಪಸ್ವಿಯಾಗಿ ಮೇರುಪರ್ವತದ ಅರಣ್ಯದೊಳ್ ಒಂದು ಮನ್ವಂತರ ತಪವಂಮಾಡುತ್ತಿದ್ದನು. ಆಗ ಅವನಿಗೆ ಹೆಣ್ಣುಜಿಂಕೆಯಲ್ಲಿ ನರಾಕೃತಿಯಾದ ಮಗನು ಪುಟ್ಟಲು, ಅವನ ಮೇಲಣ ಸ್ನೇಹದಿಂ ಧನಾದಿಗಳಾಗಬೇಕೆಂಬ ಕಾಮನೆಯಿಂ ತಪವಂಮಾಡುತ್ತಾ ಆಯುಸ್ಸು ಕ್ಷೀಣವಾದ್ದರಿಂ ಮೃತ್ಯುವಿನಪಾಲಾಗಿ ಭೋಗಾಶೆಯಿಂ ಪ್ರಾಣತ್ಯಾಗವಾದ್ದರಿಂದ ಮದ್ರದೇಶಾಧಿಪತಿಗೆ ಮಗನಾಗಿ ಬಹುಕಾಲ ರಾಜ್ಯಾಧಿಪತ್ಯವಂ ಮಾಡಿದನು. ವಾನಪ್ರಸ್ಥಾಶ್ರಮವಂ ಹೊಂದಿ ತಪವಂ ಮಾಡುತ್ತಿರುವ ಅವನಿಗೆ ತಪೋವಾಸನೆಯಿಂ ಶರೀರಘಾತವಾಗಲು, ತಪಸ್ವಿಗೆ ಪುತ್ರನಾದ ಆ ಶುಕ್ರನು ಸಮಂಗಾನದಿಯ ತೀರದೊಳ್ ತಪವಂ ಮಾಡುತ್ತಿದ್ದನು. ಇಂತು ಶುಕ್ರನ ಮನವು ವನಪಙ್ತಿಗಳಲ್ಲಿ ಜಿಂಕೆಯಂತೆ ಸಂಸಾರದಲ್ಲಿ ತಿರುಗುತ್ತಿರಲು, ತಂದೆಯ ಯದುರಿಗಿದ್ದ ಅವನ ಶರೀರವು ಬೇರ್ಗಡಿದ ಮರದಂತೆ ನೆಲದಮೇಲೆ ಬಿದ್ದುದು, ಬಿಸಲು ಝಳದಿಂ ಚರ್ಮಶೇಷವಾದ ಆ ಶರೀರವು ರಂಧ್ರಗಳಿಂ ಪೊರಮಡುವ ವಾಯುವಿನ ಸೀತ್ಕಾರಗಳಿಂ, ಬಿಸಲು ಗಾಳಿ ಮೊದಲಾದವುಗಳಿಂದುಂಟಾದ ಕಷ್ಟವಂ ತಾಳಲಾರದೆ ರೋದನವಂ ಮಾಡುತ್ತಿರುವಂತಿದ್ದುದು. ತೆರದ ಕಣ್ಣುಗಳಿಂದಲೂ ಬಿರಿದ ಬಾಯಿನಲ್ಲಿ ವಿಕಟವಾಗಿ ಕಾಣ್ಬರುವ ಪಲ್ಲುಗಳಿಂದಲೂ, ನಾನಾಮಾರ್ಗದಿಂದಲೆಯುವ ಮನವಂ ನೋಡಿ ನಗುವಂತಿದ್ದುದು. ಮೊಗವೆಂಬ ಕಾಡಿನೊಳ್ ಪಾಳುಬಾವಿಯಂತಿದ್ದ ಕಣ್ಣುಗಳೊಳ್ ವರ್ಷೋದಕಗಳು ಹರಿಯುವದ್ದರಿಂದ ಪೂರ್ವಸೌಖ್ಯವಂ ಸ್ಮರಿಸಿಕೊಂಡು ಕಣ್ಣೀರಿನ ಧಾರೆಗಳಂ ಬಿಡುವಂತಿದ್ದುದು. ಬಿರಿ

* ವೀರ್ಯವಾಗಿ.

ಗಾಳಿಯಿಂ ಹೊರಳುತ್ತಲೂ, ಮಳೆಗಳಿಂ ನೆನೆಯುತ್ತಲೂ, ಶರೀರವಂ ಧರಿಸಿದ ದುರಿತದಂತಿರುವ ಧೂಳಿಗಳಿಂ ಮುಚ್ಚಿಕೊಳ್ಳುತಲೂ, ಶುಷ್ಕಕಾಷ್ಠದಂತಿರುವದ್ದರಿಂದ *ಅಜಗರವ್ರತದಿಂ ತಪವಂ ಮಾಡುವಂತಿದ್ದುದು. ಭೃಗುವಿನ ತಪಃಪ್ರಭಾವದಿಂದಾತಪೋವನದಲ್ಲಿ ರಾಗದ್ವೇಷಗಳಿಲ್ಲದ್ದರಿಂದ ಯಾವ ಮೃಗಪಕ್ಷಿಗಳೂ ಆ ಶರೀರವಂ ಮುಟ್ಟಲಿಲ್ಲ, ಬಳಿಕ ದಿವ್ಯವರ್ಷ ಸಹಸ್ರಾಂತದಲ್ಲಿ ಬಹಿರ್ಮುಖಚಿತ್ತನಾದ ಭೃಗುಮುನಿಯು ಗುಣಸಿಧಿಯಾದ್ದರಿಂ ಶರೀರವಂ ಧರಿಸಿರುವ ಪುಣ್ಯದಂತಿರುವ ಶುಕ್ರನಂ ಕಾಣದೆ ಅತ್ತಿತ್ತ ನೋಡುತ್ತಾ ಮೂಳೆಹಾವುಕೊಂಡಿರುವ ಆ ಶವವಂ ಕಂಡನು. ರಂಧ್ರಗಳಲ್ಲಿ ಸೇರಿಕೊಂಡಿರುವ ಗುಬ್ಬಚ್ಚಿಗಳ ಕಿಚಕಿಚ ಶಬ್ದದಿಂದಲೂ, ಕರಳುಬಾಡಿದ್ದರಿಂ ಗಿರಿಬಿಲದಂತೆ ಹಳ್ಳವಾದ ಹೊಟ್ಟೆಯಲ್ಲಿ ಕುಪ್ಪಳಿಸುತಲಿರುವ ಕಪ್ಪೆಗಳಿಂದಲೂ, ನೇತ್ರಬಿಲದಲ್ಲಿ ಹಾರಾಡುವ ಸಣ್ಣಸಣ್ಣ ಹುಳುಗಳಿಂದಿಲೂ, ಮುಗ್ಗಲು ಮೂಳೆಗಳ ಪಂಜರದಲ್ಲಿ ಧಾರಗಳಂ ಕಟ್ಟಿಕೊಂಡು ಓಡಾಡುತ್ತಿರುವ ಜಾಡಗಳಿಂದಲೂ, ಚಂದ್ರನಂತೆ ಶುಭ್ರವಾದ ತಲೆಬುರುಡೆಯಿಂದಲೂ, ಮಳೆಯ ಧಾರೆಗಳಿಂ ತೊಳೆಯಲ್ಪಟ್ಟ ನಿರ್ಮಲವಾದ ಕರಳು ಶಿಂಬಿಗಳಿಂದಲೂ, ಪಣಗಿದ ನರಗಳಿಂ ದೀರ್ಘವಾಗಿರುವ ಕಂಠದಿಂದಲೂ, ಬಿಳದಾವರೆಯ ದಂಟನಂತಿರುವ ಮೂಗಿನ ಮೂಳೆಯಿಂದಲೂ, ಭಯಂಕರವಾಗಿ ರಂಧ್ರಗಳಿಂ ಪೊರಮಡುವ ಗಾಳಿಯು ಸದ್ದುಗಳಿಂ ರೋದನದೊಡನೆ ಶರೀರವಂ ಧರಿಸಿರುವ ದಾರಿದ್ರ್ಯದಂತೆಯೂ, ದೌರ್ಭಾಗ್ಯದಂತೆಯೂ, ನೋಡಲಶಕ್ಯವಾಗಿ ತೆರೆದಕಣ್ಣುಗಳಿಂ ಹೋದ ಪ್ರಾಣಗಳಂ ಕತ್ತೆತ್ತಿಕೊಂಡು ನೋಡುವಂತೆಯೂ, ನೀಳವಾದ ತೋಳು ತೊಡೆ ಮೊಳಕಾಲುಗಳ ಮೂಳೆಗಳಿಂದ ಆಶೆಗಳ ಕೊನೆಯಂ ಹೊಂದಲೋಸುಗ ರಕ್ತಮಾಂಸಾದಿಗಳ ಭಾವವಂ ಕಳಕೊಂಡಿರುವಂತೆಯೂ, ಎದೆಯ ಗೂಡಿಯಿಂ ಹೃದಯದ ಶೂನ್ಯಭಾವವಂ ತೋರುವಂತೆಯೂ, ಕಾಣುತ್ತಿರುವ ದುಃಖವೆಂಬ ದಂತಿಗೆ ಆಲಂಬನವಾಗಿರುವ ಆ ಶವವಂ ನೋಡಿ ಮಗನೇ ಹೀಗಾಗಿರುವನೆಂದು ತೋರಿದ್ದರಿಂದ ದುಃಖದಿಂ ಪೂರ್ವೋತ್ತರ ಪರ್ಯಾಲೋಚನೆಯಿಲ್ಲದೆ ಝುಗ್ಗನೆ ಎದ್ದುಬಂದು ಆ ಶವದ ಆಕಾರರೀತಿಯಂ ಚನ್ನಾಗಿನೋಡಿ ಮಗನ ಶರೀರವೇ ಇದೆಂದು ನಿಶ್ಚೈಸಿ, ಈ ಪರಿಯಿಂದ ಅಕಾಲದಲ್ಲಿ ಕೊಂಡು ಪೋಗುವದಕ್ಕೆ ಕಾರಣವೇನೆಂದು ಕಾಲನಮೇಲೆ ಕೋಪವಂ ತಾಳಿದನು. ಯಾವನ ಶ್ವಾಸಗಳಿಂ ಗಿರಿಗಳುರುಳುವವೋ ಯಾವನ ತ್ರಿಶೂಲಜ್ವಾಲೆಗಳಿಂ ದಿಗ್ವಾಸಿತ್ರಿಗಳು ಹಿರಣ್ಮಯವಾದ ಆಭರಣಗಳಿಂ ಕೂಡಿರುವಂತೆ ಬೆಳಗುವವೋ ಯಾ

* ಹೆಬ್ಬಾವು ಬಿದ್ದಿರುವಂತೆ.

ವನ ಶರೀರದಿಂ ಪುಟ್ಟಿದ ಜ್ವಾಲೆಗಳಿಂದಾವಮೂಲವಾಗಿ ಪುಷ್ಪಿಶಿದ ಮುಳ್ಳುಮು ತ್ತುಗದಂತೆ ಗಗನಮಂಡಲವು ಶೋಭಿಸುವದೋ ಆ ಕಾಲಪುರುಷನು ಋತುಗ ಳೆಂಬ ಮುಖಗಳಿಂದಲೂ, ಮಾಸಗಳೆಂಬ ಭುಜಗಳಿಂದಲೂ, ಅಯನೆಗಳೆಂಬ ಕಾಲುಗಳಿಂದಲೂ, ಎರಡನೇ ಷಣ್ಮುಖನಂತೆ ಪ್ರಕಾಶಿಸುತ್ತಾ ಆ ಮುನಿಯ ಎದುರಿಗೆ ಬಂದು ನಿಂದು, ಪ್ರಳಯಕಾಲದಿಂ ಕ್ಷುಭಿತವಾದ ಸಮುದ್ರದಂತೆ ಕೋಪದಿಂ ಮೊರವಣಿಸುವ ಆ ಮುನಿಯಂ ಕುರಿತು ಪೇಳಿವನದೆಂತೆನೆ;—

ಎಲೈ ತಪೋನಿಧಿಯೇ, ಪರಾಪರಸ್ವರೂಪವಂ ಕಂಡು ಲೋಕಸ್ಥಿತಿಯಂ ತಿಳಿದ ಮಹಾತ್ಮರು ಕಾರಣವಿದ್ದರೂ ಕೋಪಿಸಿಕೊಳ್ಳಲಾರರು. ಹೀಗಿರುವಲ್ಲಿ ಕಾರಣವೇನೂ ಇಲ್ಲದೆ ನೀನು ಕೋಪಿಸಿಕೊಳ್ಳುವದಕ್ಕೆ ಕಾರಣವೇನು, ಬ್ರಹ್ಮಜ್ಞಾನದಿಂದ ಅಖಂಡವಾದ ಭಾವಉಳ್ಳದ್ದರಿಂ ನೀನು ಪೂಜಿಸಲ್ಪಡುವೆಯ ಲ್ಲದೆ ಶಾಪಭಯದಿಂ ಪೂಜಿಸಲ್ಪಡುವದಿಲ್ಲ. ತೋರಿದ ವಿಷಯಗಳಿಗೆ ಒಳಗಾಗದೆ ನಿರಭಿಮಾನರಾಗಿಯೆ ಪರಮಾತ್ಮನು ನಿಯಮಿಸಿದ ಮಾರ್ಗದಲ್ಲಿ ನಿಂದು ಲೋಕ ಮರ್ಯಾದೆಯಂ ರಕ್ಷಿಸುತ್ತಿರುವ ನಾವು ಯಾರಿಗೂ ಭಯಪಡಲಾರೆವು. ಪ್ರಳ ಯಕಾಲದ ಜಂಝಾಮಾರುತದ ವೇಗದಿಂ ಜ್ವಲಿಸುವ ಕಾಲಾಗ್ನಿರುದ್ರನ ಘಾಲಾಗ್ನಿಯ ವೇಗಕ್ಕೆ ಚಲಿಸದಿದ್ದ ನಮಿಗೆ ನಿಮ್ಮ ಕೋಪಶಾಪಾದಿಗಳಿಂದೇ ನಾದೀತು. ಬ್ರಹ್ಮಾಂಡಪಜ್ತಿಗಳನ್ನು ರುದ್ರಕೂಟಗಳನ್ನು ವಿಷ್ಣುಸಮೂಹಗ ಳನ್ನು ನುಂಗುವ ನಮಗೆ ಪರಮೇಶ್ವರಾಜ್ಞೆಯಿಂದಲೇ ನೀವು ಆಹಾರವಾಗು ತ್ತೀರಲ್ಲದೆ, ನಾವಾಗಿ ಸ್ವೇಚ್ಛೆಯಿಂದ ನಿಮ್ಮಂ ಭಕ್ಷಿಸುವದಿಲ್ಲ. ಅಗ್ನಿ ಯೂ ರ್ಧ್ವಮುಖವಾಗಿ ಉರಿಯುವದು, ನೀರು ಕೆಳಕ್ಕೆ ಬೀಳುವದು, ವಾಯುವತ್ತ ಲಾಗಿ ಚಲಿಸುವದು, ಭೋಜ್ಯಪದಾರ್ಥವು ಭೋಕ್ತೃವಂ ಹೊಂದುವದು ಪ್ರಪಂಚಕ್ಕೆ ವಿನಾಶಕಾಲ ಬರುವದು ಸಹ ಪರಮೇಶ್ವರಾಜ್ಞೆಯಲ್ಲದೆ ಮತ್ತೊಂದಲ್ಲ. ಪರಮಾತ್ಮನಿಗೆ ಅಭಿನ್ನನಾದ ನನ್ನ ಈ ರೂಪವು ಸ್ವಸಂಕಲ್ಪ ದಿಂ ಪುಟ್ಟಿರುವದಲ್ಲದೆ ಇದಕ್ಕೆ ಮತ್ತೊಂದು ಕಾರಣವಿಲ್ಲ. ನಿರ್ಮಲವಾದ ದೃ ಷ್ಟಿಯಿಂ ನೋಡುವಲ್ಲಿ ಕಾರಣಭಿನ್ನವಾದ ಕಾರ್ಯಗಳಿಲ್ಲದ್ದರಿಂದ ಕರ್ತೃತ್ವ ಭೋಕ್ತೃತ್ವಗಳು ಅಜ್ಞಾನಕಲ್ಪಿತವೆಂತಲೇ ತಿಳಿಯಲ್ಪಡುವವು. ವೃಕ್ಷಗಳಲ್ಲಿ ಪುಷ್ಪಗಳಂತೆ ಪ್ರಪಂಚಗಳಲ್ಲಿ ಪ್ರಾಣಿಗಳು ತಾವಾಗಿ ಹೋಗಿಬರುತ್ತಿರುವಲ್ಲಿ ಕರ್ಮವೇ ಕಾರಣವೆಂದು ಪೇಳಲ್ಪಡುವದು. ಅದು ಪುರುಷೇಚ್ಛೆಗೆ ಅಭಿನ್ನವಾ ದ್ದರಿಂ ಸ್ವಸಂಕಲ್ಪವೇ ಕಾರಣವೆನಿಸುವದು. ಜಲಬಿಂಬಿತನಾದ ಚಂದ್ರನು

ಚಲಿಸುವಲ್ಲಿ * ಕರ್ತೃತ್ವಾಕರ್ತೃತ್ವಗಳು ವಸ್ತುತಃ ಇಲ್ಲದ್ದರಿಂದ ಸುಳ್ಳೆಂತಲೂ ಕಾಣುವದ್ದರಿಂದ ಸತ್ಯವೆಂತಲೂ ಹ್ಯಾಗೆ ಹೇಳಲ್ಪಡುವವೋ ಹಾಗೆ ಪರಮಾತ್ಮನ ಸೃಷ್ಟಿಗಳಲ್ಲೂ ಕರ್ತೃತ್ವಾಕರ್ತೃತ್ವಗಳು ತೋರುತ್ತಿರುವವು. ಮಾಯಾಮಯವಾದ ಈ ಪ್ರಪಂಚದಲ್ಲಿ ದೃಷ್ಟಿದೋಷವುಳ್ಳವನು ರಜ್ಜುವಂ ಸರ್ಪವೆಂದು ತಿಳಿವಂತೆ ಮನವು ಕರ್ತೃತ್ವಾಕರ್ತೃತ್ವಕಲ್ಪನೆಯಂ ಮಾಡುವದು. ಆಪತ್ತುಗಳ ಕ್ರಮವೇ ಈಪ್ರಕಾರವಾದ್ದಾದ್ದರಿಂದ ಇಲ್ಲಿ ನೀವು ಕೋಪಗೊಳ್ಳಲಾಗದು. ಯಾವದು ಹ್ಯಾಗೆ ಇರತಕ್ಕದ್ದೋ ಅದು ಹಾಗೇ ಇರುವದಲ್ಲದೆ ಮತ್ತೊಂದುಪ್ರಕಾರವಾಗಿರಲಾರದು. ಪ್ರಾಜ್ಞರಾದವರು † ಸುಷುಪ್ತಿಸ್ಥಿತಿಯಿಂ ನಿರಭಿಮಾನರಾಗಿ, ಈಶ್ವರಾಜ್ಞೆಯಿಂದು ಪ್ರಕೃತಕಾರ್ಯವಂ ಮಾಡುತ್ತಿರುವರು. ಈ ಜ್ಞಾನದೃಷ್ಟಿಯು ಈ ಅಖಂಡಭಾವವು ಈ ಸ್ಥಿತಿಯು ಪ್ರಸಿದ್ಧವಾಗಿರುವಲ್ಲಿ, ಅಂಧನಂತೆ ನೀನು ಅಜ್ಞಾನಿಗಳ ಮಾರ್ಗವಂ ಹೊಂದಿ, ನಿನ್ನ ಮಗನಿಗೆ ಉಂಟಾದರೀತಿಯಂ ವಿಚಾರಿಸದೆ ನನ್ನಂ ಶಪಿಸಲಿಚ್ಛೈಸುತ್ತೀಯೆ ! ಸಮಸ್ತ ಪ್ರಾಣಿಗಳಿಗೂ ಸೂಕ್ಷ್ಮವೆಂತಲೂ ಸ್ಥೂಲವೆಂತಲೂ ಎರಡು ಶರೀರಗಳಿರುವವು. ‡ ಮೋಕ್ಷಾಂತವಾಗಿರತಕ್ಕ ಮನಃಪ್ರಧಾನವಾದ ಸೂಕ್ಷ್ಮಶರೀರಕ್ಕೆ ಸ್ಥೂಲಶರೀರಕ್ಕೆ ರೋಗಗಳಂತೆ ಕಾಮಕ್ರೋಧಾದಿಗಳು ವುಂಟಾಗುವವು. ಸಾರಥಿಯಿಂ ರಥವಂತೆ ಸೂಕ್ಷ್ಮಶರೀರದಿಂ ನಡೆಸಲ್ಪಡುವ ಈ ಸ್ಥೂಲಶರೀರವು ಆ ಕಾಮಕ್ರೋಧಾದಿಗಳಿಂದಲೂ ಜ್ವಲಿತವಾಗುವದು. ಆದ್ದರಿಂದ ಮನವೇ ಈ ಯರಡು ಶರೀರಗಳಲ್ಲೂ ಮುಖ್ಯವೆನಿಸುವದು. ಆಡುವ ಮಗುವು ಮಣ್ಣಿ ಬೊಂಬೆಯುಂನಭಿಮಾನಿಸುವಂತೆ ಮನವು ಈ ಸ್ಥೂಲದೇಹವಂ ಹಿಡಿದು ಇದರಿಂದುಂಟಾದ ದುಃಖಗಳನ್ನು ಅನುಭವಿಸುತ್ತಿರುವದು. ಅನೇಕಮುಖವಾದ ಘಾತಪಾತಗಳಿಗೆ ಒಳಗಾದ ಈ ದೇಹವ ಅಭಿಮಾನದಿಂದುಂಟಾದ ಸಂಕಲ್ಪಕಲ್ಪನೆಗಳಿಂ ಬದ್ಧವಾದ ಮನವು ಈ ಸಂಕಲ್ಪತ್ಯಾಗದಿಂ ಮುಕ್ತವಾಗುವದು. ಇದು ತಲೆ, ಇದು ಮುಖ, ಇವು ಕೈಕಾಲುಗಳೆಂದು ಈ ಮನವು ಭಾವಿಸಿದಂತೆ ದೇಹಾಂತರಗಳೂ ಕೂಡ ಉಂಟಾಗುವವು. ಈ ಮನವೇ ಚಿದ್ರೂಪದಿಂ ಜೀವವೆಂತಲೂ, ಕಲ್ಪನೆಗಳಿಂ ಮನವೆಂತಲೂ, ನಿಶ್ಚಯವೃತ್ತಿಯಿಂ ಬುದ್ಧಿ

* ಕರ್ತೃತ್ವ=ಕೆಲಸಮಾಡುವವನಭಾವ.
ಅಕರ್ತೃತ್ವ=ಕರ್ತೃತ್ವವಿರುದ್ಧಧರ್ಮ=ತೂಷ್ಣೀಂಭಾವ.

† ಗಾಢನಿದ್ರೆಯಲ್ಲಿರುವಾಗ್ಯೆ.

‡ ಮೋಕ್ಷವಾಗುವಪರ್ಯಂತವೂ ಬದಲಾಯಿಸಿ ಒಂದೇ ಆಗಿರತಕ್ಕ.

ಯುಂತಲೂ, ಸ್ಮರಿಸುವದರಿಂ ಚಿತ್ತವೆಂತಲೂ, ಅಭಿಮಾನಿಸುವದರಿಂದಹಂಕಾರವೆಂತಲೂ ಪೇಳಲ್ಪಡುವದು. ದೇಹವಾಸನೆಯಿಂದನೇಕ ಶರೀರಗಳಂ ಕಲ್ಪಿಸಿಕೊಂಡು ಆ ಸುಖದುಃಖಗಳನ್ನನುಭವಿಸುವ ಈ ಮನವು ವಿಚಾರದಿಂದುಂಟಾದ ಬ್ರಹ್ಮವಾಸನೆಯಿಂ ಪರಮಾನಂದವನ್ನನುಭವಿಸುವದು. ನಿನ್ನ ಮಗನ ಮನವು ಮನೋರಥಮಾರ್ಗದಿಂ ಸ್ವರ್ಗವನ್ನೇರಿ ಅಪ್ಸರಸ್ಸಂಭೋಗದಿಂ ಕ್ಷೀಣಪುಣ್ಯನಾಗಿ ಮೇದಿನಿಯಲ್ಲಿ ಬಿದ್ದು ದಶಾರ್ಣದಲ್ಲಿ ಬ್ರಾಹ್ಮಣನಾಗಿಯೂ, ಪೌಂಡ್ರ ಸೌವೀರ ಮದ್ರದೇಶದಲ್ಲಿ ಧೊರೆಯಾಗಿಯೂ, ಬಹುಕಾಲವಿದ್ದು ಈಗ ಸಮಂಗಾತೀರದಲ್ಲಿ ವಾಸುದೇವನೆಂಬ ನಾಮದಿಂ ತಪಸ್ವಿಯಾಗಿರುವನು. ಈ ಮಧ್ಯದೋಳ್ * ಹರಿಣ ಕಿರಾತ ಕುಕ್ಕುಟಾದ್ಯನೇಕ ಜನ್ಮಂಗಳಂಪಡದಿರುವದು ಇದಂ ನೀನು ಜ್ಞಾನದೃಷ್ಟಿಯಿಂ ನೋಡುವನಾಗು. ಎಂದು ಕಾಲನ ವಾಕ್ಯವಂಕೇಳಿದ ಭೃಗುಮುನಿಯು ಧ್ಯಾನದೃಷ್ಟಿಯಿಂ ಬುದ್ಧಿದರ್ಪಣದಲ್ಲಿ ಪ್ರತಿಫಲಿಸಿರುವ ಶುಕ್ರನಿಗೆ ಬಂದ ಅವಸ್ಥೆಗಳನ್ನು ಪುನಃ ಪೂರ್ವಶರೀರವಂ ಪಡೆಯುವದನ್ನು ತಿಳಿದು ಆಶ್ಚರ್ಯಪಡುತ್ತಾ ಎಲೈ ಜಗದೀಶ್ವರನೇ ! ಅಖಂಡಭಾವದಿಂ ನಿನ್ನಂ ಧ್ಯಾನಿಸುವರಿಗೆ ಕಾಲತ್ರಯಜ್ಞಾನ ಉಂಟಾಗುವಲ್ಲಿ ಕಾಲತ್ರಯಾತ್ಮಕನಾದ ನಿನಗೆ ನಿನ್ನ ಜ್ಞಾನವಿರುವದರಲ್ಲಿ ಆಶ್ಚರ್ಯವೇನು,- ಇಂಥಾ ಜ್ಞಾನವು ನಿನ್ನಂಥಾ ಮಹಾತ್ಮರಿಗಿರುವದಲ್ಲದೆ, ಖಂಡಜ್ಞಾನದಿಂದಹಂಕಾರಪಡುವ ಹುಡುಗ ಬುದ್ಧಿಯುಳ್ಳ ನಮಗೆ ಹ್ಯಾಗೆ ಸಂಭವಿಸೀತು. ನಾನಾವಿಕಾರವಾದ ಈ ಪ್ರಪಂಚದ ಸ್ಥಿತಿಯು ಅಸತ್ಯವಾದರೂ ಸತ್ಯದಂತೆ ಕಾಣುತ್ತಾ ಧೀರರಿಗೂಕೂಡ ಭ್ರಮೆಯನ್ನುಂಟುಮಾಡುವದು. ಈ ಇಂದ್ರಜಾಲವಂಮಾಡುವ ಮನವು ನಿನಗೆ ಅಧೀನವಾಗಿರುವದಲ್ಲದೆ ಸಂಪದ್ವಿಪತ್ತುಗಳಲ್ಲಿ ವಿಚಾರವಿಲ್ಲದ್ದರಿಂ ಸುಖದುಃಖ ವಶರಾಗುವ ನಮಗೆ ವಶವಾಗಲಾರದು. ಅಯುಕ್ತನಲ್ಲಿ ಕೋಪವನ್ನು ಯುಕ್ತನಲ್ಲಿ ಪ್ರಸಾದವನ್ನು ಮಾಡತಕ್ಕದ್ದೆಂಬ ಲೋಕರೂಢಿಯಿಂದಲೂ, ನಿಮ್ಮ ಅನುಗ್ರಹದಿಂ ನನ್ನ ಮಗನು ಚಿರಜೀವಿಯಾಗಿರತಕ್ಕವನೆಂದು ತಿಳಿದಿದ್ದರಿಂದಲೂ, ಅಕಾಲದಲ್ಲಿ ಅವನಿಗೆ ಮೃತ್ಯು ಬಂತೆಂದು ನಿನ್ನಮೇಲೆ ಕೋಪಿಸಿಕೊಂಡೆನು. ಗಿರಿಯಂ ತಿವಿಯುವ ಆನೆಗೆ ದಂತ ಭಂಗವಾದಂತೆ ಅಖಂಡನಾದ ನಿನ್ನಂ ಶಪಿಸುವ ನಮಗೆ ತಪೋಭಂಗವಲ್ಲದೆ ಅದರಿಂ ನಿನಗೇನೂ ಆಗಲಾರದು. ಸೂರ್ಯನ ಮೇಲೆ ಉಗಳಿದ ಉಗುಳುತನ್ನ ಮೇಲೆ ಬೀಳುವಂತೆ ನಿನ್ನ ಮೇಲೆ ಮಾಡಿದ

---

* ಹರಿಣ=ಜಿಂಕೆ ; ಕಿರಾತ=ಬೇಡರವನು
ಕುಕ್ಕುಟ=ಕೋಳಿಯು.

ಕೋಪವು ಚಿಂತಾಶೋಕ ಪಶ್ಚಾತ್ತಾಪರೂಪದಿಂ ನನ್ನನ್ನೇ ಸಂತಾಪಪಡಿಸುತ್ತಿರುವದು. ಲೋಕಸಿದ್ಧವಾದ ಕಾರ್ಯಾಕಾರ್ಯ ನಿಯಮವು ಜಗದ್ಭ್ರಮೆಯುಳ್ಳವರಿಗೆ ಯುಕ್ತವಾಗಿ ತೋರುವದಲ್ಲದೆ ಜ್ಞಾನಿಗಳಿಗೆ ಸಮ್ಮತವಾಗಲಾರದು. ನಿನ್ನ ಅನುಗ್ರಹದಿಂ ಸಮಂಗಾತೀರದಲ್ಲಿರುವ ಮಗನಂಕಂಡ ನನಗೆ ಮನಶ್ಶರೀರವೇ ಮುಖ್ಯವೆಂಬ ವಚನವು ಈಗ ಗೊತ್ತಾದುದು, ಎಂದು ಭೃಗುಮುನಿಯು ಹೇಳುವಲ್ಲಿ ಸಂತುಷ್ಟನಾದ ಕಾಲನಿಂತೆಂದನು. ಎಲೈ ಮುನಿಯೇ! ಮನನೇ ಮುಖ್ಯವೆಂಬ ನಿನ್ನ ವಚನನೇ ಮುಖ್ಯವಾದದ್ದು, ಸಂಕಲ್ಪಮಾತ್ರದಿಂದೀಮನವು ಕುಂಬಾರನು ಗಡಿಗೆಯಂ ಮಾಡುವಂತೆ ಈ ಸ್ಥೂಲಶರೀರವಂ ಮಾಡಿಕೊಳ್ಳುವದು. ಗಂಧರ್ವ ನಗರಕ್ಕೆ ಸಮಾನವಾದ ಸ್ವಪ್ನ ಸಂಭ್ರಮ ಸಂಕಲ್ಪಮಿಥ್ಯಾಜ್ಞಾನಾದಿ ಶಕ್ತಿಗಳಿರುವದ್ದರಿಂದ ಇರುವದಂ ಮರೆಮಾಡಿ ಇಲ್ಲದ್ದನ್ನುಂಟುಮಾಡುವ ಈ ಮನವು ಜಗವೆಲ್ಲವನ್ನುಂಟುಮಾಡಿರುವದು. ಇದರ ಭಾವನೆಯಿದ್ದಂತೆ ಸಕಲವಾದ ನಡತೆಗಳು ಉಂಟಾಗಿರುವವು. ಇದರ ಕಲ್ಪನೆಯಿಂದೇಡಸೇ ಜಾದ್ರುನಂತೆ ಪರಮಾತ್ಮನಲ್ಲಿ ಭೇದಬುದ್ಧಿಯುಂಟಾಗಿರುವದು. ದೇಹಾಭಿಮಾನದಿಂ ಕೃಶನೆಂತಲೂ, ಸ್ಥೂಲನೆಂತಲೂ ನಾನಾಪ್ರಕಾರವಾಗುವ ಮನನವಂಬಿಟ್ಟು ಮನವು ಬ್ರಹ್ಮಾಭಿಮುಖವಾಗಲು ಜಗದ್ಭ್ರಮೆಯು ಶಾಂತವಾಗುವದು. ಇದರ ಭಾವನೆ ಇದ್ದಂತೆಯೇ ಸಮಸ್ತಸುಖದುಃಖಗಳೂ ಉಂಟಾಗುವದ್ದರಿಂದ ಎಲ್ಲಾ ಕಡೆಯಲ್ಲೂ ಬ್ರಹ್ಮಭಾವನೆಯಿಂದ ಇದರ ಮನನವಂ ತಪ್ಪಿಸತಕ್ಕದ್ದು. ಭಾವನಾಬಲದಿಂ ಬ್ರಹ್ಮವಾಸನೆಯುಂಟಾಗಲು ಜಗವೆಲ್ಲವೂ ಬ್ರಹ್ಮಸ್ವರೂಪವಾಗಿ ಕಾಣುತ್ತಾ ಅಖಂಡಾನಂದಕ್ಕೆ ಸಾಧನವಾಗುವದು. ದೇಹಭಾವನೆಯಿಂ ಜಡವಾಸನೆಯಿರಲು ಸಮಸ್ತವು ಬಾಧಕವಾಗುವದು. ಬ್ರಹ್ಮವು ಸರ್ವವ್ಯಾಪಕವಾದ್ದರಿಂದಲೂ, * ಸ್ವೇತರವಸ್ತುಗಳಂ ವ್ಯಾಪಿಸತಕ್ಕದ್ದಲ್ಲವಾದ್ದರಿಂದಲೂ, ಕಾರ್ಯಕಾರಣರೂಪದಿಂ ತೋರುವ ಸರ್ವಪದಾರ್ಥಗಳೂ ಬ್ರಹ್ಮವೆಂತಲೇ ನಿಶ್ಚಯಿಸುವನಾಗು. ಆದ್ಯಂತಗಳಿಲ್ಲದಜಗವು ಮಧ್ಯದಲ್ಲಿರುವದಕ್ಕೆ ನಿಮಿತ್ತವಿಲ್ಲದ್ದರಿಂದ ಜಗದ್ರೂಪದಿಂ ಬ್ರಹ್ಮವೇ ಪ್ರಕಾಶಿಸುತ್ತಿರುವದೆಂದು ನಿಶ್ಚಯಿಸುವನಾಗು. ಸರ್ವಶಕ್ತಿಯಾದ ಪರಮಾತ್ಮನ ಮನನಶಕ್ತಿಯೇ ಮನೋರೂಪದಿಂದಿರುವದ್ದರಿಂದ ಮನಸ್ಸಿನ ಕಲ್ಪನೆಗಳೆಲ್ಲವೂ ಸಮುದ್ರದಿಂ ತೆರೆಗಳಂತೆ ಪರಮಾತ್ಮನಿಂದಲೇ ಉಂಟಾಗುವವು. ಆದ್ದರಿಂದ ಕಲ್ಪಿತವಾದ ಪದಾರ್ಥಗಳೆಲ್ಲವೂ ಬ್ರಹ್ಮವೆಂತಲೇ ಭಾವಿಸತಕ್ಕದ್ದು. ಪ್ರಚಂಡವಾದ ಬಿಸಲಿನಲ್ಲಿ ವಿಚಿ

---

* ಸ್ವೇತರ=ತನಗಿಂತಲೂ ಬೇರೆಯಾದ.

ತ್ರವಾದ ವರ್ಣವು ಕಾಣುವಂತೆಯೂ, ಏಕರೂಪವಾದ ಮೇಘದಲ್ಲಿ ವಿಚಿತ್ರವಾದ ಇಂದ್ರಚಾಪ ಕಾಣುವಂತೆಯೂ, ಪರಮಾತ್ಮನಲ್ಲಿ ವಿಚಿತ್ರವಾದ ಶಕ್ತಿಯು ಕಾಣುತ್ತಿರುವದು. ಚೇತನವಾದ ಜಾಡನ ಹುಳುವಿನಿಂದ ಜಡವಾದ ಸೂತ್ರದಂತೆ ಚಿನ್ಮಯವಾದ ಬ್ರಹ್ಮದಿಂ ಜಡವಾದ ಜಗ ಉಂಟಾಗುವದು. ತೆರಳೇಹುಳುವು ಗೂಡಂಕಟ್ಟಿಕೊಳ್ಳುವಂತೆ ಜಡವಾದ ಮನಸ್ಸಿಗೆ ಚಿದ್ರೂಪನಾದ ಆತ್ಮನು ಶಕ್ತಿಯನ್ನುಂಟುಮಾಡುವನು. ಮತ್ತು ಸ್ವೇಚ್ಛೆಯಿಂದಲೇ ಮರವೆಯುಂಭಾವಿಸಿ ಬಂಧವನ್ನುಂಟುಮಾಡಿಕೊಳ್ಳುವನು. ವಿಚಾರದಿಂದೀ ಆತ್ಮನೇ ಸ್ವರೂಪವಂ ತಿಳಿದು ಕಟ್ಟುವ ಸರಪಣಿಯುಂಕೀಳುವ ಮದ್ದಾನೆಯಂತೆ ಬಂಧದಿಂ ಮುಕ್ತನಾಗುವನು. ವೃಕ್ಷವು ಋತುಧರ್ಮವನ್ನನುಸರಿಸುವಂತೆ ಈ ಆತ್ಮನು ಉದಯಿಸುವ ತನ್ನ ಶಕ್ತಿಯನ್ನನುಸರಿಸುತ್ತಾ ಬದ್ಧನಂತೆಯೂ, ಮುಕ್ತನಂತೆಯೂ, ತೋರುತ್ತಿರುವನು. ಸುಳ್ಳಿನಿಂದ ದಿಟವೂ, ಅನಿತ್ಯದಿಂ ನಿತ್ಯವು, ಅಜ್ಞಾನದಿಂಜ್ಞಾನವು, ಜಗದಿಂ ಬ್ರಹ್ಮವು ಮರೆಯಾಗುತ್ತಿರುವಲ್ಲಿ ಮಾಯೆಯ ಪ್ರಭಾವವನ್ನೆಂತುಪೇಳಬಹುದು. ಮನಸ್ಸಿಗೆ ಶಕ್ತಿಯುಂಟಾಗಲು ವಾಯುವಿನಿಂ ಸಮುದ್ರದಲ್ಲಿ ತೆರೆಗಳಂತೆ ಪರಮಾತ್ಮನಲ್ಲೇ ಬ್ರಹ್ಮ ವಿಷ್ಣು ರುದ್ರಾದಿದೇವತೆಗಳು, ದೈತ್ಯ ದಾನವ ರಾಕ್ಷಸರು, ಮನುಷ್ಯ ಭುಜಂಗ ಪತಂಗ ಕೀಟಕಾದಿಗಳು, ವೃಕ್ಷಲತಾದಿಗಳು, ಇನ್ನು ನಾನಾಪ್ರಕಾರವಾದ ಪ್ರಾಣಿಗಳು, ಗಿರಿ ನದಿ ಸಮುದ್ರಾದಿಗಳು ಸಹಾ ಹುಟ್ಟುವವು. ಹೀಗೆ ಸರ್ವವೂ ಬ್ರಹ್ಮಾಭಿನ್ನವಾಗಿದ್ದಾಗ್ಯೂ ಪ್ರಾಣಿಗಳು ತಾವು ಜಡಾತ್ಮರೆಂಬ ಕಲ್ಪನೆಯಿಂದಧೋಗತಿಯಂ ಪಡೆವರು. ಈ ಜಡಾತ್ಮಭಾವನೆಯೇ ಸಮಸ್ತ ಕರ್ಮಗಳಿಗೂ ಬೀಜವಾಗುವದು. ಆದಾಗ್ಯೂ ಬ್ರಹ್ಮವು ಅಖಂಡವಾದ್ದರಿಂದ ಅಕರ್ಮವೆನಿಸುವದು. ಈ ಪ್ರಾಣಿಗಳಲ್ಲಿ ಕೆಲವರು ಜ್ಞಾನಾತಿಶಯದಿಂ ಹರಿಹರಾದಿಗಳಂತಿರುವರು. ಕೆಲವರು ಅಜ್ಞಾನದ ತಾರತಮ್ಯದಿಂ ದೇವ ದೈತ್ಯ ಮನುಷ್ಯ * ಭುಜಗ ಕ್ರಿಮಿ ಕೀಟ ತೃಣ ಲತಾದಿಭಾವವಂ ಹೊಂದುವರು. ಇವರಲ್ಲಿ ಯೋಗಭೂಮಿಕೆಗಳಂ ಹೊಂದಿರುವರು, ಕ್ರಮವಾಗಿ ಬ್ರಹ್ಮಸಾಯುಜ್ಯವಂ ಪಡೆವರು. ಆ ಮಾರ್ಗವಂ ಕಾಣದವರು ಕರ್ಮವಿಶೇಷಗಳಿಂ ಸ್ವರ್ಗನರಕಗಳಲ್ಲಿ ಅಲೆಯುತ್ತಿರುವರು. ಇಲ್ಲಿ ಸಜ್ಜನಸಂಗ ಸಚ್ಛಾಸ್ತ್ರಶ್ರವಣಾದಿಗಳಿಂ ತತ್ವಜ್ಞರಾದವರು ಜೀವನ್ಮುಕ್ತರಾಗಿ ಲೋಕವಂ

---

* ಭುಜಗ=ಸರ್ಪವು; ಕ್ರಿಮಿ=ಹುಳಗಳು.
ಕೀಟ=ಕೀಡೆ ಮೊದಲಾದ ಕ್ಷುದ್ರಕ್ರಿಮಿಗಳು.
ತೃಣ=ಹುಲ್ಲು; ಲತಾ=ಬಳ್ಳಿ.

ಪವಿತ್ರವಂ ಮಾಡುತ ಸಂಚರಿಸುತ್ತಿರುವರು. ಹೀಗೆ ಜನಗಳು ಕೃತಾರ್ಥರಾಗ ಲೋಸುಗವೇ ಅನೇಕ ಶಾಸ್ತ್ರಗಳು ಪ್ರಸಿದ್ಧವಾಗಿರುವವು. ಸಜ್ಜನಸಂಗಸತ್ಕರ್ಮಾದಿಗಳಿಂ ಪಾಪಕ್ಷಯವಾದವರಿಗೆ ಶಾಸ್ತ್ರವಿಚಾರದಿಂ ಬುದ್ಧಿಯು ನಿರ್ಮಲವಾಗುವದು. ಬಳಿಕ ಜ್ಞಾನೋದಯವಾಗಲು ಸೂರ್ಯೋದಯದಿಂ ತಿಮಿರದಂತೆ ಮನಸ್ಸಿನ ಮೋಹವಣಗುವದು. ಮೋಹವಣಗದ ಮನವು ಮಂಜಿನಂತೆಯೂ, ಪಿಶಾಚದಂತೆಯೂ, ಜನಗಳ ಮೋಹಾರ್ಥವಾಗಿಯೇ ಭ್ರಮಿಸುತ್ತಿರುವದು. ಸಮಸ್ತ ಪ್ರಾಣಿಗಳಿಗೂ ಸುಖದುಃಖ ಸಾಧನವಾದ ಮನವೇ ದೇಹವೆನಿಸುವದು. ಪಾಂಚಭೌತಿಕವಾದ ಈ ಸ್ಥೂಲದೇಹವು ಮನದ ವಿಕಲ್ಪದಿಂ ದೇಹವೆನಿಸಿಕೊಳ್ಳುವವಲ್ಲದೆ ಪರಮಾರ್ಥವಾಗಿ ದೇಹವೆನಿಸಿಕೊಳ್ಳುವದಿಲ್ಲ. ಅಜ್ಞಾನಿಗಳು ಇದನ್ನೇ ದೇಹವೆಂದು ಪಿಡಿದು ಅದರಿಂ ಬಹುವಿಧ ದುಃಖಗಳನ್ನನುಭವಿಸುವರು. ನಿನ್ನ ಮಗನು ಮನಶ್ಶರೀರದಿಂಮಾಡಿದ ಕರ್ಮದಫಲವನ್ನನುಭವಿಸುತ್ತಿರುವನಲ್ಲದೆ, ಇಲ್ಲಿ ನಾವು ಏನೂ ಅಪರಾಧವಂ ಮಾಡಿದವರಲ್ಲ, ಮನದಿಂಮಾಡಿದ ಕರ್ಮವಂ ಹಿಂತಿರುಗಿಸುವದಕ್ಕೆ ಮನವೇ ಸಮರ್ಥವಾಗಬೇಕಲ್ಲದೆ ಇನ್ನುಯಾರೂ ಸಮರ್ಥರಾಗಲಾರರು. ಆದ್ದರಿಂದ ನಿನ್ನ ಮಗನಂ ಹಿಂತಿರುಗಿಸುವದಕ್ಕೆ ಅವನನ್ನೇ ಬೋಧಿಸಬೇಕಾಗಿರುವದು. ಅದು ಕಾರಣ ನಿನ್ನ ಮಗನಬಳಿಗೆ ನಾವು ಹೋಗೋಣವೆಂದು ಕಾಲನು ಪೇಳಲು, ಪರಮೇಶ್ವರನ ಆಜ್ಞಾರೂಪವಾದ *ನಿಯತಿಯ ಸ್ಥಿತಿಯು ಅತಿ ವಿಚಿತ್ರವಾಗಿರುವದೆಂದು ಪೇಳುತ್ತಾ ಭೃಗುಮುನಿಯು ತನ್ನ ಆಶ್ರಮದಿಂ ಪೊರಮಟ್ಟನು. ಜಗತ್ಸಂಚಾರಾರ್ಥವಾಗಿ ಏಕಕಾಲದಲ್ಲಿ ಪೊರಮಟ್ಟ ಚಂದ್ರ ಸೂರ್ಯರಂತಿರುವ ಅವರೀರ್ವರು ವಿಹರಿಸುತ್ತಿರುವ ಸಿದ್ಧ ಚಾರಣಾದಿಗಳಿಂದಲೂ, ಕಾಮಕ್ರೋಧವಡಗಿದ ಮೃಗಪಕ್ಷಿಗಳಿಂದಲೂ, ನಿತ್ಯ ಫಲಪುಷ್ಪಗಳಾದ ವೃಕ್ಷಗಳಿಂದಲೂ, ಪರಾಪರಸ್ವರೂಪಜ್ಞಾನದಿಂ ಜಗತ್ರಯವನ್ನು ಆಟವೆಂದು ನೋಡುತ್ತಿರುವ ಮಹರ್ಷಿಗಳಿಂದಲೂ, ವಿಚಿತ್ರದರ್ಶನವಾದ ಮಂದರಗಿರಿಯ ಸೊಬಗಂ ನೋಡುತ್ತಾ ಆ ಬೆಟ್ಟದಿಂದಿಳಿದು ಸಮಂಗಾನದಿಯ ತೀರಕ್ಕೆ ಬಂದು ಅಲ್ಲಿ ಬಂದೆಡೆಯೊಳ್ ಛಾಯಾಮಾತ್ರ ಸಹಾಯನಾಗಿ ಕುಳಿತು ಸಂಸಾರ ಸಮುದ್ರದ ಸುಳಿಯಿಂ ತಪ್ಪಿಸಿಕೊಂಡ ಆಯಾಸದಿಂ ಸ್ತಬ್ಧನಾಗಿರುವಂತೆಯೂ, ಮನಸ್ಸಿನ ಚಾಂಚಲ್ಯವಿಲ್ಲದ್ದರಿಂ ಪ್ರಕಾಶಿಸಿದ ಜ್ಞಾನಾನಂದವಿಶೇಷದಿಂ ವಿವಶನಾಗಿರುವಂತೆಯೂ, ಇಂದ್ರಿಯ ಚಪಲತೆಯಿಂ ಬಹುಕಾಲ ಶ್ರಮಪಟ್ಟದ್ದರಿಂದ ವಿಶ್ರಮಿಸಿಕೊಳ್ಳುವವನಂತೆಯೂ, ಅಖಂಡಸ್ವರೂಪ

* ನಿಯತಿ=ನಿಯತು, ಕಟ್ಟು. (Natural law.)

ಜ್ಞಾನದಿಂ ಕಾರ್ಯಾಕಾರ್ಯ ಮೊದಲಾದ್ದು ಒಂದೂ ತೋರದೆ ನಿಂದಿರುವನಂತೆಯೂ, ತಟಸ್ಥನಾದ ಪರಮಾತ್ಮನ ತಾದಾತ್ಮ್ಯದಿಂ ಜಗತ್ತಿನ ವ್ಯಾಪಾರಕ್ಕೆ ಸಾಕ್ಷಿಭಾವವಂ ವಹಿಸಿರುವನಂತೆಯೂ, ಮುಗುಳುನಗೆಯಿಂದ ಲೋಕಸ್ಥಿತಿಯಂ ನೋಡಿ ನಗುವನಂತೆಯೂ, ಧ್ಯಾನವಿಶೇಷದಿಂದುಂಟಾದ ಪರಮಾನಂದ ಸಮುದ್ರದಲ್ಲಿ ಮುಳುಗಿದ್ದರಿಂ ಜಡನಾಗಿರುವನಂತೆಯೂ, ಅಚಂಚಲವಾಗಿ ನಿರ್ವಿಕಲ್ಪ ಸಮಾಧಿಯಲ್ಲಿರುವ ಓರ್ವ ಮುನಿಯಂ ಕಂಡರು. ಆಗ ಇವನೇ ನಿನ್ನ ಮಗನೆಂದು ಕಾಲನು ಪೇಳಲು, ಎಲೈ ಮುನಿಯೇ ! ಯೋಗನಿದ್ರೆಯಿಂದೆಚ್ಚರವಾಗಲೆಂದು ಭೃಗುಮುನಿಯು ಪೇಳಿದನು. ಅದಂ ಕೇಳಿದ ಆ ಮುನಿಯು ಮೇಘದ ಗರ್ಜನೆಯಂ ಕೇಳಿದ ನವಿಲಿನಂತೆ ಕಣ್ಣುಗಳಂ ಬಿಟ್ಟು ನರನಾರಾಯಣರಂತಿರುವ ಅವರಂ ನೋಡಿ ಝುಗ್ಗನೆ ಎದ್ದು ಅವರಿಗೆ ಸಾಷ್ಟಾಂಗ ಪ್ರಣಾಮವಂ ಮಾಡಿ ತಾನು ಮಾಡುತ್ತಿದ್ದ ಜಪಕ್ಕೆ ಸಮಾಪ್ತಿಯಂ ಮಾಡಿ, ಎಲೈ ಮಹಾತ್ಮರುಗಳಿರಾ ! ನೀವು ಶಾಸ್ತ್ರಾಭ್ಯಾಸ ತಪಸ್ಸಮಾಧಿಗಳಿಂದಲೂ, ಪಡೆಯಲಶಕ್ಯವಾದ ಆನಂದವಂ ದರ್ಶನಮಾತ್ರದಿಂದುಂಟುಮಾಡುತ್ತಾ ವರವಂ ಕೊಡಲೋಸುಗ ಬಂದ ಹರಿಹರರಂತೆ ಪ್ರಕಾಶಿಸುತ್ತೀರಿ, ಅಜ್ಞಾನಿಯಾದ ನನ್ನನ್ನು ನಿಜನಾಮಧೇಯ ಬೋಧನೆಯಿಂದನುಗ್ರಹಿಸಬೇಕೆಂದು ಬೆಸಗೊಳ್ಳಲು, ಆಗ ಭೃಗುಮುನಿಯು ಎಲೈ ಬಾಲಕನೇ ! ನೀನು ತಪೋಬಲದಿಂ ಜ್ಞಾನದೃಷ್ಟಿಯಂ ಸಂಪಾದಿಸಿರುವೆಯಾದ್ದರಿಂದ ನಿನ್ನ ಪೂರ್ವ ವೃತ್ತಾಂತವಂ ಸ್ಮರಿಸುವನಾಗೆಂದು ನುಡಿದನು. ಆಗ ಆ ಮುನಿಯು ಅಚಂಚಲದೃಷ್ಟಿಯಾಗಿ ಧ್ಯಾನದೃಷ್ಟಿಯಿಂದ ತನ್ನ ಪೂರ್ವಜನ್ಮ ವೃತ್ತಾಂತಗಳನೊಂದು ಮುಹೂರ್ತ ನೋಡಿ ಆಶ್ಚರ್ಯದಿಂ ವಿಕಸಿತವಾದ ಮುಖಕಮಲವುಳ್ಳವನಾಗಿ ಪೇಳಿದನದೆಂತೆನೆ;—ಎಲೈತಂದೆಯೇ! ಜಗಜ್ಜನನಿಯಾದ ಪರಮಾತ್ಮನ ಮಾಯೆಯು ಸರ್ವೋತ್ತಮವಾಗಿರುವಲ್ಲಿ ಯಾರು ಯಾವದಂ ಮಾಡಲಾರರು ? ಎಲೈ ತಂದೆಯೇ ! ನಿಮ್ಮ ಅನುಗ್ರಹಕ್ಕೆ ಪಾತ್ರನಾದ ನಾನು ಕೂಡ ಅಜ್ಞಾನಿಯಂತೆ ನಾನಾಪ್ರಕಾರವಾದ ದುಃಖಗಳನ್ನನುಭವಿಸಿದೆನು. ಇಷ್ಟಾನಿಷ್ಟವೃತ್ತಿಗಳಲ್ಲಿ ನಾನು ನೋಡದಿದ್ದದ್ದು ಮಾಡದಿದ್ದದ್ದು ಅನುಭವಿಸದಿದ್ದದ್ದು ಕೂಡಾ ಯಾವದೂ ಇಲ್ಲವೆಂದು ತಿಳಿಯುತ್ತೇನೆ. ಅದರಿಂ ನಾನು ಪುನಃ ಚಪಲಪಡುವದಕ್ಕೆ ಕಾರಣವಿಲ್ಲದಂತಾಯಿತು. ಅದರಿಂದುಂಟಾದ ವೈರಸ್ಯದಿಂದಲೇ ಸ್ವರೂಪವಿಚಾರಮಾತ್ರದಲ್ಲಿ ನೆಲಸಿದ್ದ ನಾನು ತಮ್ಮ ಅನುಗ್ರಹದಿಂ ತಿಳಿಯತಕ್ಕದ್ದಂ ತಿಳಿದು ನೋಡತಕ್ಕದ್ದಂ ನೋಡಿ ಅದರಿಂ ಭ್ರಮೆಯೆಲ್ಲವು ನಷ್ಟವಾದ್ದರಿಂದ ಬಹುಕಾಲ ವಿಶ್ರಮಿಸಿಕೊಂಡು ಶಾಂತ

ನಾಗಿರುವೆನು. ಪ್ರಕೃತೋಚಿತವಾದ ವ್ಯವಹಾರವು ಬಿಡತಕ್ಕದ್ದಲ್ಲವಾದ್ದರಿಂದ ತಮ್ಮ ಆಜ್ಞಾನುಸಾರಿಯಾಗಿ ನಡೆವೆನು. ನನ್ನ ಬುದ್ಧಿಯು ಸಜ್ಜನಸಮ್ಮತವಾದ ಮಾರ್ಗವಂ ಬಿಡದಂತೆ ತಾವು ಅನುಗ್ರಹಿಸಬೇಕೆಂದು ಬೆಸಗೊಳ್ಳುತ್ತಾ ಅವರೊಡನೆ ಪೊರಮಟ್ಟು ಸಿದ್ಧಮಾರ್ಗವನ್ನಾಶ್ರಯಿಸಿ ನಿಮಿಷಮಾತ್ರದಿಂ ಮಂದರಗಿರಿಗೆ ಬಂದನು. ಆ ಗಿರಿಯ ಮೇಲ್ಗಡೆಯೊಳ್ ಜೀರ್ಣವಾದ ಪರ್ಣಗಳಲ್ಲಿ ಬಿದ್ದಿರುವ ತನ್ನ ಶರೀರವಂ ನೋಡಿ ಪೇಳಿದನದೆಂತೆನೆ;—ಎಲೈ ತಂದೆಯೇ ! ಯಾವದು ಕರ್ಪೂರಾಗರು ಚಂದನಗಳಿಂ ಲಿಪ್ತವಾಗಿ * ಮೇರೂಪವನದಲ್ಲಿ ಮಂದಾರಪುಷ್ಪಶಯನದಲ್ಲಿ ಪವಳಿಸುತ್ತಾ ಅನೇಕ ಪ್ರಕಾರವಾಗಿ ನಿಮ್ಮಿಂದ ಪಾಲಿತವಾದುದೋ ಮತ್ತು ಯಾವದು ದೇವಸ್ತ್ರೀ ಸಮೂಹದಿಂ ಲಾಲಿಸಲ್ಪಟ್ಟತೋ ಯಾವದು ಚಂದನೋದ್ಯಾನದಲ್ಲಿ ಬಹುವಿಧ ಲೀಲೆಗಳಿಂ ಮೆರೆದುದೋ ಆ ಈ ನನ್ನ ತನುವು ಒಣಕಲು ಮೂಳೆಯಾಗಿರುವದು. ಎಲೈ ದೇಹವೇ ! ಆಯಾಯ ಕಾಲಗಳಲ್ಲಿ ಅಂತಂಥಾ ಭೋಗಗಳನ್ನನುಭವಿಸಿದ ನೀನು ಈಗ ಹೀಗೆ ಹೊರಳುತಲಿದ್ದೀಯೆ! ಕರಗಿದ ಚಿನ್ನದಂತಿರುವ ಕಾಂತಿಯಿಂ ಕಾಮಿನಿಯರಿಗೆ ಮನೋಹರವಾಗಿ ನನಿಗೂ ಅತಿ ಸಂತೋಷವನ್ನುಂಟುಮಾಡುತ್ತಿದ್ದ ನೀನು ಈಗ ನನ್ನನ್ನೇ ಭಯಪಡಿಸುತ್ತೀಯೆ ! ಪೂರ್ವದಲ್ಲಿ ಮುಕ್ತಾಮಾಲೆಗಳಿಂದಲಂಕೃತವಾಗಿದ್ದ ಎದೆಯು ಈಗ ಇರುವೆಗಳಿಗೆ ಗೂಡಾಗಿರುವದು ! ಪೂರ್ವದಲ್ಲಿ ಮೃಗ ಪಕ್ಷಿಗಳಿಂ ಲಾಲಿಸುತ್ತಿದ್ದ ಈ ಶರೀರವು ತೆರೆದ ಬಾಯಿನಿಂದ ವುಗಳಿಗೆ ಭಯಂಕರವಾಗಿರುವದು ! ಇದರ ಹೊಟ್ಟೆಯು ಬಿಲವು ಸೂರ್ಯಕಿರಣದಿಂ ವಿವೇಕಿಯ ಹೃದಯದಂತೆ ಪ್ರಕಾಶಿಸುತ್ತಿಹುದು. ಈಗ ಅಂಗತಂಗನಾಗಿ ಬಿದ್ದಿದ್ದಾಗ್ಯೂ ಈ ಅಂಗವು ಜನಗಳಿಗೆ ವೈರಾಗ್ಯ ವಿವೇಕವನ್ನುಂಟುಮಾಡುವದು. ಶಬ್ದಸ್ಪರ್ಶಾದಿ ವಿಷಯಸಂಬಂಧವಿಲ್ಲದ್ದರಿಂ ಸಮಾಧಿಯಲ್ಲಿರುವಂತೆ ನಿಶ್ಚಲವಾಗಿರುವದು. ವಿನಾಶಕರವಾದ ನಟನವುಳ್ಳ ಚಿತ್ತಮರ್ಕಟದ ಕೋಟಲೆ ಇಲ್ಲದ್ದರಿಂ ಕುತೂಹಲ ಕಲ್ಪನಾದಿಗಳಿಲ್ಲದೆ ನಿರ್ಭಯವಾಗಿ ಸುಖಶಯನವಂ ಮಾಡುತ್ತಿರುವದು. ಇದಂ ನೋಡುವದ್ದರಿಂದ ಚಿತ್ತವಿಲ್ಲದವನ ಸೌಖ್ಯವು ಯಾರಿಗೂ ಇಲ್ಲವೆಂದು ನಿಶ್ಚಯಿಸುತ್ತೇನೆ. ದೈವಯೋಗದಿಂದಲೇ ಯಾವದುಃಖವು ಇಲ್ಲದ ಈ ನನ್ನ ಶರೀರವು ಗೋಚರವಾಗಿರುವದು. ಎಂದು ಶುಕ್ರನು ನುಡಿಯುತ್ತಿದ್ದನೆಂದು ಪೇಳುತ್ತಿರುವಲ್ಲಿ, ಎಲೈ ಗುರುವೇ! ಶುಕ್ರನು ಎಷ್ಟೋ ಶರೀರಗಳಂ ಪಡದಿರುವಲ್ಲಿ ಭೃಗುಮುನಿಯಿಂ ಪುಟ್ಟಿದ ಆ

* ಮೇರುಪರ್ವತದ ಉದ್ಯಾನವನದಲ್ಲಿ.

ಶರೀರದಲ್ಲಿ ಈ ಪರಿಯಿಂದಭಿಮಾನಪಡುವದಕ್ಕೆ ಕಾರಣವೇನೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು. ಎಲೈ *ಕಾಕುತ್ಸ್ಥನೇ, ಗ್ರಹಾಧಿಪತಿಯಾಗುವ ಮಗನಾಗಬೇಕೆಂದು ಪೂರ್ವಕಲ್ಪದಲ್ಲಿ ಭೃಗುಮುನಿ ಮಾಡಿದ ಸತ್ಕರ್ಮವು ಪ್ರಳಯದಲ್ಲಿ ಪರಮಾತ್ಮನಂ ಹೊಂದಿಕೊಂಡಿದ್ದು ಪ್ರಥಮ ಸೃಷ್ಟಿಯಲ್ಲೇ ಭೂತಾಕಾಶವಂ ಸೇರಿ ವಾಯುವಿನೊಡನೆ ಪ್ರಾಣಾಪಾನಮಾರ್ಗದಿಂ ಭೃಗುವಿನ ಶರೀರವಂ ಸೇರಿ ಅಲ್ಲಿ ವೀರ್ಯವಾಗಿ ಪರಿಣಮಿಸಿ ಆ ಶರೀರರೂಪದಿಂದುದಯಿಸಿದ್ದರಿಂದಲೂ, ಆ ಶರೀರದಿಂದನುಭವಿಸತಕ್ಕ ಪೂರ್ವಕರ್ಮವಿರುವದ್ದರಿಂದಲೂ, ಆ ಶರೀರದಮೇಲೆ ಅಷ್ಟು ಅಭಿಮಾನ ಉಂಟಾದುದು. ಜ್ಞಾನಿಗೂ ಅಜ್ಞಾನಿಗೂ ವಾಸನೆಯಲ್ಲಿ ಭೇದವಲ್ಲದೆ ಶರೀರಾಭಿಮಾನದಲ್ಲಿ ಭೇದವೇನೂ ಇಲ್ಲ. ದೇಹವಿರುವವರಿಗೆ ಈ ಅಭಿಮಾನವು ಯಾರಿಗೂ ತಪ್ಪಲಾರದಾದ್ದರಿಂದ ಸಮಸ್ತ ಪ್ರಾಣಿಗಳಿಗೂ ಇದು ಸ್ವಾಭಾವಿಕವೆಂದು ತಿಳಿಯುವನಾಗು, ಮಹಾಜ್ಞಾನಿಗಳೂ ಕೂಡ ಲೋಕವ್ಯವಹಾರದಲ್ಲಿ ಸರ್ವಸಾಧಾರಣರಾಗಿಯೇ ಇರುವರು. ಇದರಲ್ಲಿ ಜ್ಞಾನೇಂದ್ರಿಯಗಳಂ ನಿಗ್ರಹಿಸಿಕೊಂಡು ಕರ್ಮೇಂದ್ರಿಯಗಳಂ ಲೋಕಸಾಧಾರಣವಾಗಿ ನಡೆಯುವರು ಕೃತಾರ್ಥರಾಗುವರು. ಯಾರು ಕರ್ಮೇಂದ್ರಿಯಗಳಂ ತಡೆಕೊಂಡು ಜ್ಞಾನೇಂದ್ರಿಯಗಳಂ ನಿಗ್ರಹಿಸಲಾರದೆ ಮನಸ್ಸಿನಿಂದ ವಿಷಯಗಳಂ ಧ್ಯಾನಿಸುತ್ತಿರುವರೋ ಅವರಿಗೆ ಲೋಕದಲ್ಲಿ ಪ್ರತಿಷ್ಠೆಯಲ್ಲದೆ ಮತ್ತೇನೂ ಫಲವಾಗಲಾರದು. ಸುಖದುಃಖ ದೃಷ್ಟಿಗಳಲ್ಲೂ ಬಂಧಮೋಕ್ಷದೃಷ್ಟಿಗಳಲ್ಲೂ ಜ್ಞಾನೇಂದ್ರಿಯಗಳೇ ಮುಖ್ಯವಾದ್ದರಿಂದ ಅಂತಃಕರಣದಲ್ಲಿ ಕಾಮಕ್ರೋಧಗಳನ್ನು ಜ್ಞಾನೇಂದ್ರಿಯ ವ್ಯಾಪಾರಗಳನ್ನು ನಿಗ್ರಹಿಸಿಕೊಂಡು ಲೋಕವ್ಯವಹಾರದಲ್ಲಿ ಸರ್ವಸಾಧಾರಣಮಾರ್ಗದಿಂದಿರುವನಾಗು. ಚಿದ್ರೂಪನಾದ್ದರಿಂ ವ್ಯಾಪಕನಾದ ನೀನು ಸರ್ವ ಭಾವಗಳನ್ನು ಆಕ್ರಮಿಸುವೆಯಲ್ಲದೆ ಜಡವಾದ ಭಾವಗಳು ಚಿನ್ಮಾತ್ರನಾದ ನಿನ್ನನ್ನಾಕ್ರಮಿಸಲಾರವು. ಆದ್ದರಿಂದ ಆಧಿವ್ಯಾಧಿಮಯವಾದ ಈ ಸಂಸಾರಮಾರ್ಗದಲ್ಲಿ ಬೀಳದೆ ಬ್ರಹ್ಮವಾಸನಯಿಂ ಶುದ್ಧಾಂತಃಕರಣನಾಗಿ ಕರ್ತೃ ಕರಣ ಕಾರ್ಯಾದಿ ತ್ರಿಪುಟಿಗಳೆಲ್ಲವನ್ನು ಬ್ರಹ್ಮವನ್ನಾಗಿಯೇ ಭಾವಿಸುತ್ತಾ ಪ್ರಕೃತೋಚಿತವಾದ ಸರ್ವಕರ್ಮಗಳನ್ನೂ ಮಾಡುವನಾಗು. ಇಂತು ತನ್ನ ಶರೀರವಂ ನೋಡಿ ನುಡಿಯುತ್ತಿದ್ದ ಶುಕ್ರನಂ ಕುರಿತು ಎಲೈ ಭಾರ್ಗವನೇ ಭೃಗುವಿನಿಂ ಪುಟ್ಟಿದ ಈ ಶರೀರದಿಂ ನೀನು ಕಲ್ಪಾಂತವಾಗಿ ಗ್ರಹಾಧಿಪತ್ಯವಂ ಮಾಡುವಂತೆಯೂ, ಬಳಿಕ ಮುಕ್ತನಾಗು

*ಕಕುತ್ಸ್ಥರಾಜನ ವಂಶದಲ್ಲಿ ಜನಿಸಿದ ಶ್ರೀರಾಮನೇ.

ಮಾತೆಯೂ, ಪರಮೇಶ್ವರಾಜ್ಞೆ ಇರುವದ್ದರಿಂದ ಸಮುಂಗಾತೀರದ ಶರೀರವಂ ಬಿಟ್ಟು ಈ ಶರೀರವಂ ಗ್ರಹಿಸುವನಾಗು. ನಿಮ್ಮಿಬ್ಬರಿಗೂ ಶುಭವಾಗಲಿ, ನಾವು ಪೋಗಬರುವನೆಂದು ಕಾಲನು ಪೇಳಿ ಅಂತರ್ಧಾನವಾಗಲು, ಶುಕ್ರನು ಸಮುಂಗಾತೀರದ ಶರೀರವಂಬಿಟ್ಟು ತನ್ನ ಪೂರ್ವಶರೀರವಂ ಪ್ರವೇಶಿಸಿದನು. ಅಸ್ಥಿಮಾತ್ರಾವಶೇಷವಾಗಿದ್ದ ಆ ಶರೀರವು ಮಂತ್ರಪೂತವಾದ ಭೃಗುವಿನ ಕಮಂಡಲೋದಕಪ್ರೋಕ್ಷಣದಿಂ ವರ್ಷಾಕಾಲದಿಂ ನದಿಯಂತೆ ವೃದ್ಧಿಯಂಪಡೆದುದು. ಬಳಿಕ ಪರಸ್ಪರಸಮಾಗಮದಿಂ ಸಂತುಷ್ಟರಾದ ಆ ಭೃಗುಶುಕ್ರರು ಸಮುಂಗಾತೀರದ ಶರೀರಕ್ಕೆ ಸಂಸ್ಕಾರವಂಮಾಡಿ ವಿಯೋಗದುಃಖನಾಶದಿಂ ಮೇಘಮಂಡಲವನ್ನತಿಕ್ರಮಿಸಿದ ಸೂರ್ಯಚಂದ್ರರಂತೆ ಪ್ರಕಾಶಿಸುತ್ತಾ ಸುಖದಿಂದಿದ್ದರು. ಎಂದು ವಸಿಷ್ಠನು ಪೇಳುತ್ತಿದ್ದನೆಂಬಲ್ಲಿಗೆ ಸ್ಥಿತಿಪ್ರಕರಣದೋಳ್ ಭಾಗವತ ಕೃಷ್ಣವಿರಚಿತವಾದ ಜ್ಞಾನಯೋಗತರಂಗಿಣಿಯಲ್ಲಿ ಭಾರ್ಗವಭ್ರಾಂತಿ ನಿವೃತ್ತಿ ನಿರೂಪಣವೆಂಬ ಮೊದಲನೇ ತರಂಗಕ್ಕೆ ಮಂಗಳಮಹಾ. ಶ್ರೀ ಶ್ರೀ.



ಶ್ರೀ ಸಾಂಬಸದಾಶಿವಾಯನಮಃ.
ಶ್ರೀ ಗಣೇಶಶಾರದಾಗುರುಭ್ಯೋನಮಃ.

ಆಗ ಶ್ರೀರಾಮಚಂದ್ರನು ಎಲೈ ಗುರುವೇ ಶುಕ್ರಾಚಾರ್ಯನ ಕೋರಿಕೆ ಯಥಾರ್ಥವಾದಂತೆ ಇನ್ನೊಬ್ಬರಿಗೆ ಯಾಕೆ ಆಗಬಾರದೆಂದು ಕೇಳಲು ವಸಿಷ್ಠ ನಿಂತೆಂದನು. ಎಲೈ ಶ್ರೀರಾಮಭದ್ರನೇ ಈ ಶುಕ್ರನು ಜನ್ಮಾಂತರವಾಸನಾ ಕಳಂಕವಿಲ್ಲದೆ ಕಲ್ಪಾದಿಯಲ್ಲಿ ಭೃಗುವಿನ ಸತ್ಕರ್ಮದಿಂದುದಿತವಾದ ಪರಮಾತ್ಮನ ಸಂಕಲ್ಪದಿಂ ಪುಟ್ಟಿದವನಾದ್ದರಿಂದ ಅವನ ಪ್ರಜ್ಞೆಯು ಪರಿಶುದ್ಧವಾಗಿರುವದು. ಹೀಗೆ ಯಾರ ಬುದ್ಧಿಯು ಶುದ್ಧವಾಗಿ ಪುಟ್ಟಿರುವದೋ ಯಾರಿಗೆ ತಪೋವಿಚಾರಾದಿಗಳಿಂ ಶುದ್ಧವಾಗುವದೋ ಅವರ ಮನವು ನಿರ್ವಾತದೀಪದಂತೆ ಅಚಂಚಲವಾದ್ದರಿಂದ ಅವರ ಕೋರಿಕೆಯಲ್ಲವು ಹೀಗೆ ಸತ್ಯವಾಗುವದು. ಆದ್ದರಿಂದಲೇ ಪರಮಾತ್ಮಸಂಕಲ್ಪದಿಂದುದಿತನಾದ ಚತುರ್ಮುಖನ ಕೋರಿಕೆಯು ಜಗದ್ರೂಪದಿಂ ಸರ್ವಲೋಕಾನುಭವಸಿದ್ಧವಾಗಿರುವದು. ಇತರರ ಮನವು ಶುದ್ಧಸತ್ವೋದ್ರೇಕದಿಂದುಂಟಾದ ಜ್ಞಾನಾತಿಶಯದಿಂ ಪ್ರಕಾಶಿಸುವ ಬ್ರಹ್ಮವಾಸನೆಯಿಲ್ಲದೇ ಜಗದ್ವಾಸನೆಯಿಂ ಭ್ರಮಿಸುವದಾದ್ದರಿಂದ, ಅವರ ಕೋರಿಕೆಯು ಹೀಗೆ ಫಲಿಸಲಾರದು. ಬಾಮನೇಳಿ ಫಲಿಶಿವಾಗ್ಯೂ ಸ್ವಾನುಭವಮಾತ್ರ ಗೋಚರ

ವಾಗುವದು. ಹೀಗೆ ಚಿತ್ತಭೇದದಿಂ ಪ್ರತಿಪ್ರಾಣಿಗಳಲ್ಲೂ ಪ್ರತ್ಯೇಕವಾಗಿ ಪ್ರಪಂಚಗಳುಂಟಾಗುವವು. ಕೋರಿಕೆ ತೋರಿಕೆಗಳು ಮನಸ್ಸಿನದಾದ್ದರಿಂದ ಜಲವು ಸುಳಿಯಾಗುವಂತೆ ಮನವೇ ಪ್ರಪಂಚವಾಗುವದು. ಜಡವಾದ ಮನಸ್ಸಿಗೆ ಸ್ವತಃ ಪರಿಣಮಿಸುವ ಯೋಗ್ಯತೆ ಇಲ್ಲದ್ದರಿಂದ ವ್ಯಾಪಕಭಾವದಿಂದಿದಕ್ಕೆ ಈ ಯೋಗ್ಯತೆಯನ್ನುಂಟುಮಾಡಿದ ಚಿಚ್ಛಕ್ತಿಯೇ ಜಲಚಂದ್ರ ಚಾಂಚಲ್ಯದಂತೆ ಪ್ರಪಂಚರೂಪದಿಂ ಕಾಣುತ್ತಿರುವದೆಂದು ಪೇಳುವರು. *ಶಕ್ತಿಶಕ್ತಿಮಂತರುಗಳು ಪ್ರಭಾಸೂರ್ಯರಂತೆ ಭಿನ್ನರಲ್ಲವಾದ್ದರಿಂದ ಬ್ರಹ್ಮವೇ ಈ ರೂಪದಿಂ ಪ್ರಕಾಶಿಸುವದೆಂದು ನಿಶ್ಚಯಿಸತಕ್ಕದು. ಹೀಗಿರುವಲ್ಲಿ ಈ ಪ್ರಪಂಚಗಳೆಲ್ಲವು ಸತ್ಯವೋ ಅಸತ್ಯವೋ ನೀನೇ ಆಲೋಚಿಸುವನಾಗು. ಬಾಲಪಿಶಾಚದಂತೆ ಸಂಕಲ್ಪಮಾತ್ರ ಸ್ವರೂಪವಾದ ಈ ಪ್ರಪಂಚಗಳು ಅಜ್ಞಾನಿಗಳಿಗೆ ಗೋಚರವಾಗುವದಾದ್ದರಿಂದ ಜ್ಞಾನಿಗಳು ಇವುಗಳಂ ಸುಳ್ಳೆಂದು ಪೇಳುವರು. ಈ ಪ್ರಪಂಚವೆಲ್ಲವು ಭ್ರಾಂತಿಮಾತ್ರವಾದ್ದರಿಂದ ಇದು ಪುಟ್ಟುವದು ಇರುವದು ನಾಶವಾಗುವದು ಸಹಾ ಸುಳ್ಳೆನಿಸಿಕೊಳ್ಳುವವು. ಈ ಪ್ರಪಂಚಗಳು ಚಿತ್ತಭೇದದಿಂ ಬ್ಯಾರೆಬ್ಯಾರೆಯಾಗಿ ಪುಟ್ಟಿದಾಗ್ಯೂ ಸ್ವಪ್ನಸಂಕಲ್ಪ ನಗರವ್ಯವಹಾರಗಳಂತೆ ಏಕರೀತಿಯಾದ್ದರಿಂದ ಅಭಿನ್ನವಾಗಿ ಕಾಣುತ್ತಿರುವವು. ಇದರ ತತ್ವವಂ ತಿಳಿದಂಥಾವರು ಇದು ಪ್ರಥಮಸೃಷ್ಟಿಯಂತಲೂ ಮಧ್ಯಸೃಷ್ಟಿಯಾತಲೂ ಪೇಳುವರು. ಚಿತ್ತವೆಂಬದಂತಿಗೆ ಆಧಾರವಾದ ಈ ಜಗವು ಕಥೆಯಲ್ಲಿ ಪೇಳಲ್ಪಡುವ ನಗರಿಯಂತೆಯೂ ದೀರ್ಘಸ್ವಪ್ನದಂತೆಯೂ ಕಾಣುತ್ತಾ ವಿಚಾರದಲ್ಲಿ ಇಲ್ಲವಂತೆ ಪೋಗುವದು. ಚಿತ್ತದಸತ್ತೆಯೇ ಜಗತ್ತಿನಸತ್ತೆಯು, ಜಗತ್ತಿನಸತ್ತೆಯೇ ಚಿತ್ತದಸತ್ತೆಯು. ಸರ್ವಾನುಗತವಾದ ಚಿತ್ತಿನಸತ್ತೆಯಂ ವಿಚಾರಿಸುವಲ್ಲಿ ಚಿತ್ತಜಗತ್ತುಗಳಲ್ಲಿ ಒಂದುಹೋದರೆ ಎರಡೂ ಹೋಗುವವು. ಚಿತ್ತಿನ ಸತ್ತೆಯೇ ಜಗತ್ಸತ್ತೆಯೆಂಬ ಪಕ್ಷದಲ್ಲಿ ಜಗತ್ತು ಹೋಗಲು ಪೇಳುವರಿಲ್ಲದ್ದರಿಂದ ಚಿತ್ತೆಂಬ ವ್ಯವಹಾರವು ಹೋಗಿ ಚಿತ್ಪದಕ್ಕೆ ಅರ್ಥವಾದ ಸ್ವರೂಪವೊಂದೇ ನಿಲ್ಲುವದು. ಏಕಾಗ್ರಬುದ್ಧಿಯಿಂ ಸ್ವಸ್ವರೂಪವಾಗಿರುವ ಪರಮಾತ್ಮಸ್ವರೂಪವಂ ಚಿಂತಿಸುವದ್ದರಿಂದ ಚಿತ್ತವು ಶುದ್ಧವಾಗಿರುವಲ್ಲಿ ಭೋಜ್ಯಭೋಜಕವಾದ ಪ್ರಾರಬ್ಧಕರ್ಮವಿಶೇಷದಿಂ ಚಿತ್ತವು ಚಲಿಸಲು ಆ ಚಿತ್ತಕ್ಕೆ ತೋರಿದ್ದೆಲ್ಲವು ಸತ್ಯವಾಗುವದು. ಸತ್ಸಹವಾಸಾದಿಗಳಿಲ್ಲದ್ದರಿಂ ಮಲಿನವಾಗಿರುವ ಚಿತ್ತ

*ಉಷ್ಣ ಮತ್ತು ಬೆಂಕಿ ಇವುಗಳು ಶಕ್ತಿ ಶಕ್ತಿಮತ್ತುಗಳು. ಆದರೆ ಉಷ್ಣಕ್ಕಿಂತ ಬೇರೆಯಾದ ಬೆಂಕಿಯು ಇರುವದಿಲ್ಲ. ಅಂದರೆ ಉಷ್ಣವೇ ಬೆಂಕಿಯುಂದಾಕೆಯುವು

ದಲ್ಲಿ ಮಲಿನವಾದ ವಸ್ತ್ರದೋಳ್ ರಂಗಿನಂತೆ ಏಕಾಗ್ರತೆಯು ಸಂಭವಿಸದಿರಲು ಅತಿಚಂಚಲವಾದ ಆ ಚಿತ್ತಕ್ಕೆ ತೋರಿದ್ದು ದರಿದ್ರ ಮನೋರಥದಂತೆ ತೋರಿಕೆಯಲ್ಲೇ ತೀರಿಹೋಗುವದು. ಚಿತ್ತಚಾಂಚಲ್ಯವು ಸ್ವಲ್ಪ ಕಡಿಮೆಯಾಗಿದ್ದಲ್ಲಿ ಸ್ವಪ್ನಪದಾರ್ಥದಂತೆ ತೋರಿದ್ದು ತತ್ಕಾಲಾನುಭವಯೋಗ್ಯವಾಗುವದು. ಹ್ಯಾಗೆ ಹ್ಯಾಗೆ ಚಿತ್ತದ ಚಾಂಚಲ್ಯವು ತಪ್ಪುವದೋ ಹಾಗೆಹಾಗೆ ಚಿತ್ತಕ್ಕೆ ಏಕಾಗ್ರತೆಯಾಗುವದು. ಶುಕ್ರನು ಶುದ್ಧಚಿತ್ತನಾದ್ದರಿಂದ ಅವನ ಕೋರಿಕೆಯಲ್ಲಿ ದೇಶಕಾಲಕ್ರಿಯಾಕರ್ಮಗಳು ಸೂರ್ಯಾದ್ಯಸ್ತಮಯೋದಯಾದಿಗಳೂ ಕೂಡ ಶಾಸ್ತ್ರವಿಚಾರಾದಿಗಳಂ ಶುಕ್ರನ ಮನದೊಳದ್ದಂತೆಯೇ ಆಗುತ್ತಿದ್ದವು. ಹೀಗೆ ಚಿತ್ತಭೇದದಿಂದನೇಕ ಪ್ರಪಂಚಗಳುಂಟಾಗುವಲ್ಲಿ ಶುದ್ಧಚಿತ್ತದಿಂದುಂಟಾದ ಪ್ರಪಂಚಗಳು ಕಾದಕಬ್ಬಿಣಗಳಂತೆಯು ನಿರ್ಮಲಜಲಗಳಂತೆಯು ಸೇರುವವು. ವಿವೇಕೋದಯ ಮೊದಲಾಗಿ ನಿಶ್ಶೇಷವಾಗಿ ವಾಸನಾಕ್ಷಯವಾಗುವವರಿಗೂ ಚಿತ್ತಶುದ್ಧಿಯೆನಿಸುವದು. ಇದರಲ್ಲಿ ಸಮಾನಹೃದಯರ ಹೃದಯಗಳು ಸೇರುವಂತೆ ಅವರ ಕೋರಿಕೆಗಳು ತೋರಿಕೆಗಳು ಏಕರೀತಿಯಾಗಿ ಸೇರುವವು. ಪ್ರತಿಜೀವದಲ್ಲೂ ಪುಟ್ಟಿದ ಪ್ರಪಂಚಗಳೆಂಬ ವೃಕ್ಷಗಳಂ ಬ್ರಹ್ಮವು ಅರಣ್ಯವೆನಿಸುವದು. ಇವುಗಳಲ್ಲಿ ಯಾವದು ಯಾರಿಗೆ ಹ್ಯಾಗೆ ತೋರುವದೋ ಅದನ್ನವನು ಹಾಗೆ ನೋಡುವನು. ಈರೀತಿಯಿಂ ಮನಸ್ಸುಗಳಿಗೂ ಅವುಗಳಿಂದ ಜೀವಗಳಿಗೂ ಭೇದವು ಕಾಣುತ್ತಿರುವದು. ಇದರಿಂದ * ವ್ಯಷ್ಟಿಸಮಷ್ಟಿಭೇದವು ದೇಹವಸತ್ತೆಯುಕೂಡ ರೂಢವಾಗಿರುವದು. † ಈ ದೇಹದಲ್ಲಿ ಅಹಂಭಾವನೇ ಸ್ವರೂಪ ವಿಸ್ಮೃತಿಯೆನಿಸುವದು. ಸಕಲ ಸಂಸಾರ ದುಃಖ ಮೂಲವಾದ ಈ ಅವಿದ್ಯೆಯು ಚಿನ್ನದಲ್ಲಿ ಕಟಕಭಾವದಂತೆ ಆತ್ಮನಲ್ಲಿ ಉಂಟಾಗಿರುವದು. ಈ ಪ್ರಪಂಚಗಳ ಸೇರಿಕೆಯಲ್ಲಿ ಶುದ್ಧವಾದ ಚಿತ್ತವು ಪ್ರತಿಬಿಂಬದಂತೆ ಇತರ ಪ್ರಪಂಚವಂ ಪಿಡಿವದು. ವಾಯುವಿನಂತೆ ಅದಂ ತಾನು ಪ್ರವೇಶಿಸಿ ಸ್ವವಶವಂ ಮಾಡಿಕೊಳ್ಳುವದು. ಒಂದೊಂದೆಡೆಯೋಳ್ ವೇಷಧಾರಿಗೆ ಆವೇಶಬಂದಂತೆ ಪರಪ್ರಪಂಚಜ್ಞಾನವು ಸಂಭವಿಸುವದು. ಹೀಗೆ ಮನಸ್ಸಿನ ಕೋರಿಕೆಯೇ ಪ್ರಪಂಚವಾಗುವದಾದ್ದರಿಂದ, ಪ್ರಪಂಚದ ಉದಯ ಸ್ಥಿತಿ ಲಯ ರೂಪವಾದ ಜಾಗ್ರತ್ಸ್ವಪ್ನ ಸುಷುಪ್ತಿಗಳಿಗೆ ದೇಹವು ಕಾರಣವಾಗಲಾರದು. ದೇಹವೇ

*ವೃಕ್ಷಗಳೆಂಬುವದು "ವ್ಯಷ್ಟಿ"ಭಾವ. ವನವೆಂಬುವದು ಸಮಷ್ಟಿಭಾವವು. (ವ್ಯಷ್ಟಿಭಾವ=Individual aspect.)

† ದೇಹವನ್ನು "ನಾನು" ಎಂದು ಭಾವಿಸುವದೇ ದೇಹಾಂಭಾವವೆನಿಸುವದು.

ಕಾರಣವಾಗುವದಾದಲ್ಲಿ ಸ್ವಪ್ನದಲ್ಲಿ ಜಾಗ್ರತ್ತು ಸಂಭವಿಸಲಾರದು. ಜಾಗ್ರತ್ತಿನಲ್ಲಿ ಸ್ವಪ್ನವು ಸಂಭವಿಸಲಾರದು. ಮತ್ತು ದೇಹವಿರುವಲ್ಲಿ ಜಾಗ್ರತ್ಸ್ವಪ್ನ ಸುಷುಪ್ತಿ ಸಮಾಧಿಗಳಲ್ಲೇ ಜೀವನಿರಬೇಕಾದ್ದರಿಂದ ಜೀವನ್ಮುಕ್ತತ್ವವು ಎಂದಿಗೂ ಸಂಭವಿಸಲಾರದು. ತತ್ವಜ್ಞಾನದಲ್ಲಿ ಜಲದೋಳ್ ತರಂಗಭಾವವಂತೆ ಆತ್ಮ ನಲ್ಲಿ ದೇಹಭಾವವಿಲ್ಲದ್ದರಿಂದಲೂ, ಜ್ಞಾನಿಗೂ ಅಜ್ಞಾನಿಗೆ ಸಹ ಈ ಅವಸ್ಥೆಗಳು ಏಕರೀತಿಯಾಗಿ ಇರುವದ್ದರಿಂದಲೂ, ಇವುಗಳು ಮನೋಧೀನವಾಗಿ ನಡೆಯು ವದ್ದರಿಂದಲೂ, ಮೃತ್ಯುವಿನಂತೆ ದೇಹಧರ್ಮವಲ್ಲದ್ದರಿಂದಲೂ, ಕಾರಣವಿರುವಲ್ಲಿ ಕಾರ್ಯಕ್ಕೆ ಆತ್ಯಂತಿಕ ನಾಶವಿಲ್ಲದ್ದರಿಂದಲೂ, ಆತ್ಯಂತಿಕವಾಗಿ ನಿದ್ರೆಯುಂಬಿಟ್ಟ ಪುರುಷನು ಸಿದ್ಧವಾಗಿರುವದ್ದರಿಂದಲೂ, ಈ ಅವಸ್ಥೆಗಳು ಮನಸ್ಸಂಬಾಧಿಗಳೆಂ ತಲೇ ತಿಳಿಯುವನಾಗು. ಹೃದಯದಲ್ಲಿ ಸುಷುಪ್ತಿಯುಂತಲೂ, ಕಂಠದಲ್ಲಿ ಸ್ವಪ್ನ ವೆಂತಲೂ, ನೇತ್ರದಲ್ಲಿ ಜಾಗರವೆಂತಲೂ, ಬ್ರಹ್ಮರಂಧ್ರದಲ್ಲಿ ಸಮಾಧಿಯಂತಲೂ ಪೇಳುವ ಪಂಡಿತರಿಗೆ ಲಕ್ಷ್ಯಾಭ್ಯಾಸಸ್ಥಾನಗಳಲ್ಲಿ ಬಾಹ್ಯ ವಿಷಯೋದ್ಬೋಧಕ ವಾದ ಸ್ಥಾನಗಳಂ ತಪ್ಪಿಸಿ ಶೂನ್ಯಮಾರ್ಗದಲ್ಲಿ ಮನವಂ ನಿಲ್ಲಿಸಬೇಕೆಂಬ ತಾತ್ಪ ರ್ಯವೆಂದು ಸಿಕ್ಷಯಿಸುವನಾಗು.

ದೇಹವೇ ಭ್ರಾಂತಿಕಲ್ಪಿತವಾದ್ದರಿಂದ ಅದಕ್ಕೆ ಒಳಪಟ್ಟ ಈ ಅವಸ್ಥಾಪ್ರ ಪಂಚವು ಸುಳ್ಳೆಂಬುದಾಗಿ ತಾತ್ಪರ್ಯವೆಂದು ಕೆಲವರು ಪೇಳುವರು. ಜಾಗ್ರದಾ ದ್ಯವಸ್ಥೆಗಳು ಜ್ಞಾನಾಜ್ಞಾನ ರೂಪಗಳಾದ್ದರಿಂದ ಜಡವಾದ ದೇಹವು ಇವುಗಳಿಗೆ ಕಾರಣವಾಗಲಾರದು. ಈ ಜ್ಞಾನಾಜ್ಞಾನಗಳಿಗೆ ಆಶ್ರಯವೆಂತಲೂ, ಕಾರಣವೆಂ ತಲೂ, ಪ್ರಸಿದ್ಧವಾದ ಅಂತಃಕರಣವಿರುವರಿಗೆ ಯಾರಿಗೂ ಈ ಸೃಷ್ಟಿಕ್ರಮತ ಪ್ಪದು; ಚಿತ್ತು ಸರ್ವವ್ಯಾಪಕವಾದ್ದರಿಂದ ಒಬ್ಬನ ಸೃಷ್ಟಿಯಲ್ಲಿ ಮತ್ತೊ ಬ್ಬನ ಸೃಷ್ಟಿಯು ಒಬ್ಬ ಮಾಡಿದ ಪೈರಿನಲ್ಲಿ ಮತ್ತೊಬ್ಬನ ಪೈರಿನಂತೆ ಸೇರು ವದು. ಪ್ರತಿ ಸೃಷ್ಟಿಯಲ್ಲೂ ಅನ್ಯಸೃಷ್ಟಿಗಳು ಪ್ರಕಾರಾಂತರವಾಗಿ ಸೇರು ವವು. ಹೀಗೆ ಕದಳೀಸ್ತಂಭದಲ್ಲಿ ದಳಗಳಂತೆ ಅಂತಸ್ಸೃಷ್ಟಿಗಳು ಅನೇಕವಾಗಿ ರುವವು. ದಳಗಳಿಗೆ ವೃಕ್ಷದಂತೆಯೂ, ವೃಕ್ಷಗಳಿಗೆ ವನದಂತೆಯೂ ಬ್ರಹ್ಮವು ಏಕರೀತಿಯಿಂ ವ್ಯಾಪಕವಾಗಿರುವದು. ಪತ್ರಶತಗಳಿದ್ದಾಗ್ಯೂ ಕದಳಿಗೆ ಹ್ಯಾಗೆ ಭೇದವಿಲ್ಲವೋ ಹಾಗೆ ಸರ್ಗಶತಗಳಿದ್ದಾಗ್ಯೂ ಬ್ರಹ್ಮಕ್ಕೆ ಭೇದವಿಲ್ಲ. ಬೀಜವು ವೃಕ್ಷವಾಗಿ ಪುನಃ ಬೀಜವಾಗುವಂತೆ ಬ್ರಹ್ಮವೇ ಮನವಾಗಿ ಪುನಃ ಬ್ರಹ್ಮವಾ ಗುವದು. ರಸಕಾರಣವಾದ ಬೀಜವು ಫಲವಾಗುವಂತೆ ಬ್ರಹ್ಮಕಾರಣವಾದ ಜೀವವು ಪ್ರಪಂಚವಾಗುವದು. ಬೀಜಕಾರಣವಾದ ರಸಕ್ಕೆ ಕಾರಣವೇನೋ

ಬಂತೆ ಜೀವಕಾರಣವಾದ ಬ್ರಹ್ಮಕ್ಕೆ ಕಾರಣವೇನೆಂಬುವದು ಅಸಂಗತವಾಗುವದು. ಕಾರ್ಯಕರಣಗಳಿಗೆ ಕಾರಣವಾದ್ದರಿಂದಾದಿಕಾರಣವಾದ್ದು, ಬ್ರಹ್ಮವೆನ್ನುವವಲ್ಲಿ ಅದಕ್ಕೆ ಕಾರಣವೇನೆನ್ನುವದ್ದರಿಂದ ಅವ್ಯವಸ್ಥೆ ಸಂಭವಿಸುವದಾದ ಕಾರಣ ನಿಸ್ಸಾರವಾದ ಇಂಥಾ ವಿಚಾರಗಳಂ ಮಾಡಲಾಗದು. ಬೀಜವು ಸ್ವರೂಪವಂ ಬಿಟ್ಟು ವೃಕ್ಷರೂಪವಾಗುವದು. ಬ್ರಹ್ಮವಾದರೋ ಸ್ವರೂಪವಂ ಬಿಡದೆ ಪ್ರಪಂಚರೂಪವಾಗುವದು. ಯಾವ ದೃಷ್ಟಾಂತವಂ ಪೇಳಿದಾಗ್ಯೂ ಹೀಗೆ ವೈಷಮ್ಯವು ಸಂಭವಿಸುವದ್ದರಿಂದ ಬ್ರಹ್ಮವ ಸಮಾನನೆನಿಸುವದು. ನಿಮಿತ್ತವಾಗಿಯೂ, ಉಪಾದಾನವಾಗಿಯೂ, ಸ್ವರೂಪವಂ ಬಿಡದೆ ಕಾರ್ಯರೂಪವಾಗುವದಾಗಿಯೂ, ಇರುವಂಥಾದ್ದು ಬ್ರಹ್ಮವಲ್ಲದೆ ಮತ್ತೊಂದಿಲ್ಲವಾದ್ದರಿಂದ ಗಗನವು ಗಗನಸಮಾನನೆಂಬಂತೆ ಬ್ರಹ್ಮವು ಬ್ರಹ್ಮಸಮಾನವೆಂತಲೇ ಪೇಳತಕ್ಕದ್ದು. ಹೀಗೆ ಸ್ವೇಚ್ಛೆಯಿಂದ ಸ್ವರೂಪವಂ ಬಿಡದೆ ನಾನಾರೂಪವಾಗಿ ಕಾಣುತ್ತಿದ್ದಾಗ್ಯೂ ಸ್ವಸ್ವಭಾವವನ್ನಾಲೋಚಿಸದೆ ದೃಶ್ಯವಿದೆಂತಲೂ, ದ್ರಷ್ಟೃ ತಾನೆಂತಲೂ ಉಭಯಸಾಕ್ಷಿ ಬೇರೆ ಇರುವದೆಂತಲೂ, ಭೇದರೂಪವಾದ ಅಜ್ಞಾನದಿಂ ಸ್ವಸ್ವಭಾವವಂ ಕಾಣದೆ ಪ್ರಪಂಚಭ್ರಾಂತಿಯಿಂ ಬ್ರಹ್ಮವೇ ದುಃಖಪಡುತ್ತಿರುವದು. ಭ್ರಾಂತಿಯಲ್ಲಿ ಪಾಂಡಿತ್ಯವು ಪಾಂಡಿತ್ಯದಲ್ಲಿ ಭ್ರಾಂತಿಯು ಸಹ ಇರತಕ್ಕದ್ದಲ್ಲವಾದ್ದರಿಂದ ಪಾಂಡಿತ್ಯಜನಕವಾದ ಶಾಸ್ತ್ರಗಳು ಸಫಲವಾಗುವವು. ಸರ್ವವನ್ನು ನೋಡುವ ನೇತ್ರದಂತೆ ಈ ಬ್ರಹ್ಮವು ತನ್ನಂ ತಾನು ನೋಡಲಾರದು. ಜ್ಞಾನೋದಯದಲ್ಲೂ ಭೇದಜ್ಞಾನವಿಲ್ಲದ್ದರಿಂದ ಸರ್ವಾಧಾರವಾಗಿರುವ ತನ್ನಂ ತಾನು ನೋಡಲಾರದು. ಜ್ಞಾನಾಜ್ಞಾನ ಮಿಶ್ರಕಾಲದಲ್ಲಿ ದೃಷ್ಟಿಯಂತರ್ಮುಖವಾಗಲು ದೃಶ್ಯವಿಲ್ಲದೆ ಪೋಗುವದು. ದೃಷ್ಟಿ ಬಹಿರ್ಮುಖವಾಗುವಲ್ಲಿ ದೃಕ್ಕಿನ ವಿಚಾರವೇ ತಪ್ಪುವದು. ಆದ್ದರಿಂದ ದೃಕ್ಕಿಗೆ ದೃಶ್ಯತ್ವವು ಎಂದಿಗೂ ಸಂಭವಿಸುವದಿಲ್ಲ. ಅದುಕಾರಣ ವಸಂತಸಾರವು ಫಲ ಪುಷ್ಪ ಲತಾರೂಪದಿಂ ವೃದ್ಧಿ ಹೊಂದುವಂತೆಯೂ, ಕಬ್ಬಿನ ರಸವು ಸಕ್ಕರೆಯಾಗುವಂತೆಯೂ, ಬ್ರಹ್ಮವು ಸ್ವರೂಪವಂ ಬಿಡದೆ ಪರರೂಪವಾಗುವದು. ಪರರೂಪವಾದಾಗ್ಯೂ ಸ್ವರೂಪಪ್ರಚ್ಯುತಿಯಿಲ್ಲದಿರುವದು. ಆದ್ದರಿಂದ ಇಲ್ಲಿ ಕಾರ್ಯಕಾರಣಭಾವವು ಸಂಭವಿಸದು. ಅದುಕಾರಣ ಕಾರಣವಲ್ಲವೆಂತಲೇ ಬ್ರಹ್ಮವು ಪೇಳಲ್ಪಡುವದು. ಭಿನ್ನರೂಪವಾಗಿ ಕಾಣುವದು ಇದರ ಸ್ವಭಾವವಾದ್ದರಿಂದ ದೃಕ್ಕೇ ದೃಶ್ಯವಾಗಿ ತೋರುವದೆಂದು ನಿಶ್ಚಯಿಸಿ ದೃಶ್ಯವೆಲ್ಲವು ದೃಕ್ಕಿನ ಸ್ವರೂಪವೆಂದು ಭಾವಿಸುವದೇ ದೃಕ್ಕಿನ ಸಾಕ್ಷಾತ್ಕಾರವೆನಿಸುವದು. ಹೀಗಿರುವದ್ದರಿಂದ ಮನದಲ್ಲೂ,

ಗಗನದಲ್ಲೂ, ವಾಯು ತೇಜೋಜಲ ಭೂಮಿಗಳಲ್ಲೂ, ಪ್ರತಿಜೀವಗಳಲ್ಲೂ, ಅಸಂಖ್ಯವಾಗಿ ಒಳಗೂ ಹೊರಗೂ ಉಂಟಾಗುವ *ಸರ್ಗಗಳೆಲ್ಲವನ್ನೂ ಬ್ರಹ್ಮ ಪ್ರಕಾಶನೆಂತಲೇ ನಿಶ್ಚಯಿಸುವನಾಗು. ಈ ಜ್ಞಾನದಿಂ ಮನಸ್ಸಿಗೆ ಮನನವು ತಪ್ಪಲು ಜೀವನು ಬ್ರಹ್ಮಭಾವವಂ ಹೊಂದುವನು. ಮನಸ್ಸಿನ ಮನನವಿರುವ ವರಿಗೆ ಜಗವೆಂಬ ದೀರ್ಘಸ್ವಪ್ನವು ಯಾರಿಗೂತಪ್ಪದು, ಮನವಂ ಪಿಡಿದ ಚಿತ್ತು ಭಾವಿಶಿದಂತೆ ಸಮಸ್ತವು ಆಗುವದು. ಈ ಚಿತ್ತು ಇದ್ದೆಡೆಯಲ್ಲಿ ವಾಸನೆ ತಪ್ಪದು ವಾಸನೆ ತಪ್ಪದೆ ಅಖಂಡತ್ವವು ಸಂಭವಿಸದು. ಅಖಂಡತ್ವ ಸಂಭವಿಸದೆ ದುಃಖ ತಪ್ಪದು. ಅದುಕಾರಣ ಮನಸ್ಸಿಗೆ ಮೋಹವಂ ತಪ್ಪಿಸುವ ಪ್ರಯತ್ನವಂ ಸರ್ವ ದಾ ಮಾಡುತ್ತಿರಬೇಕು. ನಿತ್ಯಾನಿತ್ಯವಿಚಾರ ಉಂಟಾಗಲು ವಿವೇಕ ಉದಯಿ ಸುವದು. ಅದರಿಂದ ವಿಷಯದಲ್ಲಿ ವೈರಸ್ಯ ತೋರುವದು. ಅದರಿಂದಪೇಕ್ಷೆತಪ್ಪು ವದು. ಅದರಿಂದ್ರಿಂದ್ರಿಯಗಳು ಸ್ವಾಧೀನವಾಗುವದು. ಅವುಗಳು ವಿಷಯಾಭಿ ಮುಖವಾಗದಿರಲು ಮನವಂತರ್ಮುಖವಾಗುವದು. ಆಗ ನಾನ್ಯಾರು ನನ್ನದೆಂಬು ವದು ಯಾವದೆಂದು ವಿಚಾರ ಉಂಟಾಗುವದು. ಅದರಿಂದ ಸ್ವರೂಪ ಮಹಿಮೆ ಪ್ರಕಾಶಿಸುವದು. ಅದರಿಂದ ನಾನೆಂಬುವದೇ ನಷ್ಟವಾಗುವದು. ಆಗ ಅಖಂ ಡವಾದ ಬ್ರಹ್ಮ ಒಂದೇ ನಿಲ್ಲುವದು. ಈ ಅರ್ಥವು ಅನುಭವಗೋಚರವಾಗಲು, ಮುಮುಕ್ಷು ಕೃತಾರ್ಥನಾಗುವನು. ವಾಙ್ಮಾತ್ರದಲ್ಲಿದ್ದ ವಿವೇಕವು ಚಿತ್ರದಲ್ಲಿದ್ದ ವಿವೇಕವು ಚಿತ್ರದಲ್ಲಿದ್ದ ದೀಪವು ತಮವಂ ಪರಿಹರಿಸಲಾರದಾದ್ದರಿಂದ, ಬ್ರಹ್ಮ ಸ್ವರೂಪವನುಭವಕ್ಕೆ ಬರುವಂತೆ ಸರ್ವಕಾಲದಲ್ಲೂ ಸಜ್ಜನರಿಂ ಬಿಡದೆ ಸಚ್ಛಾ ಸ್ತ್ರವಿಚಾರವಂ ಮಾಡುತ್ತಿರಬೇಕು. ಬ್ರಹ್ಮವೇ ಸರ್ವಸ್ವರೂಪವಾಗಿ ಪ್ರಕಾ ಶಿಸುತ್ತಿದ್ದಾಗ್ಯೂ ದೇವಾಸುರ ಬ್ರಹ್ಮೋಪಾಸಕರಿಗೆ ಭಾವಾನುರೂಪವಾಗಿ ಫಲವಾಗುವದಾದ್ದರಿಂದ ನೀಚೋತ್ತಮಗಳಂ ವಿಚಾರಿಸಿ ಶ್ರೇಷ್ಠವಾದದ್ದನ್ನೇ ಪಿಡಿಯತಕ್ಕದ್ದು. ಬ್ರಹ್ಮೇತರ ಪದಾರ್ಥಜ್ಞಾನವೆಂಬುವದು ಸ್ವಪ್ನವೆಂತಲೇ ತಿಳಿ ಯತಕ್ಕದ್ದು. ಎಂದು ಪೇಳುವಲ್ಲಿ ಜಾಗ್ರದಾದಿ †ದಶಾಭೇದಗಳಂ ಪೇಳಬೇಕೆಂ ದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು. ಎಲೈ ಶ್ರೀರಾಮಚಂ ದ್ರನೇ! ಪ್ರಾರಬ್ಧಕರ್ಮ ಫಲಪ್ರಾಪಕವಾದ ಕಾಲವು ತನ್ನಿಂದಲೇ ಕ್ಲಪ್ತವಾಗಿ ರುವದ್ದರಿಂದ ಅದರ ಆಗಮನವಂ ಸಫಲವಂಮಾಡಲೋಸುಗ ಇಚ್ಛಾಶಕ್ತಿಯು ದಯಿಸಲು ಆತ್ಮನು ಬುದ್ಧಿಯೊಡಗೂಡಿ ಮನವಂ ಪ್ರೇರಿಸುವನು. ಆ ಮನವು ದೇಹದಲ್ಲಿ ತೇಜೋಲಕ್ಷಣವಾಗಿರುವ ಚಿದ್ಧಾತುವಂ ವ್ಯಾಪಿಸುವದು. ಆಗ ಅದ

* ಸೃಷ್ಟಿಗಳೆಲ್ಲವನ್ನೂ. † ದಶಾ=ಅವಸ್ಥೆ.

ರಿಂದುಂಟಾದ ವಾಯುವು ಸರ್ವಾಂಗಗಳ ನಾಡಿಗಳಂ ವ್ಯಾಪಿಸಲು, ಇಂದ್ರಿಯಗಳಿಗೆ ತಮ್ಮ ತಮ್ಮ ವ್ಯಾಪಾರಗಳಲ್ಲಿ ಪ್ರವೃತ್ತಿಯುಂಟಾಗುವದು. ಆಗ ಸರ್ವಾಂಗವ್ಯಾಪಕವಾದ ಪ್ರಜ್ಞೆಯು ಚಿತ್ತದಲ್ಲಡಗಿದ್ದ ಭ್ರಮಾತ್ಮಕವಾದ ಪ್ರಪಂಚವನ್ನು ನೇತ್ರಾದಿಗಳಿಂದ ಹೊರಗಿರುವಂತೆ ನೋಡುವದು. ಅಂತಃಕರಣದ ಆ ವೃತ್ತಿಯು ಸ್ಥಿರವಾದ್ದರಿಂ ಸಂದೇಹವಿಲ್ಲದೆ ಪದಾರ್ಥಗಳಂ ಹಿಡಿಯುವದು. ಈ ಜ್ಞಾನವಿಶೇಷವೇ ಜಾಗ್ರತ್ತೆನ್ನಿಸುವದು. ಹೊರಗಾಡುತ್ತಿದ್ದ ಹಕ್ಕಿಯು ಗೂಡನ್ನು ಸೇರುವಂತೆ ವಿಶ್ರಾಂತಿ ಕಾಲೋದಯದಿಂ ಚಿದ್ಧಾತುಸಂಬಂಧಿಯಾದ ವಾಯುವು ನಿಜಸ್ಥಾನವಂ ಸೇರಲು ಮನಸ್ಸಿಗೆ ವ್ಯಾಪಾರೇಚ್ಛೆ ತಪ್ಪುವದು. ಅದರಿಂದಾಗ ಚಿದ್ಧಾತುವು ಕಾಯವಾಙ್ಮನಗಳಿಂ ಕ್ಷೋಭೆಪಡದೆ ಶಾಂತವಾಗಿರುವದು. ಪ್ರಜ್ಞೆಯು ಸರ್ವಾಂಗಗಳಿಂ ಹಿಂತಿರಗುವದ್ದರಿಂದ ಜೀವನು ಆತ್ಮನಲ್ಲಿ ನೆಲಿಸುವನು. ನಿರ್ದುಃಖವಾದ ಆ ಅವಸ್ಥೆಯನ್ನೇ ಸುಷುಪ್ತಿಯೆಂದು ಹೇಳುವರು. ಚಿದ್ಧಾತು ಸಂಬಂಧಿಯಾದ ಪ್ರಜ್ಞೆಯು ತನ್ನಲ್ಲಿರುವ ಪ್ರಪಂಚದ ಭಾವಾಭಾವಕ್ರಮಗಳನ್ನಾಲೋಚಿಸುತ್ತಾ ಚಿತ್ತವೆನಿಸುವದು. ಪ್ರಾಕ್ತನಕರ್ಮವಾಸನೆಯಿಂದುಂಟಾದ ಈ ಆಲೋಚನೆಯೇ ಸ್ವಪ್ನವೆನಿಸುವದು. ಇದರಲ್ಲಿ ವಾತಪಿತ್ತಶ್ಲೇಷ್ಮಗಳಿಂ ಚಿದ್ಧಾತುವಿಗೆ ಸ್ವಲ್ಪ ಕ್ಷೋಭೆಯಾಗಲು ಊರ್ಧ್ವಾಧೋಗಮನ, ಗ್ರೀಷ್ಮಾದಿ ತಾಪ, ಜಲ ಪತನಾದಿ ವಿಕಾರಗಳು ಅನುಭವಿಸಲ್ಪಡುವವು. ಕೃಷ್ಣ ರಕ್ತಶ್ವೇತ ಪದಾರ್ಥಗಳು ನೋಡಲ್ಪಡುವವು. ಇನ್ನೂ ವಾತಪಿತ್ತಾದಿ ವಿಕಾರಗಳೆಲ್ಲವು ಕಾಣಲ್ಪಡುವವು. ಇದರಲ್ಲಿ ವಾಸನೆಯಿದ್ದಂತೆ ಸಾತ್ವಿಕ ರಾಜಸ ತಾಮಸ ಭಾವಗಳು ಸ್ಪಷ್ಟವಾಗುವವು. ಜಾಗ್ರದಲ್ಲಾಗುವ ಇಂದ್ರಿಯಗೋಳಕಕ್ಷೋಭೆ ಇಲ್ಲದಿರುವದ್ದರಿಂದ ಪ್ರಜ್ಞೆಗೆ ಬಲ ಸಾಲದಿರುವದು. ಅದುಕಾರಣ ಅಂತಃಕರಣವೃತ್ತಿಯು ಜಾಗ್ರದಂತೆ ಸ್ಥಿರವಾಗಿ ಪದಾರ್ಥಗಳಂ ಹಿಡಿಯಲಾರದು. ಇಂತು ವಿವರಣದಿಂ ಸ್ಥೂಲದೇಹವಂ ಹಿಡಿದು ಬಂದ ಅಂತಃಕರಣವೃತ್ತಿಯೇ ಜಾಗರವು. ಸೂಕ್ಷ್ಮದೇಹವಂ ಹಿಡಿದದ್ದು ಸ್ವಪ್ನವು, ಕಾರಣಶರೀರವಂ ಹಿಡಿದು ವಿಶ್ರಾಂತಿಯನ್ನನುಭವಿಸುತ್ತಿರುವದೇ ಸುಷುಪ್ತಿಯೆಂದು ನಿಶ್ಚಯಿಸುವನಾಗು. ಈ ಪ್ರಕಾರವಾದ ಅಂತಃಕರಣದ ಸ್ವರೂಪ ನಿರೂಪಣೆಯಿಂದ ಇದು ಯಾವದನ್ನು ದೃಢಭಾವನೆಯಿಂದ ಹ್ಯಾಗೆ ಗ್ರಹಿಸುವದೋ ಹಾಗೆ ಅನುಭವಿಸುವದೆಂದು ನಿಶ್ಚಯಿಸುವನಾಗು. ಇದರಲ್ಲಿ ತುಚ್ಛವಾದ ಪದಾರ್ಥಗ್ರಹಣದಿಂ ಯಾರಿಗೂ ದುಃಖ ತಪ್ಪಲಾರದಾದ್ದರಿಂದ ಯಾವದು ಸರ್ವೋತ್ತಮವಾದದ್ದೋ ಅದನ್ನು ವಿಚಾರಿಸಿ ಗ್ರಹಿಸುವನಾಗು. ಅದರ ಅನು

ಸಂಧಾನದಿಂದದರ ಭಾವವನ್ನೇ ಹೊಂದುತ್ತೀಯೆ, ಶರೀರವಿದ್ದೆಡೆಯಲ್ಲಿರುವದಲ್ಲದೆ ಮನದಂತೆ ಊರ್ಧ್ವಾಧೋಲೋಕಗಳಿಗೂ ದಿಗಂತುಗಳಿಗೂ ಹೋಗಲಾರದು. ಶರೀರವು ರೋಗದಿಂ ಬಿದ್ದಿದ್ದರೂ ಮನದ ಉತ್ಸಾಹದಿಂದನೇಕ ಕಾರ್ಯಗಳು ನಡೆಯುವವು. ಮನವು ಸ್ವಲ್ಪವಾದರೂ ಅಲಸವಾಗಿದ್ದಲ್ಲಿ ಶರೀರವು ದೃಢವಾಗಿದ್ದರೂ ಯಾವ ಕಾರ್ಯವು ನಡೆಯಲಾರದು. ಮನವು ಚಿತ್ರಪ್ರತಿಮೆಯಂ ಕಾಮಿಸಿದಾಗ್ಯೂ ಶರೀರದಲ್ಲಿ ವಿಕಾರವುಂಟಾಗುವದು. ಶರೀರವು ಸುಂದರೀಸ್ತನವನ್ನಾವಶ್ರಯಿಸಿದ್ದರೂ ಮನವು ದೇವತಾಭಾವನೆಯಿಂದಿರಲು ಆ ಸ್ತನವು ಮಾತೃಸ್ತನಕ್ಕಿಂತಲೂ ಅಧಿಕವಾಗುವದು. ಇಂಥಾ ರೀತಿಗಳಿಂದ ಮನವೇ ಅಧಿಕವಾಗುವದಾದಕಾರಣ ಮನವೇ ಕಾರ್ಯಕಾರಿಯೆಂದು ನಿಶ್ಚಯಿಸಿ ಸನ್ಮಾರ್ಗದಲ್ಲಿ ಅದಂ ನಿಲ್ಲಿಸುವನಾಗು ಎಂದು ವಸಿಷ್ಠನು ಹೇಳುತ್ತಿರುವಲ್ಲಿ ಎಲೈ ಗುರುವೆ ! ಸಜಾತೀಯವಿಜಾತೀಯ ಸ್ವಗತಭೇದವಿಲ್ಲದ್ದರಿಂ ನಿತ್ಯಾನಂದರೂಪವಾಗಿ ಕಾಲತ್ರಯ ಬಾಧೆಯಿಲ್ಲದ್ದರಿಂ ಶಾಶ್ವತವಾಗಿ ಕೇವಲ ಜ್ಞಾನಸ್ವರೂಪದಿಂ ಪ್ರಕಾಶಿಸುವ ಪರಮಾತ್ಮನಲ್ಲಿ ಯಾವ ಕಳಂಕವಿದ್ದದ್ದರಿಂದೀ ಪರಿಯಾಗಿ ಜಡಾಜಡರೂಪವಾಗುವ ಮನವುಂಟಾದುದು? ದುಷ್ಪುತ್ರನಿಂ ತಲೆತಗ್ಗಿದ ಸಾಧುವಿನಂತೆ ಈ ಮನದಿಂದಾ ಪರಮಾತ್ಮನೆ ಮರೆಯಾಗಿರುವನೆಂದು ತಿಳಿಯುತಲಿಧೇನೆ. ಎಂದು ಶ್ರೀರಾಮನು ಕೇಳಲು ಪುನಃ ವಸಿಷ್ಠನಿಂತೆಂದನು. ಎಲೈ ಶುಭಮತಿಯಾದ ರಾಮಭದ್ರನೆ ! ಪೂರ್ವಾಪರವಿಚಾರದಿಂ ನಿನ್ನಲ್ಲಿ ಪುಟ್ಟಿದ ಈ ಬುದ್ಧಿಯು ನಂದನವನದಲ್ಲುದಿಸಿದ ಮಂಜರಿಯಂತೆ ಶೋಭಿಸುತ್ತಿರುವದು, ಇದರಿಂ ನೀನು ಶಂಕರಾದಿಗಳಂತೆ ಸರ್ವೋತ್ತಮವಾದ ಪದವಿಯಂ ಪಡೆಯುತ್ತೀಯೆ. ಆದರೆ ಈ ನಿನ್ನ ಪ್ರಶ್ನೆಯು ವರ್ಷಾಕಾಲದಲ್ಲಿ *ಕೇಕಾಧ್ವನಿಯಂತೆ ಸಿದ್ಧಾಂತಕಾಲದಲ್ಲಿ ಶೋಭಿಸತಕ್ಕದ್ದಾದ್ದರಿಂದ ಅಕಾಲದ ಪುಷ್ಪದಂತೀಗ ಅಗ್ರಾಹ್ಯವಾಗಿರುವದು. ಸಿದ್ಧಾಂತಕಾಲದಲ್ಲಿ ಪ್ರಶ್ನೆಯಂ ಮಾಡಿದರೆ ಆಗ ನನ್ನ ಮಾತಿನಿಂ ಸಿದ್ಧಾಂತವು ಕರತಲಾಮಲಕದಂತೆ ಪ್ರಕಾಶಿಸುವದು. ಆದ್ದರಿಂದೀ ಪ್ರಶ್ನೆಯಂ ನೀನು ಸಿದ್ಧಾಂತಕಾಲದಲ್ಲಿ ಅವಶ್ಯವಾಗಿ ಮಾಡುವನಾಗು. ಪ್ರಕೃತವಾದ ಮನಸ್ಸಿನ ರೀತಿಯಂ ಚೆನ್ನಾಗಿ ತಿಳಿಯುವನಾಗು. ಮನನವೃತ್ತಿಯಿಂ ಮನವೆನಿಸಿಕೊಂಡ ಚಿತ್ತ ಶ್ರವಣಸ್ಪರ್ಶಾದಿವ್ಯಾಪಾರಗಳಿಂ ಜ್ಞಾನೇಂದ್ರಿಯ ಕರ್ಮೇಂದ್ರಿಯನಾಮಗಳಿಂ ಹೇಳಲ್ಪಡುವದು. ಮನನದಿಂ ಚಂಚಲವಾದ ಈ ಮನವು ಯಾವ ಯಾವ ಭಾವವಂ ಹೊಂದುವದೋ ಆಯಾಯ ರೀತಿಯಿಂದಲೇ ಪ್ರಕಾಶಿಸುವದು. ಪುಷ್ಪಗ

* ಕೇಕಾಧ್ವನಿ—ನವಿಲಿನ ಕೂಗುವಿಕೆ.

ಳಲ್ಲಿ ಸೇರಿಕೊಂಡಿದ್ದ ವಾಯುವು ಆಯಾಯ ಗಂಧರೂಪದಿಂ ಪೊರಮಡುವಂತೆ ಆಯಾಯ ಭಾವದಿಂದಲೇ ಮನವು ಚಲಿಸುವದು. ಅದರಿಂ ಜ್ಞಾನೇಂದ್ರಿಯಗಳು ಚಲಿಸಲು ವಾಯುವನ್ನನುಸರಿಸುವ ಭೂಮಿಯ ರಜದಂತೆ ಕರ್ಮೇಂದ್ರಿಯಗಳು ಜ್ಞಾನೇಂದ್ರಿಯಾನುಸಾರದಿಂ ಚಲಿಸುವವು. ಗಾಳಿ ತಗಲಿದ ಪದಾರ್ಥವು ಅದರ ಪರಿಮಳವಂ ವಹಿಸುವಂತೆ ಸೂಕ್ಷ್ಮಶರೀರದಿಂದುಂಟಾದ ಭಾವವನ್ನೇ ಸ್ಥೂಲ ಶರೀರವು ವಹಿಸುವದು. ಅದರಿಂ ವ್ಯಾಪಾರಗಳು ನಡೆಯುವದ್ದರಿಂದ ಕರ್ಮರೂಪವಾದ ಫಲಕ್ಕೆ ಮನವೇ ಬೀಜವೆನಿಸುವದು. ಕುಸುಮದ ಸತ್ವವೇ ಗಂಧದ ಸತ್ವವಾದ್ದರಿಂದ *ಮನಃಕರ್ಮಗಳಿಗೆ ಸತ್ತಾಭೇದವಿಲ್ಲವೆಂದು ಹೇಳಲ್ಪಡುವದು. ಈ ಮನವು ಯಾವದಂ ಹಿಡಿವದೋ ಅದನ್ನೇ ಸರ್ವೋತ್ತಮವೆಂದು ತಿಳಿಯುವದಾದ್ದರಿಂದ ಆ ಕರ್ಮದಲ್ಲೇ ಆಸಕ್ತವಾಗಿದ್ದು ಪುಷ್ಪದಿಂ ಪೊರಮಡುವ ಗಾಳಿಯಂತೆ ಆ ವಾಸನೆಯಿಂದಲೇ ಪ್ರಕಾಶಿಸುತ್ತಾ ಫಲದಿಂದುಂಟಾಗುವ ಬೀಜದಂತೆ ಕರ್ಮಾನುಗುಣವೆಂದು ಹೇಳಲ್ಪಡುವದು. ಧರ್ಮಾರ್ಥ ಕಾಮಮೋಕ್ಷಾರ್ಥವಾಗಿ ಪ್ರವರ್ತಿಸಿದ ಪಂಡಿತರ ಮನೋಭೇದದಿಂದನೇಕಪ್ರಕಾರವಾಗಿ ಈ ಶಾಸ್ತ್ರಗಳುಂಟಾಗಿರುವವು. ಇವುಗಳಿಗೆಲ್ಲಕ್ಕು ಮಣಿಗಳಿಗೆ ಸಮುದ್ರದಂತೆ ಮನವೇ ಕಾರಣವಾಗಿರುವದು. ಬೇವು ಕಹಿಯೆಂತಲೂ ಕಬ್ಬು ಶೀಯಂತಲೂ, ಚಂದ್ರಸೂರ್ಯರು ಶೀತೋಷ್ಣಕಿರಣರೆಂತಲೂ ಯಾವದು ಹ್ಯಾಗೆ ಮನದ ದೃಢಾಭ್ಯಾಸದಿಂ ನಿಶ್ಚಯಿಸಲ್ಪಟ್ಟಿರುವದೋ ಅದು ಹಾಗೆ ಅನುಭವಿಸಲ್ಪಡುವದು. ಮನದ ದೃಢಾಭ್ಯಾಸಕ್ಕೆ ವಿರುದ್ಧವಾಗತಕ್ಕದ್ದು ಯಾವದೂ ಇಲ್ಲವಾದ್ದರಿಂದ ಅಖಂಡವಾದ ಬ್ರಹ್ಮಕ್ಕೆ ದೃಶ್ಯವಂ ಭಿನ್ನವಾಗಿ ತೋರುವ ಮನವಂ ತಿರಸ್ಕರಿಸಿ ದೃಶ್ಯವೆಲ್ಲವನ್ನು ಬ್ರಹ್ಮವೆಂತಲೇ ಭಾವಿಸುವೆಯಾದರೆ ದೃಶ್ಯಸಂಬಂಧದಿಂದುಂಟಾದ ಸುಖದುಃಖಗಳಿಂ ನೀನು ಬಿಡಲ್ಪಡುತ್ತೀಯೆ. ದೇಶ ಕಾಲ ವಸ್ತು ಪರಿಚ್ಛೇದವಿಲ್ಲದ್ದರಿಂ ಪರಮಾತ್ಮನಿಗೆ ಬ್ರಹ್ಮವೆಂಬ ಸಂಜ್ಞೆಯು ಸಿದ್ಧವಾಗಿರುವದು. ಹೀಗಿರುವಲ್ಲಿ ಅದಕ್ಕೆ ಭಿನ್ನವಾದ್ದು ಯಾವದಿದ್ದೀತು. ದೃಶ್ಯವು ಬ್ರಹ್ಮಭಿನ್ನವೆಂಬ ತಿಳವಳಿಕೆಯೇ ಮಾಯೆಯೆಂತಲೂ, ಅವಿದ್ಯೆಯೆಂತಲೂ, ಭಯಂಕರವಾದ ಭಾವನೆಯೆಂತಲೂ, ಹೇಳಲ್ಪಡುವದು. ಇದರಿಂ ಜ್ಞಾನವು ದೃಶ್ಯವಂ ಹಿಡಿದು ತನ್ಮಯವಾಗುವದೇ ಕರ್ಮವೆನಿಸುವದು. ಇದನ್ನೇ ಅವಿದ್ಯೆಯೆಂದು ಕೆಲವರು ಹೇಳುವರು. ಇದರಿಂದಾಕ್ರಮಿಸಲ್ಪಟ್ಟವನು ಪಟಲದೋ

---

*ಮನಸ್ಸಿನ ಸತ್ತೆಯೆ=(ಇರುವಿಕೆಯೇ) ಕರ್ಮಗಳ ಇರುವಿಕೆಯೆಂದು ತಿಳಿದರೆ, ಮನಃಕರ್ಮಗಳಿಗೆ ಸತ್ತಾಭೇದವಿಲ್ಲವೆಂದು ತಿಳಿದಂತಾಯಿತು.

ಷದಿಂದಾಂಧಕನಾದವನು ಸೂರ್ಯಕಿರಣವಂ ಕಾಣದಿರುವಂತೆ ಶುಭವನ್ನೆಂದಿಗೂ ಕಾಣಲಾರನು. ಸಂಕಲ್ಪದಿಂ ಪ್ರೋಲ್ಲಾಸಿಪ ವೃಕ್ಷದಂತೆ ಉಂಟಾದ ಈ ಅವಿದ್ಯೆಯು ಪರಮಾರ್ಥ ಶ್ರವಣ ಮನನ ನಿದಿಧ್ಯಾಸನಗಳ ಅಭ್ಯಾಸಬಲದಿಂದುಂಟಾದ ಅಸಂಕಲ್ಪದಿಂ ನಷ್ಟವಾಗುವದು. ಬ್ರಹ್ಮಜ್ಞಾನವಿಲ್ಲದೆ ಇದು ಇಂಥಾ ಪದಾರ್ಥವೆಂದು ದೃಶ್ಯವಂ ತಿಳಿಯುವದೇ ಸಂಕಲ್ಪವೆನಿಸುವದು. ಪರಮಾರ್ಥದೃಷ್ಟಿಯಿಂ ದೃಶ್ಯವೆಲ್ಲವೂ ಬ್ರಹ್ಮವೆಂಬ ನಿಶ್ಚಯ ಉಂಟಾಗಿ ಪುನಃ ಜಗತ್ತಿನ ಸ್ಮರಣೆ ಬರದಿರಲು ನಿರ್ವಿಕಲ್ಪ ಶುದ್ಧಚಿನ್ಮಾತ್ರ ಸ್ವರೂಪನಾದ ಆತ್ಮನು ಪಡೆಯಲ್ಪಡುವನು. ಯಾವನಲ್ಲಿ ಕಾರ್ಯಕಾರಣ ಭಾವಗಳು ಸುಖದುಃಖಗಳು ಸಹ ಇಲ್ಲದೆ ಅದ್ವಿತೀಯಭಾವ ಒಂದೇ ಪ್ರಕಾಶಿಸುತ್ತಿಹುದೋ ಅಂಥಾ ಆತ್ಮನು ಹೃದಯದೊಳ್ ಸ್ವಾನುಭವಕ್ಕೆ ಗೋಚರನಾಗುವನು. ಚಿದ್ರೂಪನಾದ ಆತ್ಮನು ಕಲ್ಪನಾವಸ್ತು ಭೇದದಿಂ ವಿಚಿತ್ರ ಪ್ರಕಾಶನಾದ ಪರಮಾತ್ಮನನ್ನೇ ಸಂಸಾರವೆಂದು ತಿಳಿದು ದುಃಖಪಡುತ್ತಿರುವನು. ಪರಮಾರ್ಥದೃಷ್ಟಿಯಿಂ ಕಲ್ಪನೆಯಂ ಬಿಡಲು ನಿಜಾನಂದವನ್ನನುಭವಿಸುವನು. ಈ *ವಾಡೆಯಲ್ಲಿ ಸಿಂಹವಿರುವದೆಂದು ಭಯಪಡಿಸಿದ ಮಕ್ಕಳಿಗೆ ವಾಡೆಯಲ್ಲಿ ಸಿಂಹದಂತೆ ಸ್ವಾಜ್ಞಾನದಿಂದಲೇ ಹೃದಯದಲ್ಲಿ ಬಂಧವಿರುವದು. ಜ್ಞಾನದಿಂದದಂ ವಿಚಾರಿಸಲು ಮುಕ್ತಿಯಾಗುವದು. ಇದು ಜಗತ್ತು ನಾನು ಜೀವನೆಂದು ಭಾವಿಸುವನು ಬದ್ಧನಾಗುವನು. ಬ್ರಹ್ಮವೇ ಸರ್ವಸ್ವರೂಪವಾಗಿರುವಲ್ಲಿ ನಾನೆಂಬುವನು ಎಲ್ಲಿಯದೆಂದು ವಿಚಾರಿಸುವನು ಮುಕ್ತನಾಗುವನು. ಮಗನೆಂಬ ಪ್ರೇಮದಿಂದಾಲಿಂಗಿಸಿದ ಮಾತೃವಂ ಪತ್ನಿಯೆಂದು ಭಾವಿಸಿದ ನೀಚನು ರತಿಯಿಂದಾಗತಕ್ಕ ಸುಖವನ್ನನುಭವಿಸುವನು. ಪ್ರಾಣಕಾಂತನೆಂಬ ಅನುರಾಗದಿಂದಾಲಿಂಗಿಸಿದ ಪತ್ನಿಯಂ ಪರದೇವತೆಯೆಂದು ಭಾವಿಸುವ ಜ್ಞಾನಿಯು ದೇವತಾಧ್ಯಾನ ಫಲವನ್ನನುಭವಿಸುವನು. ಹೀಗೆ ಕಲ್ಪನಾಭೇದದಿಂ ಭಾವಾಭಾವಗಳು ಶುಭಾಶುಭಗಳು ಸಹ ವ್ಯತ್ಯಸ್ತವಾಗಿ ಉದಯಾಸ್ತಗಳಂ ಹೊಂದುವವು. ಮನದ ದೃಢಭಾವನೆಯೇ ಫಲಕಾರಿಯಾದ್ದರಿಂದ ಎಲ್ಲಾ ಕಡೆಯಲ್ಲು ಪರಮಾರ್ಥ ಭಾವನೆಯಂ ಮಾಡುವನಾಗು. ಮನದಲ್ಲಿ ದ್ವೈತಪ್ರಪಂಚಗಳು ಪ್ರತಿಬಿಂಬಿಸಿದ್ದಾಗ್ಯೂ ಅವುಗಳಂತುಚ್ಛವೆಂದು ತಿರಸ್ಕರಿಸುವನಾಗು. ಅಥವಾ ಬ್ರಹ್ಮಾಭಿನ್ನವೆಂತಲೇ ಭಾವಿಸುವನಾಗು. ಅವುಗಳು ಅನುಸಂಧಾನವಂ ಮಾಡುವನಿಗೇ ಬಂಧಕವಾಗುವದಲ್ಲದೆ ಲೋಕವ್ಯವಹಾರೋಪೇಕ್ಷೆಯಿಂ ಕನ್ನಡಿ

*ವಾಡೆ=ಮನೆ. (ವಾಡೆ, ಇದು ಮಹಾರಾಷ್ಟ್ರಶಬ್ದ.)

ಯಂತೆ ಮನಸ್ಸಿಲ್ಲದ ನಿನ್ನಂ ಬಾಧಿಸಲಾರವು. ಶಾಸ್ತ್ರಾರ್ಥ ವಿಚಾರದಿಂ ಪರಮಾತ್ಮಸ್ವರೂಪಮಂ ನಿರ್ಧರಿಸಿ ಅವಿದ್ಯಾಕೃತವಾದ ಪದಾರ್ಥಸ್ಥಿತಿಯಿಂದುಂಟಾಗಿದ್ದ ಮನನಮಂ ಬಿಟ್ಟು ದ್ರಷ್ಟೃವೇದೃಶ್ಯರೂಪದಿಂ ಪ್ರಕಾಶಿಸುವದೆಂದು ನೋಡುತ್ತಾ ಪರಮಾರ್ಥ ವಿಷಯದಲ್ಲಿ ಜಾಗರೂಕನಾಗಿಯೂ, ಸಂಸಾರ ವ್ಯವಹಾರಗಳಲ್ಲಿ ನಿದ್ರಾಳುವಾಗಿಯೂ, ಭೋಗಗಳಲ್ಲಿ ವಿರಕ್ತನಾಗಿಯೂ, ಬ್ರಹ್ಮಾತ್ಮೈಕ್ಯಾನುಸಂಧಾನಮಂ ಮಾಡುತ್ತಿರುವನಿಗೆ ಜ್ಞಾನಪ್ರಕಾಶದಲ್ಲಿ ಬಿಸಿಲಿನೊಳ್ ಮಂಜಿನಂತೆ ಅಜ್ಞಾನವಳಿಯುವದು. ಎರಡನೇ ಪದಾರ್ಥದ ಭ್ರಾಂತಿಯಳಿಯುವದ್ದರಿಂ ಶರತ್ಕಾಲದಲ್ಲಿ ನದಿಗಳಂತೆ ಆಶೆಗಳು ಕೃಶವಾಗುವವು. ಇಲಿಯಿಂದ ಬಲೆಯಂತೆ ವೈರಾಗ್ಯದಿಂ ವಾಸನಾಜಾಲವು ಕತ್ತರಿಸಲ್ಪಡಲು ಹೃದಯದಲ್ಲಿದ್ದ ಅಜ್ಞಾನದ ಗಂಟು ಬಿಡುಯುವದು. ಚಿಲ್ಲದಬೀಜದಿಂ ಜಲದಂತೆ ಜ್ಞಾನದಿಂ ಸ್ವಭಾವವು ಪ್ರಸನ್ನವಾಗುವದು. ವಿಷಯಸಂಬಂಧವು ಅದರ ಆಶೆಯು ಅದಕ್ಕೆ ಕಾರಣವಾದ ಭೇದಜ್ಞಾನವು ಸಹ ಕ್ಷೀಣವಾಗಲು ನಿರಾಶ್ರಯವಾದ ಮನವು ಪಂಜರದಿಂ ಪಕ್ಷಿಯಂತೆ ಸಂಸಾರಕಾರಣವಾದ ಅಜ್ಞಾನದಿಂ ಹಾರಿಹೋಗುವದು. ಸಂದೇಹವೆಂಬ ಅಂಧಕಾರವಳಿಯಲು, ಕುತೂಹಲವೆಂಬ ಸಂಧ್ಯಾರಾಗವು ಜಾರಲು, ಜ್ಞಾನಕಲೆಗಳಿಂ ಪೂರ್ಣವಾದ ಮನವು ಪೂರ್ಣಚಂದ್ರನಂತೆ ಬೆಳಗುವದು. ವಿದ್ಯಾಲಂಕಾರದಿಂದ ಅವಿದ್ಯಾನೈಷಧ್ಯವು ಮರೆಯಾಗಲು ಗಾಳಿಯಡಗಿದ ಸಮುದ್ರದಂತೆ ಮನವು ಸಮಸ್ಥಿತಿಯಾಗುವದು. ಅಜ್ಞಾನದಿಂ ಮೂಢಳಾಗಿ ಜಾಡ್ಯದಿಂ ಶಿಥಿಲಾಂಗಳಾಗಿರುವ ದರಿದ್ರಳಂತೆ ವಾಸನೆಯು ಕೃಶವಾಗುವದು. ಆಗ ಪ್ರಾತಃಕಾಲದೊಳ್ ಸೂರ್ಯನಂತೆ ಪರಮಾತ್ಮನೊಬ್ಬನೇ ಪ್ರಕಾಶಿಸುತ್ತಿರುವನು. ವಿಚಾರದಿಂ ತಿಳಿಯಲ್ಪಟ್ಟ ಸ್ವಸ್ವರೂಪವುಳ್ಳ ಮಹಾತ್ಮನ ಕೃಪೆಗೆ ಪಾತ್ರರಾಗಬೇಕೆಂದು ಬ್ರಹ್ಮ ವಿಷ್ಣು ರುದ್ರಾದಿಗಳೂ ಕೂಡ ಪ್ರಾರ್ಥಿಸುತ್ತಿರುವರು. ಅಖಂಡ ಬ್ರಹ್ಮಜ್ಞಾನ ದಾರ್ಢ್ಯದಿಂದ ಅಹಂಕಾರ ಮುಕ್ತನಾದ ಜೀವನ್ಮುಕ್ತನನ್ನು ಮರುಭೂಮಿಯಂ ಮೃಗಗಳಂತೆ ಯಾವ ಆಶೆಗಳೂ ಹೊಂದಲಾರವು. ದೇಹದಲ್ಲಿದ್ದ ಜರಾಮರಣ ಜನ್ಮಾದಿಗಳೂ ಕೂಡ ಅವನಿಗೆ ಗೋಚರವಾಗವು. ಮೋಹಕವಾದ್ದರಿಂದ ಅಜ್ಞಾನಿಗೆ ಬಂಧಕವಾದ ಮಾಯಾ ವಿಲಾಸಗಳು ಜ್ಞಾನಿಗೆ ಇಂದ್ರಜಾಲದ ಆಟದಂತೆ ವಿನೋದ ಕಾರಣವಾಗುವವು. ವಿವೇಕೋದಯದಲ್ಲೇ ಬಿಸಲು ದೊರೆಯಂತೆ ಪದಾರ್ಥವಾಸನೆಯು ಭ್ರಾಮಕವಾಗಲಾರದು. ನಾನು ಯಾರು ಇದು ಯಾವದೆಂದು ವಿಚಾರ ಉಂಟಾಗುವ ಪರ್ಯಂತವೇ ಸಂಸಾರವೆಂಬ ಅಂಧಕಾರವು ಬಾಧಕವಾಗುವದು. ದೇಹವು ನಾನಲ್ಲವೆಂತಲೂ ಅದರ

ನಿಲ್ಲಿಸಿ ಅದರ ಅಖಂಡ ಭಾವಜ್ಞಾನದಿಂದಹಂಕಾರವಂಬಿಟ್ಟ ನೀನು ಏನುಮಾಡಿದರೂ ಬದ್ಧನಾಗುವದಿಲ್ಲ. * ದಾಮವ್ಯಾಳ ಕಟರಂತೆ ಚಪಲನಾಗದೆ ಭೀಮಭಾಸ ದೃಢರಂತೆ ಸ್ಥೈರ್ಯದಿಂದಿರುವ ನಿನಗೆ ಸರ್ವೋತ್ತಮವಾದ ಶ್ರೇಯಸ್ಸು ಸಿದ್ಧವಾಗುವದೆಂದು ವಸಿಷ್ಠನು ಪೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಸ್ಥಿತಿ ಪ್ರಕರಣದೊಳ್ ಮನಸ್ಸ್ವರೂಪಾದಿ ನಿರೂಪಣಮೆಂಬ ಎರಡನೇ ತರಂಗಕ್ಕೆ ಮಂಗಳ ಮಹಾ.

## ದಾಮವ್ಯಾಳ ಕಟೋಪಾಖ್ಯಾನ.

ಎಲೈ ಶ್ರೀರಾಮಭದ್ರನೇ ! ದಾಮಾದಿಗಳ ಕಥೆಯಂ ಪೇಳುವೆನು ಸಾವಧಾನವಾಗಿ ಕೇಳುವನಾಗು. ಪೂರ್ವದಲ್ಲಿ ಮಹಾ ಮಾಯಾವಿಯಾದ ಶಂಬರನೆಂಬ ದಾನವೇಶ್ವರನು ಪಾತಾಳದಲ್ಲಿದ್ದನು. ಅವನಿಂ ಗಗನದಲ್ಲಿ ನಿರ್ಮಿತಗಳಾದ ವಿಚಿತ್ರೋದ್ಯಾನಗಳಿಂ ಮನೋಹರವಾದ ಅಸುರ ನಗರಗಳು ಕೃತಕರಾದ ಚಂದ್ರಸೂರ್ಯರಿಂ ಪ್ರಕಾಶಿತವಾಗಿದ್ದವು. ಅಲ್ಲಿದ್ದ ರನ್ನದಬೊಂಬೆಗಳು ಗಾನವೈಖರಿಯಿಂದ ಸುರವಿಲಾಸಿನಿಯರಂ ಲಜ್ಜೆಗೊಳಿಸಿದವು. ಅಲ್ಲಿಯ ಕೇಳೀಗೃಹಗಳು ನಿತ್ಯವಿಕಾಸವಾದ ಕನ್ನೈದಿಲೆಗಳ ಪರಿಮಳದಿಂ ವಿರಹಿಗಳಿಗೆ ಭಯಂಕರಗಳಾಗಿದ್ದವು. ಅಲ್ಲಿಯ ರತ್ನಹಂಸೆಗಳು ಚಿನ್ನದ ಕಮಲಗಳಲ್ಲಿ ಆಡುತ್ತಿರುವ ಸಾರಸ ಪಕ್ಷಿಗಳಂ ಕರೆಯುತ್ತಿದ್ದವು. ಅಲ್ಲಿರುವ ಉಮ್ಮತ್ತದ ಗಿಡಗಳಲ್ಲಿ ಪದ್ಮಗಳುಂಟಾಗುತ್ತಿದ್ದವು. ಹೊಂಗೇಮರಗಳಿಂದ ಮಂದಾರ ಕುಸುಮಗಳುದುರುತ್ತಿದ್ದವು. ಅಲ್ಲಿಯ ಮದದಾನೆಗಳ ಕೊಂಬಿನ ತಿವಿತಗಳಂ ತಾಳಲಾರದೆ ಐರಾವತಾದಿ ದಿಗ್ಗಜಗಳು ಓಡಿಹೋದವು. ಕರ್ತರೀಮಯವಾದ ದೈತ್ಯರ ಪ್ರಹಾರಗಳಿಗೆ ಇಂದ್ರನು ಭಯಪಟ್ಟು ಬಾರಿಬಾರಿಗೂ ಓಡಿ ಹೋಗುತ್ತಿದ್ದನು. ಅಲ್ಲಿ ಅಗ್ನಿ ಜ್ವಾಲಾಕಲಾಪಗಳು ಲತಾಗೃಹಗಳಾಗಿದ್ದವು. ಸುತ್ತುಮುತ್ತಲೂ ನಂದನವನವಂ ಜಯಿಸುವ ಅನೇಕ ವನಗಳಿದ್ದವು. ರತ್ನಗಳು ಮಿಂಚುಳುಗಳಂತೆ ಹಾರಾಡುತ್ತಿದ್ದವು. ಅಲ್ಲಿರುವ ಮೃಣ್ಮಯವಾದ ರುದ್ರಪ್ರತಿಮೆಯಿಂದ ಯುದ್ಧದಲ್ಲಿ ನಾರಾಯಣನು ಜಯಿಸಲ್ಪಟ್ಟನು. ಈ ಪ್ರಕಾರವಾದ ಮಾಯೆಗಳಿಂ ಜಗವೆಲ್ಲವಂ ಜಯಿಸಿ ಸಕಲ ವಿಭವಗಳಿಂ ಕೂಡಿದ ಆ ದೈತ್ಯರಾಜನ ಪಾದಪೀಠವಂ ಸಮಸ್ತ ದೈತ್ಯರೂ ಆಶ್ರಯಿಸಿಕೊಂಡಿದ್ದರು. ಆ ದೈತ್ಯೇಶ್ವರನು ಮಲಗಿರುವ

* ಈ ಉಪಾಖ್ಯಾನಗಳು ಮುಂದೆ ಹೇಳಲ್ಪಡುವವು.

ಕಾಲದಲ್ಲೂ ಹೊರಕ್ಕೆಹೋಗಿದ್ದ ಕಾಲದಲ್ಲೂ ದೇವತೆಗಳು ಅವನ ಅಪರಿಮಿತ ವಾದ ಸೇನೆಯುಂ ದುಃಖಪಡಿಸುತ್ತಿದ್ದರು. ಅದರಿಂದನೇಕ ಸೇನೆಗಳು ಅನೇಕ ಸೇನಾಪತಿಗಳು ಸಹ ನಷ್ಟವಾದರು. ಅವನು ಯುದ್ಧಕ್ಕೆ ಹೊರಟಾಗ ಅಂತ ರ್ಧಾನವಾಗಿ ಓಡಿಹೋಗುತ್ತಲೂ ಅವನಿಲ್ಲದಾಗ ಅವನಕಡೆಯವರಂ ವೇಧಿಸು ತ್ತಲೂ ದೇವತೆಗಳು ಕೃತ್ರಿಮ ಯುದ್ಧವಂ ಮಾಡುತ್ತಿರುವಲ್ಲಿ ಅತ್ಯಂತವಾಗಿ ಕೋಪಗೊಂಡ ಶಂಬರನು ಪ್ರಾಣಿಗಳು ನಷ್ಟವಾಗುವದಕ್ಕೆ ನಿಮಿತ್ತವನ್ನಾ ಲೋಚಿಸುತ್ತಾ ನಿಶ್ಚೈಶಿದನದೆಂತೆಂದರೆ,— ಲೋಕದೊಳುತ್ಪತ್ತಿಯಾಗುವ ದಕ್ಕೆ ಸ್ವೇಚ್ಛೆಯು ಜನ್ಮಾಂತರ ಕರ್ಮವು ಸಹಾ ಕಾರಣವಾಗುವದು. ನಿತ್ಯಮು ಕ್ತನಾದ ನಾರಾಯಣನಂತೆ ಜನ್ಮವಂ ಪಡೆವ ಮಹಾತ್ಮರಿಗೆ ಸ್ವೇಚ್ಛೆಯೇ ಕಾರ ಣವಾಗುವದು. ಆದ್ದರಿಂದವರ ದೇಹಪಾತಕ್ಕೆ ಸ್ವೇಚ್ಛೆಯೇ ಕಾರಣವಾಗು ವದು. ಯಾರಿಗೆ ಪೂರ್ವಕರ್ಮವೇ ಜನ್ಮಕಾರಣವೋ ಅವರು ಕಾಮುಕರ್ಮ ವಾಸನೆಗಳಿಂ ಕರ್ಮಗಳಂ ಮಾಡುತ್ತಾ ಸ್ವಕರ್ಮದಿಂದಲೇ ಮೃತ್ಯುವಿನ ಪಾಲಾ ಗುವರು. ಕರ್ಮಕ್ಕೆ ಅಹಂಕಾರ ಮಮಕಾರಗಳೇ ಕಾರಣವಾಗಿರುವವು. ಇವು ಗಳಿಲ್ಲದವನಿಗೆ ಯಾವ ಕರ್ಮವು ಬಂಧಕವಾಗಲಾರದು. ದೇಹಪಾತವಾದರೂ ಸ್ವೇಚ್ಛೆಯಿಂ ಪುನಃ ದೇಹಪಡೆವದ್ದರಿಂದ ಎಂದಿಗೂ ಸಾಯದಿರುವರೆಂದು ನಿಶ್ಚಯಿಸಿ ಮಾಯಾಬಲದಿಂದ *ದಾಮ, ವ್ಯಾಳ, ಕಟರೆಂಬ ಮೂರುಮಂದಿ ದೈತ್ಯರಂ ಪುಟ್ಟಿಸಿದನು. ಅವರಿಗೆ ಶಂಬರನ ಇಚ್ಛೆಯಿಂದ ಶತ್ರುಮಿತ್ರಜ್ಞಾನವು ಅವರ ನಿಗ್ರಹಾನುಗ್ರಹಗಳಲ್ಲಿ ಅಧಿಕವಾದ ಅಪೇಕ್ಷೆಯು ಸಹ ಇದ್ದದು. ಅಹಂಕಾರ ಮಮಕಾರಗಳು ಸ್ವತಃ ಇಲ್ಲದ್ದರಿಂದಲೂ ವ್ಯಾಪಕ ಸ್ವಭಾವವಾ ದ್ದರಿಂದುಪಗತನಾದ ಚಿತ್ಕಳೆಯು ಶಂಬರನ ಇಚ್ಛೆಯಿಂ ದೇವತಾಸಂಹಾರ ಕರ್ಮಮಾತ್ರದಲ್ಲಿ ನಿಂದಿರುವದ್ದರಿಂದಲೂ ‡ಅಭಿಚಾರಿಕ ಕರ್ಮದಿಂದುಂಟಾದ ದೇವತಾ ವಿಶೇಷದಂತಿರುವ ಅವರು ಅರ್ಧಸಿದ್ಧಿಯುಳ್ಳ ಬಾಲಕರಂತೆ ಆತ್ಮಾಭಿ ಮಾನವು ವಾಸನೆಗಳು ಸಹ ಇಲ್ಲದವರಾಗಿ ಶಂಬರನಿಂ ವೃದ್ಧಿಹೊಂದಿಸಲ್ಪ ಟ್ಟರು. ಅಂಧಕರಂತವರು ಪ್ರಕೃತೋಚಿತವಾದ ಇತರ ಕರ್ಮಗಳಂ ಪರೋಪ ದೇಶವಿಂದಲೇ ಮಾಡುತ್ತಿದ್ದರೂ ಪ್ರತಿಭಟರಾಗಿ ಬಂದವರಂ ಹೊಡೆಯುವ ಬಂದೇ ಕರ್ಮವನ್ನವರು ಬಲ್ಲರಲ್ಲದೆ ಯುದ್ಧಕ್ಕೆ ಹೋಗತಕ್ಕರೀತಿಯನ್ನು ವಿಶ್ರ ಮಿಸಿಕೊಳ್ಳುವದನ್ನು ಓಡುವದನ್ನು ಶತ್ರುಗಳು ಗುಂಪಾಗಿಬರುವ ಕ್ರಮಗ

---

*ದಾಮ, ವ್ಯಾಳ, ಕಟ.

‡ಮಾಟ ಮೊದಲಾದ ಕ್ಷುದ್ರಕರ್ಮ. (Black-magic.)

ಳನ್ನು ಜಯಾಪಜಯಗಳನ್ನು ಜೀವನ ಮರಣರೀತಿಗಳನ್ನು ಸಹ ತಿಳಿಯದಿದ್ದರು. ಅವರಿಂದೊಡಗೂಡಿದ ಶಂಬರನ ಸೇನೆಗಳು ಭೂಮಿಗೆ ಬರಲು ಮೇರು ಮೊದಲಾದ ಸ್ಥಲಗಳಿಂ ಪೊರಮಟ್ಟು ದೇವತೆಗಳಿಗೂ ಅವರಿಗೂ ಅತಿ ಭಯಂಕರವಾದ ಯುದ್ಧವಾದುದು. ಆಗ ಮಹಾಪ್ರಳಯದಲ್ಲಿ ತೇಜೋಮಂಡಲಗಳಂತೆ ಕುಂಡಲಾದ್ಯಾಭರಣಗಳಿಂ ಪ್ರಭಾಮಯವಾದ ಶೂರರ ತಲೆಗಳು ಕೆಳಕ್ಕೆಬಿದ್ದವು. ಶಸ್ತ್ರಗಳ ಪರಸ್ಪರ ಸಂಘರ್ಷಣದಿಂದಗ್ನಿಕಣಗಳು ನಕ್ಷತ್ರಗಣಗಳಂತೆ ಉದುರಿದವು. ಭೂಮಿಯ ಬಿಲಗಳೆಲ್ಲವು ರಕ್ತಮಾಂಸಗಳಿಂ ಪೂರ್ಣವಾದವು. ಅದರಿಂದ ರಣಪಿಶಾಚಗಳಿಗೆ ಇದ್ದೆಡೆಗಳಲ್ಲಿಯೇ ಮಹೋತ್ಸವವಾದುದು. ಖಂಡಿತವಾದ ಅಂಗಗಳಂ ತೆಗದುಕೊಂಡು ಹಾರುವ ಹದ್ದು ಕಾಗೆಗಳ ಮುಖಗಳಿಂ ಬೀಳುವ ರಕ್ತಧಾರೆಗಳಿಂ ರಣಧೂಳಿಗಳು ಭೂಮಿಯಲ್ಲಿ ಕೆಸರಾಗಿ ನಿಂದವು. ಶಸ್ತ್ರಪ್ರಹಾರದಿಂ ಹಾರುವ ರಕ್ತಧಾರೆಗಳಿಂದಂತರಿಕ್ಷದಲ್ಲಿರುವ ಪ್ರಾಣಿಗಳಿಗೆ ವೃಷ್ಟಿಭಯವುಂಟಾದುದು. ಶಸ್ತ್ರಜ್ವಾಲಾಸಂಬಂಧದಿಂ ದಿಗಂತಗಳಲ್ಲಿರುವ ಬೆಟ್ಟಗಳು ಕಾಡುಗಿಚ್ಚುಗಳಿಂದಾಕ್ರಮಿಸಲ್ಪಟ್ಟವು. ಊರ್ಧ್ವಮುಖವಾದ ಆ ರಕ್ತವೃಷ್ಟಿಗಳಲ್ಲಿ ಅಸ್ತ್ರಜ್ವಾಲೆಗಳೇ ಮಿಂಚುಗಳಾದವು. ಕಿರೀಟರತ್ನಗಳನ್ನಾನೇ ಕಲ್ಲುಗಳೆಂದು ಕರ್ಮದೇವತೆಗಳ ಬಾಲಕರು ಪರಿಗ್ರಹಿಸಿದರು. ಸಿಡಿಲುಗಳಂತೆ ಮಹಾಸ್ತ್ರಗಳು ಪೊರಮಟ್ಟವು. ಚಾತಕಪಕ್ಷಿಗಳಂತೆ ಮೇಘದ ಮರಿಗಳು ಆ ರಕ್ತಧಾರೆಗಳಂ ಗ್ರಹಿಸಿದವು. ಗಜವಾಜಿ ರಥಿಕಪದಾತಿಗಳೇ ಶಸ್ತ್ರಗಳೆಂಬ ಮಿಂಚುಗಳಿಂದಲೂ, ವಿಚಿತ್ರವಾದ ಬಿಲ್ಲುಗಳೆಂಬ ಕಾಮನಬಿಲ್ಲುಗಳಿಂದಲೂ, ಸಿಹ್ಮನಾದವೆಂಬ ಗುಡುಗಿನಿಂದಲೂ, ಕಾರ್ಮುಗಿಲುಗಳಂತೆ ಕಾಣುತ್ತಿದ್ದರೂ ಕಲ್ಪವೃಕ್ಷಾದಿಗಳಂ ಗ್ರಹಿಸಲೋಸುಗ ಹಾರುತಿದ್ದ ದಾನವರು ರೆಕ್ಕೆಗಳುಳ್ಳ ಬೆಟ್ಟಗಳಂತೆ ಕಾಣ್ಬಂದರೂ ನಾಲ್ಕುದಿಕ್ಕುಗಳಂ ವ್ಯಾಪಿಸಿಕೊಂಡುಬರುವ ಶಂಬರನ ಸೇನೆಗಳು ಸ್ವರ್ಗದಲ್ಲಿರುವ ಕರ್ಮದೇವತೆಗಳಿಗೆ ಉತ್ಪಾತಮೇಘಮಂಡಲಗಳಂತೆ ಭಯಂಕರವಾದವು. ವಿಚಿತ್ರವಾದ ಶಸ್ತ್ರಗಳೆಂಬ ಫಲಕುಸುಮಪಲ್ಲವಗಳಿಂ ತುಂಬಿದ ತೋಳ್ಕೊಂಬೆಗಳುಳ್ಳ ಅಸುರವೃಕ್ಷಮಯವಾದ ಉದ್ಯಾನದಲ್ಲಿ ವನದೇವತೆಯಂತೆ ಜಯಲಕ್ಷ್ಮಿಯಾಡುತ್ತಿದ್ದಳು. ಆ ಯುದ್ಧವಂ ಕಂಡ ಜೀವನ್ಮುಕ್ತರಾದ ಮಹಾತ್ಮರು ಬ್ರಹ್ಮಾಂಡವೆಂಬ ಅತ್ತೀಕಾಯಿನೊಳ್ ಸೊಳ್ಳೆಗಳಂತಿರುವ ದೇವದಾನವರು ಈಗ ಒಂದೆಡೆಯೊಳ್ ಸೇರಿದರೆಂದು ಕೆಲವರು ಪೇಳಿದರು. ಮತ್ತೆ ಕೆಲವರು ಬೆಕ್ಕು ಹೆಗ್ಗಣಗಳಂತಿವರು ಜಗಳವಾಡುವರೆಂದು ನುಡಿದರು. ಅನ್ಯೋನ್ಯಪ್ರಹಾರಗಳಿಂ ಘಾಯವಡೆದ ಆ ದೇವದಾನವರು

ಪುಷ್ಪಿತವಾದ ಮುಳ್ಳುಮುತ್ತುಕದ ಮರಗಳಂತೆ ಕಾಣುತ್ತಿದ್ದರು. ಅವರಿಂ ಕೂಡಿದ ಗಗನಮಂಡಲವು ಕೆಂಮೋಡಗಳಿಂ ತುಂಬಿರುವಂತಿದ್ದುದು. ಅಕಾಲ ಪ್ರಳಯ ಮೇಘಗಳ ಗುಡುಗಿನಂತೆ ಭಯಂಕರವಾದ ಆ ದೇವದೈತ್ಯರ ಆರ್ಭಟೆಯಿಂದಿಗ್ಗಜಗಳು ತಲ್ಲಣಿಸಲು ಮಹತ್ತರವಾದ ಭೂಕಂಪವುಂಟಾದುದು. ಅರೆಯಲ್ಪಟ್ಟ ಗಿರಿ ನಗರ ಗ್ರಾಮಾರಣ್ಯವುಳ್ಳದ್ದಾಗಿಯೂ ಕತ್ತರಿಸಲ್ಪಟ್ಟ ದೇವದೈತ್ಯರ ಶಿರಗಳಿಂ ತುಂಬಿದ ದಿಕ್ಕುಗಳುಳ್ಳದ್ದಾಗಿಯೂ, ಶಸ್ತ್ರಘಾತದಿಂ ಭಗ್ನವಾದ ಮೇರುವಿನ ಶಿಖರಗಳುಳ್ಳದ್ದಾಗಿಯೂ, ಶಸ್ತ್ರಗಳ ಚೂರ್ಣದಿಂ ತುಂಬಿದ ಅಂಬರಮಧ್ಯಭಾಗವುಳ್ಳದ್ದಾಗಿಯೂ, ದೈತ್ಯರ ಪಾದಪ್ರಹಾರಗಳಿಂದುರಳುವ ದಿಕ್ಪಾಲಕರ ನಗರಗಳುಳ್ಳದ್ದಾಗಿಯೂ, ದೈತ್ಯರೆಂಬ ಗಿರಿಗಳಿಂ ಪೊರಮಡುವ ರಕ್ತಪ್ರವಾಹದಿಂ ರಕ್ತವಾದ ಭೂಮಂಡಲವುಳ್ಳದ್ದಾಗಿಯೂ, ವಜ್ರಮುಷ್ಟಿಪ್ರಹಾರದಿಂ ಒಡೆದ ಹೆಗಲುಳ್ಳ ಐರಾವತವುಳ್ಳದ್ದಾಗಿಯೂ, ರಕ್ತಪ್ರವಾಹಗಳಲ್ಲಿ ತೇಲುವ ದೇವಾಸುರ ಮನುಷ್ಯರ ಶವಗಳಮೇಲೆ ಕುಳಿತಿರುವ ರಣಪಿಶಾಚಗಳ ಕೋಲಾಹಲದಿಂ ಮೊಳಗುವ ಗಿರಿಗುಹೆಗಳುಳ್ಳದ್ದಾಗಿಯೂ, ವಜ್ರಾಯುಧದ ಪೆಟ್ಟುಗಳಿಂ ಹಾರಿಬೀಳುವ ಕುಲಪರ್ವತಗಳುಳ್ಳದ್ದಾಗಿಯೂ, ಅಗ್ನಿಜ್ವಾಲೆಗಳಿಂದಲೂ ವಾಯುವೇಗದಿಂದಲೂ ಭಸ್ಮವಾಗಿ ಹಾರುತ್ತಿರುವ ಅಸುರರುಳ್ಳದ್ದಾಗಿಯೂ, ಮಾಯಾಸೂರ್ಯರಿಂ ಪರಿಹರಿಸಲ್ಪಡುವ ತಾಮಸಾಸ್ತ್ರವುಳ್ಳದ್ದಾಗಿಯೂ, ದಿವ್ಯಾಸ್ತ್ರಗಳಿಂ ಛೇದಿಸಲ್ಪಡುವ ಮಾಯಾಕಲಾಪಗಳುಳ್ಳದ್ದಾಗಿಯೂ, ಸಕಲ ದೇವಾಸುರಾಸ್ತ್ರಗಳಿಂ ಪೊರಮಟ್ಟ ಪ್ರತಿದೇವಾಸುರ ಕೂಟದ ಕಲಹದಿಂ ಕ್ಷೋಭೆಪಡುವ ಸಕಲ ಲೋಕಗಳುಳ್ಳದ್ದಾಗಿಯೂ, ಅತಿಘೋರತರವಾಗಿಯೂ, ಅತಿವಿಚಿತ್ರವಾಗಿಯೂ, ಯುದ್ಧವು ನಡೆಯುತ್ತಿರುವಲ್ಲಿ ಮುಂಗಡೆಯೋಳ್ನುಗ್ಗಿದ ದಾಮವ್ಯಾಳಕಟರುಗಳ ಪೆಟ್ಟುಗಳಿಂ ತಾಳಲಾರದೆ ದೇವತೆಗಳು ದಿಕ್ಕೆಟ್ಟು ಓಡಿಪೋಗಿ ಒಟ್ಟಾಗಿ ಚತುರ್ಮುಖನ ಸಮೀಪಕ್ಕೆ ಪೋಗಿ ತಮ್ಮದುಃಖವಂ ಪೇಳಿಕೊಳ್ಳಲು ಆ ಬ್ರಹ್ಮನು ಬಾದುಕ್ಷಣ ವಿಚಾರಿಶಿ ಎಲೈ ದೇವತೆಗಳಿರಾ ದಾಮವ್ಯಾಳಕಟರಿಗೆ ಜನ್ಮಾಂತರಕರ್ಮ ವಾಸನಾಹಂಕಾರಗಳಿಲ್ಲದ್ದರಿಂದ ಮೃತ್ಯುವಿಗೂ ಕೂಡ ಅಸಾಧ್ಯವಾಗಿರುವರು. ನೀವು ಅವರೊಡನೆ ಯುದ್ಧವಂ ಮಾಡುತಲೂ ಮಧ್ಯದಲ್ಲಿ ಓಡುತಲೂ ಮರಳಿ ಹಿಂತಿರುಗಿ ಯುದ್ಧವಂ ಮಾಡುತಲಿದ್ದರೆ ಅಹಂಕಾರವುಂಟಾಗುವದು. ಬಳಿಕ ಅವರು ನಿಮಗೆ ಜಯಿಸಲು ಯೋಗ್ಯರಾಗುವರು. ವಾಸನಾ ತಂತುಗಳಿಂದಲೂ, ಆಶಾಪಾಶಗಳಿಂದಲೂ ಬದ್ಧರಾದವರು ಬಲೆಗೆ ಬಿದ್ದ ಹಕ್ಕಿಗಳಂತೆ ಸ್ವಾಧೀನರಾಗುವರಲ್ಲದೆ ಇವುಗಳಿಲ್ಲದ

ವರು ಯಾರಿಗೂ ವಶರಾಗಲಾರರು. ನಾನು ನನ್ನದೆಂಬ ಕಲ್ಪನೆಯುಳ್ಳವನು ಆಶೆಯುಳ್ಳವನಂತೆ ಸಮಸ್ತವಾದ ಆಪತ್ತುಗಳಿಗೂ ಪಾತ್ರನಾಗುವನು. ಆಶೆಯುಳ್ಳವನು ಧೀರನಾದರೂ ಸರ್ವಜ್ಞನಾದರೂ ಪಂಜರಕ್ಕೆ ಬಿದ್ದ ಸಿಂಹದಂತೆ ವಶವಾಗುವನು. ವಾಸನೆ ಇಲ್ಲದ ಪುರುಷನು ಮಶಕಪ್ರಾಯನಾದರೂ ಮೇರುವಿಗಿಂತಲೂ ಅಧಿಕನೆನಿಸುವನು, ದೇಹನೆಂಬ ವೃಕ್ಷದೊಳ್ ಹೃದಯನೆಂಬ ಗೂಡಿನಲ್ಲಿರುವ ಚಿತ್ತನೆಂಬ ಹಕ್ಕಿಗೆ ಆಶೆಯೇ ಬಲೆಯಾಗುವದು. ಆದ್ದರಿಂದವರಿಗೆ ಅಹಂಕಾರ ವಾಸನಾಪೇಕ್ಷೆಗಳಂ ಯುಕ್ತಿಯಿಂದುಂಟುಮಾಡುವರಾಗಿ, *ಅಹಂತಾ ಮಮತಾ ಜ್ಞಾನವಿಲ್ಲದೆ ಇವರು ಶಂಬರನಿಂ ನಿರ್ಮಿತರಾಗಿರುವದ್ದರಿಂದ ಅಸಾಧ್ಯರಾಗಿರುವರು. ಯುದ್ಧಾಭ್ಯಾಸಗಳಿಂದಿವರಿಗೆ ಅಹಂಕಾರವುಂಟಾಗಲು ಸಾಧ್ಯರಾಗುವರೆಂದು ಪೇಳಲು, ಹಿಂತಿರುಗಿದ ದೇವತೆಗಳು ತಮ್ಮ ಮಂದಿರಗಳಲ್ಲಿ ಕೆಲವುಕಾಲ ವಿಶ್ರಮಿಸಿಕೊಂಡು ಜಯಪ್ರದವಾದ ಮುಹೂರ್ತದೊಳ್ಹೊರಟು ಅಂತರಿಕ್ಷದಲ್ಲಿ ಜಯಪ್ರಯಾಣ ದುಂದುಭಿಗಳಂ ಬಾರಿಸಲು ಕಲ್ಪಾಂತಕಾಲದ ಮೇಘಗರ್ಜನೆಗೆ ಸಮಾನವಾದ ಆ ಶಬ್ದವಂ ಕೇಳಿದ ದೈತ್ಯರು ಮರಳಿ ಪಾತಾಳದಿಂ ಪೊರಮಟ್ಟು ಬರಲು ಕೆಳಕ್ಕೆ ಬರುವ ದೇವತೆಗಳಿಗೂ ಮೇಲಕ್ಕೆ ಹೋಗುವ ದೈತ್ಯರುಗಳಿಗೂ ಮರಳಿ ಪೂರ್ವದಂತೆ ಯುದ್ಧವಾಗುವಲ್ಲಿ, ಮಾಯೆಯಿಂದಲೂ, ವಿವಾದದಿಂದಲೂ, ಸ್ತುತಿಸ್ನೇಹ ಪ್ರಣಾಮ ಮೊದಲಾದ ಸಂಧಿಮಾರ್ಗದಿಂದಲೂ, ಶಸ್ತ್ರಾಸ್ತ್ರಪ್ರಹಾರಗಳಿಂದಲೂ ಓಡಿಪೋಗುವ ಕ್ರಮಗಳಿಂದಲೂ ಅಂತರ್ಧಾನರೀತಿಗಳಿಂದಲೂ, ಹೊಕ್ಕೊಂಡಿರುವದ್ದರಿಂದಲೂ, ದೈನ್ಯಪಡುವದರಿಂದಲೂ ಮೊದಲುಭಾರಿ ಮೂವತ್ತು ವರ್ಷಗಳು ಎರಡನೇಸಾರಿ ಐದು ವರ್ಷಗಳು ಎಂಟುತಿಂಗಳು ಹತ್ತುದಿನಗಳು ಮೂರನೇಸಲ ಹನ್ನೆರಡು ದಿವಸಗಳು ಸಹ ದೇವತೆಗಳು ಯುದ್ಧಮಾಡುವಲ್ಲಿ ಎರಡು ಸೇನೆಗಳಲ್ಲೂ ವೃಕ್ಷ ಅಗ್ನಿ ಶಸ್ತ್ರ ‡ ಅಶನಿ ಪರ್ವತಗಳ ವೃಷ್ಟಿಗಳಾಗುತ್ತಿದ್ದವು. ಆಗ ದಾಮವ್ಯಾಳಕಟರಿಗೆ ಸಮೀಪದಲ್ಲಿದ್ದ ಪದಾರ್ಥವು ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಹೃದಯದಲ್ಲಿ ನಾವು ಯುದ್ಧವಂ ಮಾಡತಕ್ಕವರೆಂಬ ಜ್ಞಾನವುಂಟಾಯಿತು. ಈ ಅಹಂಕಾರವುಂಟಾದ ಬಳಿಕ ಇವು ನಮ್ಮ ಸೇನೆಗಳೆಂದು ಮಮಕಾರವುಂಟಾಯಿತು. ಈ ಅಹಂಕಾರ ಮಮಕಾರಗಳು ಬೆಳೆಯುವಲ್ಲಿ ತಾವು ಚನ್ನಾಗಿರಬೇಕೆಂತಲೂ, ತಮ್ಮ ದಂಡುಗಳು ಘಾಶಿಪಡಬಾರದೆಂತಲೂ ಅಪೇಕ್ಷೆಯುಂಟಾದುದು. ಬಳಿಕ

* ಅಹಂತಾ—ನಾನು ಎಂಬ ಅಭಿಮಾನ. ಮಮತಾ—ನನ್ನದು ಎಂಬ ಅಭಿಮಾನ.

‡ ಅಶನಿ—ವಜ್ರಾಯುಧ, ಸಿಡಿಲು.

ಪೂರ್ವದಲ್ಲಿದ್ದ ದೈತ್ಯವಣಗಳು ದೇವತೆಗಳ ಪ್ರಹಾರಗಳಂ ತಾಳಲಾರದೆ ನಾವು
ಹ್ಯಾಗೆ ದೇವತೆಗಳಂತೆ ಜಯಶೀಲರು ಅಮರ್ತ್ಯರೂ ಸಹ ಆದೇವೆಂದು ಯೋ
ಚಿಸುತ್ತಾ ಪ್ರಾಣಭಯದಿಂ ರಣಾಂಗಣದಲ್ಲಿ ನಿಲ್ಲಲಾರದೆ ದಿಕ್ಕೆಟ್ಟು ಓಡುತ್ತಾ
ಊರಿಗೆ ಪೋಧರೆ ಶಂಬರನು ಪ್ರಾಣದೊಡನೆ ಬಿಡನೆಂದು ದಿಗಲುಬಿದ್ದು ಸಕಲ
ಲೋಕಗಳಿಗೂ ಕೆಳಗಿರುವ ಏಳನೇ ಪಾತಾಳಲೋಕಕ್ಕೆ ಪೋಗಿ ಅಲ್ಲಿ ನರಕ
ಪಾಲಕರಾದ ಯಮಕಿಂಕರರಂ ಶರಣು ಹೊಂದಿದರು. ಅವರು ಈ ದಾವ
ವ್ಯಾಳಕಟರಿಗೆ ತಮ್ಮ ಹೆಣ್ಣುಗಳಂ ಕೊಟ್ಟು ತಮ್ಮ ಕೂಟದಲ್ಲಿ ಸೇರಿಸಿಕೊಂ
ಡರು. ಇವಳು ನನ್ನ ಮಡದಿ, ಇವುಗಳು ನನ್ನ ಹುಡುಗರು, ಇವು ನಮ್ಮ
ಮನೆಗಳು, ಇದರಿಂ ನಮಗೆ ಜೀವನವು, ಇವರು ನಮ್ಮ ಪ್ರಭುಗಳೆಂದು ಅಹಂ
ಕಾರ ಮಮಕಾರ ವಾಸನೆಗಳಿಂ ಲೋಕಸಾಧಾರಣರಾದ ಆ ದೈತ್ಯರು ಆ ನರಕ
ದೋಳ್ ಹತ್ತುಸಾವಿರ ವರ್ಷವಿದ್ದರು. ಬಳಿಕ ಅಲ್ಲಿಗೆ ವಿಚಾರಣೆಗೆ ಬಂದ
ಧರ್ಮರಾಜನಿಗೆ ಅಜ್ಞಾನದಿಂದಭಿವಂದಿಸದೆ ಅವನ ಶಿಕ್ಷೆಗೆ ಒಳಗಾಗಿ ಮಡದಿ
ಮಕ್ಕಳುಗಳೊಡನೆ ಜ್ವಾಲಾಮಯವಾದ ನರಕಗಳಲ್ಲಿ ಕೆಡೆಸಲ್ಪಟ್ಟು ಕಾಡುಗಿ
ಚ್ಚಿನಿಂ ಮಣಮರಗಳಂತೆ ಆ ಜ್ವಾಲೆಗಳಿಂ ಭಸ್ಮವಾದರು. ಬಳಿಕ ವಾಸ
ನಾಬಲದಿಂ ಕರ್ಮಭೂಮಿಗೆ ಬಂದ ಆ ದೈತ್ಯರು ವಧ ಬಂಧನಕಾರಿಗಳಾದ
ಕಿರಾತರಲ್ಲಿ ಪುಟ್ಟಿ ರಾಜಕಿಂಕರರಾಗಿದ್ದರು. ಅಲ್ಲಿ ಆಯುರ್ನಾಶದಿಂ ಮೃತ
ರಾದ ಆ ದೈತ್ಯರು ಕ್ರಮವಾಗಿ ಕಾಗೆ, ಹದ್ದು, ಗಿಣಿ, ಹಾವು, ಮೀನು ಮೊದ
ಲಾದ ನಾನಾ ಯೋನಿಗಳಲ್ಲಿ ಪುಟ್ಟಿದಾಗ್ಯೂ ಅಜ್ಞಾನವಂ ದಾಟಲಾರದೆ ವಾ
ಸನಾತ್ಮಕವಾದ ಚಿತ್ತದಿಂದೀಗಲೂ ನಾನಾವಿಧ ಜನ್ಮ ದುಃಖಗಳನ್ನನು
ಭವಿಸುತ್ತಿರುವರು. ಕರ್ಮವಾಸನೆ ಇರುವವರಿಗೆ ಜನ್ಮ ದುಃಖಗಳು ತಪ್ಪವು.
ಕರ್ಮಕ್ಕೆ ವಾಸನೆ ಪೋಗದೆ ತ್ಯಾಗವಾಗಲಾರದು. ಆದ್ದರಿಂದ ನೀನು ಬ್ರಹ್ಮ
ವಾಸನೆಯಂ ದೃಢವಾಗಿ ಹಿಡಿದು ಮಾಡಿದ ಕರ್ಮಗಳು ಹುರಿದ ಬೀಜಕ್ಕೆ ಸರಿ
ಯಾಗುವಂತೆ ಅಹಂಕಾರ ಮಮಕಾರಗಳಂ ಬಿಡುವನಾಗು, ಎಂದು ವಸಿ
ಷ್ಠನು ಪೇಳುವಲ್ಲಿ ಎಲೈ ಗುರುವೇ! ಇಲ್ಲದ್ದು ಭಾವಪದಾರ್ಥವಾಗಲಾರದು.
ಇರುವದು ಅಭಾವ ಪದಾರ್ಥವಾಗಲಾರದು. ಹೀಗಿರುವಲ್ಲಿ ಮಾಯಾತ್ಮಕರಾದ
ಆ ದೈತ್ಯರಿಗೆ ಲೋಕಸ್ವಭಾವ ಉಂಟಾಗುವದಕ್ಕೆ ಕಾರಣವೇನೆಂದು ಶ್ರೀರಾ
ಮನು ಕೇಳಲು ಮರಳಿ ವಸಿಷ್ಠನಿಂತೆಂದನು. ಎಲೈ ಶ್ರೀರಾಮನೇ! ಲೋಕ
ದಲ್ಲಿ ಮಾಯಾಮಯರಲ್ಲದವರು ಯಾರು, ದೃಷ್ಟಿಗೆ ಗೋಚರವಾದೊಡನೆಯೇ
ಅವರಿಗೆ ಲೋಕಸಾಧಾರಣವಾದ ಸದ್ಭಾವ ಉಂಟಾದುದು. ದೇವಾಸುರ ಮನು

ಷ್ಯರು ನೀವು ನಾವುಗಳೆಲ್ಲನೂ ಮಾಯಾಮಯರಾಗಿಯೇ ಇರುವವು. ಬಿಸಲು ದೊರೆಗಳಂತೆ ಗೋಚರವಾಗುವದ್ದರಿಂದ ಸದ್ರೂಪರೆನಿಸುವೆವು. ಪರಮಾರ್ಥ ವಿಚಾರದಲ್ಲಿ ನಮ್ಮ ನಿಮ್ಮ ಭಾವಗಳು ಸ್ವಪ್ನದಲ್ಲಿ ಕಂಡ ಸ್ವಮರಣದಂತೆ ಅಸತ್ಯವಾಗುವವು. ಸ್ವಪ್ನದಲ್ಲಿ ಕಂಡ ಬಾಧು ಮರಣವು ಆ ಕಾಲಕ್ಕೆ ಸತ್ಯವಾಗುವಂತೆ ಇದೆಂಬ ಜ್ಞಾನಮಾತ್ರದಿಂದೀಜಗವು ಸತ್ಯವಾಗಿರುವದು. ಕೆಟ್ಟದ್ದು ಬೆಳೆಯುವಂತೆ ಒಳ್ಳೇದು ಬೆಳೆಯಲಾರದಾದ್ದರಿಂದ ಇದೆಂಬ ಜ್ಞಾನಮಾತ್ರದಿಂದಲೇ ಈ ಪ್ರಪಂಚವೆಲ್ಲವು ಶಾಶ್ವತವಾಗಿರುವಂತೆಯೇ ಗೋಚರವಾಗುವದು. ಬ್ರಹ್ಮ ಒಂದೇ ಸತ್ಯನೆಂಬುವನು ಅನೇಕ ಕಾಲಾಭ್ಯಾಸವಿಲ್ಲದೆ ಅನುಭವ ಸಿದ್ಧವಾಗಲಾರದು. ಬ್ರಹ್ಮವೇ ಸತ್ಯವು, ಜಗವಸತ್ಯವೆಂದು ನುಡಿಯುವನು. ಹುಚ್ಚನಂತೆ ಜನರಿಗೆ ಅಪಹಾಸ್ಯನಾಗುವನು. ಸೂರ್‍ಯನು ಹಿಂಭಾಗದೊಳಿರುವಲ್ಲಿ ಅತಿ ದೀರ್ಘವಾಗಿ ನೆರಳು ಬೀಳುವಂತೆ ಸೂರ್‍ಯನು ನೆತ್ತಿಗೆ ಸಮನಾಗಿ ಬಂದರೂ ದೇಹವು ಬೆಳೆಯಲಾರದು. ಕಳ್ಳಹಣಕ್ಕೆ ಮುದ್ರೆ ದೊಡ್ಡದಾಗುವಂತೆ ಸುಳ್ಳು ಪದಾರ್ಥಕ್ಕೆ ವಿಚಿತ್ರ ರೀತಿಗಳುಂಟಾಗುವವಲ್ಲದೇ ಸತ್ಯವಸ್ತುವಿಗೆ ವ್ಯತ್ಯಾಸವಾಗಲಾರದು. ಈ ಮಾಯಾ ಪ್ರಪಂಚದ ಸ್ವಭಾವವೇ ಇಂಥಾದಾದ್ದರಿಂದ ದಾಮುವ್ಯಾಳಕಟರಿಗೆ ಅಸದ್ಭಾವ ಉಂಟಾದದ್ದು ಆಶ್ಚರ್‍ಯಕರವಲ್ಲ. ದರಿದ್ರನು ಶ್ರೀಮಂತನಾಗುವಂತೆ ಅಜ್ಞಾನಿಯು ವಿವೇಕಿಯಾಗುವದೇ ಆಶ್ಚರ್‍ಯವಾದ್ದರಿಂದ ಅಂಥಾ ಮಾರ್ಗವಂ ನೀನು ನೋಡುವನಾಗು. ಅಜ್ಞಾನಿಗೆ ಸನ್ಮಾರ್ಗ ಸಿದ್ಧವಾದ ತಪೋವಿದ್ಯಾದಿಗಳಿಂ ಪ್ರಪಂಚ ವಾಸನೆ ಹಿಮ್ಮೆಟ್ಟದಿರಲು ಅವನು ಉಪದೇಶಕ್ಕೆಯೋಗ್ಯನಾಗುವದಿಲ್ಲ. ಒಂದುವೇಳೆ ಉಪದೇಶವಾದರೂ ಶವವು ನಡೆಯದಿರುವಂತೆ ಅವನು ಅಖಂಡವಾದ ಬ್ರಹ್ಮದಲ್ಲಿ ಭೇದರೂಪದಿಂದನುಭವಸಿದ್ಧವಾದ ಈ ಪ್ರಪಂಚವನ್ನಣಗಿಸಲಾರನು. ಬ್ರಹ್ಮ ಒಂದೇ ಸರ್ವಸ್ವರೂಪದಿಂ ಪ್ರಕಾಶಿಸುತ್ತಿರುವಲ್ಲಿ ನಾನು ಬ್ಯಾರೆಯನ್ನುವವಕ್ಕೆ ಅವಕಾಶವೇನೆಂದು ವಿಚಾರದಿಂ ನಿಶ್ಚಯವುಳ್ಳವನಿಗೆ ನಾನೆಂಬ ಜ್ಞಾನವೇ ಇಲ್ಲದಿರುವದ್ದರಿಂದ ಅವನೂ ಉಪದೇಶಕ್ಕೆ ಯೋಗ್ಯನಾಗುವದಿಲ್ಲ. ಯಾವನಿಗೆ ಸತ್ಸಹವಾಸಾದಿಗಳಿಂದ ವಿವೇಕವುಂಟಾಗಲು ಆತ್ಮನು ಚಿದ್ರೂಪನೆಂದು ಶಾಸ್ತ್ರವಿರುವಲ್ಲಿ, ಜಡವಾದ ದೇಹವೇ ನಾನೆಂಬುವದು ಹ್ಯಾಗೆ ? ನನ್ನದೆಂಬ ಮಾತಿಗೆ ವಿಷಯವಾದ್ದೆಲ್ಲವು ನಾನೆನಿಸಿಕೊಳ್ಳಲಾರವಾದ್ದರಿಂದ ನಾನು ಯಾರೋ ತಿಳಿಯಬೇಕೆಂಬ ಅಪೇಕ್ಷೆಯುಂಟಾಗುವದೋ ಅವನೇ ತತ್ವೋಪದೇಶಕ್ಕೆ ಯೋಗ್ಯನಾಗುವನು. ಈ ರೀತಿಯಿಂ ವಿಚಾರಿಸುವಲ್ಲಿ ಶಾಸ್ತ್ರದೃಷ್ಟಿಯಿಂದಲೂ, ಜ್ಞಾನಿಗಳ ದೃಷ್ಟಿಯಿಂದಲೂ,

ಯೌಕ್ತಿಕ ದೃಷ್ಟಿಯಿಂದಲೂ, ದಾಮಾದಿಗಳೂ ನಾವೆಲ್ಲರೂ ಕೂಡ ಅಸತ್ಯರಾಗುವೆವು. ಉದಯಾಸ್ತಗಳಿಲ್ಲದ ಚಿಜ್ಜ್ಯೋತಿ ಸ್ವರೂಪವಾದ ಬ್ರಹ್ಮವೇ ಸರ್ವರೂಪವಾಗಿ ಕಾಣ್ಬರುವದೆಂದು ಸರ್ವಪ್ರಕಾರದಿಂದಲೂ ಸಿದ್ಧವಾಗುತ್ತಿರುವಲ್ಲಿ, ನಾವು ಪುಟ್ಟಿದೆವೆಂಬುವದು ಹ್ಯಾಗೆ ಸಂಗತವಾದೀತು. ದೃಷ್ಟಿದೋಷವುಳ್ಳವನಿಗೆ ಸಹಜವಾದ ದೃಷ್ಟಿಗಳೇ ಗಗನದಲ್ಲಿ ಕೂದಲು ಗುಂಗುರುಗಳ ರೂಪದಿಂ ಕಾಣ್ಬರುವಂತೆ ಅಜ್ಞಾನಿಗಳಿಗೆ ಪರಮಾತ್ಮಪ್ರಕಾಶದೊಳ್ ಸೃಷ್ಟಿಗಳು ಕಾಣುತ್ತಿರುವವು. ಜಡದೃಷ್ಟಿಯಿಂ ಸತ್ಯವಾಗಿಯೂ, ಜ್ಞಾನದೃಷ್ಟಿಯಿಂದ ಸ್ವಪ್ನವಾಗಿಯೂ ಈ ಜಗವು ಕಾಣುತ್ತಿರುವದು. ಇಲ್ಲಿ ದಾಮಾದಿಗಳಂತೆಯೇ ನಾವೆಲ್ಲರೂ ಪುಟ್ಟಿರುವೆವು. ಹೀಗಿರುವಲ್ಲಿ ದಾಮಾದಿಗಳಿಗೆ ಹ್ಯಾಗೆ ಸದ್ಭಾವವೆಂದು ಕೇಳುವದಕ್ಕೆ ಕಾರಣವೇನಿರುವದು. ಚಿದಾಕಾಶರೂಪನಾದ ಆತ್ಮನ ಜ್ಞಾನವು ಎಲ್ಲಿ ಹ್ಯಾಗೆ ಪ್ರಕಾಶಿಸುವದೋ ಅಲ್ಲಿ ಹಾಗೆ ಅನುಭವ ಗೋಚರವಾಗುವದಾದ್ದರಿಂದ ದಾಮಾದಿಗಳು ನಾವೆಲ್ಲರೂ ಸಹ ಚಿತ್ಪ್ರಕಾಶವೆಂತಲೇ ತಿಳಿಯುವನಾಗು. ಮರುಭೂಮಿಯ ಬಿದ್ದ ಬಿಸಲು ತೊರೆಯೆನಿಸುವಂತೆ ಸ್ವಪ್ನರೂಪವಾದ ಚಿತ್ತಿನ ಪ್ರಕಾಶವೇ ಜಗತ್ತೆನಿಸುವದು. ಸ್ವೇತರಪದಾರ್ಥ ಜ್ಞಾನರೂಪವಾದ ಪ್ರಕಾಶವೇ ದೃಶ್ಯವೆಂತಲೂ, ಸ್ವರೂಪಜ್ಞಾನಪ್ರಕಾಶವೇ ಮೋಕ್ಷವೆಂತಲೂ ಪೇಳಲ್ಪಡುವದು. ಎರಡು ಬಗೆಯಾದ ಈ ಪ್ರಕಾಶಗಳು ಚಿತ್ತಿಗೆ ಸಹಜವಾದ್ದರಿಂದ ದೃಶ್ಯವೆಲ್ಲವು ಚಿತ್ತೆಂತಲೂ, ಸೃಷ್ಟಿ ಮೋಕ್ಷಗಳಿಗೆ ಚಿದ್ಭೇದವಿಲ್ಲದ್ದರಿಂದ ಸೃಷ್ಟಿ ಮೋಕ್ಷಗಳೆಂಬ ಶಬ್ದಭೇದವಲ್ಲದೆ ಅರ್ಥಭೇದವಿಲ್ಲವೆಂತಲೂ, ಭ್ರೂಮಧ್ಯದಲ್ಲಿ ನಿಲ್ಲಿಸಿದ ನೇತ್ರವು ನಿಜತೇಜವಂ ನೋಡುವಂತೆ ಸ್ವೇಚ್ಛೆಯಿಂ ಪ್ರಕಾಶಿಸಿದ ಚಿತ್ತು ತನ್ನನ್ನೇ ದೃಶ್ಯವೆಂದು ನೋಡುವದೆಂತಲೂ, ಜ್ಞಾನಿಗಳು ಪೇಳುವರು. ಎಂದು ಪೇಳುವಲ್ಲಿ ಈ ದಾಮಾದಿಗಳಿಗೆ ಯಾವಾಗ ಮುಕ್ತಿಯೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು. ಎಲೈ ರಘುಪುಂಗವನೇ ! ಧರ್ಮರಾಜನು ಇವರಿಗೆ ಶಿಕ್ಷೆಯಂ ಮಾಡಿಸಿದಾಗ ಕಿಂಕರರು ಈ ವಿಷಯವಂ ಕುರಿತು ಪ್ರಾರ್ಥಿಸಲು ಇವರು ಪರಸ್ಪರ ವಿಯೋಗವಂ ಪಡದು ತಮ್ಮ ಕಥೆಯಂ ಯಾವಾಗ ಕೇಳುವರೋ ಆಗ ಮುಕ್ತರಾಗುವರೆಂದು ಧರ್ಮರಾಯನು ಪೇಳಿದನು. ಅದೇಪ್ರಕಾರ ಈ ದಾಮಾದಿಗಳು ಮತ್ಸ್ಯರೂಪದಿಂ ಕಾಶ್ಮೀರದೇಶದ ತಾವರೆ ಕೊಳದಲ್ಲಿ ಬಹುಕಾಲವಿದ್ದು ಅಲ್ಲೇ ಮೃತರಾಗಿ ಸಾರಸಪಕ್ಷಿಗಳಾಗಿ ಪುಟ್ಟುವರು. ಆಗ ಇವರು ಪರಸ್ಪರ ವಿಯೋಗವಂ ಪಡೆವರು. ಬಳಿಕ ಆ ಕಾಶ್ಮೀರ

ದೇಶದಲ್ಲೇ ಅಧಿಷ್ಠಾನವೆಂಬ ನಗರದಲ್ಲಿ ರಾಜಗೃಹದಲ್ಲಿ ದಾಮನು ಸೊಳ್ಳೆಯಾಗಿ ಪುಟ್ಟುವನು. ವ್ಯಾಳನುಕಲವಿಂಕನಾಗುವನು. ಕಟನು ಕೃಕರ ಪಕ್ಷಿಯಾಗುವನು. ಆ ರಾಜಸಭೆಯೊಳ್ ನರಸಿಂಹನೆಂಬ ಮಂತ್ರಿವರ್ಯ್ಯನು ಈ ದಾಮಾದಿಗಳ ಕಥೆಯಂ ಪೇಳುವಲ್ಲಿ ಅಲ್ಲಿಯೇ ವಿಹಾರ ಪಕ್ಷಿಯಾಗಿದ್ದ ಕಟನು ಕಂಭದ ತೂತಿನಲ್ಲಿದ್ದ ದಾಮನು ಸಹ ಅದಂ ಕೇಳಿ ಮುಕ್ತನಾಗುವನು. ಪ್ರದ್ಯುಮ್ನ ಶಿಖರವೆಂಬ ಉಪ್ಪರಿಗೆಯಲ್ಲಿದ್ದ ವ್ಯಾಳನು ಜನಜನಿತವಾಗಿ ಬಂದ ಆ ಕಥೆಯಂ ಕೇಳಿ ಮುಕ್ತನಾಗುವನು. ಮಹೇಂದ್ರಾದಿಗಳಿಗೂ ಪಡೆಯಲಶಕ್ಯವಾದ ಐಶ್ವರ್ಯದಿಂ ಮೆರೆವ ಆ ದಾನವರಿಗೆ ಇಂಥಾ ದುರ್ದಶೆಗಳು ಬರುವಲ್ಲಿ ಅಹಂಕಾರ ಮಮಕಾರ ವಾಸನಾ ಪ್ರಭಾವವನ್ನೆಂತು ಬಣ್ಣಿಸಬಹುದು! ಸ್ವೇಚ್ಛೆಯಿಂದ ಹಂಕಾರವಂ ಪಡದ ಚಿತ್ತಸ್ವರೂಪವಂ ಬಿಡದೆ ವಿರೂಪವಂ ಪಡೆಯುವದಲ್ಲದೆ ಚಿತ್ತಿಗೆ ಭಿನ್ನವಾದ ದೃಶ್ಯವಿಲ್ಲವೆಂದು ನಿಶ್ಚಯಿಸುವನಾಗು. ಯಾರು ಸಚ್ಛಾಸ್ತ್ರ ವಿಚಾರದಿಂದೀ ದೃಶ್ಯವು ಸುಳ್ಳೆಂದು ತಿಳಿವರೋ ಅವರು ಕೃತಾರ್ಥರಾಗುವರು. ಯಾರು ಶುಷ್ಕತರ್ಕಗಳಂ ಪಿಡಿದು ವಾದಿಸುತ್ತಿರುವರೊ ಅವರು ಜಲಗಳಂತೆ ಹಳ್ಳಕ್ಕೆ ಬೀಳುವರು. ಇದು ನನಿಗಾಗಬೇಕಿದು ನನಗಾಗಬೇಕೆಂದು ಕಂಡಿದ್ದೆಲ್ಲವಂ ಬಯಸುವ ನಿರ್ಭಾಗ್ಯನಿಗೆ ದೈನ್ಯಪಡುವದೇ ಲಾಭವಲ್ಲದೆ ಭಸ್ಮಕಣವು ಕೂಡ ಲಬ್ಧವಾಗುವದಿಲ್ಲ. ಯಾರು ಆಶೆಯಿಲ್ಲದ್ದರಿಂ ತೃಣಪ್ರಾಯವಾಗ ಜಗವಂ ತಿಳಿವರೋ ಅವರನ್ನು ಸರ್ಪಗಳು ಕಂಚುಕಗಳಂ ಬಿಡುವಂತೆ ಆಪತ್ತುಗಳೆಲ್ಲವು ಬಿಟ್ಟು ಓಡುವವು. ಯಾವನ ಹೃದಯದಲ್ಲಿ ಜ್ಞಾನ ಚಮತ್ಕಾರವು ಪ್ರಕಾಶಿಸುವದೋ ಅವನು ಬ್ರಹ್ಮಾಂಡದಂತೆ ಲೋಕಪಾಲಕರಿಂ ರಕ್ಷಿಸಲ್ಪಡುವನು. ಚೋರಮಾರ್ಗವಂ ಹೊಂದಿದ ರಾಹುವು ಅಮೃತಪಾನವಂ ಮಾಡಿದಾಗ್ಯೂ ಖಂಡಿತನಾದನಾದ್ದರಿಂದ ಬುದ್ಧಿಶಾಲಿಯಾದವನು ಆಪತ್ಕಾಲದಲ್ಲೂ ದುರ್ಮಾರ್ಗವಂ ಹೊಂದಲಾಗದು. ಸತ್ಪುರುಷನೆಂಬ ಸೂರ್ಯನ ವಾಕ್ಪ್ರಕಾಶವಂ ಬಿಡದಿರುವನಿಗೆ ಮೋಹಾಂಧಕಾರದ ಬಾಧೆಯು ಎಂದಿಗೂ ಆಗಲಾರದು. ಯಾರು ವೈರಾಗ್ಯಾದಿಗಳಿಂ ಪ್ರಸಿದ್ಧರಾಗಿರುವರೋ ಅವರಿಗೆ ಆಪತ್ತುಗಳೆಲ್ಲವು ಕ್ಷೀಣವಾಗುವವಲ್ಲದೆ ವಶ್ಯವಾಗದ ಜನರೂ ಕೂಡ ವಶ್ಯವಾಗುವರು. ಯಾರು ಶಮಾದಿಗುಣಗಳಲ್ಲೂ ಶಾಸ್ತ್ರಗಳಲ್ಲೂ ಬ್ರಹ್ಮವಿಚಾರದಲ್ಲೂ ಆಸಕ್ತರಾಗಿರುವರೊ ಅವರೇ ಪುರುಷರು. ಕಡಮೆಯವರೆಲ್ಲರೂ ಪಶುಗಳೆನಿಸಿಕೊಳ್ಳುವರು. ಯಾವನ ಯಶಸ್ಸೆಂಬ ಚಂದ್ರನ ಪ್ರಕಾಶದಿಂ ಜನಗಳ ಹೃದಯವು ಸಂತೋಷಪಡುವದೊ ಅವನು ಕ್ಷೀರಸಮುದ್ರದಂತೆ ಶ್ರೀ ಮಹಾವಿಷ್ಣುವಿಗೆ ಆವಾಸಸ್ಥಾನವಾ

ಗುವನು. ಎಲೈ ಶುಭಮತಿಯೇ! ಚಿಚ್ಛಕ್ತಿಯು ಭಾವನಾಬಲವಿದ್ದಂತೆ ತಾನೇ ಫಲವಾಗಿ ಅನುಭವಗೋಚರವಾಗುವದಾದ್ದರಿಂ, ಶ್ರೇಯಸ್ಕಾಮಿಯಾದವನು ಶುಭೋದ್ಯೋಗವಂ ಬಿಡದೆ ಮಾಡತಕ್ಕದ್ದು. ಆ ಉದ್ಯೋಗವು ಎಂದಿಗೂ ಫಲಿಸದಿರಲಾರದು. ಹದಿನಾರುವರ್ಷವೇ ಆಯುಸ್ಸೆಂಬ ವಿಧಿಕ್ಲ್ಪಪ್ತಿಯಿಂ ಪುಟ್ಟಿದನಾದಿಯು, ಶಿವಲಿಂಗಾರ್ಚನಪ್ರಭಾವದಿಂ ಮೃತ್ಯುವಂ ಜಯಿಸಿ ಮೃತ್ಯುಂಜಯನಿಗೆ ಸಹಚರನಾದನು. ಮರುತ್ತನ ಯಜ್ಞದೊಳ್ ಎರಡನೇ ಬ್ರಹ್ಮನಂತೆ ಸೃಜಿಸಲುಜ್ಜಗಿಸಿದ ಸಂವರ್ತನಭಯದಿಂ ದೇವತೆಗಳು ಪರಿಚಾರಕರಾಗಿದ್ದರು. ಸಶರೀರ ಸ್ವರ್ಗವಂ ಬಯಸಿ ಶರಣಾಗತನಾದ ತ್ರಿಶಂಕುವಿಗೆ ಚಿಂತಾಮಣಿಯಾದ * ಈ ಮಹಾತ್ಮನು ತಪೋಬಲದಿಂ ಶರೀರವಂ ಬಿಡದೆ ಕ್ಷತ್ರಿಯ ಜಾತಿ ಧರ್ಮವನ್ನತಿಕ್ರಮಿಸಿ ಬ್ರಹ್ಮರ್ಷಿಯಾಗಿರುವನು. ಹಿಟ್ಟು ಬೆರದ ನೀರಂ ಕ್ಷೀರವೆಂದು ಕುಡಿವ ಉಪಮನ್ಯುವಿಗೆ, ಶಿವಧ್ಯಾನದ ಮಹಿಮೆಯಿಂ ದಧಿ, ಘೃತ, ಕ್ಷೀರ ಸಾಗರಗಳು ಆಶ್ರಮದ ಕಾಲುವೆಗಳಾದವು. ಬ್ರಹ್ಮ ವಿಷ್ಣು ಮೊದಲಾದವರಂ ಭಕ್ಷಿಸುವ ಕಾಲನು ಇವನಿಂ ಜಯಿಸಲ್ಪಟ್ಟನು. ಪತಿವ್ರತಾಗ್ರಗಣ್ಯಳಾದ ಸಾವಿತ್ರಿಯು ವಿನಯದಿಂದಲೇ ಯಮನಂ ಜಯಿಸಿ ಅವನೊಡನೆ ಪರಲೋಕಕ್ಕೆ ಪೋಗುತ್ತಿದ್ದ ಪತಿಯಂ ಹಿಂತಿರುಗಿಸಿಕೊಂಡು ಬಂದಳು. ಇಂತು ಮಹಾತ್ಮರು ಮಾಡಿದ ಉದ್ಯೋಗಗಳು ಸಫಲವಾಗಿರುವದ್ದರಿಂದುದ್ಯೋಗವೆಂದಿಗೂ ವ್ಯರ್ಥವಾಗಲಾರದೆಂದು ನಿಶ್ಚೈಸಿ ಸಕಲ ದುಃಖಮೂಲವಾದ ಅಜ್ಞಾನದ ನಾಶಕ್ಕೋಸುಗ ಆತ್ಮಜ್ಞಾನವಂ ಸಾಧಿಸಬೇಕು. ಜ್ಞಾನಾಜ್ಞಾನಗಳಂತೆ ಸುಖದುಃಖಗಳೂ ಕೂಡ ಬ್ರಹ್ಮವೆನಿಸುವವು. ಆದಾಗ್ಯೂ ದುಃಖನಾಶವನ್ನಪೇಕ್ಷಿಸುವನು ಜ್ಞಾನವನ್ನೇ ಸಾಧಿಸಬೇಕು. ತಪಸ್ತೀರ್ಥ ಶಾಸ್ತ್ರಗಳೂ ಕೂಡ ಸತ್ಸಂಗವಿಲ್ಲದೆ ತಾರಕವಾಗಲಾರವಾದ್ದರಿಂದ ಅಭಿಮಾನವಂ ತ್ಯಜಿಸಿ ಶಾಶ್ವತವಾದ ಶಮವನ್ನಾಶ್ರಯಿಸಿ ಸ್ವಜಾತಿ ಯೋಗ್ಯತಾನುಸಾರವಾಗಿ ಸತ್ಪುರುಷರಂ ಭಜಿಸುವನಿಗೆ ದೃಶ್ಯವಾದ ಪ್ರಪಂಚವೆಲ್ಲವು ಪರಮಾನಂದಸ್ವರೂಪವಾಗುವದು. ಸದಾಚಾರದಲ್ಲಿರುವ ಯಾವನಿಗೆ ಕಾಮ, ಕ್ರೋಧ, ಲೋಭ, ಮೋಹಗಳು ದಿನದಿನಕ್ಕೆ ಅಣಗುತಲಿರುವವೋ ಅವನು ಸತ್ಪುರುಷನೆನಿಸುವನು. ಸರ್ವವು ಬ್ರಹ್ಮವೆಂಬುವಲ್ಲಿ ಸಜ್ಜನಾಸಜ್ಜನವಿಭಾಗವಿಲ್ಲದಿದ್ದಾಗ್ಯೂ ಶುಭವಾಗಬೇಕೆಂಬ ಅಪೇಕ್ಷೆ ಇರುವವರಿಗೆ ಸಜ್ಜನರನ್ನೇ ಭಜಿಸಬೇಕು. ಚಿದಾದಿತ್ಯನ ಪ್ರಕಾಶವೇ ಪ್ರಪಂಚರೂಪದಿಂ ಪ್ರಕಾಶಿಸುತ್ತಿರುವಲ್ಲಿ ತೇಜಃಪ್ರಕಾಶಗಳಿಗೆ ಭೇದವಿಲ್ಲದ್ದ

* ವಿಶ್ವಾಮಿತ್ರನನ್ನು ನೋಡಿ ಹೇಳಿದ ಮಾತು.

ರಿಂದ, ಸವಿಕಲ್ಪ ನಿರ್ವಿಕಲ್ಪಗಳೆಂಬ ಭೇದದ ವಿಚಾರಣೆಯು ನಿಷ್ಫಲವಾಗುವದು. ಜ್ಞಾನಸ್ವರೂಪನಾದ ಪರಮಾತ್ಮನ ಜ್ಞಾನದೃಷ್ಟಿಯ ಉನ್ಮೇಷ ನಿಮೇಷಗಳೇ ಜಗತ್ತಿಗೆ ಸೃಷ್ಟಿ ಪ್ರಳಯಗಳೆನಿಸುವವು. ನಿತ್ಯಾನಿತ್ಯ ವಿವೇಚನದಲ್ಲಿ ತನ್ನದೆಂದು ಹೇಳಿಕೊಳ್ಳುವ ಪದಾರ್ಥಗಳೆಲ್ಲವು ಅನಿತ್ಯವಾಗಲು ತಾನೆಂಬುವದು ಒಂದೇ ಮಿಗುವದು. ಅದರ ಸ್ವರೂಪವು ತಿಳಿಯಲು ಅದು ಪರಮಾರ್ಥವೇ ಆಗುವದು. ತಿಳಿಯದಿರಲು ಅದು ಕಿಟ್ಟದಂತೆ ಮಲವಾಗುವದು. ತಿಳಿಯಲ್ಪಟ್ಟ ಅಹಂಭಾವವು ಬ್ರಹ್ಮಭಾವದಿಂ ನಿಲ್ಲುವದ್ದರಿಂದ ಅಹಂಭಾವ ಮೊದಲಾದ ಜಗವೆಲ್ಲವೂ ಪರಮಾರ್ಥ ದೃಷ್ಟಿಯಿಂದಿಲ್ಲವೆಂತಲೇ ತಿಳಿಯತಕ್ಕದ್ದು. ನಾನೆಂಬುವದು ಇರುವವನಿಗೆ ಸುಖದುಃಖಾತ್ಮಕವಾದ ಜಗವೆಲ್ಲವು ಇರುವದು. ಅದಿಲ್ಲದವನಿಗೆ ಯಾವದೂ ಇಲ್ಲವಾದ್ದರಿಂದ ಅದು ನಿಶ್ಶೇಷವಾಗಿ ಹೋಗುವಂತೆ ಚಿಕಿತ್ಸೆಯಂ ಮಾಡತಕ್ಕದ್ದು. ಈ ಅಹಂಕಾರವು ಮೂರುಪ್ರಕಾರವಾಗಿರುವದು. ಚಿನ್ಮಾತ್ರಸ್ವರೂಪನಾದ್ದರಿಂದ ಸರ್ವಾತೀತನಾದ ಪರಮಾತ್ಮನು ನಾನೆಂತಲೂ, ಪ್ರಪಂಚಕ್ಕೆ ಬ್ಯಾರೆ ಸತ್ವವಿಲ್ಲದ್ದರಿಂದೀಪ್ರಪಂಚವೆಲ್ಲವೂ ನಾನೆಂತಲೂ, ಈ ಎರಡು ಅಹಂಕಾರಗಳು ಬ್ರಹ್ಮಾವಲಂಬನದಿಂ ಪ್ರಕಾಶಿಸುವದ್ದರಿಂದ ಸಂಸಾರ ಸಮುದ್ರಕ್ಕೆ ತಾರಕಗಳಾಗುವವು. ಜಡಾಜಡ ನಿತ್ಯಾನಿತ್ಯ ವಿವೇಕಜ್ಞಾನವಿಲ್ಲದ್ದರಿಂದ ಜಡವಾದ ದೇಹವಂ ಹಿಡಿದು ವರ್ಣಾಶ್ರಮ ರೂಪಾದಿಗಳ ಅವಲಂಬನದಿಂ ಹೊರಮಟ್ಟ ಅಹಂಕಾರವು ಅಜ್ಞಾನಿಕವಾದ್ದರಿಂ ಬಂಧಕವಾಗಿ ಸಕಲ ದುಃಖಗಳಿಗೂ ಕಾರಣವಾಗಿರುವದು. ಇದು ವಿಚಾರದಿಂದಲೇ ಹೋಗತಕ್ಕದ್ದಾದ್ದರಿಂದ ಆ ವಿಚಾರದ ಸ್ವರೂಪವಂ ತಿಳಿಯುವನಾಗು. ವಿಶುದ್ಧ ಚಿನ್ಮಾತ್ರಸ್ವರೂಪನಾದ ಆತ್ಮನಿಗೆ ಇಂದ್ರಜಾಲ ಪದಾರ್ಥದಂತೆ ತುಚ್ಛವಾದ ಈ ಪ್ರಪಂಚದ ಸಂಬಂಧವು ಹ್ಯಾಗೆ ಉಂಟಾಗುವದೆಂತಲೂ, ಸಜಾತೀಯ ವಿಜಾತೀಯ ಸ್ವಗತ ಭೇದಶೂನ್ಯವಾದ ಬ್ರಹ್ಮದ ಮಹಿಮೆಯಲ್ಲಿ ನಾನೆಂಬುವದಕ್ಕೆ ಅವಕಾಶವೇನೆಂತಲೂ ನಾನೇ ಇಲ್ಲದಿರುವಲ್ಲಿ ಇದು ನನ್ನದೆನಿಸಿಕೊಳ್ಳುವದು ಹ್ಯಾಗೆಂತಲೂ, ತುಚ್ಛವಾದ ಈ ಪ್ರಪಂಚದಲ್ಲಿ ರಾಗ ವಿರಾಗಗಳಿಂ ಚಿನ್ಮಾತ್ರನಾದ ನನಗೆ ಏನಾಗತಕ್ಕದ್ದೆಂತಲೂ ದೇಶ ಕಾಲ ವಸ್ತು ಭೇದವಿಲ್ಲದ್ದರಿಂ ನಾನೆಂಬುವದೇ ಮೊದಲಾದ ಜಗವೆಲ್ಲವೂ ಪರಮಾತ್ಮನಾಗುವಲ್ಲಿ ನಾನು ನನ್ನದೆಂಬುವದಕ್ಕೆ ಕಾರಣವೇನೆಂತಲೂ, ಈ ಅಖಂಡಭಾವದಲ್ಲಿ ಗ್ರಾಹ್ಯಾಗ್ರಾಹ್ಯ ವಿಚಾರದಿಂದೇನೆಂತಲೂ, ನನ್ನದೆನಿಸುವ ದೃಶ್ಯವೆಲ್ಲವೂ ತುಚ್ಛವಾಗುವಲ್ಲಿ ನಾನೆನ್ನುವದು ಎಲ್ಲಿಯದೆಂತಲೂ ವಿಚಾರವು ನಾನಾಪ್ರಕಾರವಾಗಿ ಪ್ರಕಾಶಿಸು

ವವು. ಇಂಥಾ ವಿಚಾರದಿಂದುದಹಂಕಾರವಡಗಲು ತಾರಕವಾದ ಅಹಂಕಾರ ಗಳು ಕಾಷ್ಠವಿಲ್ಲದ ಅಗ್ನಿಯಂತೆ ಶಾಂತವಾಗುವವು. ಬಳಿಕ ನಾನು ನೀನು ಅದು ಇದೆಂಬುವದೇ ಮೊದಲಾದ ಯಾವವಾತಿಗೂ ಅವಕಾಶವಿಲ್ಲದ ಬ್ರಹ್ಮ ಸ್ವರೂಪವೇ ಅಖಂಡವಾಗಿ ಪ್ರಕಾಶಿಸುವದು. ಎಲೈ ರಾಮಭದ್ರನೆ! ಅಹಂಕಾ ರದಿಂ ದಾಮಾದಿಗಳಿಗೆ ಬಂದ ದುರ್ದೆಶೆಯಂ ಕೇಳಿದೆಯಷ್ಟೆ, ಇದಕ್ಕೆ ಮುಂ ದಿನ ಭೀಮಭಾಸ ದೃಢರರೀತಿಯಂ ಕೇಳುವನಾಗು. ಸೇನಾಪತಿಗಳಾದ ದಾ ಮಾದಿಗಳು ಓಡಿಹೋದಬಳಿಕ ನಿರಂಕುಶವಾದ ಮದ್ದಾನೆಗಳಂತೆ ನಿರ್ಭಯ ರಾದ ದೇವತೆಗಳು ಅಸುರರ ಸೇನೆಗಳಂ ನುಗ್ಗಿ ನಾನಾವಿಧ ಶಸ್ತ್ರಗಳಿಂ ಪ್ರಹರಿ ಸಲು ಆ ಸೇನಾಜನಗಳ ಅಂಗಗಳು ಬಿರಿಗಾಳಿಯಿಂ ಬೀಸಲ್ಪಟ್ಟ ತರಗೆಲೆಗಳಂತೆ ದಿಕ್ಕುದಿಕ್ಕುಗಳಲ್ಲೂ ಗಿರಿ ಸಾಗರ ವನಾಂತರಗಳಲ್ಲೂ ಆಂಧ್ರ ದ್ರಮಿಡಾದಿ ದೇ ಶಗಳಲ್ಲೂ, ದ್ವೀಪಾಂತರಗಳಲ್ಲೂ ಬಿದ್ದವು. ಬಳಿಕ ಈ ವೃತ್ತಾಂತವಂ ಕೇಳಿದ ಶಂಬರಾಸುರನು ಮುಹೂರ್ತವಾಲೋಚಿಸಿ, ಅಧ್ಯಾತ್ಮಜ್ಞಾನವಿಲ್ಲದ್ದರಿಂ ದಾಮಾ ದಿಗಳು ಅಹಂಕಾರಗ್ರಸ್ತರಾದರೆಂದು ನಿಶ್ಚಯಿಸಿ ಭೀಮಭಾಸದೃಢರೆಂಬ ನಾಮ ಧೇಯದಿಂ ಜ್ಞಾನನಿಷ್ಠರಾದ ಮೂರುಮಂದಿ ಸೇನಾಪತಿಗಳಂ ಸೃಜಿಸಿದನು. ಅಹಂಕಾರ ಕಾಮಕರ್ಮವಾಸನೆಗಳಿಲ್ಲದಿದ್ದಾಗ್ಯೂ ಜಾತ್ಯುಚಿತವಾದ ಕರ್ಮವಂ ಬಿಡಕೂಡದೆಂಬ ಮಹಾತ್ಮರ ವಚನಾನುಸಾರವಾಗಿ ಅವರು ಶಂಬರನ ಆಜ್ಞೆ ಯಂ ವಹಿಸಿ ಸೇನೆಗಳೊಡನೆ ಪಾತಾಳದಿಂ ಪೊರಮಟ್ಟು ದೇವತೆಗಳೊಡನೆ ಬಹುಕಾಲ ಯುದ್ಧವಂ ಮಾಡಿದರು. ದೇವತೆಗಳು ದಾಮಾದಿಗಳಂ ಪಡಿಸಿದಂತೆ ಇವರನ್ನು ಮೋಹಪಡಿಸಬೇಕೆಂದು ಅನೇಕ ಚಮತ್ಕಾರಗಳಂ ಮಾಡಿದರೂ ಅವರು ಸ್ತೋತ್ರಾದಿಗಳಂ ಮಾಡುವಲ್ಲಿ ಭೀಮಾದಿಗಳಾಲೋಚಿಸಿದರದೆಂತೆನೆ,- ಸರ್ವಾತೀತನಾಗಿ ಚಿನ್ಮಾತ್ರಸ್ವರೂಪನಾಗಿರುವ ಆತ್ಮನಿಗೆ ಸ್ವತಸ್ಸತ್ತೆ ಇಲ್ಲದ ಜಡವಾದ ದೇಹದ ಸಂಬಂಧವು ಎಂತು ಸಂಭವಿಸೀತು? ದೇಹಸಂಬಂಧವೆ ಇಲ್ಲದಿರುವಲ್ಲಿ ಅದಕ್ಕೆ ಸಂಭವಿಸಿದ ಸ್ತುತಿ ನಿಂದಾದಿಗಳಿಂದಾತ್ಮನಿಗೇನು ಸಂಬಂ ಧವು? ಜಡವಾದ್ದರಿಂದ ದೇಹಕ್ಕೂ ನಿರ್ವಿಕಾರನಾದ್ದರಿಂದಾತ್ಮನಿಗೂ * ಹರ್ಷಾ ಮರ್ಷಗಳನ್ನುಂಟುಮಾಡಲಾರದ ಈ ಸ್ತುತಿ ನಿಂದೆಗಳು ದರಿದ್ರಮನೋರಥಗ ಳಂತೆ ನಿರರ್ಥಕವಾಗಿಯೇ ಹುಟ್ಟಿ ಹುಟ್ಟಿ ನಷ್ಟವಾಗುತಲಿರುವವು. ಕಾಮಾವಿ ಷ್ಟನಿಗೆ ಸೂಳೆಯರಂತೆ ಇವುಗಳು ಅಹಂಕಾರ ಪಿಶಾಚಾವಿಷ್ಟನಿಗೆ ಮೋಹ

* ಹರ್ಷ=ಸಂತೋಷ ; ಇದು ರಾಗದಫಲ.
ಅಮರ್ಷ=ಕೋಪ ; ಇದು ದ್ವೇಷದಫಲ.

ಕರವಾಗಬಹುದು. ಸ್ವೇಚ್ಛೆಯಿಂ ಕ್ರೀಡಿಸುವ ಆತ್ಮನು ಪ್ರಕೃತವಾದ ಕ್ರೀಡೆ ಗೋಸುಗ ಸ್ವಕಲ್ಪಿತವಾದ ಜಡದೇಹದೊಡನೆ ತಾದಾತ್ಮ್ಯವಂ ಪಡೆಯುವಲ್ಲಿ ಗಂಧರ್ವನಗರದಂತೆ ಅಕಸ್ಮಿಕವಾಗಿ ಅಹಂಕಾರ ಪುಟ್ಟುವದು. ಸ್ವಪ್ನದಿಂ ಸ್ವಪ್ನಾಂತರದಂತೆ ಈ ಅಹಂಕಾರದಿಂ ಮಮಕಾರವು ಪುಟ್ಟುವದು. ಈ ಪಿಶಾಚಗಳು ಪುಟ್ಟುವದಕ್ಕೆ ಸ್ವಸ್ವರೂಪಾಜ್ಞಾನನೇ ಕಾರಣವಲ್ಲದೆ ಮತ್ತೊಂದಲ್ಲ. ಸ್ವರೂಪವಿಚಾರವಿಲ್ಲದೆ ದೇಹವೇ ತಾನೆಂದು ಅಭಿಮಾನಿಸುವ ಅಜ್ಞಾನಿಯೇ ಸ್ವೇಷ್ಟಾರ್ಥ ಲಾಭಕ್ಕೋಸುಗ ಸ್ತುತಿ ನಿಂದೆಗಳಂ ಮಾಡುವನು. ಇದಂ ತಿಳಿದವರು ಪರಿಗ್ರಹಿಸಲಾರರು ಎಂದು ಆಲೋಚಿಸುವ ಭೀಮಾದಿಗಳಿಗೆ ಅಹಂಕಾರ ವುಂಟಾಗಲಿಲ್ಲ. ಕರ್ತೃ‌ಕರಣ ಕಾರ್ಯ ಭೋಕ್ತೃ ಭೋಗ ಭೋಜ್ಯ ಜ್ಞಾತೃ ಜ್ಞಾನ ಜ್ಞೇಯಗಳೆಂಬ ತ್ರಿಪುಟಿಗಳಲ್ಲಿ ಮಣಿಗಳಲ್ಲಿ ಸೂತ್ರದಂತೆ ಪರಮಾತ್ಮನು ವ್ಯಾಪಿಸಿಕೊಂಡಿರುವನು. ಅವುಗಳಲ್ಲಿರುವ ನಾಮ ರೂಪಾತ್ಮಕವಾದ ಜಡಾಂಶಕ್ಕೆ ಬ್ಯಾರೆ ಸತ್ವವಿಲ್ಲವದ್ದರಿಂದ ಸಮಸ್ತವು ಬ್ರಹ್ಮವೆಂದು ತಿಳಿದಿರುವದ್ದರಿಂದ ನಾನು ನನ್ನದೆಂಬುವದೇ ಮೊದಲಾದ ಭೇದಜ್ಞಾನವಿಲ್ಲದ ಆ ದೈತ್ಯರಿಗೆ ಆಹಾರ ವಿಹಾರ ವ್ಯವಹಾರಗಳಲ್ಲಿ ಅಭಿಮಾನವು ಆಕರ್ಮಸಂಬಂಧಿಗಳಾದ ಪುಣ್ಯಪಾಪಗಳು ಸಹಾ ಉಂಟಾಗಲಿಲ್ಲ. ಜನ್ಮಾಂತರ ಕರ್ಮವಾಸನೆಗಳಿಲ್ಲದೆ ಈ ಶರೀರವು ಕಲ್ಪನಾಮಾತ್ರದಿಂ ಸಿದ್ಧವಾಗಿರುವದೆಂಬ ಜ್ಞಾನ ದಾರ್ಢ್ಯದಿಂದವರ ಶರೀರಗಳು ದೇವತೆಗಳಿಂ ಕತ್ತರಿಸಲ್ಪಟ್ಟಾಗ್ಯೂ ಅವರ ಇಚ್ಛಾಮಾತ್ರದಿಂ ತತ್‌ಕ್ಷಣದಲ್ಲೇ ಉಂಟಾದವು. ಇಂತು ಯಾವ ವ್ಯಥೆಯೂ ಇಲ್ಲದೆ ಆಡುವ ಮಕ್ಕಳಂತೆ ಯುದ್ಧವಂ ಮಾಡುವ ಆ ದೈತ್ಯರಿಗೆ ನಾಮ ರೂಪಗಳೆರಡೂ ಅಜ್ಞಾನಕಲ್ಪಿತವೆಂಬ ಜ್ಞಾನವು ದೃಢವಾಗಿದ್ದದ್ದರಿಂದ ಹೊಡೆಯುವದು ಹೊಡಶಿಕೊಳ್ಳುವದು ಸಹಾ ವಿನೋದವಾಗಿದ್ದುದು. ಇಂತಿರುವ ಆ ದೈತ್ಯರ ಹೊಡತವಂ ತಡೆಯಲಾರದೆ ದಿಕ್ಕೆಟ್ಟು ಓಡಿದ ದೇವತೆಗಳೆಲ್ಲರೂ ಒಟ್ಟಾಗಿ ಅಶರಣ ಶರಣ್ಯನಾದ ಶ್ರೀ ನಾರಾಯಣನೇ! ನಮಗೀಗ ಶರಣನೆಂದು ನಿಶ್ಚಯಿಶಿ ಮಕ್ಕಳು ತಾಯಂ ಸ್ಮರಿಸುವಂತೆ ಕರುಣಾನಿಧಿಯಾದ ಆ ಲಕ್ಷ್ಮೀಪತಿಯನ್ನ ಚಿಂತಿಸುತ್ತಾ ಶರೀರದಲ್ಲಣಗದೆ ಸುತ್ತಮುತ್ತಲು ಪೊರಮಡುವ ಕರುಣಾರಸ ಪ್ರವಾಹಗಳಂತಿರುವ ತೆರೆಗಳಿಂದನಾಥರಾಗಿ ಅಲೆಯುವ ಜನರಂ ಕರೆಯುವಂತೆ ಮೊರೆಯುತ್ತಿರುವ ಕ್ಷೀರವಾರಿಧಿಯಂ ಶೇರಿದರು. ಹಿಮವತ್ಪರ್ವತದಿಂ ಬಿದ್ದ ಗಂಗೆಯಂತೆಯು ಗಾಳಿಬಡಿದ ಮೇಘಮಾಲೆಯಂತೆಯೂ ಓಡಿಬಂದ ಆ ದೇವಸೇನೆಯು ಪಟಿಂಗರ ತುಂಟತನವಂ ಪ್ರಾಣಕಾಂತನಿಗೆ ತಿಳುಪುವ ಪತಿವ್ರತೆಯಂತೆ ಆ ಜಗನ್ನಾಥನಿಗೆ ದೈತ್ಯರ

ಬಾಧೆಯಂ ತಿಳುಪಲು ಕರುಣಾನಿಧಿಯಾದ ಆ ನಾರಾಯಣನು ತಾಪಾರ್ಥವಾದ ಸಸ್ಯಮಾಲೆಯಂ ವರ್ಷಾಕಾಲದ ಮೇಘವು ವೃಷ್ಟಿಯಿಂ ಸಂತೋಷಪಡಿಸುವಂತೆ ಕರುಣಾಕಟಾಕ್ಷಗಳಿಂ ದೇವಸೇನೆಯಂ ಸಮಾಧಾನಪಡಿಸಿದನು. ಬಳಿಕ ಆ ಗರುಡವಾಹನನು ದೇವಸೇನೆಗಳೊಡನೆ ಪೊರಮಟ್ಟು ಶಂಬರನೊಡನೆ ಅತಿಭಯಂಕರವಾದ ಯುದ್ಧಮಂ ಮಾಡಿ ಅವನಂ ಸಂಹರಿಸಲು ಆ ಶಂಬರನು ದ್ವೇಷಿಯಾದಾಗ್ಯೂ ವೈರಾವೇಶದಿಂದಾ ಭಗವಂತನನ್ನೇ ಧ್ಯಾನಿಸುತ್ತಿದ್ದದ್ದರಿಂದ ಅವನಲೋಕವನ್ನೇ ಹೊಂದಿದನು. ಸರ್ವಾತ್ಮನಾದ ಆ ಪರಮಾತ್ಮನ ಇಚ್ಛೆಯಿಂದ ಭೀಮಭಾಸ ದೃಢರಿಗೆ ನಾವು ಯುದ್ಧಾರ್ಥವಾಗಿಯೇ ಶರೀರವಂ ಧರಿಶಿದೆವು. ರಾಜಾಜ್ಞೆಯಿಂದಿದುವರಿಗೂ ಯುದ್ಧಮಂ ಮಾಡಿದೆವು. ಈಗ ಅವನೇ ಶರೀರವಂ ತ್ಯಜಿಶಿದ ಬಳಿಕ ನಿರರ್ಥಕವಾದ ಈ ಶರೀರದಿಂದೇನೆಂದು ತೋರಲು ಸಂಕಲ್ಪಸಿದ್ಧರಾದ ಆ ದೈತ್ಯರ ಶರೀರಗಳು ಆ ಕ್ಷಣವೇ ನೆಲದಮೇಲೆ ಬಿದ್ದವು. ಅಂತಃಕರಣ ಬಾಹ್ಯಕರಣಗಳು ಸ್ವಸ್ವಾಭಿಮಾನಿ ದೇವತೆಗಳಂ ಸೇರಲು ಗಾಳಿಯಿಂಪೊರಕ್ಕೆಬಂದಿದ್ದ ತೆರೆಗಳು ಮರಳಿ ಸಮುದ್ರಮಂ ಸೇರುವಂತೆ ಅವರ ಚೈತನ್ಯಗಳು ಪರಮಾತ್ಮನಲ್ಲಿ ಐಕ್ಯಮಂ ಪಡೆದವು. ಭೀಮಭಾಸದೃಢರಿಗೆ ಚಿತ್ತಚಾಂಚಲ್ಯವಿಲ್ಲದ್ದರಿಂದೀಪರಿಯಾಗಿ ಕೈವಲ್ಯವಾದುದಾದ್ದರಿಂದ ದಾಮವ್ಯಾಳ ಕಟರಂತೆ ನೀನು ಚಪಲನಾಗದೆ ಭೀಮಭಾಸ ದೃಢರಂತೆ ಜ್ಞಾನಸ್ಥೈರ್ಯದಿಂ ಸರ್ವೋತ್ತಮವಾದ ಸಾಮ್ರಾಜ್ಯವಂ ಪಡೆಯುವನಾಗೆಂದು ವಶಿಷ್ಠಮುನಿಯು ಪೇಳಿದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯೊಳ್ ಸ್ಥಿತಿಪ್ರಕರಣದಲ್ಲಿ ಮೂರನೇ ತರಂಗಕ್ಕೆ ಮಂಗಳಮಹಾ ಶ್ರೀ ಶ್ರೀ ಜಯತು.

ಶ್ರೀ ಗಣೇಶ ಶಾರದಾಗುರುಭ್ಯೋನಮಃ.

## ಅವಿದ್ಯಾವಿಲಾಸ ನಿರೂಪಣವು.

ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನಿಂತೆಂದನು. ಎಲೈ ರಘುಕುಲೋತ್ತಂಸನೇ! ನೀನು ಬುದ್ಧಿಶಾಲಿಯಾದ್ದರಿಂದ ಪೂರ್ವದಲ್ಲಿ ಪಿತಾಮಹನು ಪೇಳಿದ್ದ ದಾಮಾದಿಗಳ ಕಥೆಯಂ ನಿನಗೆ ಪೇಳಿದೆನು. ಅವಿದ್ಯಾವಿಲಾಸದಿಂ ವಿಷಯಾಭಿಮುಖವಾದ ಮನಮಂ ಜಯಿಸಿದವರೇ ಶೂರರೆನಿಸುವರು. ಭೋಗಾಪೇಕ್ಷೆಯೇ ಬಂಧವು. ಆ ಅಪೇಕ್ಷೆ ಇಲ್ಲದ್ದೇ ಮೋಕ್ಷವು, ಇಚ್ಛಾತ್ಮಕವಾದದ್ದೇ ಮನವಾದ್ದರಿಂದ ಇಚ್ಛೆಪಡದಂತೆ ವೈರಸ್ಯಮಂ ತೋರಿಶಿ ವಿಷಯ

ಗಳಿಂದ ಹಿಂತಿರುಗಿಸುವದೇ ಮನಕ್ಕೆ ನಿಗ್ರಹನೆನಿಸುವದು. ಭೋಗಪದಾರ್ಥ
ಗಳು ಮನವಂ ಕಟ್ಟಿ ಸೆಳೆಯುವದ್ದರಿಂ ವಿಷವೆನಿಸುವವು. ಭೋಗವಾಸನೆಯಿಂ
ಭೋಗಿಸಲ್ಪಡುವ ಈ ವಿಷಯಗಳು ಪರಿಪರಿಯಾದ ಅನರ್ಥಗಳನ್ನುಂಟುಮಾ
ಡುವವು. ಭೋಕ್ತೃ ಭೋಗ ಭೋಜ್ಯಗಳೆಲ್ಲವೂ ಬ್ರಹ್ಮಾಭಿನ್ನವೆಂಬ ತತ್ವ
ಜ್ಞಾನವು ಸ್ಥಿರವಾಗಿರುವಲ್ಲಿ ಈಶ್ವರಾಜ್ಞೆಯಿಂ ಭೋಗವು ಸಂಭವಿಸಿದಾಗ್ಯೂ
ಅದು ದುಃಖಕರವಾಗಲಾರದು. ವಾಸನೆಯಿಂ ಚಲಿಸುವ ಮತಿಯು ಮುಳ್ಳು
ಬೀಜದಿಂ ತುಂಬಿದ ಭೂಮಿಯಂತೆ ದುಃಖ ಫಲಪ್ರದವಾಗುವದು. ವಾಸನೆ
ಗಳಂ ತ್ಯಜಿಸುವ ಮತಿಯು ರಾಗದ್ವೇಷಗಳಿಲ್ಲದೇ ಶಾಂತವಾಗಿ ಸುಬೀಜವಾದ
ಭೂಮಿಯಂತೆ ಜ್ಞಾನಸಮಾಧಿ ಮೊದಲಾದ ಶುಭ ಫಲಗಳಂ ಕೊಡುವದು. ವಿಷ
ಯಗಳಲ್ಲಿ ವೈರಸ್ಯ ತೋರಿ ಮನಸ್ಸಿಗೆ ಮೋಕ್ಷಾಪೇಕ್ಷೆಯುಂಟಾಗಲು ಜಡ
ವಾದ ದೇಹವೇ ತಾನೆಂಬ ಮಿಥ್ಯಾಜ್ಞಾನ ಮಣಗುವದು. ಶರತ್ಕಾಲದ ಗಗನದಲ್ಲಿ
ನೈರ್ಮಲ್ಯದಂತೆ ರಾಗ ದ್ವೇಷಗಳಿಲ್ಲದ ಮನದಲ್ಲಿ ಪ್ರಸಾದ ಉಂಟಾಗುವದು.
ವಿಚಾರದಿಂ ನಿತ್ಯಾನಿತ್ಯವಿವೇಕ ಉಂಟಾಗಲು ಚಿವರಿನಲ್ಲಿ ಮುತ್ತಿನಂತೆ ಮನದಲ್ಲಿ
ಧೈರ್ಯ ಉಂಟಾಗುವದು. ವಸಂತದಲ್ಲಿ ಚಂದ್ರನಂತೆ ಮನದಲ್ಲಿ ಸ್ಥೈರ್ಯವು ಪ್ರಕಾ
ಶಿಸಲು ಸತ್ಸಂಗಗಳೆಂಬ ಫಲವೃಕ್ಷಗಳು ಶೋಭಿಸುವವು. ಆನಂದವೆಂಬ ಮಕ
ರಂದವಂ ಕರೆವ ಸಮಾಧಿಯೆಂಬ ಸುಪುಷ್ಪವು ವಿಕಸಿತವಾಗುವದು. ಅಖಂಡ
ಜ್ಞಾನರೂಪವಾದ ಆ ಸಮಾಧಿಯುದಯಿಸುವಲ್ಲೇ ಬ್ರಹ್ಮಭಿನ್ನವಾದ ಪದಾರ್ಥ
ವಿದೆಯೆಂಬ ಅಜ್ಞಾನವಣಗುವದು. ಅದರ ಸಂಬಂಧಿಯಾದ ಶಾಸ್ತ್ರ ಸಂದೇಹ
ಗಳು ಮನಸ್ಸಿನ ಕಲ್ಪನೆಗಳು ಕಾಮಕ್ರೋಧಾದಿ ವಾಸನೆಗಳು ರಾಗದ್ವೇ
ಷಾಭಿನಿವೇಶಗಳು ಸಹ ಓಡಿಪೋಗುವವು. ಬಳಿಕ ಸಮಾಧಿಬಲದಿಂ ವಿಕಲ್ಪ
ಗಳಂ ಬಿಟ್ಟ ಮನವು ದ್ವಿತೀಯ ಪದಾರ್ಥ ಸ್ಫೂರ್ತಿರೂಪವಾದ ಸಂಕಲ್ಪವೆಂಬ
ಸ್ವಶರೀರವನ್ನೇ ಬಿಡುವದು. ಹೀಗೆ ಮನಸ್ಸಿಗೆ ನಾಶವಾಗುವದೇ ಶ್ರೇಯಸ್ಸೆ
ನಿಸುವದು. ದ್ವಿತೀಯ ಪದಾರ್ಥಾಪೇಕ್ಷೆಯಿಂ ಚಿದ್ವಸ್ತುವು ಅಖಂಡವಾದ ಸ್ವ
ರೂಪವಂ ಮರೆಯುವಲ್ಲಿ ಸಂಕಲ್ಪರೂಪದಿಂದೀಮನವುಂಟಾದುದರಿಂದ ಸರ್ವ
ಕಾಲದಲ್ಲೂ ವಿಚಿತ್ರವಾದ ಕಲ್ಪನೆಯಂ ಮಾಡುತ್ತಿರುವದು. ದೃಢವಾದ ಆ
ಕಲ್ಪನೆಯೇ ವಾಸನೆಯೆನಿಸುವದು. ಅದರಿಂದಲೇ ಪುತ್ರ ಮಿತ್ರ ಕಳತ್ರ ಬಂಧು
ಸಹೋದರ ಗೃಹ ನಗರ ಭೂಮ್ಯಾಕಾಶ ಮೊದಲಾದವುಗಳಿಂ ತುಂಬಿರುವ ಈ
ಪ್ರಪಂಚ ಉಂಟಾಗಿರುವದಲ್ಲದೇ ಯಾವ ಪದಾರ್ಥವೂ ಇಲ್ಲವೆಂದು ನಿಶ್ಚಯಿ
ಸುವನಾಗು. ವಾಸನಾಮಯವಾದ ಮನವು ಭಾವಾನುಸಾರವಾಗಿ ತಾನೇ ಗೋ

ಚರವಾಗುವದಾದ್ದರಿಂದ ಸಮಸ್ತ ಪ್ರಪಂಚವು ಮನೋಮಯವೆನಿಸುವದು. ವ್ಯಾಪಕವಾದ ಸ್ವಭಾವದಿಂ ಮನವಂ ಹೊಂದಿದ ಚಿದ್ವಸ್ತುವೇ ಜೀವನೆನಿಸುವದು. ಈ ಜೀವನು ತೆರಳೇ ಹುಳುವು ಗೂಡಂಕಟ್ಟಿಕೊಳ್ಳುವಂತೆ ಮನೋನುಸಾರದಿಂದೀ ದೇಹವಂ ಕಲ್ಪಿಸಿಕೊಳ್ಳುವನು. ಬಳಿಕ ಈ ದೇಹವೇ ತಾನೆಂದು ವಿಟನು ವೇಶ್ಯೆಯನ್ನಭಿಮಾನಿಸುವಂತೆ ಪರಿಗ್ರಹಿಶಿ ಅದರ ಸುಖದುಃಖಗಳಿಗೆ ಪಾತ್ರನಾಗುವನು. ದೇಹವು ಖಂಡಿತವಾದರೂ ಆತ್ಮನಿಗೆ ನಾಶವಿಲ್ಲದ್ದರಿಂದ ದೇಹ ನಾನೆಂಬುವದು ಭ್ರಾಂತಿಯೆನಿಸುವದು. ದೇಹವೇ ತಾನಾದಲ್ಲಿ ತನ್ನ ದೇಹವೆಂಬ ಮಾತೇ ಪುಟ್ಟದಿರಬೇಕು. ಈ ಮಾತೇ ಭ್ರಾಂತಿಸಿದ್ಧವೆನ್ನುವದರಲ್ಲಿ ದೇಹಬಿದ್ದಿರುವಲ್ಲಿ ಮನಸ್ಸಿಗೆ ದೇಶಾಂತರಗಮನವು ಅಸಿದ್ಧವಾಗಬೇಕು. ದೇಶಾಂತರಗಮನಾದಿಗಳು ಸುಳ್ಳೆನ್ನುವಲ್ಲಿ ಮನಸ್ಸಿನ ಚಲನದಿಂದುಂಟಾದ ವಿಕಾರವು ದೇಹದಲ್ಲಿ ಕಾಣದಿರಬೇಕು. ಮದಕರವಾದ ದ್ರವ್ಯಗಳ ಯೋಗದಿಂ ಮದಜನಕವಾದ ಶಕ್ತಿಯುಂತೆ ಪೃಥಿವ್ಯಾದಿಭೂತ ಚತುಷ್ಟಯಯೋಗದಿಂ ಚೈತನ್ಯ ಉಂಟಾಗುವದು. ಅದು ಶರೀರಕ್ಕೆ ಅಭಿನ್ನವಾದ್ದರಿಂದ ಅದರ ವಿಕಾರವು ಶರೀರದಲ್ಲಿ ಕಾಣ್ಬರುವದೆನಲು ಜನ್ಮಾಂತರವಾಸನೆಯಿಂ ಪ್ರಾಣಿಗಳಿಗೆ ಜನನವಾದಕೂಡಲೇ ಉಂಟಾಗುವ ಸ್ತನ್ಯಪಾನಾಸಕ್ತಿಯು ಇಲ್ಲದಿರಬೇಕು. ಗರ್ಭದಲ್ಲೇ ಚೈತನ್ಯ ಉಂಟಾಗುವದ್ದರಿಂದ ವಸ್ತುಸ್ವಭಾವದಿಂ ಸ್ತನ್ಯಪಾನಪ್ರವೃತ್ತಿಯುಂಟಾಗುವದೆಂದರೆ ಇದು ಸಮಸ್ತ ಶಿಶುಗಳಲ್ಲೂ ಸಾಧಾರಣವಾಗಿರಬೇಕು. ದ್ರವ್ಯಶುದ್ಧಿ ಇದ್ದಂತೆ ಚೈತನ್ಯ ಉಂಟಾಗುವದು. ದ್ರವ್ಯದಲ್ಲಿ ಸತ್ವ ಕಡಮೆಯಾದರೆ ಚೈತನ್ಯವು ತಗ್ಗುವದು. ದ್ರವ್ಯ ನಿಸ್ಸಾರವಾಗಲೂ ಚೈತನ್ಯವು ಶಾಂತವಾಗುವದು. ಸರ್ವಥಾ ದೇಹ ಭಿನ್ನವಾದ್ದು ಚೈತನ್ಯವೆಂದು ಅನುಭವಗೋಚರವಾಗುವದಿಲ್ಲವೆಂದರೆ, ಚಿಜ್ಜಡಗಳಿಗೆ ಭೇದವು ಕಾಣದಿದ್ದಾಗ್ಯೂ ಚಿತ್ತು ವ್ಯಾಪಕವಾಗಿ ಕಾಣುವದ್ದರಿಂದಲೂ ಜಡವು ವ್ಯಾಪ್ಯವಾಗಿರುವದ್ದರಿಂದಲೂ ಜಡಕ್ಕೆ ಚಿತ್ತು ಕಾರಣವಾಗುವದಲ್ಲದೇ ಚಿತ್ತಿಗೆ ಜಡವು ಕಾರಣವಾಗಲಾರದು. ಆದ್ದರಿಂದ ಚಿತ್ತೇ ಮುಖ್ಯವೆಂದು ಪೇಳುವ ಶಾಸ್ತ್ರಗಳು ಪ್ರಮಾಣವೆನಿಸುವವು. ಇದಕ್ಕೆ ವಿರುದ್ಧವಾದ ಶಾಸ್ತ್ರವು ಅನುಭವವು ಸಹ ಭ್ರಾಂತಿಸಿದ್ಧವೆನಿಸುವವು. ಪ್ರಪಂಚವೆಲ್ಲವು ಮನೋಮಯವಾದ್ದರಿಂದಲೇ ಮನಸ್ಸಿನ ವಾಸನೆಯಿದ್ದಂತೆ ತೋರುವದು. ಬೀಜಕ್ಕೆ ಎಂತಹ ರಸವು ಸೇರುವದೋ ಆ ರಸದ ಫಲವೇ ಪುಟ್ಟುವದು. ಇದೇಪ್ರಕಾರ ಮನವು ವಾಸನೆ ಇದ್ದಂತೆ ಫಲಿಸುವದಾದ್ದರಿಂದ ಮನೋಮಯನಾದ ಜೀವನು ಬ್ರಹ್ಮ ತಾನೆಂದು ಭಾವಿಸುತ

ಬ್ರಹ್ಮೈಕ್ಯವಂ ಪಡೆವನು. ಪ್ರಪಂಚಾಂತರ್ಗತನು ತಾನೆಂದು ಭಾವಿಸುತ ಸಂಸಾರಿಯಾಗುವನು. ಸರ್ವವು ಬ್ರಹ್ಮಮಯವಾದ್ದರಿಂದ ಬ್ರಹ್ಮ ತಾನೆಂದು ಭಾವಿಸುವದೇ ಪರಮಾರ್ಥವು. ಅದರಿಂ ಹಾಗೆ ಭಾವಿಸುವರಿಗೆ ಉತ್ತಮಗತಿ ಬರುವದು. ಪ್ರಕಾರಾಂತರದಿಂ ಭಾವಿಸುವದು ಅಸಂಗತವಾದ್ದರಿಂದ ಅದರಿಂ ದಧೋಗತಿ ಬರುವದು. ಬ್ರಹ್ಮವು ಪೂರ್ಣವಾಗಿರುವಲ್ಲಿ ನಾನೆಂಬುವದಕ್ಕೆ ಅವಕಾಶವಿಲ್ಲದ್ದರಿಂದ ಬಂಧಮೋಕ್ಷಾದಿ ಕಲ್ಪನೆಗಳೆಲ್ಲವೂ ಮಾಯಿಕವೆನಿಸುವವು. ಈ ಕಲ್ಪನೆಗಳೆಲ್ಲವು ಮನಸ್ಸಿನದಾದ್ದರಿಂದ ಮನಸ್ಸಿರುವರಿಗೆ ಮೋಹ ತಪ್ಪದೆಂದು ಪೇಳುವರು. ಮನಸ್ಸಿಗೆ ವಿಚಾರದಿಂ ಜಗದ್ವಾಸನೆ ತಪ್ಪಲು ಬಗೆಯುವದ್ದರಿಂದ ಬಟ್ಟೆಗೆ ನೈರ್ಮಲ್ಯದಂತೆ ಪ್ರಸಾದ ಉಂಟಾಗುವದು. ಆಗ ಮನಸ್ಸಿಗೆ ಬ್ರಹ್ಮಭೇದವು ಸ್ಫುಟವಾಗುವದು. ಇದೇ ಮನೋನಾಶವೆನಿಸುವದು. ಇದು ಪ್ರಾಜ್ಞನಿಗಲ್ಲದೇ ಅಜ್ಞನಿಗೆ ಎಂದಿಗೂ ಸಂಭವಿಸದು. ಈ ಮನಸ್ಸಿಗೆ ಬ್ರಹ್ಮಭಾವ ಉಂಟಾಗಲು ಜಗವೆಲ್ಲವು ಬ್ರಹ್ಮವಾಗುವದು. ಬ್ರಹ್ಮವೇ ಜಗದ್ರೂಪದಿಂ ಪ್ರಕಾಶಿಸುವದೆಂದು ಭಾವಿಸುವನಿಗೆ ಸರ್ವವು ಪರಮಾನಂದ ಸ್ವರೂಪವಾಗುವದು. ಪ್ರಕಾರಾಂತರದಿಂ ಭಾವಿಸುವನಿಗೆ ಸರ್ವವೂ ದುಃಖಕರವಾಗುವದು. ವಾಸನೆಯಿಂದ ಜಡಭಾವವನ್ನು ವಿಚಾರದಿಂ ಬ್ರಹ್ಮಭಾವವನ್ನು ಹೊಂದುವದ್ದರಿಂ ಪರಾಪರಸ್ವರೂಪವಾದ ಮನದರೀತಿಯಂ ತಿಳಿವವನು ಎಂದಿಗೂ ದುಃಖಪಡಲಾರನು. ದೇಶ ಕಾಲ ವಸ್ತು ಪರಿಚ್ಛೇದವಿಲ್ಲದ ಬ್ರಹ್ಮದಲ್ಲಿ ಭೇದವು ಅಸತ್ಯಾದ್ದರಿಂದ ಅದಂ ಭಾವಿಸುವನು ದುಃಖಪಡುವನು. ಅದಂಬಿಟ್ಟವನು ಸಂತೋಷಪಡುವನು. ಎಲ್ಲೈ ಶುಭಮತಿಯೆ ಆತ್ಮನ ಸಂಕಲ್ಪದಿಂ ಕಲ್ಪಿತವಾದ್ದರಿಂದ ಮನಸ್ಸು ಅಸತ್ತೆನಿಸುವದು. ಅಸತ್ಪದಾರ್ಥ ನಾಶವು ಸುಖಕಾರಣವಾದ್ದರಿಂದ ಮನೋನಾಶಕ್ಕೆ ದುಃಖಪಡಲಾಗದು. ಪ್ರೀತಿವಿಷಯನಲ್ಲದ ಬಂಧುವಿನಂತೆ ಸ್ಥೂಲಸೂಕ್ಷ್ಮ ಕಾರಣರೂಪವಾದ ದೇಹವಂ ನೋಡುವನಿಗೆ ಅವರ ಸುಖಾಸುಖಗಳು ಸಂಭವಿಸಲಾರವು. ದ್ರಷ್ಟೃ ದೃಶ್ಯಗಳಿಗೆ ಮಧ್ಯವಲ್ಲಿರುವ ದರ್ಶನದಲ್ಲಿ ಮನವನ್ನಿಟ್ಟು ಆಲೋಚಿಸುವನಿಗೆ ಸ್ವಸ್ವರೂಪವು ಗೊತ್ತಾಗುವದು. ಅದೆಂತೆಂದರೆ:—ಸಾಕ್ಷಿಭಾವದಿಂ ಸರ್ವವನ್ನೂ ನೋಡುವನಾದ್ದರಿಂದ ಪರಮಾತ್ಮನೇ ದ್ರಷ್ಟೃನೆನಿಸುವನು. ಇವನ ಜ್ಞಾನೇಚ್ಛಾ ಕ್ರಿಯಾಶಕ್ತಿಗಳ ಪ್ರಕಾಶಗಳೇ ಸತ್ವರಜಸ್ತಮೋ ಗುಣಗಳೆನಿಸುವವು. ಇವುಗಳಲ್ಲಿ ಸೇರಿದ ದ್ರಷ್ಟೃಗೆ ದ್ರಷ್ಟೃ ದರ್ಶನ ದೃಶ್ಯಗಳೆಂದು ಸಂಜ್ಞೆಗಳುಂಟಾಗಿರುವವು. ಇಲ್ಲಿ ದ್ರಷ್ಟೃವೇ ಆತ್ಮನು ದರ್ಶನವೇ ಮನವು ದೃಶ್ಯವೇ ಪ್ರಪಂಚವೆಂದು ತಿಳಿಯುವ

ನಾಗು. ಶ್ರೋತ್ರವು ಶಬ್ದವನ್ನೇ ಗ್ರಹಿಸುವದು. ಚಕ್ಷುವು ರೂಪವನ್ನೇ ಗ್ರಹಿಸುವದು. ರಸನವು ರಸವನ್ನೇ ಹಿಡಿವದು. ಹೀಗೆ ಸಮಸ್ತವು ಸ್ವಾಂಶಗಳನ್ನೇ ಹಿಡಿಯುವದಾದ್ದರಿಂದ ಬ್ರಹ್ಮವು ಬ್ರಹ್ಮವನ್ನೇ ನೋಡುವದಲ್ಲದೇ ಮತ್ತೊಂದು ನೋಡಲಾರದು. ಜಗವೆಲ್ಲವೂ ಬ್ರಹ್ಮಜ್ಞಾನಕ್ಕೆ ವಿಷಯವಾದ್ದರಿಂದ ಸರ್ವವು ಬ್ರಹ್ಮವೆನಿಸುವದು. ಚಿತ್ತು ಚಿತ್ತನ್ನೇ ಹಿಡಿಯಲಾಗ ದ್ರಷ್ಟೃವಿಗೆ ಇದು ಇಂಥಾ ವಸ್ತುವೆಂಬ ಜ್ಞಾನವುಂಟಾಗುವದು. ಇಲ್ಲಿ ದರ್ಶನರೂಪದಿಂದಿರುವ ಮನವು ದೃಶ್ಯಾಭಿಮುಖವಾಗುವಲ್ಲಿ ದ್ರಷ್ಟೃಸ್ವರೂಪ ಜ್ಞಾನವಿಲ್ಲದ್ದರಿಂದಲೂ ದೃಶ್ಯವು ವಿಚಿತ್ರವಾದ್ದರಿಂದಲೂ, ತಾನೂ ನಾನಾರೂಪವಾಗಿ ದೃಶ್ಯಾಭಿನಿವೇಶದಿಂ ಬದ್ಧವಾಗುವದು. ದೃಶ್ಯದಲ್ಲಿ ವೈರಸ್ಯತೋರಲು ಹಿಂತಿರುಗಿದ ಮನಕ್ಕೆ ದ್ರಷ್ಟೃಸ್ವರೂಪಜ್ಞಾನದಿಂ ದೃಶ್ಯವೆಲ್ಲವು ಸುಳ್ಳೆಂಬ ಜ್ಞಾನವುಂಟಾಗುವದು. ಮನದಲ್ಲಿರುವ ವೃತ್ತಿರೂಪ ಜ್ಞಾನವು ತಪೋಮಯವಾದ ದೃಶ್ಯಸಂಬಾಧದಲ್ಲಿ ಅಜ್ಞಾನವೆಂತಲೂ ದ್ರಷ್ಟೃವಿಗೆ ಅಭಿಮುಖವಾಗುವಲ್ಲಿ ಜ್ಞಾನವೆಂತಲೂ ಹೇಳಲ್ಪಡುವದು. ದೃಶ್ಯ ಸಾಕ್ಷಾತ್ಕಾರದಲ್ಲಿ ಸ್ವರೂಪಜ್ಞಾನವು ದೃಶ್ಯಾಭಿಮುಖವಾದ ಸ್ವಶಕ್ತಿಯಿಂದ ವೃತ್ತಿರೂಪವಾದ ಜ್ಞಾನವಂ ವೃದ್ಧಿಪೊಂದಿಶಿ ದೃಶ್ಯವಿಷಯಕವಾದ ಅಜ್ಞಾನವಂ ನಿಗ್ರಹಿಶಿ ದೃಶ್ಯ ಸಾಕ್ಷಾತ್ಕಾರವನ್ನುಂಟುಮಾಡುವದು. ಮನವು ದೃಶ್ಯಕ್ಕೆ ಪರಾಙ್ಮುಖವಾಗುವಲ್ಲಿ ಸ್ವರೂಪಜ್ಞಾನವು ಸ್ವೇಚ್ಛಾಶಕ್ತಿಯಿಂದ ದ್ರಷ್ಟೃವಿಷಯಕವಾದ ವೃತ್ತಿಜ್ಞಾನವಂ ವೃದ್ಧಿಪೊಂದಿಶಿ ಅದರ ಅಜ್ಞಾನವಂ ನಿಗ್ರಹಿಸಲು ದ್ರಷ್ಟೃಸಾಕ್ಷಾತ್ಕಾರವಾಗುವದು. ಆಗ ಮನವು ಮುಕ್ತವೆನಿಸುವದು. ಸ್ವರೂಪಜ್ಞಾನವೇ ಬ್ರಹ್ಮವು ಜ್ಞಾನಾಜ್ಞಾನಗಳೆರಡೂ ಅಂತಃಕರಣವೃತ್ತಿಗಳೂ ರಾಗವೈರಾಗ್ಯಗಳೆಂದೀ ವೃತ್ತಿಗಳಿಗೆ ಅಭಿವೃದ್ಧಿಯಾಗುವದು. ಮನವು ದೃಶ್ಯಾಭಿಮುಖವಾಗುವದೇ ಬಂಧವೆಂತಲೂ ಸೃಷ್ಟಿಯೆಂತಲೂ ಹೇಳಲ್ಪಡುವದು. ಇದು ದ್ರಷ್ಟೃವಿಗೆ ಅಭಿಮುಖವಾಗುವದೇ ಮುಕ್ತಿಯೆಂತಲೂ ಪ್ರಳಯವೆಂತಲೂ ಹೇಳಲ್ಪಡುವದು. ಸ್ವರೂಪ ಜ್ಞಾನದೃಷ್ಟಿಯಿಂದ ಇತರ ಜ್ಞಾನವೆಲ್ಲವೂ ಅಜ್ಞಾನವೆನಿಸುವದಾದ್ದರಿಂದ ಸೃಷ್ಟಿಪ್ರಳಯಗಳೂ ಬಂಧಮೋಕ್ಷಗಳು ಸಹ ಸುಳ್ಳೆನಿಸುವವು. ದ್ರಷ್ಟೃ ದರ್ಶನ ದೃಶ್ಯಾನುಬಂಧದಿಂ ಜೀವನು *ಪಾರಮಾರ್ಥಿಕ ಪ್ರಾತಿಭಾಸಿಕ ವ್ಯಾವಹಾರಿಕವೆಂಬ ಹೆಸರುಗಳಂ ಪಡೆವನು. ದ್ರಷ್ಟೃ ದೃಶ್ಯಗಳ ಮಧ್ಯದಲ್ಲಿ ನಿರಾಕಾರವಾದ ದರ್ಶನದಲ್ಲಿ ದೃಷ್ಟಿಯನ್ನಿಡಲು ಮನವು ಶಾಂತವಾಗುವದು. ಆಗ ದೃಷ್ಟಿಯು ಸ್ಥಿರವಾ

*ಈ ಶಬ್ದಗಳ ಅರ್ಥಗಳು ಅಪೆಂಡಿಕ್ಸಿನಲ್ಲಿ ವಿವರಿಸಲ್ಪಡುತ್ತವೆ.

ಗುವದು. ನಿದ್ರಾಜಾಗರಗಳ ಮಧ್ಯದಲ್ಲಿರುವ ದೃಷ್ಟಿಯಂತೆ ಆನಂದವನ್ನಿದು ಉಂಟುಮಾಡುವದು. ದರ್ಶನದಲ್ಲಿರುವ ದೃಗ್ರೂಪನಾದ ಪರಮಾತ್ಮ ಜ್ಞಾನದಲ್ಲಿ ಸ್ಥಿತಿಯಂ ಪಡದ ಮನವು ಗಗನದಲ್ಲಣಗಿದ ವಾಯುವಿನಂತೆ ನಿರ್ನಾಮವಾಗುವದು. ಮನನೆಂಬ ವಾಯು ವಣಗಲು ದೇಹನೆಂಬ ಧೂಳಿ ಏಳಲಾರದು. ಮರಳಿ ಸಂಸಾರವೆಂಬ ನಗರದಲ್ಲಿ ಮೋಹವೆಂಬ ಮಂಜು ಪ್ರವರ್ತಿಸದು. ವಿಷಯಗಳೆಲ್ಲವು ಚಿತ್ರಸರ್ಪಗಳಂತೆ ಭಯಂಕರವಾಗಲಾರವು. ಮಿಥ್ಯಾಜ್ಞಾನವೆಂಬ ಮೇಘವು ಪೋಗಲು ಇಂದ್ರಿಯಗಳೆಂಬ ಕದಂಬವೃಕ್ಷಗಳಿಗೆ ವಿಕಾಸ ತಪ್ಪಲು ಮನವೆಂಬ ವನವು ಶುಷ್ಕವಾಗಲು ಆಶೆಯಂಬ ಕೆಸರಿನಬಾಧೆ ತಪ್ಪಲು ಸೂರ್ಯೋದಯದಿಂ ರಾತ್ರಿಯಂತೆ ಜ್ಞಾನೋದಯದಿಂ ಮಾಯೆಯಣಗಲು ಅಖಂಡಾನಂದ ಉಂಟಾಗುವದು. ಆಗ ದೃಶ್ಯವೆಲ್ಲವೂ ಬ್ರಹ್ಮಸ್ವರೂಪವಾಗಿ ಪ್ರಕಾಶಿಸುವದು. ಈ ಜ್ಞಾನವು ಸ್ಥಿರವಾಗಲು ಪುರುಷನು ಜೀವನ್ಮುಕ್ತನೆನಿಸುವನು. ಎಂದು ವಸಿಷ್ಠನು ಪೇಳುವಲ್ಲಿ, ಎಲೈ ಗುರುವೇ ವಿಶ್ವಾತೀತನಾದ ಪರಮಾತ್ಮನಲ್ಲಿ ವಿಶ್ವವು ಹ್ಯಾಗೆ ಇರುವದು ಇದಂ ನನ್ನ ಜ್ಞಾನ ವೃದ್ಧಿಗೋಸುಗ ಪುನಃ ಪೇಳುವನಾಗೆಂದು ಶ್ರೀರಾಮನು ಬೆಸಗೊಳ್ಳಲು ಮರಳಿ ವಸಿಷ್ಠನಿಂತೆಂದನು. ಎಲೈ ರಾಮಭದ್ರನೇ ಗಾಳಿ ಇಲ್ಲದಾಗ ನಿಶ್ಚಲವಾದ ಜಲದಲ್ಲಿ ಭವಿಷ್ಯತ್ತಾದ ತರಂಗಗಳಂತೆಯೂ ಬೀಜದಲ್ಲಿ ವೃಕ್ಷದಂತೆಯೂ ಪರಮಾತ್ಮನಲ್ಲಿ ಜಗವಿರುವದು. ಇದು ಇದ್ದಾಗ್ಯೂ ಆಕಾಶಕ್ಕಿಂತಲೂ ಪರಮಾತ್ಮನು ಸೂಕ್ಷ್ಮನಾದ್ದರಿಂದ ಗೋಚರನಾಗುವದಿಲ್ಲ. ಆವರಣದಲ್ಲಿದ್ದಾಗ ಪ್ರತಿಬಿಂಬವಿಲ್ಲದಿರುವದ್ದರಿಂದಲೂ ನಿರಾವರಣವಾಗಿದ್ದಾಗ ಪ್ರತಿಬಿಂಬ ಕಾಣುವದ್ದರಿಂದಲು ಮಣಿಯಲ್ಲಿ ಪ್ರತಿಬಿಂಬ ಗ್ರಹಣ ಯೋಗ್ಯತೆ ಇರುವದೆಂದು ತಿಳಿಯಬರುತ್ತೆ. ಹೀಗೆ ಆತ್ಮನಿಂ ಸೃಷ್ಟಿಕಾಲದಲ್ಲಿ ಜಗ ಉಂಟಾಗುವದ್ದರಿಂದಲೂ ಪ್ರಳಯ ಸೃಷ್ಟಿಗಳ ಮಧ್ಯದಲ್ಲಿ ಆತ್ಮನಲ್ಲಿ ಜಗತ್ತಿನ ಸ್ಥಿತಿ ಕಾಣದಿರುವದ್ದರಿಂದಲೂ ಜಗವಂ ಸೃಜಿಸುವ ಯೋಗ್ಯತೆ ಆತ್ಮನಿಗಿರುವದೆಂದು ತಿಳಿಯಬರುತ್ತೆ. ಆ ಯೋಗ್ಯತೆ ಇರೂವರಿಗೆ ಜಗತ್ತಿಧೆಯೆಂತಲೇ ತಿಳಿಯತಕ್ಕದ್ದು. ಆ ಯೋಗ್ಯತೆಯೇ ಜಗತ್ತಿಗೆ ಕಾರಣವಾದ್ದರಿಂದ ಜಗದ್ಬೀಜವಾದ ಶಕ್ತಿಯೆನಿಸುವದು. ಅದು ಜಗದ್ರೂಪದಿಂ ದೃಶ್ಯವಾಗುವದ್ದರಿಂದ ಸತ್ಯವೆಂತಲೂ ಇದರ ಸತ್ತೆಯು ಆತ್ಮಸತ್ತೆಗೆ ಅಭಿನ್ನವಾದ್ದರಿಂದ ಅಸತ್ಯವೆಂತಲೂ ಪೇಳಲ್ಪಡುವದು. ಮೋಡದಿಂ ಮುಗಿಲಿನಂತೆ ಗುಣಾತ್ಮಕವಾದ ಈ ಶಕ್ತಿಯಿಂದಾತ್ಮನು ಆಧಾರವಾದಾಗ್ಯೂ ಅಸಂಗಭಾವದಿಂ ವಿಕಾರಿಯಾಗಲಾರನು. ಸೂರ್ಯಕಿರಣಗಳು ಜಲವಂ ವ್ಯಾಪಿಸಿಕೊಂಡಿ

ರುವಂಥಾಪಾವಾಗ್ಯೂ ಕಾಣಿಸಿಕೊಳ್ಳುವದಿಲ್ಲ. ಆ ಕಿರಣಗಳು ಮೋಘದಲ್ಲಿ ರುವ ಜಲದಲ್ಲಿ ಪ್ರತಿಬಿಂಬಿಸಲು ಬಿಲ್ಲಿನಂತೆ ಕಾಣ್ಬರುವವು. ಹೀಗೆ ಸರ್ವವ್ಯಾಪಕವಾಗಿದ್ದರೂ ಅಗೋಚರವಾಗಿರುವ ಚಿತ್ತು ಲಿಂಗಶರೀರದಲ್ಲಿ ಕಾಣಿಶಿಕೊಳ್ಳುವದು. ನಾನು ರೂಪಸಂಕಲ್ಪಾದಿಗಳಿಲ್ಲದ ಚಿತ್ತಿಗೆ ಪ್ರ್ಯಪಷ್ಟಕಾತ್ಮಕವಾದ ಲಿಂಗಶರೀರೋಪಾಧಿಯಿಂದ ಜೀವನೆಂಬ ಸಂಜ್ಞೆಯುಂಟಾಗಿರುವದು. ಈ ಚಿತ್ತು ಜ್ಞಾನಿಗಳ ಹೃದಯದಲ್ಲಿ ಸತ್ಯಜ್ಞಾನಾನಂದಸ್ವರೂಪವಾಗಿ ಪ್ರಕಾಶಿಸುತ್ತಿಪುದು. ಸಮುದ್ರದಲ್ಲಿ ತರಂಗಗಳಂತೆ ಅಲ್ಲಿ ನಾನು ನೀನೆಂಬುವದೇ ಮೊದಲಾದ ವಿಕಲ್ಪಗಳು ಚಿತ್ತಿಗೆ ಅಭಿನ್ನವಾಗಿರುವವು. ಅದರಿಂಪ್ರಾಜ್ಞರು ಚಿತ್ತಿನಿಂದುಂಟಾದ ದೃಶ್ಯಪ್ರಪಂಚವನ್ನು ಚಿತ್ತೆಂತಲೇ ತಿಳಿಯುವರು. ಅಜ್ಞರು ಬೇರೆಯಾಗಿ ಕಾಣುವದರಿಂದ ಚಿಜ್ಜಡಗಳಿಗೆ ಭೇದವನ್ನೇ ಪೇಳುವರು. ಸೂರ್ಯಾದಿಗಳಿಗೂ ಪ್ರಕಾಶಕವಾದ ಈ ಚಿತ್ತು ಅಂತಃಕರಣಾದಿಗಳಿಂ ಸರ್ವವ್ಯಾಪಾರಗಳಂ ಮಾಡುತ್ತಿದ್ದಾಗ್ಯೂ ವಿವೇಕಿಗಳಿಂದ ಅಚಂಚಲವಾಗಿಥೆಯೆಂದು ತಿಳಿಯಲ್ಪಡುವದು. ಇಲ್ಲಿ ಚಿಜ್ಜಡವಿವೇಕವಂ ಪಿಡದಿರುವ * ಕಪಿಲಾದಿಗಳು ಗಮನಾಗಮನಾದಿ ವಿಕಾರಗಳು ಅಂತಃಕರಣಾದಿಗಳೆಂದು ಪೇಳುವರು. ನಿತ್ಯಾನಿತ್ಯವಿವೇಕಿಗಳು ಚಿದ್ಭಿನ್ನವಾದ ಪದಾರ್ಥವಿಲ್ಲದ್ದರಿಂದ ಚಿತ್ಸೂರ್ಯನ ಪ್ರಕಾಶವೇ ವಿಕಾರಗಳಂತೆ ತೋರುವದೆಂದು ಪೇಳುವರು. ಪ್ರವಾಹರೂಪದಿಂ ಜಲದಂತೆಯೂ ಪ್ರಕಾಶರೂಪದಿಂ ತೇಜದಂತೆಯೂ ಪ್ರಪಂಚರೂಪದಿಂ ಚಿತ್ತೆ ಪ್ರಕಾಶಿಸುತ್ತಿರುವದು. ಪ್ರಪಂಚರೂಪದಿಂ ಪರಿಣಮಿಸುವ ಮಾಯೆಗೆ ಚಿತ್ತು ನಿಮಿತ್ತವಾಗುವದೆಂದು ಕೆಲವರು ಪೇಳುವರು. ಮಾಯಾವಿಶಿಷ್ಟವಾದ್ದರಿಂ ಚಿತ್ತೆ ಪರಿಣಮಿಸುವದೆಂದು ಕೆಲವರು ಪೇಳುವರು. ಚಿದ್ಭಿನ್ನವಾದ ವಸ್ತುವಿಲ್ಲದ್ದರಿಂ ನಿಮಿತ್ತೋಪಾದಾನಕಾರಣ ಭಾವಗಳಂ ತಾನೇ ವಹಿಶಿ ನಾನಾಪ್ರಕಾರವಾದ ರೂಪಗಳಂ ಧರಿಸುವ ಚಿತ್ತೇ ಪ್ರಪಂಚರೂಪದಿಂ ತೋರುತ್ತಿರುವದೆಂದು ಕೆಲವರು ಪೇಳುವರು. ಇದು ಸರ್ವವ್ಯಾಪಾರಗಳಂ ನೆರವೇರಿಸುತ್ತಿದ್ದಾಗ್ಯೂ ಸ್ವಭಿನ್ನ ಪದಾರ್ಥವಂ ಕಾಣದಾದ್ದರಿಂದ ಏನನ್ನೂ ಮಾಡಲಿಲ್ಲವೆಂತಲೇ ಪೇಳಲ್ಪಡುವದು. ಈ ಚಿತ್ತು ತಾನು ಯಥೇಚ್ಛವಾಗಿ ಕ್ರೀಡಿಸುವದಕ್ಕೆ ಅನುಕೂಲವಾಗಿ ನಾನಾರೂಪಗಳಂ ತಾನೇ ವಹಿಸಿರುವದು. ಪೃಥಿವಿ ಕಠಿನವಾಗಿಯೂ, ಜಲವು ರಸರೂಪವಾಗಿಯೂ, ತೇಜವು ಊರ್ಧ್ವಪ್ರಕಾಶವಾಗಿಯೂ, ವಾಯು ಚಲಸ್ವರೂಪವಾಗಿಯೂ, ಆಕಾಶ ವವಕಾಶರೂಪವಾಗಿಯೂ, ಇಲ್ಲದಿರೆ ಬಾರದು

* ಸಾಂಖ್ಯಶಾಸ್ತ್ರಪ್ರವರ್ತಕರು.

ತೃಣವಾದನೂ ಜಗತ್ತಿನಲ್ಲಿ ಪುಟ್ಟಲಾರನು. ಕಾಲಕ್ಲೃಪ್ತಿಯೂ, ಗುಣಭೇದವೂ ಇಲ್ಲದಿರೆ ಪ್ರಪಂಚದಲ್ಲಿ ಯಾವ ಚಮತ್ಕಾರವು ತೋರಲಾರದು. ಹಾಗಾಗುವಲ್ಲಿ ಸ್ವಾಭಾವಿಕವಾದ ತನ್ನ ಕ್ರೀಡೆಯಲ್ಲಿ ರಸವೇನೂ ಇರಲಾರದಾದ್ದರಿಂದಾ ಸಕಲ ವ್ಯವಸ್ಥಾರೂಪವಾಗಿಯೂ, ಕರಣ ಕಾರ್ಯರೂಪವಾಗಿಯೂ, ಬ್ರಹ್ಮವು ತಾನೇ ಪ್ರಕಾಶಿಸುತ್ತಿರುವದು. ಚಿದ್ವಸ್ತುವಿನಲ್ಲಿ ಈ ಪ್ರಪಂಚಗಳು ಚಿನ್ನದಲ್ಲಿ ಒಡವೆಗಳಂತೆಯೂ, ಮರುಭೂಮಿಯಲ್ಲಿ ಪ್ರವಾಹಗಳಂತೆಯೂ, ಭಿನ್ನಾಭಿನ್ನವಾಗಿ ಕಾಣುತಲಿರುವವು. ಮದವಿಕಾರದಿಂ ಪುರುಷನು ಪ್ರಕಾರಾಂತರವಾಗುವಂತೆ ಸ್ವಯೋಗ್ಯತೆಯಿಂದಲೇ ಈ ಚಿದ್ವಸ್ತುವು ರೂಪಾಂತರವಂ ವಹಿಸುವದು. ಯಾತರಿಂದ ಶಬ್ದ ಸ್ಪರ್ಶ ರೂಪ ರಸ ಗಂಧಗಳಂ ನೀನು ತಿಳಿಯುತ್ತೀಯೋ ಅತೀಂದ್ರಿಯವಾದ ಆ ಚಿದ್ವಸ್ತುವೇ ಅಂತಃಕರಣ ಬಹಿಃಕರಣ ವಿಷಯಗಳಂ ವ್ಯಾಪಿಸಿಕೊಂಡಿರುವದು. ದ್ವೈತಾದ್ವೈತಗಳನ್ನತಿಕ್ರಮಿಸಿದ ಆ ವಸ್ತುವಿಗೆ ಭಿನ್ನವಿದೆಂಬ ಕಲ್ಪನೆಯೇ ಅಸಂಗತವಾಗಿರುವದು. ಕರ್ತೃ ಕರಣ ಕಾರ್ಯಗಳು ಭಿನ್ನವೆಂದು ತಿಳಿದು ಕರ್ತೃತ್ವವಂ ವಹಿಸುವಲ್ಲಿ ಕಾರ್ಯವಾದ ಸುಖ ದುಃಖಗಳು ಕರಣಗಳಿಗೆಂದು ನಿರಾಕರಿಸಿದಾಗ್ಯೂ ಕರಣಗಳಲ್ಲಿ ಅಭಿಮಾನವಿರುವರಿಗೆ ಅದರ ಸುಖ ದುಃಖಗಳು ತಪ್ಪವು. ಪ್ರಕೃತಿಗೆ ಕರ್ತೃತ್ವವೆಂದು ತಟಸ್ಥಭಾವದಲ್ಲಿದ್ದಾಗ್ಯೂ ಆ ಪ್ರಕೃತಿಸಂಬಂಧವಿರುವರಿಗೆ ಭೋಕ್ತೃತ್ವತಪ್ಪದು. ದ್ವಿತೀಯ ಪದಾರ್ಥವಿರುವರಿಗೆ ಭಯ ರಾಗದ್ವೇಷಾದಿಗಳು ತಪ್ಪಲಾರವಾದ್ದರಿಂದ ದ್ವಿತೀಯಪದಾರ್ಥ ಕಲ್ಪನೆಯಂ ಬಿಟ್ಟು ಕಾರ್ಯವು ಭಿನ್ನವಲ್ಲವಾದ್ದರಿಂ ಕರ್ತೃತ್ವವೇ ಆತ್ಮನಿಗಿಲ್ಲವೆಂಬ ಪರಮಾರ್ಥವಂ ವಿಚಾರಬಲದಿಂ ನಿಶ್ಚಯಿಸಿ ದೃಢವಾಗಿ ಹಿಡಿಯುವನಾಗು. ಸತ್ಯಸಂಕಲ್ಪವಾದ ಈ ವಸ್ತುವು ಸ್ವಾಭಾವಿಕವಾದ ಕ್ರೀಡೆಗೋಸುಗ ಸಹಾಯವಾದ ಎರಡನೇ ಪದಾರ್ಥವನ್ನಿಷ್ಟುಪ್ರಕಾರವಾಗಿ ಭಾವಿಸಿದಾಗ್ಯೂ ತಾನೇ ಎರಡನೇ ದರದಂತೆ ತೋರುತ್ತಾ ನಿಂದುವಲ್ಲದೆ ತನಗೆ ಭಿನ್ನವಾದ ಎರಡನೇ ಪದಾರ್ಥವಂ ಪಡೆಯಲಿಲ್ಲವಾದ್ದರಿಂದ ಇದು ಪೂರ್ಣವೆಂದು ತಿಳಿಯತಕ್ಕದ್ದು. ಮಾಯೆ ಮೊದಲಾದ ಸಕಲ ಪದಾರ್ಥಗಳಿಗೆ ಸೃಷ್ಟಿ ಸ್ಥಿತಿ ಲಯಗಳು ಈ ವಸ್ತುವಿನಲ್ಲೇ ಆಗುವದ್ದರಿಂದ ಯಾವದೂ ಇದಕ್ಕೆ ಭಿನ್ನವೆನಿಸುವದಿಲ್ಲ. ಇದಕ್ಕೆ ಗುಣಗಳಾಗಲೀ ಮಾಯೆಯಾಗಲೀ ಜೀವಗಳಾಗಲೀ ಪ್ರಪಂಚವಾಗಲೀ ಭಿನ್ನವೆಂದು ಪರಿಗ್ರಹಿಸುವ ಜನರು ನಿದ್ರಾಸಮಾಧಿ ವಿಚಾರಗಳಲ್ಲಿ ಪ್ರಕಾಶಿಸುವ ಕೈವಲ್ಯಾನಂದವನ್ನನುಭವಿಸಿದವರಲ್ಲವೆಂದು ನಿಶ್ಚಯಿಸುವನಾಗು. ಎಲೈ ರಾಘವನೇ! ಕಾಯಿಕ ವಾಚಿಕ ಮಾನಸಿಕ ಭೇದದಿಂ

ಕ್ರಿಯೆಯು ಮೂರುಪ್ರಕಾರವೆನಿಸುವದು. ಕಾಯಿಕ ವಾಚಕ ಕ್ರಿಯೆಗಳು ಮನಃಪ್ರೋತ್ಸುಕವಾಗಿ ನಡೆಯುವಲ್ಲಿ ಸಫಲವಾಗುವವು. ಮನಸ್ಸು ವಿಮುಖವಾಗಿರುವಲ್ಲಿ ದೈವಯೋಗದಿಂ ನಡೆದ ಈ ಕ್ರಿಯೆಗಳು ಕಾಕತಾಳೀಯ ನ್ಯಾಯದಿಂ ಫಲಿಸಿದಾಗ್ಯೂ ದೈವವೆಂಬುವದು ಪೂರ್ವಕರ್ಮವಾದ್ದರಿಂದಲೂ, ಕರ್ಮವು ಮಾನಸಿಕವಾದ್ದರಿಂದಲೂ, ಮಾನಸಿಕ ಕ್ರಿಯೆಯೇ ಸಫಲವೆನಿಸುವದು. ವಾಸನೆಯಿದ್ದಂತೆ ಮನವು ನಡೆಯುವದಾದ್ದರಿಂದ ವಾಸನೆಯೇ ಕ್ರಿಯೆಯೆನಿಸುವದು. ಕಾಯವು ಶಯನದಲ್ಲಿದ್ದರೂ ಮನದಿಂ ಹಳ್ಳಕ್ಕೆ ಬಿದ್ದ ಪುರುಷನು ಆ ದುಃಖವನ್ನೇ ಅನುಭವಿಸುವನು. ಸ್ವಸ್ಥಚಿತ್ತನಾದವನು ಕಾಯವು ಹಳ್ಳಕ್ಕೆ ಬಿದ್ದರೂ ಆ ದುಃಖವನ್ನನುಭವಿಸಲಾರನು. ಆದ್ದರಿಂದಾ ಮನನೇ ಕರ್ತೃವೆನಿಸುವದು. ಕರ್ತೃತ್ವದೊಡನೆಯೇ ಭೋಕ್ತೃತ್ವವೂ ಸಿದ್ಧವಾಗಿರುವದು. ಕರ್ತೃತ್ವವಂ ವಹಿಸಿದ ಅಜ್ಞಾನಿಯು ಕರ್ಮಫಲಭೋಗದಲ್ಲಿ ಸುಖದುಃಖಗಳಿಂ ಬೆರಗಾಗುವನು. ಅಖಂಡಭಾವದಿಂದ ಅಮನಸ್ಕರಾದ ಜ್ಞಾನಿಗಳಿಗೆ ಶರೀರವು ಪರದೃಷ್ಟಿ ಸಿದ್ಧವಾದ್ದರಿಂದ ದೈವೇಚ್ಛೆಯಿಂ ನಡೆಯುವ ಕ್ರಿಯಾಫಲ ಭೋಗಗಳೂ ಪರದೃಷ್ಟಿಗಳಿಂದಲೇ ಸಿದ್ಧವಾಗುವವು. ಅವರಿಗೆ ಕರ್ತೃತ್ವ ಭೋಕ್ತೃತ್ವಗಳಿಲ್ಲವೆನ್ನುವದಕ್ಕೆ ಸುಖದುಃಖಗಳಲ್ಲಿ ಬೆರಗಾಗದಿರುವದೇ ನಿಮಿತ್ತವಾಗುವದು. ಕೆಲವು ಜ್ಞಾನಿಗಳು ಪರಮಾತ್ಮಭಿನ್ನವಾದ ವಸ್ತುವೇ ಇಲ್ಲದಿರುವದ್ದರಿಂದ ಪರಮಾತ್ಮನಲ್ಲೇ ಕರ್ತೃತ್ವ ಭೋಕ್ತೃತ್ವಗಳಂ ನಿರ್ಧರಿಸಿ ತದ್ಭಿನ್ನನಾಗಿ ತಾನೇ ಇಲ್ಲವೆಂಬ ಭಾವದಿಂದಿರುವರು. ಕೆಲವರು ಬ್ರಹ್ಮಾಭೇದಜ್ಞಾನದಾರ್ಢ್ಯದಿಂ ತಾನೇ ಸರ್ವವೆಂದು ನಿಶ್ಚಯಿಸಿರುವರು. ಇವರು ಸ್ವೇಚ್ಛೆಯಿಂದಾಗಲೀ ದೈವಾಜ್ಞೆಯಿಂದಾಗಲೀ ನಾನಾಪ್ರಕಾರವಾದ ಕರ್ಮಗಳಂ ಮಾಡುತ್ತಿದ್ದಾಗ್ಯೂ ಅವುಗಳ ಸುಖದುಃಖಗಳಲ್ಲಿ ಅಖಂಡಭಾವದಿಂ ಬೆರಗಾಗದಿರುವರು. ಅವರ ಮನವು ಬ್ರಹ್ಮಾನಂದದಲ್ಲಿ ನಿಂದಿರುವದ್ದರಿಂ ನಿರಾನಂದವೆಂತಲೂ ವಿಷಯಾನಂದವಿಲ್ಲದ್ದರಿಂ ಸಾನಂದನೆಂತಲೂ ಬಾಹ್ಯ ವಸ್ತುಗಳಲ್ಲಿ ಪ್ರಸರಿಸದಿರುವದ್ದರಿಂ ಅಚಲವೆಂತಲೂ, ಜಡವಲ್ಲದ ಚಿದ್ವಸ್ತುವಿನಲ್ಲಿ ಅಭಿನ್ನವಾಗಿರುವದ್ದರಿಂದ ಚಲವೆಂತಲೂ, ಸತ್ಯವಾದ ವಸ್ತುವಿನಲ್ಲಿರುವದ್ದರಿಂದ ಅಸತ್ತೆಂತಲೂ, ಬಾಹ್ಯವಸ್ತುಗಳಿಲ್ಲದ್ದರಿಂ ಸತ್ತೆಂತಲೂ, ಮೇಳಲಕ್ಷ್ಯಕವಾಗುವದು. ಚಿದಚಿದ್ವ್ಯವಹಾರಗಳು ಏಕತ್ವದ್ವಿತ್ವಗಳಂತೆ ಪರಸ್ಪರಸಾಪೇಕ್ಷವಾದ್ದರಿಂದೊಂದರೊಡನೆ ಎರಡೂ ಪೋಗುವಲ್ಲಿ ದ್ವೈತಾದ್ವೈತ ವರ್ಜಿತವಾಗಿರುವ ಅನಾಮ ನಾಮರೂಪವಾದ ವಸ್ತುವಿನಲ್ಲಿ ದ್ವೈತಾದ್ವೈತ ಮಧ್ಯಗತವಾದ ಮನವು ಹಗಲಿರುಳುಗಳ ಮಧ್ಯದೋಳ್ಸಂಧ್ಯೆಯಂತಿ

ರುವದೆಂದೆನಬೇಕು. ವ್ಯವಹಾರಗಳೆಲ್ಲವು ದ್ವೈತವನ್ನವಲಂಬಿಸಿಯೇ ಸಿದ್ಧವಾಗಿರುವದಾದ್ದರಿಂದಲೂ, ಆ ಮುನಿಯ ಸ್ಥಿತಿಯು ವ್ಯವಹಾರಾತೀತವಾದ್ದರಿಂದಲೂ ಯಾವ ರೀತಿಯಿಂದಲೂ ಹೇಳಲಶಕ್ಯವಾಗಿರುವದು. ಚಿತ್ರವಿದ್ದಂತೆ ಪುರುಷನಿರುವನೆಂಬುವದೇ ಸಿದ್ಧಾಂತವು. ಜ್ಞಾನಿಯುಮನಕ್ಕೆ ಬ್ರಹ್ಮಭಾವಾಲಂಬನದಿಂ ಸಾಂಕಲ್ಪಾತ್ಮಕ ಸ್ವರೂಪ ನಾಶವಾಗಿರುವದ್ದರಿಂದ ಜ್ಞಾನಿಗೆ ಮನವು ಅಧೀನವಾಗಿರುವದು. ಅದೊಂದುವೇಳೆ ಕಲ್ಪನೆಯಂ ಮಾಡಿದಾಗ್ಯೂ ಜ್ಞಾನಿಯು ಆ ಕಲ್ಪಿತಪದಾರ್ಥಗಳಲ್ಲಿ ಬಾಲಕನಂತೆ ಅಭಿಮಾನ ಪಡಲಾರನು. ಹೆಯೋಪಾದೆಯ ಜ್ಞಾನವಿಲ್ಲದ್ದರಿಂದ ಕೆಸರಿನಲ್ಲಿ ಆಡುವ ಬಾಲಕನಂತೆ ಜ್ಞಾನಿಯು ನೀಚಕಾರ್ಯಗಳಂ ಮಾಡುತ್ತಿದ್ದರೂ ಸಂತುಷ್ಟನಾಗಿರುವನು. ಕಾರ್ಯಗಳಲ್ಲಿ ನೀಚೋತ್ತಮ ಭಾವಗಳು ಪರದೃಷ್ಟಿಯಿಂ ಸಿದ್ಧವಾಗುವವಲ್ಲದೆ ಆ ಜ್ಞಾನಿಯ ದೃಷ್ಟಿಯಿಂ ಸಿದ್ಧವಾಗುವದಿಲ್ಲ. ಆದ್ದರಿಂ ಸಾಧಕನಾದವನು ಶಾಸ್ತ್ರೀಯವಾದ ಆಚಾರದಲ್ಲೇ ಅವರ ನಡತೆಯಂ ಪರಿಗ್ರಹಿಸಬೇಕು. ನಾರಿಕೇಳ ವೃಕ್ಷ ಉತ್ತಮವಾದಾಗ್ಯೂ ಅದರ ಘಲವು ಗ್ರಾಹ್ಯವಾಗುವದಲ್ಲದೆ ಆ ಮರದ ನೀರು ಗ್ರಾಹ್ಯವಾಗಲಾರದು. ಹಾಗೆ ಆ ಮಹರ್ಷಿಗಳ ವಚನವೇ ಗ್ರಾಹ್ಯವಲ್ಲದೆ ಅವರನಡತೆಯು ಗ್ರಾಹ್ಯವಾಗುವದಿಲ್ಲ. ಲೋಕಹಿತಾರ್ಥವಾಗಿ ಅವರು ಶಾಸ್ತ್ರವಂಮಾಡಿರುವದ್ದರಿಂದ ಅದರಲ್ಲಿ ಸ್ವಲ್ಪವೂ ಸಂದೇಹಪಡದೆ ಅವರ ವಚನವಂ ಗ್ರಹಿಸಬೇಕು. ಅಗ್ನಿಮಾಂದ್ಯದಿಂ ರೋಗವುಂಟಾಗಿರುವಲ್ಲಿ ಪಥ್ಯ ಕ್ರಮದಂತೆ ಶಾಸ್ತ್ರಪುಟ್ಟಿರುವದು. ಅಗ್ನಿಗೆ ಮಾಂದ್ಯತಪ್ಪಿ ರೋಗವಳಿದ ಬಳಿಕ ಏನು ತಿಂದರೂ ಹ್ಯಾಗೆ ಬಾಧಕವಾಗುವದಿಲ್ಲವೋ ಹಾಗೆ ಶಾಸ್ತ್ರಾಚಾರಕ್ರಮದಿಂ ಮನಸ್ಸಿಗೆ ಮೋಹತಪ್ಪಿ ಅಖಂಡ ದೃಷ್ಟಿಯಿಂದಿದು ಗ್ರಾಹ್ಯವಿದು ಆ ಗ್ರಾಹ್ಯವೆಂಬ ಲೋಕಾಭಿಮಾನವಳಿಯಲು ಯಾವದನ್ನು ಹ್ಯಾಗೆ ಮಾಡಿದರೂ ಬಾಧಕವಾಗುವದಿಲ್ಲ ಪ್ರಕೃತದಲ್ಲಿ ಆ ಜ್ಞಾನಿಗಳು ನಿರಭಿಮಾನರಾಗಿರುವ ಭಾವವನ್ನೇ ಪರಿಗ್ರಹಿಸಬೇಕು. ಪರಮಾತ್ಮನಿಗೆ ಗ್ರಾಹ್ಯಾಗ್ರಾಹ್ಯ ವಿಭಾಗವಿದ್ದಲ್ಲಿ ಆ ಗ್ರಾಹ್ಯವಾದ ವಸ್ತುವೇ ಪುಟ್ಟಲಾರದು. ಅವನ ಮುಖದಿಂ ಹೊರಹುಟ್ಟ ಶಾಸ್ತ್ರಗಳಲ್ಲಿ ಗ್ರಾಹ್ಯಾಗ್ರಾಹ್ಯ ವ್ಯವಸ್ಥೆ ಇರುವದು. ಇದಂ ನೋಡುವಲ್ಲಿ ಬ್ರಹ್ಮವು ಸಜಾತೀಯ ವಿಜಾತೀಯ ಸ್ವಗತಭೇದ ಶೂನ್ಯವಾದ್ದರಿಂದ ಸ್ವೇಚ್ಛೆಯಿಂ ನಾನಾರೂಪವಾಗಿ ಪ್ರಕಾಶಿಸಿರುವದೆಂತಲೂ ಜ್ಞಾನರೂಪನಾದ ತನಗೆ ಸ್ವರೂಪಜ್ಞಾನಕ್ಕೋಸುಗ ತಾನೇ ಶಾಸ್ತ್ರರೂಪದಿಂ ಪ್ರಕಾಶಿಸಿರುವದೆಂತಲೂ ಸಿದ್ಧಯವಾಗುತಲಿಧೆ. ಹೀಗೆ ಸರ್ವರೂಪವಾಗಿ ಬ್ರಹ್ಮವೇ ಪ್ರಕಾಶಿಸುತ್ತಿರುವದ್ದರಿಂದ ಕರ್ತೃತ್ವ ಭೋಕ್ತೃ

ತ್ವಗಳೆಂಬವನ್ನು ಪರಮಾತ್ಮನಲ್ಲೇ ನಿಲ್ಲಿಸಿ ಬುದ್ಧಿಶಾಲಿಯಾದವನು ನಿರಭಿಮಾನನಾಗಿರಬೇಕು. ಅಥವಾ ಅಜ್ಞಾನಿಯಾದ ಜೀವನಿಗೆ ಕರ್ತೃತ್ವ ಭೋಕ್ತೃತ್ವಗಳು, ಪರಮಾತ್ಮನು ನಿರ್ವಿಕಲ್ಪನೆಂಬ ಪಕ್ಷದಲ್ಲಿ ಸ್ವಭಿನ್ನವಾದ ಕಾರ್ಯವಿಲ್ಲದ್ದರಿಂದ ಪರಮಾತ್ಮನಿಗೆ ಕರ್ತೃತ್ವವಿಲ್ಲವೆನ್ನುವರು. ನಿರ್ವಿಕಲ್ಪನಾದ ಅವನಿಗೆ ಭಿನ್ನವಾದ ವಸ್ತುವೇ ಇಲ್ಲದಿರುವಲ್ಲಿ ಅವನಿಗೆ ನೀನು ಅಭಿನ್ನನಾದ್ದರಿಂದ ನಾನು ಕರ್ತೃವೆಂಬ ಅಭಿಮಾನವಂ ಬಿಡುವನಾಗು. ಕರ್ತೃತ್ವವಿರುವರಿಗೆ ಭೋಕ್ತೃತ್ವ ತಪ್ಪಲಾರದಾದ್ದರಿಂದ ಸರ್ವಥಾ ಕರ್ತೃತ್ವವಂ ನೀನು ಬಿಡುವನಾಗು. * ಕೆಲವರು ಪ್ರಕೃತಿ ಕರ್ತೃವೆಂತಲೂ ಪುರುಷನು ಭೋಕ್ತೃವೆಂತಲೂ ಪೇಳುವರು. ಜಗದಾಕಾರವಾಗುವ ಜಡವಾದ ಪ್ರಕೃತಿಗೆ ಸ್ವತಃ ಪರಿಣಮಿಸುವ ಯೋಗ್ಯತೆ ಇಲ್ಲದ್ದರಿಂದ ಪುರುಷನನ್ನವರು ನಿಮಿತ್ತವೆಂದು ಪರಿಗ್ರಹಿಸಿರುವರು. ಚಿನ್ಮಾತ್ರನಾದ ಪುರುಷನಿಗೆ ಅಸಂಗತ್ವವಂ ಸ್ಥಾಪಿಸುವದೇ ಅವರಿಗೆ ತಾತ್ಪರ್ಯವಾದ್ದರಿಂದ ಆ ತಾತ್ಪರ್ಯವಂ ನೀನು ಪರಿಗ್ರಹಿಸುವನಾಗು. ಜಗವೆಲ್ಲವೂ ಚಿನ್ಮಯವೆನುವೆಯಾದರೆ ಅದೇ ನೀನಾಗುತ್ತೀಯೆ. ಜಡವೆಂದು ತಿಳಿಯುವೆಯಾದರೆ ಅಸತ್ತಾದ ಅದರಲ್ಲಿ ಅಭಿಮಾನವಂ ತ್ಯಜಿಸುವನಾಗು. ಜಡಾಜಡಭಾವ ಪರಿಗ್ರಹದಲ್ಲಿ ತೇಜಸ್ತಿಮಿರಗಳಂತೆ ಅವುಗಳಿಗೆ ಪರಸ್ಪರ ವಿರೋಧದಿಂದೊಂದೆಡೆಯಲ್ಲಿ ಸ್ಥಿತಿಯಾಗಲಾರದಾದ್ದರಿಂದಲೂ, ಚಿತ್ತು ಸರ್ವವ್ಯಾಪಕವಾದ್ದರಿಂದಲೂ, ಜಡಪದಾರ್ಥವಿಲ್ಲವೆಂತಲೇ ತಿಳಿಯುವನಾಗು. ಜ್ಞಾನಿಗಳಿಗೆ ಬ್ರಹ್ಮಮಾತ್ರವೇ ಪ್ರಕಾಶಿಸುತ್ತಿರುವದ್ದರಿಂದ, ಮಿತ್ರಾಮಿತ್ರ ರಾಗ ದ್ವೇಷ ಬಾಧ ಮೋಕ್ಷ ಜಡಾಜಡಾದಿ ಭೇದವೆಲ್ಲವೂ ಅಜ್ಞಾನ ಕಲ್ಪಿತವೆಂದು ನಿಶ್ಚಯಿಸುವನಾಗು. ಆ ಬ್ರಹ್ಮವು ನಿರ್ವಿಕಲ್ಪವಾದರೂ ವಿಚಿತ್ರವಾದ ಶಕ್ತಿಗಳುಳ್ಳದ್ದಾದ್ದರಿಂದ ವಿಚಿತ್ರವಾದ ಪ್ರಪಂಚರೂಪದಿಂ ತೋರುತ್ತಿರುವದು. ಸಮುದ್ರದಿಂ ತರಂಗಗಳಂತೆ ಪ್ರಪಂಚಗಳೆಲ್ಲವೂ ಬ್ರಹ್ಮದಿಂದಲೇ ಪುಟ್ಟಿರುವವೆಂದು ಪೇಳುತ್ತಿರುವಲ್ಲಿ ಎಲೈ ಗುರುವೇ ನಿರ್ವಿಕಲ್ಪ ಚಿದಾನಂದಸ್ವರೂಪವಾಗಿ ವಾಙ್ಮನಸ್ಸುಗಳಿಗೆ ಅಗೋಚರವಾಗಿರುವ ಅತೀಂದ್ರಿಯವಾದ ಬ್ರಹ್ಮತತ್ವವೆಲ್ಲಿ ಅತಿ ವಿಕಲ್ಪ ಜಡದುಃಖ ಸ್ವರೂಪವಾಗಿ ವಾಙ್ಮನಸ್ಸುಗಳಿಗೆ ಗೋಚರವಾಗಿರುವ ದೃಶ್ಯವಾದ ಪ್ರಪಂಚವೆಲ್ಲಿ ಅದರಿಂದಿದು ಪುಟ್ಟಿತೆಂಬುವದು ಹುಲಿಯ ಹೊಟ್ಟೆಯಲ್ಲಿ ನರಿ ಹುಟ್ಟಿತೆಂಬಂತೆಯೂ ಸೂರ್ಯನಿಂದಂಧಕಾರ ಉದಯಿಸಿತೆಂಬಂತೆಯೂ ವಿಚಿತ್ರವಾಗಿ ಕಾಣುತ್ತಿರುವದು. ಅದರಿಂದಿದುಪುಟ್ಟುವದ್ದಲ್ಲಿ ಅದರಂತೆ ಇದು ಚಿನ್ಮಾತ್ರ

---

* ಸಾಂಖ್ಯಶಾಸ್ತ್ರಕಾರರು.

ವಾಗಿರಬೇಕು. ಅಥವಾ ಬ್ರಹ್ಮವು ನಿಷ್ಕಳಂಕವಾಗದಿರಬೇಕು. ಅಥವಾ ವಿರುದ್ಧಧರ್ಮಜನಕವಾದ ಸಾಮಗ್ರಿಯೇನಾದರೂ ಇರಬೇಕು. ಇದೇನೂ ಇಲ್ಲದೆ ಇಂಥಾ ವಿರುದ್ಧವಾದ ಸೃಷ್ಟಿ ಹ್ಯಾಗಾದೀತೆಂದು ಶ್ರೀರಾಮನು ಕೇಳಲು ಅದಂ ಕೇಳಿದ ವಸಿಷ್ಠನೊಂದು ಕ್ಷಣವಾಲೋಚಿಸಿದನದೆಂತೆನೆ,- ಈ ರಾಮಭದ್ರನ ಬುದ್ಧಿಗೆ ಇನ್ನೂ ಪ್ರಕಾಶ ಉಂಟಾಗಲಿಲ್ಲವಾದ್ದರಿಂದ ಇವನ ಮನವು ಶಾಸ್ತ್ರ ವಾಕ್ಯಗಳ ಸಾರವಂ ಗ್ರಹಿಸದೇ ಲೋಕವಾಸನೆಗಳಿಂ ಶೆಳೆಯಲ್ಪಡುವದು. ಬುದ್ಧಿಗೆ ವಿಕಾಸವಾಗಿದ್ದಲ್ಲಿ ಪ್ರಾರ್ಥನಾತಿವನು ಮೋಕ್ಷೋಪಾಯ ವಾಕ್ಯಗಳ ರೀತಿಯಂ ಪಿಡಿದು ಅವುಗಳಿಗೆ ಸಾರವಾದ ಚಿದೇಕ ರಸಭಾವವಂ ತಿಳಿಯುವನಲ್ಲದೆ ಹೀಗೆ ಸಂದೇಹಪಡಲಾರನು. ತನ್ನ ಸ್ವರೂಪವಂ ತಾನೇ ತಿಳಿಯಬೇಕಾಗಿರುವದ್ದರಿಂದಲೂ ಸ್ವರೂಪವಂ ತೋರುವದಕ್ಕೆ ಬುದ್ಧಿಯೇ ಕನ್ನಡಿಯಾಗಿರುವದ್ದರಿಂದಲೂ ಲೋಕವಾಸನೆಯೆಂಬ ಧೂಳಿಯಿಂದದು ಮಲಿನವಾಗಿರುವದ್ದರಿಂದಲೂ, ಸ್ವರೂಪಜ್ಞಾನವು ಜನರಿಗೆ ಅಸಾಧ್ಯವಾಗಿರುವದು. ಇದುವರಿಗೆ ಪೇಳಿದ ಪರಮಾರ್ಥ ವಚನಗಳು ಬುದ್ಧಿಗೆ ಗೋಚರವಾಗಿದ್ದಲ್ಲಿ ಅದರ ಮಾಲಿನ್ಯವಣಗುತಿದ್ದದು. ಸರಿಯಾದ ವಚನಗಳು ಇವನ ಮನಕ್ಕೆ ಬರಲಿಲ್ಲವಾದ್ದರಿಂದ ಯುಕ್ತಿಯಿಂದಿವನಿಗೆ ಪೇಳಬೇಕಾಗಿರುವದು. ಯಾವಪ್ರಕಾರದಿಂದಲಾದರೂ ಶಾಸ್ತ್ರಾರ್ಥ ಜ್ಞಾನವಾಗದೇ ಬುದ್ಧಿಯ ಮಾಲಿನ್ಯವು ಪೋಗದಾದ್ದರಿಂದ ಇವನಿಗೆ ಯಾವರೀತಿಯಿಂ ಜ್ಞಾನಉಂಟಾಗಬೇಕೋ ಆ ರೀತಿಯಿಂದಲೇ ಪೇಳಿ ಪರಮಾರ್ಥವಂ ತಿಳುಪಬೇಕು. ಅದಂತಿಳಿಯದೇ ಇವನ ಮನವು ವಿಶ್ರಾಂತಿಯಂ ಹೊಂದಲಾರದು. ಆದಿಭಾಗದಲ್ಲೇ ಶಮದಮಾದಿ ಮಾರ್ಗೋಪದೇಶದಿಂ ಶಿಷ್ಯನಿಗೆ ಚಿತ್ತಶುದ್ಧಿಯನ್ನುಂಟುಮಾಡಿ ಆ ಗುಣಗಳು ಸಿದ್ಧವಾದಬಳಿಕ ಸರ್ವವೂ ಬ್ರಹ್ಮವೆಂಬ ಸಿದ್ಧಾಂತವಂ ಪೇಳಬೇಕಲ್ಲದೆ ದೃಶ್ಯವಾಸನೆಯಿಂ ಭೋಗೇಚ್ಛೆಯುಳ್ಳವನಿಗೆ ಪೇಳಲಾಗದು. ಈ ಅಜ್ಞಾನಿಗೆ ಮಾಡಿದ ಉಪದೇಶವು ಮರುಭೂಮಿಯಲ್ಲಿ ಚಿತ್ತಿದ ಬೀಜದಂತೆಯೂ ಬೂದಿಯಲ್ಲಿ ಹಾಕಿದ ಹವಿಸ್ಸನಂತೆಯೂ ವ್ಯರ್ಥವಾಗುವದು. ಮತ್ತು ಉಪದೇಶವು ತನ್ನಂ ಹೀಗೆ ಪಾಳುಮಾಡಿದನೆಂಬ ಕೋಪದಿಂ ಪೇಳಿದವನಿಗೆ ಇಹಲೋಕದಲ್ಲಿ ಪಶ್ಚಾತ್ತಾಪವನ್ನು ಪರಲೋಕದಲ್ಲಿ ಕಲ್ಪಾಂತಸ್ಥಾಯಿಯಾದ ನರಕವಂ ಸಹ ಉಂಟುಮಾಡುವದು. ಆದ್ದರಿಂದ ಪ್ರಶ್ನೆ ಮಾತ್ರದಿಂದಲೇ ಯೋಗ್ಯತೆಯಂ ವಿಚಾರಿಸದೇ ಶಿಷ್ಯನಿಗೆ ತತ್ವವಂ ಪೇಳಲಾಗದು. ಎಂದು ಆಲೋಚಿಸಿದ ವಸಿಷ್ಠನು ಮರಳಿ ಶ್ರೀರಾಮನಂ ಕುರಿತಿಂತೆಂದನು,-ಎಲೈ ಶ್ರೀರಾಮಭದ್ರನೇ ನೀನು ಚನ್ನಾಗಿಯೇ

ಕೇಳದವನಾದೆ. ಆದರೆ ಬ್ರಹ್ಮದಲ್ಲಿ ಕಳಂಕ ಕಲ್ಪನೆ ಉಂಟೆಂತಲೂ, ಇಲ್ಲ ವೆಂತಲೂ, ಸಿದ್ಧಾಂತವಂ ಪೇಳುವದಕ್ಕೆ ನಿನಗೆ ಆ ತಿಳವಳಿಕೆ ಉಂಟಾದಕಾಲ ದಲ್ಲೇ ಪೇಳತಕ್ಕದ್ದಾಗಿರುವದು. ಮಹೇಂದ್ರಜಾಲವಂ ಕಲಿತವನು ಮಾಯೆ ಯಿಂ ವಿಚಿತ್ರವಾದ ಶಕ್ತಿಯುಳ್ಳವನಾಗಿ *ಘಟವಂ ಪಟವನ್ನಾಗಿಯೂ ಪಟವಂ ಘಟವನ್ನಾಗಿಯೂ ಮಾಡುವನು. ಮತ್ತೂ ಕಲ್ಲಿನಮೇಲೆ ಬಳ್ಳಿಯನ್ನು ಬಳ್ಳಿ ಯಮೇಲೆ ಕಲ್ಲನ್ನೂ ಪುಟ್ಟಿಸುವನು. ಗಗನದಲ್ಲಿ ಪೃಥಿವಿಯನ್ನೂ ಪೃಥಿವಿಯಲ್ಲಿ ಗಗನವನ್ನೂ ಸಹ ತೋರುವನು. ಇರುವ ವಸ್ತುವನ್ನಿಲ್ಲದಿರುವಾತೆಯೂ, ಇಲ್ಲದಿರುವದನ್ನಿರುವದಂತೆಯೂ, ಪ್ರಕಾಶಪಡಿಸುವನು. ಹಿಂದೆ ಹೋದದ್ದನ್ನು ಮುಂದೆ ಬರುವದನ್ನು ಈಗ ಕಾಣದಿರುವದನ್ನು ಸಹ ತೋರಿಸುವನು. ಗಗ ನಕ್ಕೆ ಹಾರುವನಂತೆಯೂ, ಪಾತಾಳಕ್ಕೆ ಧುಮುಕುವನಂತೆಯೂ, ಬೆಟ್ಟವನ್ನೆ ತ್ತುವನಂತೆಯೂ, ಸಮುದ್ರವಂ ಕುಡಿಯುವನಂತೆಯೂ, ಬೆಂಕಿಯಂ ನುಂಗು ವನಂತೆಯೂ ವಿಚಿತ್ರವಾಗಿ ಕಾಣಲ್ಪಡುವನು. ಹೀಗೆ ಮಾಯೆಯಿಂ ಸರ್ವ ಶಕ್ತಿಯುಕ್ತನಾದ ಪರಮಾತ್ಮನು ವಿಚಿತ್ರವಾದ ಈ ಪ್ರಪಂಚವಂ ಸೃಜಿಸಿ ವಿಚಿ ತ್ರರೂಪದಿಂ ಕಾಣಲ್ಪಡುವನಲ್ಲದೇ ಸ್ವಸ್ವರೂಪದಿಂ ಗೋಚರನಾಗುವದಿಲ್ಲ. ಹೀಗೆ ಮಾಯೆಯಿಂದಲೇ ಜಗವೆಲ್ಲವು ಕಲ್ಪಿತವಾಗಿರುವದ್ದರಿಂದ ಬುದ್ಧಿಶಾಲಿ ಯಾದವನು ಇಲ್ಲಿಯ ಶೋಕಹರ್ಷಗಳಿಂ ಬೆರಗಾಗದೇ ಸಮಸ್ಥಿತಿಯಾಗಿರು ವನು. ಸಮತ್ವವಿರುವಲ್ಲಿ ದೇಶಕಾಲಯುಕ್ತವಾದ ಜಗದೊಳಾತ್ಮನು ಪ್ರವೃತ್ತಿ ನಿವೃತ್ತಿರೂಪವಾಗಿ ತನ್ನಿಂ ಪೊರಮಡುವ ವಿಚಿತ್ರವಾದ ಕಲ್ಪನಾ ರೀತಿಗಳನ್ನು ತೆರೆಗಳಂ ಸಮುದ್ರದಂತೆ ತಿರಸ್ಕರಿಸದಿರುವನು. ಕ್ಷೀರದಲ್ಲಿ ಘೃತದಂತೆಯೂ, ಮೃತ್ತಿನಲ್ಲಿ ಘಟದಂತೆಯೂ, ಬೀಜದಲ್ಲಿ ವಟವೃಕ್ಷದಂತೆಯೂ, ತಂತುಗಳಲ್ಲಿ ಪಟದಂತೆಯೂ, ವಿಚಿತ್ರವಾದ ಶಕ್ತಿಗಳು ಆತ್ಮನಲ್ಲೇ ಇರುವದ್ದರಿಂದಲೂ, ಅವುಗಳೇ ಪ್ರಪಂಚರೂಪದಿಂ ದೃಶ್ಯವಾಗುವದ್ದರಿಂದಲೂ, ಶಕ್ತಿ ಶಕ್ತಿಮಂತ ರಿಗೆ ಭೇದವಿಲ್ಲದ್ದರಿಂದಲೂ, ಭಿನ್ನವಾದ ಕಾರ್ಯವಿಲ್ಲದಿರುವಲ್ಲಿ ಕರ್ತೃತ್ವಪಸಂಗತ ವಾಗುವದ್ದರಿಂದಲೂ ಆತ್ಮನಿಗೆ ಕರ್ತೃತ್ವ ಭೋಕ್ತೃತ್ವಗಳಿಲ್ಲವೆಂದು ಪೇಳು ವರು. ದೀಪವಿರುವದ್ದರಿಂ ಬೆಳಕಿನಂತೆಯೂ, ಸೂರ್ಯನಿರುವದ್ದರಿಂ ದಿವಸ ದಂತೆಯೂ, ಪುಷ್ಪವಿರುವದ್ದರಿಂ ಪರಿಮಳದಂತೆಯೂ, ಶಾಶ್ವತನಾದ ಆತ್ಮನಿ ರುವದ್ದರಿಂದಲೇ ಪ್ರಪಂಚ ಉಂಟಾಗುವದು. ಹೀಗೆ ಇದ್ದದ್ದಕ್ಕೆ ಪ್ರಕಾಶವಾ

*ಗಡಿಗೆಯನ್ನು ಬಟ್ಟೆಯನ್ನಾಗಿಯೂ, ಬಟ್ಟೆಯನ್ನು ಗಡಿಗೆಯನ್ನಾಗಿಯೂ.

ಗುವದ್ದರಿಂದದಂ ಪಿಡಿದ ಪ್ರಾಜ್ಞರು ಸತ್ಕಾರ್ಯವಾದಿಗಳೆನಿಸುವರು. * ಅಯು ಸ್ಕಾಂತದ ಸಾನ್ನಿಧ್ಯದಿಂ ಸೂಜಿಗಳು ಚಲಿಸುವಂತೆ ಗುಣಸ್ವರೂಪವಾದ ಆ ಶಕ್ತಿಗಳು ಆತ್ಮಸಾನ್ನಿಧ್ಯದಿಂ ಚಲಿಸುವವು. ಇವುಗಳು ವನದಲ್ಲಿ ಕುಸುಮಗ ಳಂತೆಯೂ, ಗಗನದಲ್ಲಿ ತಾರಕೆಗಳಂತೆಯೂ, ಒಂದುವೇಳೆಯಲ್ಲಿ ಪ್ರಕಾಶವಾ ಗಿಯೂ, ಒಂದುವೇಳೆಯಲ್ಲಿ ಸ್ವಲ್ಪ ಪ್ರಕಾಶವಾಗಿಯೂ, ಒಂದುವೇಳೆಯಲ್ಲಿ ಅಪ್ರಕಾಶವಾಗಿಯೂ ಇರುವವು. ಈ ಪ್ರಕಾಶಗಳೇ ಪ್ರಪಂಚಕ್ಕೆ ಸ್ಥೂಲ ಸೂಕ್ಷ್ಮ ಕಾರಣಾವಸ್ಥೆಗಳೆನಿಸುವವು. ಸೃಷ್ಟಿ ಸ್ಥಿತಿ ಪ್ರಳಯಗಳೆಂತಲೂ ಪೇಳಲ್ಪಡುವವು. ಬೀಜವಿರುವವರಿಗೆ ವೃಕ್ಷವು ನಷ್ಟವಾದ್ದಲ್ಲವಾದ್ದರಿಂ ದಲೂ, ಅಪ್ರಕಾಶವೇ ನಾಶವೆನಿಸುವದ್ದರಿಂದಲೂ, ಈ ಶಕ್ತಿಗಳಿರೂವರಿಗೆ ಪ್ರಪಂಚವಿದೇಯಂತಲೇ ಪೇಳತಕ್ಕದ್ದು. ವಾಯುವಿನಲ್ಲಿರುವ ಚಲನ ಶಕ್ತಿ ಗೆ ವಾಯುವಿನ ಸತ್ವದಿಂದಲೇ ಸ್ಥಿತಿಯಾದ್ದರಿಂದ ಅದೇಪ್ರಕಾರ ಪರಮಾತ್ಮ ಶಕ್ತಿಗಳಿಗೆ ಪರಮಾತ್ಮನ ಸತ್ವದಿಂದಲೇ ಸ್ಥಿತಿಯಾಗಿರುವದು. ಅದರಿಂ ಶಕ್ತಿ ಗಳಿಗೆ ಬೇರೆಸತ್ವವಿಲ್ಲವೆಂದು ಪೇಳಲ್ಪಡುವದು. ಸತ್ತಾಭೇದವಿಲ್ಲದ್ದರಿಂದ ದೀಪಕ್ಕೆ ಜ್ವಾಲೆಗಳಂತೆ ಈ ಶಕ್ತಿಗಳು ಪರಮಾತ್ಮನಿಗೆ ಅಭಿನ್ನವೆನಿಸುವವು. ಅದರಿಂದ ಪ್ರಪಂಚವೆಲ್ಲವು ಪರಮಾತ್ಮನಿಗೆ ಪ್ರಕಾಶಸ್ವರೂಪವೆನಿಸುವದು. ಪ್ರಕಾಶದ ಗತಾಗತಗಳುದೀಪಜ್ವಾಲಾಧೀನವಾಗಿರುವಂತೆ ಪ್ರಪಂಚದ ನಾಶೋ ತ್ಪತ್ತಿಗಳು ಶಕ್ತಿಗಳಿಗೆ ಅಧೀನವಾಗಿರುವವು. ಪರಂಪರಾಸಂಬಂಧದಿಂದೊಂ ದಾಗುವ ಪ್ರಪಂಚವೆಲ್ಲವು ಸತ್ತಾಭೇದವಿಲ್ಲದ್ದರಿಂದ ಬ್ರಹ್ಮವೆನಿಸುವದು. ಹೀಗೆ ಶಕ್ತಿರೂಪದಿಂ ಪ್ರಪಂಚವಿರುವಲ್ಲಿ ಇರುವದಕ್ಕೆ ಪ್ರಕಾಶವಿಲ್ಲದಿರು ವದು ಹ್ಯಾಗೆ! ಪ್ರಕಾಶಮಾತ್ರದಿಂದುತ್ಪತ್ತಿಯನ್ನುವದು ಹ್ಯಾಗೆ! ಇಂಥಾ ಉತ್ಪತ್ತಿನಾಶಗಳಿಂ ಬ್ರಹ್ಮವು ವಿಕಾರಿಯೆನಿಸುವದು ಹ್ಯಾಗೆ! ಇದೆಲ್ಲವಂ ಚನ್ನಾಗಿ ಆಲೋಚಿಸುವನಾಗು. ಹೀಗೆ ಪ್ರಪಂಚ ಉಂಟಾದಕೂಡಲೇ ಭೇದಜ್ಞಾನರೂಪವಾದ ಅವಿದ್ಯೆಗೆ ಆ ವಿದ್ಯೆಗೆ ಆವಿರ್ಭಾವವಾಗುವದು. ಅದರಿಂ ಬೀ ಪ್ರಪಂಚಸತ್ಯವೆಂತಲೂ ಇದಕ್ಕೆಬೇರೆಸತ್ವವಿರುವದೆಂತಲೂ ತೋರುವದು. ಅದರಿಂ ಜನವು ಈ ಮೋಹ ಪ್ರಪಂಚದಲ್ಲಿ ಮುಳುಗುವದು. ಎಲೈ ಶ್ರೀರಾಮ ನೇ ನೀನು ಭ್ರಮಾತ್ಮಕವಾದ ಸಂಸಾರದಲ್ಲಿ ಅಜ್ಞಾನಿಯಂತೆ ಮಗ್ನನಾಗದೇ ವಿವೇಕವೆಂಬ ಖಡ್ಗವಂಧರಿಸಿ ಪುತ್ರ ಮಿತ್ರ ಕಳತ್ರ ಬಂಧುಗಳೆಂಬ ಶಾಖೆಗಳಿಂ ದಲೂ, ಭೋಗಗಳೆಂಬ ಚಿಗುರುಗಳಿಂದಲೂ, ಜರಾವಿಕಾರಗಳೆಂಬ ಕುಸುಮ

---

* ಸೂಜಿಗಲ್ಲು.

ಗಳಿಂದಲೂ, ಆಶೆಗಳೆಂಬ ಗೊಂಚಲುಗಳಿಂದಲೂ, ಸುಖದುಃಖಗಳೆಂಬ ಫಲಗಳಿಂದಲೂ, ಸಹಸ್ರಮುಖವಾಗಿ ಬೆಳೆಯುವ ಸಂಸಾರ ವೃಕ್ಷಕ್ಕೆ ಮೂಲವಾದ ಅಜ್ಞಾನವಂ ಛೇದಿಸಿ ಸರ್ವಸಾಕ್ಷಿಭಾವದಿಂದಲೂ, ಸರ್ವತ್ರ ಸಮಭಾವದಿಂದಲೂ, ಸುಖದಿಂದಿರುವನಾಗೆಂದು ಪೇಳುವಲ್ಲಿ,- ಎಲೈ ಗುರುವೇ ! ಬ್ರಹ್ಮನಿಂದುಂಟಾಗುವ ಪ್ರಾಣಿಗಳ ಉತ್ಪತ್ತ್ಯಾದಿ ಕ್ರಮವಂ ಸಂಕ್ಷೇಪದಿಂ ನಿರೂಪಿಸಬೇಕೆಂದು ಶ್ರೀರಾಮನು ಬೆಸಗೊಳ್ಳಲು ಮರಳಿ ವಸಿಷ್ಠನಿಂತೆಂದನು:- ಎಲೈ ರಾಜಕುಮಾರನೇ ಇಚ್ಛಾಮಾತ್ರದಿಂದುತ್ಪತ್ತಿಮೊದಲಾದ ಕ್ರಿಯೆಗಳಂ ನೆರವೇರಿಸುವ ಪರಮಾತ್ಮನ ಜ್ಞಾನಶಕ್ತಿಯು ಸ್ವೇಚ್ಛೆಯಿಂದತಿಸೂಕ್ಷ್ಮವಾದ ಜಗದ್ರೂಪವಂ ತಾಳುವದು. ಬಳಿಕ ಅಹಂಭಾವರೂಪವಂ ವೃದ್ಧಿಹೊಂದಿದ ಆ ಶಕ್ತಿಯು ಮನೋರೂಪವಂತಾಳಿ ದೃಗ್ರೂಪವಾದ ಆತ್ಮನ ಸ್ಥಿತಿಯಂ ಬಿಡುವಂತೆ ಸಂಕಲ್ಪಿಸುತ್ತಾ ಚತುರ್ಮುಖರೂಪದಿಂ ಗಂಧರ್ವನಗರಕ್ಕೆ ಸಮಾನವಾದ ಈ ದೃಶ್ಯ ಪ್ರಪಂಚವನ್ನುಂಟುಮಾಡುವದು. ಭ್ರಾಂತಿಮಾತ್ರ ಸ್ವರೂಪವಾದ ಈ ಜಗದಲ್ಲಿ ಲೋಕಭೇದದಿಂ ಹದಿನಾಲ್ಕು ಪ್ರಕಾರವಾಗಿರುವ ಪ್ರಾಣಿಗಳೊಳ್ ಕೆಲವರು ಕೇವಲ ಜ್ಞಾನಿಗಳಾಗಿಯೂ, ಕೆಲವರು ಜ್ಞಾನಾಭ್ಯಾಸಿಗಳಾಗಿಯೂ, ಕೆಲವರು ಮೂಢರಾಗಿಯೂ ಇರುವರು. ಇದರಲ್ಲಿ ಮನುಷ್ಯಜಾತಿಯವರಿಗೆ ರಾಗದ್ವೇಷ ಭಯಗಳಿಂದಾತಃಕರಣಕ್ಕೆ ಚಿಂತೆಗಳು ಶರೀರಕ್ಕೆ ರೋಗಗಳು ಸಹಸಿದ್ಧವಾಗಿರುವವು. ಚಲನವಿಲ್ಲದ ಸಮುದ್ರದಲ್ಲಿ ಬಂದೆಡೆಯೊಳ್ ತರಂಗವಂತೆ ಆತ್ಮನಲ್ಲಿ ಬಂದೆಡೆಯೊಳ್ ಜೀವರೂಪವಾದ ಕಲ್ಪನೆಯಿಂ ಚಲನಮುಂಟಾಯಿತೆಂದು ಪೇಳುವಲ್ಲಿ, ಪೂರ್ಣನಾದ ಪರಮಾತ್ಮನಲ್ಲಿ ಬಂದೆಡೆ ಎಂದರೇನು ! ನಿರ್ವಿಕಾರ ವಸ್ತುವಿನಲ್ಲಿ ವಿಕಾರವಾದದ್ದು ಹ್ಯಾಗೆಂದು ಶ್ರೀರಾಮನು ಕೇಳುವಲ್ಲಿ ವಸಿಷ್ಠನಿಂತೆಂದನು. ಎಲೈ ಸುಮತಿಯೇ ಆ ನಿಮಿತ್ತದಿಂದಾ ಕಾರಣದಿಂದೀ ಕಾರ್ಯವಾಯಿತೆಂಬುವದು ಶಾಸ್ತ್ರಕ್ರಮವು ವಾಕ್ಕಿಗೆ ವಾಚ್ಯವನ್ನವಲಂಬಿಸುವದರಿಂದಲೇ ಪ್ರವೃತ್ತಿಯಾಗುವದಾದ್ದರಿಂದ ಶಾಸ್ತ್ರಗಳು ಹೀಗೆ ಭೇದಬೋಧಕವಾದ ಸ್ವರೂಪದಿಂ ಪುಟ್ಟಿರುವವು. ಅಗ್ನಿಯು ಶಿಖೆಗಳೊಳೊಂದಕ್ಕೆ ಬಂದುಕಾರಣವೆನ್ನುವಲ್ಲಿ ಕಾರಣಪ್ರಾಪ್ಯವೆಂದರೆ ತೋರುವದು ಹ್ಯಾಗೆ ! ಚಿನ್ನದ ಒಡವೆಗಳೊಳ್ ಭೇದವು ಆಕಾರಗಳಲ್ಲಿರುವದಲ್ಲದೆ ಚಿನ್ನದಲ್ಲಿ ಹ್ಯಾಗೆ ಇಲ್ಲವೋ ಹಾಗೆ ಆತ್ಮನಿಂ ಪುಟ್ಟಿದ ವಸ್ತುಗಳಲ್ಲಿ ನಾಮರೂಪಗಳಲ್ಲಿ ಭೇದವಲ್ಲದೆ ಆತ್ಮನಲ್ಲಿ ಭೇದವಿಲ್ಲ. ಆದ್ದರಿಂ ಕಾರ್ಯಕಾರಣಗಳಿಗೆ ಅಭೇದವೆಂಬ ನ್ಯಾಯದಿಂ ಪ್ರಾಜ್ಞರು ಯಾವದೂ ಯಾವದರಿಂ ಪುಟ್ಟಿತೋ ಅದು

ಅದೇ ಎಂದು ಪೇಳುತ್ತಿರುವರು. ದಿಕ್ಕಾಲ ದೇಶಗಳೇ ಪದಾರ್ಥಗಳಿಗೆ ಭೇದ ಬೋಧಕವಾಗಿರುವವು. ಅವುಗಳನ್ನತಿಕ್ರಮಿಸಿದ ಪರಮಾತ್ಮನಲ್ಲಿ ಒಂದೆಡೆಯಲ್ಲೆಂಬ ವಚನವು ಮಾತಿನರೀತಿಗೆ ಸರಿಯಾಗುವದಲ್ಲದೇ ಆತ್ಮನಲ್ಲಿ ತಾನು ಪುಟ್ಟಿದ ಸ್ಥಲವಂತೋರಬಾರದು. ಈ ವಚನದಿಂ ಕಾರ್ಯಕ್ಕೆ ಸ್ವಲ್ಪತ್ವವು ಕಾರಣಕ್ಕೆ ಮಹತ್ವವು ಅದಕ್ಕೆ ಸ್ವರೂಪ ತ್ಯಾಗವಿಲ್ಲದಿರುವದು ಸಹ ತೋರುವದು. ಕಾರ್ಯಕಾರಣಗಳಿಗೆ ಭೇದವಿಲ್ಲದ್ದರಿಂದಲೇ ಆ ಚಿದ್ವಸ್ತುವು ನಿರ್ವಿಕಾರವೆನಿಸುವದು. ದೀಪಶಿಖೆಯಿಂ ಪ್ರಕಾಶವಾಯಿತೆಂಬುವಲ್ಲಿ ಭೇದವು ವಾಙ್ಮಾತ್ರದಲ್ಲಿರುವದಾದ್ದರಿಂದ ದೀಪವಂ ಬಿಟ್ಟು ಶಿಖೆಯನ್ನು ಶಿಖೆಯಂ ಬಿಟ್ಟು ಪ್ರಕಾಶವನ್ನು ಸಹ ತರುವದಕ್ಕೆ ಯಾರೂ ಸಮರ್ಥರಾಗಲಾರರು. ಹೀಗೆ ಪರಮಾತ್ಮನ ಶಕ್ತಿಯಿಂ ಪ್ರಪಂಚವಾಗಿರುವದೆಂಬುವಲ್ಲೂ ಅಭೇದವೇ ಇರುವದ್ದರಿಂದ ಸರ್ವವು ಬ್ರಹ್ಮವೆಂದು ಪ್ರಾಜ್ಞರು ಪೇಳುವರು. ಎಂದು ಪೇಳುತ್ತಿದ್ದ ವಸಿಷ್ಠನು ಎಲೈ ಮುನೀಂದ್ರನೇ ಕ್ಷೀರಸಾಗರದ ತರಂಗಗಳಂತೆ ನಿಮ್ಮ ಮಾತುಗಳು ಮನೋಹರವಾದಾಗ್ಯೂ ಪೂರ್ಣನಾದ ಪರಮಾತ್ಮನಿಂದೀ ಜಗವುಂಟಾಯಿತೆಂತಲೂ, ಅವನೇ ಹೀಗೆ ಪ್ರಕಾಶಿಸುವನೆಂತಲೂ, ಆತನ ಶಕ್ತಿಯಿಂದಿದು ಸ್ವೇಚ್ಛೆಯಿಂ ಪುಟ್ಟಿತೆಂತಲೂ, ವಿಚಿತ್ರರೂಪವಾಗಿರುವದ್ದರಿಂದ ವರ್ಷಾಕಾಲದ ದಿವಸದಂತೆ ನಾನೊಂದುಕ್ಷಣ ಪ್ರಕಾಶವಾಗಿಯೂ, ಒಂದುಕ್ಷಣ ವಪ್ರಕಾಶವಾಗಿಯು ಇರುವೆನು. ಪರಿಪೂರ್ಣನಾದ ಆ ಪರಮಾತ್ಮನಿಗೆ ಎರಡನೇ ಪದಾರ್ಥದಲ್ಲಿ ಹ್ಯಾಗೆ ಇಚ್ಛೆಯುಂಟಾಯಿತೋ ಪೇಳಬೇಕೆಂದು ಕೇಳುವ ಶ್ರೀರಾಮನಂಕುರಿತು ಮರಳಿ ನುಡಿದನದೆಂತೆನೆ,- ಎಲೈ ರಘೂತ್ತಮನೆ ಶಾಸ್ತ್ರಗಳಲ್ಲಿರುವಂತೆಯೂ, ಅನುಭವವಿರುವಂತೆಯೂ, ಪೂರ್ವೋತ್ತರ ವಿರೋಧವಿಲ್ಲದಂತೆಯೂ, ಇದ್ದದ್ದನ್ನು ಇದ್ದಹಾಗೆ ನಾನು ಪೇಳಿರುವೆನು. ಜ್ಞಾನದೃಷ್ಟಿಯುದಯಿಸಿ ತತ್ವಾರ್ಥವನುಭವಕ್ಕೆ ಬರಲು ನನ್ನಮಾತಿನ ಸಾರವು ಗೋಚರವಾಗುವದು. ವಾಚ್ಯವಾಚಕಾದಿ ಭೇದವಂ ಹಿಡಿಯದೇ ಉಪದೇಶವಂ ಮಾಡುವದಕ್ಕೆ ಆಗುವದಿಲ್ಲವಾದ್ದರಿಂದ ಶಾಸ್ತ್ರೋಪದೇಶಗಳಲ್ಲಿ ನನ್ನದು ನಾನೆಂತಲೂ, ನಾನು ನೀನೆಂತಲೂ, ಅದೇ ನೀನೆಂತಲೂ, ಇದು ನೀನಲ್ಲವೆಂತಲೂ, ಪ್ರಕೃತೋಪಯುಕ್ತವಾದ ಭೇದವು ತೋರುತಲಿರುವದು. ಅದನ್ನು ವಿವೇಕಿಗಳೇ ಪರಮಾರ್ಥವೆಂದು ಗ್ರಹಿಸುವರು. ತಿಳಿಯದ ಅರ್ಥವಂ ತಿಳಿಪುವದೇ ಉಪದೇಶವೆನಿಸುವದಾದ್ದರಿಂದ ಸರ್ವಸಾಧಾರಣವಾಗಿ ತಿಳಿದ ಭೇದವನ್ನೇಕೆ ಪೇಳಬೇಕು. ಅದೆಂತುಪದೇಶವಾಗುವದು. ನಾನು ನನ್ನದೆಂಬ ಜ್ಞಾನವೇ ಇಲ್ಲದ ಅತಿಮೂಢನಿಗೆ ವಿವೇಕ

ಉಂಟಾಗಲೊಂಸುಗ ಭೇದವಾದವೇ ಮೊದಲು ಉಪಯುಕ್ತವಾಗುವವು. ಅವರಿಂ ಚಿಜ್ಜಡಪದಾರ್ಥಜ್ಞಾನವಾಗಲು ನಿತ್ಯಾನಿತ್ಯವಿವೇಕವು ತೋರಿಸಲ್ಪಡುವದು. ಅದರಿಂ ವೈರಾಗ್ಯ ಉದಿಸಲು ಮೋಕ್ಷಾಪೇಕ್ಷೆಯುಂಟಾಗುವದು. ಬಳಿಕ ಶಮದಮಾದಿಗಳ ಸಾಧನೆಯಿಂ ಚಿತ್ತವು ಶುದ್ಧವಾಗಲು ಪರಮಾರ್ಥವಾದ ಕೈವಲ್ಯದ ಸ್ವರೂಪವು ತೋರಿಸಲ್ಪಡುವದು. ಅದರ ಅನುಭವದಿಂ ಜೀವನ್ಮುಕ್ತನಾದವನಿಗೆ ನಾನು ನನ್ನದೆಂಬುವದೇ ಮೊದಲಾದ ಭೇದಜ್ಞಾನವಣಗುವದು. ಅತಿಮೂಢನಿಗೂ ಜೀವನ್ಮುಕ್ತನಿಗೂ ಅಜ್ಞಾನ ಪರಮಾರ್ಥಜ್ಞಾನಗಳಿಂ ದುಃಖಸುಖಗಳಂ ನಿರಂತರವಾಗಿ ಅನುಭವಿಸುವದೇ ಭೇದವಲ್ಲದೆ ಮತ್ತೊಂದಿಲ್ಲ. ಅತಿ ಮೂಢನಿಗೆ ದುಃಖಜ್ಞಾನವೆಂತಾದೀತೆಂದರೆ ! ಅಂಥಾ ಪಾಷಾಣ ಸದೃಶವಾದ ಮೌಢ್ಯವು ಚರಪ್ರಾಣಿಗಳಲ್ಲಿ ಕಾಣುವದಿಲ್ಲವಾದ್ದರಿಂದ ತನ್ನದಂ ತಾನೆಂದು ಭಿಡವಿಡುವದೇ ಮನುಷ್ಯರಿಗೆ ಅತಿ ಮೌಢ್ಯವೆನಿಸುವದು. ಹೀಗಿರುವಲ್ಲಿ ಪರಮಾರ್ಥವಾದ ಭೇದವೆಲ್ಲಿರುವದೊ ನೀನೇ ಆಲೋಚಿಸುವನಾಗು. ಅದ್ವಿತೀಯನಾದ್ದರಿಂ ರಾಗದ್ವೇಷಾದಿ ದೋಷಗಳಿಲ್ಲದ ಪರಮಾತ್ಮನೇ ತಾನಾಗಿ ಜಗದ್ರೂಪದಿಂ ಪ್ರಕಾಶಿಸುವನೆಂತಲೂ, ಶಾಸ್ತ್ರೋಕ್ತಿಗಳಲ್ಲಿ ತೋರುವ ಭೇದವು ಪರಮಾರ್ಥವಲ್ಲನೆಂತಲೂ ನಿಶ್ಚೈಸುವನಾಗು. ಎಲೈ ಮಾನವೇಂದ್ರನೇ! ಸಕಲ ಪ್ರಾಣಿಗಳಂ ದುಃಖಪಡಿಸುವ ತನ್ನ ಸ್ವಭಾವವಂ ಸಹಿಸಲಾರದ ಅವಿದ್ಯೆಯು ಸ್ವನಾಶಕ್ಕೋಸುಗ ವಿದ್ಯೆಯಂ ಪ್ರಾರ್ಥಿಸುವದು. ಅಜ್ಞಾನಿಗಳಶೆಳದಾಟದಿಂ ಭಯಪಡುವ ಸಚ್ಛಾಸ್ತ್ರಗಳು ಅವರಿಗೆ ಪರಮಾರ್ಥವಂ ತೋರಿ ತಾವು ತಪ್ಪಿಶಿಕೊಳ್ಳುವವು. ಅಸ್ತ್ರದಿಂದಸ್ತ್ರವು ವಿಷದಿಂ ವಿಷವು ಶತ್ರುವಿನಿಂದ ಶತ್ರುವು ಮಲದಿಂ ಮಲವು ವಜ್ರದಿಂ ವಜ್ರವು ಭೇದಿಸಲ್ಪಡುವಂತೆ ಅವಿದ್ಯೆಯಿಂದಲೇ ಅವಿದ್ಯೆಯು ಪೋಗುವದು. ಸೂಳೆಯಂತೆ ಮೋಹವಂ ಪುಟ್ಟಿಸಿ ವಿವೇಕವಂ ತಪ್ಪಿಶಿ ಅನೇಕ ಪ್ರಜೆಗಳಂ ಪೆತ್ತು ವಿಚಿತ್ರ ವಿಲಾಸದಿಂ ಪ್ರಕಾಶಿಸುತ್ತಿರುವ ಅವಿದ್ಯೆಯು ಸ್ವರೂಪಜ್ಞಾನಮಾತ್ರದಿಂದಲೇ ನಾಚಿಕೆಯಿಂದೋಡಿಪೋಗುವಳು. ಪ್ರಸವಗಳಿಂ ದುಃಖಪಡಲಾರದೆ ಪುರುಷನ ಸ್ವರೂಪವಂ ತೋರಿ ವೈರಾಗ್ಯವಂ ಪುಟ್ಟಿಸುವಳು. ಪರಮಾರ್ಥವಾಗಿ ಇಲ್ಲದವಳಾದಾಗ್ಯೂ ಶಾಶ್ವತವಾದ ಬ್ರಹ್ಮಕ್ಕಿಂತಲೂ ಅಧಿಕವಾಗಿರುವಳು. ಈ ಮಾಯೆಯು * ಕ್ಷರಾಕ್ಷರರೂಪವಾದ ತನ್ನ ವಿಲಾಸವಂ ತೋರಿದ್ದರಿಂದ ಸ್ವಭಾವದಿಂ ವ್ಯಾಪಕವಾದ ಬ್ರಹ್ಮವು ಸರ್ವ ಭೂತಗಳೆಂತಲೂ, ಕೂಟಸ್ಥನೆಂತಲೂ, ಪ್ರಸಿದ್ಧವಾಗಿ ಅವುಗಳಿಗೆ ನಿಯಾಮಕಭಾವದಿಂ ಪುರುಷೋತ್ತಮನೆನಿಸಿಕೊಂ

* ಕ್ಷರ—ನಾಶವನ್ನು ಹೊಂದುವ ಜಗದ್ರೂಪ.
ಅಕ್ಷರ—ನಾಶರಹಿತವಾದ ಕೂಟಸ್ಥ ರೂಪ.

ಡಿತು. ಗುರುಶಾಸ್ತ್ರ ವಾಕ್ಯ ಸ್ವಾನುಭವರೂಪದಿಂ ಪ್ರಕಾಶಿಸುವ ಈ ಮಾಯೆಯಿಂ ಸ್ವರೂಪ ಸಾಕ್ಷಾತ್ಕಾರವಾಗುವಲ್ಲಿ ನನ್ನ ವಾಗ್ರೂಪವಿಂದಿರುವ ಈ ಮಾಯೆಯ ಮುಖ್ಯಾಶಯವಂ ನೀನು ತಿಳಿಯುತ್ತಿಯೇ ಅದಂ ತಿಳಿಯುವವರಿಗೆ ನಾನು ಪೇಳಿದ್ದಂ ಸತ್ಯವೆಂದು ತಿಳಿಯುವನಾಗು. ನಾನು ಪೇಳುವದೇನೆಂದರೆ,—ದೃಶ್ಯವಾದ ಈ ಪ್ರಪಂಚವೆಲ್ಲವೂ ಮನಃಕಲ್ಪಿತವಾದ್ದರಿಂದ ಅಸತ್ತೆಂದು ತಿಳಿಯತಕ್ಕದ್ದು. ಬ್ರಹ್ಮಸತ್ತಾವಲಂಬನದಿಂ ಪ್ರಕಾಶಿಸುವದಾದ್ದರಿಂದ ಸತ್ತೆಂತಲಾದರೂ ತಿಳಿಯತಕ್ಕದ್ದು. ಉಭಯಮಾರ್ಗಗಳಲ್ಲೂ ಅಸಂಗಭಾವ ಉಂಟಾಗುವದ್ದರಿಂದ ಯಾವದನ್ನಾದರೂ ಒಂದನ್ನು ಹಿಡಿಯುವನಾಗು. ಈ ಎರಡು ಮಾರ್ಗಗಳನ್ನೂ ಬಿಟ್ಟು ಯಾವನು ದೇಹೇಂದ್ರಿಯಾದಿಗಳಂ ತಾನೆಂದು ಗ್ರಹಿಸುವನೋ ಅವನು ಸಂಸಾರಸಮುದ್ರದಲ್ಲಿ ಮುಳುಗುವನು. ಜಲದಲ್ಲಿ ಧೂಳಿಯಂತೆ ಪರಮಾತ್ಮನಲ್ಲಿ ಯಾವ ದೋಷವೂ ಇಲ್ಲ. ಶಬ್ದಾರ್ಥರಂಜನೆಗಳು ವ್ಯವಹಾರಾರ್ಥವಾಗಿಯೇ ಪುಟ್ಟಿರುವವು. * ವ್ಯವಹಾರಗಳಾದರೋ ಶಾಸ್ತ್ರವೆಂಬ ವಸ್ತ್ರಕ್ಕೆ ಸೂತ್ರಗಳಂತಿರುವವು. ಅವಿದ್ಯೆಯೆಂಬ ಅಂಧಕಾರದಿಂ ಮರೆಯಾಗಿರುವ ಆತ್ಮನು ಜ್ಞಾನದೀಪವಿಲ್ಲದೆ ಗೋಚರನಾಗನು. ಜ್ಞಾನಕ್ಕೆ ಶಾಸ್ತ್ರವೇ ಕಾರಣವಾಗಿರುವದ್ದರಿಂದ ಶಾಸ್ತ್ರಾಭ್ಯಾಸವಾವಶ್ಯಕವಾಗಿರುವದು. ಆತ್ಮಜ್ಞಾನದಿಂದ ಅವಿದ್ಯೆಯ ಪಾರವಂ ಹೊಂದುವದೇ ಪರಮಗತಿಯೆನಿಸುವದು. ಎಲೈ ಸುಗುಣಾಭಿರಾಮನೇ! ಈ ಅವಿದ್ಯೆಯು ಎಲ್ಲಿಂದುದಿಸಿತೆಂದಾಲೋಚಿಸದೆ ಇದಕ್ಕೆ ನಾಶವಾಗುವರೀತಿಯನ್ನೇ ಸರ್ವದಾ ಚಿಂತಿಸುವನಾಗು. ಇದು ನಷ್ಟವಾಗಲು ಇದರ ಉತ್ಪತ್ತಿ ಸ್ಥಿತಿ ನಾಶ ಕ್ರಮಗಳು ನಿನಗೆ ಗೊತ್ತಾಗುವವು. ಪ್ರಾಜ್ಞರೂ ಶೂರರೂ ಕೂಡ ಈ ಅವಿದ್ಯೆಯಿಂ ವಂಚಿಸಲ್ಪಡುವರಾದ್ದರಿಂದ ಸೂಳೆಯಂತೆ ಸರ್ವರಿಗೂ ಮೋಹಕಳಾಗಿ ದುಷ್ಕರ್ಮ ಪರಂಪರೆಯಂತೆ ಆಧಿವ್ಯಾಧಿಗಳಿಗೆ ಜನನಿಯಾಗಿ ಅಜ್ಞಾನವೆಂಬ ವೃಕ್ಷಕ್ಕೆ ಮಂಜರಿಯಾಗಿ ಸಮಸ್ತವಾದ ಆಪತ್ತುಗಳಿಗೂ ಸಂಪಾದಕಗಳಾಗಿ ಅನರ್ಥಗಳಂ ಪರಂಪರೆಯಾಗಿ ತಂದುಬಿಡುವ ಈ ಅವಿದ್ಯೆಯಿಂ ಮರಳಿ ಬಾರದಂತೆ ಪೋಗಲಾಡಿಸುವನಾಗು. ಎಂದು ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಅವಿದ್ಯಾವಿಲಾಸ ನಿರೂಪಣವೆಂಬ ನಾಲ್ಕನೆ ತರಂಗಕ್ಕೆ ಮಂಗಳಮಹಾ.

---

* ನೂಲಿನಿಂದ ಬಟ್ಟೆ ಹೇಗೆ ಪುಟ್ಟಿರುವದೊ ಹಾಗೆಯೇ ವ್ಯವಹಾರದಿಂದಲ್ಲೇ ಶಾಸ್ತ್ರವು ಪುಟ್ಟಿರುವದು. ಶಾಸ್ತ್ರವು ವ್ಯವಹಾರಕ್ಕಿಂತಲೂ ಪ್ರತ್ಯೇಕವಾದದ್ದೆಂದು ತಿಳಿಯಲಾಗದು.

ಶ್ರೀಗಣಪತಿಶಾರದಾಗುರುಭ್ಯೋನಮಃ.



## ಅವಿದ್ಯಾರೋಗಕ್ಕೆ ಚಿಕಿತ್ಸೆ ಪ್ರಾರಂಭವು.



ಬಳಿಕ ವಸಿಷ್ಠನಿಂತೆಂದನು. ಎಲೈ ಶುಭಮತಿಯೇ ! ಈ ಅವಿದ್ಯಾರೋಗಕ್ಕೆ ಚಿಕಿತ್ಸೆಯಂ ಪೇಳುವೆನು ಸಾವಧಾನವಾಗಿ ಕೇಳುವನಾಗು. ನಿರಾಕಾರವಾಗಿರುವ ನಾಮಧೇಯರಹಿತವಾದ ಆ ವಸ್ತುವು ಜಡವಲ್ಲದ್ದರಿಂ ಜ್ಞಾನವೆನಿಸುವದು. ಸಜಾತಿ ವಿಜಾತಿ ಸ್ವಗತ ಭೇದವಿಲ್ಲದೇ ಪರಿಪೂರ್ಣವಾದ್ದರಿಂದಲೇ ಬ್ರಹ್ಮವೆನಿಸುವದು. ಅದರಿಂದಲೇ ರಾಗದ್ವೇಷಾದಿಗಳಿಂ ರಹಿತವಾಗಿರುವದು. ದಿಗ್ದೇಶ ಕಾಲಗಳಿಗೂ ವ್ಯಾಪಕವಾದ ಈ ವಸ್ತುವೇ ಸಮಸ್ತ ವ್ಯಾಪಾರ ವ್ಯವಹಾರಗಳಿಗೂ ಸ್ಥಾನವಾಗಿರುವದು. ಆದ್ದರಿಂದ ಸಮಸ್ತ ಪ್ರಪಂಚಗಳು ಈ ಸಮುದ್ರಕ್ಕೆ ತೆರೆಗಳೆನಿಸುವವು. ಪ್ರಾಣಿಗಳು ಇದಕ್ಕೆ ತುಂತುರುಗಳೆನಿಸುವವು. ಇಲ್ಲಿ ಗುಳ್ಳೆಗಳಂತೆ ಅನೇಕ ಕೋಟಿ ಬ್ರಹ್ಮಾಂಡಗಳು ಪುಟ್ಟಿ ಪುಟ್ಟಿ ಅಣಗುತಲಿರುವವು ಅದೆಂತೆಂದರೆ:— ಈ ಸಮುದ್ರವು ಜಡವಲ್ಲದ್ದರಿಂದಿದರ ಹೃದಯದೊಳ್ ಸ್ವೇಚ್ಛೆಯಿಂ ಕ್ರಿಯಾಶಕ್ತಿಯುದಿಸುವದು. ಅದರಿಂದೀ ಆತ್ಮನು ವಾಯುವಿನಂತೆಯೂ ದೀಪದಂತೆಯೂ ತನ್ನಲ್ಲಿಯೇ ಸ್ವೇಚ್ಛೆಯಿಂ ಚಲಿಸುವನು. ಶರತ್ಕಾಲದ ಬಿಸಲಿನಿಂ ಜಲವು ಕನಕರೂಪವಾಗಿ ಪೊಳೆವಂತೆ ಇಂದ್ರಿಯ ವ್ಯಾಪಾರದಿಂ ಚಲಿಸುವನು. ಗಗನದೊಳ್ಮುಕ್ತಾಸರವು ದೃಷ್ಟಿಯಿಂದುಂಟಾಗುವಂತೆ ತನ್ನ ಚಲನದಿಂ ತಾನೇದೃಶ್ಯವಾಗುವನು. ಇಲ್ಲಿಸಮುದ್ರವೇ ಪರಮಾತ್ಮನು ಆತ್ಮನೇ ಈಶ್ವರನು ಕನಕರೂಪವಾಗಿ ಪೊಳದದ್ದೇ ಲಿಂಗಶರೀರವು ಅದರಿಂದುಂಟಾದ ದೃಶ್ಯವೇಪ್ರಪಂಚರೂಪವಾಗಿ ಬೆಳೆವದೆಂದು ತಿಳಿಯುವನಾಗು. ಪರಮಾತ್ಮನಲ್ಲುದಯಿಸಿದ ಕ್ರಿಯಾಶಕ್ತಿಯನ್ನು ದೇಶಕಾಲ ಕ್ರಿಯಾಶಕ್ತಿಗಳು ಸಖಿಯರಂತೆ ಅನುಸರಿಸುವವು. ಕ್ರಿಯಾರೂಪವಾದ ಈ ಚಿಚ್ಛಕ್ತಿಯು ಅನಾದ್ಯಂತವಾದ ಪರಮಪದದಲ್ಲಿದ್ದಾಗ್ಯೂ ಅದಕ್ಕೆ ತನ್ನಸ್ವರೂಪವು ಭಿನ್ನವೆಂದುಭಾವಿಸುವದು. ಆಗಲೆ ಈ ಚಿಚ್ಛಕ್ತಿಗೆ ನಾಮರೂಪಸಂಖ್ಯಾದಿ ದೃಷ್ಟಿಗಳುಂಟಾಗುವವು. ಹೀಗೆ ಭಾವನಾಮಾತ್ರದಿಂ ಸಮುದ್ರದಿಂತೆರೆಯಂತೆ ಪೊರಮಟ್ಟ ಚಿಚ್ಛಕ್ತಿಯು ಕ್ಷೇತ್ರಜ್ಞನೆನಿಸುವದು. ಆಕಾರವಿಶೇಷದಿಂ ಕನಕಕ್ಕೆ ಕಟಕವು ಭಿನ್ನವಾಗುವಂತೆ ಈ * ಕ್ಷೇತ್ರಜ್ಞನು ಪರಮಾತ್ಮನಿಗೆ ಭಿನ್ನನೆಂದು ಪೇಳಲ್ಪ

* ಜೀವಕ್ಷೇತ್ರಜ್ಞ ಇವುಗಳು ಪರ್ಯಾಯಪದಗಳು.

ಹುವನು. ದೀಪದಿಂ ದೀಪವು ಪುಟ್ಟಿದಾಗ್ಯೂ ದೇಶಕಾಲಗಳಿಂ ಭಿನ್ನವಾಗು ವಂತೆ ಈ ಆತ್ಮನು ಭಿನ್ನವಾಗುವನು. ದೇಶಕಾಲ ಕ್ರಿಯಾಶಕ್ತಿಗಳಿಂ ಕೂಡಿ ಪದಾರ್ಥಜ್ಞಾನದಲ್ಲಿ ನಿಂದಿರುವೀ ಆತ್ಮನೇ ಬುದ್ಧಿಯೆಂತಲೂ ಪೇಳಲ್ಪಡುವನು. ಕ್ಷೇತ್ರವೆನಿಸುವ ಶರೀರವನ್ನಿವನು ತಿಳಿಯುವದ್ದರಿಂ ಕ್ಷೇತ್ರಜ್ಞನೆಂಬ ಸಂಜ್ಞೆ ಯಂ ಪಡೆವನು ಕ್ಷೇತ್ರವಾಸನೆಯಿಂದೀ ಆತ್ಮನು ಅಹಂಕಾರವೆಂತಲೂ ಸಂಕಲ್ಪ ಕಲ್ಪನೆಗಳಿಂ ಮನವೆಂತಲೂ ಪೇಳಲ್ಪಡುವನು. ವಿಕಲ್ಪಕಲ್ಪನೆಗಳಿಂದೀಮನವು ಇಂದ್ರಿಯಭಾವವಂ ಹೊಂದುವದು. ಸಾಮಾನ್ಯ ಜ್ಞಾನವಿಶೇಷಜ್ಞಾನಗಳೇ ಸಂ ಕಲ್ಪ ವಿಕಲ್ಪಗಳೆನಿಸುವವು. ಭೇದಜ್ಞಾನದಿಂದುಂಟಾದ ದುಃಖಗಳ ಸ್ಮರಣೆ ಯಿಂದೀ ಆತ್ಮನೇಚಿತ್ತವೆನಿಸುವನು. ಪಾಕವಶದಿಂಫಲವು ರೂಪಾಂತರವಂ ಪಡೆವಂತೆ ಭಾವನಾಮಾತ್ರದಿಂ ಭಿನ್ನನಾದ ಈ ಆತ್ಮನು ಅಹಂಕಾರವಾಗುವನು. ಅಹಂಕಾರ ವುಬುದ್ಧಿಯಾಗುವದು. ಬುದ್ಧಿಯು ಮನಸ್ಸಾಗುವದು. ಇದೇಚಿತ್ತ ವೆಂತಲೂ ಪೇಳಲ್ಪಡುವದು, ಗೋವು ವೃಷಭವನ್ನನುಸರಿಸುವಂತೆ ಈ ಮನವ ನ್ನಿಚ್ಛಾಶಕ್ತಿಗಳು ಪಿಡಿಯುವವು. ನದಿಗಳಿಂದೊಡಗೂಡಿದ ಸಮುದ್ರದಂತೆ ಇಚ್ಛಾಶಕ್ತಿಗಳಿಂ ಘನವಾದ ಮನವು ತಾನೇ ಅಹಂಕಾರವಂ ಹೊಂದಿ ತೆರಳೇ ಹುಳುವಿನಂತೆ ತನ್ನ ಕಲ್ಪನಾಸೂತ್ರಗಳಿಂ ತಾನೇ ಬದ್ಧವಾಗುವದು. ಕ್ರಿಯಾ ಶಕ್ತಿಯು ಪ್ರಕಾಶದಲ್ಲಿ ಭೇದಜ್ಞಾನರೂಪದಿಂ ಪೊರಮಟ್ಟ ಅವಿದ್ಯೆಯು ಹೀಗೆ ಪುಟ್ಟಿಸಿದ ಜಗವೆಂಬ ಅರಣ್ಯದಲ್ಲಿ ರಾಕ್ಷಸಿಯಂತೆ ವೃದ್ಧಿಯುಂಪಡದು ಆತ್ಮನಿಗೆ ತಾನು ಬದ್ಧನೆಂಬ ಕಲ್ಪನೆಯನ್ನುಂಟುಮಾಡುತ್ತಾ ವಿದ್ಯಾಮಹಿಮೆಯಂ ಮರೆ ಸುವದು. ಸಂಕಲ್ಪಕಲ್ಪಿತವಾದ ತನ್ಮಾತ್ರ ಸಮೂಹಗಳಲ್ಲಿದ್ದುಕೊಂಡು ವಾಸ ನಾವೇಶದಿಂ ನಾನಾಕಾರ್ಯಗಳಂಮಾಡುತ್ತಾ ಪಂಜರಕ್ಕೆಬಿದ್ದ ಸಿಂಹದಂತೆಯೂ ಈ ಆತ್ಮನು ಬದ್ಧನಾಗುವನು. ಮನವೆಂತಲೂ, ಬುದ್ಧಿಯೆಂತಲೂ, ಜ್ಞಾನವೆಂ ತಲೂ, ಕ್ರಿಯೆಯಂತಲೂ, ಅಹಂತೇಯಂತಲೂ, ಪುರ್ಯಷ್ಟಕವೆಂತಲೂ, ಪ್ರಕೃತಿ ಯಂತಲೂ, ಮಾಯೆಯಂತಲೂ, ಮಲವೆಂತಲೂ, ಕರ್ಮವೆಂತಲೂ, ಬಂಧವೆಂತ ಲೂ, ಚಿತ್ತವೆಂತಲೂ, ಅವಿದ್ಯೆಯಂತಲೂ, ಇಚ್ಛೆಯಂತಲೂ, ವಾಸನಾವೇಶದಿಂ ಮಾಡಿದ ಕರ್ಮಫಲಗಳನ್ನನುಭವಿಸುವ ಈ ಆತ್ಮನೇ ಪ್ರಾಜ್ಞರಿಂದೊಂದೊಂ ದೆಡೆಯಲ್ಲಿ ಪೇಳಲ್ಪಡುವನು. ಸಂಕಲ್ಪಕಲ್ಪನಾರೂಪವಾದ ಮನೋರೂಪ ವಂ ಪಡೆದದ್ದರಿಂದಾತ್ಮನಿಗೆ ಈ ಅವಸ್ಥೆ ಉಂಟಾದುದು. * ಅರಿಷಡ್ವ

* ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವುಗಳು ಅರಿಷಡ್ವ ರ್ಗಗಳು.

ರ್ಗಗಳಿಗೆ ಅಧೀನವಾಗಿ ಜರಾಮರಣ ಮೋಹಗಳಲ್ಲೂ ಸಂಸಾರಭಾವನೆಯಂ ಬಿಡದೆ ನರಕಗಳಿಗೆ ಮಾರ್ಗವಾದ ವಿಷಯಗಳೆಂಬ ಹಳ್ಳಗಳಲ್ಲಿ ಉರುಳಾಡುತ್ತಾ ಬೀಜದಂತೆ ಸಂಸಾರ ವಿಷವೃಕ್ಷವನ್ನಂತರಂಗದಲ್ಲಿಟ್ಟುಕೊಂಡು ಚಿಂತಾಗ್ನಿ ಜ್ವಾಲೆಗಳಿಂ ಸುಡಲ್ಪಟ್ಟಾಗ್ಯೂ ಕೋಪವೆಂಬ ಹೆಬ್ಬಾವಿನಿಂ ನುಂಗಲ್ಪಟ್ಟಾಗ್ಯೂ, ಕಾಮವೆಂಬ ಸಮುದ್ರದ ತೆರೆಗಳಿಂ ಬಡಿಯಲ್ಪಟ್ಟಾಗ್ಯೂ, ಮೃತಸಂಜೀವನ ವಿದ್ಯೆಯಂ ಪಡದಿರುವಂತೆ ಮರಳಿ ಮರಳಿ ಎದ್ದು ಕುಳಿತು ಗುಂಪು ತಪ್ಪಿದ ಮರಿಜಿಂಕೆಯಂತೆಯೂ, ದೀಪಸಂಬಂಧದಿಂ ರಕ್ಕೆಯಿಲ್ಲದ ಪತಂಗದಂತೆಯೂ, ಮಣಲೆದೋಳ್ಬಿದ್ದ ಮೀನಿನಂತೆಯೂ, ಬೇರ್ಕಡಿದು ಬಿಸಲಿನಲ್ಲಿ ಬಿಸುಡಲ್ಪಟ್ಟ ಬಿಸಕುಸುಮದಂತೆಯೂ, ವ್ಯಥೆಪಡುತ್ತಾ ವೈರಾಗ್ಯವೇ ಸುಖಪ್ರದವೆಂದು ತೋರುತ್ತಿದ್ದಾಗ್ಯೂ ದುಃಖಪ್ರದವಾದ ವಿಷಯಗಳನ್ನೇ ಧ್ಯಾನಿಸುತ್ತಾ ಸಕಲ ದುಃಖಗಳಿಗೂ ಕಾರಣವಾಗಿ ಮನನವೆಂಬ ಕೆಸರಿನೋಳ್ ಬಿದ್ದಿರುವ ಮನವೆಂಬ ಮೃಗವಂ ನೀನು ಉದ್ಧರಿಸುವನಾಗು. ಶುಭಾಶುಭಗಳಿಂದುಂಟಾಗುವ ಸುಖದುಃಖಗಳಿಂ ಬೆರಗಾಗುತ ಜರಾಮರಣ ಮೋಹಗಳಿಂ ವ್ಯಥೆಪಡುವ ಮನಸ್ಸಿನಲ್ಲಿ ಯಾವನಿಗೆ ದಯೆಯುಂಟಾಗುವದಿಲ್ಲವೋ ಅವನು ನರರಾಕ್ಷಸನೆಂತಲೇ ತಿಳಿಯುವೆನು. ಎಲೈ ಮನುಕುಲಚಂದ್ರನೇ ಕಾಡುಗಿಚ್ಚಿನಿಂ ಕಿಡಿಗಳಂತೆಯೂ, ಸಮುದ್ರದಿಂ ತುಂತುರುಗಳಂತೆಯೂ, ಪರಮಾತ್ಮನಿಂದುದಯಿಸುವ ಶರೀರಧಾರಿಗಳಲ್ಲಿ ಬ್ರಹ್ಮ ವಿಷ್ಣು ರುದ್ರಾದಿಗಳು ಸ್ವರೂಪ ಜ್ಞಾನಕ್ಕೆ ಚ್ಯುತಿ ಇಲ್ಲದ್ದರಿಂದ ಪರಮಾತ್ಮನಂತೆಯೇ ನಿತ್ಯಾನಂದರಾಗಿ ಉಪಾಸ್ಯರಾಗಿರುವರು. ಇಂದ್ರಾಗ್ನಿ ಮೊದಲಾದ ದೇವತೆಗಳು ಬ್ರಹ್ಮಾದಿಗಳಿಗೆ ಅಧೀನರಾದವರಾದಾಗ್ಯೂ ಲೋಕಹಿತವಾದ ವ್ಯಾಪಾರಗಳಿಂದುಪಾಸ್ಯರಾಗಿರುವರು. ಸಿದ್ಧ ಚಾರಣ ಗಂಧರ್ವ ವಿದ್ಯಾಧರ ಕಿನ್ನರ ಕಿಂಪುರುಷರೆಂತಲೂ, ಯಕ್ಷರಕ್ಷಃಪಿಶಾಚ ಕೂಶ್ಮಾಂಡವೇ ತಾಳಗಳೆಂತಲೂ, ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂತಲೂ, ಶ್ವಪಚ ಚಂಡಾಲ ಕಿರಾತ ಪುಲ್ಕಸರೆಂತಲೂ, ಗೋಮಹಿಷ ಸಿಂಹ ವ್ಯಾಘ್ರ ಹಯ ಗಜ ಭುಜಂಗ ವಿಹಂಗ ಮೊದಲಾದ ತಿರ್ಯಗ್ಜಾತಿಗಳೆಂತಲೂ, ತೃಣ ವೃಕ್ಷ ಲತೌಷಧಿ ಕಮಲ ಕುವಲಯ ಗಿರಿ ನದೀ ಸಮುದ್ರ ತಟಾಕ ಶಿಲಾದಿ ಜಡ ಪ್ರಾಣಿಗಳೆಂತಲೂ, ನಾನಾವಿಧ ರೂಪಗಳಿಂ ಪ್ರೊರಮಡುವ ಪ್ರಾಣಿಗಳಲ್ಲಿ ಕೆಲವರು ಜೀವನ್ಮುಕ್ತರಾಗಿಯೂ, ಕೆಲವರು ಭವಿಷ್ಯನ್ಮುಕ್ತಿಗಳಾಗಿಯೂ, ಕೆಲವರು ಮುಕ್ತಿ ದೂರರಾಗಿಯೂ, ಕೆಲವರು ಸಂಸಾರ ಮಗ್ನರಾಗಿಯೂ, ಕೆಲವರು ವಿರಕ್ತರಾಗಿಯೂ, ಕೆಲವರು ಡಾಂಭಿಕರಾಗಿಯೂ, ಕೆಲವರು ಸದಾಚಾರ

ಸಂಪನ್ನರಾಗಿಯೂ, ಕೆಲವರು ದುರಾಚಾರ ಪರಾಯಣರಾಗಿಯೂ, ಕೆಲವರು ಅಂಗಹೀನರಾಗಿಯೂ, ಕೆಲವರು ಸುಂದರರಾಗಿಯೂ, ಕೆಲವರು ಶ್ರೀಮಂತರಾಗಿಯೂ, ಕೆಲವರು ದರಿದ್ರರಾಗಿಯೂ, ಉತ್ತಮಾಧಮ ಮಧ್ಯಮಭೇದದಿಂ ನಾನಾಪ್ರಕಾರವಾಗಿರುವರು. ಸ್ತ್ರೀ ಪುರುಷ ನಪುಂಸಕರೂಪದಿಂದಿರುವ ಈ ಪ್ರಾಣಿಗಳೆಲ್ಲರೂ ಮಹಾ ಪ್ರಳಯದಲ್ಲಿ ಪರಮಾತ್ಮನಲ್ಲಿ ಲೀನರಾಗುವರು. ಹೀಗೆ ಬ್ರಹ್ಮ ವಿಷ್ಣು ರುದ್ರಾದಿಗಳ ಸೃಷ್ಟಿಗಳು ಅನೇಕ ಸಹಸ್ರಸಂಖ್ಯೆಯಾಗಿ ಪೂರ್ವದಲ್ಲಿ ಆಗಿರುವವು. ಮುಂದಕ್ಕೂ ಆಗುವವು. ಸೃಷ್ಟಿಯೆಂಬುವದು ಒಂದುವೇಳೆ ಬ್ರಹ್ಮನಿಂದಲೂ, ಒಂದುವೇಳೆ ವಿಷ್ಣುವಿನಿಂದಲೂ, ಒಂದುವೇಳೆ ರುದ್ರನಿಂದಲೂ, ಒಂದುವೇಳೆ ಮುನಿಗಳಿಂದಲೂ, ಏಕರೀತಿಯಾಗಿಯೂ ಅನೇಕಪ್ರಕಾರವಾಗಿಯೂ ಆಗುವದು. ಹ್ಯಾಗೆ ಆದಾಗ್ಯೂ ರಜಸ್ಸತ್ವ ತಮೋ ಗುಣಗಳಿಂದಲೇ ಸೃಷ್ಟಿ ಸ್ಥಿತಿ ಸಂಹಾರಗಳೆಂಬುವದು ಕ್ಲ್ ಕ್ಲ್ಪ್ತವಾಗಿರುವದು. ಎಂದು ಪೇಳುವಲ್ಲಿ ಎಲೈ ಗುರುವೇ ಹೀಗೆ ಸರ್ವಪ್ರಾಣಿಗಳೂ ಪ್ರಳಯದೊಳ್ ಪರಮಾತ್ಮನಂ ಹೊಂದುವಲ್ಲಿ ಪುನಃ ಅವರಿಗೆ ದೇಹಬರುವದಕ್ಕೆ ಕಾರಣವೇನೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಟನಿಂತೆಂದನು,- ಎಲೈ ಮಾನವೇಂದ್ರನೇ! ಸಮಸ್ತ ಪ್ರಾಣಿಗಳಿಗೂ ಪರಮಾತ್ಮನೇ ಆಧಾರವಾಗಿಯೂ, ಅಂತರ್ಯಾಮಿಯಾಗಿಯೂ, ಬುದ್ಧಿಪ್ರೇರಕನಾಗಿಯೂ, ಸಕಲ ಕರ್ಮಕಾರಕನಾಗಿಯೂ, ಕರ್ಮಫಲಭೋಜಕನಾಗಿಯೂ, ಇರುವದ್ದರಿಂದ ಅವನಂಬಿಟ್ಟು ಒಂದುನಿಮಿಷವಾದರೂ ಒಂದುಪ್ರಾಣಿ ಇರುವದಿಲ್ಲ. ಆದಾಗ್ಯೂ ಆ ಜ್ಞಾನವಿಲ್ಲದ್ದರಿಂ ಜನಗಳು ಬೇರೆಯಾಗಿರುವರು. ನಿದ್ರೆಯಲ್ಲಿ ಆತ್ಮನಿಗೆ ಪರಮಾತ್ಮ ಪ್ರಾಪ್ತಿಯಾಗುವಂತೆ ಪ್ರಳಯದಲ್ಲೂ ಆಗುವದು. ಅಜ್ಞಾನದಿಂ ಬೇರೆಯಾಗಿದ್ದದ್ದರಿಂದ ಜ್ಞಾನವುಂಟಾಗಲು ಕೈವಲ್ಯವೇ ಸಿದ್ಧವಾಗಿರುವದು. ಆದ್ದರಿಂದ ಅವನಿಗೆ ಪರಮಾತ್ಮಪ್ರಾಪ್ತಿಯೆನ್ನುವದು ಪುನರಾವೃತ್ತಿಯನ್ನುವದು ಸಹಾ ಅಸಿದ್ಧವಾಗುವದು. * ಅಜ್ಞಾನದಿಂದ ಜ್ಞಾನಹೋಗುವದೇ ಪರಮಾತ್ಮನ ಪ್ರಾಪ್ತಿಯನಿಸುವದು. ಭೇದದರ್ಶನರೂಪವಾದ ಅಜ್ಞಾನದಿಂದಲೇ ಈ ಜಗವುಂಟಾಗಿರುವದಾದ್ದರಿಂದ ಉತ್ಪತ್ತಿ ಪ್ರಳಯಗಳು ಬಂಧ ಮೋಕ್ಷಗಳು ಸಹಾ ಸುಳ್ಳೆಂದು ಪೂರ್ವದಲ್ಲೇ ಪೇಳಿರುವೆನು. ಅದೇನುಕಾರಣ ಮಾರಮೆಗೆ ಬಂದು

* ಅಜ್ಞಾನದಿಂದ × ಅಜ್ಞಾನಹೋಗುವದೇ=ಅಜ್ಞಾನದಿಂದ ಜ್ಞಾನಹೋಗುವದೆ ಪದಚ್ಛೇದವನ್ನು ಮಾಡಬೇಕು. ಈ ಅರ್ಥವು ಹಿಂದೆಯೇ ವಿಶದವಾಗಿ ನಿರೂಪಿಸಲ್ಪಟ್ಟಿರುತ್ತದೆ.

ದೋ ತಿಳಿಯಲಿಲ್ಲ. ದೀರ್ಘವಾದ ಸ್ವಪ್ನದಂತೆಯೂ, ಭ್ರಮೆಯಿಂದುಂಟಾದ ಪರ್ವತದಂತೆಯೂ, ಈ ಜಗವು ಕಾಣುತ್ತಿರುವದಲ್ಲದೆ ಇದು ವಾಸ್ತವವಲ್ಲ. ಜಲದಲ್ಲಿ ಸುಳಿಯಂತೆಯೂ, ಬೀಜದಲ್ಲಿ ಮೊಳಕೆಯಂತೆಯೂ, ಮೊಳಕೆಯಲ್ಲಿ ಚಿಗರಿನಂತೆಯೂ, ಚಿಗರಿನಲ್ಲಿ ಪುಷ್ಪದಂತೆಯೂ, ಪುಷ್ಪದಲ್ಲಿ ಫಲದಂತೆಯೂ, ಕಲ್ಪನಾರೂಪವಾದ ದೇಹವು ಮನವಲ್ಲೇ ಇರುವದು. ವಾಸನಾಭೇದದಿಂದನೇಕರೂಪವಾದ ಮನದಲ್ಲಿ ಅನೇಕ ರೂಪಗಳಿದ್ದಾಗ್ಯೂ ಕರ್ಮಪರಿಪಾಕದಿಂ ಸ್ಫುಟವಾದ ಒಂದು ರೂಪವೇ ಬರುವದು. ಆ ರೂಪವೇ ಮನಸ್ಸಿಗೆ ದೃಢವಾಗಿ ತೋರುವದು. ಆ ತೋರಿಕೆಯೇ ಮೃತ್ಯುಘಟವಾಗುವಂತೆ ಶರೀರವಾಗುವದು. ಆದಿಸೃಷ್ಟಿಯಲ್ಲಿ ಉತ್ತಮವಾದ ತೋರಿಕೆಯಿಂ ಬ್ರಹ್ಮನು ಶ್ರೀಮಹಾವಿಷ್ಣುವಿನ ನಾಭೀಕಮಲದಲ್ಲಿ ಪುಟ್ಟಿದ ರೂಪವಂ ಪಡದು ಸಂಕಲ್ಪಮಾತ್ರದಿಂದೀಪ್ರಪಂಚವೆಲ್ಲವನ್ನೂನಿರ್ಮಿಸಿದನು. ಬ್ರಹ್ಮನಿಗೆ ಶರೀರಪ್ರಾಪ್ತಿಯಾದಂತೆಯೇ ಸಮಸ್ತರಿಗೂ ಆಗುವದು. ಅದೆಂತೆಂದರೆ,—ಪೂರ್ವಸರ್ಗದಲ್ಲಿ ಬ್ರಹ್ಮಪದವಿಯನ್ನನುಭವಿಸುವ ಯೋಗ್ಯತೆಯಂ ಪಡದಿದ್ದ ಜೀವನು ಪ್ರಳಯದಲ್ಲಿ ಮಾಯೆಯೊಳ್ ಸೇರಿಕೊಂಡು ನಿರ್ವಿಕಾರವಾದ ಬ್ರಹ್ಮದಲ್ಲಿ ನಿಂದಿಹನು. ಮನಸ್ಸೃಷ್ಟಿಯೊಳ್ ಆ ಜೀವನ ಮನವು ವಾಸನೆಯಿಂದೆಚ್ಚತ್ತಪಕ್ಷಿಯಂತೆ ಚಲಿಸಲು ದಿಕ್ಕಾಲಗಳಿಂ ಪರಿಚ್ಛಿನ್ನವಾಗದ ಆತ್ಮತತ್ವವು ದಿಕ್ಕಾಲಗಳಿಂ ಪರಿಚ್ಛಿನ್ನವಾದ ಸ್ವರೂಪವಂ ಸ್ವಪ್ನದಂತೆ ಕಾಣುವದು. ಆಗಲೇ ಆ ಪರಮಾತ್ಮನಿಗೆ ಜೀವಾವಸ್ಥೆಯುದಿಸುವದು. ಅತಿಸೂಕ್ಷ್ಮವಾಗಿತೋರಿದ ಆ ರೂಪವೇ ಕಾರಣಶರೀರವೆನಿಸುವದು. ಈ ಜೀವನ ಮನವು ತೋರಿದ ರೂಪವಂಭಾವಿಸುತ್ತಿರುವಲ್ಲಿ ಜನ್ಮಾಂತರ ಶಬ್ದವಾಸನೆಯುಂಟಾಗುವದು. ಅದೇ ಸಕಲ ಶಬ್ದಪ್ರಪಂಚಕ್ಕೆ ಕಾರಣವಾದ ಶಬ್ದ ತನ್ಮಾತ್ರವೆನಿಸುವದು. ಮನಸ್ಸು ಆ ಶಬ್ದವಂಭಾವಿಸುತ್ತಿರುವಲ್ಲಿ ಚಲನಾತ್ಮಕವಾದ ವಾಯುಗಳಿಗೆ ಕಾರಣವಾದ ಸ್ಪರ್ಶವಾಸನೆಯುದಿಸುವದು. ಅದೇ ಸ್ಪರ್ಶ ತನ್ಮಾತ್ರವೆನಿಸುವದು. ಅವುಗಳಿಂದುಂಟಾದ ಆಕಾಶವಾಯುಗಳು ಗೋಚರವಾಗದಿರುವಲ್ಲಿ ವಾಸನಾಮಾತ್ರದಿಂ ಕೇಳುವಂತೆಯೂ, ಸ್ಪರ್ಶವಾಗುವಂತೆಯೂ, ತೋರುತ್ತಿರುವಲ್ಲಿ ಇದೇನೆಂದು ಚಿಂತಿಸುವ ಮನಸ್ಸಿಗೆ ರೂಪವಾಸನೆಯುಂಟಾಗುವದು. ಆಗ ಆಕಾಶದಲ್ಲಿ ವಾಯು ಬಲವಾಗಿ ಬೀಸಲು ಸಕಲ ತೇಜಗಳಿಗೂ ಕಾರಣವಾದ ಒಂದಾನೊಂದು ಪ್ರಕಾಶವುಂಟಾಗುವದು. ಅದೇರೂಪ ತನ್ಮಾತ್ರವೆನಿಸುವದು. ಆ ಪ್ರಕಾಶವಧಿಕವಾದ್ದರಿಂ ಮನಸ್ಸಿಗೆ ರಸವಾಸನೆಯುಂಟಾಗುವದು. ಆಗ ಜಲರಾಶಿಗಳಿಗೆ ಬೀಜವಾದ

ರಸತನ್ಮಾತ್ರವುಂಟಾಗುವದು. ಇವುಗಳಿಂ ದುಷ್ಣ ಶೀತಸ್ಪರ್ಶಗಳಾದ ತೇಜೋ ಜಲಗಳು ಪುಟ್ಟಲು ಈ ವಾಸನೆಗಳಿಂ ವೃದ್ಧಿಹೊಂದಿದ ಮನಸ್ಸಿಗೆ ಗಂಧವಾಸನೆಯುಂಟಾಗುವದು. ಆಗ ಭೂಮಂಡಲೋತ್ಪತ್ತಿಗೆ ಮೂಲವಾದ ಗಂಧ ತನ್ಮಾತ್ರವುದಿಸುವದು. ಅದರಿಂ ಸೂಕ್ಷ್ಮವಾದ ಭೂಮಿಯು ಪುಟ್ಟಲು ಇವುಗಳ ಸಮೂಹದಿಂವಗ್ನಿಕಣದಂತೆ ಗಗನದಲ್ಲೊಂದು ರೂಪಗೋಚರವಾಗುವದು. ಅವಿದ್ಯಾ ಕಾಮ ಕರ್ಮ ಧರ್ಮ ಜ್ಞಾನೇಂದ್ರಿಯ ಕರ್ಮೇಂದ್ರಿಯ ಪ್ರಾಣ * ಸೂಕ್ಷ್ಮ ಭೂತ ಸಮೂಹಗಳಿಂ ಕೂಡಿದ ಈ ರೂಪವು ಪುರ್ಯಷ್ಟಕವೆಂತಲೂ, ಲಿಂಗ ಶರೀರವೆಂತಲೂ, ಆತಿವಾಹಿಕವೆಂತಲೂ, ಪೇಳಲ್ಪಡುವದು. ಜ್ಞಾನದೊಡನೆ ಪಂಚಾಂತಃಕರಣಗಳಿಂಕೂಡಿದ ಈ ಲಿಂಗಶರೀರವು ಪ್ರಾಣಿಗಳ ಹೃದಯಕಮಲದಲ್ಲಿ ಭ್ರಮರದಂತೆ ಶೇರಿಕೊಂಡಿರುವದು. ಇದರಲ್ಲಿರುವಮನವು ಮೇಲೆ ತಲೆಯು ಕೆಳಗೆ ಕಾಲುಗಳು ಮಧ್ಯದಲ್ಲಿ ಉದರವು ಎಂದು ಹ್ಯಾಗೆ ಹ್ಯಾಗೆ ಭಾವಿಸುವದೋ ಹಾಗೆಹಾಗೆ ಸೂಕ್ಷ್ಮಭೂತಗಳು ಒಂದಕ್ಕೊಂದು ಶೇರಿಕ್ಕೊಂಡು ಸ್ಥೂಲ ಶರೀರವಾಗುವದು. ಭಾವನಾನುಸಾರವಾಗಿ ರೂಪವಂತಾಳುವ ಈ ಮನವೇ ಸ್ಥೂಲರೂಪವಂ ಪಡದು ಸ್ವಸ್ವಭಾವಪ್ರಕಾಶದಿಂ ವಸಂತಋತುವಿನಂತೆ ವೃದ್ಧಿಯಾಗಿ ಬುದ್ಧಿ ಸತ್ವ ಬಲೋತ್ಸಾಹ ಜ್ಞಾನೈಶ್ವರ್ಯಗಳೆಂಬ ಕುಸುಮಗಳಿಂ ಪ್ರಕಾಶಿಸುತ್ತಾ ಬ್ರಹ್ಮನೆಂದು ಪ್ರಖ್ಯಾತವಾಗುವದು. ಈ ಬ್ರಹ್ಮನು ಒಂದುವೇಳೆ ಆಕಾಶವನ್ನೇ ಮೊದಲುಸೃಜಿಸುವನು. ಒಂದುವೇಳೆ ಜಲವನ್ನೂ ಒಂದುವೇಳೆ ತೇಜವನ್ನು ಒಂದುವೇಳೆ ವಾಯುವನ್ನು, ಒಂದುವೇಳೆ ಭೂಮಿಯನ್ನು, ಮೊದಲು ಸೃಜಿಸಿ ಕಡಮೆಭೂತಗಳನ್ನಾಮೇಲೆ ಸೃಜಿಸುವನು. ಇವನಿಗೆ ಪ್ರತಿದಿನದಲ್ಲೂ ನಿದ್ರಾಂತದಲ್ಲಿ ಯಾವದು ಗೋಚರವಾಗುವದೋ ಅದೇ ಮೊದಲು ಪುಟ್ಟಿತೆಂದು ಪೇಳಲ್ಪಡುವದು. ಹೀಗೆ ಕ್ರಮವಾಗಿ ನಡೆಯುದಿರುವದ್ದರಿಂದ ಸೃಷ್ಟಿ ಕ್ರಮವು ನಾನಾಪ್ರಕಾರವಾಗಿ ಪೇಳಲ್ಪಡುವದು. ಇವನೇ ವಿಷ್ಣು ರುದ್ರರೂಪಗಳಂ ಧರಿಶಿ ಜಗದ್ರಕ್ಷಣ ಸಂಹಾರಗಳಂ ಮಾಡುವನು. ಪ್ರತಿಕಲ್ಪದಲ್ಲೂ ರೂಪಾಂತರಗಳನ್ನಾಗಲೀ, ಏಕರೀತಿಯಾದ ರೂಪಗಳನ್ನಾಗಲೀ ಧರಿಸುವ ಈ ಬ್ರಹ್ಮನು ಒಂದುವೇಳೆ ಮಹಾವಿಷ್ಣುವಿನ ನಾಭೀಕಮಲದಿಂದಲೂ, ಒಂದುವೇಳೆ ಬ್ರಹ್ಮಾಂಡದಿಂದಲೂ, ಒಂದುವೇಳೆ ಮಹೇಶ್ವರನ ಸ್ತನಭಾಗದಿಂದಲೂ, ಒಂದುವೇಳೆ ಜಲದಿಂದಲೂ, ಒಂದುವೇಳೆ ಆಕಾಶದಿಂದಲೂ, ಒಂದು

* ಪೃಥಿವೀ ಅಪ್, ತೇಜಸ್ಸು, ವಾಯು, ಆಕಾಶ ಇವುಗಳ ತನ್ಮಾತ್ರೆಗಳಿಗೆ ಸೂಕ್ಷ್ಮಭೂತಗಳೆಂದು ಹೆಸರು.

ವೇಳೆ ಪರಮಾಕಾಶದಿಂದಲೂ ಪುಟ್ಟುವನು. ಎಲ್ಲಿ ಪುಟ್ಟಿದಾಗ್ಯೂ ಗರ್ಭವಾಸ ತೀರುವಲ್ಲಿ ಪಂಚಭೂತಾತ್ಮಕವಾದ ಸ್ವಶರೀರವಂ ನೋಡುವನು. ಚಿತ್ತವೆಂಬ ಪಕ್ಷಿಗೆ ಗೂಡಾಗಿಯೂ, ಕಾಮನೆಂಬ ಹಾವಿಗೆ ಹುತ್ತವಾಗಿಯೂ, ಆಶೆಯೆಂಬ ಪಿಶಾಚಿಗೆ ಸ್ಥಾನವಾಗಿಯೂ, ಜೀವವೆಂಬ ಸಿಂಹಕ್ಕೆ ಗುಹೆಯಾಗಿಯೂ, ಅಭಿಮಾನವೆಂಬ ಆನೆಗೆ ಕಟ್ಟುಕಂಭವಾಗಿಯೂ, ಮನವೆಂಬ ಕಮಲಕ್ಕೆ ಕೊಳವಾಗಿಯೂ, ಶೋಭಿಸುವ ಈ ಶರೀರವಂ ನೋಡುವ ಬ್ರಹ್ಮನು ಮೊದಲಲ್ಲಿ ಯಾವದು ಪುಟ್ಟಿತೆಂದು ಆಲೋಚಿಸುತ್ತಾ ಪರಮಾತ್ಮನ ಕೃಪೆಯಿಂ ಮನಸ್ಸಿಗೆ ಗೋಚರವಾದ ವೇದರಾಶಿಗಳಂ ಚನ್ನಾಗಿನೋಡಿ ಪೂರ್ವದಲ್ಲಿದ್ದ ಬ್ರಹ್ಮರಂತೆ ಪ್ರಪಂಚವನ್ನೂ ಪ್ರಜೆಗಳನ್ನೂ ಶಾಸ್ತ್ರಗಳನ್ನೂ ಯಥಾಕ್ರಮವಾಗಿ ಸೃಜಿಸಿದನು. ಧರ್ಮಾರ್ಥಕಾಮ ಮೋಕ್ಷಪ್ರದವಾದ ಶಾಸ್ತ್ರದೃಷ್ಟಿಯು ಹೀಗೆ ಲೋಕದೋಳ್ ಸಿದ್ಧವಾದುದು. ಮಧುಮಾಸದಿಂ ಪುಷ್ಪಸಂಪತ್ತಿನಂತೆ ಮನಸ್ಸಿನಿಂದಲೇ ಹೀಗೆ ಜಗತ್ಸೃಷ್ಟಿಯಾದುದು. ಆದಾಗ್ಯೂ ಇದೆಲ್ಲವೂ ಮನಃಕಲ್ಪಿತವಾದ್ದರಿಂದ ಇದರಲ್ಲಿ ಯಾವದೂ ಸತ್ಯವೆಂದು ತಿಳಿಯತಕ್ಕದ್ದಲ್ಲವಾಗಿರುವದು. ಆದರೆ ಪರಮಾತ್ಮನಿಂದಲೇ ಮನಕ್ಕೆ ಇಂಥಾ ಶಕ್ತಿಯುಂಟಾದದಾದ್ದರಿಂದ ಇದೆಲ್ಲವೂ ಪರಮಾತ್ಮನ ಶಕ್ತಿಪ್ರಕಾಶವೆಂದು ತಿಳಿಯಬಹುದು, ಅಥವಾ ಮನವು ಪರಮಾತ್ಮನಿಗಭಿನ್ನವಾದ್ದರಿಂದಲೂ, ಅವರ ಶಕ್ತಿಯಿಂದಲೇ ಈ ಜಗವುಂಟಾಗಿರುವದ್ದರಿಂದಲೂ, ಕಾರ್ಯಕಾರಣ ಭೇದನ್ಯಾಯದಿಂ ಸರ್ವವೂ ಬ್ರಹ್ಮವೆನಿಸುವದು. ಹೀಗೆ ಪ್ರಪಂಚವೆಲ್ಲವೂ ಬ್ರಹ್ಮಭಿನ್ನವಾದ್ದರಿಂ ಯಾವದೂ ಪುಟ್ಟಲಿಲ್ಲವೆಂತಲೇ ತಿಳಿಯತಕ್ಕದ್ದು. ಈ ಬ್ರಹ್ಮನು ಪುಟ್ಟಿದಂತೆಯೇ ಸರ್ವಪ್ರಾಣಿಗಳೂ ಪುಟ್ಟುವರು. ಇದೇಪ್ರಕಾರ ಅವರ ಮನೆಗಳು ಸೃಜಿಸುವವು. ಬ್ರಹ್ಮನು ಮನಸ್ಸಮಷ್ಟಿರೂಪನಾದ್ದರಿಂದ ಇವನು ಮಾಡಿದ್ದು ಎಲ್ಲರಿಗೂ ಗೋಚರವಾಗಿರುವದು. ಹೀಗೆ ಇತರ ಸೃಷ್ಟಿಯಲ್ಲಿ ಸ್ಥೂಲವೇ ಗೋಚರವಾಗುವದು. ಸೂಕ್ಷ್ಮವಾದದ್ದು ಅನುಮಾನಾದಿ ಪ್ರಮಾಣಗಳಂ ತಿಳಿಯತಕ್ಕದ್ದಾಗಿರುವದು. ಹೀಗೆಮನವು ತನ್ನನಿವಾಸಾರ್ಥವಾಗಿ ಕ್ರಿಮಿಯು ಗೂಡಂಕಟ್ಟುವಂತೆ ಈ ಪ್ರಪಂಚವಂ ಸೃಜಿಸಿಕೊಂಡಿರುವದು. ಈ ಮನಸ್ಸು ಮಾಡದಿದ್ದದ್ದು ಇದು ಪಡೆಯುದಿದ್ದದ್ದು ಸಹ ಯಾವದೂ ಇಲ್ಲ. ಪರಮಾತ್ಮನ ಶಕ್ತಿಗಳೆಲ್ಲವೂ ಈ ಮನವೆಂಬ ವನದಲ್ಲಿ ವಿಹರಿಸುತ್ತಿರುವದ್ದರಿಂದ ಇದಕ್ಕೆ ಇಂಥಾ ಸಾಮ್ರಾಜ್ಯವುಂಟಾಗಿರುವದು. ಪದಾರ್ಥಗಳ ಸತ್ತೆಯಂ ವಿಚಾರಿಸುವಲ್ಲಿ ಬ್ರಹ್ಮಒಂದೇಸತ್ತೆನಿಸುವದು. ಇತರವಾದ್ದೆಲ್ಲವೂ ಅಸತ್ತೆನಿಸುವದು. ಇಲ್ಲದಿರುವ

ಪದಾರ್ಥಕ್ಕೆ ಪುಟ್ಟಿತೆಂತಲೂ, ಸತ್ತಿತೆಂತಲೂ, ಬಂತೆಂತಲೂ, ಹೋಯಿತೆಂತಲೂ ಸುಖದುಃಖಗಳಂ ಯಾಕೆ ಬೇರಾಗಬೇಕು. ಸ್ವಸಂಕಲ್ಪದಿಂದುಂಟಾದ ಈ ಪದಾರ್ಥಗಳೆಲ್ಲವೂ ಸಂಕಲ್ಪ ನಷ್ಟವಾದೊಡನೆಯೇ ನಷ್ಟವಾಗುವದು. ಬಿಸಲುದೊರೆಯಂತೆ ಮನೋನಿಶ್ಚಯದಿಂದಲೇ ಬ್ರಹ್ಮಾದಿಯಾದ ಪ್ರಪಂಚವೆಲ್ಲವು ಕಾಣುತ್ತಿರುವದು. ಜ್ಞಾನೋದಯವಾಗುವಲ್ಲಿ ಇದೊಂದು ನಿಲ್ಲತಕ್ಕದ್ದಲ್ಲವಾದ್ದರಿಂದ ಇದೆಲ್ಲವೂ ಸ್ವಪ್ನವೆಂತಲೇ ತಿಳಿಯತಕ್ಕದ್ದು. ಗೋಚರವಾಗಿದ್ದರೂ ಇಂದ್ರಜಾಲ ಪದಾರ್ಥದಂತೆ ಇದು ನಂಬಲಯೋಗ್ಯವಾಗಿರುವದು. ಗಿರಿಯಂತಲೂ, ನದಿಯಂತಲೂ, ಮನೆಯಂತಲೂ, ಗ್ರಾಮವೆಂತಲೂ, ಮಡದಿಯಂತಲೂ ಮಕ್ಕಳೆಂತಲೂ, ಅವಿಚಾರಕಾಲದಲ್ಲೇ ತೋರುತ್ತಿರುವದು. ವಿಚಾರದಲ್ಲಿ ಬ್ರಹ್ಮಬಂದೇನಿಲ್ಲುವದಾದ್ದರಿಂದ ಅದೇ ಸರ್ವಸ್ವರೂಪದಿಂ ಪ್ರಕಾಶಿಸುತ್ತಿರುವದೆಂದು ನಿಶ್ಚಯಿಸುವನಾಗು. ಮಡದಿಮಕ್ಕಳೆಂದು ಭಾವಿಸುವಲ್ಲಿ ಮೋಹವೇ ಪುಟ್ಟುವದಾದ್ದರಿಂದ ಅದರಿಂದ ದುಃಖವೇ ಪ್ರಾಪ್ತವಾಗುವದು. ಬ್ರಹ್ಮವೆಂದು ವಿಚಾರದಿಂ ಪರಮಾರ್ಥ ಭಾವನೆಯಂ ಮಾಡುವಲ್ಲಿ ಮೋಹಕ್ಕೆ ನಾಶವಾಗುವದಾದ್ದರಿಂದ ಶಾಶ್ವತವಾದ ಸುಖವೇ ಸಿದ್ಧವಾಗುವದು. ಹೀಗೆ ದೃಶ್ಯವೆಲ್ಲವನ್ನೂ ಪರಮಾರ್ಥ ವಿಚಾರದಿಂ ಬ್ರಹ್ಮವೆಂದು ನಿಶ್ಚಯಿಸದಲ್ಲದೇ ಅವಿದ್ಯೆಗೆ ನಾಶವಾಗಲಾರದು. ಅವಿದ್ಯೆಯಿರುವವರಿಗೆ ಸ್ವಪ್ನ ಸದೃಶವಾದ ಸಂಸಾರ ಭ್ರಾಂತಿಯು ತಪ್ಪಲಾರದು. ವಿಚಾರದಲ್ಲಿ ಯಾವದುತಾನೇ ಇಲ್ಲದಿರುವದೋ ಅದರಿಂದುಂಟಾದ ಪದಾರ್ಥಗಳಂ ಸತ್ಯವೆಂದು ನಂಬುವದುಹ್ಯಾಗೆ ? ಯಾರು ಅವಿದ್ಯೆಯಲ್ಲಿ ಬಲವಾಗಿಶಿಕ್ಕಿರುವರೋ ಆ ಮೂಢರಿಗೆ ಸಂಸಾರವು ಪರಮಾರ್ಥವಾಗಿ ಕಾಣುವದು. ವಿಚಾರದೃಷ್ಟಿಯುಂಟಾಗಲು ಸಕಲಸಂಸಾರಕಾರಣವಾಗಿದ್ದ ಅವಿದ್ಯೆಯೇ ನಷ್ಟವಾಗುವದು. ಯಾರು ಇರುವದಂಬಿಟ್ಟು ಇಲ್ಲದ್ದನ್ನಪೇಕ್ಷಿಸುವರೋ ಆ ಮೂಢರಿಗೆ ಎಂದಿಗೂ ಸುಖವಾಗಲಾರದು. ಈ ಸಂಸಾರವೆಲ್ಲವೂ ಮನಃಕಲ್ಪಿತವಾದ್ದರಿಂದ ಮನಸ್ಸಿನಭಾವನೆಯಿದ್ದಂತೆ ಸರಸವಾಗಿಯೂ, ವಿರಸವಾಗಿಯೂ, ಪೂರ್ಣವಾಗಿಯೂ, ಶೂನ್ಯವಾಗಿಯೂ, ತೋರುತ್ತಿರುವದು. ಮನವು ಹಿಂತಿರುಗಿದೊಡನೆಯೇ ನಷ್ಟವಾಗುವದು. ಬಾಲಕನಮನದಲ್ಲಿ ಕ್ರೀಡಾಮನೋರಥದಂತೆ ಮನಸ್ಸಿನ ಕಲ್ಪನೆಯಲ್ಲೇ ಈ ಪ್ರಪಂಚವುಂಟಾಗಿರುವದು. ಮನೋರಥ ಪರಂಪರೆಯಿಂದುಂಟಾದ ಸಾಮ್ರಾಜ್ಯದ ವೃದ್ಧಿಯಿಂ ವೃದ್ಧಿಯು, ನಾಶದಿಂ ನಾಶವೂ, ಕೂಡ ಇಲ್ಲದಂತೆ ಜಗದ್ಭ್ರಮೆಯ ವೃದ್ಧಿನಾಶಗಳಿಂ ಯಾರಿಗೂ ವೃದ್ಧಿನಾಶಗಳಿಲ್ಲದಿರುವವು. ಇಂದ್ರಜಾಲವಿದ್ಯೆಯಿಂದುಂಟಾದ ಪದಾ

ರ್ಥಗಳಲ್ಲಿ ಅಜ್ಞನು ಮೋಹಪಡುವನಲ್ಲದೆ ಪ್ರಾಜ್ಞನು ಎಂದಿಗೂ ಮೋಹಪ ಡಲಾರನು. ಮನಸ್ಸಿನ ಪ್ರವೃತ್ತಿಯಿಂದುತ್ಪನ್ನವಾಗಿ ನಿವೃತ್ತಿಯಿಂ ನಷ್ಟವಾ ಗುವ ಈ ಜಗವಂ ಶಾಶ್ವತವೆಂದು ಹ್ಯಾಗೆ ತಿಳಿಯತಕ್ಕದ್ದು. ಹೀಗೆ ದೃಶ್ಯವೆ ಲ್ಲವೂ ಅಸತ್ತೆಂದು ಗೊತ್ತಾಗುವಲ್ಲಿ ಇದರಲ್ಲಿ ಹರ್ಷಾಮರ್ಷಗಳಂ ಯಾಕೆ ವಹಿಸಬೇಕು. ದೃಗ್ರೂಪನಾದ ತಾನೊಬ್ಬನೇ ಸದ್ವಸ್ತುವು. ದೃಶ್ಯವಾದ ದ್ದೆಲ್ಲವು ಅಸತ್ತೆಂದು ಭಾವಿಸುವವನಿಗೆ ಸಕಲ ದುಃಖ ಮೂಲವಾದ ತಾನೆಂಬುವ ದಿರುವದ್ದರಿಂದ ಅವನು ಎಂದಿಗೂ ಸುಖಪಡಲಾರನು. ಅಸತ್ತೆಂತಾಗಲೀ ಸತ್ತೆಂತಾಗಲೀ ಬ್ರಹ್ಮವೆಂತಾಗಲೀ ಸರ್ವಪ್ರಪಂಚವಂ ಭಾವಿಸುವಲ್ಲಿ ಸರ್ವನೆಂ ಬುವದರಲ್ಲಿ ತಾನೂ ಸೇರಿದವನೆಂದು ಅಹಂಭಾವವಂ ಯಾವನು ಬಿಡುವನೋ ಅವನೇ ಸುಖಪಡುವನಲ್ಲದೆ ಅಹಂಭಾವವಂ ಪರಿಗ್ರಹಿಸಿರುವನು ಯಾವನೂ ಸುಖಪಡಲಾರನು. ಅಹಂಭಾವವಂ ಬಿಡಲಾರದವನಿಗೆ ಸರ್ವವನ್ನೂ ಅಸ ತ್ತೆಂದು ತಿರಸ್ಕರಿಸುವದಕ್ಕಿಂತ ಬ್ರಹ್ಮವೆಂದು ಪೂಜಿಸುವದೇ ಉತ್ತಮವೆನಿಸು ವದು. ದೃಶ್ಯವೆಲ್ಲವನ್ನೂ ಬ್ರಹ್ಮವೆಂದು ಸನ್ಮಾನಿಸುವನು. ಶಮದಮಾದಿ ಸನ್ಮಾ ರ್ಗದಲ್ಲಿರುವನಾದ್ದರಿಂದ ಶತ್ರುಗಳಿಗೂ ಪ್ರೀತಿಪಾತ್ರನಾಗಿರುವನು. ಉನ್ಮಾ ದಾದಿ ವಿಕಾರದಿಂದ ಅಜ್ಞಾನಿಯಾದವನು ಇವನಿಗೆ ಒಂದುವೇಳೆ ದ್ರೋಹವ ನ್ನಾಲೋಚಿಸಿದಾಗ್ಯೂ ಆ ದ್ರೋಹದುಃಖವು ಇವನಿಗೆ ಸಂಭವಿಸದಂತೆ ಪರ ಮೇಶ್ವರನೇ ಇವನಂ ರಕ್ಷಿಸುತ್ತಿರುವನು. ಜಗವೆಲ್ಲವನ್ನ ಸತ್ತೆಂದು ಭಾವಿ ಸುವನಿಗೆ ಅದರ ವೃದ್ಧಿನಾಶಗಳೂ ಅಸತ್ತಾಗುವವು. ಸತ್ತೆಂದು ಭಾವಿಸು ವವನಿಗೆ ವೃದ್ಧಿನಾಶಗಳೂ ಸತ್ತಾಗುವವಾದ್ದರಿಂದ ಅನಿವಾರ್ಯವಾದ ಆ ವಿಷ ಯದಲ್ಲಿ ಹರ್ಷಾಮರ್ಷಗಳಂ ವಹಿಸುವದು ವ್ಯರ್ಥವಾಗುವದು. ಸರ್ವವು ಬ್ರಹ್ಮವೆಂದು ಭಾವಿಸುವವನಿಗೆ ಗ್ರಾಹ್ಯತ್ಯಾಜ್ಯವಿಭಾಗವೇ ತಪ್ಪುವದ್ದರಿಂದ ರಾಗದ್ವೇಷಗಳಿಗೂ ಹರ್ಷಾಮರ್ಷಗಳಿಗೂ ಅವಕಾಶವೇ ಇಲ್ಲದಿರುವದು. ಆದ್ಯಂತಗಳಲ್ಲಿ ಯಾವದಿರುವದೋ ಅದು ಸತ್ಯವೆನಿಸುವದು. ಅದೇ ಮಧ್ಯ ದಲ್ಲೂ ಇರುವದು. ಆದ್ಯಂತಗಳಲ್ಲಿ ಯಾವದು ಇಲ್ಲವೋ ಅದು ಅಸತ್ಯವೆನಿ ಸುವದು. ಅದು ಮಧ್ಯದಲ್ಲಿರತಕ್ಕದ್ದಲ್ಲವಾದ್ದರಿಂದ ಆದ್ಯಂತಗಳಲ್ಲಿದ್ದ ಬ್ರಹ್ಮ ವೇ ಮಧ್ಯದಲ್ಲೂ ಇರುವದೆಂದು ತಿಳಿಯತಕ್ಕದ್ದು. ಅದಕ್ಕೆ ದೇಶಕಾಲ ವಸ್ತು ಭೇದವಿಲ್ಲದ್ದರಿಂದ ದ್ರಷ್ಟೃದರ್ಶನ ದೃಶ್ಯಾದಿ ತ್ರಿಪುಟಿರೂಪದಿಂದದೊಂದೇ ಪ್ರಕಾಶಿಸುವದೆಂದು ನಿಶ್ಚಯಿಸುವವನಾಗು. ಎಲೈ ದಾಶರಥಿಯೇ ! ಲೋಕ

ದಲ್ಲಿ ಯಾವದರಲ್ಲಿ ಅಜ್ಞರಿಗೆ ರಾಗವುಂಟಾಗುವದೋ ಅದರಲ್ಲೇ ಪ್ರಾಜ್ಞನಿಗೆ ವೈರಾಗ್ಯವುಂಟಾಗುವದು. ಈ ರಾಗವೈರಾಗ್ಯಗಳಿಗೆ ಭಾವಭೇದದಿಂ ನಾನಾ ರೂಪವಾಗುವ ಆ ಪದಾರ್ಥವೇ ಕಾರಣವಾಗುವದು. ಇಂದ್ರಜಾಲದಲ್ಲುಂಟಾದ ವಸ್ತುವು ಪೋಗುವಲ್ಲಿ ಹ್ಯಾಗೆ ದುಃಖವಾಗಲಾರದೋ ಹಾಗೆ ಪ್ರಾಜ್ಞನಿಗೆ ಧನಧಾರಾದಿ ರಮ್ಯವಸ್ತುಗಳು ಹೋಗುವಲ್ಲಿ ದುಃಖವಾಗಲಾರದು. ಅವು ಇದ್ದದ್ದರಿಂದ ಸಂತೋಷವೂ ಆಗಲಾರದು. ದೇಹವು ಸತ್ಯವೆಂತಲೂ ಆತ್ಮನು ಸತ್ಯವೆಂತಲೂ ಯಾವನರಿಯುವನೋ ಅವನೇ ದುಃಖಪಡುವನು. ಕ್ಷಣಿಕವಾದ ಕಾಯವು ಹೋಗುವಲ್ಲಿ ದುಃಖಪಡಲ್ಯಾಕೆ? ಆತ್ಮನಿಗೆ ನಾಶವಿಲ್ಲದ್ದರಿಂದ ಅವನು ಹೋದನೆಂದು ದುಃಖಪಡುವದಕ್ಕೆ ನಿಮಿತ್ತವೇ ಇಲ್ಲ. ಒಂದು ಶರೀರವು ಬಿಡುವಲ್ಲಿ ಆತ್ಮನಿಗೆ ಮತ್ತೊಂದುಶರೀರವು ಸಿದ್ಧವಾಗಿಯೇ ಇರುವದ್ದರಿಂದ ಆತ್ಮನಿಗೆ ಶರೀರವಿಯೋಗವಾಯಿತೆಂತಲೂ ದುಃಖಪಡುವದಕ್ಕೆ ನಿಮಿತ್ತವಿಲ್ಲ. ವಾಸನಾನುಗುಣವಾಗಿ ದೇಹ ಬರುವದ್ದರಿಂದ ಇಂಥಾ ಶರೀರ ವಿಯೋಗವಾಯಿತೆಂದು ದುಃಖಪಡುವದಕ್ಕೂ ನಿಮಿತ್ತವಿಲ್ಲ. ಸ್ವಜನವಿಯೋಗದಲ್ಲಿ ಇಂಥಾ ಶರೀರ ಸಂಯೋಗವು ತನಿಗೆ ತಪ್ಪಿತೆಂಬುವದಕ್ಕೆ ಶರೀರಕ್ಕೆ ಆ ಶರೀರದ ಸಂಬಂಧವಿಲ್ಲದೆ ಆತ್ಮನಿಗಿಲ್ಲವಾದ್ದರಿಂದ ಆ ಶರೀರನಾಶದಿಂದಾತ್ಮನು ದುಃಖಪಡುವದಕ್ಕೆ ಕಾರಣವೇನು? ಆತ್ಮನಿಗೆ ದುಃಖವಿಲ್ಲದಲ್ಲಿ ಜಡವಾದ ಶರೀರಕ್ಕೆ ಸ್ವತಃ ಕಂಣೀರಬಿಡುವದಕ್ಕೂ ಅಳುವದಕ್ಕೆ ಯೋಗ್ಯತೆ ಎಲ್ಲಿಯದು? ಅಜ್ಞಾನದಿಂ ಶರೀರವೇ ತಾನೆಂದು ಗ್ರಹಿಸಿದವರಿಗೆ ತನ್ನದೆಂಬ ಅಭಿಮಾನವು ಪರಶರೀರದಲ್ಲೂ ಸಂಭವಿಸುವದ್ದರಿಂದ ಅವರ ನಾಶದಿಂದವರೇ ದುಃಖಪಡುವರು. ಇದು ಅಜ್ಞಾನಿಕವಾದ್ದರಿಂದ ಪ್ರಾಜ್ಞರು ಇದಂ ಸಮ್ಮತಿಸುವದಿಲ್ಲ. ಅಂತರಂಗದಲ್ಲಿ ಸಮ್ಮತಿ ಇಲ್ಲದಿದ್ದರೂ ಅಜ್ಞರ ಸಮಾಧಾನಾರ್ಥವಾಗಿ ಅವರಂತೆಯೇ ನಟಿಸುತ್ತಾ ಹಿತೋಕ್ತಿಗಳಿಂ ಕ್ರಮವಾಗಿ ಅವರಿಗೆ ದುಃಖವಂ ತಪ್ಪಿಸುವರು. ಪ್ರಾಜ್ಞರಾದವರು ದಾರಾದಿಗಳಿರುವವರೆಗೆ ಅವರಂ ದುಃಖಪಡಿಸದಿರುವರು. ನಷ್ಟವಾಗುವಲ್ಲಿ ದೇಹವಶಾಶ್ವತವೆಂಬ ನಿಶ್ಚಯದಿಂ ದುಃಖಪಡದಿರುವರು. ಇನ್ನೊಬ್ಬರ ಚಿತ್ತಕ್ಕೆ ವ್ಯಥೆಯಾಗದಂತೆ ಕಾಯವಾಙ್ಮನಸ್ಸುಗಳೆಂಬ ಕರಣತ್ರಯದಿಂದಲೂ ನಡೆಯುತ್ತಿರುವರು. ಒಬ್ಬರೂ ಕೆಡಬಾರದೆಂಬ ತಾತ್ಪರ್ಯದಿಂದ ಸತ್ಯವಾಗಿಯೇ ನುಡಿಯುತ್ತಿರುವರು. ಅವರಲ್ಲಿ ಚತುರರಾದವರು ಪ್ರಿಯೋಕ್ತಿಗಳಿಂದಲೇ ಜನಗಳಂ ಒಳ್ಳೆಯ ಮಾರ್ಗಕ್ಕೆ ತಿರುಗಿಸುವರು. ಇವರು ಬ್ರಹ್ಮೇತರ ಪದಾರ್ಥವಿಲ್ಲವೆಂದು ನಿಶ್ಚಯಿಸಿರುವದ್ದರಿಂದ ಅಹಂಕಾ

ರವಿಲ್ಲದೆ ಹಿಮಜಾಡ್ಯವಳಿದ ವಸಂತೋದ್ಯಾನಗಳಂತೆ * ಸುಮನಸ್ಸುಗಳಿಂ ಪ್ರಕಾಶಿಸುವರು. ಇವರಿಗೆ ಬ್ರಹ್ಮೇತರ ಸ್ಮರಣೆಯಿಲ್ಲದ್ದರಿಂದ ಗೋಚರವಾಗಿರುವುದನ್ನಪೇಕ್ಷಿಸುವುದಕ್ಕೂ, ಇಲ್ಲದಿರುವವನ್ನಪೇಕ್ಷಿಸುವದಕ್ಕೂ ಕಾರಣವಿಲ್ಲದಿರುವದು. ಇರುವದು, ಬರುವದು, ಹೋಗುವದೆಲ್ಲವೂ ಬ್ರಹ್ಮವೆಂತಲೇ ತಿಳಿದಿರುವದ್ದರಿಂದ ಪದಾರ್ಥ ಲಾಭಾಲಾಭಸ್ಥಿತಿ ನಾಶಗಳಲ್ಲಿ ಹರ್ಷವ್ಯಸನಗಳಿಗೆ ಅವಕಾಶವಿಲ್ಲದಿರುವದು. ಇವರಿಗೆ ಬ್ರಹ್ಮೇತರ ಜ್ಞಾನವಿಲ್ಲದ್ದರಿಂದಪೇಕ್ಷೆಯೇ ಉಂಟಾಗದು. ಅದರಿಂದ ಮನವು ಇಂದ್ರಿಯಗಳು ಸಹ ಚಲಿಸವು. ಆದಾಗ್ಯೂ ಪ್ರಾರಬ್ಧ ಭೋಗಾರ್ಥವಾಗಿ ಶರೀರವಿರುವದ್ದರಿಂದ ಪ್ರಾರಬ್ಧ ಕರ್ಮವಿಶೇಷಗಳಿಂದಲೇ ಇಚ್ಛೆಯುಂಟಾಗಿ ಇಂದ್ರಿಯಗಳ ಚಲನದಿಂ ಭೋಗಗಳು ಸಂಭವಿಸುವವು. ಹಾಗಾಗುವಲ್ಲಿ ಇವರು ಸಮುದ್ರತೆರೆಗಳು ಅಲ್ಲಿಯೇ ಚಲಿಸುವಂತೆ ಬ್ರಹ್ಮಾತ್ಮಕವಾದ ಕರ್ತೃಕರಣ ಕಾರ್ಯಗಳು ಜ್ಞಾತೃಜ್ಞಾನಜ್ಞೇಯಗಳು ಭೋಕ್ತೃಭೋಗ ಭೋಗ್ಯಗಳು ಸಹ ಪರಸ್ಪರ ಸಂಬಂಧದಿಂ ಬ್ರಹ್ಮದಲ್ಲಿಯೇ ಚಲಿಸುತ್ತಿರುವವೆಂಬ ನಿಶ್ಚಯದಿಂ ಕರ್ಮಬದ್ಧರಾಗದಿರುವರು. ಇದೆಂಬ ಜ್ಞಾನವುಂಟಾದಕೂಡಲೆ ನಾನೆಂಬ ಜ್ಞಾನ ಉಂಟಾಗುವದು. ನಾನೆಂಬ ಜ್ಞಾನ ಉಂಟಾಗುವಲ್ಲಿಯೇ ಇದೆಂಬ ಜ್ಞಾನವು ಸಿದ್ಧವಾಗುವದು. ಅಖಂಡ ವಿಚಾರದಲ್ಲಿ ನಾನು ಇದೆಂಬುವದು ಎರಡೂ ಇಲ್ಲದ್ದರಿಂದ ಈ ಎರಡು ಜ್ಞಾನಗಳಿಗೂ ಅವಲಂಬನವಾಗಿರುವ ನಿರಾಲಂಬ ಜ್ಞಾನದಲ್ಲಿ ಮನವಂ ನಿಲ್ಲಿಸುವೆಯಾದರೆ ಈಗಲೇ ನಿನಗೆ ಜೀವನ್ಮುಕ್ತರ ಸ್ಥಿತಿಯು ಗೋಚರವಾಗುವದು. ಎಲೈ ಲೋಕಾಭಿರಾಮನೆ! ಗುರುವಿನ ನಡತೆಯಂ ಶಿಷ್ಯರಂತೆ ನಿನ್ನ ರೀತಿಯನ್ನೇ ಜನಗಳು ಅನುಸರಿಸುವರಾದ್ದರಿಂದ ನೀನು ಅವಿಚಾರದಿಂ ವ್ಯರ್ಥವಾಗಿ ದುಃಖಪಡದೇ ದೃಶ್ಯಪದಾರ್ಥಗಳಿಗೆ ಸತ್ತೆಯಾವದೆಂದು ಶಾಸ್ತ್ರಸಜ್ಜನ ಸಮ್ಮತವಾದ ದೃಷ್ಟಿಯಿಂ ವಿಚಾರಿಸುವನಾಗು. ಆಗ ಬ್ರಹ್ಮಸತ್ತೆಯೇ ಇದಕ್ಕೆ ಸತ್ತೆಯೆಂದು ತೋರುವಲ್ಲಿ ಬ್ರಹ್ಮವೆಂಬ ಸಂಜ್ಞೆಯುಂಟಾಗುವದಕ್ಕೆ ಕಾರಣವಂ ವಿಚಾರಿಸುವವನಾಗು. ಆಗ ಬ್ರಹ್ಮಸತ್ತೆಯೇ ಇದಕ್ಕೆ ಸತ್ತೆಯೆಂದು ತೋರುವಲ್ಲಿ ಬ್ರಹ್ಮವೆಂಬ ಸಂಜ್ಞೆಯುಂಟಾಗುವದಕ್ಕೆ ಕಾರಣವಂ ವಿಚಾರಿಸುವವನಾಗು. ಅದರ ಅಖಂಡಭಾವವು ವಿದಿತವಾಗುವಲ್ಲಿ ನಾನೆಂಬುವದು ಬ್ಯಾರೆ ಇಲ್ಲವೆಂದು ನಿಶ್ಚಯವಾಗುವದು.

* ಸುಮನಸ್ಸುಗಳಿಂ=ಒಳ್ಳೇ ಮನಸ್ಸುಗಳಿಂದಲೂ, ಪುಷ್ಪಗಳಿಂದಲೂ ಎಂದು ಎರಡುಪರವಾಗಿ ಅರ್ಥವು.

ಬಳಿಕ ನಾನೆನ್ನುವ ಚಿದ್ವಸ್ತುಗಳೆಲ್ಲವೂ ಒಂದೊಂದು ಜ್ಞಾನ ಉದಯಿಸುವಲ್ಲಿ ಸರ್ವವು ನಾನೆಂಬ ಅರ್ಥವು ಸಿದ್ಧವಾಗುವದು. ಆ ಬಳಿಕ ನನ್ನದೆಂಬುವದು ಬ್ಯಾರೆ ಇಲ್ಲವೆಂದು ಸತ್ತಾವಿಚಾರದಿಂ ತೋರುವಲ್ಲಿ ನಾನೆಂಬುವದು ಎಲ್ಲಿಯೊ ಅಣಗಿಪ್ಪೋಗುವದು. ಹೀಗೆ ನಿರಹಂಕಾರನಾದ ನಿನ್ನನನುಸರಿಸುವ ಜನರೆಲ್ಲರೂ ಕೃತಾರ್ಥರಾಗುವರು. ಎಲೈ ರಾಮಭದ್ರನೆ! ಜ್ಞಾನವುಂಟಾದುದಕ್ಕೆ ವಿಷಯವೈರಾಗ್ಯವೇ ಗುರುತಾದ್ದರಿಂದ ನೀನು ವಿವೇಕಿಯೆನಿಸುತ್ತೀಯೆ. ಕೇವಲ ವೈರಾಗ್ಯದಿಂ * ಸ್ತಬ್ಧನಾಗಿ ಕುಳಿತಿರುವವನಿಗೆ ಮೌಢ್ಯವೇ ಬೆಳೆಯುವದಾದ್ದರಿಂದ ತೀಕ್ಷ್ಣವಾದ ಬುದ್ಧಿಯಿಂದದಕ್ಕೆ ಅವಕಾಶವಂ ಕೊಡದೆ ವಿಚಾರವೃಷ್ಟಿಯಿಂದ ಸಂಸಾರ ಮೋಹವಂ ತಿರಸ್ಕರಿಸುವನಾಗು. ವಿಚಾರ ವೃಷ್ಟಿಯೆಂಬ ನಾವೆಯನ್ನು ಯಾರು ಪೊಂದದಿರುವರೋ ಅವರು ಸಂಸಾರ ಸಾಗರವಂ ಲೀಲೆಯಿಂದಲೇ ದಾಟುವರು. ಅದಿಲ್ಲದವರು ಎಂದಿಗೂ ತಲೆ ಯೆತ್ತದಂತೆ ಮುಣುಗುವರು. ವಿಚಾರದಿಂ ಜಗದ್ವಾಸನೆಯಿಂ ತಿರಸ್ಕರಿತಿ ಬ್ರಹ್ಮವಾಸನೆಯಿಂ ಪಿಡಿದ ನಿನಗೆ ಅಮೃತಪಾನವಂ ಮಾಡಿದವನಿಗೆ ಕ್ಷುತ್ಪಿಪಾಸೆಗಳಂತೆ ಸಮಸ್ತ ದುಃಖಗಳೂ ನಷ್ಟವಾಗುವವು. ಜ್ಞಾನಿಗಳು ದೇಹಾಭಿಮಾನವಿರುವವರಿಗೆ ಈಶ್ವರಾಜ್ಞೆಯಿಂ ಸಿದ್ಧವಾದ ವರ್ಣಾಶ್ರಮಧರ್ಮಗಳನ್ನು ಬಿಡದೇ ಬಂದದ್ದೆಲ್ಲವನ್ನೂ ಈಶ್ವರಾಜ್ಞೆಯಿಂದನುಭವಿಸುತ್ತಾ ಭವಿತವ್ಯಥೆ ಇದ್ದರೆ ತಾನಾಗಿ ಬರುವದೆಂದು ಇಲ್ಲದ ಭೋಗವನ್ನಪೇಕ್ಷಿಸರು. ಜಗವೆಲ್ಲವೂ ಮಾಯಿಕವೆಂಬ ನಿಶ್ಚಯವಿರುವದರಿಂದ ವಿದ್ಯಾಬಲಾದಿ ಪ್ರತಿಷ್ಠೆಗಾಗಲೀ, ತಪಸ್ಸಿದ್ಧಿಗಾಗಲೀ, ಯಶಸ್ಸಿಗಾಗಲೀ, ಸಂಪತ್ತಿಗಾಗಲೀ ಥೈನ್ಯಪಡಲಾರರು. ತಮ್ಮ ಗುಣಪ್ರಕಾಶವಾದರೆ ಜನಗಳ ನಿರ್ಬಂಧದಿಂದ ಅಜ್ಞಾನಿಗಳ ಸಂಗವುಂಟಾದೀತೆಂದು ಜಡರಂತೆಯೂ, ಮೂಢರಂತೆಯೂ, ಮೂಗರಂತೆಯೂ, ಕಿವಡರಂತೆಯೂ, ಕಂಗಳರಂತೆಯೂ, ಕೈಯಿಲ್ಲದವರಂತೆಯೂ, ಕುಂಟರಂತೆಯೂ ವೇಷಧಾರಿಗಳಾಗಿ ತಿರುಗುತ್ತಾ ಸೂರ್ಯಕಿರಣಗಳಂತೆ ಪಾಳು ಪ್ರದೇಶಗಳಲ್ಲಿಯೂ, ದಿವ್ಯವಾದ ಉದ್ಯಾನಗಳಲ್ಲಿಯು ಸಮಪ್ರಕಾಶರಾಗಿ ಸ್ವೇಚ್ಛೆಯಿಂ ವಿಹರಿಸುತ್ತಿರುವರು. ಸುಖದುಃಖಾದಿಗಳಲ್ಲಿ ಬೇರಾಗದಿರುವದೇ ಜ್ಞಾನಿಗಳಿಗೆ ಗುರುತೆಂದು ತಿಳಿಯುವವನಾಗು. ಸರ್ವವೂ ಬ್ರಹ್ಮವೆಂದು ತಿಳಿದಿರುವವರಿಗೆ ಗ್ರಾಹ್ಯ ತ್ಯಾಜ್ಯ ಭೇದವಿಲ್ಲದ್ದರಿಂದ ಅವರು ಎಲ್ಲಾ ಕಡೆಯಲ್ಲೂ ಸಮದೃಷ್ಟಿಗಳಾಗಿರುವರು. ಅಜ್ಞಾನಿಗಳಿಗೂ ಜ್ಞಾನಿಗಳಿಗೂ ಈ ಆಚಾರದಿಂ

---

* ಸ್ತಬ್ಧನಾಗಿ=ಕಟ್ಟಿಗೆಯಂತೆ ಚಲನೆಯಿಲ್ಲದೆ.

ವಲೇ ಭೇದವಂ ತಿಳಿಯುತಕ್ಕದ್ದು. ಎಲೈ ರಘುಕುಲೋತ್ತಮನೇ! ನೀನು ವಿವೇಕಿಯಾಗಿ ಜೀವನ್ಮುಕ್ತರಂತೆ ಸಮದೃಷ್ಟಿಯಿಂ ನಡೆಯುವೆಯಾದರೆ ನಿನ್ನನ್ನನುಸರಿಸುವ ಜನರೂ ಕೂಡ ಕೃತಾರ್ಥರಾಗುವರು. ಒಂದು ಸೃಷ್ಟಿಯಲ್ಲಿ ಭೂಮಿಯು ಮೃಣ್ಮಯವಾಗಿಯೂ, ಮತ್ತೊಂದರಲ್ಲಿ ಶಿಲಾಮಯವಾಗಿಯೂ, ಇನ್ನೊಂದರಲ್ಲಿ ಸುವರ್ಣಮಯವಾಗಿಯೂ, ಮತ್ತೊಂದರಲ್ಲಿ ರಜತಮಯವಾಗಿಯೂ, ಮತ್ತೊಂದರಲ್ಲಿ ತಾಮ್ರಮಯವಾಗಿಯೂ, ಮತ್ತೊಂದರಲ್ಲಿ ಇತರ ಲೋಹಮಯವಾಗಿಯೂ ಕ್ಲೃಪ್ತವಿಲ್ಲದೇ ಆಗಿರುವದು. ಹೀಗೆ ಸಮಸ್ತ ಸೃಷ್ಟಿಗಳು ಅವ್ಯವಸ್ಥೆಯಿಂ ನಡೆಯುವವು. ಬಿಸಲು ಗೋಲಗಳಲ್ಲಿರುವ ತ್ರಸರೇಣುಗಳನ್ನಾದರೂ ಎಣಿಸಬಹುದು. ಪರಮಾತ್ಮನಲ್ಲಾಗುವ ಸೃಷ್ಟಿಗಳನ್ನೆಣಿಸುವದಕ್ಕೆ ಆಗುವದಿಲ್ಲ. ಶರೀರಗಳೆಲ್ಲವೂ ಪಾಂಚಭೌತಿಕವಾದಾಗ್ಯೂ ಯಾವವರ ಅಂಶವು ಅಧಿಕವಾಗಿರುವದೋ ಆ ಹೆಸರಿಸಿಂದಲೇ ಬ್ರಹ್ಮಶರೀರವೂ ಕೂಡಾ * ಪಾರ್ಥಿವವೆಂತಲೂ, ಆಪ್ಯವೆಂತಲೂ, ತೈಜಸವೆಂತಲೂ, ವಾಯವ್ಯವೆಂತಲೂ, ಗಗನಮಯವೆಂತಲೂ ಪ್ರಸಿದ್ಧವಾಗುವದು. ಮುಖಾದಿಗಳಿಂದಲೇ ಬ್ರಾಹ್ಮಣಾದಿ ಸೃಷ್ಟಿಗಳೆಂಬುವದೂ ಕೂಡ ಕ್ಲೃಪ್ತವಾದವಲ್ಲ. ಒಂದಾನೊಂದು ಕಾಲದೋಳ್ ಶುದ್ಧವಾದ ಗಗನದೋಳ್ ಮನಸ್ತತ್ವ ಸಂಬಂಧದಿಂದ ಹಿರಣ್ಮಯವಾದ ಅಂಡ ಉಂಟಾಗುವದು. ಮತ್ತೊಂದು ಕಾಲದಲ್ಲಿ ಪುರುಷನು ನೀರಿನಲ್ಲಿ ವೀರ್‍ಯವಂ ಬಿಡಲು ಅಲ್ಲಿಂದ ಅಂಡ ಉಂಟಾಗುವದು. ಅಲ್ಲಿ ಬ್ರಹ್ಮನು ಪುಟ್ಟುವದರಿಂದದಕ್ಕೆ ಬ್ರಹ್ಮಾಂಡವೆಂಬ ಹೆಸರಾಗುವದು. ಈ ಅಂಡದಲ್ಲಿ ಒಂದುವೇಳೆ ಬ್ರಹ್ಮನು, ಮತ್ತೊಂದುವೇಳೆ ಸೂರ್‍ಯನು, ಮತ್ತೊಂದುವೇಳೆ ವರುಣನು, ಮತ್ತೊಂದುವೇಳೆ ವಾಯುವು, ಪುಟ್ಟಿ ಅವನೇ ಬ್ರಹ್ಮನೆನ್ನಿಸಿಕೊಳ್ಳುವನು. ಹೀಗೆ ಇಂದ್ರನು, ರುದ್ರನು, ಬ್ರಹ್ಮನು, ವಿಷ್ಣುವು, ಸೂರ್‍ಯನು ಮತ್ತೊಬ್ಬನು ಸಹ ಆಯಾಯ ಅಂಡಕ್ಕೆ ಈಶ್ವರನಾಗುವನು. ಸಮುದ್ರದಿಂ ಜಲಕಣಗಳಂತೆ ಪರಮಾತ್ಮನಿಂದುಂಟಾಗುವ ಈ ಸೃಷ್ಟಿಗಳಿಗೆ ಎಣಿಕೆ ಎಂಬುವದು ಹ್ಯಾಗೆ ಸಂಭವಿಸುವದು. ಸರ್ವಪ್ರಕಾರದಿಂದಲೂ ಮನದ ವಿಲಾಸವೇ ಸೃಷ್ಟಿಯೆಂತಲೂ, ಸಂಸಾರವೆಂತಲೂ ಹೇಳಲ್ಪಡುವದು. ಬಾಲಕನ ಮನೋರಾಜ್ಯದಂತೆ ಎಲ್ಲೆಕಟ್ಟಿಲ್ಲದ ಈ ಸೃಷ್ಟಿಪ್ರಪಂಚಕ್ಕೆ ಸುಳ್ಳೆನ್ನುವದು ಒಂದಲ್ಲದೆ ಯಾವ ವ್ಯವಸ್ಥೆಯೂ ಇಲ್ಲವೆಂದು

---

* ಪಾರ್ಥಿವ = ಭೂಮಿ ಸಂಬಂಧವಾದದ್ದು; ಆಪ್ಯ = ಜಲಸಂಬಂಧವಾದದ್ದು; ತೈಜಸ=ತೇಜಸ್ಸಂಬಂಧವಾದದ್ದು; ವಾಯವ್ಯ=ವಾಯುಸಂಬಂಧವಾದದ್ದು? ಗಗನಮಯ=ಆಕಾಶಸಂಬಂಧವಾದದ್ದು.

ನಿಶ್ಚಯಿಸತಕ್ಕದ್ದು. ಎಲೈ ರಾಘವನೆ! ನಿದರ್ಶನಾರ್ಥವಾಗಿ ನಿನಗೆ ಒಬ್ಬ ಬ್ರಹ್ಮನ ಸೃಷ್ಟಿಯುಂ ಪೇಳಿದೆನು. ಕೃತಾದಿ ಯುಗಗಳು ಸೃಷ್ಟಿ ಪ್ರಳಯಗಳು ಬಾಧನೋಕ್ಷ ದೃಷ್ಟಿಗಳೂ ಕೂಡ ಚಿನ್ಮಯವಾದ ಆಕಾಶದಲ್ಲಿ ವ್ಯಕ್ತವಾಗಿಯೂ, ಅವ್ಯಕ್ತವಾಗಿಯೂ ತಿರುಗುತಲೇ ಇರುವವು. ಮಹಾಪ್ರಳಯಪರ್ಯಂತವಾಗಿ ಈ ಪ್ರಕಾರವೇ ಸಂಸಾರಚಕ್ರವು ತಿರುಗುತ್ತಿರುವದೆಂಬ ಮಾತು ಈಗ್ಯೆ ಸರಿಯಾಗಿರುವದಲ್ಲದೆ ಮುಂದಕ್ಕೆ ಸರಿಯಾಗಲಾರದು. ಇದೆಲ್ಲವೂ ಅಜ್ಞಾನಿಗಳ ದೃಷ್ಟಿಯಿಂದಲೇ ಸಿದ್ಧವಾಗಿರುವದಾದ್ದರಿಂದ ಜ್ಞಾನಿಗಳು ಸರ್ವವೂ ಬ್ರಹ್ಮವೆಂತಲೂ, ಹೀಗೆ ಪ್ರಕಾಶಿಸುತ್ತಿರುವದೇ ಬ್ರಹ್ಮಸ್ವಭಾವವೆಂತಲೂ ಪೇಳುತ್ತಿರುವರು. ಹೀಗೆ ಸುತ್ತುತ್ತಿರುವದ್ದರಿಂದ ಜಗತ್ತು ನಿತ್ಯವೆಂದು ಕೆಲವರು ಪೇಳುವರು. ಉತ್ಪತ್ತಿ ದೃಷ್ಟಿಯಿಂದಿದು ನಿತ್ಯವೆಂದು ಪೇಳುವದು ಹ್ಯಾಗೆ ಉಪಪನ್ನವಾಗುವದೋ ಹಾಗ ನಾಶದೃಷ್ಟಿಯಿಂದಿದು ನಶ್ವರವೆನ್ನುವದೂ ಉಪಪನ್ನವಾಗಬಹುದು. ವ್ಯಕ್ತಾವ್ಯಕ್ತಸ್ಥಿತಿಯಿಂದಿದು ನಿತ್ಯವಾಗುವದಾದರೆ ಸ್ಥಿತಿಯುಂಬುವದು ಕ್ಷಣಿಕವಾದ್ದರಿಂದ ಕ್ಷಣಿಕ ವಿಜ್ಞಾನಿಗಳ ವಚನವೇ ಯಥಾರ್ಥವಾಗಬಹುದು. ಮತ್ತೂ ಪ್ರಕೃತದಲ್ಲಿ ಸೂರ್ಯಚಂದ್ರಾದಿ ಲೋಕಗಳು ಸ್ಥಿರವಾಗಿ ತೋರುವದ್ದರಿಂದ ಜಗತ್ತೆಲ್ಲವೂ ಸತ್ಯವೆಂತಲೇ ಪೇಳಬಹುದು. ಕಲ್ಪನಾಶಕ್ತಿ ಇರುವವರೆಗೆ ಸಮಸ್ತ ಕಲ್ಪನೆಗಳು ಸ್ವಸ್ವಮತಾನುಸಾರವಾಗಿ ಸ್ಥಾಪಿಸಲು ಯೋಗ್ಯವಾಗುವವು. ಕಲ್ಪನಾಮಯವಾದ ಮನವನ್ನತಿಕ್ರಮಿಸಿದವರಿಗೆ ಇದೆಲ್ಲವೂ ಸುಳ್ಳೆಂತಲೂ ಬ್ರಹ್ಮದೃಷ್ಟಿಯಿಂ ಸರ್ವವೂ ಬ್ರಹ್ಮವೆಂತಲೂ ತೋರುತ್ತಿರುವದಾದ್ದರಿಂದ ನೀನು ಇಂದ್ರಜಾಲ ಸ್ವರೂಪವಾದ ಈ ಪ್ರಪಂಚದಲ್ಲಿ ದೃಷ್ಟಿಯನ್ನಿಡದೆ ಚಿನ್ಮಾತ್ರದೃಷ್ಟಿಯಿಂದಾನಂದದಿಂದಿರುವನಾಗೆಂದು ವಸಿಷ್ಠನು ಪೇಳಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಸ್ಥಿತಿಪ್ರಕರಣದೋಳ್ ಪಂಚಮ ತರಂಗಕ್ಕೆ ಮಂಗಳಮಹಾ ಶ್ರೀ ಶ್ರೀ.

---

೬ನೇ ತರಂಗ ಪ್ರಾರಂಭವು.

## ಕದಂಬದಾಶೂರೋಪಾಖ್ಯಾನವು.

---

ಬಳಿಕ ಶ್ರೀರಾಮಚಂದ್ರನು ಕುರಿತು ವಶಿಷ್ಠನಿಂತೆಂದನು. ಎಲೈ ಶುಭಮತಿಯೇ! ಭೋಗೈಶ್ವರ್ಯಗಳಲ್ಲಿ ಆಶೆಯಿಂ ಕೆಟ್ಟಬುದ್ಧಿ ಪುರುಷರೇ ಈ

ಸಂಸಾರ ಚಕ್ರವನ್ನು ಸತ್ಯವಾಗಿ ತಿಳಿದಿರುವರು. ವಿಷಯಗಳನ್ನನುಸರಿಸುವ ಇಂದ್ರಿಯಗಳಂ ನಿಗ್ರಹಿಸಿ ಬುದ್ಧಿಗೆ ಪ್ರೇರಕವಾದ ಚಿನ್ವಸ್ತುವಿನ ಮಹಿಮೆಯಂ ತಿಳಿದ ಮಹಾತ್ಮರು ಜಗದ್ರೂಪವಾದ ಈ ಮಾಯೆಯಂ ವಿನೋದವೆಂದು ನೋಡುತ್ತಿರುವರು. ಯಾವನು ಈ ಮಾಯಾರೀತಿಯನ್ನೂ ಸ್ವಸ್ವರೂಪವನ್ನೂ ವಿಚಾರಿಸುವನೋ ಅವನು ಪರೆಯಂ ಸರ್ಪವಂತೆ ಮಾಯಾಮಯವಾದ ಅಹಂಕಾರವನ್ನೇ ಬಿಡುವನು. ಅವನು ಸಂಸಾರದಲ್ಲೇ ಇದ್ದಾಗ್ಯೂ ಕ್ಷೇತ್ರದಲ್ಲಿದ್ದ ಹುರದಬೀಜವು ಹುಟ್ಟದಿರುವಂತೆ ಪುನರ್ಜನ್ಮವಂ ಪಡೆಯುವನು. ಈ ಶರೀರವು ತಪ್ಪಿ ಒಳ್ಳೇ ಶರೀರವು ಬಂದರೆ ಈ ಆಧಿವ್ಯಾಧಿಗಳು ತಪ್ಪುವವೆಂದು ಅಜ್ಞರಾದವರೇ ಅಪೇಕ್ಷಿಸುವರು. ಶರೀರವೆನ್ನುವದು ಯಾವದು ಬಂದಾಗ್ಯೂ ಆಧಿವ್ಯಾಧಿಗಳು ತಪ್ಪದಾದ್ದರಿಂದ ಪುನಃ ಶರೀರಬರದಂತೆ ಆತ್ಮನಲ್ಲಿ ದೃಷ್ಟಿಯನ್ನಿಡುವನಾಗು. ಈ ಸಂಸಾರಚಕ್ರದ ರೀತಿಯಂ ತಿಳಿಯಲೋಸುಗ ನಾನು ಪೇಳುವದಾವರೆ ಶೂರನ ಕಥೆಯಂ ಕೇಳುವವನಾಗು. ಈ ಭೂಮಂಡಲದೊಳ್ ಕಮಲ ಕುವಲಯ ಕಲ್ಹಾರಗಳಿಂ ಮನೋಹರವಾದ ಸರೋವರಗಳಿಂದಲೂ, ವಿಚಿತ್ರವಾದ ಪುಷ್ಪವೃಕ್ಷಗಳಿಂದಲೂ, ನಾನಾವಿಧ ಪಕ್ಷಿಗಳಿಂದಲೂ, ಕದಂಬಮಯವಾದ ವನಗಳಿಂದಲೂ, ಭೋಗಿಗಳಿಗೆ ಮನೋಹರವಾದ ಉದ್ಯಾನಗಳಿಂದಲೂ, ಅತಿ ಸುಂದರವಾದ ಗಿರಿ, ಗ್ರಾಮ, * ಪಲ್ಲಿ, ನಗರಾದಿಗಳಿಂದಲೂ ಆಶ್ಚರ್ಯಕರವಾದ ಮಗಧವೆಂಬ ದೇಶವಿರುವದು. ಅಲ್ಲಿ ಒಂದಾನೊಂದು ಪರ್ವತದ ದಡದೊಳ್ ಎರಡನೇ ಬ್ರಹ್ಮನಂತೆ ಸರ್ವಜ್ಞನಾದ ಶರಲೋಮನೆಂಬ ಮಹಾಮುನಿ ಇದ್ದನು. ತಪಃಪ್ರಭಾವದಿಂದವನಿಗೆ ಬೃಹಸ್ಪತಿಗೆ ಕಚನಂತೆ ಮಹಾಮತಿಯಾದ ದಾಶೂರನೆಂಬ ಮಗನಾದನು. ಈ ಮಗನಿಗೆ ಬಾಲ್ಯವು ಕಳೆಯದಿರುವಲ್ಲಿಯೇ ಸಪತ್ನೀಕನಾದ ಆ ಶರಲೋಮನು ಸ್ವರ್ಗವಂ ಪೊಂದಲು ಮಾತಾಪಿತೃ ವಿಯೋಗದಿಂದತಿ ದೀನನಾದ ದಾಶೂರನು ಏಕಾಕಿಯಾಗಿ ದುಃಖಪಡುತ್ತಿರಲು ಓರ್ವ ವನದೇವತೆಯು ಅವನಿಗೆ ಸಮಾಧಾನವಂ ಪೇಳಿದಳದೆಂತೆನೆ—ಎಲೈ ಬಾಲಕನೆ! ನಿನ್ನ ಶರೀರಕ್ಕೆ ಬಾಲ್ಯಾವಸ್ಥೆ ಇರುವದಲ್ಲದೆ ಗುರುಜನಗಳ ಅನುಗ್ರಹದಿಂ ನಿನ್ನ ಪ್ರಜ್ಞೆಗೆ ಬಾಲ್ಯವಿಲ್ಲ. ಹೀಗಿರುವಲ್ಲಿ ಮಹಾಪ್ರಜ್ಞನಾದ ನೀನು ಅಜ್ಞನಂತೆ ದುಃಖಪಡುವದಕ್ಕೆ ನಿಮಿತ್ತವೇನಿರುವದು? ಹುಟ್ಟುವದು, ಕೆಲವುಕಾಲವಿರುವದು, ನಷ್ಟವಾಗುವದು ಸದಾ ಶರೀರಕ್ಕೆ ಸ್ವಾಭಾವಿಕವಾಗಿರುವದು. ಹೀಗೆ ಚಂಚ

* ಪಲ್ಲಿ=ಹಳ್ಳಿ.

ಲವಾದ ಸಂಸಾರಸ್ಥಿತಿಯಿಂ ನೀನು ನೋಡದಿಗುವದಕ್ಕೆ ಕಾರಣವೇನು? ಬ್ರಹ್ಮಾದಿಯಾದ ಈ ಜಗದಲ್ಲಿ ಸೂರ್ಯನಂತೆ ಉದಯಾಸ್ತಗಳೂ ಸಮಸ್ತ ದೃಶ್ಯಪದಾರ್ಥಗಳಿಗೂ ಸಿದ್ಧವಾದದ್ದಾದ್ದರಿಂದ ಮಾತಾಪಿತೃ ವಿಯೋಗದಿಂ ನೀನು ದುಃಖಪಡಲಾಗದು. ಎಂದು ಅಶರೀರವಾಕ್ಯದಂತೆ ಗಗನದಲ್ಲುಂಟಾದ ವನದೇವತೆಯ ವಾಕ್ಯವಂ ಕೇಳಿ ಆ ದಾಶೂರನು ಮೋಘಧ್ವನಿಯಿಂದುಲ್ಲಾಸಪಡುವ ನವಿಲಿನಂತೆ ಧೈರ್ಯವಂ ಪಡದು ಪಿತೃವಿಗೆ ಮಾಡತಕ್ಕ ಕೃತ್ಯವಂ ನೆರವೇರಿಶಿ, ಅತಿ ಧೃಡವಾದ ಭಾವದಿಂ ವರ್ಣಾಶ್ರಮೋಚಿತವಾಗಿ ತಪವಂ ಮಾಡುತ್ತಾ ವೇದವೇದಾಂತ ಜ್ಞಾನಾನುಷ್ಠಾನದಿಂ ಶ್ರೋತ್ರೀಯ ಭಾವವಂ ಪಡೆದನು. ತತ್ವಾರ್ಥವಂ ತಿಳಿಯುದೆ ಕರ್ಮಾಚಾರ ನಿಷ್ಠೆಯಲ್ಲಿರುವ ಆ ದಾಶೂರನಿಗೆ ಅತ್ಯಂತವಾಗಿ ಶುದ್ಧಿಯಲ್ಲೇ ಅಪೇಕ್ಷೆ ನಿಂದಿದ್ದರಿಂದ ಶುದ್ಧವಾದ ಭೂಮಿಯಲ್ಲೂ ಕೂಡ ಅಶುದ್ಧಿಪರ್ಯಾಲೋಚನೆಯಿಂದ ಎಲ್ಲೆಲ್ಲಿಯೂ ಮನಸ್ಸು ಶಾಂತವಾಗಲಿಲ್ಲ. ಬಳಿಕ ಅವನು ಜನಸಂಚಾರವಿಲ್ಲದಿರುವ ವೃಕ್ಷಾಗ್ರದಲ್ಲೇ ತನಿಗೆ ಸ್ಥಿತಿಯು ಯೋಗ್ಯವಾದ್ದಂದಾಲೋಚಿಸಿ ಪಕ್ಷಿಯಂತೆ ವೃಕ್ಷಸ್ಥಿತಿಯೋಗ್ಯತೆಯುಂ ಪಡೆಯುವೆನೆಂಬ ಸಂಕಲ್ಪದಿಂದಗ್ನಿ ಪ್ರತಿಷ್ಠಾಪನೆಯಂ ಮಾಡಿ ತನ್ನ ಹೆಗಲಿನ ಮಾಂಸವಂ ಛೇದಿಶಿ, ಹವನವಂಮಾಡಲುಪಕ್ರಮಿಸಲು ಆಗ ಯಜ್ಞೇಶ್ವರನು ಬ್ರಾಹ್ಮಣ ಮಾಂಸದಿಂ ದೇವತೆಗಳ ಕತ್ತುಗಳು ಸುಡಲಾಗದೆಂದಾಲೋಚಿಶಿ ಅವನಿಗೆ ಪ್ರತ್ಯಕ್ಷವಾಗಿ ಬಂದು ಎಲೈ ಬಾಲಕನೆ! ಯಾವ ನಿಮಿತ್ತದಿಂ ನೀನು ಇಂಥಾ ಕ್ರೂರಯಾಗವಂ ಮಾಡುವೆಯೋ ಆ ಇಷ್ಟಾರ್ಥವಂ ವಿವರಿಸುವನಾಗು. ಈ ಕರ್ಮವಂ ಸಾಕುಮಾಡೆಂದು ಹೇಳಲು ಆ ದಾಶೂರನು ಯಜ್ಞೇಶ್ವರನಂ ಕಂಡು ಯಥಾವಿಧಿಯಾಗಿ ಪೂಜಿಸಿ ಎಲೈ ದೇವಕುಲಾಗ್ರಗಣ್ಯನೇ! ಅನೇಕವಿಧ ಪ್ರಾಣಿಗಳಿಂ ಪೂರ್ಣವಾದ ಭೂಮಿಯೊಳ್ ತಪಸ್ಸಿಗೆ ಶುದ್ಧವಾದಸ್ಥಲವು ನನಿಗೆ ಎಲ್ಲಿಯೂ ಗೋಚರವಾಗಲಿಲ್ಲವಾದ್ದರಿಂದ ಪಕ್ಷಿಯಂತೆ ವೃಕ್ಷಾಗ್ರವಲ್ಲಿರಬೇಕೆಂದು ನಾನು ಪ್ರಾರ್ಥಿಸುವೆನೆಂದು ಹೇಳಲು ಯಜ್ಞೇಶ್ವರನು ಎಲೈ ಮುನಿಕುಮಾರನೇ! ಇಚ್ಛೆಯಿದ್ದಂತೆ ನಿನಗೆ ವೃಕ್ಷಾಗ್ರದಲ್ಲಿ ಸ್ಥಿತಿಯಾಗುವದೆಂದು ಹೇಳಿ ಅಂತರ್ಧಾನವಾದನು. ಬಳಿಕ ಆ ದಾಶೂರನಿಗೆ ಪಕ್ಷಿಯಂತೆ ಗಮನಾಗಮನಾದಿ ಯೋಗ್ಯತೆಯುಂಟಾದುದು. ಅನಂತರದಲ್ಲವನು ತನಿಗೆ ವಾಸಯೋಗ್ಯವಾದ ವೃಕ್ಷವು ಯಾವದೆಂದು ನೋಡುತ್ತಾ ಬಂದಾನೊಂದು ವನದ ಮಧ್ಯದಲ್ಲಿ ಗಗನಮಂಡಲವಂ ಚುಂಬಿಸುವ ಕೊಂಬೆಗಳಿಂದಲೂ, ಮಧ್ಯಾಹ್ನದೊಳ್ವಿಶ್ರಮಿಸಿಕೊಳ್ಳುವ ಸೂರ್ಯನ ಕುದುರೆಗಳಿಗೆ

ಆಶ್ರಯವಾಗುವ ಸ್ಕಂಧಗಳಿಂದಲೂ, ಪ್ರಕಾಶಿಸುತ್ತಾ ವಿಕಸಿತವಾದ ಪುಷ್ಪಗಳಿಂದಲೂ, ಎಲ್ಲಾ ಕಡೆಯಿಂದಲೂ, ಪೊರಮಟ್ಟಿರುವ ಶಾಖೆಗಳಿಂದಲೂ, ದಿಗಂತಗಳೊಳ್ ಸ್ಥಳವಂ ನೋಡಿ ಚಪ್ಪರವಂ ಕಟ್ಟುವಂತೆ ಕಾಣುತ್ತಾ ದಿಕ್ಕುದಿಕ್ಕುಗಳಿಂದಲೂ, ಗುಂಪುಗುಂಪಾಗಿ ಬರುವ ಭ್ರಮರಗಳ ಮಂಡಲಗಳಿಂದಿಂದ್ರನೀಲಮಣಿಮಯವಾದ ಕುಂತಲಗಳಂ ಧರಿಸಿರುವಂತೆಯೂ, ಚಂಚಲವಾದ ಚಿಗುರುಗಳೆಂಬ ಕೈಗಳಿಂ ದಿಗ್ದೇವತೆಗಳ ಮೊಗಕ್ಕೆ ತಗಲಿದ ಪುಷ್ಪ ಪರಾಗಗಳನ್ನೊರಸುವಂತೆಯೂ, ಕೆಂದಳಿರುಗಳ ಗುಂಪುಗಳಿಂದಲೂ, ವಿಕಸಿತವಾದ ಪೂಗುತ್ತಿಗಳಿಂದಲೂ, ಕೂಡಿದ ಶಾಖಾಗ್ರಗಳಿಂ ಶೋಭಿಸುವದರಿಂದ ತಾಂಬೂಲವಂ ಧರಿಸಿರುವ ಮುಖಗಳಿಂ ವನಪಂಕ್ತಿಗಳಂ ನೋಡಿ ನಗುವಂತೆಯೂ, ಕೊಂಬೆಗಳ ಮಧ್ಯಭಾಗಗಳಲ್ಲಿ ಪತ್ರಮಯವಾದ ಗೂಡುಗಳೊಳ್ ಧ್ವನಿಗೆಯ್ಯುತ್ತಿರುವ ಚಕೋರ ಪಕ್ಷಿಗಳಿಂ ಪೂರ್ಣವಾದ್ದರಿಂದ ಸಿದ್ಧರ ಮಾರ್ಗದಿಂದಾಶ್ರಯಿಸಲ್ಪಟ್ಟಿರುವಂತೆಯೂ ಸ್ಕಂಧಮಧ್ಯಗಳಲ್ಲಿ ವಿಹರಿಸುವ ಮಯೂರಗಳ ಪಿಂಛಗಳಿಂದಿಂದ್ರಚಾಪಗಳಂ ಧರಿಸಿದ ಮೇಘಗಳಿಂ ತುಂಬಿರುವಂತೆಯೂ, ಕೊಂಬೆಗಳಲ್ಲ ಚಲಿಸುವ ಚಮರೀ ಮೃಗಗಳಿಂದ ಅನೇಕ ವಿಮಲಾಂಶುಕಗಳಂ ವಹಿಸಿರುವಂತೆಯೂ, ಶುಕ ಪಿಕ ಶಾರಿಕ ಮೊದಲಾದ ಪಕ್ಷಿಗಳ ಶಬ್ದದಿಂ ಪಾಡುತ್ತಿರುವಂತೆಯೂ, ಚಲಿಸುವ ಪ್ರವಾಳಗಳಿಂದಲೂ, ವಿಕಸಿತವಾದ ಪುಷ್ಪಗಳಿಂದಲೂ, ಶೋಭಿಸುವ ಲತೆಗಳಿಂದಾಶ್ರಿತವಾಗಿರುವದರಿಂದ ಅನೇಕ ನಾಯಕಿಯರಿಂದಾಲಿಂಗಿಸಲ್ಪಟ್ಟಿರುವಂತೆಯೂ, ಥಳಥಳಿಸುವ ಕುಸುಮ ಪರಾಗ ಪಂಕ್ತಿಗಳಿಂದ ಮಿಂಚುಗಳಿಂದೊಡಗೂಡಿದ ಮೇಘದಂತೆಯೂ, ಅನೇಕ ಸಹಸ್ರ ಶಾಖಾ ಭುಜಗಳಿಂದಲೂ, ಕುಂಡಲಗಳಂತೆಸೆವ ಚಂದ್ರ ಸೂರ್ಯ ಮಂಡಲಗಳಿಂದಲೂ, ಭೂವ್ಯಾಕಾಶ ಮಧ್ಯಭಾಗವಂ ತುಂಬಿಕೊಂಡಿರುವದರಿಂದಲೂ ಕೂಡ ನಾರಾಯಣನೋಪಾದಿಯಲ್ಲಿ ವಿಶ್ವರೂಪವಂ ತೋರಿಸುವಂತೆಯೂ, ಮೂಲಭಾಗದಲ್ಲಿರುವ ಗಜ ಭುಜಗಗಳಿಂದಲೂ, ಶಿರೋಭಾಗದಲ್ಲಿ ಕಾಣುವ ನಕ್ಷತ್ರಗಳಿಂದಲೂ, ಮಧ್ಯಭಾಗದಲ್ಲಿ ಗಿರಿ ನಗರಾದಿಗಳಂತೆ ಪ್ರಕಾಶಿಸುವ ಲತಾಪುಷ್ಪ ಶಾಖಾವರಣಗಳಿಂದಲೂ, ಕೂಡ ಪ್ರಪಂಚದ ರೂಪಾಂತರದಂತೆಯೂ, ವೃಕ್ಷ ಪಂಕ್ತಿಗಳಿಗೆ ಮಹಾರಾಜನಂತೆಯೂ, ಫಲಪಲ್ಲವ ಪುಷ್ಪಗಳಿಗೆ ದೊಡ್ಡ ಬೊಕ್ಕಸದಂತೆಯೂ, ಪುಷ್ಪಮಯವಾದ್ದರಿಂದ ನಕ್ಷತ್ರಗಳಿಂ ತುಂಬಿರುವ ಗಗನದಂತೆಯೂ' ಪುಷ್ಪಾವರಣ ಮಯವಾದ ಗವಾಕ್ಷಗಳಿಂದಲೂ, ಲತಾಮಯವಾದ ಪ್ರಾಕಾರಗಳಿಂದಲೂ ಪಲ್ಲವಮಯವಾದ ಗೃಹಗಳಿಂದಲೂ, ಭೃಂಗಗಳ ಸಂಗೀತಗಳಿಂದಲೂ, ಪಕ್ಷಿಗಳ

ಕ್ರೀಡಾಶಾಲೆಗಳಿಂದಲೂ, ಪುಷ್ಪಪರಾಗಗಳ ವಾಸನೆಯಿಂದಲೂ, ಮಧುವಿನ ಸೌರಭ್ಯದಿಂದಲೂ, ಮಂದಮಾರುತನ ಸುಳಿದಾಟದಿಂದಲೂ, ಸಿದ್ಧವಿದ್ಯಾಧರಾದಿ ಗಗನಚಾರಿಗಳ ಸಮಾಗಮದಿಂದಲೂ ಕೂಡ ವನಲಕ್ಷ್ಮಿಯ ವಿಹಾರ ಸೌಧದಂತೆಯೂ, ಒಂದೊಂದೆಡೆಯಲ್ಲಿ ವನದೇವತೆಗಳ ಅಂತಃಪುರದಂತೆಯೂ, ಅತಿ ವಿಸ್ತಾರವಾದ ಪತ್ರಸಮೂಹಗಳಿಂದಾವರಿಸಲ್ಪಟ್ಟಿರುವುದರಿಂದ ಮೇಘಗಳಿಂ ಮುಚ್ಚಿಕೊಂಡಿರುವ ಪರ್ವತದಂತೆಯೂ, ಗಂಡಭಾಗಗಳನ್ನುಜ್ಜಿಕೊಳ್ಳುವ ಮದ್ದಾನೆಗಳಿಂ ಮೂಲಭಾಗದೊಳ್ ಸೇರಿಕೊಂಡಿರುವುದರಿಂದ ಉಪಪರ್ವತಗಳಿಂ ಕೂಡಿರುವ ಕುಲಪರ್ವತದಂತೆಯೂ, ಚಲಿಸುವ ಪುಷ್ಪಗಳೆಂಬ ನೇತ್ರಗಳಿಂದಲೂ, ಪಲ್ಲವಗಳೆಂಬ ಪಾಣಿಗಳಿಂದಲೂ, ಲತೆಗಳೆಂಬ ಹುಡಗಿಯರಿಗೆ ಸಾಭಿನಯೋಪದೇಶವಂ ಮಾಡುವಂತೆಯೂ, ವಾಯುವೇಗದಿಂ ಸುತ್ತಮುತ್ತಲೂ ಪುಷ್ಪಗಳು ಬೀಳುವುದರಿಂದ ತನ್ನೆಡೆಗೆ ಬಂದಿಸಿದ್ಧರನ್ನು ಪಕ್ಷಿಧ್ವನಿಗಳಿಂದ ಯೋಗಕ್ಷೇಮವಂ ಕೇಳುತ್ತಾ ಪುಷ್ಪಾಂಜಲಿಗಳಿಂ ಸಮರ್ಪಿಸುವಂತೆಯೂ; ಶಿಖರಭಾಗದಲ್ಲಿ ಹಾರಾಡುವ ಪಕ್ಷಿಗಳಿಂದಲೂ ಅತ್ಯುನ್ನತವಾದ ಶಿಖೆಗಳಿಂದಲೂ ಸ್ವರ್ಗದಲ್ಲಿರುವ ಪಾರಿಜಾತವಂ ಜಯಿಸಲೋಸುಗ ಸೇನೆಯೊಡನೆ ಪೊರಮಡುವಂತೆಯೂ, ಭ್ರಮರಗಳಿಂ ಕೂಡಿದ ಅನೇಕ ಸಹಸ್ರ ಪುಷ್ಪಗಳಿಂದ ಸಹಸ್ರಾಕ್ಷ ರೂಪವಂ ವಹಿಸಿರುವಂತೆಯೂ, ಶಿಖೆಗಳಲ್ಲಿರುವ ಪೂಗುತ್ತಿಗಳಿಂದಂತರಿಕ್ಷವಂ ನೋಡಲೋಸುಗ ಪಾತಾಳದಿಂದೆದ್ದು ಬಂದಿರುವ ಫಣೀಶ್ವರನಂತೆಯೂ, ಪುಷ್ಪಪರಾಗಗಳಿಂ ತುಂಬಿರುವುದರಿಂದ ಭಸ್ಮೋದ್ಧೂಳಿತಾಂಗನಾದ ಶಂಕರನಂತೆಯೂ, ಲತಾಗೃಹಗಳಿಂದಾವೃತವಾಗಿರುವುದರಿಂದ ಗೃಹಗಳ ಮಧ್ಯದೊಳಿರುವ ರಾಜಗೃಹದಂತೆಯೂ, ಮೇರುವಿನಂತೆ ತ್ರೈಲೋಕ್ಯಕ್ಕೆ ಆಧಾರವಾಗಬೇಕೆಂಬ ಭಾವದಿಂ ವೃಕ್ಷರೂಪದಿಂ ಬೆಳೆದ ವಿಂಧ್ಯನಂತೆಯೂ, ಪ್ರಕಾಶಿಸುತ್ತಿರುವ ಕದಂಬವೃಕ್ಷವಂ ಕಂಡು ಈ ವೃಕ್ಷವು ತನ್ನ ವಾಸಕ್ಕೆ ಯೋಗ್ಯವಾಗಿರುವದೆಂದಾಲೋಚಿಸಿದನು. ಮಹಾ ಪ್ರಳಯದೊಳ್ ಜಗವೆಲ್ಲವೂ ಏಕಾರ್ಣವವಾಗಿರುವಲ್ಲಿ ಉನ್ನತವಾಗಿ ಮಧ್ಯದೊಳ್ ಇರುವ ವಟವೃಕ್ಷವಂ ನಾರಾಯಣನಂತೆ ಆ ಕದಂಬವನ್ನೇರಿದ ಚಕೋರನು ಕುತೂಹಲದಿಂ ಸುತ್ತಲೂ ನೋಡುವಲ್ಲಿ ದಿಕ್ಕುಗಳೆಂಬ ಸ್ತ್ರೀಯರುಗಳಿಗೆ ಗಿರಿಶಿಖರದಿಂ ಬೀಳುವ ನದಿಗಳು ಮಾಲೆಗಳಂತೆಯೂ, ಪರ್ವತಗಳು ಕುಚಗಳಂತೆಯೂ, ಆಕಾಶವು ಕೇಶಪಾಶದಂತೆಯೂ, ನೀಲಮೇಘಗಳು ಮುಂಗುರುಳುಗಳಂತೆಯೂ, ದಿಕ್ಪಾಲರ ಪುರದಲ್ಲಿರುವ ಕಮಲಗಳು ಮುಖಮಧುಕರಗಳಂತೆಯೂ, ಭ್ರಮರ ಕೋಕಿಲಾದಿ ಪಕ್ಷಿಧ್ವನಿಗಳು ಭಾಷಣಗಳಂತೆಯೂ, ಗಿ

ಶಿಖರ ವೃಕ್ಷಗಳು ರೋಮರಾಜಿಗಳಂತೆಯೂ, ಭೂಮಿಯಲ್ಲಿರುವ ಪ್ರವಾಹಗಳು ಕಾಲ್ಗಗ್ಗರಗಳಂತೆಯೂ, ಅಲ್ಲಿಯ ಪಕ್ಷಿಶ್ರೇಣಿಗಳು ಗೆಜ್ಜೆಗಳಂತೆಯೂ, ಮಹಾರಣ್ಯಗಳಿಂ ಕೂಡಿರುವ ಕುಲಗಿರಿಗಳ ಮಧ್ಯಭಾಗಗಳು ಸಿತಂಬಜಘನಗಳಂತೆಯೂ, ಸೂರ್ಯಚಂದ್ರಮಂಡಲಗಳು ಕುಂಡಲಗಳಂತೆಯೂ, ನಕ್ಷತ್ರ ಪಙ್ಕ್ತಿಗಳು ಶಿರೋಭೂಷಣವಾದ ಮುಕ್ತಾಮಾಲೆಗಳಂತೆಯೂ, ಬಿಸಲು ಬೆಳ್ದಿಂಗಳುಗಳು ವಸ್ತ್ರಗಳಂತೆಯೂ, ಸಮುದ್ರಗಳು ಕನ್ನಡಿಗಳಂತೆಯೂ ಕಾಣ್ಬಂದವು. ತಪಸ್ಸಿನಲ್ಲಿ ಶೂರನಾದ ಆ ಶೂರನು ಆ ವೃಕ್ಷವನ್ನೇರಿದ್ದು ಮೊದಲುಗೊಂಡು ಕದಂಬದಾಶೂರನೆಂದು ಪ್ರಖ್ಯಾತನಾದನು. ಆ ವೃಕ್ಷದ ಶಾಖೆಯಲ್ಲಿ ವಿಸ್ತರವಾದ ಒಂದು ದಳವಂ ಸೇರಿದ ಆ ದಾಶೂರನು ಪದ್ಮಾಸನದಲ್ಲಿ ಕುಳಿತು ಕೂರ್ಮವು ಕಾಲ್ಗಳಂ ಸೆಳಕೊಳ್ಳುವಂತೆ ಶಬ್ದ ಸ್ಪರ್ಶಾದಿ ವಿಷಯಗಳಿಂದ ಇಂದ್ರಿಯಗಳಂ ಸೆಳೆದುಕೊಂಡು ಕರ್ಮಾಸಕ್ತನಾದ್ದರಿಂದ ಗೋಮೇಧ ನರಮೇಧಾಶ್ವಮೇಧ ಮೊದಲಾದ ಅನೇಕ ಯಾಗಗಳಂ ಮನಸ್ಸಿನಿಂದಲೇ ಮಾಡಿದನು. ಈ ಸತ್ಕರ್ಮಗಳಿಂ ದುಷ್ಕರ್ಮಗಳಳಿದು ಬಹುಕಾಲಕ್ಕೆ ಮನಸ್ಸು ನಿರ್ಮಲವಾಗಲು ಜನ್ಮಾಂತರ ಶ್ರವಣ ಮನನಾದಿ ಸಂಸ್ಕಾರೋದಯದಿಂ ವೈರಾಗ್ಯಾದಿಗಳು ಪುಟ್ಟಲು ಸ್ವಸ್ವರೂಪಜ್ಞಾನ ಉಂಟಾದುದು. ಅದರಿಂದ ಅಜ್ಞಾನಾವರಣ ಅಳಿಯಲು ನಿಶ್ಶೇಷವಾಗಿ ವಾಸನಾ ದೋಷವಣಗಲು ಸರ್ವಕಾಲವನ್ನತಿಕ್ರಮಿಸಿದ ಪೂರ್ಣ ಚಂದ್ರನಂತೆ ಪ್ರಕಾಶಿಸುತ್ತಿದ್ದ ಆ ಮುನಿಯು ಒಂದಾನೊಂದು ಕಾಲದೊಳ್ ತಾನಿರುವ ಶಾಖೆಗೆ ಅಗ್ರಭಾಗದೊಳ್ನಮ್ರಭಾವದಿಂ ನಿಂದಿರುವ ಓರ್ವ ಸುಂದರಿಯಂ ಕಂಡು ಎಲೌ ಸುಮುಖಿಯೇ ಯಾರು ನೀನು? ಏನುಕಾರಣ ಇಲ್ಲಿಗೆ ಬಂದೆಯೆಂದು ಕೇಳುವಲ್ಲಿ ಆ ವನಿತೆಯು ನುಡಿದಳದೆಂತೆನೆ.—ಎಲೈ ಮಹಾಮುನಿಯೆ! ನಾನು ಈ ನಿನ್ನ ತಪೋವನವನ್ನಾಶ್ರಯಿಸಿಕೊಂಡಿರುವ ವನದೇವತೆಯು. ನಿನ್ನ ಆವಾಸದಿಂ ಪರಿಶುದ್ಧವಾದ ಈ ಕದಂಬ ವೃಕ್ಷದಲ್ಲೇ ವಾಸವಾಗಿರುವೆನು. ಚೈತ್ರಶುದ್ಧ ತ್ರಯೋದಶಿಯಲ್ಲಿ ನಂದನವನದೊಳ್ಮದನೋತ್ಸವಕ್ಕೋಸುಗ ಸಮಸ್ತ ವನದೇವತೆಗಳು ಸೇರುವಲ್ಲಿ ನಾನು ಅಲ್ಲಿಗೆ ಹೋಗಿದ್ದೆನು ಅಲ್ಲಿಗೆ ಬಂದಿದ್ದ ವನದೇವತೆಗಳಲ್ಲಿ ನಾನೋರ್ವಳಲ್ಲದೆ ಯಾವಳೂ ಅಪುತ್ರವತಿಯಾಗಿರಲಿಲ್ಲ. ಪುತ್ರಸೌಖ್ಯದಿಂ ಸಂತುಷ್ಟರಾಗಿರುವ ಅವರಂ ನೋಡುವ ನನಗೆ ಪುತ್ರರಿಲ್ಲದಿರುವುದಕ್ಕಿಂತಲೂ ಪುಟ್ಟದಿರುವದೇ ಲೇಸೆಂದು ತೋರಿತಾದ್ದರಿಂದ ಪುತ್ರಾರ್ಥಿನಿಯಾಗಿ ಬಂದಿರುವೆನು. ಕಲ್ಪವೃಕ್ಷಕ್ಕಿಂತಲೂ ಅಧಿಕವಾಗಿ ಇಷ್ಟಾರ್ಥಗಳಂ ಕೊಡುವುದರಲ್ಲಿ ಸಮರ್ಥನಾದ ನೀನು ಅನಾಥಳಂತೆ ದುಃಖಪಡುವ

ನನ್ನನ್ನು ಪೇಕ್ಷಿಸುವುದು ಯುಕ್ತವಲ್ಲವಾದ್ದರಿಂದ ಪುತ್ರವತಿಯಾಗುವಂತೆ ನನಗೆ ಅನುಗ್ರಹವಂ ಮಾಡುವನಾಗು. ಮಹಾತ್ಮರಂ ಪ್ರಾರ್ಥಿಸದೆ ಯಾವ ಇಷ್ಟಾರ್ಥವೂ ಆಗಲಾರದಾದ್ದರಿಂದ ನಿನ್ನಂ ಪ್ರಾರ್ಥಿಸಿರುವೆನು. ನೀನು ದಯಮಾಡದಿದ್ದರೆ ಅಗ್ನಿಗೆ ಈ ಶರೀರವಂ ಸಮರ್ಪಿಸುವದಾಗಿ ನಿಶ್ಚೈಸಿರುವೆನೆಂದು ನುಡಿದ ಆ ವನದೇವತೆಯ ವಾಕ್ಯವಂ ಕೇಳಿದ ಆ ಮಹಾಮುನಿಯು ನಸುನಕ್ಕು ಕೈಯಲ್ಲಿದ್ದ ಕುಸುಮವನ್ನಾವನದೇವತೆಗೆ ಕೊಟ್ಟು ಎಲೌ ದೇವಿಯೇ ಇನ್ನು ತಿಂಗಳಿಗೆ ನಿನಗೆ ಪುತ್ರನಾಗುವನು. ನೀನು ಅತಿ ದುಃಖದಿಂ ಮರಣವನ್ನು ನಿಶ್ಚೈಸಿ ಪ್ರಾರ್ಥಿಸಿದೆಯಾದ್ದರಿಂದ ನಿನ್ನ ಮಗನು ಜ್ಞಾನಿಯಾಗುವನಲ್ಲದೆ ಭೋಗ ಲಂಪಟನಾಗಲಾರನೆಂದು ಪೇಳಲು ಆ ವನದೇವತೆಯು ಸಂತುಷ್ಟಳಾಗಿ ತನ್ನ ಮನೆಗೆ ಪೋದಳು. ಬಳಿಕ ಬಹು ಕಾಲದ ಮೇಲೆ ಆ ವನದೇವತೆಯು ಹನ್ನೆರಡು ವರ್ಷದ ಮಗನಂ ಕರೆತಂದು ಎಲೈ ಮಹಾಮುನಿಯೇ ನಿನ್ನ ಅನುಗ್ರಹದಿಂ ಪುಟ್ಟಿದ ಈ ಮಗನಿಗೆ ಇತರ ವಿದ್ಯೆಗಳಂ ನಾನು ಕಲಿಸಿರುವೆನು. ಕುಲದಲ್ಲಿ ಪುಟ್ಟಿದವನು ಅಜ್ಞಾನಿಯಾಗಿರುವದು ಯಾರಿಗೂ ಸಮ್ಮತವಲ್ಲವಾದ್ದರಿಂದ ಸಂಸಾರ ತಾರಕವಾದ ವಿದ್ಯೆಯನ್ನಿವನಿಗೆ ಪೇಳಿಕೊಡುವನಾಗೆಂದು ಪ್ರಾರ್ಥಿಸಿ ಆ ಮುನಿಯ ಆಜ್ಞೆಯಿಂದವನ ಸಮೀಪದಲ್ಲೇ ಆ ಮಗನಂ ಬಿಟ್ಟುಪೋದಳು. ಬಳಿಕ ಆ ಮಹಾಮುನಿಯು ಆ ಕುಮಾರನಿಗೆ ಅನೇಕ ಪ್ರಕಾರವಾದ ಉಪಾಖ್ಯಾನಗಳಿಂ ಬ್ರಹ್ಮವಿದ್ಯೆಯಂ ಪೇಳುತ್ತಿರುವಲ್ಲೊಂದಾನೊಂದು ದಿವಸ ಕೈಲಾಸ ನದೀಸ್ನಾನಕ್ಕೋಸುಗ ಅದೃಶ್ಯವಾದ ಶರೀರದಿಂ ಗಗನ ಗತಿಯಾಗಿ ಪೊರಮಟ್ಟ ನಾನು ರಾತ್ರಿಕಾಲದಲ್ಲಿ ಸಪ್ತರ್ಷಿ ಮಂಡಲ ಮಾರ್ಗದಿಂದಿಳಿದು ಆ ಕದಂಬವಂ ಹೊಂದಿದೆನು. ಆಗ ಆಮುನಿಯು ಕಮಲದಲ್ಲಿ ಭ್ರಮರದಂತೆ ಮಧುರವಾದ ಧ್ವನಿಯಿಂದಾಕುಮಾರನಂ ಕುರಿತು ಪೇಳವನದೆಂತೆನೆ. ಎಲೈ ಬಾಲಕನೇ! ಆಕಾಶದಲ್ಲಿ ದಿಸಿದ್ಧರಿಂದಾಕಾಶರಾಜನೆಂದು ಪ್ರಖ್ಯಾತನಾದ ಒಬ್ಬ ಮಹಾರಾಜನಿರುವನು. ಅವನು ಮಹಾ ಪರಾಕ್ರಮ ಸಾಹಸಶಾಲಿಯಾದ್ದರಿಂದಲೂ, ವಿಚಿತ್ರ ಚರಿತ್ರನಾದ್ದರಿಂದಲೂ, ಅವನ ಆಜ್ಞೆಯಂ ಶಿರೋಮಣಿಯಂತೆ ಸಮಸ್ತರೂ ಧರಿಸುವರಲ್ಲದೆ ಅವನನ್ನಾಕ್ರಮಿಸಲು ಯಾರೂ ಸಮರ್ಥರಾಗಲಿಲ್ಲ. ಸುಖ ದುಃಖಕರನಾದ ಅವನ ಕಾರ್ಯಗಳು ಸಮುದ್ರದಲೆಗಳಂತೆ ಯಾರಿಂದಲೂ ಎಣಿಸಲು ಶಕ್ಯವಾಗಲಿಲ್ಲ. ಸ್ವಪ್ನ ಸಂಕಲ್ಪ ಮನೋರಥಾದಿಗಳೆಲ್ಲವು ಉತ್ಪತ್ತಿಕ್ಷಣದಲ್ಲಿಯೇ ವಿಚಿತ್ರವಾಗಿ ಪ್ರತ್ಯಕ್ಷ ಸಿದ್ಧವಾಗುವದ್ದರಿಂದವನ ಲೀಲೆಯನ್ನನುಸರಿಸುವುದಕ್ಕೆ ಹರಿಹರಾದಿಗಳೂ ಕೂಡ ಸಮರ್ಥರಾಗಲಿಲ್ಲ. ಸ್ಥೂಲ ಸೂಕ್ಷ್ಮ ಕಾರಣಗಳಂತಲೂ,

ತಾಮಸ ರಾಜಸ ಸಾತ್ವಿಕಗಳೆಂತಲೂ, ಪ್ರಸಿದ್ಧವಾದ ಅಧಮ ಮಧ್ಯಮೋತ್ತಮ ಶರೀರಗಳಿಂದವನು ಜಗವೆಲ್ಲವನ್ನೂ ಆಕ್ರಮಿಸಿಕೊಂಡಿರುವನು. ಮೂರು ಶರೀರಗಳುಳ್ಳ ಅವನು ಗಗನದಲ್ಲಿ ಪಕ್ಷಿಯಂತೆ ಪರಮಾಕಾಶದಲ್ಲೇ ಹುಟ್ಟಿ ಅಲ್ಲೇ ಇರುವನೆಂದು ತಿಳಿಯುತ್ತೇನೆ. ಆ ಆಕಾಶದಲ್ಲೇ ಆ ಮಹಾರಾಜನು ಹದಿನಾಲ್ಕು ಬೀದಿಗಳಿಂದಲೂ, ಎರಡು ದೀಪಗಳಿಂದಲೂ, ಏಳು ಜೆಟ್ಟಗಳಿಂದಲೂ, ಏಳು ಭಾವಿಗಳಿಂದಲೂ, ಮುತ್ತಿನ ಬಳ್ಳಿಗಳಿಂದಲೂ, ಊರ್ಧ್ವಾಧೋಗತಿ ರೂಪವಾದ ಅಂಗಡಿ ಬೀದಿಗಳಿಂದಲೂ ಮನೋಹರವಾದ ಒಂದು ಪಟ್ಟಣವಂ ನಿರ್ಮಿಸಿ ಅನೇಕ ಜನ ಸಂಸಾರಿಗಳನ್ನು ಪಟ್ಟಣದಲ್ಲಿ ನಿಲ್ಲಿಸಿದನು. ಹ್ರಸ್ವದೀರ್ಘವಾದ ಆಯುಸ್ಸುಳ್ಳ ಆ ಸಂಸಾರಿಗಳಿಗೆ ಐದು ಧೀಪಗಳಿಂದಲೂ, ಮೂರು ಕಂಭಗಳಿಂದಲೂ, ಕಪ್ಪಾದ ಮೇಲು ಹೊದ್ದಿಕೆಗಳಿಂದಲೂ, ಬಿಳೀ ಮರಗಳಿಂದಲೂ, ಒಂಭತ್ತು ಬಾಗಿಲುಗಳಿಂದಲೂ, ಅನೇಕ ಗವಾಕ್ಷಿಗಳಿಂದಲೂ, ಎರಡು ಕೈಸಾಲೆಗಳಿಂದಲೂ, ಮನೋಹರಗಳಾಗಿ ಬೆಳಕು ಕಾಣುವ ಅಧಿಕಾರಿಗಳಿಂ ರಕ್ಷಿತವಾಗಿ ನಿರಂತರವಾಗಿ ಚಲಿಸುವ ವಾಯುವಿಗೆ ಆಶ್ರಯವಾಗಿ ಒಳಒಳಗೆ ಮೂರು ಕೊಟ್ಟಿಗಳುಳ್ಳ ಮನೆಗಳಂ ನಿರ್ಮಿಸಿಕೊಟ್ಟನು. ಆ ಸಂಸಾರಿಗಳು ವ್ಯವಹಾರ ಪರರಾಗುವಲ್ಲಿ ಆ ರಾಜನು ಅಧಿಕಾರಿಗಳೊಡಗೂಡಿ ಗೂಡುಗಳಲ್ಲಿ ಪಕ್ಷಿಯಂತೆ ವಿಹರಿಸುತ್ತಿದ್ದು ಯಥೇಚ್ಛವಾಗಿ ಹೋಗುವನು, ಈ ರಾಜನಿಗೆ ಒಂದೊಂದು ವೇಳೆಯೊಳ್ ಮುಂದಾಗುವ ಪಟ್ಟಣಕ್ಕೆ ಹೋಗಬೇಕೆಂತಲೂ, ನಾಶವಂ ಹೊಂದಬೇಕೆಂತಲೂ, ಬಿಳಬೇಕೆಂತಲೂ, ಕಾರ್ಯಗಳಂ ಮಾಡಬೇಕೆಂತಲೂ, ಇಚ್ಛೆಯುಂಟಾದ ಕೂಡಲೇ ಆಯಾಯ ಕಾರ್ಯಗಳು ಸಿದ್ಧಿಸುವವು. ಒಂದುವೇಳೆ ತನ್ನ ಮತ್ತೊಂದು ನಡತೆಯಿಂದಲೇ ಕಾರ್ಯ ಹಾನಿಯಾಗಲು ತಾನು ಅಜ್ಞನೆಂದು ದುಃಖಪಡುವನು. ವರ್ಷಾಕಾಲದ ನದಿಯ ಪ್ರವಾಹದಂತೆ ಒಂದು ವೇಳೆ ದೈನ್ಯವನ್ನೂ, ಒಂದುವೇಳೆ ಆನಂದವನ್ನೂ, ಸಹ ಅನುಭವಿಸುವನು. ಮಾಯಾ ನಾಟಕಧಾರಿಯಂತೆ ಪ್ರತಿಕ್ಷಣದಲ್ಲೂ ಒಂದೊಂದು ಬಗೆಯಾಗಿ ಪ್ರಕಾಶಿಸುವನು. ಎಂದು ಆ ಮುನಿಯು ಹೇಳುವಲ್ಲಿ ಎಲೈ ತಂದೆಯೇ ಈ ಆಕಾಶ ರಾಜನೆಂಬುವನು ಯಾರು? ನನಗೆ ತಿಳಿಯುವಂತೆ ಇವನ ಕಥೆಯಂ ವಿವರಿಸಿ ನಿರೂಪಿಸುವನಾಗೆಂದು ಆ ಕುಮಾರನು ಕೇಳಲು ಮರಳಿ ಆ ಮಹಾಮುನಿ ಇಂತೆಂದನು, —ಎಲೈ ಬಾಲಕನೆ ಪ್ರಪಂಚ ರೂಪವಾದ ಸಂಸಾರವನ್ನೇ ಈ ಪರಿಯಿಂ ನಿನಗೆ ಹೇಳಿದೆನು. ಇದರ ವಿವರವಂ ತಿಳಿಯುವನಾಗು. ಪರಮಾಕಾಶ ರೂಪನಾದ ಪರಮಾತ್ಮನೇ ಸ್ವಸಂಕಲ್ಪದಿಂ ತಾನಾಗಿ ತನ್ನಲ್ಲೇ ಪುರುಷನೆಂಬುವನಾಗಿದ್ದು ಆಕಾಶರಾಜನೆನಿಸುವನು.

ಅವನು ತಾನಾಗಿ ಪುಟ್ಟುವಲ್ಲಿ ಈ ಜಗವೆಲ್ಲವು ಪುಟ್ಟುವುದು. ಅವನು ಅದರ್ಶನ ರೂಪವಾದ ನಾಶವಂ ಪೊಂದುವಲ್ಲಿ ಇದೆಲ್ಲವೂ ನಷ್ಟವಾಗುವದಾದ್ದರಿಂದ ಸಮಸ್ತವೂ ಅವನೇ ಎಂದು ಹೇಳಲ್ಪಡುವುದು. ಬ್ರಹ್ಮ ವಿಷ್ಣು ರುದ್ರಾದಿಗಳೆಲ್ಲರೂ ವೃಕ್ಷಕ್ಕೆ ಕೊಂಬೆಗಳಂತೆ ಇವನಿಗೆ ಅಂಗಗಳೆನಿಸುವರು. ಗಗನದೊಳಿವನಿಂ ನಿರ್ಮಿತವಾದ ಪುರದಲ್ಲಿ ಹದಿನಾಲ್ಕು ಬೀದಿಗಳೇ ಲೋಕಗಳು. ಸೂರ್ಯ ಚಂದ್ರರೇ ದೀಪಗಳು. ಕುಲಗಿರಿಗಳೇ ಗಿರಿಗಳು. ಸಮುದ್ರಗಳೇ ಭಾವಿಗಳು. ನದಿಗಳೇ ಮುತ್ತಿನ ಬಳ್ಳಿಗಳು. ಪುಣ್ಯ ಪಾಪಧನಗಳಿಂ ಸ್ವರ್ಗ ನರಕ ಸುಖದುಃಖಗಳಿಗೆ ಕ್ರಯ ವಿಕ್ರಯಗಳಾಗುವ ಮಾರ್ಗಗಳೇ ಅಂಗಡಿ ಬೀದಿಗಳು, ಊರ್ಧ್ವ ಮಧ್ಯಮಾಧೋಲೋಕಗಳಲ್ಲಿರುವ ದೇವತಾದಿಗಳೇ ಸಂಸಾರಿಗಳು. ಇದಲ್ಲದೆ ಶರೀರಗಳೇ ಮನೆಗಳು. ಅಲ್ಲಿ ನಿಯತವಾಗಿ ಚಲಿಸುವ ವಾಯುಗಳೇ ಪ್ರಾಣಿಗಳು. ಅಸ್ಥಿಗಳೇ ಮರಗಳು. ಮೇಲುಹೊದ್ದಿಕೆಗಳೇ ಕೇಶಗಳು. ಶ್ರೋತ್ರಾದಿ ರಂಧ್ರಗಳೇ ನವದ್ವಾರಗಳು. ತಾಲು ನಾಸಾಂತರಾದಿ ರಂಧ್ರಗಳೇ ವಾತಾಯನಗಳು. ತೋಳು ತೊಡೆಗಳೇ ಕೈಸಾಲೆಗಳು. ಜ್ಞಾನೇಂದ್ರಿಯಗಳೇ ದೀಪಗಳು. ಅಹಂಕಾರಗಳೇ ಅಧಿಕಾರಿಗಳು. ಜ್ಞಾನವಿಲ್ಲದಿರುವದೇ ಬೆಳಕುಕಾಣದಿರುವದು. ಸ್ಥೂಲ ಸೂಕ್ಷ್ಮ ಕಾರಣ ಶರೀರಗಳೇ ತೊಟ್ಟಿಗಳು. ಇಲ್ಲಿ ವಿಹರಿಸುವ ಆ ಪುರುಷನಿಗೆ ಮುಂದೆ ಬರತಕ್ಕ ಶರೀರವೇ ಭವಿಷ್ಯತ್ಪುರವು. ಸಂಕಲ್ಪಗಳೇ ಕಾರ್ಯಗಳು. ಸಂಕಲ್ಪಿಸದಿರುವದೇ ನಾಶವು. ಅಖಂಡವಾದ ತನ್ನಲ್ಲಿ ಭೇದಕಲ್ಪನೆಯೇ ಉತ್ಪತ್ತಿಯು. ಇಲ್ಲಿ ಇರುವ ಪುರುಷನು ಮರವಂ ಪಣೆಯಲೋಸುಗ ಪೆಟ್ಟಿದ್ದ ಬೆಣೆಯಂ ಕಿತ್ತು ಆ ಮರದಸೀಳಿನೊಳ್ ಸಿಲುಕಿದ ವೃಷಣವುಳ್ಳ ಕಪಿಯಂತೆ ತನ್ನ ವ್ಯಾಪಾರದಿಂದಲೇ ದುಃಖಪಡುವನು. ಆನಂದಕಲ್ಪನೆಯಿಂ ಕರ್ತೃತ್ವಕೊಂಡಿರುವ ಈ ಪುರುಷನು ದೈವವಶದಿಂ ವೃಕ್ಷಾಗ್ರದಿಂ ಬಿದ್ದ ಮಧುವನ್ನೆಕ್ಕುವ ಬಂಟಿಯಂತೆ ವಿಷಯಸುಖವನ್ನನುಭವಿಸುವನು. ಹೀಗೆ ಸಂಕಲ್ಪಾದಿ ವ್ಯಾಪಾರಗಳನ್ನನುಭವಿಸುವ ಇವನಿಗೆ ಸತ್ವ ರಜಸ್ತಮೋಗುಣ ಭೇದದಿಂ ಸಂಕಲ್ಪಗಳು ಮೂರು ಬಗೆಯಾಗುವವು. ಇದರಲ್ಲಿ ತಾಮಸ ಸಂಕಲ್ಪದಿಂ ದೈನ್ಯವು ದುಃಖಗಳು ನೀಚವಾದ ಕ್ರಿಮಿಕೀಟಾದಿ ಜನ್ಮಗಳು ಸಹ ಉಂಟಾಗುವವು. ರಾಜಸ ಸಂಕಲ್ಪದಿಂ ಲೋಕವ್ಯವಹಾರಗಳು ಸಂಸಾರಾಸಕ್ತಿಯು ಅದರ ಸುಖದುಃಖಗಳು ಸಹ ಉಂಟಾಗುವವು. ಸಾತ್ವಿಕ ಸಂಕಲ್ಪದಿಂ ಧರ್ಮಜ್ಞಾನಗಳು ಸ್ವರ್ಗ ಸಾಮ್ರಾಜ್ಯ ಸಂಪತ್ತುಗಳು ಸಹ ಆಗುವವು. ಸತ್ವಮಾರ್ಗದಲ್ಲಿದ್ದ ಈ ಸಂಕಲ್ಪಕ್ಕೆ ಸಾಯುಜ್ಯ ಸಾಮ್ರಾಜ್ಯವು ಸಮೀಪದಲ್ಲೇ ಇರುವದು.

ಈ ಮೂರು ಬಗೆಯಾದ ಸ್ವರೂಪಗಳನ್ನತಿಕ್ರಮಿಸಿದ ಸಂಕಲ್ಪವೇ ಮೋಕ್ಷವೆನಿಸುವದು. ಇದೇ ಅಸಂಕಲ್ಪವೆಂತಲೂ ಹೇಳಲ್ಪಡುವದು. ದೃಶ್ಯಸಾಮಾನ್ಯವನ್ನು ಹಿಡಿಯದಿರುವದೇ ಆ ಸಂಕಲ್ಪದ ಸ್ವರೂಪವು. ಆದ್ದರಿಂದೀನು ಸ್ಥಿರವಾದ ಮನದಿಂದಲೇ ಚಂಚಲವಾದ ಮನವಂ ನಿಗ್ರಹಿಸಿ ಸಮಸ್ತದೃಷ್ಟಿಗಳನ್ನು ಬಿಟ್ಟು ಸಂಕಲ್ಪಕ್ಕೆ ನಾಶವನ್ನುಂಟುಮಾಡುವನಾಗು. ಅನೇಕ ಸಹಸ್ರವರ್ಷಗಳು ತಪವಂ ಮಾಡಿದಾಗ್ಯೂ ಮೇರು ಮೊದಲಾದ ಗಿರಿಗಳಲ್ಲಿ ಶರೀರವಂ ಚೂರ್ಣವಂ ಮಾಡಿಕೊಂಡಾಗ್ಯೂ, ಪಂಚಾಗ್ನಿ ಮಧ್ಯದಲ್ಲಿ ಬಹುಕಾಲನಿಂದಾಗ್ಯೂ, ಬಡಬಾಗ್ನಿಯನ್ನುಂಗಿದಾಗ್ಯೂ, ಪಾತಾಳಾದಿ ಮಹಾಬಿಲಗಳಂ ಪ್ರವೇಶಿಸಿದಾಗ್ಯೂ, ಕತ್ತಿಯ ಹರತೆಗೋಳ್ ನಿಶ್ಚಲನಾಗಿ ತಪಿಸಿದಾಗ್ಯೂ, ಹರಿಹರ ಬ್ರಹ್ಮಾದಿಗಳು ಕರುಣೆಯಿಂದುಪದೇಶವಂ ಮಾಡಿದಾಗ್ಯೂ, ಸ್ವರ್ಗಾದಿಲೋಕಗಳಲ್ಲ ವಾಸವಾಗಿದ್ದಾಗ್ಯೂ ಸಂಕಲ್ಪ ನಾಶವಿಲ್ಲದೇ ಮೋಕ್ಷವಾಗಲಾರದಾದ್ದರಿಂದ ಪುರುಷಪ್ರಯತ್ನದಿಂದಲೇ ಸಂಕಲ್ಪಗಳಂ ಬಿಡುವನಾಗು. ಸಂಕಲ್ಪವೆಂಬ ತಂತುವಿನಲ್ಲಿ ಮಣಿಗಳಂತೆ ಸಕಲ ಭಾವಗಳು ಸೇರಿಕೊಂಡಿರುವದ್ದರಿಂದ ಸಂಕಲ್ಪ ನಾಶವಾದಕೂಡಲೇ ಅವುಗಳು ಎಲ್ಲಿಗೋ ಪೋಗುವವು. ಮಕ್ಕಳ ಬಾಯಿನ ಜೊಲ್ಲಿನಲ್ಲಿ ಅವರ ಬಿಂದುಗಳಂತೆಯೇ ಸಕಲ ಭಾವಗಳು ಸಂಕಲ್ಪಕ್ಕೆ ತಗಲಿ ಕೊಂಡಿರುವವೆಂದು ತಿಳಿಯುವನಾಗು. ಅತ್ಯಂತವಾಗಿ ಇಲ್ಲದ ಪದಾರ್ಥಜ್ಞಾನವೇ ಪ್ರಥಮ ಸಂಕಲ್ಪವು, ಆದ್ದರಿಂದಿದು ಅಸತ್ತೆನಿಸುವದು. ಅದರಿಂದುಂಟಾದ ಜಗವು ವ್ಯವಹಾರದಲ್ಲಿ ಸತ್ತಾಗಿ ತೋರುವದ್ದರಿಂದಲೂ, ವಿಚಾರದಲ್ಲಿ ಅಸತ್ತಾಗುವದ್ದರಿಂದಲೂ ಸದಸತ್ತೆನಿಸುವದು. ಜಗಉಂಟಾಗುವದಕ್ಕೆ ಮುಂದೆ ಸಂಕಲ್ಪ ತೋರತಕ್ಕದ್ದಲ್ಲವಾದ್ದರಿಂದಲೂ, ಸದ್ರೂಪವಾದ ಬ್ರಹ್ಮದ ಸಂಬಂಧವು ಇದಕ್ಕೆ ಇಲ್ಲವಾದ್ದರಿಂದಲೂ, ಸಂಕಲ್ಪವನ್ನೇ ಸದಸತ್ತೆಂದು ತಿಳಿಯಲಾಗದು. ಬ್ರಹ್ಮವಿಚಾರದಲ್ಲಿ ಸಂಕಲ್ಪವು ಅಸಂಕಲ್ಪವೆನಿಸಿಕೊಳ್ಳುವದಾದ್ದರಿಂದ ಸಂಕಲ್ಪಕ್ಕೆ ಬ್ರಹ್ಮ ಸಂಬಂಧವಿಲ್ಲವೆಂದು ಹೇಳಲ್ಪಡುವದು. ಸಮಸ್ತ ಪದಾರ್ಥಗಳು ಸಂಕಲ್ಪಿಸಿದಂತೆ ಆಗುತ್ತಾ ಸಂಕಲ್ಪವು ಕಾರಣವಾಗಿರುವದ್ದರಿಂದ ಯಾವದನ್ನೂ ನೀನು ಸಂಕಲ್ಪಿಸದಿರುವನಾಗು. ಯಾವದನ್ನೂ ಸಂಕಲ್ಪಿಸದೇ ಈಶ್ವರೇಚ್ಛೆಯಿಂ ಪ್ರಾಪ್ತವಾದ ವ್ಯವಹಾರದಲ್ಲಿರಲು ಚಿತ್ತಿಗೆ ದ್ವೈತಾಭಿಮುಖತ್ವ ತಪ್ಪಿಹೋಗುವದು. ಅಸದ್ರೂಪವಾದ ಸ್ವರೂಪಜ್ಞಾನದಿಂ ನಾನಾಯೋನಿಗಳಲ್ಲಿಬಿದ್ದು ದುಃಖಪಡುವಂಥಾದ್ದು ಕೇವಲ ಸದ್ರೂಪವಾದ ಬ್ರಹ್ಮಕ್ಕೆ ಅನುಚಿತವಾದ್ದರಿಂದ ವಿಚಾರದಿಂ ಸ್ವರೂಪವಂ ತಿಳಿದು ಅಜ್ಞಾನದಿಂ ಮುಕ್ತನಾಗುವದೇ ಉತ್ತಮವೆಂದು ನಿಶ್ಚಯಿಸುವನಾಗು. ಎಂ

ದು ಹೇಳುವಲ್ಲಿ ಸಂಕಲ್ಪದ ಸ್ವರೂಪವನ್ನೂ ಅದರ ಉತ್ಪತ್ತ್ಯಾದಿ ಕ್ರಮವನ್ನೂ ಹೇಳಬೇಕೆಂದು ಆ ಬಾಲಕನು ಬೆಸಗೊಳ್ಳಲು ಮರಳಿ ಆ ಶೂರಸಿಂಹೆಂದನು. ಎಲೈ ಬಾಲಕನೇ ಅಪರಿಚ್ಛಿನ್ನನಾಗಿ ಸತ್ತಾಸಾಮಾನ್ಯರೂಪಿಯಾದ ಪರಮಾತ್ಮನಿಗೆ ಸ್ವಾಭಾವಿಕವಾದ ಜಗತ್ಸೃಷ್ಟಿಯೊಳ್ ಅರಿಯಲ್ಲುಂಟಾದ ಎರಡನೇ ಪದಾರ್ಥದ ತೋರಿಕೆಯೇ ಸಂಕಲ್ಪಕ್ಕೆ ಬೀಜವೆನಿಸುವದು. ತೋರಿಕೆಯೊಡನೆ ಎರಡನೇ ಪದಾರ್ಥದ ತೋರಿಕೆಯೇ ಆ ಬೀಜಕ್ಕೆ ಮೊಳಕೆ ಯೆನಿಸುವದು. ಪದಾರ್ಥ ತೋರಿದ್ದರಿಂದ ಧನ ಸಿಕ್ಕಿದ ದರಿದ್ರನಂತೆ ಸಂತುಷ್ಟನಾದ ಆತ್ಮನ ದೃಷ್ಟಿಯಿಂ ಸತ್ತೆಯುಂ ಪಡೆದ ಆ ಮೊಳಕೆಯು ಅಗ್ನಿಯಿಂ ಪೊರಮಡುವ ಧೂಮವು ಆಕಾಶವಂ ವ್ಯಾಪಿಸಿಕೊಂಡು ಮೇಘವಾಗುವಂತೆ ಸ್ವಲ್ಪ ಸ್ವಲ್ಪವಾಗಿ ತನ್ನಿಂದತಾನೇ ವೃದ್ಧಿಹೊಂದುತ್ತಾ ಬ್ರಹ್ಮೇತರ ಪದಾರ್ಥ ಜ್ಞಾನ ರೂಪವಾಗಿ ಸಂಕಲ್ಪವೆನ್ನಿಸುವದು. ಜಲವೇ ಸಮುದ್ರವೆನಿಸುವಂತೆ ಈ ಸಂಕಲ್ಪವೇ ಜಗತ್ತೆನಿಸುವದ್ದರಿಂದ ಇದೇ ಸಕಲ ಸಂಸಾರ ದುಃಖಗಳೆಂದು ತಿಳಿಯುವನಾಗು. ತೋರಿದ ಪದಾರ್ಥದ ಅಭಿಮಾನದಿಂ ಸ್ವರೂಪವಂ ಮರೆತ ಬ್ರಹ್ಮವೇ ಜೀವನೆನಿಸುವದು. ಸ್ವರೂಪದ ಮರವೆಯೇ ಅವಿದ್ಯೆಯೆನಿಸುವದು. ಇದರಿಂ ತಾನು ಜಡನೆಂದಭಿಮಾನಿಸಿ ನಾನು ಕಪ್ಪಾಗಿರುವೆನು. ಸುಂದರ ನಾಗಿರುವೆನೆಂಬುವದೇ ಮೊದಲಾದ ಭಾವಗಳಿಂದಹಂಕಾರಿಯಾದ ಪರಮಾತ್ಮನಿಗೆ ಜೀವನೆಂಬ ಹೆಸರುಂಟಾಗುವದು. ಆದರಿಂದಲೇ ಕಾಕತಾಳ ನ್ಯಾಯದಿಂದೆರಡನೇ ಚಂದ್ರನಂತೆ ನೀನು ಉಂಟಾಗಿರುವೆ ಯಲ್ಲದೆ ಮತ್ತೊಂದಿಲ್ಲ. ಇದರಿಂದಲೇ ಸ್ಥಿತಿ ನಾಶಗಳು ಸಂಭವಿಸಿರುವವು. ಉನ್ಮತ್ತದಕಾಯಿಯುಂ ತಿಂದವನಿಗೆ ಪಿತ್ತೋದ್ರೇಕದಿಂದೆಲ್ಲಾ ಕಡೆಯಲ್ಲೂ ಕನಕಜ್ಞಾನ ಉಂಟಾಗುವಂತೆ ಅಸತ್ತಾದ ಈ ಸಂಕಲ್ಪವು ನಿನ್ನಹೃದಯದಲ್ಲಿ ಸ್ವೇಚ್ಛೆಯಿಂದಲೇ ಉಂಟಾಗುವದು. ಇದರಿಂದ ಇವನು ಅವನು ನಾನು ಇವುಗಳೆಂಬ ನಾನಾಭಾವಗಳುಂಟಾದವು. ವಿಚಾರರೂಪವಾದ ಪುರುಷಪ್ರಯತ್ನದಿಂ ಸ್ವರೂಪವಂತಿಳಿದು ಯಾವದನ್ನೂ ಸಂಕಲ್ಪಿಸದಿರುವ ನಿನಗೆ ಅನಂತವಾದ ಶ್ರೇಯಸ್ಸಾಗುವದು. ಭಾವನೆಯಿಲ್ಲದ ಮಾತ್ರದಿಂದಲೇ ಸಂಕಲ್ಪ ನಾಶವಾಗುವದ್ದರಿಂದ ಕೈಯೆತ್ತಿ ಹುಲ್ಲು ಕೊಯ್ಯುವದಕಿಂತಲೂ ಇದು ಸುಕರವೆಂದು ತಿಳಿಯುವನಾಗು. ಪದಾರ್ಥ ಭಾವನೆಯಿಲ್ಲದೇ ಅಖಂಡ ಜ್ಞಾನಾನಂದ ಸ್ವರೂಪನಾದ ಆತ್ಮನಿಗೆ ಯಾವದುತಾನೇ ಅಸಾಧ್ಯವಾದೀತು. ಮನಸ್ಸು ಜೀವ ಬುದ್ಧಿ ಚಿತ್ತಾದಿ ನಾಮಗಳು ಈ ಸಂಕಲ್ಪಕ್ಕೇ ಆಗಿರುವವು. ಇದೆಲ್ಲಕ್ಕೂ ನೀನೇ ಭಿನ್ನನಾದ್ದರಿಂದ ಈ ಸಂಕಲ್ಪವಂ ಬಿಟ್ಟಕೂಡಲೇ ನಿನಗೆ ಸಮಸ್ತ

ಸಂಸಾರ ದುಃಖವೂ ಉಪಶಾಂತವಾಗುವುದು. ಅದುಕಾರಣ ಮನದಿಂ ಮನವನ್ನೂ, ಸಂಕಲ್ಪದಿಂ ಸಂಕಲ್ಪವನ್ನೂ, ತಿರಸ್ಕರಿಸಿ ಸ್ವರೂಪಮಾತ್ರ ಸ್ಥಿತಿಯಂ ಪಡೆಯುವನಾಗು. ಇಲ್ಲದ್ದರಲ್ಲಿ ಶಬ್ದಮಾತ್ರದಿಂದಿದೆಯೆಂಬ ಜ್ಞಾನರೂಪವಾದ ವಿಕಲ್ಪದಿಂದೀ ಜಗವು ಇರುವಂತೆ ತೋರುವದಲ್ಲದೆ ಇಲ್ಲಿ ಯಾವುದೂ ಇಲ್ಲವೆಂದು ನಿಶ್ಚಯಿಸುವನಾಗು. ಪರಮಾರ್ಥ ವಿಚಾರದಿಂದ ಸತ್ತಾದ ಸಂಕಲ್ಪದಿಂದುದಿಸಿದ ಈ ಜಗವೆಲ್ಲವೂ ಅಸತ್ತಾಗುವಲ್ಲಿ ಭಾವನೆಗೆ ಅವಕಾಶವೇನಿರುವುದು. ಪದಾರ್ಥ ಭಾವನೆ ಇಲ್ಲದ್ದರಿಂ ಸಂಕಲ್ಪ ಕ್ಷಯವಾಗುವಲ್ಲಿ ಪ್ರಾಪ್ಯವೆನಿಸುವ ಬ್ರಹ್ಮವು ಸಿದ್ಧವಾದ್ದರಿಂದ ಪಡೆಯತಕ್ಕದ್ದಿನ್ನೇನೂ ಇಲ್ಲವೆಂದು ನಿಶ್ಚಯಿಸುವನಾಗು. ತತ್ವ ವಿಚಾರದಿಂ ದೃಶ್ಯವಸ್ತುಗಳು ಅಸತ್ತೆಂದು ನಿರ್ಣಯವಾದ ಕೂಡಲೇ ಅವರ ಸ್ನೇಹಾಪೇಕ್ಷೆ ತಪ್ಪುವುದು. ಅದರಿಂದ ಪದಾರ್ಥಗಳ ಸ್ಥಿತಿಲಾಭಗಳಲ್ಲಿ ಸಂತೋಷವು ನಾಶದಲ್ಲಿ ದುಃಖವೂ ಸಹ ಆಗಲಾರದು. ಹಿಂದಕ್ಕೆ ಹೋದದ್ದನ್ನೂ, ಈಗ ಇರುವುದನ್ನೂ, ಮುಂದಕ್ಕೆ ಆಗುವುದನ್ನೂ, ಸ್ಮರಿಸುತ ಮನವು ವಾಸನೆಗಳಿಂ ಬದ್ಧವಾಗಿ ಕಪಿಯಂತೆ ಹೃದಯದಲ್ಲಿ ಕುಣಿಯುತ್ತಿರುವುದು. ದೃಶ್ಯವಸತ್ತೆಂಬ ಜ್ಞಾನವುಂಟಾದ ಕೂಡಲೆ ಭಾವನಾ ಸಂಕಲ್ಪಗಳು ನಷ್ಟವಾಗುವದ್ದರಿಂದಾಮನ ಎಲ್ಲಿಗೋ ಹೋಗುವುದು. ಈ ಸಂಕಲ್ಪಾದಿಗಳು ಶುಕ್ತಿರಜತಾದಿಗಳ ಸಹ ಅವಿಚಾರದಿಂದಲೇ ಸಿದ್ಧವಾಗಿರುವವಾದ್ದರಿಂದ ಆರೋಪಿತ ರೋಗಗಳಂತೆ ಚಿಕಿತ್ಸೆಗೆ ಸುಖಸಾಧ್ಯವಾಗಿರುವವು. ಈ ಸಂಸಾರವು ಸತ್ಯವೇ! ಅದರಲ್ಲಿ ಇದರ ನಾಶಕ್ಕೋಸುಗ ಶ್ರುತಿ ಗುರೂಪದೇಶಾನುಗ್ರಹಾದಿಗಳು ಹೇಗೆ ಉಂಟಾದುವು. ತಂಡುಲದ ಮೇಲಣ ತವುಡಿನಂತೆಯೂ, ತಾಮ್ರದ ಮೇಲಣ ಕಪ್ಪಿನಂತೆಯೂ, ವಿಚಾರವೆಂಬ ಸಂಸ್ಕಾರವಿಲ್ಲದ್ದರಿಂದಲೇ ಈ ಸಂಸಾರದ ಸತ್ಯತೆಯು ಕಾಣುವದಾದ್ದರಿಂದ ವಿಚಾರ ರೂಪವಾದ ಪೌರುಷದಿಂದಲೇ ನಷ್ಟವಾಗುವುದು. ಈ ಸಂಸಾರಕ್ಕೆ ನಾನು, ಯಾರು ನನಗೀ ಸಂಸಾರವು ಯಾವುದೆಂದು ವಿಚಾರಮಾತ್ರದಿಂದಲೇ ಈ ಸಂಸಾರವು ನಿನಗೆ ತಪ್ಪುವುದು. ಅಸತ್ತವು ಸತ್ಯವಾಗಿ ತೋರುವಲ್ಲಿ ತತ್ವವಿಚಾರವೇ ಆರೋಗ್ಯಕ್ಕೆ ಚಿಕಿತ್ಸೆಯಲ್ಲದೆ ಮತ್ತೊಂದಲ್ಲವಾದ್ದರಿಂದ ದೇವತಾದಿ ವೈಭವಗಳನ್ನೂ ಕೂಡ ಶಾಶ್ವತವೆಂದೆಣಿಸದ ತತ್ವವಿಚಾರದಲ್ಲಿ ಆಸಕ್ತನಾಗಿರುವನಾಗು, ಎಂದು ದಾಶೂರನು ಕುಮಾರನಿಗೆ ಹೇಳುತ್ತಿರುವಲ್ಲಿ ಅವನ ತಪಃಪ್ರಭಾವದಿಂ ಕಲ್ಪವೃಕ್ಷಕ್ಕಿಂತಲೂ ಅಧಿಕ ಸೌಂದರ್ಯವಾಗಿ ಸಕಲ ವನದೇವತೆಗಳಿಗೂ ಪೂಜ್ಯವಾಗಿರುವ ಆ ವೃಕ್ಷದ ಕೊಂಬೆಗೆ ಮೇರುವಿನ ಶಿಖರಕ್ಕೆ ಮೇಘದಂತೆ ನಾಸಿಕಿದೆನು. ದೀಪಕಾಂತಿಯಿಂದಾವೃಕ್ಷವೆಲ್ಲವನ್ನೂ

ಸುವರ್ಣಮಯವನ್ನಾಗಿ ಮಾಡುತ್ತಾ ಎರಡನೇ ಸೂರ್ಯನಂತೆ ಪ್ರಕಾಶಿಸುವ ಆ ಮುನಿಯ ಸಮೀಪಕ್ಕೆ ನಾನು ಪೋಗುವಲ್ಲಿ ನನ್ನಂ ಕಂಡ ಆ ಮಹಾಮುನಿಯು ನನಗೆ ಯಥಾವಿಧಿ ಸನ್ಮಾನವಂ ಮಾಡಿ ನನ್ನೊಡನೆಯೇ ಆ ಕುಮಾರನಿಗೆ ತತ್ವಾರ್ಥದ ಕಥೆಗಳನ್ನನೇಕವಾಗಿ ಪೇಳಿದನು. ಆ ರಾತ್ರಿಯೆಲ್ಲವೂ ಇಂದ್ರಿಯ ನಿಗ್ರಹದಲ್ಲಿ ಶೂರನಾದ ಆ ದಾಶೂರನೊಡನೆ ಮಾತನಾಡುತ್ತಿದ್ದು ಪ್ರಾತಃಕಾಲದೊಳ್ ಅಮರಾಂಗನಾ ಭೋಗಕುಸುಮಗಳಂತೆ ನಕ್ಷತ್ರಗಳು ಕಾಂತಿಹೀನವಾಗುತ್ತಿರಲು ಸ್ನಾನಾರ್ಥವಾಗಿ ಪೊರಮಟ್ಟ ನಾನು ಕುಮಾರನೊಡನೆ ಆ ಕದಂಬದ ಕೊನೆಯ ಪರ್ಯಂತವಾಗಿ ಬೆಂಬಿಡಿದು ಬಂದ ಆ ಮಹಾಮುನಿಯುಂ ಹಿಂತಿರುಗಿಸಿ ದೇವಗಂಗೆಗೆ ಪೋದೆನು. ಈ ಜಗವೆಲ್ಲವೂ ಸತ್ಯದಂತೆ ಕಾಣುತ್ತಿದ್ದರೂ ಅಸತ್ತೆಂದು ತಿಳುಪಲೋಸುಗ ಈ ದಾಶೂರನ ಕಥೆಯಂ ಪೇಳಿದೆನು. ಕಥೆಯಲ್ಲಿ ಕೇಳುವ ಪದಾರ್ಥದಂತೆ ಇದೆಲ್ಲವೂ ಯಥಾರ್ಥವಾಗಿ ತೋರುವುದಲ್ಲದೆ ಯಾವುದೂ ಸತ್ಯವಲ್ಲವಾದುದರಿಂದ ಸತ್ಯಜ್ಞಾನಾನಂದಾತ್ಮಕವಾದ ಸ್ವರೂಪದಲ್ಲಿಯೇ ನೀನು ಮನವಂ ನಿಲ್ಲಿಸುವನಾಗೆಂದು ವಸಿಷ್ಠನು ಪೇಳುತ್ತಿದ್ದನೆಂಬಲ್ಲಿಗೆ ಸ್ಥಿತಿಪ್ರಕರಣವಲ್ಲಿ ಜ್ಞಾನಯೋಗ ತರಂಗಿಣಿಯೊಳ್ ಕದಂಬದಾಶೂರೋಪಾಖ್ಯಾನ ನಿರೂಪಣವೆಂಬ ಆರನೆಯತರಂಗಕ್ಕೆ ಮಂಗಳಮಸ್ತು. ಶ್ರೀ ಶ್ರೀಃ ಜಯತು.



೭ನೆಯ ತರಂಗ ಪ್ರಾರಂಭವು.



ಕಚೋಪಾಖ್ಯಾನ ಬ್ರಹ್ಮಶಬ್ದೋತ್ಪತ್ತಿ ದೃಶ್ಯವಿವೇಕಾದಿ ನಿರೂಪಣ.



ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನಿಂತೆಂದನು-, ಎಲೈ ರಾಮಚಂದ್ರನೇ! ದೃಶ್ಯವಾಗಿರುವ ಈ ಸಂಸಾರವು ಸತ್ಯವೆನ್ನುವೆಯಾದರೆ ಸತ್ಸ್ವರೂಪನಾದ ನಿನಗಿದು ಸಿದ್ಧವಾಗಿಯೇ ಇರುವದ್ದರಿಂದ ಇಲ್ಲದ ಪದಾರ್ಥವಂ ಕೋರುವಂತೆ ಇದನ್ನೇಕೆ ಕೋರಬೇಕು. ಅಸತ್ಯವೆನ್ನುವೆಯಾದರೆ ಅಂಥಾ ಪದಾರ್ಥದಿಂದಾಗತಕ್ಕದ್ದೇನು! ಸತ್ಯಾಸತ್ಯವೆನುವೆಯಾದರೆ ಕ್ಷಣಿಕವಾದ ಪದಾರ್ಥಕ್ಕೆ ಆಶಿಸಬೇಕೆ! ಯಾವ ಪ್ರಕಾರದಿಂದಲೂ ಅಭಿಮಾನಿಸುವದಕ್ಕೆ ಇದು ಯೋಗ್ಯವಲ್ಲವಾದ್ದರಿಂದಲೂ, ಪರಮಾರ್ಥವಾಗಿ ಇದು ಅಸತ್ಯವಾದ್ದರಿಂದಲೂ, ಇಲ್ಲದ ಪದಾರ್ಥದಿಂ

ದೇನೂ ಆಗಲಾರದ್ದರಿಂದಲೂ, ಸಂಸಾರಬಂಧನೆನ್ನುವದು ಸುಳ್ಳೆಂತಲೇ ನಿಶ್ಚಯಿಸಿ ಭ್ರಾಂತಿ ಮಾತ್ರ ಸ್ವರೂಪವಾದ ಈ ಜಗದೊಳ್ನೀನು ಬದ್ಧನಾಗದೆ ನಿತ್ಯಮುಕ್ತಸ್ವಭಾವನಿಂದಿರುವವನಾಗು. ಪರಮಾತ್ಮನೇ ಹೀಗೆ ಪ್ರಕಾಶಿಸುತ್ತಿರುವನಾದ್ದರಿಂದ ಪ್ರಕಾರಾಂತರ ಕಲ್ಪನೆಯಿಂದಿಲ್ಲ ನೀನು ಬದ್ಧನಾಗಬೇಡ. ಸ್ವಸ್ವರೂಪವಲ್ಲಿ ನಿಲ್ಲುವದೆಂತೆಂದರೆ! ಎಲೈ ರಾಜೀವಾಕ್ಷನೇ ಚಿಜ್ಜಡವಿವೇಕದಲ್ಲಿ ದೃಗ್ರೂಪನಾದ ಆತ್ಮನೇ ಚಿತ್ತೆಂತಲೂ, ನಿತ್ಯನೆಂತಲೂ ಹೇಳಲ್ಪಡುವನು. ಸತ್ವರಜಸ್ತಮೋಗುಣಗಳೇ ಆದಿಯಾಗಿ ಸಮಸ್ತ ಪದಾರ್ಥವೂ ಜಡವೆಂತಲೂ, ಅನಿತ್ಯವೆಂತಲೂ ಹೇಳಲ್ಪಡುವದು' ಕೇವಲ ಚಿನ್ಮಾತ್ರಸ್ವರೂಪನಾದ ಆತ್ಮನಿಗೆ ಸಾಧನವಾದ ಯಾವ ಕರಣವೂ ಇಲ್ಲದ್ದರಿಂದ ಅವನಿಂದೀಜಗ ಉಂಟಾಗುವದೆಂದು ಹೇಳಲಶಕ್ಯವಾಗುವದು. ಜಡಕ್ಕೆ ಸ್ವತಃ ಕಾರ್ಯ ಕಾರಣಾದಿ ರೂಪಗಳಂ ತಾಳುವದಕ್ಕೆ ಯೋಗ್ಯತೆ ಇಲ್ಲದ್ದರಿಂದಲೂ, ಕಾರ್ಯ ಕಾರಣಾದಿ ರೂಪದಿಂದೀಜಗವು ದೃಶ್ಯವಾಗಿರುವದ್ದರಿಂದಲೂ ಆತ್ಮನೇ ಈ ಜಗಕ್ಕೆ ಕಾರಣನೆಂದು ಹೇಳಬೇಕಾಗುವದು. ಈ ಎರಡು ಪಕ್ಷಗಳಲ್ಲೂ ಚಿತ್ತಿಗೆ ಜಡಸಂಬಂಧದಿಂದಲೇ ಕಾಕತಾಳೀಯ ನ್ಯಾಯದಿಂ ಜಗತ್ಕಾರಣವಾದ ಅಹಂಭಾವ ಉಂಟಾಗುವದಾದ್ದರಿಂ ನೀನು ವಿವೇಕವಿಚಾರಗಳಿಂ ಜಡಾಂಶವಂ ತ್ಯಜಿಸುವವನಾಗು. ಅದರಿಂದ ಅಹಂಭಾವವಣಗುವದೇ ಮುಕ್ತಿಯೆನಿಸಿಕೊಳ್ಳುವದು. ಶಾಶ್ವತವಲ್ಲದ ಕಾಕತಾಳೀಯ ನ್ಯಾಯದಿಂದುಂಟಾದ ಪದಾರ್ಥದಲ್ಲಿ ಬುದ್ಧಿಶಾಲಿ ಯಾವನು ಯಾವನೂ ಭಾವವನ್ನಿಡಲಾರನಾದ್ದರಿಂದ ಜಡಾಂಶದಿಂ ಜನಿತವಾದ ಅಹಂಭಾವವಂ ಬಿಡುವನಾಗು. ಈ ಜಗವು ಪ್ರತಿಕ್ಷಣದಲ್ಲೂ ಕ್ಷಯಿಸುವದ್ದರಿಂದಲೂ, ಮರಳಿ ಮರಳಿ ಕಾಣ್ಬರುವದ್ದರಿಂದಲೂ, ಹೋದದ್ದು ಪುನಃ ಬರಲಾರದೆಂಬ ಯುಕ್ತಿಯಿಂದಲೂ, ಕಾರ್ಯರೂಪದಿಂದಿದು ನಷ್ಟವಾಗುವದಲ್ಲದೆ ಕಾರಣ ರೂಪದಿಂದಿದು ಶಾಂತವಾಗತಕ್ಕದ್ದಲ್ಲವೆಂದು ನಿಶ್ಚಯಿಸಬೇಕಾಗುತ್ತೆ. ಸೃಷ್ಟಿಗೆ ಪೂರ್ವದಲ್ಲೂ ಪ್ರಳಯದ ಕೊನೆಯಲ್ಲೂ ಇದು ಇಲ್ಲದಿರುವದರಿಂದಲೂ, ಇಲ್ಲದಿರುವದಕ್ಕೆ ಉತ್ಪತ್ತಿಯೆನ್ನುವದು ಅಸಂಗತವಾದ್ದರಿಂದಲೂ, ಶಾಶ್ವತವಾದ ಆತ್ಮನೇ ಈ ರೀತಿಯಿಂ ಕಾಣ್ಬರುವನೆಂದು ತಿಳಿಯತಕ್ಕದ್ದು. ರೂಪಾಂತರದಿಂ ಕಾಣ್ಬರುವವನಲ್ಲದೆ ಪರಮಾರ್ಥವಾಗಿ ರೂಪಾಂತರವಿಲ್ಲದ್ದರಿಂದ ಸೃಷ್ಟಿಪ್ರಳಯಗಳಿಲ್ಲವೇ ಇಲ್ಲವೆಂದು ಕೆಲವರು ಹೇಳುವರು. ಸೃಷ್ಟಿಪ್ರಳಯ ಬೋಧಕವಾದ ಶ್ರುತಿಗಳನ್ನಸತ್ಯವೆನಲೇಂ! ನಿಮಿತ್ತಕಾರಣವು, ಉಪಾದಾನ ಕಾರಣವು ಸಹ ಆತ್ಮನೇ ತನ್ನದಿಂದ ಈ ಆತ್ಮನಿಗೆ ರೂಪಾಂತರದಿಂ ತೋರುವದೇ ಸೃಷ್ಟಿಯು, ಮರಳಿ ಸ್ವರೂ

ಪದಿಂ ಪ್ರಕಾಶಿಸುವದೇ ಪ್ರಳಯವೆಂಬದಾಗಿ ಹೇಳಬಹುದೆಂದು ಕೆಲವರು ಹೇಳುವರು. ಈ ಸೃಷ್ಟಿಯಲ್ಲಿ ಬಹುರೂಪನಾಗುವೆನೆಂಬ ಪರಮಾತ್ಮನ ಇಚ್ಛೆಯೇ ಜಗತ್ತಿಗೆ ಕಾರಣವೆನಿಸುವದು. ಇಚ್ಛೆಯೊಡನೆ ಇದರ ಉತ್ಪತ್ತಿಯೂ ಸಿದ್ಧವಾಗುವದು. ಪರಮಾತ್ಮನಿಗೆ ಸೃಷ್ಟಿಯೆನ್ನುವದು ಇಚ್ಛಾಮಾತ್ರವಾದ್ದರಿಂದ ಎಷ್ಟಾವೃತ್ತಿ ಸೃಜಿಸಿದರೂ ಆ ಪರಮಾತ್ಮನು ಸ್ವಲ್ಪವಾದರೂ ಭೇದವಿಲ್ಲದೆ ನಿತ್ಯಾನಂದವಾಗಿರುವನು. ಅವನ ಇಚ್ಛಾರೂಪವಾದ ಕಾಲಶಕ್ತಿಯುಕ್ತಿಯನುಸರಿಸುವದು. ಆದ್ಯಂತವಿಲ್ಲದ ಆ ಕಾಲದಲ್ಲಿ ಪುರುಷನಿಗೆ ಆಯುಸ್ಸೆಂದೆಣಿಸಲ್ಪಟ್ಟ ನೂರು ವರ್ಷಗಳು ಭೂಮಿಯೊಳ್ ಪರಮಾಣುವಿನಂತೆಯೂ, ಸಮುದ್ರದಲ್ಲಿ ತುಂತುರುವಿನಂತೆಯೂ, ಯಾವದೋ ಒಂದು ಅಂಶವಾಗಿರುವದು. ಇಂಥಾಕಾಲದಲ್ಲಿ ಕ್ಷಣಿಕವಾದ ಈ ಸುಖದುಃಖಗಳ ಪ್ರಾಪ್ತಿಯಿಂದ ಯಾಕೆ ಬೆರಗಾಗಬೇಕು. ಅಥವಾ ಜಗತ್ತಿನ ಈ ಸುಖದುಃಖ ಭಾವಗಳು ಮರಳಿ ಮರಳಿ ಬರುವವಾದ್ದರಿಂದ ಶಾಶ್ವತವೆನಿಸಿದಾಗ್ಯೂ ಆಗಲೂ ಅವುಗಳು ಸಿದ್ಧವಾಗಿಯೇ ಇರತಕ್ಕಂಥಾವಾದ್ದರಿಂದ ಅವುಗಳಿಂ ಬೆರಗಾಗುವುದಕ್ಕೆ ಕಾರಣವಿಲ್ಲ. ಚಿಜ್ಜಡವಿವೇಕದಲ್ಲಿ ಜಗತ್ತಿನ ಕ್ಷಣಿಕವಾದ ಸ್ವಭಾವವು ಆತ್ಮನಿಗೆ ಎಂದಿಗೂ ಬರಲಾರದಾದ್ದರಿಂದ ಕ್ಷಣಿಕವಾದ ನೀರಿನ ನೊರೆಗೂ ಸ್ಥಿರವಾದ ಗಿರಿಗೂ ಸಂಬಂಧವಿಲ್ಲದಿರುವಂತೆ ಸ್ಥಿರವಾದ ಆತ್ಮನಿಗೂ ಕ್ಷಣಿಕವಾದ ಜಡಪದಾರ್ಥದ ಸಂಬಂಧವಿಲ್ಲವೆಂತಲೇ ಹೇಳತಕ್ಕದ್ದು. ಇಲ್ಲಿ ಅಭಿಮಾನ ಮಾತ್ರವೇ ಸಂಬಂಧವಾದ್ದರಿಂದಲೂ, ಸುಖದುಃಖಗಳು ಸ್ಥಿರವಾದರೂ ಕ್ಷಣಿಕವಾದರೂ ಅಭಿಮಾನ ಪಡುವದಕ್ಕೆ ಕಾರಣವಿಲ್ಲದ್ದರಿಂದಲೂ, ವಿಚಾರದಿಂ ತಟಸ್ಥನಾಗಿರುವದೇ ಲೇಸೆಂದು ತಿಳಿಯುವನಾಗು. ಪ್ರಕಾಶಕ್ಕೆ ದೀಪದಂತೆ ಜಗತ್ತಿಗೆ ಆತ್ಮನು ಕರ್ತೃವಾಗಿದ್ದಾಗ್ಯೂ ವಿವೇಕದಿಂ ತಟಸ್ಥನಾದವನು ಅಕರ್ತೃವೆನಿಸುವನು. ಸೂರ್ಯನ ರಥವು ತಿರುಗುತ್ತಿದ್ದರೂ ತನ್ನ ಸ್ಥಾನದಲ್ಲೇ ಕುಳಿತಿರುವ ಸೂರ್ಯನು ಗಮನಾಗಮನಗಳಿಲ್ಲದವನೆಂದು ಹೇಳಲ್ಪಡುವನು. ಹೀಗೆ ವಿವೇಕಿಯಾದವನಿಗೆ ಗಮನಾಗಮನಗಳಿಲ್ಲ ಎಂತಲೇ ತಿಳಿಯತಕ್ಕದ್ದು. ತೀರದ ವೈಚಿತ್ರ್ಯದಿಂದ [illegible] ಜಲದಲ್ಲುಂಟಾದ ಆವರ್ತದಂತೆ ಆತ್ಮಸಾನ್ನಿಧ್ಯದಿಂ ಪ್ರಕೃತಿ ಗುಣಗಳಿಗೆ ಕ್ಷೋಭೆಯಾಗಿ ಅದರಿಂ ಜಗತ್ತುಂಟಾಗುವದು. ಅದರಿಂದಾತ್ಮನಿಗೂ ಜಗತ್ತಿಗೂ ಸಂಬಂಧವಿಲ್ಲವೆಂದು ಶಾಸ್ತ್ರ ವಿಚಾರದಿಂ ಸಂಶುದ್ಧವಾದ ಮನದಲ್ಲಿ ನಿಶ್ಚಯಿಸಿರುವೆಯಾದರೆ ಅದು ಯುಕ್ತವೇ ಸರಿ. ಹೀಗಾದಾಗ್ಯೂ ಕೆಲವು ಜಾಗ್ರದಲ್ಲೂ, ಸ್ವಪ್ನದಲ್ಲೂ ಭ್ರಮ ಪದಾರ್ಥದಲ್ಲೂ, ಅಪೇಕ್ಷೆ ಪಡುವದು ಅಸಂಗತವಾದ್ದರಿಂದ ಅದರ

ಭಾವಿಸಿಯೂ ಅಸಂಗನೆಂದು ತಿಳಿಯುವನಾಗು. ದೈವವಶದಿಂ ಸಮೀಪಕ್ಕೆ ಬಂದ ಗೊತ್ತಿಲ್ಲದ ಪುರುಷನು ಸ್ನೇಹಕ್ಕೆ ಪಾತ್ರನಾಗದಿರುವಂತೆ ಭ್ರಮಸಿದ್ಧವಾದ ಜಗವು ಆಶೆಗೆ ಪಾತ್ರವಾಗದಿರಬೇಕು. ಚಂದ್ರನ ಉಷ್ಣಭಾವದಂತೆಯೂ, ಸೂರ್ಯನ ಶೈತ್ಯದಂತೆಯೂ, ಬಿಸಲಿನ ತೊರೆಯಂತೆಯೂ, ಸಂಕಲ್ಪ ಪುರುಷನಂತೆಯೂ, ಸ್ವಪ್ನದ ಜನದಂತೆಯೂ, ಎರಡನೇ ಚಂದ್ರನಪ್ರಕಾಶದಂತೆಯೂ, ಸಮಸ್ತ ಪದಾರ್ಥವೂ ಭ್ರಮ ಸಿದ್ಧವಾದ್ದರಿಂದ ಯಾವುದನ್ನೂ ನೀನು ಅಭಿಮಾನಿಸದೆ ಒಳಗಣ ಆಶೆಯಂಬಿಟ್ಟು ಪೊರಗಣ ನಡತೆಗೆ ಸರಿಯಾಗಿ ನಡೆಯುತ್ತಾ ಜಗದೊಳ್ ವಿಹರಿಸುವನಾಗು. ಕರ್ತೃತ್ವಾಕರ್ತೃತ್ವಗಳು ಜಗವಂ ಪಿಡಿದೇ ಬಂದಿರುವವಾದ್ದರಿಂದ ಜಡವೆಂತಲೂ, ಅಸತ್ತೆಂತಲೂ, ಪೇಳಲ್ಪಡುವ ಈ ಜಗವನ್ನೇ ಆಲೋಚಿಸದೆ ಸ್ಥಿರಸ್ವಭಾವವಾದ ಸ್ವರೂಪವಂ ಭಾವಿಸುವ ನಿನಗೆ ಯಾವದು ನಿತ್ಯವಾಗಿ ಅನುಭವದಿಂ ಗೋಚರವಾಗುವುದೋ ಅದೇ ನೀನೆಂದು ನಿಶ್ಚಯಿಸುವನಾಗು. ಸರ್ವಾತೀತನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಪ್ರಕಾಶಿಸುವ ಪರಮಾತ್ಮನ ಸಾನ್ನಿಧ್ಯಮಾತ್ರದಿಂದಲೇ ಸೂರ್ಯೋದಯದಿಂ ಲೋಕ ವ್ಯವಹಾರಗಳಂತೆ ಪ್ರಕೃತಿ ಬುದ್ಧಿ ಮೊದಲಾದುವುಗಳ ವ್ಯಾಪಾರ ಉಂಟಾಗುವದ್ದರಿಂದೀಜಗ ಉಂಟಾಗಿರುವದು. ಸರ್ವೇಂದ್ರಿಯಾತೀತನಾದ್ದರಿಂದಾತ್ಮನಿಗೆ ಕರ್ತೃತ್ವ ಭೋಕ್ತೃತ್ವಗಳಿಲ್ಲವೆಂತಲೂ, ಅಂತರ್ಯಾಮಿಯಾದ್ದರಿಂದುಂಟೆಂತಲೂ ಪೇಳುವರು. ಕರ್ತೃತ್ವಾಕರ್ತೃತ್ವಗಳಲ್ಲಿ ಯಾವುದು ನಿನಗೆ ಸಮ್ಮತವಾಗುವುದೋ ಅದನ್ನೇ ನೀನು ಪರಿಗ್ರಹಿಸಿ ಸ್ಥೈರ್ಯವಂ ಪಡೆಯುವನಾಗು. ಸರ್ವಾಂತರ್ಯಾಮಿಯಾದರೂ ಅಸಂಗನಾದ್ದರಿಂ ನಾನು ಕರ್ತೃವಲ್ಲ. ಮೇಘದ ಸನ್ನಿಧಿಯಿಂ ಮುತ್ತೀಮರವು ಪುಷ್ಪಿಸುವಂತೆ ನನ್ನ ಸನ್ನಿಧಿಯಿಂ ಮನ ಮೊದಲಾದ್ದು ಚಲಿಸುವದ್ದರಿಂದ ಕಾರ್ಯಗಳೇ ನಡೆಯುವವೆಂದು ನಿಶ್ಚಯಿಸಿದ ನೀನು ಯಾವ ಕಾರ್ಯವಂ ಮಾಡಿದರೂ ಅವರ ಗುಣದೋಷಗಳಿಂ ಬದ್ಧನಾಗುವುದಿಲ್ಲ. ಹೀಗೆ ಕೆಲವು ಕಾಲವಭ್ಯಾಸವಾಗಲು ನಾನು ಕರ್ತೃವಲ್ಲವೆಂಬ ನಿಶ್ಚಯದಿಂ ಮನಸ್ಸಿಗೆ ಪ್ರವೃತ್ತಿಯೇ ತಪ್ಪುವುದಲ್ಲದೆ ನಿನಗೂ ಕಾರ್ಯಗಳಲ್ಲಿ ಅನುರಾಗ ತಪ್ಪುವದು. ಬಳಿಕ ಪರಮಾಮೃತವೆಂದು ಪ್ರಸಿದ್ಧವಾದ ಸರ್ವ ಸಮಭಾವವಾದ ಕೈವಲ್ಯವು ಸಿದ್ಧವಾಗುವುದು. ಅಥವಾ ನಾನೇ ಸರ್ವಕರ್ತೃವೆಂತಲಾದರೂ ಭಾವಿಸುವನಾಗು. ಆಗ ನೀನೇ ಜಗಕ್ಕೆಲ್ಲಕ್ಕೂ ಸೃಷ್ಟಿ ಸ್ಥಿತಿ ಲಯಗಳೊಳ್ ಕರ್ತೃವಾಗುವದರಿಂದ ಅವರ ನಾಶೋದಯಗಳಿಂ ಸುಖ ದುಃಖಗಳಿಗೆ ನೀನು ಪಾತ್ರನಾಗುವುದಿಲ್ಲ. ಅವರ ಸ್ಥಿತಿಯೊಳ್ ನಿನಗೆ ಸಮಭಾವವೇ ಸಿದ್ಧವಾಗುವುದು. ಅಥವಾ

ಅಖಂಡಭಾವದಿಂ ನಾನೆನ್ನುವದಕ್ಕೆ ಅವಕಾಶವಿಲ್ಲದಿರುವಲ್ಲಿ ಕರ್ತೃತ್ವವಾಗಲೀ ಅಕರ್ತೃತ್ವವಾಗಲೀ ಹ್ಯಾಗೆ ಸಂಭವಿಸೀತೆಂದು ಎರಡು ಭಾವಗಳನ್ನೂ ಬಿಟ್ಟಿರುವೆಯಾ ದರೆ ಪೂರ್ಣದೃಷ್ಟಿಯವರಿಗಿಂತಲೂ ಅಧಿಕಾನಂದವಂ ನೀನು ಪಡೆಯುತ್ತೀಯೆ ಈ ಪಕ್ಷ ದಲ್ಲಿ ಇದೆಂಬ ಜ್ಞಾನಕ್ಕೆ ಗೋಚರವಾದ ಬೇರೆ ಪದಾರ್ಥವಿಲ್ಲದ್ದರಿಂದಲೂ, ಎರಡನೇ ಪದಾರ್ಥವಿರುವರಿಗೆ ದುಃಖ ತಪ್ಪಲಾರದಾದ್ದರಿಂದಲೂ, ಈ ಮತವೇ ಪರಮಾನಂದ ಸಾಧನವಾದಂಥಾದ್ದು. ಈ ಸಿದ್ಧಾಂತವು ವಿವೇಕವಿಲ್ಲದವನಿಗೆ ಪೇಳಲಶಕ್ಯವಾದ್ದ ರಿಂದಲೂ, ಮಹಾ ನರಕ ಪರಂಪರೆಗೆ ದಾರಿಯಾಗಿ ನಾಯಿಮಾಂಸವಂ ಧರಿಸಿರುವ ಚಂಡಾಲಿಯಂತೆ ದೂರ ತ್ಯಜ್ಯವಾದ ದೇಹಾತ್ಮಭಾವವಂ ಮೊದಲೇ ಬಿಡಿಸಬೇಕಾ ದ್ದರಿಂದಲೂ, ಚಿಜ್ಜಡ ವಿಭಾಗದಿಂದಾತ್ಮನು ಚಿನ್ಮಾತ್ರಸ್ವರೂಪನೆಂಬುವದಂ ತಿಳುಪ ಲೋಸುಗ ಕರ್ತೃತ್ವಾಕರ್ತೃತ್ವ ಬೋಧಕವಾದ ಎರಡುಮತಗಳಂ ಪೂರ್ವದಲ್ಲಿ ನಿರೂಪಿಸಿದೆನೆಂದು ನಿಶ್ಚೈಸುವನಾಗು. ಎಂದು ವಸಿಷ್ಠನು ಪೇಳುತ್ತಿರುವಲ್ಲಿ ಎಲೈ ಗುರುವೇ ಮೇಘದ ಜಲಧಾರೆಗಳಿಂದೊಳಗೆ ಶೈತ್ಯಸೇರಿದ್ದರಿಂದ ಗಿರಿಗೆ ಗ್ರೀಷ್ಮದ ಸಂತಾಪವಡಗುವಂತೆ ನಿಮ್ಮ ಮಧುರೋಕ್ತಿಗಳಿಂ ಪರಮಾತ್ಮನ ಸ್ವರೂಪವು ಹೃದ ಯದೊಳ್ ಪ್ರಕಾಶವಾಗಲು ನನ್ನ ಸಂಸಾರ ದುಃಖವಡಗುತಲಿರುವದು. ಸಮಸ್ತ ಪದಾರ್ಥಗಳಿಗೂ ಚೈತನ್ಯವನ್ನುಂಟು ಮಾಡುವದ್ದರಿಂ ಪರಮಾತ್ಮನಿಗೆ ಕರ್ತೃತ್ವ ಭೋಕ್ತೃತ್ವಗಳುಂಟೆಂತಲೂ, ಅಪೇಕ್ಷೆ ಇಲ್ಲದ್ದರಿಂದ ಕರ್ತೃತ್ವವು ಉಪೇಕ್ಷೆ ಯಿಂದ ಭೋಕ್ತೃತ್ವವು ಸಹಾ ಇಲ್ಲವೆಂತಲೂ ಪೇಳಿದ ಯುಕ್ತಿಗಳು ಮನಸ್ಸಿಗೆ ಬಂದವು. ಕರ್ತೃತ್ವಾಕರ್ತೃತ್ವಗಳೆರಡರಲ್ಲೂ ಸಮವಾಗಿರುತ್ತಾ ಸರ್ವಸಮ ವಾಗಿ ಅದ್ವಿತೀಯವಾಗಿರುವ ಪರಬ್ರಹ್ಮದಲ್ಲಿ ಇದು ಸತ್ತೆಂತಲೂ, ಇದು ಅಸತ್ತೆಂ ತಲೂ, ಇವನು ಉತ್ತಮನೆಂತಲೂ, ಇವನು ಅಧಮನೆಂತಲೂ, ಇವನು ಅದ್ವಿತೀಯ ನೆಂತಲೂ, ಇವನು ನಾನಾಪ್ರಕಾರವಾಗಿರುವನೆಂತಲೂ, ಭೇದಕಲ್ಪನೆ ಇರುವುದಕ್ಕೆ ಕಾರಣವೇನು ? ಅಲ್ಲಿರದೇ ಇರುವಲ್ಲಿ ಇಲ್ಲದ್ದು ಪುಟ್ಟುವುದು ಹ್ಯಾಗೆ! ಈ ವಿಷಯವಂ ನಿರೂಪಿಸಬೇಕೆಂದು ಶ್ರೀರಾಮನು ಪ್ರಶ್ನೆಗೈಯಲು ಮರಳಿ ವಸಿಷ್ಠನಿಂತೆಂದನು,— ಎಲೈ ಸುಮತಿಯೇ ಈ ಪ್ರಶ್ನೆಗೆ ಸಿದ್ಧಾಂತಕಾಲದಲ್ಲೇ ಉತ್ತರವು ಪೇಳತಕ್ಕದ್ದಾಗಿರು ವದ್ದರಿಂದ ಆಗಲೇ ವಿವರವಾಗಿ ನಿನಗೆ ಪೇಳುವೆನು ಬಾಲ್ಯದಲ್ಲಿ ಶೃಂಗಾರ ವಿಲಾ ಸೋಕ್ತಿಯಂತೆ ಈಗ ನಿನ್ನ ವಚನವು ಹಾಸ್ಯಾಸ್ಪದವಾಗಿರುವದು. ಇದೇ ವಚನವು ಯವ್ವನದಲ್ಲಿ ವಿಲಾಸೋಕ್ತಿಯಂತೆ ಸಿದ್ಧಾಂತ ಕಾಲದಲ್ಲಿ ಶೋಭಿಸುವುದು ಈ ವಿಷ ಯದ ಸಿದ್ಧಾಂತವೂ ಪೂರ್ವದಲ್ಲೇ ಸೂಕ್ಷ್ಮವಾಗಿ ಪೇಳಲ್ಪಟ್ಟಿರುವುದು. ನಿರ್ಮಲ

ವಾದ ವಸ್ತ್ರದಲ್ಲಿ ರಂಗಿನಂತೆ ಆ ವಚನವು ಸ್ವರೂಪಾಜ್ಞಾನಿಯಾದ ನಿನ್ನಲ್ಲಿ ಲಗ್ನವಾಗಲಿಲ್ಲ. ಇನ್ನಿಂದಲೇ ನಿನ್ನಂ ನೀನು ಯಾವಾಗ ಹೊಂದುವೆಯೋ ಆಗ ಈ ವಿಷಯವು ಚೆನ್ನಾಗಿ ವಿದಿತವಾಗುವದಾದ್ದರಿಂದಾಗಲೇ ಇದಕ್ಕೆ ಉತ್ತರವಂ ಪೇಳುವೆನು. ಆತ್ಮನು ಆತ್ಮನಿಂದಲೇ ನೋಡಲ್ಪಟ್ಟಿರುವನು. ಆತ್ಮನೇ ಆತ್ಮನಂ ತಿಳಿಯುವನು. ತಿಳುವಳಿಕೆಯಿಂ ಪ್ರಸನ್ನನಾದ ಆತ್ಮನೇ ಆತ್ಮನಂ ಪಡೆಯುವನು. ಆತ್ಮನು ಸಿದ್ಧವಸ್ತುವಾದ್ದರಿಂದಾತ್ಮನ ವಿಷಯದಲ್ಲಿ ಅಜ್ಞಾನಕ್ಕೆ ನಿಶ್ಶೇಷವಾಗಿ ನಾಶವಾಗುವದೇ ಆತ್ಮನ ಪ್ರಾಪ್ತಿಯೆನಿಸುವದು. ಪ್ರಕೃತದೊಳ್ ಅಜ್ಞಾನನಾಶಕ್ಕೋಸುಗವೇ ಕರ್ತೃತ್ವಾಕರ್ತೃತ್ವ ವಿಚಾರವಂ ನಿನಗೆ ಪೇಳಿದೆನು. ನಿನಗೆ ಪ್ರಾಕೃತವಾಸನಾಕ್ಷಯವಿಲ್ಲದ್ದರಿಂದದು ವಿದಿತವಾಗಲಿಲ್ಲ. ವಾಸನೆ ಇರುವುದೇ ಬಂಧವು. ಅದರ ಕ್ಷಯವೇ ಮೋಕ್ಷವು. ಆದ್ದರಿಂ ನೀನು ದೇಹಾತ್ಮಜ್ಞಾನರೂಪವಾದ ತಾಮಸ ವಾಸನೆಗಳನ್ನೂ, ವಿಷಯಾನುರಾಗರೂಪವಾದ ರಾಜಸ ವಾಸನೆಗಳನ್ನೂ, ಆಯಾಯ ವಿಷಯಗಳೊಡನೆ ಬಿಟ್ಟು ಮೈತ್ರೀ ಮೊದಲಾದ ವಾಸನೆಗಳಂ ಪಿಡಿಯುವನಾಗು. ಅತಿಸ್ನೇಹದಿಂ ಸಜ್ಜನರ ಸಹವಾಸವಂ ಬಿಡದಿರುವದೇ ಮೈತ್ರಿಯು! ದೀನರ ದುಃಖವಂ ಪರಿಹರಿಸುವ ಉದ್ಯೋಗವೇ ಕರುಣೆಯು. ಸತ್ಕಾರ್ಯದಲ್ಲಿ ಸಂತೋಷಪಡುವದೇ ಮುದಿತೆಯು. ಅಸತ್ಕಾರ್ಯದಲ್ಲಿ ತಟಸ್ಥನಾಗಿರುವದೇ ಉಪೇಕ್ಷೆಯೆನಿಸುವದು. ಸಾತ್ವಿಕಗಳಾದ ಈ ವಾಸನೆಗಳಿಂದ ರಾಜಸ ತಾಮಸ ವಾಸನೆಗಳು ಗಳಿತವಾಗಲು ಈ ಸಾತ್ವಿಕ ವಾಸನೆಗಳಿಂದಲೇ ಲೋಕ ವ್ಯವಹಾರಗಳಂ ಮಾಡುತಿದ್ದಾಗ್ಯೂ ಇವುಗಳೇ ಚಿದ್ವಸ್ತುವಿನ ಪ್ರಕಾಶವಲ್ಲದೆ ಅದಕ್ಕೆ ಭಿನ್ನವಲ್ಲವೆಂದಾಲೋಚಿಸುತ್ತಾ ಚಿದ್ವಾಸನೆಯಂ ವೃದ್ಧಿಹೊಂದಿಸುವನಾಗು. ಈ ಏಕಾಗ್ರತೆಯೇ ಸಮಾಧಿಯೆನಿಸುವುದು. ಮನೋಬುದ್ಧಿ ಚಿತ್ತವೃತ್ತಿಗಳಿರುವವರಿಗೆ ಇದೇ ಸಂಪ್ರಜ್ಞಾತವೆನಿಸುವುದು. ಇದರ ಅಭಿವೃದ್ಧಿಯಿಂದ್ವೈತಕಲ್ಪನೆಗೆ ಮೂಲವಾದ ಅಹಂಭಾವದೊಡನೆ ಚಿತ್ತಾದಿವೃತ್ತಿಗಳಡಗಲು ಆ ಸಮಾಧಿಯು ಅಸಂಪ್ರಜ್ಞಾತವೆನಿಸುವದು. ಇದನ್ನೇ ಅಖಂಡಾಕಾರ ವೃತ್ತಿಯೆನ್ನುವರು. ಬ್ರಹ್ಮ ಮಹಿಮ ವಿಚಾರದಲ್ಲಿ ನಾನೆನ್ನುವದಕ್ಕೆ ಅವಕಾಶವೇನೆಂದು ಭಾವಿಸುವದೇ ಇದಕ್ಕೆ ಸಾಧಕವಾಗುವದು. ಕಲ್ಪನೆಯು, ಕಾಲವು, ಪ್ರಕಾಶವು, ತಮವು, ವಾಸನೆಯು, ವಾಸನೆಯುಳ್ಳ ಆತ್ಮನು, ಪ್ರಾಣಗಳು, ಇತರ ವಸ್ತುಗಳು ಸಹ ಪರಮಾತ್ಮನಲ್ಲದೆ ಮತ್ತೊಂದಲ್ಲವೆಂದು ಏಕಾಗ್ರತೆಯಿಂ ಭಾವಿಸುವನಿಗೆ ಅಹಂಭಾವವಡಗುತ್ತ ಬರುವದು. ಅದು ಪೋಗುವಲ್ಲಿ ಬುದ್ಧಿ ಮೊದಲಾದುವುಗಳು ಶಾಂತವಾಗುವವು. ಆಗ ಯಾವದು ನಿಂದಿರು

ವದೋ ಅದೇ ನೀನು ನಾನು ಅದು ಇದೆನಿಸಿಕೊಳ್ಳುವ ಸದ್ವಸ್ತುವೆಂದು ನಿಶ್ಚಯಿಸುವನಾಗು. ಸರ್ವವಿಷಯದಲ್ಲೂ ನಾನು ನನ್ನದೆಂಬ ಅಭಿಮಾನಕ್ಕೆ ತ್ಯಾಗವೆಂದು ತಿಳಿಯುವನಾಗು. ಅನಂತವಾದ ನಾಶದಿಂ ಯಾವನಿಗೆ ಚಿತ್ತಚಾಂಚಲ್ಯವಣಗು ವದೋ ಅವನೇ ಮುಕ್ತನೆನಿಸುವನು. ಯಾವನು ಸಮಾಧಿಯನ್ನು ಕರ್ಮಗಳನ್ನು ಸಹ ಮಾಡುತ್ತಿದ್ದರೂ ಬಿಟ್ಟಿದ್ದರೂ ಹೃದಯದಲ್ಲಿ ಚಪಲ ವಿಲ್ಲದಿರುವನೋ ಅವನಿಗೆ ಲಾಭಾಲಾಭಗಳಲ್ಲಿ ಹರ್ಷಶೋಕಗಳಾಗಲಾರವು. ಆತ್ಮೇತರವಾಸನೆ ಇಲ್ಲದ ಆ ಮಹಾತ್ಮನಿಗೆ ಸಮಾಧಿ ಜಪ ಮೊದಲಾದ ಕರ್ಮಗಳಿಂದ ಲಾಭವೂ ಅವುಗಳಿಲ್ಲದ್ದರಿಂದ ನಾಶವೂ ಸಹ ಕಾಣುವುದಿಲ್ಲ. ಎಷ್ಟು ಶಾಸ್ತ್ರಗಳಂ ನೋಡಿದರೂ ಎಷ್ಟು ವಿಚಾರಿಸಿದರೂ ಎಷ್ಟು ಭಾವಿಸಿದರೂ ವಾಸನಾ ನಾಶದಿಂ ಸಿದ್ಧವಾದ ಮೌನಕ್ಕಿಂತ ಪರಮಾರ್ಥವಾದ್ದು ಯಾವದೂ ಕಾಣಿಸಲಿಲ್ಲ. ಲೋಕದಲ್ಲಿ ನಡೆಯುವ ವಿದ್ಯಾಭ್ಯಾಸಾದಿ ಕರ್ಮಗಳೆಲ್ಲವೂ ದೇಹಾರ್ಥವಲ್ಲದೆ ಆತ್ಮಾರ್ಥವಾಗಿ ಯಾವುದೂ ಕಾಣುವದಿಲ್ಲ. ಲೋಕದಲ್ಲಿ ಅವಿಚಾರ ಮನೋಹರವಾಗಿರುವ ಕ್ಷಣಿಕವಾದ ವಸ್ತುವೇ ಇಷ್ಟವಾಗುವದು. ಮನೋಹರವಾಗದ್ದೇ ಅನಿಷ್ಟವೆನಿಸುವುದು. ನಿತ್ಯಸಿದ್ಧವಾದ್ದರಿಂದಿಷ್ಟಾನಿಷ್ಟಗಳಿಗೆ ಭಿನ್ನವಾಗಿರುವ ಸರ್ವಲೋಕಾತಿಶಯವಾದ ಪರಮಾರ್ಥವಸ್ತುವು ಯಾರಿಗೂ ಅಪೇಕ್ಷಿತವಾಗಲಿಲ್ಲ. ಅಖಂಡದೃಷ್ಟಿ ಇಲ್ಲದ್ದರಿಂದುಂಟಾದ ಗ್ರಾಹ್ಯತ್ಯಾಜ್ಯ ವಿಭಾಗವುಳ್ಳ ವಿದ್ವಾಂಸರೇ ಲೋಕಗಳಲ್ಲಿ ಕಾಣ್ಬರುವರಲ್ಲದೆ ಪರಮಾರ್ಥ ದೃಷ್ಟಿಯಿಂ ವಾಸನಾ ಲೇಶವಿಲ್ಲದ ಜ್ಞಾನಿಗಳು ಗೋಚರವಾಗುವದಿಲ್ಲ. ಅಖಂಡಾಕಾರ ವೃತ್ತಿಯಿಂ ಸರ್ವತ್ರ ಸಮದೃಷ್ಟಿಗಳಾದ ಮಹಾತ್ಮರು ಬ್ರಹ್ಮಲೋಕದಲ್ಲೂ ಸ್ವಲ್ಪವಾಗಿಯೇ ಇರುವದ್ದರಿಂದ ಇತರ ಲೋಕಗಳೊಳವರ ದರ್ಶನವೇ ದುರ್ಲಭವಾಗಿರುವದು. ಚಕ್ರವರ್ತಿ ಸಾಮ್ರಾಜ್ಯವನ್ನನುಭವಿಸಿದರೂ, ಮೇಘಮಂಡಲವಂ ಪೊಕ್ಕರೂ, ಸಮುದ್ರಜಲವಂ ಪ್ರವೇಶಿಸಿದರೂ, ಆತ್ಮಲಾಭವಿಲ್ಲದೆ ಯಾರಿಗೂ ವಿಶ್ರಾಂತಿ ಸುಖವಾಗಲಾರದು. ಆದ್ದರಿಂ ದಾತ್ಮಜ್ಞಾನಕ್ಕೋಸುಗ ಇಂದ್ರಿಯಶತ್ರುಗಳಂ ಜಯಿಸಿ ಚಿನ್ಮಾತ್ರದೃಷ್ಟಿಯಿಂ ಮಹಾಮತಿಗಳಾದ ಸತ್ಪುರುಷರನ್ನು ಸರ್ವಕಾಲದಲ್ಲೂ ಸೇವಿಸಬೇಕು. ಜ್ಞಾನೋಪಾಯದಿಂ ನಡೆವ ಬುದ್ಧಿಶಾಲಿಗೆ ಸಂಸಾರ ಶೋಕಸಮುದ್ರವು ಗೋಷ್ಪದವಾಗುವದು. ಉಪಾಯವಿಲ್ಲದವನಿಗೆ ಸ್ವಲ್ಪವಾದ ದುಃಖವೂ ಕೂಡ ಸಮುದ್ರವಾಗುವದು. ತಿಳಿದ ಮಹಾತ್ಮನಿಗೆ ಸ್ವರ್ಗ ಮೊದಲಾದ ಎಲ್ಲಾ ಕಡೆಯಲ್ಲೂ ಪಂಚಭೂತಗಳೇ ಕಾಣುವದ್ದರಿಂದೆಲ್ಲಿಯೂ ಆಸಕ್ತಿಯಾಗುವದಿಲ್ಲ. ಚಂದ್ರಿಕಾ ವಿಹಾರದಲ್ಲಿರುವನಿಗೆ ಮಿಂಚು ಹುಳುವಿನ

ತಿಳಿಕಿನಂತೆಯೂ, ಜಗವನ್ನುಂಗುವ ಕಾಲನಿಗೆ ತೃಣಕಣದಂತೆಯೂ, ಬ್ರಹ್ಮಾತ್ಮ ಭಾವದಿಂದಿರುವವನಿಗೆ ಭೋಗ ಸುಖ ಪತಿ ತುಚ್ಛವಾಗುವದು. ಪರಾರ್ಧದ್ವಯ ಪರ್ಯಂತವಾಗಿ ಶಾಶ್ವತವಾದ ಬ್ರಹ್ಮಪದವನ್ನು ಅದಕ್ಕಿಂತಲೂ ಅತ್ಯಧಿಕವಾದ ಹರಿಹರ ವೈಭವಗಳನ್ನೂ ಲೆಕ್ಕಿಸದಿರುವ ಮಹಾತ್ಮನಿಗೆ ದ್ವಂದ್ವಯುದ್ಧಗಳಿಂ ಕ್ಷಯಾಧಿ ಸುಖನಾದ ಈ ರಾಜ್ಯ ಸುಖದಲ್ಲ ಹ್ಯಾಗೆ ಅಪೇಕ್ಷೆಯುಂಟಾದೀತು. ಜ್ಞಾನಿಗೆ ಬ್ರಹ್ಮಾಂಡಮಂಡಲವೇ ಅಸತ್ತಾದ್ದರಿಂದ ಯಾವ ಪದಾರ್ಥದಲ್ಲೂ ಯಾವ ಕಾರ್ಯದಲ್ಲೂ ದೃಷ್ಟಿ ಬೀಳಲಾರದು. ಮಕ್ಕಳು ಬೊಂಬೆ ಮೊದಲಾದುವುಗಳಂ ಪಿಡಿದು ಆಡುವಂತೆ ಅಜ್ಞಾನಿಗಳೆ ಈ ಜಗವಂ ಪಿಡಿದು ಸುಖದುಃಖಭ್ರಮೆಯಿಂ ಕುಣಿಯುತ್ತಿರುವರು. ತನ್ನ ತಾಂಡವೋತ್ಸವಾಂತದಲ್ಲಿ ಗೌರೀನಾಟ್ಯವಂ ನೋಡಲಿಚ್ಛೈಸಿದ ಪರಮೇಶ್ವರನಿಗೆ ಮರ್ಕಟನಾಟ್ಯದಂತೆ ಈ ಜಗನ್ನಾಟ್ಯವು ಮಹಾತ್ಮನಿಗೆ ರಂಜಕವಾಗಲಾರದು. ಈ ವಿಷಯದೊಳ್ ಗುರುವಿಗೆ ಮಗನಾದ ಕಚನು ಪೇಳಿದ ಮಾತುಗಳೆಂ ಕೇಳುವನಾಗು- ಮೇರು ಪ್ರಾಂತ್ಯದೊಳ್ ಬ್ರಹ್ಮವಿದ್ಯಾಭ್ಯಾಸದಲ್ಲಿದ್ದ ಕಚನಿಗೆ ತತ್ವವಿಚಾರದಿಂ ಬ್ರಹ್ಮ ಮಹಾತ್ಮ್ಯವು ತೋರಲು ಆನಂದದಿಂ ಗದ್ಗದ ಧ್ವನಿಯುಳ್ಳವನಾಗಿ ಪೇಳಿದನದೆಂತೆಂದರೆ,— ಎಲ್ಲೆಲ್ಲ ನೋಡಿದರೂ ಜಲಪ್ರಳಯದಲ್ಲ ಜಲದಂತೆ ಬ್ರಹ್ಮವೊಂದೇ ಕಾಣುತ್ತಿರುವದು. ಪೃಥ್ವಿವ್ಯಪ್ತೇಜೋವಾಯ್ವಾಕಾಶಗಳು ದಿಕ್ಕು ವಿದಿಕ್ಕುಗಳು ಕಾಲ ಮನೋಬುದ್ಧಿ ಮೊದಲಾದ ವಸ್ತುಗಳು ಸುಖದುಃಖಗಳು ಸಹ ಬ್ರಹ್ಮವಲ್ಲದೆ ಮತ್ತೊಂದಲ್ಲ. ದೇಹದಲ್ಲಿ, ಕೆಳಗೆ, ಮೇಲೆ, ಒಳಗೆ, ಹೊರಗೆ, ಮಧ್ಯದಲ್ಲಿ ಸಹ ಬ್ರಹ್ಮವೊಂದೇ ಇರುವದು. ಅತ್ರಿತತ್ರ ಸುತ್ತಮುತ್ತಲೂ ಸರ್ವವೂ ಬ್ರಹ್ಮಮಯವಾಗಿರುವದ್ದರಿಂದ ಸಮಸ್ತವು ಬ್ರಹ್ಮವೇ ಆಗಿರುವದು. ಚೇತನವು ಅಚೇತನವು ಸಹ ಬ್ರಹ್ಮವೇ ಆಗಿರುವದ್ದರಿಂದ ನಾನು ಬ್ರಹ್ಮದಲ್ಲಿ ಐಕ್ಯವಂ ಹೊಂದಿರುವೆನು ಆದ್ದರಿಂ ಜಗವೆಲ್ಲವಂ ತುಂಬಿಕೊಂಡಿರುವ ಸಮುದ್ರದಂತೆ ನಾನು ಆನಂದದಿಂ ಪರಿಪೂರ್ಣನಾಗಿರುವೆನು. ಎಂದು ಪರಮಾರ್ಥವಂ ಭಾವಿಸುತ್ತಾ ಘಂಟಾನಾದಕ್ಕೆ ಸರಿಯಾಗಿ ಪ್ರಣವೋಚ್ಚಾರಣೆಯಿಂ ಮಾಡುತ್ತಿರುವನಾಗಿ ಅಕಾರೋಕಾರ ಮಕಾರಗಳಿಗೆ ಅರ್ಥವಾದ ವಿರಾಡ್ಢಿರಣ್ಯ ಗರ್ಭೇಶ್ವರರಂ ತುರೀಯ ಪದಾರ್ಥದಲ್ಲ ಕ್ರಮವಾಗಿ ನತ್ತಿ ಸಿಹಾರದಿಂ ಲಯವಂ ಹೊಂದಿಸಿ ಕೊನೆ ಅರ್ಧಮಾತ್ರೆಗೆ ಅರ್ಥವಾದ ಪರಮಾತ್ಮನೊಳ್ ಅದೇ ಸ್ವರೂಪನಾದ ತನ್ನ ನೇಕೀಭಾವದಿಂ ನಿಲ್ಲಿಸಿ ಪರಮಾತ್ಮಾನಂದದಿಂದಾತ್ಮಭಿನ್ನವಾದ್ದಿಲ್ಲವೆಂತಲೇ ಗಾನವಂ ಮಾಡುತ್ತಿದ್ದನು. ಇಂಥಾ

ಮಹಾತ್ಮನು ಅನ್ನ ಪಾನ ಸ್ತ್ರೀಸಂಗಮಾತ್ರಸ್ವರೂಪವಾದ ಲೌಕಿಕ ಭೋಗಗಳಲ್ಲಿ ಯಾವದನ್ನಪೇಕ್ಷಿಸತಕ್ಕದ್ದು? ಈ ಭೋಗವೇ ಮುಖ್ಯವೆಂದು ತಿಳಿದ ಮನುಷ್ಯರಿಗೂ ಪಶುಗಳಿಗೂ ವಿಶೇಷವೇನೂ ಕಾಣಿಸುವುದಿಲ್ಲ. ವಿಚಾರ ಮಾರ್ಗವನ್ನರಿಯದೆ ಆಂತಶ್ಶತ್ರುಗಳಿಂ ಕಲ್ಪಿತವಾದ ವಿಷಯವೆಂಬ ಕಾರಾಗೃಹದೊಳ್ ದೀನರಾಗಿರುವರಿಗೆ ಈ ಭೋಗವೇ ಸರ್ವಸಂಪತ್ತಾಗಿರುವದು. ಸಕಲ ಮಲಗಳಿಂ ಪೂರ್ಣವಾಗಿರುವ ರಕ್ತಮಾಂಸಮಯವಾದ ಬೊಂಬೆಗಳಂ ಪ್ರಾಣಕಾಂತೆಯರೆಂದಾಲಂಗಿಸುವ ಮನುಜರು ನಾಯಿಗಿಂತಲೂ ಕಡೆಯೆನಿಸುವರು. ದೀಪಜ್ವಾಲೆಯ ಕೊನೆಯೊಳ್ ಕಪ್ಪಿನಂತೆ ಭೋಗದ ಕೊನೆಯೊಳ್ ದುಃಖವು ಸಿದ್ಧವಾಗಿಯೇ ಇರುವದು. ಭೋಗಾಪೇಕ್ಷೆಯೆಂಬುದು ಆಲೋಚನ ಮಾತ್ರದಿಂದಲೇ ಮೋಹವನ್ನುಂಟುಮಾಡುವದಾದ್ದರಿಂದ ಕಾಲಕೂಟ ವಿಷಕ್ಕಿಂತಲೂ ಅಧಿಕವೆನಿಸುವುದು. ಆದಿಮಧ್ಯಾಂತಗಳೊಳ್ ದುಃಖಮಯವೆಂದು ತಿಳಿದಿದ್ದಾಗ್ಯೂ ಜನಗಳು ಈ ಭೋಗಕ್ಕೆ ಆಶಿಸುವರಲ್ಲವೆ ಇದಕ್ಕಿಂತಲೂ ಇನ್ನಾವುದೂ ಮಯಾಮೋಹವೆಂದು ತಿಳಿಯಬೇಕು. ಕ್ಷಣಿಕ ನಿಸ್ಸಾರವಾದ ಈ ಭೋಗವನ್ನು ಸ್ಥಿರವೆಂತಲೂ, ಸುಖವೆಂತಲೂ, ಅತಿ ಮೂಢನು ತಿಳಿಯಬೇಕಲ್ಲದೆ ಸ್ವಲ್ಪವಾದರೂ ವಿವೇಕಿಯಾದವನು ಎಂದಿಗೂ ತಿಳಿಯಲಾರನು. ಭೋಗವೆನ್ನುವುದೆಲ್ಲವೂ ಇಂಥಾದಾದ್ದರಿಂದ ನೀನು ಅದನ್ನಪೇಕ್ಷಿಸದೆ ಸ್ವಸ್ವರೂಪದಲ್ಲೇ ದೃಷ್ಟಿಯನ್ನಿರಿಸುವನಾಗು. ಸೂರ್ಯನ ತೇಜದಿಂ ಕೂಡಿದ ನಿರ್ಮಲವಾದ ಗೋಣೆಯು ಸ್ವರ್ಣರೂಪವಾಗಿ ಪ್ರಕಾಶಿಸುವಂತೆ ಅನುಶಯಗಳಾದ ಜೀವಿಗಳ ಕರ್ಮಪರಿಪಾಕದಿಂ ಕೂಡಿದ ಪರಮಾತ್ಮನು ಬ್ರಹ್ಮರೂಪದಿಂದ ಅಕ್ಷರರೂಪವಾದ ಶರೀರಗಳಂ ಸೃಜಿಸಿದನು. ಅದೆಂತೆಂದರೆ,— ಶ್ರೀನಾರಾಯಣನ ನಾಭೀಕಮಲ ಗರ್ಭದೊಳ್ ನಿಂದಿರುವ ಚತುರ್ಮುಖನು ಪ್ರಾಣಿಗಳ ಪ್ರಾರಬ್ಧ ಪರಿಹಾರಾರ್ಥವಾಗಿ ಜಗದ್ರಚನಂ ತಾಳಲಿಚ್ಛೈಸಿದ ಪರಮಾತ್ಮನು, ಸಂಕಲ್ಪರೂಪನಾದ್ದರಿಂದವನಿಗೆ ಸ್ವೇಚ್ಛೆಯಿಂದಲೇ ಚತುರ್ಮುಖರೂಪ ಉಂಟಾದುದು. ಗರ್ಭದಿಂದುದಯಿಸುವವನಿಗೆ ಪೂರ್ವವಾಸನೆಯೇ ದೃಢವಾಗಿದ್ದದ್ದರಿಂದಲೂ, ಎಲ್ಲಾ ಕಡೆಯಲ್ಲೂ ಬ್ರಹ್ಮೇತರ ಪದಾರ್ಥವಿಲ್ಲದ್ದರಿಂದಲೂ, ಬ್ರಹ್ಮವೆಂಬ ಶಬ್ದವಂ ಮಾಡಿದ್ದರಿಂದವನಿಗೆ ಬ್ರಹ್ಮನೆಂಬ ಹೆಸರು ಬಂದುದು. ಅವನ ಮುಖದಿಂದುದಿಸಿದ ವೇದರೂಪವಾದ ಶಬ್ದಕ್ಕೂ ಬ್ರಹ್ಮವೆಂಬ ನಾಮವಾದುದು. ಅವನ ಸಂಕಲ್ಪದಿಂದಾದಿಯಲ್ಲೇ ತೇಜವುಂಟಾದುದು. ಸುತ್ತಮುತ್ತಲೂ ಸುವರ್ಣರೂಪವಂ ಪ್ರಕಾಶಪಡಿಸುತ್ತಾ ಜ್ವಾಲಾಮಂಡಲದಂತಿರುವ

ಆ ತೇಜದಿಂ ಹಿರಣ್ಮಯವಾದ ಶರೀರವುಳ್ಳ ಆದಿತ್ಯನುದಿಸಿದನು. ಅದರಲ್ಲಿ ಮಿಕ್ಕ ತೇಜೋಂಶಗಳಿಂ ನವಬ್ರಹ್ಮರುದಿಸಿದರು. ಸಿದ್ಧಸಂಕಲ್ಪರಾದ ಆ ನವಬ್ರಹ್ಮರು ಸಂಕಲ್ಪದಿಂದಲೇ ನಾನಾಪ್ರಕಾರವಾದ ಪ್ರಾಣಿಗಳಂ ಸೃಜಿಸಿದರು. ಬಳಿಕ ಸ್ತ್ರೀ ಪುರುಷ ಸಂಗಮ ಕ್ರಮದಿಂ ಪುತ್ರ ಪೌತ್ರ ಪರಂಪರೆಯಾಗಿ ಸೃಷ್ಟಿಯಾದುದು. ಬಳಿಕ ವರ್ಣಾಶ್ರಮ ಧರ್ಮಬೋಧಕವಾದ ವೇದಗಳಂ ಬ್ರಹ್ಮನು ಪ್ರಕಾಶಪಡಿಸಲು ಲೋಕಗಳಲ್ಲಿ ಶ್ರೌತ ಸ್ಮಾರ್ತ ಕರ್ಮವ್ಯವಸ್ಥೆಗಳು ನಾನಾವಿಧ ಯಜ್ಞಾದ್ಯಾಚಾರಗಳು ಸಹ ಪ್ರವರ್ತಿಸಿದವು. ಮನವೆಂಬ ಹಸ್ತಗಳಿಂ ಬ್ರಹ್ಮನು ಯಾವ್ಯಾವದು ಹೇಗಿರಬೇಕೆಂದು ಸೃಜಿಸಿದನೋ ಈಗಲೂ ಅದು ಹಾಗೇ ಇರುವದು. ಅದರಂತೆ ಈಗಲೂ ಸಂಕಲ್ಪಮಾತ್ರದಿಂದನೇಕವಿಧ ಸಂಸಾರವು ಮನಸ್ಸಿಗೆ ಸಿದ್ಧವಾಗುವದು. ಇಂತು ಸುಖದುಃಖ ಜನ್ಮ ಮರಣ ಚಿಂತಾರೋಗ ವ್ಯಾಕುಲವಾದ ಪ್ರಾಣಿ ಸೃಷ್ಟಿಯಾದುದು. ನಾನಾ ಮೋಹಾತ್ಮಕವಾದ ಈ ಸೃಷ್ಟಿಗೆಲ್ಲಕ್ಕೂ ಮನವೇಕಾರಣವೆನಿಸುವನು. ಆದ್ದರಿಂ ಸಂಕಲ್ಪರೂಪವಾದ ಮನವೇ ಬಂಧಕ್ಕೂ ಮೋಕ್ಷಕ್ಕೂ ಸಹ ಕಾರಣವೆನಿಸುವುದೆಂದು ತಿಳಿಯುವನಾಗು. ಈ ರೀತಿಯಾದ ಸೃಷ್ಟಿಯೊಳ್ ಸಂಕಲ್ಪಾನುಸಾರವಾಗಿ ವೃದ್ಧಿ ಹೊಂದಿದ ಸಾತ್ವಿಕ ರಾಜಸ ತಾಮಸ ವ್ಯಾಪಾರಗಳಿಂ ಆಧಿ ವ್ಯಾಧಿ ಮೊದಲಾದ ರೂಪಗಳುಳ್ಳ ಕ್ಷೋಭೆಯು ಜಗದೊಳ್ಪಸರಿಸಲು ಅದಂ ನೋಡಲಾರದೆ ಕರುಣೆಯಿಂದಾಕ್ರಾಂತನಾದ ಬ್ರಹ್ಮನು ತನ್ನ ಸಂಕಲ್ಪವೇ ಈ ವಿಕಲ್ಪಕ್ಕೆ ಕಾರಣವಾದುದೆಂದಾಲೋಚಿಸುತ್ತಾ ಪ್ರಾಣಿಗಳ ಮುಕ್ತಿಗೋಸುಗ ಅಧ್ಯಾತ್ಮವಿದ್ಯಾ ಪ್ರಧಾನವಾದ ಶಾಸ್ತ್ರ ಪುರಾಣೇತಿಹಾಸಗಳನ್ನುಂಟುಮಾಡಿದನು. ಮುಕ್ತಿ ಮಾರ್ಗದ ಮರ್ಯಾದೆಯಂ ಜಗದೊಳ್ ನಿಲ್ಲಿಸಿದ ಬಳಿಕ ಬ್ರಹ್ಮನು ಸ್ವಸ್ಥಚಿತ್ತನಾಗಿ ಕಮಲ ಮಧ್ಯದಲ್ಲೇ ನೆಲಸಿರುವನು. ಒಂದಾನೊಂದು ಕಾಲದಲ್ಲವನು ಸರ್ವ ಸಂಕಲ್ಪ ರಹಿತವಾದ ವೃತ್ತಿಯಿಂದ ಪ್ರಾಣಿಗಳ ಅನುಗ್ರಹಾರ್ಥವಾಗಿ ಲೋಕಕ್ರಮವನ್ನನುಸರಿಸುವನು. ಇವನು ಸೃಷ್ಟಿ ಸಂಹಾರಗಳಲ್ಲೂ, ಅಂತರ್ಮುಖ ಬಹಿರ್ಮುಖಾವಸ್ಥೆಗಳಲ್ಲೂ, ಸ್ಥಿತಿವ್ಯುತ್ಥಾನ ಕಾಲಗಳಲ್ಲೂ, ಲೋಕಾನುಗ್ರಹಾದಿ ಕಾರ್ಯಗಳಲ್ಲೂ ಕೂಡ ದೇಶ ಕಾಲ ವಸ್ತು ನಿಮಿತ್ತಕರವಾದ ವೈಷಮ್ಯವಿಲ್ಲದೆ ಸರ್ವ ಸಮವಾದ ವೃತ್ತಿಯಿಂದ ಪರಿಪೂರ್ಣವಾದ ಅರ್ಣವದಂತೆ ಏಕರೀತಿಯಾಗಿಯೇ ಇರುವನು. ಇವನು ಸರ್ವಕಾಲದಲ್ಲೂ ನಿಜಾನಂದ ಸ್ಥಿತಿಯಲ್ಲೇ ಇರುವನಾದ್ದರಿಂದ ಇವನಿಗೆ ದೇಹವೆಂಬುವದು ಪರಸೃಷ್ಟಿಯಿಂ ಸಿದ್ಧವಾಗಿರುವುದಲ್ಲದೆ ಇವನ ದೃಷ್ಟಿಯಿಂದಾತ್ಮೇತರವಾದ ವಸ್ತುವೇ ಇಲ್ಲವೆಂದು ನಿಶ್ಚಯಿಸುವ

ನಾಗು. ಈ ಬ್ರಹ್ಮಸ್ಥಿತಿಯನ್ನು ಶುದ್ಧಸತ್ವಪ್ರಧಾನರಾದ ನವಬ್ರಹ್ಮರು ಬ್ರಹ್ಮರ್ಷಿ ದೇವರ್ಷಿ ಮಹರ್ಷಿಗಳು ಸಹ ತಾವಾಗಿ ವಿವೇಕ ವಿಚಾರಾದಿಗಳಿಂ ತಿಳಿದು ಆ ಆನಂದವನ್ನನುಭವಿಸುತ್ತಾ ಉತ್ತಮರೆನಿಸುವರು. ದೇವಗಂಧರ್ವ ಯಕ್ಷಾದಿಗಳು ಮಿಶ್ರಸತ್ವ ಪ್ರಧಾನರಾದ್ದರಿಂದ ಉಪದೇಶಮಾತ್ರದಿಂ ರಾಜಸ ತಾಮಸ ವೃತ್ತಿಗಳಂ ತ್ಯಜಿಸಿ ಪರಮಾರ್ಥಮಂ ಹಿಡಿಯುವರಾದ್ದರಿಂದ ಮಧ್ಯಮರೆನಿಸುವರು. ರಜಸ್ತಮಃ ಪ್ರಧಾನರಾದ ಮನುಷ್ಯಾದಿಗಳು ಅನೇಕ ಜನ್ಮಗಳಿಂದಲೂ ಅನೇಕ ಸಹಸ್ರ ಪ್ರಕಾರವಾದ ಪ್ರಯತ್ನಗಳಿಂದಲೂ ಜ್ಞಾನೈಶ್ವರ್ಯವಂ ಪಡೆಯುವರಾದ್ದರಿಂದ ಅಧಮರೆನಿಸುವರು. ನವಬ್ರಹ್ಮಾದಿಗಳು ಸೃಷ್ಟ್ಯಾದಿಯೊಳ್ ಬ್ರಹ್ಮನಿಗೆ ರಜಃಪ್ರಾಚುರ್ಯವಿಲ್ಲದಿರುವಾಗಲೇ ಪುಟ್ಟಿದವರಾದ್ದರಿಂದ ಅವರಿಗೆ ವಿವೇಕ ವಿಚಾರಾದಿಗಳು ತಾವಾಗಿಯೇ ಸ್ಫುಟವಾಗುವವು. ಪ್ರಪಂಚ ಸೃಷ್ಟಿಯಾದ ಬಳಿಕ ಪುಟ್ಟಿದ ದೇವಾದಿಗಳಿಗೆ ಸೂಕ್ಷ್ಮ ಶರೀರವು ಚಂದ್ರಕಲಾರೂಪದಿಂ ಗಗನಾನಿಲಗಳನ್ನಾಶ್ರಯಿಸಿದ್ದು ಬಳಿಕ ಬಳ್ಳಿ ಚಿಗುರುಗಳೊಳ್ಬಿದ್ದು ಸೋಮಾಜ್ಯರೂಪದಿಂದಗ್ನಿಯಲ್ಲಿ ಆಹುತಿಯಾಗಿ ಸೂರ್ಯಮಂಡಲವಂ ಸೇರಿ ಅಲ್ಲಿಂದ ಚಂದ್ರನಂ ಹೊಂದಿ ಆ ಕಿರಣಮಾರ್ಗದಿಂ ಮರಳಿ ಪೈರುಗಳಂ ಸೇರಿ ಆಹಾರರೂಪದಿಂ ನವಬ್ರಹ್ಮಾದಿಗಳಂ ಹೊಂದಿ ಅವರ ಶರೀರಗಳೊಳ್ ರೇತೋರೂಪದಿಂದಿದ್ದು ಸಂಭೋಗಮಾರ್ಗದಿಂ ಸ್ತ್ರೀಗರ್ಭವಂ ಸೇರಿ ಸ್ಥೂಲಭಾವವಂ ಪಡೆದು ಉತ್ಪನ್ನವಾದ್ದರಿಂದ ಸತ್ವಗುಣವೇ ಮುಖ್ಯವಾಗಿ ಪ್ರಕಾಶಿಸುತ್ತಿಹುದು. ಆದರಿಂದವರು ಉಪದೇಶಮಾತ್ರದಿಂದಲೇ ಜ್ಞಾನೈಶ್ವರ್ಯವಂ ಪಡೆವರು. ಮನುಷ್ಯಾದಿಗಳಿಗೆ ಯಥಾವಿಧಿಯಾಗಿ ಗರ್ಭಾಧಾನಾದಿ ಸಂಸ್ಕಾರಗಳಿಲ್ಲದ್ದರಿಂದಲೂ ದುರಾಹಾರ ದುಸ್ಸಂಗ ವಿಹಾರಾದಿಗಳಿಂದಲೂ ರಜಸ್ತಮಸ್ಸುಗಳೇ ಮುಖ್ಯವಾಗುವವಾದ್ದರಿಂದಲೂ ಜ್ಞಾನಕ್ಕೋಸುಗ ಅನೇಕಪ್ರಕಾರವಾಗಿ ಪ್ರಯಾಸಪಡಬೇಕಾಗುವದು. ಯಾರಿಗಾದರೂ ಸತ್ಸಂಗಾದಿ ಪ್ರಾಬಲ್ಯದಿಂ ಸತ್ವಗುಣಕ್ಕೆ ಅಭಿವೃದ್ಧಿಯಾದರೆ ತತ್ವಜ್ಞಾನ ಉಂಟಾಗುವದೆಂದು ತಿಳಿಯುವನಾಗು. ಜನ್ಮಾಂತರಗಳಲ್ಲಿ ಸತ್ಸಂಗ ವಿವೇಕ ವಿಚಾರಾದಿಗಳಿಂ ತಾಮಸವೃತ್ತಿಗಳಂ ಬಿಟ್ಟು ಯಾರು ಶುದ್ಧರಾಗಿರುವರೊ ಅವರು ಮೋಕ್ಷಾಪೇಕ್ಷೆಯಿಂದಲೇ ಪುಟ್ಟುವರಾದ್ದರಿಂದಲೂ ಸತ್ವಪ್ರಧಾನವಾದ ದೃಷ್ಟಿ ಇರುವದ್ದರಿಂದಲೂ ರಾಜಸ ಸಾತ್ವಿಕರೆನಿಸುವರು. ಗಗನದಲ್ಲಿ ಧೂಮವು ಧೂಳಿಗಳು ತಗಲದಿರುವಂತೆ ಅವರ ಮನದಲ್ಲಿ ಬಾಹ್ಯ ಸುಖದುಃಖಗಳು ತಗಲವು. ಸೂರ್ಯನ ಉದಯಾಸ್ತಮಯಗಳಿಂ ಕನಕ ಕಮಲಕ್ಕೆ ವಿಕಾಸ ಸಂಕೋಚಗಳಿಲ್ಲದಿರುವಂತೆ ಅವರ ದೇಹಕ್ಕೆ ವೃದ್ಧಿ ಹ್ರಾಸಗಳುಂಟಾಗಲಾರವು. ಉದಯಾಸ್ತಗಳಿಲ್ಲದೆ ಸರ್ವ

ಕಾಲದಲ್ಲೂ ಏಕರೀತಿಯಾಗಿ ಪ್ರಕಾಶಿಸುವ ಚಿದಾದಿತ್ಯನಲ್ಲಿಯೆ ದೃಷ್ಟಿಯುಳ್ಳವರಾದಾಗ್ಯೂ ಈಶ್ವರಾಜ್ಞಾರೂಪವಾದ ಶಾಸ್ತ್ರದಮಾರ್ಗವಂ ಬಿಡದೆ ವರ್ಣಾಶ್ರಮೋಚಿತವಾದ ತಮ್ಮ ಆಚಾರವಂ ನಡೆಸುತ್ತಾ ಲೋಕಕ್ಕೆ ನಿಯಾಮಕರಾಗುವರು. ಸ್ಥಾವರಪ್ರಾಣಿಗಳಂತೆ ಈಶ್ವರಾಜ್ಞೆಯಿಂ ಬಂದ ಜೀವನದಿಂದಲೇ ಸಂತುಷ್ಟರಾಗಿರುವರಲ್ಲದೆ ದುರಾಶೆಯಿಂದತ್ತಿತ್ತ ಚಲಿಸರು. ಇವರಿಗೆ ದ್ವೈತಾದಿವಾಸನೆಗಳು ದಗ್ಧವಾಗಿರುವದ್ದರಿಂದ ಸ್ವಸ್ವರೂಪದಲ್ಲೆ ದೃಷ್ಟಿಯುಳ್ಳವರಾಗಿ ಬಹಿರ್ಮುಖವಾದಾಗಲೂ ಸರ್ವಸಮಭಾವದಿಂದಿರುವರು. ಎಲೈ ರಾಮಭದ್ರನೆ ನೀನು ಅವರಿಗೆ ಸಮಾನನಾದ್ದರಿಂದ ನಾನು ಯಾರು? ನನ್ನದೆನಿಸುವ ಈ ಸಂಸಾರಾಡಂಬರವೆಲ್ಲಿಯದೆಂದು ವಿಚಾರಿಸುತ್ತೀಯೆ, ಶಾಸ್ತ್ರಾರ್ಥಗಳಲ್ಲಿ ಪೂರ್ವಾಪರ ಸಂಗತಿಯಂ ನೋಡುತ್ತಾ ತತ್ವಾರ್ಥವಂ ಪರಿಗ್ರಹಿಸಿದರೆ ಮಣಿಗಳೊಳ್ ಸೂತ್ರದಂತೆ ಸರ್ವವಸ್ತುಗಳಲ್ಲೂ ಅಂತರ್ಯಾಮಿಯಾಗಿರುವ ಪರಮಾತ್ಮನು ಗೋಚರನಾಗುವನು. ಉಪಾಧಿಯಿಲ್ಲದವರೆಲ್ಲರಿಗೂ ಸಕ್ಕರೆ ಸಿಹಿ, ಬೇವು ಕಹಿಯಾಗುವದ್ದರಿಂದ ರಸದಂತೆ ರಸಗ್ರಾಹಿಯಾದ ಆತನೊಬ್ಬನೆಂದು ನಿಶ್ಚಯಿಸುವನಾಗು. ಚಿಜ್ಜಡಗಳ ಸತ್ವವಂ ವಿಚಾರಿಸುವಲ್ಲಿ ಜಡಕ್ಕೆ ಬೇರೆ ಸತ್ವವಿಲ್ಲದ್ದರಿಂದ ಚಿಜ್ಜಡರೂಪದಿಂ ಪರಮಾತ್ಮನೇ ಪ್ರಕಾಶಿಸುತ್ತಿರುವನೆಂದು ಗೊತ್ತಾಗುವದು. ಆಗ ಪರಮಾತ್ಮನಂ ತನಗೆ ತೋರದಿರುವದೇ ಜಗನ್ಮೂಲವಾದ ಅಜ್ಞಾನವೆಂತಲೂ, ತೋರುವದೇ ಬಂಧಮೋಚಕವಾದ ಜ್ಞಾನವೆಂತಲೂ ನಿಶ್ಚಯವಾಗುವದು. ಈ ನಿಶ್ಚಯದಿಂದ ಅಜ್ಞಾನವಳಿಯಲು ಮರಳಿ ನಾನು ನನ್ನದೆಂಬ ಮೋಹವು ಹ್ಯಾಗೆ ಉಂಟಾದೀತು. ಪ್ರಾರಬ್ಧದಿಂ ಬರುವ ಸುಖದುಃಖಾದಿಗಳನ್ನೆಣಿಸದೆ ಸರ್ವ ವಿಷಯದಲ್ಲೂ ಸಂದೇಹಂಗಳಂ ಪರಿಹರಿಸುವದರಲ್ಲಿ ಸಮರ್ಥನಾದ ಜ್ಞಾನಿಯಂ ಸೇವಿಸುತ್ತಾ ದಿನದಿನಕ್ಕೆ ಕಾಮಕ್ರೋಧರಾಗದ್ವೇಷಾದಿಗಳನ್ನಡಗಿಸುವದ್ದರಿಂ ಸಚ್ಛಾಸ್ತ್ರವೆಂದು ಪ್ರಸಿದ್ಧವಾದ ಅಧ್ಯಾತ್ಮಶಾಸ್ತ್ರವಂ ವಿಚಾರಿಸುತ್ತಾ ತೋರಿದ ತತ್ವಾರ್ಥವಂ ತಿಳುವುತಲೂ ಬಂದ ಬಂದ ಸಂದೇಹಗಳಂ ವಿಚಾರಗಳಿಂ ಪರಿಹರಿಸಿಕೊಳ್ಳುತಲೂ ಕೇಳಿದ ಅರ್ಥವನ್ನನುಭವಕ್ಕೆ ಬರುವಂತೆ ಚನ್ನಾಗಿ ಚಿಂತಿಸುತಲೂ ಪರಮಾರ್ಥವಂ ತಿಳಿಯುವನು ನಿನ್ನಂತೆ ಪೂಜ್ಯನಾಗುವನು. ಎಲೈ ಶ್ರೀರಾಮಚಂದ್ರನೆ ಶರತ್ಕಾಲದ ಪೂರ್ಣಚಂದ್ರನಂತೆ ಅಂತರ್ದೃಷ್ಟಿಯಿಂ ನಿರ್ಮಲನಾದಾಗ್ಯೂ ಲೋಕೋಚಿತವಾದ ಆಚಾರವಂ ಹಿಡಿದು ನಿಜಸಂದೇಹ ಕಳಂಕವಂ ಹೊರಕ್ಕೆ ತೋರಿಸುತ್ತಾ ವಿಚಾರಪರನಾಗಿ ರಾಗದ್ವೇಷರಹಿತವಾದ ಬುದ್ಧಿಯಿಂ ಸರ್ವಸಮನಾಗಿ ನಡೆಯುವ ನಿನ್ನ ನಡತೆ

ಯನ್ನೇ ಸಜ್ಜನರು ಪರಿಗ್ರಹಿಸುವದ್ದರಿಂದ ಸರ್ವಲೋಕ ಗುರುವೆಂದು ನೀನು ಪೊಗಳಿಸಿಕೊಳ್ಳುತ್ತೀಯೆ ನಿನ್ನಂತೆ ವಿಚಾರಪರಸಾದವನು ಅಜ್ಞಾನನಾಶದಿಂ ಮೇಘವಿಲ್ಲದ ಶರತ್ಕಾಲದ ಗಗನದಂತೆ ಶೋಭಿಸುವನು. ಅಖಂಡಚಿದ್ರೂಪದೃಷ್ಟಿಯಿಂ ಅಂತರಂಗದಲ್ಲಿ ರಾಗದ್ವೇಷ ವಿಹೀನನಾದಾಗ್ಯೂ ಲೋಕಾನುಸಾರವಾಗಿ ಸಂಸಾರ ಧರ್ಮವಂ ಬಿಡದಿರುವ ನಿನ್ನಂಥಾ ಮಹಾತ್ಮನಿಗೆ ಪರಮಾನಂದ ರೂಪವಾದ ಮುಕ್ತಿಸಾಮ್ರಾಜ್ಯವು ಸಿದ್ಧವಾಗಿಯೇ ಇರುವದು. ನಿನ್ನನ್ನನುಸರಿಸುವ ಸಾತ್ವಿಕನಿಗೆ ನಿನ್ನಂತೆ ಪರಮಾರ್ಥ ಜ್ಞಾನೋದಯವಾದಲ್ಲಿ ಅದೇ ಜನ್ಮದಲ್ಲಿ ಮುಕ್ತನಾಗುವನು. ಸತ್ಸಂಗ ವಿವೇಕವಿಚಾರ ವೈರಾಗ್ಯಮನೋ ಧೈರ್ಯ ಮೊದಲಾದ ಪೌರುಷ ಪ್ರಯತ್ನಗಳಲ್ಲಿ ಕಡಮೆಯಾಗದಿದ್ದರೆ ಅವನಿಗೆ ಮುಂದಿನ ಜನ್ಮವೇ ಕೊನೇ ಜನ್ಮವಾಗುವದು. ಎಂಥಾವನಿಗಾದರೂ ಸಂಗವೆ ಗುಣದೋಷ ಸಾಧಕವಾದ್ದರಿಂದ ಬುದ್ಧಿಶಾಲಿಯಾದವನು ಸತ್ಸಹವಾಸವಂ ಬಿಡದಿರಬೇಕು. ಪ್ರಾರಬ್ಧವಶದಿಂ ದೇಹವು ಪರಾಧೀನವಾಗಿದ್ದರೂ ಮನಸ್ಸಿನಿಂ ಸತ್ಸಂಗವಂ ಬಿಡದವನು ಕೃತಾರ್ಥನಾಗುವನು. ಸತ್ಸಹವಾಸದಲ್ಲಿದ್ದರೂ ಮನದೊಳ್ ವಿಷಯಮೋಹಾಸಕ್ತನಾದವನು ನೀಚನಾಗುವನು. ಕರಣತ್ರಯದಲ್ಲೂ ಸತ್ಸಂಗವುಳ್ಳ ನಿನ್ನಂಥಾ ಸುಕೃತವಂತನು ಕೆಲವು ದಿನಗಳಲ್ಲಿಯೇ ಜೀವನ್ಮುಕ್ತಿಮಾರ್ಗವಂ ಹೊಂದುವನು. ಪುರುಷಪ್ರಯತ್ನಕ್ಕೆ ಅಸಾಧ್ಯವಾದ್ದು ಯಾವದೂ ಇಲ್ಲದ್ದರಿಂದ ಜಡಪ್ರಪಂಚದ ಚಿಂತೆಯಂಬಿಟ್ಟು ಅಖಂಡ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನಲ್ಲಿ ದೃಷ್ಟಿಯನ್ನಿಟ್ಟು ಪರಮಾನಂದ ಸಾಮ್ರಾಜ್ಯವಂ ಅನುಭವಿಸುವನಾಗೆಂದು ವಸಿಷ್ಠ ಮಹಾಮುನಿಯು ಶ್ರೀರಾಮಚಂದ್ರನಂ ಕುರಿತು ಹೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯೊಳ್ ಸ್ಥಿತಿಪ್ರಕರಣದಲ್ಲಿ ದೃಶ್ಯವಿವೇಕಾದಿ ನಿರೂಪಣವೆಂಬ ಏಳನೆಯ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ ಜಯತು.

ಸ್ಥಿತಿಪ್ರಕರಣ ಸಮಾಪ್ತವು.

---

ಶ್ರೀ ಗಣೇಶಶಾರದಾ ಗುರುಭ್ಯೋನಮಃ.

## ಉಪಶಮಪ್ರಕರಣ ಪ್ರಾರಂಭ.

---

### ಪ್ರಥಮ ತರಂಗ.

ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನು, ಎಲೈ ರಾಮಭದ್ರನೇ ಸ್ಥಿತಿಪ್ರಕರಣದ ಅನಂತರದಲ್ಲಿ ಪರಮಾನಂದಪ್ರದವಾದ ಈ ಉಪಶಮ ಪ್ರಕರಣವಂ

ಕೇಳುವನಾಗೆಂದು ಹೇಳಲುಪಕ್ರಮಿಸುವಲ್ಲಿ ಶ್ರವಣೇಚ್ಛೆಯಿಂ ಪಿಡಿದ ಏಕಾಗ್ರತೆಯಿಂದ ಚಲಿಸದಿರುವ ಕಮಲಾಕರದಂತೆಯೂ, ನಕ್ಷತ್ರಗಳಿಂ ಕೂಡಿದ ಶರತ್ಕಾಲದ ಗಗನದಂತೆಯೂ, ನಿರ್ಮಲರಾದ ಜನರಿಂ ಸಭಾಮಂಟಪವು ಪ್ರಕಾಶಿಸುತ್ತಿರಲು ಅಲ್ಲಿದ್ದ ವಿಲಾಸಿನಿಯರು ಬಹುಕಾಲದಿಂ ಸನ್ಯಾಸವಂ ಮಾಡಿರುವರಂತೆ ಮದಮೋಹಗಳಂ ಬಿಟ್ಟು ಉಪಶಾಂತಿಯಂ ಪಡೆಯುತ್ತಿರಲು ಚಾಮರಗ್ರಾಹಿಣಿಯರ ಕರಗಳಲ್ಲಿರುವ ಚಾಮರಗಳು ಶ್ರವಣಸುಖದಿಂ ಸಮಾಧಿಯಂ ಹೊಂದಿರುವಂತೆ ನಿಶ್ಶಬ್ದವಾಗಿ ತರುಶಾಖೆಗಳಲ್ಲಿ ಸುಖಪರವಶವಾಗಿರುವ ಹಂಸಪಕ್ಷಿಗಳಂತೆ ಕಾಣುತ್ತಿರಲು ಸಾಮಂತರಾಜರು ಮೂಗಿನಮೇಲೆ ಬೆರಳನ್ನಿಟ್ಟುಕೊಂಡು ವಸಿಷ್ಠೋಪದಿಷ್ಟವಾದ ಸಿದ್ಧಾಂತ ಯುಕ್ತಿಗಳನ್ನಾಲೋಚಿಸುತ್ತಿರಲು ಪ್ರಾತಃಕಾಲದ ಕಮಲದಂತೆ ರಾಮಭದ್ರನ ಮುಖವು ಉಲ್ಲಾಸವಂ ಪಡೆಯುತ್ತಿರಲು ಸೂರ್ಯೋದಯ ಕಾಲದೊಳ್ ಗಗನದಂತೆ ತಮೋಹೀನನಾದ ದಶರಥನು ವಸಿಷ್ಠವಾಕ್ಯ ಶ್ರವಣದಲ್ಲಿ ಅತಿ ಕುತೂಹಲದಿಂದಿರುತ್ತಿರಲು ಸಾರಣನೆಂಬ ಮಂತ್ರಿಯು ಕಪಿಯಂತೆ ಚಪಲವಾದ ಮನವಂ ಸಮಸ್ತವಿಷಯಗಳ ದೆಸೆಯಿಂ ಕಳೆಕೊಂಡು ಶ್ರವಣಪರಾಯಣನಾಗಿರಲು ಶಿಕ್ಷಾಬಲದಿಂ ವಿಚಕ್ಷಣನಾದ ಲಕ್ಷ್ಮಣನು ವಸಿಷ್ಠನು ಪೇಳಿದ ವಿಲಕ್ಷಣವಾದ ಲಕ್ಷ್ಯವಂ ನಿರೀಕ್ಷಿಸುತ್ತಿರಲು ಬಾಹ್ಯಾಂತರ ಶತ್ರುಸಂಹಾರದಲ್ಲಿ ಸಮರ್ಥನಾದ ಶತ್ರುಘ್ನನು ತತ್ವಜ್ಞಾನಾನಂದದಿಂ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿರಲು, ಸುಮಿತ್ರನೆಂಬ ಮಂತ್ರಿಯು ಮಿತ್ರನು ಕಮಲವನ್ನುಲ್ಲಾಸಪಡಿಸುವಂತೆ ತನ್ನ ಮನವಂ ಪರಮಾರ್ಥದಲ್ಲಿ ನಿಲ್ಲಿಸಿ ಆ ಸುಖವಂ ತೋರುತ್ತಿರಲು, ಇತರ ಜನರೆಲ್ಲರೂ ಸಾಣೆಗೆ ಪಿಡಿದ ರತ್ನದಂತೆ ನಿರ್ಮಲರಾಗಿ ಆನಂದದಿಂ ಮೈಮರೆಯುವಂತೆ ಕಾಣುತ್ತಿರಲು ಸಾಗರ ಘೋಷಕ್ಕೆ ಸರಿಯಾದ ಮಧ್ಯಾಹ್ನಕಾಲದ ಶಂಖಧ್ವನಿಯು ಕೋಕಿಲಧ್ವನಿಯಂ ಮೇಘಗರ್ಜನೆಯಂತೆ ವಸಿಷ್ಠವಚನವಂ ಮರೆಮಾಡಿತು. ಆಗ ಪರಾಜಿತನಂತೆ ಸುಮ್ಮನಿದ್ದ ವಸಿಷ್ಠನು ಒಂದು ಕ್ಷಣವಾದ ಬಳಿಕ ಎಲೈ ದಾಶರಥಿಯೇ ಪರಮೇಶ್ವರನಿಂ ಕ್ಲಿಪ್ತವಾಗಿರುವ ಪ್ರಕೃತೋಚಿತವಾದ ಆಚಾರವು ಬಿಡತಕ್ಕದ್ದಲ್ಲವಾದ್ದರಿಂದ ಮುಂದೆ ಪೇಳತಕ್ಕದ್ದಂ ನಾಳೆ ಪೇಳುವೆನೆಂದು ಪೇಳಿ ಪೀಠದಿಂದೇಳುವಲ್ಲಿ ಸಂಗಡಲೆ ದಶರಥನು ಸಿಂಹಾಸನದಿಂದಿಳಿಯಲು ಮಂದಮಾರುತದಿಂ ಕಮಲವನದಂತೆ ಆ ಸಭೆ ಚಲಿಸಿತು. ಏಳುವ ಸಂಭ್ರಮದೊಳವತಂಸಪುಷ್ಪಗಳಿಂ ಪೊರಮಡುವ ಭ್ರಮರಗಳು ಝೇಂಕರಿಸುತ್ತಿರಲು, ಬಾಹುಪುರಿಗಳ ಕೊನೆಗಳು ಉತ್ಸಾಹದಿಂ ಮೀಸೆ ಮುರಿಯುತ್ತಿರಲು, ಕಿರೀಟ ರತ್ನಕಾಂತಿಗಳಿಂ ಗಗನವು ಇಂದ್ರಚಾಪ

ಏಂ ಕೂಡಿದಂತಾಗಲು, ಪೂಗುತ್ತಿಗಳಂ ಕೂಡಿದ ಲತೆಗಳಂತೆ ಚಲಿಸುವ ಚಮರಗ್ರಾಹಿಣಿಯರ ಮಣಿಕಟಕ ಕಾಂತಿಯು ಸಂಧ್ಯಾರಾಗದಂತೆ ದಿಕ್ಕುಗಳಂ ವ್ಯಾಪಿಸಲು, ವಿಲಾಸಿನಿಯ ಕಾಲ್ಗಡಗದ ಸದ್ದುಗಳು ರಾಜಹಂಸ ಸಭೆಯುಂಬುವದಂ ಸ್ಪಷ್ಟವಾಗಿ ತೋರುತ್ತಿರಲು, ರಾಜಕಿರೀಟಮಣಿಮಂಜರಿಯ ಕಾಂತಿಯೆಂಬ ಸಂಧ್ಯಾಮೇಘಗಳಿಂದಾಕಾಶವು ಮೇಲುಗಟ್ಟುಗಳುಳ್ಳ ಮನೆಯಂತೆ ಕಾಣುತ್ತಿರಲು. ಆಭರಣ ರತ್ನಕಾಂತಿ ಪ್ರವಾಹದಿಂದ್ರಚಾಪದಂತೆಸೆವ ಸಾಮಂತರಾಜರು ದಡಕ್ಕೆ ಬರುವ ಸಮುದ್ರದಲೆಗಳಂತೆ ದಶರಥನಿಗೆ ಪ್ರಣಾಮವಂ ಮಾಡುತ್ತಿರಲು ವಸಿಷ್ಠ ವಿಶ್ವಾಮಿತ್ರರು ರಥವನ್ನೇರುವ ಪರ್ಯಂತವಾಗಿ ಮಕ್ಕಳೊಡನೆ ಜೊತೆಬಿಡದೆ ಬಂದ ದಶರಥನು ಅವರ ಆಜ್ಞೆಯಿಂ ಹಿಂತಿರುಗಲು ಲೋಕತ್ರಯದಿಂ ಬಂದಿದ್ದ ಸಿದ್ಧ ಸಾಧ್ಯ ಮಹರ್ಷಿಗಳು ನಗರಜನರು ಸಹ ತಮ್ಮ ತಮ್ಮ ಸ್ಥಾನವಂ ಹೊಂದಿದರು. ಯಥೋಕ್ತ ಮರ್ಯಾದೆಯಿಂದವರಿಗೆ ಸನ್ಮಾನವಂ ಮಾಡಿದ ದಶರಥಾದಿಗಳು ಸ್ವಗೃಹವನ್ನೈದಿ ಮಧ್ಯಾಹ್ನಿಕ ಸ್ನಾನ ದೇವತಾರ್ಚನಾದಿ ಕರ್ಮಗಳಂ ನೆರವೇರಿಸಿದರು. ಆ ಕರ್ಮಕಾಲದಲ್ಲಿ ಕಮಲದೊಳ್ ಹಂಸದಂತೆ ಜನರ ಹೃದಯದೊಳ್ ವಸಿಷ್ಠನ ವಚನವೇ ಚಲಿಸುತ್ತಿದ್ದುದು. ಬಳಿಕ ಸಮಸ್ತಜನಗಳು ಪ್ರಕೃತೋಚಿತವಾದ ತಮ್ಮ ತಮ್ಮ ಕಾರ್ಯಗಳಂ ಮಾಡುತ್ತಿರುವಲ್ಲಿ ಜನ ಹೃದಯದಲ್ಲಿರುವ ವಸಿಷ್ಠೋಪದೇಶದಿಂ ಹೊರಕ್ಕೆ ಹಾಕಲ್ಪಟ್ಟ ಅನುರಾಗಗಳ ಗುಂಪಿನಂತೆ ಸಂಧ್ಯಾರಾಗವುದಿಸಲು ಸಂಧ್ಯಾವಂದನ ಸ್ತುತಿ ಪಾಠಾದಿ ಕಾರ್ಯಗಳು ನೆರವೇರಿಸುವ ಜನಗಳ ಶ್ರಮ ಪರಿಹಾರಾರ್ಥವಾಗಿ ಹಾಲ್ಗಡಲಿನ ತೆರೆಗಳಂತೆಸೆವ ಬೆಳ್ದಿಂಗಳಿಂ ಬೆಳಗುವ ರಾತ್ರಿಯಾವಿರ್ಭವಿಸಲು ಪಕ್ಷಿಗಳ ಹಾರಾಟದಂತೆ ಲೋಕವ್ಯವಹಾರಗಳು ಶಾಂತವಾಗಲು ಚಕೋರ ಮೊದಲಾದ ಪಕ್ಷಿಗಳು ಚಕೋರಾಕ್ಷಿಯರ ಕ್ರೀಡಾವ್ಯಾಪಾರಗಳಂತೆ ಪ್ರಕಾಶಿಸುತ್ತಿರಲು ಆ ರಾಜಧಾನಿಯಲ್ಲಿಯೂ ಭೋಕ್ತೃಭೋಗಭೋಜ್ಯಗಳ ಭೇದಾಭೇದವಿಚಾರದಿಂದಲೇ ಆಶ್ರಮ ಸಮೂಹಗಳಲ್ಲಿ ನಡೆವಂತೆ ಸಂಭೋಗವ್ಯಾಪಾರಗಳು ನಡೆಯಲು ಸಕಲಜನ ಸಂತೋಷಕರವಾದ ಆ ರಾತ್ರಿಯು ಮುಹೂರ್ತಮಾತ್ರವಾಗಿ ಕಳೆದುದು. ಗುರುಜನರಿಗೆ ಮನೋವ್ಯಥೆಯುಂಟಾದೀತೆಂದು ಆಹಾರವಂ ಸ್ವೀಕರಿಸಿದ ರಾಮಭದ್ರನು ಹಂಸತೂಲಿಕತಲ್ಪದಲ್ಲಿ ಪವಡಿಸಿಕೊಂಡಿದ್ದಾಗ್ಯೂ ಕರಿ ಕಲಭವು ಪೆಣ್ಣಾನೆಯಂ ಧ್ಯಾನಿಸುವಂತೆ ವಸಿಷ್ಠನ ವಾಕ್ಯರೀತಿಯನ್ನೇ ಚಿಂತಿಸುತ್ತಾ ಆಲೋಚಿಸಿದನದೆಂತೆಂದರೆ,— ಈ ಸಂಸಾರ ಚಕ್ರ ನಂಬುವದೇನು! ಈ ಜನಗಳು ವಿಚಿತ್ರವಾದ ಈ ಮಹಾಭೂತಗಳು

ಸವು ಏಕೆ ಬರುವವು! ಏಕೆ ಹೋಗುವವು! ಮನಸ್ಸಿನ ಸ್ವರೂಪವೇನು! ಇದು ಶಾಂತವಾಗುವದು ಹ್ಯಾಗೆ! ಈ ಮಾಯೆಯು ಏಕೆ ಪ್ರವರ್ತಿಸಿರುವದು! ಇದಕ್ಕೆ ನಿವೃತ್ತಿಯೆಂತಾಗುವದು! ಇದರ ನಿವೃತ್ತಿಯಿಂ ಗುಣವಾಗುವದೋ, ದೋಷವೆ ಸಂಭವಿಸುವದೋ?, ಆಕಾಶಕ್ಕಿಂತಲೂ ವಿಸ್ತಾರವಾದ ಆತ್ಮನಿಗೆ ಹ್ಯಾಗೆ ಸಂಕೋಚವು ಸಂಭವಿಸಿರುವದು! ಇಂದ್ರಿಯ ಜಯ ಮನೋನಾಶ ಸ್ವಸ್ವರೂಪಗಳ ವಿಷಯದಲ್ಲಿ ಮಹಾಮುನಿಯಾದ ವಸಿಷ್ಠನಿಂದೇನು ಹೇಳಿದಂತಾಯಿತು! ಜೀವ ಚಿತ್ತ ಮನೋ ಮಾಯಗಳೆನ್ನುವದೇ ಮೊದಲಾದ ರೂಪಗಳಿಂದಾತ್ಮನೆ ಈ ಸಂಸಾರವಂ ತೋರುವನು. ಮನವೆಂಬ ತಂತುವಿನಲ್ಲಿರುವ ಪದಾರ್ಥಗಳ ಕ್ಷಯದಿಂ ದುಃಖಶಾಂತಿಯಾಗುವದೆಂದು ಗುರುಗಳು ಹೇಳಿದರಲ್ಲವೆ! ಈ ಪದಾರ್ಥಗಳಂ ಹೋಗಲಾಡಿಸುವದು ಹ್ಯಾಗೆ; ನೀರಿನಿಂದ ಕ್ಷೀರವಂ ಸೆಳೆಯುವ ಹಂಸದಂತೆ ಭೋಗವೆಂಬ ಮೇಘಮಾಲೆಯೊಳ್ ಆಸಕ್ತವಾದ ಬುದ್ಧಿಯೆಂಬ ಬಕಪಕ್ಷಿಯಂ ಹ್ಯಾಗೆ ನಾನು ಬೇರ್ಪಡಿಸೇನು? ಭೋಗಗಳು ಬಿಡಲಶಕ್ಯವಾಗಿರುವವು. ಅವುಗಳಂ ಬಿಡದೆ ಆ ಅನರ್ಥಗಳಂ ತಿರಸ್ಕರಿಸುವದಕ್ಕೆ ನಾವು ಸಮರ್ಥರಾಗಲಾರೆವು. ನಿಶ್ಶೇಷವಾಗಿ ಭೋಗಗಳಂ ಬಿಡಲು ಪ್ರಾಣಕ್ಕೆ ಹಾನಿಬರುವದು. ನಿರ್ವಾಹವಿಲ್ಲವೆಂದು ಸ್ವಲ್ಪವಾದರೂ ಭೋಗವಂ ಪರಿಗ್ರಹಿಸುವಲ್ಲಿ ವಾಸನೆಗೆ ವೃದ್ಧಿಯಾಗುವದು. ಈ ಸಂಕಟಕ್ಕೆ ಮಾಡತಕ್ಕದ್ದೇನು? ಮತ್ತೂ ಪಡೆಯತಕ್ಕ ಆತ್ಮತತ್ವಕ್ಕೂ ಭೋಗ್ಯವಾದ ಪ್ರಪಂಚಕ್ಕೂ ಸಾಧಕವಾಗಿ ಮಧ್ಯದಲ್ಲಿರುವ ಮನವು ವಿಷಯಗಳಿಂ ಬಿಡಿಸಲಶಕ್ಯವಾಗಿರುವದು. ಅದಂ ಬಿಡಿಸದೆ ಆತ್ಮಸಾಕ್ಷಾತ್ಕಾರವಾಗದು. ವಿಷಯಗಳಿಂ ಮನವು ಬಿಡಿಸಲ್ಪಟ್ಟಲ್ಲಿ ಅದಕ್ಕೆ ಸ್ವರೂಪಹಾನಿಯೇ ಆಗುವದು. ಅದರಿಂದೀ ಮನವು ಬಾಲಕರ ಕತ್ತಲೆಯ ಪಿಶಾಚದಂತೆ ಬೆಟ್ಟಕ್ಕಿಂತಲೂ ದೊಡ್ಡದಾಗಿರುವದು. ಪ್ರಾಣಕಾಂತನಂ ಪಡೆಯದ ವಧುವಿನಂತೆ ಪರಮಾರ್ಥವಂ ಹೊಂದಿರುವ ಬುದ್ಧಿಗೆ ಸಂಸಾರದುಃಖವೆಂದಿಗೂ ಅಡಗಲಾರದು. ಆವಾಗ ನನ್ನ ಮನವು ರಾಗದ್ವೇಷಗಳಿಲ್ಲದೆ ಗಾಳಿಯಿಲ್ಲದ ಸಮುದ್ರದ ತೆರೆಯಂತೆ ಶಾಂತವಾಗಿ ಪರಮಾತ್ಮನಲ್ಲಿ ನೆಲಸೀತು. ಆವಾಗ ನಾನು ಪೂರ್ಣ ಚಂದ್ರನಂತೆ ಪರಮಾನಂದಪ್ರದನಾದ ಆತ್ಮನಲ್ಲೆ ನಿಂದು ವಿಶ್ರಾಂತಿ ಸುಖವಂ ಹೊಂದೇನು. ಆವಾಗ ನಾವು ಆಸೆಗಳೆಂಬ ಮೊಸಳೆಗಳಿಂ ತುಂಬಿರುವ ಸಂಸಾರ ಸಮುದ್ರವಂ ದಾಟಿ ಉಪಶಾಂತಿ ಮಾರ್ಗದಲ್ಲಿ ಜೀವನ್ಮುಕ್ತರಂತೆ ನಿಲ್ಲುವೆವು. ಅಂತಃಕರಣ ಬಾಹ್ಯಕರಣಗಳನ್ನೂ ಸುಡುವ ಸಂಸಾರ ಜ್ವರವು ಆವಾಗ ನನಗೆ ಶಾಂತವಾದೀತು. ಆವಾಗ ನನ್ನ ಇಂದ್ರಿಯ

ಗಳು ಮರಪೇಕ್ಷೆಗಳಿಂ ದಗ್ಧವಾದ ದೇಹವುಳ್ಳ ವಿಷಯ ದುಃಖಗಳಂ ದಾಟಿಯಾವು. ಆವನು ಕೌಸಲ್ಯಾಗರ್ಭದಿಂ ಜನಿಸಿದನೋ ಅವನೇ ಈ ನಾನೆಂದು ಹೇಹವಂ ಪಿಡಿದು ರೋದನವಂ ಮಾಡುವ ನನ್ನ ಭ್ರಮೆಯು ಶರತ್ಕಾಲದ ಮೇಘದಂತೆ ಯಾವಾಗ ಶಾಂತವಾಗುತ್ತು. ಎಲೈ ಮನವೇ ನಂದನವನ ಸೌಖ್ಯವನ್ನೂ ನಿರಾಕರಿಸುವ ಪರಮಾತ್ಮಪದದಲ್ಲಿ ನಿಂದಿರುವ ವಿರಕ್ತರು ಪೇಳ್ವ ಜ್ಞಾನ ದೃಷ್ಟಿಗಳು ನಿನ್ನಲ್ಲಿ ನಿಂದಿರುವವೇ ಪೇಳುವನಾಗು. ಓ ತಾಯೇ ಓ ತಂದೆಯೇ ಓ ಮಗನೇ ಎಂದು ಮೊರೆವ ನುಡಿಗಳಿಗೆ ನಾನು ಸ್ಥಾನವಾಗದಂತೆ ಚಿತ್ತವೇ ನನ್ನಂ ರಕ್ಷಿಸಬೇಕು. ಎಲೌ ತಂಗಿಯಾದ ಬುದ್ಧಿಯೇ ಪಾತ್ರವಿನಂತೆ ನಿನಗೆ ಸಾಷ್ಟಾಂಗ ಪ್ರಣಾಮವಂ ಮಾಡಿ ಬೇಡಿಕೊಳ್ಳುವೆನು. ನೀನು ಸ್ಥೈರ್ಯವಂ ಪಡೆದು ಸಹಜನಾದ ನನ್ನ ಸಖಿಕ್ಕೋಸುಗ ವಸಿಷ್ಠಮುನೀಶ್ವರನು ಪೇಳಿದ ಮಾತುಗಳಂ ವಿಚಾರಿಸುವಳಾಗು. ಅವುಗಳಲ್ಲಿ ಮೊದಲು ವೈರಾಗ್ಯದ ರೀತಿಯನ್ನು, ಬಳಿಕ ಮುಮುಕ್ಷುಗಳ ಆಚಾರವನ್ನು, ಆ ಬಳಿಕ ಉತ್ಪತ್ತಿಕ್ರಮವನ್ನು, ಸಮುದ್ರಪರ್ಯಂತ ಸುಂದರವಾದ ಸ್ಥಿತಿಕ್ರಮವನ್ನೂ ಚನ್ನಾಗಿ ಸ್ಮರಿಸುವಳಾಗು. ಎಂದು ಶ್ರೀರಾಮನು ತನ್ನ ಅಂತಃಕರಣಾದಿಗಳಂ ಕುರಿತು ಪೇಳುತ್ತಾ ಪರಿಪರಿಯಾಗಿ ಚಿಂತಿಸುತ್ತಿರುವಲ್ಲಿಯೆ ಆ ರಾತ್ರಿಯು ಕಳೆಯಲು ಆಗ ಒಂದೆಡೆಯಲ್ಲಿ ಕತ್ತಲೆಯಿಂ ಕಪ್ಪಾಗಿಯೂ, ಒಂದೆಡೆಯಲ್ಲಿ ಅರುಣೋದಯದಿಂ ಕೆಂಪಾಗಿಯೂ, ಒಂದೆಡೆಯಲ್ಲಿ ನಕ್ಷತ್ರದ ಕಾಂತಿಯಿಂ ಬಿಳುಪಾಗಿಯೂ, ತ್ರಿಗುಣಾತ್ಮಕವಾದ ಮಾಯಾಸ್ವರೂಪದಂತೆ ಪ್ರಾತಃಕಾಲವು ಪ್ರಕಾಶಿಸುತ್ತಿರಲು ಆಗಿನ ಮಂಗಳವಾದ್ಯಧ್ವನಿಯೊಡನೆ ಶಯನದಿಂದೆದ್ದು ಶ್ರೀರಾಮಚಂದ್ರನು ಸ್ನಾನಾದಿ ನಿತ್ಯಕರ್ಮಗಳಂ ನೆರವೇರಿಸಿ, ತಮ್ಮಂದಿರೊಡನೆ ವಸಿಷ್ಠಾಶ್ರಮವಂ ಹೊಂದಿ ಅಂತರ್ಗೃಹದೊಳ್ ಸಮಾಧಿ ನಿಷ್ಠನಾದ ಆ ಮುನಿಯಂ ಕಂಡು ಸಾಷ್ಟಾಂಗವಾಗಿ ನಮಿಸಿ ಅವನ ಮನವು ಬಹಿರ್ಮುಖವಾಗುವ ಪರ್ಯಂತವೂ ನಿಶ್ಶಬ್ದವಾಗಿ ಹೊರಗಿರೋಣವೆಂದು ಅಂಗಳಕ್ಕೆ ಬಂದು ಕುಳಿತಿರುವಲ್ಲಿ ಇತರರಾದ ಅರಸುಗಳು ಅರಸು ಮಕ್ಕಳು ಸಹ ಅದೇಮೇರೆಗೆ ಬಂದು ರಾಮನನ್ನನುಸರಿಸಿ ಕುಳಿತಿರುವಲ್ಲಿ ಕರಿ ತುರಗ ರಥ ಸೇನೆಗಳಿಂ ಪರಮನೆಯ ಬಾಗಿಲಂತೆ ವಸಿಷ್ಠಮುನಿಯ ಗೃಹದ್ವಾರವು ಪ್ರಕಾಶಿಸುತ್ತಿರಲು, ಜನ ಸಮೂಹವು ಸೇರಿದ್ದಾಗ್ಯೂ ನಿಶ್ಶಬ್ದವಾಗಿರುವುದಂ ತಿಳಿದು ಆ ಚಮತ್ಕಾರವಂ ಕಣ್ಗಳಿಂ ನೋಡಲೋಸುಗವೋ ಎಂಬಂತೆ ಸೂರ್ಯನು ಉದಯಾಚಲವನ್ನೇರಲು ಅಷ್ಟರೊಳ್ ಬಹಿರ್ಮುಖಚಿತ್ತನಾದ ಆ ಮಹಾಮುನಿಯು ರಾಮಾದಿಗಳಿಗೆ ಯೋಗ್ಯತಾನುಸಾರವಾಗಿ ಸನ್ಮಾನವಂ

ಮಾಡಿ ವಿಶ್ವಾಮಿತ್ರನೊಡನೆ ಹಿರಣ್ಮಯವಾದ ರಥವನ್ನೇರಿ ಆ ರಾಜ ಕುಮಾರ ವೃಂದಾವೃತನಾಗಿ ಅರಮನೆಗೆ ಬಂದನು. ಬಾಲ ಮರಾಳಗಳಿಂ ಕೂಡಿದ ರಾಜ ಹಂಸವು ಸರೋವರವಂ ಪ್ರವೇಶಿಸುವಂತೆ ಸಭಾ ಮಂಟಪವಂ ಪ್ರವೇಶಿಸುವಲ್ಲಿ ಸಿಂಹಾಸನದಿಂದಿಳಿದು ಬಂದ ದಶರಥನು ಸಾಷ್ಟಾಂಗವಾಗಿ ಅಭಿವಂದಿಸಿ ಆ ಮುನೀಶ್ವರರೀರ್ವರನ್ನೂ ಆಸನಗಳಮೇಲೆ ಕುಳ್ಳಿರಿಸುವಷ್ಟರೊಳ್ ಪೂರ್ವದಂತೆ ಸಿದ್ಧಾದಿಗಳು ಬಂದು ಸೇರಲು ಪರಸ್ಪರ ಮರ್ಯಾದೋಕ್ತಿ ಕ್ಷೇಮಪ್ರಶ್ನಾಸನ ಪರಿಗ್ರಹಾದಿ ಶಬ್ದಗಳಿಂದಾಸಭೆಯು ಶಬ್ದ ಬ್ರಹ್ಮ ಮಯವಾಗಿರುವಂತೆ ಶೋಭಿಸುತ್ತಿದ್ದುದು. ಬಳಿಕ ಯಥಾಕ್ರಮವಾಗಿ ಎಲ್ಲರೂ ಕುಳ್ಳಿರಲು ವಂದಿಮಾಗಧ ವಿಲಾಸಿನೀ ವೈಣಿಕ ಗಾಯಕಾದಿಗಳು ವಸಿಷ್ಠವಾಕ್ಯ ಶ್ರವಣಾಪೇಕ್ಷೆಯಿಂದ ರಾಜ ಚಿತ್ತಾನುಸಾರವಾಗಿ ಮೌನವಂ ವಹಿಸಲು ಉಪಹಾರ ಕುಸುಮ ಪರಿಮಳದಿಂ ಪೂರ್ಣವಾದ ಮಂದ ಮಾರುತವು ಶ್ರವಣಾಪೇಕ್ಷೆಯಿಂ ಬರುವದೋ ಎಂಬಂತೆ ಆ ಸಭಾಮಂಟಪವಂ ಪ್ರವೇಶಿಸಲು ತೆರೆಗಳ ರಂಧ್ರಗಳಿಂ ಕೌಸಲ್ಯಾದಿ ರಾಜಸ್ತ್ರೀಯರುಗಳು ನೋಡುತ್ತಿರಲು ಮುಕ್ತಾಫಲಗಳಲ್ಲಿ ಪ್ರತಿಫಲಿಸಿ ಪೊರಮಡುವದ್ದರಿಂದತಿರಕ್ತವಾದ ಬಾಲಾತಪದಿಂ ಕೆಂಪಾಗಿರುವ ಪುಷ್ಪಗಳಂ ಸೂರ್ಯಕಿರಣಭ್ರಾಂತಿಯಿಂದಾಕ್ರಮಿಸದೇ ವಿರಕ್ತವಾಗಿರುವಂತೆ ಭ್ರಮರಗಳು ದೂರದೂರವಾಗಿ ಸಂಚರಿಸುತ್ತಿರಲು, ಅಲೆಯಡಗಿದ ಕಡಲಿನಂತೆ ನಿಶ್ಶಬ್ದವಾದ ಆ ಸಭೆಯೊಳ್ ದಶರಥನು ವಸಿಷ್ಠನಂ ಕುರಿತಿಂತೆಂದನು. ಎಲೈ ಮಹಾಮುನಿಯೆ ಅನೇಕ ಶಾಸ್ತ್ರೋಪನ್ಯಾಸದಿಂದುಂಟಾದ ಶ್ರಮವು ತಮಗೆ ಶಾಂತವಾಗಿರುವದೇ ನಿನ್ನೆ ತಾವು ಪೇಳಿದ ಮಾತುಗಳಿಂದ ಅಮೃತಪಾನವಂ ಮಾಡಿದವರಂತೆ ನಾವು ಶಾಂತ ಸಂತಾಪರಾಗಿರುವೆವು. ಸಾಯುಜ್ಯ ಸಾಮ್ರಾಜ್ಯಲಕ್ಷ್ಮಿಗೆ ಸಾಧಕವಾದ ಸಜ್ಜನರ ಸೂಕ್ತಿಗಳು ಶರಚ್ಚಂದ್ರನ ಕಲೆಗಳಂತೆ ಪರಮಾನಂದ ಸಾಧಕವಾಗಿ ಒಳಗಣ ತಮವನ್ನೂ ಪರಿಹರಿಸುವವು. ದೀಪಪ್ರಕಾಶದಿಂ ರಹಸ್ಯದಲ್ಲಿರುವ ವಸ್ತುವಿನಂತೆ ಅವುಗಳಿಂದಾತ್ಮನು ಗೋಚರನಾಗುವನು. ಮಹಾ ಮಂತ್ರಗಳಂತೆ ಸ್ಮರಿಸಲ್ಪಟ್ಟ ಆ ಮಾತುಗಳು ದುರಪೇಕ್ಷೆ ದುರ್ವ್ಯಾಪಾರಗಳೆಂಬ ಪಿಶಾಚಗಳನ್ನೋಡಿಸುವವು. ದಯಾಳುವಾದ ಧೊರೆಯ ಆಜ್ಞೆಯಂತೆ ಕಾಮಕ್ರೋಧಾದಿ ರೂಪದಿಂದಿರುವ ಸಂಸಾರ ಬಂಧಗಳಂ ಬಿಡಿಸುವವು. ಜಾತ್ಯಂಧನಾದ ದರಿದ್ರನು ರಸಾಂಜನದಿಂ ದೃಷ್ಟಿಯಂ ಪಡೆದು ನಿಧಿಯಂ ನೋಡುವಂತೆ ತಮ್ಮ ವಾಕ್ಯದಿಂ ಜ್ಞಾನದೃಷ್ಟಿಯಂ ಪಡೆದ ನಾವು ಸರ್ವಸಾಕ್ಷಿಯಾದ ಆತ್ಮನಂ ನೋಡುತ್ತಿರುವೆವು. ಹೃದಯಾಕಾಶದೊಳ್ ಪ್ರಕಾಶಿಸು

ವಾಸನೆಯೆಂಬ ಜಡಿಮಳೆಗೆ ತಮ್ಮ ಸೂಕ್ತಿಯೇ ಶರತ್ಕಾಲವಾಗಿರುವದು. ಮಂದಾರ ಮಂಜರೀ ಮಕರಂದಗಳಿಗಿಂತಲೂ ಅಮೃತನದೀ ತರಂಗಗಳಿಗಿಂತಲೂ ತಮ್ಮ ವಾಕ್ಯಗಳು ಅತ್ಯಂತ ಮಧುರವಾಗಿರುವವು. ಎಂದು ವಸಿಷ್ಠನಂ ಕುರಿತು ಪೇಳಿದ ರಾಜೇಂದ್ರನು ಶ್ರೀರಾಮಚಂದ್ರನಂ ಕುರಿತಿಂತೆಂದನು:—ಎಲೈ ರಾಜೀವಾಕ್ಷನೇ ಸಜ್ಜನರ ಸೇವೆಯಿಲ್ಲದ ದಿವಸವೆ ದುರ್ದಿವಸವು ಆದ್ದರಿಂದ ಕಾಲವು ವ್ಯರ್ಥವಾಗಿ ಪೋಗದಂತೆ ಈ ಕುಲಗುರುವಿನ ಸೇವೆಯಿಂದ ತಿಳಿಯತಕ್ಕ ಪರಮಾರ್ಥವಂ ಗ್ರಹಿಸುವನಾಗು. ಜ್ಞಾನಧನರಾದ ಮಹಾತ್ಮರಿಗೆ ಯೋಗ್ಯರಾದ ವಿದ್ಯಾರ್ಥಿಗಳು ದೊರೆಯುವದೇ ಪರಮಲಾಭವಾದ್ದರಿಂದ ಈ ವಿಷಯದಲ್ಲಿ ಸಂಕೋಚ ಪಡಬೇಡ ವೆಂದು ದಶರಥನು ಪೇಳುವಲ್ಲಿ ವಸಿಷ್ಠನು ಎಲೈ ಮಹಾಮತಿಯೆ ನನ್ನ ಮಾತುಗಳ ತಾತ್ಪರ್ಯವು ಪೂರ್ವೋತ್ತರ ವಿರೋಧವಿಲ್ಲದಂತೆ ನಿನ್ನ ಮನಸ್ಸಿಗೆ ಬಂದುದೇ! ಉತ್ಪತ್ತಿಭೇದಗಳು, ಸ್ಥಿತಿಕ್ರಮವು ಸಹಾ ವಿದಿತವಾದವೇ! ಮನವೇ ಪುರುಷನೆಂಬು ವದು ನಿನ್ನ ಬುದ್ಧಿಗೆ ಗೋಚರವಾದುದೇ! ದೃಗ್ರೂಪನಾದ ಆತ್ಮನೆಂಬ ಸೂರ್ಯನ ಪ್ರಕಾಶದಿಂದ ಅವಿದ್ಯಾ ಜಾಡ್ಯವು ಶಾಂತವಾದುದೇ! ಶಾಸ್ತ್ರವಾಕ್ಯವೆಂಬ ಕಲ್ಪ ವೃಕ್ಷವು ಪೂರ್ವೋತ್ತರ ವಿರೋಧವಿಲ್ಲದಂತೆ ಮನನ ನಿಧಿಧ್ಯಾಸನಗಳಿಂ ಸಂಭಾ ವಿಸುವನಿಗೆ ಯಥೇಚ್ಛವಾಗಿ ಪರಮಾರ್ಥಫಲವಂ ಕೊಡುವದಾದ್ದರಿಂದ ಲೀಲೆಯಿಂ ದದಂ ತಿರಸ್ಕರಿಸಲಾಗದು. ಪರಮಾನ್ನಕ್ಕೆ ಯೋಗ್ಯನಾದ ಅತಿಥಿಯಂತೆ ಉಪ ದೇಶಕ್ಕೆ ನೀನು ಪಾತ್ರನಾದ್ದರಿಂದೀ ಯೋಗಕ್ಷೇಮವಂ ಕೇಳುವೆನೆಂದು ಪೇಳಲು ಶ್ರೀರಾಮಚಂದ್ರನಿಂತೆಂದನು,— ಎಲೈ ಗುರುವೇ ಪರೀಕ್ಷಕನು ನೋಡಿಕೊಟ್ಟ ಹಣದಂತೆ ತಾವು ಪರಿಗ್ರಹಿಸಿ ಪೇಳಿದ ಶಾಸ್ತ್ರೋಕ್ತಿ ಎನಗೆ ಕಳವಿಯಾದಿತು. ಸೂರ್ಯನ ಕಿರಣಗಳಂತೆ ತಮಃ ಪರಿಹಾರಕವಾದ ತಮ್ಮ ಮಾತುಗಳು ನನ್ನ ಹೃದ ಯಾಕಾಶದೊಳ್ ಪ್ರಕಾಶಿಸಲು ತತ್ವಾರ್ಥಗ್ರಹಣದಲ್ಲಿ ಉದ್ಯುಕ್ತನಾಗಿದ್ದ ನನಗೆ ಸಂಸಾರಾಂಧಕಾರ ಓಡಿಪೋಗುತ್ತಿರಲು ಅದರ ಅವಸ್ಥೆಯಂ ನೋಡಿ ಭಯಪಟ್ಟಂತೆ ರಾತ್ರಿಕಾಲ ಸಖಿಯಾದ ನಿದ್ರೆಯೂ ಕೂಡ ಎಡೆಮಾಡಲಿಲ್ಲ. ಹಿತಕರವಾಗಿಯೂ ಮನೋಹರವಾಗಿಯೂ, ಪರಿಶುದ್ಧವಾಗಿಯೂ, ಪ್ರಮಾಣವಾಗಿಯೂ, ಶ್ರೇಯಸ್ಸಿಗೆ ಸಾಧನವಾಗಿಯೂ ಪ್ರಕಾಶಿಸುವ ತಮ್ಮ ವಾಕ್ಯಗಳು ಕೇಳುವಲ್ಲಿಯೇ ಮನೋಹರ ವಾಗುವವು. ಆಲೋಚಿಸುವಲ್ಲಿ ತತ್ವಾರ್ಥವಂ ತೋರುವವು. ಆ ಭಾವವಂ ಹಿಡಿಯುವಲ್ಲಿ ಪರಮಾನಂದಪ್ರದವಾಗುವವಾದ್ದರಿಂದ ದೇವತಾ ಪ್ರಸಾದರೂಪ ವಾಗಿ ಬಂದ ಕಲ್ಪವೃಕ್ಷ ಕುಸುಮಗಳಂತೆ ಸರ್ವ ಶ್ಲಾಘ್ಯವಾಗಿರುವವು. ಎಂದು

ರಾಮನು ಪೇಳುವಲ್ಲಿ ವಸಿಷ್ಠನಿಂತೆಂದನು,— ಎಲೈ ಸಾಧುಮತಿಯೇ! ದೀರ್ಘವಾದ ಈ ಸಂಸಾರ ಮಾಯೆಯು ಸ್ತಂಭಗಳಿಂ ಮಂಟಪದಂತೆ ರಾಜಸ ತಾಮಸ ಪ್ರಾಣಿಗಳಿಂ ಧರಿಸಲ್ಪಟ್ಟಿರುವದು. ಸಾತ್ವಿಕರಾದವರು ಸರ್ಪಗಳು ಪರೆಯಂ ಬಿಡುವಂತೆ ಇದಂ ತ್ಯಜಿಸುವರು. ಸತ್ಕಾರ್ಯಗಳಲ್ಲಿ ಆಸಕ್ತರಾಗಿ ಸತ್ಸಹವಾಸವಂ ಬಿಡದೆ ಶಾಸ್ತ್ರಾರ್ಥಗಳಂ ವಿಚಾರಿಸುವ ರಾಜಸ ಸಾತ್ವಿಕರಿಗೆ ಸಾರಗ್ರಾಹಿಯಾದ ಬುದ್ಧಿಯೂ ಪ್ರಕಾಶಿಸುವದು. ಅವರು ತಮ್ಮಿಂದ ತಾವೇ ವಿಚಾರಿಸುತ್ತಾ ಸ್ವಸ್ವರೂಪವಂ ತಿಳಿಯುವರು. ಇಂಥಾ ಧೀರರಿಗೆ ನೀನು ಅಗ್ರಗಣ್ಯನಾದ್ದರಿಂದ ಆವದು ಸತ್ಯವೊ ಆವದು ಅಸತ್ಯವೊ ಅವುಗಳಂ ವಿಚಾರದಿಂ ನಿಶ್ಚಯಿಸಿ ಸತ್ಯದಲ್ಲಿ ನಿಲ್ಲುವನಾಗು. ಆದ್ಯಂತಗಳಲ್ಲಿ ಯಾವದಿರುವದೋ ಅದೇ ಮಧ್ಯದಲ್ಲೂ ಇರುವದು. ಅದೆಂದಿಗೂ ಹೋಗತಕ್ಕದ್ದಲ್ಲವಾದ್ದರಿಂ ಸತ್ಯವೆನಿಸುವದು. ಆದ್ಯಂತಗಳಲ್ಲಿಲ್ಲದಿರುವದು ಈಗಲೂ ಇರತಕ್ಕದ್ದಲ್ಲವಾದ್ದರಿಂದ ಅದನ್ನಸತ್ಯವೆನ್ನುವರು. ಅದರಲ್ಲಿ ಆಸಕ್ತನಾದವನಿಗೆ ಯಾರಿಂದಲೂ ವಿವೇಕ ಉಂಟುಮಾಡಲ್ಪಡುವುದಿಲ್ಲ. ಈ ಜಗವೆಂಬುವದು ಸಂಕಲ್ಪಾತ್ಮಕವಾದ ಮನದಿಂ ಕಲ್ಪಿತವಾದ್ದರಿಂದ ಪುಟ್ಟುವದು ಇರುವದು ಸಾಯುವದೆಂದು ಪ್ರಸಿದ್ಧವಾದ ಜಗವೆಲ್ಲವೂ ಈ ಮನವೆಂತಲೇ ನಿಶ್ಚಯಿಸುವನಾಗು. ಈ ಮನಕ್ಕೇ ಬಂಧ ಮೋಕ್ಷಗಳಲ್ಲದೆ ಆತ್ಮನಿಗಲ್ಲವೆಂದು ತಿಳಿಯುವನಾಗು. ಎಲೈ ರಾಮಭದ್ರನೇ! ಸಜ್ಜನರ ಸಂಗದಿಂದಲೂ, ಅವರ ಆಚಾರವನ್ನನುಸರಿಸುವದರಿಂದಲೂ, ಶಾಸ್ತ್ರವಿಚಾರದಿಂದಲೂ, ಮೊದಲು ಮನಸ್ಸಿಗೆ ರಾಗದ್ವೇಷವಂ ತಪ್ಪಿಸಬೇಕು. ವೈರಾಗ್ಯ ಉಂಟಾದಕೂಡಲೇ ಶಾಸ್ತ್ರ ರಹಸ್ಯವಂ ತಿಳಿದು ರಾಗದ್ವೇಷಗಳಂ ಬಿಟ್ಟಿರುವ ಗುರುಗಳಂ ಹೊಂದಬೇಕು. ಅವನು ಪೇಳಿದ ಕ್ರಮದಿಂ ಧ್ಯಾನ ಪೂಜಾದಿಗಳಲ್ಲಿ ಆಸಕ್ತನಾದವನ ಮನವು ಸರ್ವೋತ್ತಮವಾದ ಪದವಿಯಂ ಪಡೆಯುವದು. ತನ್ನಂ ತಾನೇ ವಿಚಾರಿಸುವಲ್ಲಿ ನಿರ್ಮಲವಾದ ಆ ವಿಚಾರದಿಂದ ಚಂದ್ರಿಕೆಯಿಂ ಪರಿಪೂರ್ಣವಾದ ಆಕಾಶದಂತೆ ಆನಂದರೂಪವಾದ ಸ್ವರೂಪವು ಅನುಭವ ಗೋಚರವಾಗುವದು. ವಿಚಾರವೆಂಬ ನಾವೆಯಿಂ ಪಾರವಂ ಹೊಂದುವವರಿಗೆ ಪ್ರಾಣಿಯು ಸಂಸಾರ ಸಮುದ್ರದ ಸುಳಿಯೊಳ್ ಸಿಲುಕಿ ಭ್ರಮಿಸುತ್ತಿರುವನು. ವಿಚಾರದಿಂ ಸ್ವರೂಪವು ಗೊತ್ತಾಗಲು ಮನೋವ್ಯಥೆಗಳು ಶಾಂತವಾಗುವವು. ಸ್ವರ್ಣಕಾರನಿಗೆ ಇದು ಬೂದಿ ಇದು ಚಿನ್ನವೆಂದು ಹ್ಯಾಗೆ ಗೊತ್ತಾಗುವುದೋ ಹಾಗೆ ವಿಚಾರಿಸುವ ವಿವೇಕಿಗೆ ಸತ್ಯಾಸತ್ಯ ಪದಾರ್ಥಗಳು ಗೊತ್ತಾಗುವವು. ಸತ್ಯವಸ್ತುವಿನ ಅಜ್ಞಾನದಲ್ಲಿದ್ದ ಮಾಲಿನ್ಯವು ಜ್ಞಾನದಲ್ಲೆಲ್ಲಗೋ ಪೋಗುವುದು. ತಿಳಿಯು

ವಿದ್ದಾಗ ದುಃಖಪ್ರದನಾಗಿದ್ದ ಆತ್ಮನು ತಿಳಿದಕೂಡಲೆ ಸುಖಪ್ರದನಾಗುವನು. ಎಲೈ ಶ್ರೀರಾಮನೆ! ಜನಗಳ ದೇಹದಲ್ಲಿ ಸೇರಿರುವಂತಿರುವ ಆತ್ಮನನ್ನು ಪಂಚಕೋಶಾದಿ ವಿವೇಕದಿಂ ಬೇರ್ಪಡಿಸಿ ಸುಖದಿಂದಿರುವದಾಗಿ ಚಿನ್ನವು ಕೆಸರಿನಲ್ಲಿ ಬಿದ್ದಿದ್ದಾಗ್ಯೂ ಅದರೊಡನೆ ಸೇರದಿರುವಂತೆ ಆತ್ಮನು ದೇಹದಲ್ಲಿದ್ದಾಗ್ಯೂ ಅದರೊಡನೆ ಬೆರೆಯದಿರುವನು. ಸೂಕ್ಷ್ಮಸ್ಥೂಲ ದೇಹಾಭಿಮಾನದಿಂ ಪ್ರಾತಿಭಾಸಿಕ ವ್ಯಾವಹಾರಿಕನೆಂದು ಪ್ರಸಿದ್ಧನಾದ ಜೀವನಿಗೂ ಪಾರಮಾರ್ಥಿಕ ಸ್ವಭಾವದಿಂ ನಿರ್ಮಲನಾದ ಆತ್ಮನಿಗೂ ಪದ್ಮಪತ್ರಜಲಗಳಿಗಿರುವಂತೆ ಸಂಬಂಧವು ಕಾಣುತ್ತಿರುವದಲ್ಲದೆ ಸರ್ವಪ್ರಕಾರದಿಂದಲೂ ಸಂಬಂಧವಿಲ್ಲವೆಂದು ಕೈಗಳನ್ನೆತ್ತಿಕೊಂಡು ಕೂಗಿಕೊಳ್ಳುತ್ತಿದ್ದಾಗ್ಯೂ ಯಾರೂ ನನ್ನ ಮಾತಂ ಕೇಳದೆ ವ್ಯರ್ಥವಾಗಿ ದುಃಖಪಡುತ್ತಿರುವರು. ಕೆಸರಿನಲ್ಲಿ ಆನೆಯಂತೆ ಯಾವವರೆಗೆ ಭೋಗ ಮೋಹದೋಳ್ ಮನವು ಬಿದ್ದಿರುವದೋ ಆವರಿಗೆ ಪೂರ್ಣಚಂದ್ರನಿಂದಲೂ, ಗಾಢಾಗ್ನಿಯಿಂದಲೂ, ದ್ವಾದಶಾದಿತ್ಯರಿಂದಲೂ ಕೂಡ ಸಂಸಾರಾಂಧಕಾರವು ಹೋಗಲಾಡಿಸಲ್ಪಡದು. ಅದೇ ಮನವು ನಿಜಸ್ಥಿತಿಯಂ ಭಾವಿಸುವಲ್ಲಿ ಸೂರ್ಯೋದಯದಿಂದಂಧಕಾರದಂತೆ ಹೃದಯಾಂಧಕಾರ ಓಡಿಹೋಗುವದು. ಆದ್ದರಿಂದ ಮನವಂ ಬಲಾತ್ಕಾರದಿಂ ಯೋಗಶಯನದಲ್ಲಿ ಕೆಡಹಿ ಬಾಲಕನಿಗೆ ಕಥೆಯಂ ಹೇಳುವಂತೆ ಲಾಲನೆಯಿಂದಲೇ ಅದಕ್ಕೆ ತತ್ವಾರ್ಥವಂ ಬೋಧಿಸಬೇಕು. ಆತ್ಮನು ಸರ್ವವ್ಯಾಪಿಯಾಗಿದ್ದರೂ ಧೂಳಿಯಿಂದ ಗಗನದಂತೆಯೂ, ಜಲದಿಂ ಪದ್ಮಪತ್ರದಂತೆಯೂ ಆವದೋಷದಿಂದಲೂ ಸಂಬಂಧಿಸದಿರುವನು. ದೃಷ್ಟಿಯು ಶೂನ್ಯದಲ್ಲಿ ಪ್ರಸರಿಸದೆ ರೂಪವುಳ್ಳ ವಸ್ತುವನ್ನೇ ಹಿಡಿಯುವದ್ದರಿಂದ ದೃಷ್ಟಿಗೆ ಅಡ್ಡಲಾಗಿದ್ದ ಕೂದಲು ಧೂಳು ಮೊದಲಾದದ್ದರಿಂದುಂಟಾದ ಆಕಾರ ವಿಕಾರಗಳು ಗಗನದಲ್ಲಿರುವಂತೆ ಕಾಣುತ್ತಿರುವವು. ಆದ್ದರಿಂದಲೇ ಆಕಾಶವು ಮಲಿನವೆಂತಲೂ ಶುಕ್ಲ ಚುಕ್ಕಿಯಾಗಿರುವದೆಂತಲೂ ಲೋಕವಾರ್ತೆಯುಂಟಾಗಿರುವದು. ಹೀಗೆ ಆತ್ಮನಲ್ಲಿ ಸುಖದುಃಖಾದಿ ದೋಷದರ್ಶನವೆಂದು ತಿಳಿಯತಕ್ಕದ್ದು. ಕಾಯ ಮೊದಲಾದ ಕರಣಗಳಿಂ ನಡೆಯುವ ಕರ್ಮಗಳಲ್ಲಿ ಅದರಿಂದುಂಟಾದ ಸುಖದುಃಖಗಳು ಅದಕ್ಕೆ ಆಗುವಂಥಾದ್ದು ಸ್ಪಷ್ಟವಾಗಿದೆಯಾದ್ದರಿಂದ ತೇಜವಂ ನೋಡಿದ್ದರಿಂದ ಕಣ್ಣುರಿಯುವದೆಂತಲೂ, ದುಷ್ಟಸಂಗದಿಂ ರೋಗಬಂತೆಂತಲೂ, ಚೂರಿಯಿಂ ಕೈಗೆ ಗಾಯವಾಯಿತೆಂತಲೂ, ತಿರುಗಿದ್ದರಿಂ ಕಾಲು ನೋಯುವದೆಂತಲೂ, ರಸಾಂಜನದಿಂ ಕಣ್ಣು ತಣ್ಣಗಿದೆಯಂತಲೂ, ಗಂಧಲೇಪದಿಂ ಮೈಯಿ ವಾಸನೆಯಾಗಿದೆಯಂತಲೂ, ಲೋಕವಾರ್ತೆಯುಂಟಾಗಿರುವದು. ಅಂಗಗಳು ಜಡವಾ

ದ್ದರಿಂದಲೂ, ಆತ್ಮನು ಅಸಂಗನಾದ್ದರಿಂದಲೂ, ಚಿಜ್ಜಡಾತ್ಮಕವಾಗಿ ಎಲ್ಲಿಗಲ್ಲಿ ನಂತೆ ಮಧ್ಯದಲ್ಲಿರುವ ಅಂತಃಕರಣಕ್ಕೆ ಸುಖದುಃಖಂಗಳೆಂದು ಹೇಳಬೇಕು. ಆ ಸುಖದುಃಖಗಳು ಅಭಿಮಾನಕಾಲದಲ್ಲೇ ಮನಸ್ಕೆ ತೋರುವದ್ದರಿಂದಲೂ, ಅದು ಪರಾಙ್ಮುಖವಾಗಿರುವಲ್ಲಿ ತೋರದ್ದರಿಂದಲೂ, ಅಭಿಮಾನರೂಪವಾದ ಅಜ್ಞಾನಕ್ಕೆಂದು ತಿಳಿಯಬೇಕಾಗುತ್ತೆ. ಇದು ಅಸಂಗವಾದ್ದರಿಂದ ಚಿಜ್ಜಡ ಸಂಬಂಧನೋಳ್ ಅಪಂಕಾರದಂತೆ ಕಾಕತಾಳೀಯ ನ್ಯಾಯದಿಂದೀಸುಖದುಃಖಗಳು ಅಂತಃಕರಣಕ್ಕೆ ಸಂಭವಿಸುವವು, ಅದರಿಂ ಸುಖದುಃಖ ದೇಹಾತ್ಮಕವಾದ್ದು ಮನನೆಂದು ಕೆಲವರು ಪೇಳುವರು. ಅದರ ಸಂಬಂಧದಿಂದಿ ಜೀವನಿಗೆಂದು ಕೆಲವರು ಪೇಳುವರು. ಭಾವನಾವಿಶೇಷದಿಂ ಸುಖವು ದುಃಖವಾಗಿಯೂ, ದುಃಖವು ಸುಖವಾಗಿಯೂ ತೋರುವದು. ಪರಮಾರ್ಥವಾಗಿ ಚಿಜ್ಜಡಭೇದಪ್ರಕಾಶವೇ ಅಜ್ಞಾನವಾದ್ದರಿಂದ ಅದರಿಂದುಂಟಾದ ಅಭಿಮಾನ ಸುಖದುಃಖಾದಿಗಳೆಲ್ಲವೂ ಭ್ರಮೆಯೆಂತಲೇ ತಿಳಿಯತಕ್ಕದ್ದು. ವಿಚಾರದಿಂ ಸರ್ವಕಾರಣವಾದ ಅಜ್ಞಾನವಳಿಯಲು ದೃಶ್ಯವೆಲ್ಲವೂ ಪೃಕ್ಕೆಂತಲೂ, ಅದೇ ಆತ್ಮನೆಂತಲೂ, ಸೃಷ್ಟಿಗಳೆಲ್ಲವೂ ಅದರ ಪ್ರಕಾರವೆಂತಲೂ ಗೊತ್ತಾಗುವದು. ಇಲ್ಲದ ಜಗತ್ತಿನೊಡನೆ ಶಾಶ್ವತವಾದ ಆತ್ಮನಿಗೆ ಭೇದವೆಂತಲೂ, ಅಭೇದವೆಂತಲೂ, ಹ್ಯಾಗೆ ಪೇಳಬಹುದು. ಅಜ್ಞಾನಕಾಲದಲ್ಲೇ ಇದು ತೋರುತ್ತಿರುವದಾದ್ದರಿಂ ಇದೆಲ್ಲವೂ ಸುಳ್ಳೆಂತಲೂ, ಅವಿಚಾರದಿಂ ಬ್ರಹ್ಮವೇ ಈ ಪ್ರಕಾರ ತೋರುತ್ತಿರುವದೆಂತಲೂ ನಿಶ್ಚಯಿಸುವನಾಗು. ಅಗ್ನಿಯಲ್ಲಿ ಹಿಮಕಣವೆಸ್ನನಂತೆ ಅಖಂಡವಾದ ಬ್ರಹ್ಮದಲ್ಲಿ ಯಾವ ಕಲ್ಪನೆಗೂ ಅವಕಾಶವಿಲ್ಲದ್ದರಿಂದ ಸಮುದ್ರಗಳಲ್ಲಿ ತರಂಗಗಳಂತೆ ಸಮಸ್ತವಾದ ದೃಷ್ಟಿಗಳು ಸೃಷ್ಟಿಗಳು ಸಹ ಪರಮಾತ್ಮನಲ್ಲೇ ಪ್ರಕಾಶಿಸುತ್ತಿರುವವು. ಆದ್ದರಿಂದ ಭೇದಕಲ್ಪನೆಗಳೆಲ್ಲವನ್ನೂ ಬಿಟ್ಟು ಸರ್ವವೂ ಬ್ರಹ್ಮವೆಂತಲೇ ನಿರ್ಣಯಿಸುವನಾಗು. ಈವಿಚಾರದಿಂ ಸರ್ವಾತ್ಮಭಾವದಿಂದಿರುವ ನಿನಗೆ ಜನ್ಮವೆಂಬುವದೇ ಸುಳ್ಳಾಗುವದಾದ್ದರಿಂದ ಇದಿರುವದಿಂದು ಮೋಹವು ಇದು ಹೋಯಿತೆಂದು ಶೋಕವು ಸಹ ತಾನಾಗಿ ತಪ್ಪುವದು. ಇದ್ದದ್ದೇ ಇರುವದೆಂಬ ನಿಶ್ಚಯದಿಂ ದ್ವಂದ್ವಭಾವವಂ ಬಿಟ್ಟು ನಿತ್ಯನಾದ ಆತ್ಮನಲ್ಲಿ ನಿತ್ಯಸ್ಥಿತಿಯಿಂದ ದ್ವಿತೀಯನಾಗಿ ಇರುವದರ ಕ್ಷೇಮವನ್ನು ಇಲ್ಲದ್ದರ ಪ್ರಾಪ್ತಿಯನ್ನೂ ಆಲೋಚಿಸದೆ ಸರ್ವತ್ರ ಸಮದೃಷ್ಟಿಯಿಂ ಸ್ಥಿರನಾಗಿ ಬಂದದ್ದಂ ಬಿಡದೆ ಬಾರದ್ದನ್ನಪೇಕ್ಷಿಸದೆ ಸ್ಫಟಿಕದಂತೆ ನಿರ್ಮಲನಾಗಿದ್ದಾಗ್ಯೂ ಲೋಕಾನುಸಾರವಾಗಿ ಅವರ ಚೇಷ್ಟೆಯಂ ಹಿಡಿದು ನಡೆಯುತ್ತಾ ನಿನ್ನದೇ ನಿನಗೆ ಬರತಕ್ಕದ್ದಾದ್ದರಿಂ

ನಿಲೂ ಪರನದು ಬಂದರೂ ನಿಲ್ಲತಕ್ಕದ್ದಲ್ಲವಾದ್ದರಿಂದಲೂ ಲಾಭನಾಶಗಳಲ್ಲಿ ಹರ್ಷ ಶೋಕಂಗಳಂ ಹೊಂದದೆ! ಸಮಸ್ತವಾದ ದೇಶಕಾಲ ವಸ್ತುಗಳಲ್ಲಿ ನೀನೇಪರಿಪೂರ್ಣನಾಗಿರುವೆಯಾದ್ದರಿಂದ ಇದು ಗ್ರಹಿಸತಕ್ಕದ್ದು ಇದು ಬಿಡತಕ್ಕದ್ದೆಂಬ ಬುದ್ಧಿಯುಂಬಿಟ್ಟು ಸಂಕಲ್ಪ ವಿಕಲ್ಪಗಳಿಂದಲೂ, ಸಂಕಲ್ಪಿತವಾದ ಪದಾರ್ಥವ ಅಭಿಮಾನಾದಿಗಳಿಂದಲೂ, ವರ್ಜಿತನಾಗಿ ಸರ್ವವೂ ನಾನೆಂತನಾಗಲೀ ನಾನೆನ್ನುವದಕ್ಕೆ ಅವಕಾಶವೇ ಇಲ್ಲನೆಂತಲಾಗಲಿ! ವಿಚಾರಬಲದಿಂ ಪರಿಪೂರ್ಣಭಾವವಂ ವಹಿಸಿ ಶೋಕಮೋಹಗಳಂ ಬಿಡುವನಾಗು. ಸಮಸ್ತವೂ ನಿನ್ನಕಲ್ಪನೆಯಿಂದಲೇ ಉಂಟಾಗಿರುವದ್ದರಿಂದ ಕಲ್ಪಿತನೆಲ್ಲವೂ ಸುಳ್ಳೆಂದು ನಿಶ್ಚಯಿಸಿ ಕಲ್ಪನೆಯನ್ನೇ ಬಿಡುವೆಯಾದರೆ ನಿನಗಿರುವ ಪರಿಪೂರ್ಣಭಾವವೇ ಸಿದ್ಧವಾಗುವದು. ಈ ಭಾವದಿಂ ಸಮಸ್ತ ವಾಸನೆಗಳಂಬಿಟ್ಟು ಸಮದೃಷ್ಟಿಯಿಂ ರಾಜ್ಯಭಾರವಂ ಮಾಡುವ ನಿನ್ನ ಸ್ಮೃತಿ ಮಾತ್ರದಿಂದಲೇ ಸಮಸ್ತರೂ ಕೃತಾರ್ಥರಾಗುವರು. ಸಕಲ ಸಾಮಗ್ರಿಗಳಿಂದಕೂಡಿರುವ ಮನೆಯಂತೆ ಸಕಲ ಕರಣಗಳಿಂ ಕೂಡಿರುವ ಮಾನುಷ ದೇಹವಂ ಪಡೆದಾಗ್ಯೂ ವಿಚಾರಮಾರ್ಗವಂ ನೋಡದೆ ಲೋಕವ್ಯಾಪಾರದಲ್ಲಾಸಕ್ತರಾದ ಜನಗಳು ಸ್ವರ್ಗ ನರಕಗಳಲ್ಲಿ ತಿರುಗುತ್ತಿರುವರು. ಕೆಲವರು ನಿಷಿದ್ಧಕರ್ಮವಂಮಾಡುವದರಿಂದಲೂ, ವಿಹಿತಕರ್ಮವಂ ಬಿಡುವದರಿಂದಲೂಕೂಡ ನರಕದಿಂ ನರಕವನ್ನೂ, ದುಃಖದಿಂ ದುಃಖವನ್ನೂ, ಭಯದಿಂ ಭಯವನ್ನೂಕೂಡ ಹೊಂದುವರು. ಕೆಲವರು ನಿದ್ರಾಹಾರ ವಿಹಾರ ವಾಸನೆಗಳಿಂ ಬದ್ಧರಾಗಿ ತಿರ್ಯಗ್ಜಾತಿಗಳಾಗಿಯೂ, ಸ್ಥಾವರಪ್ರಾಣಿಗಳಾಗಿಯೂ ಪುಟ್ಟುತಲಿರುವರು. ವಿಚಾರದಿಂ ಸಾಕ್ಷಿಭಾವದಿಂ ನಿಂದು ಮನಸ್ಸಿನ ವ್ಯಾಪಾರವಂ ನೋಡುವ ಮಹಾತ್ಮರು ಆಶಾಬಂಧದಿಂ ಮುಕ್ತರಾಗಿ ಕೈವಲ್ಯವಂ ಪಡೆವರು. ಪೂರ್ವದಲ್ಲಿ ಕೆಲವು ಜನ್ಮಗಳನ್ನನುಭವಿಸಿ ಸರ್ವೋತ್ತಮವಾದ ಮಾನುಷ ಜನ್ಮ ಬಂದಕೂಡಲೇ ವಿಚಾರನಿರತನಾಗಿ ಯಾವನು ಮುಕ್ತನಾಗುವನೋ ಅವನು ರಾಜಸ ಸಾತ್ವಿಕನೆನಿಸುವನು. ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಂ ಪಡೆಯುವ ಈ ಬುದ್ಧಿಶಾಲಿಯನ್ನು ಮುಕ್ತಿಸಾಮ್ರಾಜ್ಯವು ತಾನಾಗಿ ವರಿಸುವದು. ಇಂಥಾ ಚರಮ ಜನ್ಮವಂ ಪಡೆದ ಪುರುಷನು ಪ್ರಾಜ್ಞತಾ, ಪೂಜ್ಯತಾ, ಮನೋಹರತಾ, ಸೌಮ್ಯತಾ, ಮೈತ್ರಿ, ಕರುಣಾ, ಮುದಿತಾ ಉಪೇಕ್ಷೆಗಳೆಂಬ ಕಾಂತೆಯರಿಗೆ ಅಂತಃ ಪುರನಾಗುವನು, ಯಾವನು ಸರ್ವಕಾರ್ಯಗಳಂ ಮಾಡುತ್ತಿದ್ದರೂ ವೃದ್ಧಿಹಾನಿಗಳಲ್ಲಿ ಸುಖದುಃಖಗಳಿಂ ಬೆರಗಾಗನೋ, ದಿನದಲ್ಲಿ ಅಂಧಕಾರದಂತೆ ಯಾವನಲ್ಲಿ ಪಾಪಗಳು ನಷ್ಟವಾಗುವವೋ!, ಶರತ್ಕಾ

ಲದಲ್ಲಿ ಮೇಘಗಳಂತೆ ಯಾವನಲ್ಲಿ ಸುಖದುಃಖಾದಿ ದ್ವಂದ್ವಗಳು ನಿಸ್ಸಾರಗಳಾಗುವ ವೋ, ಅವನಲ್ಲಿದ್ದ ಲಜ್ಜಾ, ಧೈರ್ಯ, ಭಕ್ತಿ ಶ್ರದ್ಧಾದಿ ಗುಣಗಳು ದಿನದಿನಕ್ಕೆ ಶುದ್ಧ ವಾಗುವವು. ಮನೋಹರವಾದ ಇಂಥಾ ಆಚಾರವುಳ್ಳ ಪುರುಷನು ಮೃಗಗಳಿಗೆ ಕೊಳಲಿನ ಧ್ವನಿಯಂತೆ ಸರ್ವರಿಗೂ ಬೇಕಾಗುವನು. ಇಂಥಾ ಶುಭಗುಣಗಳು ಕೊನೆಯ ಜನ್ಮವಂ ಪಡದವನನ್ನು ಮೇಘವಂ ಬಲಾಕೆಗಳಂತೆ ಆಶ್ರಯಿಸುವವು. ಇಂಥಾವನು ಗುರೂಪದೇಶಕ್ಕೆ ಪಾತ್ರನಾಗಿ ವಿವೇಕ ವಿಚಾರಗಳಿಂ ವಿರಕ್ತವಾದ ಮನದಿಂದ ಅಖಂಡವಾದ ಸ್ವಸ್ವರೂಪವಂ ತಿಳಿಯುವನು. ಹೀಗೆ ಕೃತಾರ್ಥನಾಗು ವಂಥಾವನು ವಿಷಯ ವಿಷವಾಸನೆಯಿಂ ಮೂರ್ಛಿತವಾಗಿದ್ದ ಮನವನ್ನು ವಿವೇಕಾ ಮೃತವೃಷ್ಟಿಯಿಂದೆಬ್ಬಿಸಿ ವಿಚಾರ ಮಾರ್ಗದಿಂ ಸ್ವರೂಪ ಲಕ್ಷಣವಂ ತೋರಿ ಅದನ್ನೂ ಉಪಾಯದಿಂದಲೇ ಕಳಕೊಂಡು ಬ್ರಹ್ಮ ಸಾಯುಜ್ಯವಂ ಪಡೆವನು. ಹೀಗೆ ಗುರೂಪದೇಶಮಾರ್ಗದಿಂ ಕೃತಾರ್ಥರಾಗತಕ್ಕವರು ಕೆಲವರು ಆಕಾಶದಿಂ ಫಲಬಿದ್ದಂತೆ ಯದೃಚ್ಛೆಯಾಗಿ ಕಿವಿಗೆ ಬಿದ್ದ ಸದುಕ್ತಿಗಳ ಶ್ರವಣದಿಂದಲೇ ವಿವೇಕ ವಿಚಾರಪರರಾಗಿ ಕೆಲವರು ಕೃತಾರ್ಥರಾಗುವರು. ಅದೆಂತೆಂದರೆ,— ಶತ್ರುಗ ಳೆಂಬ ಅಂಧಕಾರಕ್ಕೆ ಸೂರ್ಯನಾಗಿಯೂ, ಕಮಲದಂತೆ ಲಕ್ಷ್ಮಿಗೆ ವಿಲಾಸಸ್ಥಾನ ವಾಗಿಯೂ, ಪ್ರಾಜ್ಞತೆಗೆ ಆವಾಸಸ್ಥಾನವಾಗಿಯೂ, ಸ್ತ್ರೀಯರಿಗೆ ಮನ್ಮಥನಾಗಿಯೂ, ಯಾಚಕರಿಗೆ ಕಲ್ಪವೃಕ್ಷವಾಗಿಯೂ, ಮಿತ್ರರೆಂಬ ಕಮಲಗಳಿಗೆ ಸೂರ್ಯನಾಗಿಯೂ, ಬಂಧುಗಳೆಂಬ ಪುಷ್ಪಗಳಿಗೆ ವಸಂತನಾಗಿಯೂ, ಬ್ರಾಹ್ಮಣರೆಂಬ ನೈದಿಲೆಗಳಿಗೆ ಚಂದ್ರನಾಗಿಯೂ, ಸೌಜನ್ಯವೆಂಬ ರತ್ನಕ್ಕೆ ಸಮುದ್ರನಾಗಿಯೂ, ಆಪತ್ತೆಂಬ ಅರಣ್ಯಕ್ಕೆ ಕಾಡಕಿಚ್ಚಾಗಿಯೂ, ಭೂಮಿಯಲ್ಲವತರಿಸಿರುವ ಮಹಾ ವಿಷ್ಣುವೋ ಎಂಬಂತೆ ಪುಣ್ಯಶ್ಲೋಕನಾದ ಜನಕನೆಂಬ ಮಹಾರಾಯನಿರುವನು. ಅವನು ಪೂರ್ವದೊಳ್ ವಸಂತಕಾಲದಲ್ಲಿ ಒಂದಾನೊಂದು ದಿವಸ ನಂದವನವಂ ಇಂದ್ರ ನಂತೆ ಲೀಲಾರ್ಥವಾಗಿ ಉಪವನವಂ ಪ್ರವೇಶಿಸಿದನು. ಕುಸುಮಗಳ ಪರಿಮಳ ದಿಂದಲೂ, ಕೋಗಿಲೆಗಳ ಕಲಕಲ ಧ್ವನಿಯಿಂದಲೂ, ಲತಾಂಗನೆಯರ ಆಸ್ಯದಿಂ ದಲೂ, ಮಂದಮಾರುತದ ಸುಳಿದಾಟದಿಂದಲೂ, ಮನೋಹರವಾದ ಆ ಲೀಲಾ ವನದೊಳ್ ಪರಿಜನರಂ ದೂರದಲ್ಲಿ ಬಿಟ್ಟು ಕ್ರೀಡಾಪರ್ವತವನ್ನೇಕಾಕಿಯಾಗಿ ಹತ್ತಿ ಅದರ ಮಧ್ಯಭಾಗದೊಳ್ಬೆಳಗುವ ಲತಾಮಂಟಪಗಳ ಬೀದಿಯೊಳ್ಸಂಚರಿ ಸುತ್ತಾ ಒಂದೆಡೆಯೊಳ್ ಹೊಂಗೇಮರಗಳ ಗುಂಪಿನಲ್ಲಿ ಸ್ವೇಚ್ಛೆಯಿಂ ಪಾಡುತ್ತಿ ರುವ ಸಿದ್ಧರ ವಚನಗಳಂ ಕೇಳಿದನು. ಗುಂಪು ಗುಂಪಾಗಿ ಅವರು ಪೇಳಿದ್ದೇ

ನೆಂದರೆ—ದೃಶ್ಯವಂ ನೋಡಲಿಚ್ಛೈಸಿದ ಪುರುಷನಿಗೆ ದೃಶ್ಯವು ಸಿದ್ಧವಾಗುವಲ್ಲೂ, ಅದರ ಸಂಬಂಧದಲ್ಲೂ, ದೃಶ್ಯಗಳಂ ಸ್ವರೂಪದಲ್ಲಿ ಲಯವಂ ಹೊಂದಿಸಿ ಅದ್ವಿತೀಯ ಭಾವದಿಂದಿರುವಲ್ಲೂ ಯಾವ ಆನಂದವು ನಮ್ಮಲ್ಲಿ ಜ್ಞಾನಸಾಮರಸ್ಯದಿಂ ನಿರ್ಣಯವಾಗಿ ಪ್ರಕಾಶಿಸುವದೊ ಶಾಶ್ವತವಾದ ಆ ವಸ್ತುವನ್ನೇ ನಾವು ಆತ್ಮನೆಂದು ಪಾಸನೆಯಂ ಮಾಡುವೆವು ಎಂದು ಕೆಲವರು ಪೇಳಿದರು ||೧|| ದ್ರಷ್ಟೃದರ್ಶನ ದೃಶ್ಯಗಳನ್ನು ವಾಸನೆಯೊಡನೆ ಬಿಟ್ಟು ಈ ತ್ರಿಪುಟಿಗೆ ಸಾಕ್ಷಿಯಾಗಿಯೂ, ವ್ಯಾಪಕವಾಗಿಯೂ, ಕಾರಣವಾಗಿಯೂ, ದೃಗ್ರೂಪದಿಂ ಪ್ರಕಾಶಿಸುವ ಪರಮಾತ್ಮನನ್ನೇ ಆತ್ಮನನ್ನಾಗಿ ಉಪಾಸನೆ ಗೈಯುವೆವೆಂದು ಕೆಲವರು ಪೇಳಿದರು ||೨|| ಕಾರ್ಯದರ್ಶನದಿಂದಿಲ್ಲವೆನ್ನುವವಕ್ಕೂ ದರ್ಶನ ವಿಷಯವಲ್ಲದ್ದರಿಂದಿದೆಯೆನ್ನುವುದಕ್ಕೂ ಅವ್ಯಕ್ತವಾಗಿ ಈ ಎರಡು ಪಕ್ಷಗಳಿಗೂ ಮಧ್ಯಸ್ಥವಾಗಿ ಪ್ರಕಾಶಿಸತಕ್ಕ ಪದಾರ್ಥಗಳ ಪ್ರಕಾಶಕ್ಕೆ ಕಾರಣವಾಗಿರುವ ವಸ್ತುವನ್ನೇ ಧ್ಯಾನಿಸುವೆವೆಂದು ಕೆಲವರು ಪೇಳಿದರು ||೩|| ಈ ಪದಾರ್ಥಗಳೆಲ್ಲವೂ ಯಾವನಲ್ಲಿರುವದೋ ಯಾವನಿಗೆ ಸಂಬಂಧಿಸಿರುವದೋ, ಯಾವನ ದೆಶೆಯಿಂದುಂಟಾಗಿರುವದೋ, ಯಾವನಿಗೋಸುಗ ಇರುವದೋ, ಯಾವನಿಂದಿರುವದೋ, ಯಾವನೇ ಈ ರೂಪದಿಂ ಪ್ರಕಾಶಿಸುವನೋ, ಸರ್ವ ಶಬ್ದಾರ್ಥ ಸ್ವರೂಪನಾದ ಆ ಪರಮಾತ್ಮನನ್ನೇ ಆತ್ಮನೆಂದು ಭಾವಿಸುವೆವೆಂದು ಕೆಲವರು ಪೇಳಿದರು ||೪|| ಅಕಾರವೇ ಶಿರಸ್ಸಾಗಿ ಹಕಾರವೇ ಕೊನೆಯಾಗಿರುವ ಅಹಮೆಂಬ ಶಬ್ದವಂ ಸರ್ವಕಾಲವಲ್ಲು ಉಚ್ಚರಿಸುತ್ತ ಸರ್ವ ಶರೀರಗಳಲ್ಲೂ ಪ್ರಕಾಶಿಸುವ ಪರಮಾತ್ಮನನ್ನೇ ಆತ್ಮನೆಂದು ಚಿಂತಿಸುವೆವೆಂದು ಕೆಲವರು ಪೇಳಿದರು ||೫|| ಬುದ್ಧಿಯೆಂಬ ಗುಹೆಗೆ ಅಧಿಪತಿಯಾಗಿರುವ ದೇವನಂ ಬಿಟ್ಟು ಮತ್ತೊಬ್ಬ ದೇವನಂ ಯಾರು ಹೊಂದುವರೋ ಅವರು ಕೈಗೆ ಸಿಕ್ಕಿದ ಕೌಸ್ತುಭವಂ ಬಿಟ್ಟು ಇನ್ನೊಂದು ರತ್ನವನ್ನಪೇಕ್ಷಿಸುವರೆಂದು ಕೆಲವರು ಪೇಳಿದರು ||೬|| ಪಕರಿಂದಾಸೆಗಳೆಂಬ ವಿಷಲತೆಗಳಿಗೆ ಮೂಲವಾದ ವಾಸನಾಗ್ರಂಥಿಯೊಡೆದು ಹೋಗುವದೋ ಆ ವಸ್ತುವು ಸಮಸ್ತವಾದ ಆಶೆಗಳಂ ಬಿಡುವದ್ದರಿಂದಲೇ ಪ್ರಾಪ್ತವಾಗುವದೆಂದು ಕೆಲವರು ಪೇಳಿದರು ||೭|| ಸಮಸ್ತವಾದ ಭೋಗಪದಾರ್ಥಗಳಲ್ಲಿ ಸ್ವಾರಸ್ಯವಿಲ್ಲವೆಂದು ತಿಳಿದಾಗ್ಯೂ ಮರಳಿ ಆ ಪದಾರ್ಥಗಳನ್ನೇ ಯಾವನು ಭಾವಿಸುವನೋ ಅವನು ಕತ್ತೆಯಲ್ಲದೆ ಮನುಷ್ಯನಲ್ಲವೆಂದು ಕೆಲವರು ಪೇಳಿದರು ||೮|| ವಿಷಯವಾಸನೆಯಿಂದೇಳುವ ಅಂತಃಕರಣಾದಿಗಳನ್ನು ಪರ್ವತಗಳನ್ನಿಂದ್ರನಂತೆ ವಿವೇಕವೆಂಬ ದಂಡದಿಂ ಹೊಡೆದು ಕೆಡುಹಬೇಕೆಂದು ಕೆಲವರು ಪೇಳಿದರು ||೯|| ವಿಷಯ

ವಾಸನೆಗಳು ಇಲ್ಲದಿರುವದೇ ಉಪಶಮ ವೆನಿಸುವದು. ಈ ಸುಖವುಂಟಾಗುವಲ್ಲಿ ಕಾಷ್ಠವಿಲ್ಲದ ಅಗ್ನಿಯಂತೆ ಮನವು ಶಾಂತವಾಗುವದು. ಬಳಿಕ ಅಖಂಡ ಸುಖ ರೂಪವಾದ ಸ್ವರೂಪದಲ್ಲೇ ಸ್ಥಿತಿಯಾಗುವದೆಂದು ಕೆಲವರು ಪೇಳಿದರು ||೧|| ಇಂತು ಅದೃಶ್ಯರಾಗಿರುವ ಸಿದ್ಧರು ಪೇಳಿದ ವಚನಗಳಂ ಕೇಳಿದ ಜನಕರಾಯನು ರಣಕೋಲಾಹಲದಿಂ ಭೀರುವಿನಂತೆ ಭಯಪಟ್ಟು ಮನೆಯಂ ಸೇರಿ ಏಕಾಂತ ಸ್ಥಳದೊಳ್ ಕುಳಿತು ಹಾರುವ ಹಕ್ಕಿಗಳ ರಕ್ಕೆಗಳಂತೆ ಚಂಚಲವಾದ ಲೋಕ ಸ್ಥಿತಿಗಳನ್ನಾಲೋಚಿಸುತ್ತಿದ್ದನೆಂದು ವಸಿಷ್ಠನು ಪೇಳಿದನೆಂಬಲ್ಲಿಗೆ ಉಪಶಮಪ್ರ ಕರಣದೊಳ್ ಜ್ಞಾನಯೋಗ ತರಂಗಿಣಿಯಲ್ಲಿ ೧ ನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ ಜಯತು.

---

## ೨ ನೇ ತರಂಗ ಪ್ರಾರಂಭ.

---

### ಜನಕಸಿದ್ಧಿಕ್ರಮ ನಿರೂಪಣ ಪ್ರಾರಂಭವು.

ಬಳಿಕ ವಸಿಷ್ಠನು ಶ್ರೀ ರಾಮನಂ ಕುರಿತು ಪೇಳಿದನು, ಎಲೈ ರಾಮ ಭದ್ರನೆ ಆ ಜನಕರಾಯನು ಪರಿಪರಿಯಾದ ಲೋಕಗತಿಗಳನ್ನಾಲೋಚಿಸುತ್ತಾ ವ್ಯಾಕುಲನಾಗಿ ಪೇಳಿದನದೆಂತೆನೆ,—ಇದೇನು ಕಲ್ಲುಗಳಲ್ಲಿ ಕಲ್ಲಿನಂತೆ ಸಂಸಾರದಶೆ ಗಳಲ್ಲಿ ಹೊರಳಾಡುತ್ತಿರುವೆನು. ಅನಂತವಾದ ಕಾಲದಲ್ಲಿ ಯಾವದೊ ಒಂದಂಶ ದೊಳ್ ನಾನು ಜೀವಿಸುವೆನು. ಅತಿಸ್ವಲ್ಪವಾದ ಅಂಥಾ ಜೀವನಕ್ಕೆ ಆಶೆಪಡುವ ಅಧಮನಾದ ನನ್ನಂ ಧಿಕ್ಕರಿಸಬೇಕು. ಈ ಜೀವನಕ್ಕೆ ತಕ್ಕದ್ದಾಗಿರುವ ರಾಜ್ಯ ವಿಮ ಎಷ್ಟುಮಾತ್ರ ವೆನಿಸುವದು. ಇದರಿಂ ನಾನು ದುಃಖವಿಲ್ಲದಿರುವದ್ದರಿಂದ ನನಗಿಂತಲೂ ಕೆಟ್ಟಬುದ್ಧಿಯವನು ಯಾವನೂ ಇಲ್ಲವೆಂದು ತಿಳಿಯುತ್ತೇನೆ. ಪರ ಮಾರ್ಥ ವಿಚಾರದಿಂದಾದ್ಯಂತಗಳಲ್ಲಿ ಅಖಂಡನಾದ ನನಗೆ ಮಧ್ಯಭಾಗದೊಳ್ ಕಾಲಕರ್ಮವಾಸನಾ ಬೀಜಗಳಿಂ ಖಂಡನೆಯಾದ್ದರಿಂದ ಚಿತ್ರಪಟದಲ್ಲಿರುವ ಚಂದ್ರನಿಂ ಬಾಲನಂತೆ ಈ ದೇಹದಿಂ ನಾನು ಸಂತೋಷಪಡುತ್ತಾ ಇದನ್ನೇ ನಾನೆಂದು ತಿಳಿದು ಕೊಂಡಿರುವೆನು. ಯಾವನಿಂ ನಾನಿಂದ್ರಜಾಲರೂಪವಾದ ಪ್ರಪಂಚದೊಳ್ ಮುಗ್ಧನಾಗಿರುವೆನು. ಯಾವದು ಸತ್ಯವೋ, ಯಾವದು ಮನೋಹರವೋ, ಯಾವದು ಉತ್ಕೃಷ್ಟವೋ, ಯಾವದು ಕೃತ್ರಿಮವಲ್ಲದ್ದೋ, ಅದೊಂದನ್ನೂ

ಕಾಣದೆ ಇಲ್ಲೀನುಕಾರಣ ನನ್ನ ಬುದ್ಧಿಯು ತಗಲಿಕೊಂಡಿರುವದು. ಯಾವದು ಮನದಲ್ಲಿರುವದೋ ಅದು ದೂರದಲ್ಲಿದ್ದರೂ ಸಮೀಪದಲ್ಲೇಯಿರುವದಾದ್ದರಿಂದ ಬಾಹ್ಯ ಭಾವನೆಗಳೆಲ್ಲವನ್ನೂ ನಾನು ಬಿಟ್ಟುಬಿಡುವೆನು. ಭೋಗಾರ್ಥವಾದ ಪ್ರವೃತ್ತಿಮಾರ್ಗವೆಲ್ಲವೂ ನೀರಿನ ಸುಳಿಯಂತೆ ಕ್ಷಣಿಕವಾಗಿರುವಲ್ಲಿ ಯಾವದರಿಂ ನನಗೆ ಸುಖವಾದೀತು. ಪ್ರತಿ ವರ್ಷ ಪ್ರತಿ ಮಾಸ ಪ್ರತಿ ದಿವಸ ಪ್ರತಿ ಕ್ಷಣಗಳಲ್ಲಿ ಬರುವ ಸುಖಗಳೂ ಕೂಡ ದುಃಖಗಳಿಂ ಪೂರ್ಣವಾಗಿರುವವು. ದುಃಖಗಳಾದರೋ ಮರಳಿ ಮರಳಿ ಬರುತ್ತಿರುವವು. ಬ್ರಹ್ಮೇಂದ್ರಾದಿ ಪದವಿಗಳಂ ವಿಚಾರಿಸುವಲ್ಲಿ ಯಾವವೂ ಉತ್ಕೃಷ್ಟವಾಗಿ ತೋರುವದಿಲ್ಲವಾದ್ದರಿಂದ ಸತ್ಪುರುಷರಿಗೆ ಅವಲಂಬನವಾದ್ದು ಇಲ್ಲಿ ಯಾವುದೂ ಇಲ್ಲ, ಎಲೈ ಕೆಟ್ಟಮನವೇ ರಾಜ್ಯಾಧಿಪತ್ಯಾದಿಗಳಿಂದೊಡ್ಡವರೆಂದು ಪ್ರಸಿದ್ಧರಾದವರ ತಲೆಯ ಮೇಲಿರುವರೂ ಕೂಡ ಕೆಲವು ದಿನಗಳಲ್ಲಿಯೇ ಬೀಳುವಲ್ಲಿ ಈ ಸ್ವಲ್ಪ ರಾಜ್ಯದಿಂ ನೀನಹಂಕಾರಪಡುವದಕ್ಕೆ ನಿಮಿತ್ತವೇನಿರುವದು. ಹಾ ಆತ್ಮನೇ ನೀನು ಹಗ್ಗವಿಲ್ಲದೆ ಬಂಧವನ್ನೂ ಮಾಲಿನ್ಯವಿಲ್ಲದೆ ಕಳಂಕವನ್ನೂ ಅಚ್ಯುತನಾಗಿ ಮೇಲೆ ನಿಂದಿದ್ದರೂ ಕೂಡ ಬಿದ್ದ ದುಃಖವನ್ನೂ ಅನುಭವಿಸುತ್ತೀಯೆ. ಸೂರ್ಯನೆಮುರಿಗೆ ಕಾಲಮೇಘದಂತೆ ಆಕಸ್ಮಿಕವಾದೀ ಮೋಹವು ನನಗೆ ಹ್ಯಾಗೆ ಬಂದಿರುವದು. ಬೆದರಿಕೆಯಿಂದುಂಟಾದ ಭೂತದಿಂ ಬಾಲಕನಂತೆ ಸಂಕೇತ ಸಿದ್ಧವಾದ ಭೋಗಗಳಿಂದಲೂ ಬಂಧುಗಳಿಂದಲೂ ನಾನು ದುಃಖಪಡುತ್ತಿರುವೆನು. ನನಗೆ ಇವರು ಯಾರು ಇವರಿಗೆ ನಾನು ಯಾರು ಇವರಿಗೂ ನನಗೂ ಸಂಬಂಧವೇನೆಂದಾಲೋಚಿಸುತ್ತಿದ್ದಾಗ್ಯೂ ಇವರಲ್ಲ ಜರಾಮರಣ ಭಯಚಿಂತೆಗಳಿಗೆ ಕಾರಣವಾದ ಸ್ಥಿತಿಯಂ ನಾನಾಗಿ ಪಡೆವಿರುವೆನು. ನೀರಿಗೆ ಗುಳ್ಳೆಗಳಂತೆಯೇ ಇವರು ನನಗೆ ಸಿದ್ಧರಾಗಿರುವರು. ಪ್ರಾಚೀನರಾದ ಆ ಮಹಾಪುರುಷರು ಆ ವಿಭವಗಳು ಆ ಭೋಗಗಳು ಆ ಸ್ನೇಹಿತರು ಆ ಬಾಂಧವರೂ ಕೂಡ ಸ್ಮರಿಸಲು ಯೋಗ್ಯರಾಗಿರುವಲ್ಲಿ ಈಗಿನ ಪದಾರ್ಥಗಳಂ ಹ್ಯಾಗೆ ನಂಬತಕ್ಕದ್ದು. ಆ ದೊರೆಗಳ ಧನಗಳು ಬ್ರಹ್ಮನ ಜಗತ್ತುಗಳು ಅನೇಕ ಸಹಸ್ರ ಬ್ರಹ್ಮರು ಅನೇಕ ಲಕ್ಷ ಇಂದ್ರರೂ ಕೂಡ ನೀರು ಗುಳ್ಳೆಗಳಂತೆಯೂ, ಭೂಮಿಯ ಧೂಳಿಗಳಂತೆಯೂ, ಹೋಗಿರುವಲ್ಲಿ ನನ್ನ ವಿಭವವು ಶಾಶ್ವತವೆಂತಲೂ, ಬಹುಕಾಲ ಬದುಕುವೆನೆಂತಲೂ, ಲೌಕಿಕ ವ್ಯಾಪಾರಗಳಲ್ಲಾಸಕ್ತನಾದ ನನ್ನಂ ನೋಡಿ ತಿಳಿದವರು ನಗುತ್ತಿರುವರು. ಸಂಸಾರವೆಂಬ ರಾತ್ರಿಯೊಳ್ ಮೋಹವೆಂಬ ನಿದ್ರೆಯಲ್ಲಿದು ಸ್ವಪ್ನದಂತೆ ಈ ದೇಹಭ್ರಮೆ ನನಗುಂಟಾಗಿರುವದು. ಇದಂ ನಂಬಿ ಇವನು

ಆವನು ನಾನೆಂದು ದುರಹಂಕಾರ ಪಿಶಾಚಾವೇಶದಿಂ ನಾನು ಭ್ರಮಿಸುತ್ತಿರುವೆನು. ನಿಮಿಷ ಕ್ಷಣ ಘಟಿಕಾ ಮುಹೂರ್ತ ರೂಪವಾದ ಸೂಕ್ಷ್ಮ ಕಾಲಗಳಿಂದಲೇ ಪ್ರಾಣಿಗಳ ಆಯುಸ್ಸು ತೊಡೆಯಲ್ಪಡುವುವು. ದೇವಾಧಿಪತಿಗಳೆಲ್ಲರನ್ನೂ ಕುಟ್ಟಿ ವಿಷ್ಣು ಶರೀರಗಳಂ ಚಂಡಾಡಿದ ರುದ್ರರೂ ಕೂಡ ಮಹಾ ಕಾಲನಿಂ ನುಂಗಲ್ಪಡುವರು. ಹೀಗಿರುವಲ್ಲಿ ಎಲೌ ಆಶೆಯೇ ನಿನಗೆ ಜೀವನದಲ್ಲಿ ನಂಬಿಕೆಯನ್ನುಂಟು ಮಾಡುತ್ತಾ ನೀನು ಕುಣಿಯುತ್ತೀಯೆ, ಬಂದ ಬಂದ ದಿವಸಗಳೆಲ್ಲವೂ ವ್ಯರ್ಥವಾಗಿ ಹೋದವಲ್ಲದೆ ಶಾಶ್ವತವಾದ ವಸ್ತುವಂ ತೋರುವ ದಿವಸವಾವುದೂ ನನಗೆ ಬರಲಿಲ್ಲ ಇವು ಸ್ಥಿರವೆಂತಲೂ, ಹಿತವೆಂತಲೂ, ನಂಬಿದ್ದ ವಸ್ತುಗಳೆಲ್ಲವೂ ನಷ್ಟವಾದ್ದರಿಂದ ದೃಶ್ಯವೆಲ್ಲವೂ ನಶ್ವರವೆಂದು ನಿಶ್ಚೈಸಿದಾಗ್ಯೂ ಸರೋವರದಲ್ಲಿ ಹಂಸಗಳಂತೆ ಮನದಲ್ಲಿ ಭೋಗಗಳು ತಿರುಗುತ್ತಿರುವುವಲ್ಲದೆ ವೈರಾಗ್ಯ ಉದಯಿಸಲಿಲ್ಲ. ಈ ಹೊತ್ತಿಗೆ ನಾಳೆ ಕೆಟ್ಟದ್ದೆಂದು ನಿಶ್ಚಿತವಾದಗ್ಯೂ, ಕಷ್ಟದಿಂ ಕಷ್ಟವು ದುಃಖದಿಂ ದುಃಖವೂ ಕೂಡ ತೆರೆಗಳಂತೆ ಬರುತ್ತಿದ್ದಾಗ್ಯೂ, ಮನವೆಂಬ ಹುತ್ತಕ್ಕೆ ಹಾವಾಗಿ ಶರೀರ ವೃಕ್ಷಕ್ಕೆ ಚಿಗುರುಗಳಾದ ಆಧಿವ್ಯಾಧಿಗಳು ತಡೆಯಲಶಕ್ಯವಾಗಿದ್ದಾಗ್ಯೂ ಚಾಪಲ್ಯ ದುಃಖಕರವಾದ ಭೋಗಾಪೇಕ್ಷೆಯೇ ಮರಳಿ ಮರಳಿ ಜನಗಳಂ ಮರುಳು ಮಾಡುತ್ತಿರುವದು. ಕ್ರೀಡೆಗೆ ಬಾಲ್ಯವು, ತರುಣಿಯರಿಗೆ ಯೌವನವು, ಚಿಂತೆಗಳಿಗೆ ವೃದ್ಧಾಪ್ಯವು ಸಹ ಕ್ಲಪ್ತವಾಗಿರುವದ್ದರಿಂದ ಸ್ವರೂಪ ವಿಚಾರಕ್ಕೆ ಯಾವ ಕಾಲ ಗೊತ್ತಾಗಿರುವದೋ ತಿಳಿಯಲಿಲ್ಲ. ರಾಜಸೂಯಾಶ್ವಮೇಧ ಮೊದಲಾದ ಯಜ್ಞ ಸಹಸ್ರವಂ ಮಾಡಿದರೂ ಮಹಾ ಕಲ್ಪಕ್ಕೆ ಕ್ಷಣಿಕ ವೆನಿಸುವ ಸ್ವರ್ಗವೇ ಬರುವುದು. ಅದಕ್ಕೂ ಬಿದರಿಗೆ ದುಂಬಿಗಳಂತೆ ಆಪತ್ತುಗಳೇ ಸಿದ್ಧವಾಗಿರುವವಾದ್ದರಿಂದ ನಿರ್ದುಃಖವಾದ ಸ್ಥಳವು ಮೂರು ಲೋಕಗಳಲ್ಲೂ ಕಾಣಿಸುವದಿಲ್ಲ. ಯಾವಾವದು ಸಾಧುವೆಂತಲೂ, ರಮ್ಯವೆಂತಲೂ, ಸುಖವೆಂತಲೂ ತಿಳಿಯಲ್ಪಡುವದೋ ಅದರ ತಲೆಯಮೇಲೆ ಅಸಾಧುತ್ವಾದಿ ದೋಷಗಳು ಸಿದ್ಧವಾಗಿರುವವು. ಆದ್ದರಿಂ ನಾನು ಯಾವದನ್ನಾಶ್ರಯಿಸಶಕ್ಯದ್ದು. ಹುಟ್ಟಿ ಸಾಯುವ ಪ್ರಾಣಿಗಳಿಂದಲೇ ಭೂಮಿ ತುಂಬಿರುವದ್ದರಿಂದ ಸಾಧುಗಳಂ ಹುಡುಕಬೇಕಾಗಿರುವದು. ಈ ಸಂಸಾರದೊಳ್ ಸಾರವೇನೆಂದು ವಿಚಾರಿಸುವಲ್ಲಿ ಸಂಪತ್ತುಗಳು ವಿಪತ್ತುಗಳಾಗಿಯೂ, ಮನೋಹರರಾದ ಸ್ತ್ರೀಯರು ಪ್ರಾಣಹರರಾಗಿಯೂ, ಭೋಗಗಳು ರೋಗಗಳಾಗಿಯೂ, ತೋರುವದ್ದರಿಂದ ಇದೆಲ್ಲವು ಮನೋ ಭ್ರಾಂತಿಯೆಂದು ಕಾಣುತ್ತಲಿದೆ. ಮನಸ್ಸಿನ ರೂಪಾಂತರದಂತಿರುವ ಈ ಪ್ರಪಂಚವು

ಜಲದಲ್ಲಿ ಬಿಂಬಿಸಿದ ಚಂದ್ರನಂತೆ ನಶ್ವರರಾಗಿರುವಲ್ಲಿ ಇದು ನನ್ನದೆಂಬ ಮಾತು ಹ್ಯಾಗೆ ಉಂಟಾಯಿತು? ಜಿಜ್ಜಡ ಸಂಬಂಧದೊಳ್ ಕಾಕ ತಾಳೀಯ ನ್ಯಾಯದಿಂದುಂಟಾದ ಈ ಜಗದಲ್ಲಿ ಗ್ರಾಹ್ಯವಿದು ತ್ಯಾಜ್ಯವಿದು ಎಂಬ ಭಾವನೆ ಈ ಕೆಟ್ಟ ಮನದಿಂದಲೇ ಸಿದ್ಧವಾಗಿರುವದು. ಇದು ಇಷ್ಟೇ ಸರಿಯೆಂದು ನಿಶ್ಚಯಿಸಲ್ಪಟ್ಟ ಲೋಕದೃಷ್ಟಿಗಳಲ್ಲಿ ಅಗ್ನಿಜ್ವಾಲೆಗಳೊಳ್ಪತಂಗದಂತೆ ನಾನು ಬಿದ್ದಿರುವೆನು. ಸಕಲ ದುಃಖ ಸಮುದ್ರವಾದ ಸಂಸಾರದೊಳ್ಬಿದ್ದಿರುವೀದೇಹದಲ್ಲಿ ಹ್ಯಾಗೆ ಸುಖವುಂಟಾಯಿತು. ಇದರಲ್ಲಿ ಬಿದ್ದಿರುವರಿಗೆ ದುಃಖವೇ ಸುಖವಾಗಿ ತೋರುತ್ತಿರುವದು. ಇದೇಪ್ರಕಾರವಾಗಿ ಅಧಮ ಜನರಿಂ ದುತ್ಕೃಷ್ಟನೆಂದು ಪೇಳಲ್ಪಡುವ ನಾನು ಇದುವರೆಗೆ ಕಾಷ್ಠ ಲೋಷ್ಠಗಳಿಗೆ ಸಮನಾಗಿದ್ದೆನು. ಶಾಸ್ತ್ರಗಳಂ ವಿಚಾರಿಸಿದ್ದಾಗ್ಯೂ ಅಜ್ಞಾನಿಗೆ ಸಮನಾಗಿದ್ದ ನಾನು ಈ ಸಿದ್ಧರ ಮಾತುಗಳಂ ಕೇಳಿದ್ದರಿಂದ ತತ್ವ ವಿಚಾರದಲ್ಲಾಸಕ್ತನಾದೆನು. ಅನೇಕ ಸಹಸ್ರ ಪ್ರಕಾರವಾಗಿ ಪೊರಮಟ್ಟಿರುವ ಈ ಸಂಸಾರ ವೃಕ್ಷಕ್ಕೆ ಮನವೇ ಮೂಲವಾಗಿರುವದು. ಅದು ಸಂಕಲ್ಪರೂಪವಾದ್ದರಿಂದ ಅಸಂಕಲ್ಪನ ಮಾರ್ಗದಿಂದಲೇ ಶಾಂತವಾಗತಕ್ಕದ್ದು. ಆದ್ದರಿಂದ ಮನೋ ವೃಕ್ಷವೆಲ್ಲವು ಒಣಗಿಹೋಗುವಂತೆ ಕಲ್ಪನಾತ್ಯಾಗದಿಂ ಮನಕ್ಕೆ ಶೋಷಯನ್ನುಂಟುಮಾಡುವೆನು. ಮನವೆಂಬ ಮರ್ಕಟನ ಚೇಷ್ಟೆಗಳೀಗ ತಿಳಿದದ್ದರಿಂದ ಆಕಾರ ಮಾತ್ರದಿಂ ರಮ್ಯವಾದ ಆ ವ್ಯಾಪಾರಗಳಲ್ಲಿ ನಾನು ಆಸಕ್ತನಾಗುವದಿಲ್ಲ. ಆಶಾ ಪಾಶಗಳಿಂ ನೇರಿಕೊಂಡು ಊರ್ಧ್ವಧೋಗತಿ ದುಃಖಗಳಿಗೆ ಸಾಧಕವಾದ ಸಂಸಾರ ದುಃಖ ವೃತ್ತಿಗಳಿಂ ಶ್ರಮಪಟ್ಟ ನಾನು ಈಗ ವಿಶ್ರಮಿಸಿಕೊಳ್ಳುವೆನು. ಆಹಾ ನಾನು ಕೆಟ್ಟೆನು, ನಷ್ಟನಾದೆನು, ಮೃತ ನಾದೆನೆಂದು ಹೋದ ಪದಾರ್ಥವಂ ಕುರಿತು ಇನ್ನು ಮೇಲೆ ನಾನು ರೋದನವಂ ಮಾಡೆನು. ಆತ್ಮನಂ ಪ್ರಕಾರಾಂತರದಿಂ ತೋರುತ್ತಾ ನನ್ನಂ ದುಃಖ ಪಡಿಸುತ್ತಿದ್ದ ಮನವೆಂಬ ಕಳ್ಳನಂ ಈಗ ಕೊಲ್ಲುವೆನು. ಮನವೆಂಬ ಮುಕ್ತಾಫಲಕ್ಕೀಗ ಛಿದ್ರವಾದ್ದರಿಂದ ಶಮಾದಿಗುಣಗಳಂ ಸೇರಿಸುವದಕ್ಕದು ಯೋಗ್ಯವಾಗಿರುವದು. ಮನವೆಂಬ ಮಂಜಿನ ಮಳೆಯು ವಿವೇಕ ಸೂರ್ಯನಿಂದೀಗ ಶುಷ್ಕವಾದ್ದರಿಂದ ವಿಚಾರ ಮಾರ್ಗದೊಳಾತ್ಮನೆಂಬ ಮಣಿಯಂ ಪಡೆದ ನಾನು ಸಮಸ್ತವಾದ ಆಶೆಗಳಂ ಬಿಟ್ಟು, ಶರತ್ಕಾಲದ ಮೇಘದಂತೆ ನಿರ್ಮಲನಾಗಿ ಸುಖದಿಂ ನಿಲ್ಲುವೆನು. ಎಲೈ ವಿವೇಕವೇ ನಿನಗೆ ನಮಸ್ಕಾರವಾಗಲಿ ಮನವೆಂಬ ಶತ್ರುವಂ ಕೊಂದು ನಾನಿಂಥಾವನು ಇದು ನನ್ನದೆಂಬ ಬುದ್ಧಿಯನ್ನೀಗ ಬಿಟ್ಟುಬಿಟ್ಟು ಉಪಶಾಂತಿಯಂ ಪೊಂದುವೆನು. ಎಂದು

ಜನಕರಾಯನು ಆಲೋಚಿಸುತ್ತಿರುವಲ್ಲಿ ದ್ವಾರಪಾಲನು ಬಂದು ವಿಜ್ಞಾಪಿಸಿದನದೆಂತೆನೆ,-ಭುಜಾಗ್ರದೊಳ್ ವಿಶ್ರಮಿಸಿಕೊಳ್ಳುವ ಭೂಮಿಯುಳ್ಳ ಮಹಾರಾಜನೇ ಕುಸುಮಕರ್ಪೂರ ಕುಂಕುಮೋದಕಗಳ ಕುಂಭಗಳಂ ಪಿಡಿದಿರುವ ಕುಂಭಸ್ತನಿಯರು ಸ್ನಾನಭೂಮಿಯಲ್ಲಿ ಸಿದ್ಧರಾಗಿರುವರು. ಕಮಲ ಕಲ್ಹಾರ ಪರಿಮಳದಿಂ ಬಂದ ತುಂಬಿಗಳಿಂ ತುಂಬಿರುವ ಸರೋವರದ ದಡಗಳು ಸ್ನಾನಕಾಲಕ್ಕೆ ಬರತಕ್ಕ ಅಧಿಕಾರಿಗಳ ಛತ್ರ ಚಾಮರ ವಾಹನಗಳಿಂ ತುಂಬಿರುವವು. ದೇವತಾಗೃಹವು ಗಂಧ ಪುಷ್ಪ ನೈವೇದ್ಯಾದಿ ಪದಾರ್ಥಗಳಿಂ ಪೂರ್ಣವಾದ ಪಾತ್ರೆಗಳಿಂ ಸಾಂದ್ರವಾಗಿರುವದು. ನಿತ್ಯ ನೈಮಿತ್ತಿಕ ದಾನ ಪಾತ್ರರಾದ ಬ್ರಾಹ್ಮಣರು ಪವಿತ್ರಪಾಣಿಗಳಾಗಿ ಸ್ವಾಮಿಯ ಆಗಮನವನ್ನೇ ಕಾದಿರುವರು. ಸರಸ ಶೀತಳವಾದ ಭೋಜನ ಭೂಮಿಗಳು ಚಾಮರಧಾರಿಗಳಾದ ತರುಣಿಯರಿಂದಾವರಿಸಲ್ಪಟ್ಟಿರುವವು. ಮಹಾತ್ಮರಾದವರು ಕಾಲಪ್ರಾಪ್ತವಾದ ಕರ್ಮವನ್ನತಿಕ್ರಮಿಸಲಾರರಾದ್ದರಿಂದ ಮಧ್ಯಾಹ್ನೋಚಿತವಾದ ರಾಚಾಚಾರಗಳಂ ನಡೆಸತಕ್ಕದ್ದು ಸ್ವಾಮಿಗೆ ಧರ್ಮವಾಗಿರುವದು. ಎಂದು ದ್ವಾರಪಾಲನು ವಿಜ್ಞಾಪನೆಯಂ ಮಾಡುತ್ತಿದ್ದರೂ ಆ ರಾಜೇಂದ್ರನು ಸಂಸಾರರೀತಿಯನ್ನೇ ಚಿಂತಿಸುತ್ತಿದ್ದನು. ಅದೆಂತೆನೆ,-ಸುಖಸ್ಥಿತಿಯೆನಿಸುವ ಈ ನನ್ನ ರಾಜ್ಯವೆಷ್ಟುಮಾತ್ರದ್ದು ಕ್ಷಣಭಂಗುರವಾದೀ ರಾಜ್ಯದಿಂದೆನಗೆ ಪ್ರಯೋಜನವೇನು ? ನನಗೆ ಅಸದ್ರೂಪವಾದ ಕರ್ಮಗಳಿಂ ಸಾಕಾಗಿರುವದು. ಮಾಯಾವಿಲಾಸ ರೂಪವಾದೀ ಭೋಗಗಳೆಲ್ಲವನ್ನೂ ಬಿಟ್ಟು ಶಾಂತವಾದ ಸಮುದ್ರದಂತೆ ಏಕಾಂತದಲ್ಲೇ ಇರುವೆನು. ಎಲೈ ಚಿತ್ತವೇ ಜರಾಮರಣ ಜನ್ಮ ದುಃಖಗಳ ಶಾಂತಿಗೋಸುಗ ಭೋಗ ಸುಖ ಗ್ರಹಣ ಚಾತುರ್ಯವಂ ಸಾಕುಮಾಡು. ಯಾವ ದೆಶೆಗಳಲ್ಲಿ ನೀನು ಸುಖವನ್ನೆಣಿಸುತ್ತೀಯೋ ಅವುಗಳಲ್ಲೇ ನಿನಗೆ ದುಃಖವುಂಟಾಗುವದು. ಮರಳಿ ಮರಳಿ ಎಷ್ಟಾವೃತ್ತಿ ಪ್ರವರ್ತಿಸಿದರೂ ನಿನಗೆ ತೃಪ್ತಿಯಾಗಲಿಲ್ಲ, ಆದ್ದರಿಂದೀ ಭೋಗಚಿಂತೆಯಂ ತ್ಯಜಿಸಿ ಯಾತರಿಂದ ಅಖಂಡ ತೃಪ್ತಿಯಾಗುವದೋ ಅದಂ ಭಜಿಸೆಂದು ಅಂತರಂಗದಲ್ಲೇ ನುಡಿಯುತ್ತಾ ಮೌನವಂ ವಹಿಸಿ ಚಿತ್ರಲಿಖಿತ ಪ್ರತಿಮೆಯಂತಿದ್ದನು. ಸಮಯಾಸಮಯಗಳಂ ತಿಳಿದ ಆ ದ್ವಾರಪಾಲಕನು ಆ ರೀತಿಯಂ ನೋಡಿ ಭಯಗೌರವಗಳಿಂ ನಿಯಂತ್ರಿತನಾಗಿ ತಿರುಗಿ ಏನೂ ಪೇಳದೆ ಸುಮ್ಮನಿದ್ದನು. ಆ ಪರಿಯಿಂ ಒಂದು ಕ್ಷಣವಿದ್ದ ಆ ರಾಜನು ಕರ್ಮಾಸಕ್ತಿಯಿಂದಲಾಗಲೀ ಕರ್ಮತ್ಯಾಗದಿಂದಲಾಗಲೀ ಆಗತಕ್ಕದ್ದೇನು ? ಪುಟ್ಟಿದ್ದೆಲ್ಲವೂ ನಶ್ವರವಾಗಿಯೇ ಇರುವದು. ಕರ್ಮದಿಂದಲೂ, ಕರ್ಮತ್ಯಾಗದಿಂದಲೂ, ಯಾವದು ಪ್ರಾಪ್ತವಾಗುವದೋ ಅದು ಅಸ

ಸ್ಯವೆನಿಸುವದು. ಕ್ರಿಯೆಯೆಂಬುವನು ದೇಹದಲ್ಲಿ ಕಾಣುವದಲ್ಲದೆ ಆತ್ಮನಲ್ಲಿ ಕಾಣುವದಿಲ್ಲ. ಆತ್ಮನು ಸ್ವಭಾವದಿಂದಲೇ ಪ್ರೇರಕನಾದಾಗ್ಯೂ ಅಭಿಮಾನದಿಂದಲೇ ದುಃಖಪಡುತ್ತಿರುವನು. ಆ ದೋಷವಂಬಿಟ್ಟು ಸಮಭಾವದಿಂ ಶುದ್ಧನಾಗಿರುವ ಆತ್ಮನಿಗೆ ಕರ್ಮ ನಡದದ್ದರಿಂದಲೂ ಇಲ್ಲದ್ದರಿಂದಲೂ ಹಾನಿ ಇಲ್ಲದಿರುವದು. ಕರ್ಮಸಂಬಂಧಕ್ಕೆ ಇಚ್ಛೆಯೇ ಕಾರಣವಾದ್ದರಿಂದ ನಿಷ್ಕಾಮನಾಗಿ ಕರ್ಮವಂನಡಸುವನಿಗೆ ಅದರ ಸಂಬಂಧವಾಗಲಾರದು. ಬಂದದ್ದಂಬಿಡದೆ ಬಾರದ್ದನ್ನಪೇಕ್ಷಿಸದೆ ಸ್ವಸ್ವರೂಪದಲ್ಲಿ ನಿಂತಿರುವ ನನಗೆ ಯಾವದು ಇರುವದೋ ಅದೇ ಇರಲಿ ಸ್ವತಃ ಪರಿಪೂರ್ಣನಾದ್ದರಿಂದ ಅಪೇಕ್ಷೆಯಿಲ್ಲದ ಆತ್ಮನಿಗೆ ಗ್ರಾಹ್ಯಾಗ್ರಾಹ್ಯಗಳಿಲ್ಲದಿದ್ದಾಗ್ಯೂ ಪ್ರಾಜ್ಞರು ಕರ್ಮವಂ ಬಿಡಲಾರರಾದ್ದರಿಂದ ಪ್ರಕೃತೋಚಿತವಾದ ಕರ್ಮವಂ ಮಾಡುವೆನು. ಮನವು ನಿಷ್ಕಾಮವಾಗಿರುವಲ್ಲಿ ಶರೀರ ಚಲನ ಮಾತ್ರದಿಂದೇನಾದೀತು? ಕರ್ತೃವೆಂತಲೂ ಭೋಕ್ತೃವೆಂತಲೂ, ಅಭಿಮಾನಿಸುವಮನವು ಶಾಂತವಾಗಿರುವಲ್ಲಿ ಕರ್ಮದಿಂದುಂಟಾದಫಲವು ಸಂಬಂಧಿಸಲಾರದು. ಕರ್ಮಗಳಲ್ಲಿ ಪುರುಷನಿಗೆ ಹ್ಯಾಗೆ ನಿಶ್ಚಯವಿರುವದೋ ಹಾಗೆ ಕರ್ಮಾನುಬಂಧ ಮೊದಲಾದದ್ದಾಗುವದು. ಪುರುಷನು ತನ್ನ ನಿಶ್ಚಯಾನುಸಾರವಾಗಿಯೇ ಅದನ್ನನುಭವಿಸುವನು. ಈಗ ನನ್ನಬುದ್ಧಿಯು ಕರ್ತೃತ್ವ ಭೋಕ್ತೃತ್ವ ಮೊದಲಾದ ಜಾಡ್ಯಗಳಿಲ್ಲದ ಪರಮಪದದೊಳ್ ನಿಂದಿರುವದ್ದರಿಂದ ಸೂರ್ಯನಂತೆ ಸಾಕ್ಷಿಭಾವದಿಂದಲೇ ನಾನು ಕರ್ಮಗಳಂ ನಡೆಸುವೆನೆಂದು ನಿಶ್ಚೈಸಿ ಕುಳಿತಿದ್ದ ಸ್ಥಳದಿಂದೆದ್ದು ಇಷ್ಟಾನಿಷ್ಟವಾಸನಗಳಿಲ್ಲದೆ ಪ್ರಕೃತೋಚಿತವಾದ ಕರ್ಮಗಳಂ ನಡೆಸಿದನು. ಹೀಗೆ ದಿವಸ ವ್ಯಾಪಾರಗಳನ್ನೆರವೇರಿಸಿದ ಆ ಮಹಾನುಭಾವನು ಆ ವಿಚಾರದಿಂದಲೇ ರಾತ್ರಿಯನ್ನು ಕಳೆದು ಬೆಳಗಿನ ಜಾವದೊಳ್ಮನವಂ ಬೋಧಿಸಿದನದೆಂತೆನೆ,–ಎಲೈ ಮನವೇ ಇಷ್ಟವೆಂತಲೂ, ಅನಿಷ್ಟವೆಂತಲೂ, ಸುಖನೆಂತಲೂ, ದುಃಖವೆಂತಲೂ, ಒಳ್ಳೆಯದೆಂತಲೂ, ಕೆಟ್ಟದ್ದೆಂತಲೂ, ಭೇದವಂಕಲ್ಪಿಸಿಕೊಂಡು ಹ್ಯಾಗೆ ಹ್ಯಾಗೆ ನೀನು ಸಂಕಲ್ಪಿಸುವೆಯೋ ಹಾಗೆ ಹಾಗೆ ಸಂಸಾರವುಂಟಾಗುವದು. ಅದರ ಚಿಂತೆಯಿಂ ಜಲದಿಂವೃಕ್ಷದಂತೆ ಆಸಂಸಾರವು ವೃದ್ಧಿಹೊಂದುವದು. ಬಳಿಕ ಫಲರೂಪವಾದ ಭೋಗಗಳಪೇಕ್ಷೆಯಿಂದ ನಿನಗೆ ವ್ಯಥೆಗಳುಂಟಾಗುವವು. ಆದ್ದರಿಂದ ನೀನು ಶಾಂತವಾಗುವದೇ ಉತ್ತಮವು. ಅಥವಾ ನಿನಗೆ ಸಂಸಾರದಲ್ಲೇ ಆಸಕ್ತಿಯಿದ್ದರೆ ಇದರಲ್ಲಿ ಯಾವಯಾವದು ನಿನಗೆ ಸುಖನೆಂದು ತೋರುವದೋ ವಿವೇಕದಿಂದದರಗುಣದೋಷಗಳಂ ವಿಚಾರಿಸಿ ಗುಣಗಳನ್ನೇ ಪರಿಗ್ರಹಿಸುವಲ್ಲಿ ಅದೇ ನಿನಗೆ ನಿಸ್ಸಾರವೆಂದು

ನಿಶ್ಚಯವಾಗುವದು. ಸಮಸ್ತವೂ ಹೀಗೆ ಇರುವದರಿಂದಿವರಲ್ಲಿ ನೀನು ದೃಷ್ಟಿಯ ನ್ನಿಡಬೇಡ ಅಥವಾ ಇದನ್ನಭಿಮಾನಿಸದೆ ಸ್ವೇಚ್ಛೆಯಿಂ ವಿಹರಿಸುತ್ತಿರು. ಪೂರ್ವದ ಲ್ಲಿಲ್ಲದ ಈ ದೃಶ್ಯವು ನಿನ್ನಿಂದಲೇ ಉಂಟಾಗಿ ನಿನ್ನನ್ನೇ ದುಃಖಪಡಿಸುವದರಿಂದ ಇದರ ಗುಣದೊಳಗಿಲ್ಲ ಬೆಳೆಯುದೆ ಇದು ಹಾಳಾಗುತ್ತಿದ್ದರೂ ನೋಡದಿರು. ನಿನ್ನಿಂ ದುಂಟಾದುದಂ ನೀನು ನೋಡದಿರುವದು ಹ್ಯಾಗೆಂದರೆ,- ಪ್ರಿಯವೆಂದಭಿಮಾನಿಸದೆ ದುಷ್ಟವೆಂದು ದ್ವೇಷಿಸದೆ ಸಾಕ್ಷಿಭಾವದಿಂ ನೋಡುತ್ತಿರು. ಭ್ರಾಂತಿಸಿದ್ಧ ವಾದ ಈ ದೃಶ್ಯವು ವಸ್ತುತಃ ಇಲ್ಲದ್ದರಿಂದ ಇದಕ್ಕೂ ನಿನಗೂ ಸಂಬಂಧವೇನು? ದೃಶ್ಯವು ಸತ್ಯವಾಗುವಲ್ಲಿ ನಾನು ಸತ್ಯ, ದೃಶ್ಯವಸತ್ಯವಾಗುವಲ್ಲಿ ನಾನು ಅಸತ್ಯ ನನಗೆ ಸತ್ಯಸಾಮ್ಯದಿಂ ಸಂಬಂಧವಾಗಿರುವದೆಂಬ ಈ ಮಾತೆ ಅಪೂರ್ವವಾಗಿರುವದು. ನಾನು ಸತ್ಯ ಈ ದೃಶ್ಯವಸತ್ಯವೆಂದಾದರೆ ಮರ್ತ್ಯಜೀವ ಸ್ವರೂಪರಾದ ನಿಮಗೆ ಸಂಬಂಧವೆಂತು ಯೋಗ್ಯವಾದೀತು, ನಾನು ಸತ್ಯ ಈ ದೃಶ್ಯವೂ ಸತ್ಯವೆಂಬ ಪಕ್ಷದಲ್ಲಿ ದೃಶ್ಯವು ಸರ್ವದಾ ಇರತಕ್ಕದ್ದಾದ್ದರಿಂದ ಅದರ ನಾಶೋದಯಗಳಿಂ ನೀನು ದುಃಖ ಹರ್ಷಗಳಂ ಪಡೆಯುವದಕ್ಕೆ ಕಾರಣವಿಲ್ಲ. ಕೊಳ್ಳಿಯ ಚಕ್ರದಂತೀದೃಶ್ಯವು ತಾನೇ ಪ್ರಕಾಶಿಸುವದಾದರೆ ಅದರ ಮೋಹದಿಂ ನೀನು ಮೂಢನಾಗಬೇಡ. ಈ ದೃಶ್ಯಕ್ಕೆ ಪೂರ್ಣಭಾವವಂ ಕೊಡುವ ಶಕ್ತಿಯಿಲ್ಲದ್ದರಿಂದ ಇದಕ್ಕೆ ನೀನು ಚಪಲಪ ಡದೆ ಧೈರ್ಯವಂ ಪಡೆಯತಕ್ಕದ್ದು ಎಂದು ಚಿತ್ತವಂ ಬೋಧಿಸುತ ವಿಚಾರಪರನಾ ಗಿದ್ದ ಆ ಮಹಾತ್ಮನು ಲೋಕಾನುಸಾರವಾಗಿ ಸಕಲಕಾರ್ಯಗಳಂ ಮಾಡುತ್ತಿದ್ದ ನು. ವಿವೇಕ ವಿಚಾರಾಭ್ಯಾಸ ಬಲದಿಂದವನ ಬುದ್ಧಿಯು ಕಾರ್ಯಗಳಲ್ಲಾಸಕ್ತ ವಾಗಿದ್ದರೂ ಆತ್ಮನಿಷ್ಠನಾದ್ದರಿಂ ಸ್ಥಿರವಾಗಿದ್ದುದು. ಸ್ಥೂಲಸೂಕ್ಷ್ಮಶರೀರಾಭಿ ಮಾನವಿಲ್ಲದ್ದರಿಂದವನಮನವು ಶೋಕಸಂತೋಷ ಕಾಲಗಳಲ್ಲಿ ಸಂಕೋಚವಿಕಾಸ ಗಳಿಲ್ಲದೆ ಸುಪ್ರಸನ್ನದಾತಿದ್ದುದು. ಅದು ಮೊದಲಾಗಿ ಆ ರಾಜರ್ಷಿಯು ಇಷ್ಟವೆಂ ದಭಿಮಾನಿಸದೆ ಅನಿಷ್ಟವೆಂದು ತ್ಯಜಿಸದೆ ಸರ್ವವಿಷಯಗಳಲ್ಲೂ ಸಾಕ್ಷಿಭಾವದಿಂದಿ ದ್ದನು. ಆಕಾಶದಲ್ಲಿ ಧೂಳಿಯಂತೆ ಅವನಲ್ಲಿ ರಾಗಾದಿಗಳ ಪ್ರಸಕ್ತಿಯಾಗಲಿಲ್ಲ ಅಸಂಭೇದಜ್ಞಾನವಿಲ್ಲದ ಆ ಮಹಾತ್ಮನ ಹೃದಯದೊಳ್ ಅಖಂಡಪ್ರಕಾಶನಾಗ ಜ್ಞಾನಸೂರ್ಯನು ಪ್ರಕಾಶಿಸಿದನು. ಆಗ ಅವನಿಗೆ ಯಾವಪದಾರ್ಥವೂ ಗೋಚರ ವಾಗಲಿಲ್ಲ. ಇಂತು ಸಮವೃತ್ತಿಯಿಂ ಸಕಲಕಾರ್ಯಗಳಂ ನೆರವೇರಿಸುತ್ತಾ ಕಾಣ್ಬ ರುವದೆಲ್ಲವೂ ನಿಲ್ಲತಕ್ಕದ್ದಲ್ಲವೆಂತಲೂ, ಮರಳಿ ಬಾರದೇಯಿರತಕ್ಕದ್ದಲ್ಲವೆಂತಲೂ, ನಿಶ್ಚಯಜ್ಞಾನದಿಂ ಲಾಭಾಲಾಭಗಳಲ್ಲಿ ಹರ್ಷಶೋಕಗಳಿಗೆ ಒಳಗಾಗದೆ ಜೀವನ್ಮು

ಕ್ತನೆಂತಲೂ, ಜ್ಞಾನವೃದ್ಧನೆಂತಲೂ, ಪ್ರಸಿದ್ಧನಾಗಿ ರಾಜ್ಯಭಾರವಂ ಮಾಡುತ್ತಿದ್ದನು. ಕರ್ಮಗಳಲ್ಲೂ, ಅದರ ಫಲಗಳಲ್ಲೂ, ಅಭಿಮಾನವಿಲ್ಲದ್ದರಿಂದ ಅವುಗಳ ಸಂಬಂಧವಿಲ್ಲದ ಆ ಮುಮುಕ್ಷುರಾಜನು ಕರ್ತೃತ್ವಭೋಕ್ತೃತ್ವಗಳಿಗೆ ಆಸ್ಪದನೆನಿಸಿಕೊಳ್ಳಲಿಲ್ಲ. ಅದರಿಂ ಸರ್ವಕಾಲದಲ್ಲೂ ಸುಷುಪ್ತನಂತಿದ್ದ ಆ ರಾಜರ್ಷಿಗೆ ರಾಗಾದಿವಾಸನೆಗಳು ಪ್ರಕೃತಿಯುಚಿತವಾದ ಪದಾರ್ಥ ಭಾವನೆಗಳೊಡನೆ ಸೂರ್ಯನಿಗೆ ಕಿರಣಗಳಂತೆ ಆತ್ಮನಿಗೆ ಅಭಿನ್ನವಾಗಿಯೇ ಇದ್ದವು. ಭೂತ ಭವಿಷ್ಯದ್ವರ್ತಮಾನ ಜ್ಞಾನವಿದ್ದಾಗ್ಯೂ ಅವನು ವರ್ತಮಾನದಲ್ಲಿ ದೃಷ್ಟಿಯನ್ನಿಟ್ಟು ಆತ್ಮಾಭೇದಭಾವನೆಯಿಂದಲೇ ಕಾರ್ಯಗಳಂ ಮಾಡುತ್ತಿದ್ದನು. ಇಂತು ಸ್ವವಿಚಾರದಿಂದಲೇ ಆ ರಾಜೇಂದ್ರನು ಪಡೆಯತಕ್ಕದ್ದಂ ಪಡೆದು ಕೃತಕೃತ್ಯನಾದನು. ಅವನಂತೆ ನೀನು ಸಮಸ್ತವಾದ ಆಶೆಯಂ ಬಿಟ್ಟು ವಿಚಾರಪರನಾಗಿದ್ದರೆ ಕೃತಾರ್ಥನಾಗುತ್ತೀಯೆ. ಯಾವಯಾವನು ಸಿದ್ಧನಾಗುವದೋ ಅದೆಲ್ಲವನ್ನೂ ಕೊನೆಮುಟ್ಟುವ ಪರ್ಯಂತವಾಗಿ ವಿಚಾರಿಸುವನಿಗೆ ಸರ್ವವೂ ಬ್ರಹ್ಮವೆಂಬ ಸಿದ್ಧಾಂತವು ತಾನಾಗಿ ಗೋಚರವಾಗುವದು. ಈ ಅರ್ಥವು ಸತ್ಸಂಗದಿಂದುಂಟಾದ ವಿಚಾರದಿಂದಲೇ ಆಗಬೇಕಲ್ಲದೆ ಗುರೂಪದೇಶಮಾತ್ರದಿಂದಲೂ, ಶಾಸ್ತ್ರಾಭ್ಯಾಸದಿಂದಲೂ, ಸ್ನಾನ ದಾನ ತಪೋಯಜ್ಞ ಮೊದಲಾದ ಪುಣ್ಯಕರ್ಮಗಳಿಂದಲೂ ಆಗತಕ್ಕದ್ದಲ್ಲ. ಆದಾಗ್ಯೂ ಗುರೂಪದೇಶ ಮೊದಲಾದ್ದು ಮಾರ್ಗವಂ ತೋರುವದಾದ್ದರಿಂದ ಅದಕ್ಕೆ ಪ್ರತಿಷ್ಠೆಯುಂಟಾಗಿರುವದು. ಪ್ರವಾಹದಂತೆ ಮುಂಭಾಗದಲ್ಲೇ ಬೀಳುತ್ತಿರುವ ಅಂತಃಕರಣಾದಿಗಳಿಗೆ ಎದುರು ಪ್ರವಾಹದಂತೆ ಗುರೂಪದೇಶಾದಿಗಳು ಮುಂಭಾಗದ ವೇಗವಂ ತಡೆಯುವದಕ್ಕೂ ಹಿಮ್ಮೆಟ್ಟಿಸುವದಕ್ಕೂ ಕಾರಣವಾಗುವದು. ಯಾವನಿಗೆ ಶಾಸ್ತ್ರಗಳಲ್ಲಿ ಪೂರ್ವಾಪರವಿಚಾರ ಸಮರ್ಥವಾದ ಬುದ್ಧಿಪ್ರಕಾಶವುಂಟಾಗುವದೋ ಅವನಿಗೆ ದೀಪದಿಂದಂಧಕಾರದಂತೆ ಜಾಡ್ಯವು ಹೋಗುವದು. ದುಸ್ತರವಾದ ಆಪತ್ತೆಂಬ ಸಮುದ್ರಗಳು ಪ್ರಜ್ಞೆಯೆಂಬ ನಾವೆಯಿಂ ದಾಟಲ್ಪಡುವವು. ಪ್ರಜ್ಞೆಯಿಲ್ಲದವನು ಬಿರುಗಾಳಿಯಿಂ ತೃಣಕಣದಂತೆ ಸ್ವಲ್ಪವಾದ ದುಃಖದಿಂದಲೂ ಹಾರಿಸಲ್ಪಡುವನು. ಸಂಸಾರವೆಂಬುವದು ಅಜ್ಞಾನವಾದ್ದರಿಂದಲೂ, ಅದಕ್ಕೆ ಜ್ಞಾನವೇ ನಾಶಕವಾದ್ದರಿಂದಲೂ, ಜ್ಞಾನದಿಂದಲೇ ಮೋಕ್ಷವೆಂದು ಪ್ರಸಿದ್ಧವಾಗಿರುವದು. ಜ್ಞಾನಸಾಧನವಾದ್ದರಿಂದ ಗುರೂಪದೇಶಾದಿಗಳು ಗ್ರಾಹ್ಯವಾಗಿರುವವು. ಜ್ಞಾನವಿಲ್ಲದವನು ಪರಿಪಕ್ವತೆಯಿಲ್ಲದ ಕಾರ್ಯವಂ ಹಿಡಿದರೂ ಅದು ನೆರವೇರದಾಗಲೇ ಭಗ್ನವಾಗುವದಾದ್ದರಿಂದ ಫಲಾಪೇಕ್ಷೆಯುಳ್ಳವನು ನೀರು ಹಾಕುವದೇ ಮೊದಲಾದ ಕಾರ್ಯಗಳಂ

ಲತೆಯಂ ಬೆಳಸುವಂತೆ ಸತ್ಸಂಗ ಶಾಸ್ತ್ರಾಭ್ಯಾಸಾದಿಗಳಿಂದ ಮೊದಲು ಪ್ರಜ್ಞೆಯನ್ನೇ ಬೆಳಸಬೇಕು. ಸೂರ್ಯಪ್ರಭೆಯನ್ನು ಹೊಂದಿದ ಚಂದ್ರಬಿಂಬವು ಬೆಳ್ದಿಂಗಳಂತೆ ಸತ್ಸಂಗಾದಿಗಳಿಂ ವೃದ್ಧಿಯಾದ ಪ್ರಜ್ಞಾವೃಕ್ಷದಿಂ ಪರಮಾನಂದ ಫಲವುಂಟಾಗುವದು. ಭೋಗಪದಾರ್ಥದಂತೆ ಪ್ರಜ್ಞೆಯು ಬೆಳಸಲ್ಪಟ್ಟರೆ ಸರ್ವದುಃಖಗಳಿಗೂ ಮುಖ್ಯವಾಗಿ ಆಪತ್ತುಗಳಿಗೆ ಬೊಕ್ಕಸವಾಗಿ ಸಂಸಾರವೃಕ್ಷಕ್ಕೆ ಮೂಲವಾಗಿರುವ ಅಜ್ಞಾನವಂ ಹೋಗಲಾಡಿಸುವದು. ಲೋಕಗಳಲ್ಲಿ ಯಾವ ಯಾವ ಶುಭಫಲವುಂಟಾಗುವದೋ ಅವೆಲ್ಲಕ್ಕೂ ಈ ಪ್ರಜ್ಞೆಯೇ ಕಾರಣವಾದ್ದರಿಂದ ಇದಂ ಚಿಂತಾಮಣಿಯೆಂದು ಹೇಳುವರು. ಐಶ್ವರ್ಯ ಮೊದಲಾದ ಇಲ್ಲಿಯ ಸುಖವು ಸಾಧಾರಣ ಜನರಿಂದಲೂ ಸಾಧಿಸಲ್ಪಡುವದು. ಸ್ವರ್ಗ ಮೋಕ್ಷಗಳು ಸಮರ್ಥರಿಗೆ ಸಿದ್ಧವಾಗುವುವಲ್ಲದೆ ಇತರರಿಗೆ ಆಗಲಾರವು. ಪ್ರಜ್ಞೆಯಿದ್ದವನು ದುರ್ಬಲನಾದರೂ ಬಲಿಷ್ಠನಂ ಜಯಿಸುವನು. ಪ್ರಜ್ಞೆಯಿಲ್ಲದವನಿಗೆ ನಾವೆ ಸಿಕ್ಕಿದರೂ ನದಿಯಂ ದಾಟಲಾರನು. ವಜ್ರಕವಚವಂ ಧರಿಸಿರುವವನನ್ನು ಬಾಣಗಳಂತೆ ಪ್ರಜ್ಞಾಶಾಲಿಗಳನ್ನು ಆಶಾಮೋಹಗಳು ವೇಧಿಸಲಾರವು. ಮೂಢನಿಗೆ ಆಸಕ್ತನಂತೆ ಪ್ರಾಜ್ಞನಿಗೆ ಸಂಸಕ್ತಿ ಬಾರದು. ಅಖಂಡಜ್ಞಾನಿಗೆ ಅಹಂಕಾರಾವರಣವಿಲ್ಲದ್ದರಿಂದ ಬೆದರಿಕೆ ಬರಲಾರದು. ಆದ್ದರಿಂದ ಪ್ರಜ್ಞೆಯಿದ್ದವನು ಭೂಮಿಯಿದ್ದವನಂತೆ ಸಮಸ್ತಫಲವನ್ನು ಪಡೆಯುವನೆಂದು ನಿಶ್ಚಯಿಸುವನಾಗು. ಎಲೈ ರಘುಕುಲಚಂದ್ರನೆ! ಕಡೆಯ ಜನ್ಮವುಳ್ಳ ರಾಜಸ ಸಾತ್ವಿಕರೇ ಹೀಗೆ. ಜನಕರಾಯನಂತೆ ವಿವೇಕವಂ ಪಡೆದು ವಿಚಾರಬಲದಿಂ ಕೃತಾರ್ಥರಾಗುವರು. ಯಾವವರಿಗೆ ಆತ್ಮನು ತನ್ನಂ ತಾನೇ ವಿಚಾರಿಸುತ್ತ ಪ್ರಸನ್ನನಾಗಿ ತನ್ನಲ್ಲೇ ನಿಲ್ಲುವನೋ ಆವವರಿಗೆ ಅಂತಃಕರಣಾದಿ ಶತ್ರುಗಳಂ ಜಯಿಸುತ್ತಿರಬೇಕು. ನೀಚೋತ್ತಮ ಸ್ವರೂಪಗಳಿಂ ಪರಾವರನೆಂದು ಪ್ರಸಿದ್ಧನಾಗಿ ದೇವತೆಗಳಿಗೂ ದೇವನಾಗಿರುವ ಆತ್ಮನು ಪ್ರಸನ್ನನಾಗಿ ಅನುಭವದೃಷ್ಟಿಗೆ ಗೋಚರವಾಗುವಲ್ಲಿ ಮೋಹ ಬೀಜದ ವೃಷ್ಟಿಗಳಂತಲೂ, ಆಪತ್ತುಗಳ ವೃಷ್ಟಿಗಳಂತಲೂ, ದುಃಖದ ವೃಷ್ಟಿಗಳಂತಲೂ, ವ್ಯಸನಗಳ ಸಮಷ್ಟಿಗಳಂತಲೂ, ಪ್ರತ್ಯಕ್ಷವಾದ ದುರ್ದೃಷ್ಟಿಗಳು ನಷ್ಟವಾಗುವವು. ಸಂಕಲ್ಪ ವಿಕಲ್ಪ ಸಂಶಯ ನಿಶ್ಚಯ ಅಹಂತಾಮಮತಾದಿ ಸ್ವರೂಪವಾದ ಹೃದಯಗ್ರಂಥಿಗಳು ಭಗ್ನವಾಗುವವು. ಅಂತರ್ವಿಚಾರಪರನಾಗಿ ಬಾಹ್ಯಕಾರ್ಯಗಳಂ ಮಾಡುವವನಿಗೆ ಕೆಲವು ಕಾಲದಲ್ಲೇ ಆತ್ಮನು ಪ್ರಸನ್ನನಾಗುವನು. ಈ ಆತ್ಮಪ್ರಸಾದವಂ ಸಂಪಾದಿಸುವದಕ್ಕೆ ಸ್ವಪ್ರಯತ್ನವೇ ಮುಖ್ಯಕಾರಣವಾದ್ದರಿಂದ ಮೂಢಸ್ವಭಾವಕ್ಕೆ ಆಧಾರವಾ

ಗಿರುವ ದ್ವೈತಕಥೆಯುಂಬಿಟ್ಟು ದೃಢವಾಗಿ ವಿವೇಕವಂ ಪಿಡಿಯುವನಾಗು. ಸಂಸಾರವಂ ದಾಟಲಿಚ್ಛಿಸುವವರಿಗೆ ಸ್ವಪ್ರಯತ್ನಸಾಧ್ಯವಾದ ವಿಚಾರವೇಗತಿಯಲ್ಲದೆ ಅದೃಷ್ಟವಾಗಲೀ, ಧನವಾಗಲೀ, ಕರ್ಮವಾಗಲೀ, ಬಂಧುವರ್ಗವಾಗಲೀ ಯಾವದೂ ಗತಿಯಾಗಲಾರದು. ಆದ್ದರಿಂದ ವಿಚಾರವನ್ನೇ ನೀನು ಮುಖ್ಯವಾಗಿ ಪರಿಗ್ರಹಿಸುವನಾಗು. ವಿಚಾರದಿಂ ಸ್ವರೂಪವಿದಿತವಾಗಲು ದೇಹಾಭಿಮಾನವುಳ್ಳ ಈ ಆತ್ಮನೇ ಪ್ರಾತಃಕಾಲದ ಕಮಲದಂತೆ ವಿಕಾಸವಂ ಪಡೆವನು. ಬಿಸಿಲಿನಿಂ ಹಿಮದಂತೆ ಸಂಸಾರವಂ ಭಾವಿಸುವ ಚಿತ್ತವು ವಿಚಾರದಿಂ ಲಯವಂ ಪೊಂದುವದು. ಅಂತಃಕರಣಾದಿಯಾಗಿ ದೇಹಾಂತವಾದಪದಾರ್ಥಗಳಲ್ಲಿ ಇದೇ ನಾನೆಂಬ ಜಡಾತ್ಮಜ್ಞಾನವಳಿಯಲು ಅಖಂಡಜ್ಞಾನ ಪ್ರಕಾಶವಾಗಿ ಸರ್ವವ್ಯಾಪಕವಾಗಿರುವ ಸ್ವರೂಪವು ಮೇಘಾವರಣವಿಲ್ಲದ ಸೂರ್ಯನಂತೆ ಪ್ರಕಾಶಿಸುವದು. ನಾನೆಂಬ ಪದವು ಅಹಂಕಾರಕ್ಕೂ ಅದಕ್ಕೆ ಸಾಕ್ಷಿಯಾದ ಆತ್ಮನಿಗೂ ಬೋಧಕವಾಗಿರುವದು. ಸರ್ವವೂ ನಾನೆಂಬುವಲ್ಲಿ ಆತ್ಮನಿಗೆ ಬೋಧಕವಾದ ನಾನೆಂಬ ಪದವು ಅಖಂಡಭಾವವಂ ಬೋಧಿಸುವದು. ಜಡಪದಾರ್ಥದಲ್ಲಿ ನಾನೆಂಬುವದರಿಂದುಂಟಾದ ನಾನೆಂಬಪದವು ಮಮಕಾರವಿಶಿಷ್ಟವಾದ ಅಹಂಕಾರಕ್ಕೆ ಬೋಧಕವಾಗುವದಾದ್ದರಿಂದ ಅಖಂಡಾರ್ಥವಂ ಬೋಧಿಸಲಾರದು. ವಿವೇಕ ವಿಚಾರಕಾಲದಲ್ಲಿ ಅಖಂಡಾರ್ಥವಂ ತಿಳಿದವರು ನಾನೂ ಇಲ್ಲ, ನನ್ನದೂ ಇಲ್ಲವೆಂದು ನುಡಿವರು. ಆತ್ಮನೇ ಇಲ್ಲವೆಂಬ ಅರ್ಥದಿಂ ಶೂನ್ಯವಾವಾದ ಬಂದೀತೆಂಬ ತಾತ್ಪರ್ಯದಿಂ ನಾನಿಲ್ಲವೆಂಬುವದೇ ಇಲ್ಲವೆಂದು ಕೆಲವರು ಪೇಳುವರು. ಇದರಿಂದ ಅಸ್ತಿ ನಾಸ್ತಿಯೆಂಬ ಎರಡು ಪದಗಳಿಗೂ ನಾನೆಂಬುವದು ವಿಷಯವಾಗುವದು. ವಿಚಾರಾವಿಚಾರಗಳಲ್ಲಿ ಆತ್ಮನು ನಾನೆಂಬ ಪದಕ್ಕೆ ಸಾಕ್ಷಿಯಾಗಿದ್ದಾಗ್ಯೂ ವಾಚ್ಯನಂತೆ ತೋರುತ್ತಿರುವನು. ಈ ಅರ್ಥವಂ ತಿಳಿದವನ ಮನವು ಗ್ರಾಹ್ಯಾಗ್ರಾಹ್ಯಭಾವಗಳಂ ಪಿಡಿದಿರುವ ನಾನೆಂಬುವದೇ ಬಂಧವೆಂದು ಅದಂ ತ್ಯಜಿಸಿ ಅಖಂಡಾರ್ಥಬೋಧಕವಾದ ನಾನೆಂಬುವದಂ ಪಿಡಿದು ಬ್ರಹ್ಮಭಾವದಿಂ ಸರ್ವವೂ ನಾನೆಂತಲಾಗಲಿ ಸಾಕ್ಷಿಭಾವದಿಂ ಸರ್ವಾತೀತನು ನಾನೆಂತಲಾಗಲಿ ಭಾವಿಸುತ್ತಾ ಮುಕ್ತನೆನಿಸುವನು. ಅಖಂಡಭಾವದೊಳೆರಡನೆ ಪದಾರ್ಥವಿಲ್ಲದ್ದರಿಂದಲೂ ಸಾಕ್ಷಿಭಾವದಲ್ಲಿ ಸರ್ವವೂ ಅಸಜ್ಜಡಭಾವದಿಂ ಕಾಣುವದರಿಂದಲೂ, ಜಡಭಾವವು ಅಜ್ಞಾನಜನ್ಯವಾದುದರಿಂದಲೂ, ನಾನೆಂಬುವದೇ ಅಸಂಗತವೆಂದು ತಿಳಿಯುತಕ್ಕದ್ದು. ದ್ವೈತವಿಲ್ಲದೆ ಶಬ್ದಪ್ರವೃತ್ತಿಯಾಗಲಾರದಾದ್ದರಿಂದಲೂ, ಶಾಸ್ತ್ರಗಳಲ್ಲೂ, ಅನುಭವದಲ್ಲೂ ನಾನೆಂಬುವದು ಗೊತ್ತಾಗಿರುವದ್ದರಿಂ

ದಲೂ ದ್ವೈತವೇ ಪ್ರಮಾಣವೆಂದು ಕೆಲವರು ಪೇಳುವರು. ಸರ್ವಾನುಭವಸಿದ್ಧ ವಾದ ದ್ವೈತಕ್ಕೆ ಉಪದೇಶವೇ ಬೇಡವಾದ್ದರಿಂದಲೂ, ಸರ್ವಮತದುಷ್ಟವಾದ ಅಹಂಕಾರವಳಿಯುವಲ್ಲಿ ದ್ವೈತಕ್ಕೆ ಸ್ಥಿತಿಯೇ ತಪ್ಪುವದ್ದರಿಂದಲೂ, ಅಜ್ಞಾನಿಗಳಂ ಕೃತಾರ್ಥರಂಮಾಡಲೋಸುಗ ಪೊರಮಟ್ಟ ಶಾಸ್ತ್ರಗಳು ಅವರ ಚಿತ್ತರೀತಿಯಂ ಪಿಡಿದು ಪೇಳಬೇಕಾದ್ದರಿಂದ ನಾನೆಂಬ ಶಬ್ದವಂಪಿಡಿದು ಪೊರಮಟ್ಟಿರುವವೆಂದು ತಿಳಿಯತಕ್ಕದ್ದು. ಗ್ರಾಹ್ಯತ್ಯಾಜ್ಯ ಕಲ್ಪನೆಯೇ ಬಂಧವಾದ್ದರಿಂದ ಅದು ಇರುವರಿ ಗೆ ಯಾರಿಗೂ ಸಮದೃಷ್ಟಿಯುಂಟಾಗಲಾರದು. ಆದ್ದರಿಂದ ಅಜ್ಞಾನಸಿದ್ಧವಾದ ಜಡಾತ್ಮಭಾವವಂ ಬಿಟ್ಟು ಜನಕರಾಯನಂತೆ ವಿಚಾರಬಲದಿಂ ಪೂರ್ಣಭಾವವಂಪಿಡಿ ದು ಸಮಭಾವದಿಂ ಹೇಯೋಪಾದೇಯ ಭಾವನೆಯಿಲ್ಲದೆ ಕನ್ನಡಿಯಂತೆ ಬಂದದ್ದೆ ಲ್ಲವಂ ಗ್ರಹಿಸುತ್ತಾ ಅದರ ಲಾಭಾಲಾಭಗಳಲ್ಲೂ ಹಾನಿ ವೃದ್ಧಿಗಳಲ್ಲೂ ಶೋಕ ಹರ್ಷಗಳಿಗೆ ಒಳಗಾಗದೆ ರಾಜ್ಯಭಾರವಂ ಮಾಡುವನಾಗು. ಸದಸತ್ತುಗಳೆಂತ ಲೂ, ಯುಕ್ತಾಯುಕ್ತಗಳೆಂತಲೂ, ಇಷ್ಟಾನಿಷ್ಟಗಳೆಂತಲೂ, ಕಲ್ಪನೆಗಳೆಂಬ ಕಪಿಗಳು ಕುಣಿದಾಡುತ್ತಿರುವಲ್ಲಿ ಚಿತ್ತವೆಂಬ ವೃಕ್ಷದಲ್ಲಿ ನಿರಾಶತ್ವ ನಿರಪೇಕ್ಷತ್ವ, ನಿತ್ಯತ್ವ, ಸಮತ್ವ, ಪ್ರಾಜ್ಞತ್ವ, ನಿಷ್ಕ್ರಿಯತ್ವ, ಸೌಮ್ಯತ್ವ, ನಿರ್ವಿಕಲ್ಪತ್ವ, ಧೈರ್ಯ, ಸ್ಥೈರ್ಯ, ಸೌಹಾರ್ದ, ಸಂತೋಷ, ಮೃದುತ್ವ, ಮೃದುವಾದಿತ್ವ ಗಳೇ ಮೊದಲಾದ ಸದ್ಗುಣಗಳೆಂಬ ಫಲಗಳು ಪುಟ್ಟಲಾರವು. ಆದ್ದರಿಂದ ಸೇತುವಿ ನಿಂದ ಜಲದಂತೆ ನಿನ್ನಿಂದ ಕೆಳಕ್ಕೆಬಿದ್ದು ಭೋಗಪಂಕದೊಳ್ತಗಲಿಕೊಳ್ಳುವ ಮನ ವಂ ಹಿಂತಿರುಗಿಸಿಕೊಂಡು ಸ್ನಾನಭೋಜನಾದಿ ಸರ್ವವ್ಯಾಪಾರಕಾಲಗಳಲ್ಲೂ ವಿಚಾ ರವಂಮಾಡುತ್ತಿರುವನಾಗು. ನಿಂತಿರುವಲ್ಲೂ, ಕುಳಿತಿರುವಲ್ಲೂ, ಹೋಗುತ್ತಿರು ವಲ್ಲೂ, ಮಲಗಿರುವಲ್ಲೂ, ಸ್ನಾನಭೋಜನ ವಿಹಾರಕಾಲಗಳಲ್ಲೂ, ನಿಶ್ವಾಸೋ ಛ್ವಾಸಗಳಲ್ಲೂ ಕೂಡ ಒಳಹೊರಗಣ ತತ್ವಗಳಂ ವಿಚಾರಿಸುತ್ತಾ ಇದಿಸಿಕೊಳ್ಳುವ ಪದಾರ್ಥವೆಲ್ಲವೂ ಅಸತ್ತೆಂದು ನಿಶ್ಚಯಿಸಿ ಅದರಲ್ಲಿ ಆಶೆಯಂಬಿಡಲು ಪ್ರವೃತ್ತಿಮಾರ್ಗ ದಿಂ ತಿರುಗಿದಮನವು ಆತ್ಮನಲ್ಲೇ ನಿಲ್ಲುವದು. ಆಗಲಾದೇವನ ಅಖಂಡಭಾವ ಸ್ಫೂ ರ್ತಿಯಿಂದ ಸಮಸ್ತ ಕಾಲದೇಶ ವಸ್ತುಗಳಲ್ಲೂ ಸಮದೃಷ್ಟಿಯುಂಟಾಗುವದು. ಆ ದೃಷ್ಟಿಯಿಂದಲೇ ಪ್ರಕೃತೋಚಿತವಾದ ಕಾರ್ಯಗಳಂ ಮಾಡುತ್ತಾ ಬಾರದಿರು ವದನ್ನಪೇಕ್ಷಿಸದೆ ಬಂದಿರುವದನ್ನುಪೇಕ್ಷಿಸದೆ ಪರಮಾನಂದದಿಂ ವಿಹರಿಸುವನಾಗು. ಸರ್ವಜ್ಞನಾದ ಪರಮೇಶ್ವರನು ಜಡಾಕಾರವಾಗಿ ಪ್ರಕಾಶಿಸುವ ಸ್ವಭಾವದಿಂ ಪೃಥ ವಿ ಮೊದಲಾದ ಅಷ್ಟಮೂರ್ತಿಗಳಂ ವಹಿಸಿ ಸಕಲ ಜಗತ್ತುಗಳಿಗೂ ಆಧಾರವಾಗಿ

ಅವುಗಳಿಗೆ ಆಪ್ಯಾಯನ ಪ್ರಕಾಶಚಲನಾದಿಗಳಂ ನಡೆಸುತ್ತಿದ್ದಾಗ್ಯೂ ಅಂತರ್ದೃಷ್ಟಿಯಿಂ ತಟಸ್ಥನಾಗಿ ಸ್ಥಾಣುವೆಂತಲೇ ಪ್ರಸಿದ್ಧನಾಗಿರುವನು. ಅವನಂತೆ ಸಮಸ್ತಪ್ರಾಣಿಗಳೂ ಪೃಥಿವ್ಯಪ್ತೇಜೋವಾಯ್ವಾಕಾಶ ಮನೋಬುದ್ಧ್ಯಹಂಕಾರಗಳಿಂದ ಅಷ್ಟಮೂರ್ತಿಗಳಾಗಿರುವರು. ಆದಾಗ್ಯೂ ಈ ಪ್ರಾಣಿಗಳು ಯಮನಿಯಮಾಸನಪ್ರಾಣಾಯಾಮ ಪ್ರತ್ಯಾಹಾರ ಧಾರಣ ಧ್ಯಾನ ಸಮಾಧಿಗಳೆಂಬ ಮಾನಸಿಕವಾದ ಅಷ್ಟಾಂಗಗಳಂ ವಹಿಸಿ ಸ್ವರೂಪದಲ್ಲಿ ನಿಲ್ಲದೆ ಇದಿರಿಸುವ ದೃಶ್ಯಪದಾರ್ಥದಲ್ಲಿ ರಾಗದ್ವೇಷಾದಿಗಳಿಂ ಬದ್ಧರಾಗಿರುವರಾದ್ದರಿಂ ನಿಷ್ಕ್ರಿಯರೆನಿಸಿಕೊಳ್ಳುವದಿಲ್ಲ. ಬುದ್ಧಿಶಾಲಿಯಾದ ನೀನು ವಿಚಾರಪರನಾಗಿದ್ದರೆ ಆ ಮಹೇಶ್ವರನಂತೆಯೇ ಜಗತ್ತಿನಲ್ಲಿ ಶಿವನೆಂತಲೂ, ಶಂಕರನೆಂತಲೂ, ಪ್ರಸಿದ್ಧನಾಗುತ್ತೀಯೆ. ತತ್ವಾರ್ಥವಂ ವಿಚಾರಿಸುವಲ್ಲಿ ಸರ್ವಶರೀರದಲ್ಲೂ ಜ್ಞಾನಸ್ವಭಾವದಿಂ ಪ್ರಕಾಶಿಸುತ್ತಾ ಜನ್ಮಾದಿ ವಿಕಾರ ರಹಿತನಾಗಿ ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ಏಕರೀತಿಯಾದ ಜ್ಞಾನ ಸ್ವರೂಪದಿಂ ವ್ಯಾಪಕನಾಗಿ ಆತ್ಮನೆಂದು ಪ್ರಸಿದ್ಧನಾಗಿರುವ ಮಹೇಶ್ವರನೇ ನೀನು. ಸ್ವಸ್ವಭಾವವನ್ನತಿಕ್ರಮಿಸದಿರುವ ನಿನ್ನಿಂದಲೇ ಈ ಪ್ರಪಂಚ ಉಂಟಾಗಿರುವದು. ಸೂರ್ಯನು ಉದಯಿಸುವಲ್ಲಿ ಲೋಕಗಳು ತಮ್ಮ ತಮ್ಮ ವ್ಯಾಪಾರಗಳಂ ನಡಸುವಂತೆ ಆತ್ಮನೆನಿಸುವ ನೀನು ಎಚ್ಚರವಂ ಪಡೆಯುವಲ್ಲಿ ಮನವೇ ಮೊದಲಾದ ಕರಣಗಳು ತಮ್ಮ ತಮ್ಮ ವ್ಯಾಪಾರಗಳಂ ನಡಸುವವು. ಸೃಷ್ಟಿಯಲ್ಲಿ ನೀನು ನಿಯಮಿಸಿದಂತೆಯೇ ಸಮಸ್ತ ಕಾರ್ಯಗಳೂ ನಡೆಯುವದರಿಂದ ಲಾಭಾ ಲಾಭ ಹಾನಿ ವೃದ್ಧಿಗಳಲ್ಲಿ ಹರ್ಷಶೋಕಗಳಂ ಹೊಂದದೆ ಪ್ರಕೃತೋಚಿತವಾದ ರಾಜ್ಯಭಾರವಂ ಮಾಡುವನಾಗು. ಯಾವಾಗ ನೀನು ಚಿನ್ಮಾತ್ರ ದೃಷ್ಟಿಯಿಂ ಬ್ರಹ್ಮಾತ್ಮರುಗಳಿಗೆ ಅಭೇದವಂ ನಿಶ್ಚಯಿಸಿ ದೃಶ್ಯಪದಾರ್ಥಕ್ಕೆ ಭಿನ್ನವಾದ ಸತ್ವವಿಲ್ಲದ್ದರಿಂದ ನಾನೇ ಈ ಪ್ರಪಂಚ ರೂಪದಿಂ ತೋರ್ಬರುವೆನೆಂದು ಸಿದ್ಧವಾಗಿರುವ ಪರಿಪೂರ್ಣ ಭಾವವಂ ತಿಳಿಯುವೆಯೋ ಆಗ ನೀನು ಯೇನುಮಾಡಿದರೂ ಕಾರ್ಯಗಳು ಹ್ಯಾಗೆ ಹ್ಯಾಗೆ ಆದರೂ ಆ ಗುಣದೋಷಗಳು ಹರ್ಷ ಶೋಕಗಳೂ ಸಹ ನಿನ್ನಂ ಹೊಂದಲಾರವು. ನಿತ್ಯಸಮಾಧಿಯುತದ ಜೀವನ್ಮುಕ್ತನ ಸಂಚಾರದಿಂ ಮಾರ್ಗದಲ್ಲಿದ್ದ ಕ್ರಿಮಿಯು ಮೃತವಾಗುವಲ್ಲಿ ಆ ಹತ್ಯಾದೋಷವು ಅವನಿಗೆ ಹ್ಯಾಗೆ ಸಂಭವಿಸದೋ ಹಾಗೆ ಪರಿಪೂರ್ಣಭಾವದಿಂ ನಡೆಯುವ ನಿನಗೆ ಯಾವ ಗುಣದೋಷಗಳೂ ಸಂಭವಿಸಲಾರವು. ದೃಶ್ಯವೆಲ್ಲವೂ ಚಿದ್ವಸ್ತುವಿನ ಸತ್ತಾಮಾತ್ರವೆಂದು ಯಾವಾಗ ಗೊತ್ತಾಗುವದೋ ಆಗಲೇ ಅವನ ಮನವು ಶಾಂತವಾಗುವದು. ರಾಗದ್ವೇಷಗಳಿಲ್ಲದ ಆ ಬುದ್ಧಿಶಾಲಿಗೆ ಹೆಣ್ಣು

ಹೊನ್ನುಗಳು ಮಣ್ಣಿಗಿಂತಲೂ ಕಡೆಯಾಗುವವು. ಬಳಿಕ ಸಂಸಾರವಾಸನೆಯಿಂ ಮುಕ್ತನಾದ ಆ ಯೋಗಿಯು ಪ್ರಕೃತೋಚಿತವಾದ ಬಂದ ಕಾರ್ಯವನ್ನುಪೇಕ್ಷಿಸಲಾಗದೆಂಬ ನಿಶ್ಚಯದಿಂದಿಷ್ಟಾನಿಷ್ಟಭಾವನೆ ಇಲ್ಲದೆ ಕರ್ಮಗಳಂ ಮಾಡುವನಾದ್ದರಿಂದ ಅದರಿಂದುಂಟಾದ ಸುಖವೂ ದುಃಖವೂ ಸಹ ಅವನಿಗೆ ಸಮವಾಗಿಯೇ ಇರುವದು. ಸಿಂಹವನ್ನಾಶ್ರಯಿಸಿರುವ ಮೃಗವು ಸಿಂಹಪರಾಕ್ರಮದಿಂ ಲಬ್ಧವಾದ ಮಾಂಸವಂ ಭಕ್ಷಿಸುವಂತೆ ಚಿದ್ವಸ್ತುವನ್ನಾಶ್ರಯಿಸಿರುವ ಮನವು ಅದರ ಪ್ರಭಾವದಿಂದುಂಟಾದ ದೃಶ್ಯವನ್ನಾಶ್ರಯಿಸಿ ಜೀವಿಸುವದು. ಅದೆಂತೆಂದರೆ,—ಈ ಮನವು ದುರ್ಜನನಂತೆ ತನಗೆ ಸತ್ವವನ್ನುಂಟುಮಾಡಿದ ಆತ್ಮನನ್ನೇ ಮೊದಲು ಮರೆಯುವದು. ದರ್ಶನಕಾಲದಲ್ಲಿ ಅವನಂ ನೀಚನೆಂದು ತಿಳಿಯುವಂತೆ ಸರ್ವವ್ಯಾಪಿಯಾದ ಆ ಆತ್ಮನನ್ನೇ ಪ್ರಪಂಚವೆಂದು ಭಾವಿಸುತ್ತಾ ಅದರ ಭೋಗದಿಂ ಸಂತೋಷಪಡುತ್ತಿರುವದು. ದುರ್ಭೋಗಗಳಿಂ ವೈರಾಗ್ಯವುಂಟಾಗಲು ಸ್ವರೂಪ ಸ್ಮರಣೆಯಿಂದ ತನ್ನ ಕಲ್ಪನಾದಿ ಕುಚೇಷ್ಟೆಯಂ ಬಿಟ್ಟು ಆ ಆತ್ಮನನ್ನೇ ಶರಣುಹೊಂದಿ ಅವನಲ್ಲೈಕ್ಯವಂ ಪಡೆವದು. ಸೂರ್ಯನಿಂ ಸೂರ್ಯಕಾಂತದಂತೆ ಆತ್ಮನ ತೇಜದಿಂದಲೇ ಈ ಮನವು ತೇಜವಂ ಪಡೆದು ಪ್ರಕಾಶಿಸುವದು. ಲೋಹಕಾಂತ ಸಾನ್ನಿಧ್ಯದಿಂ ಲೋಹವು ಚಲಿಸುವಂತೆ ಆತ್ಮಪ್ರಭಾವದಿಂ ಚಲಿಸಿದ ಸ್ವಂತಶಕ್ತಿಯ ವಿಲಾಸವೇ ಮನವೆನಿಸಿಕೊಳ್ಳುವದು. ಸರ್ಪದಿಂ ಫೂತ್ಕಾರದಂತೆ ಮನದಿಂದುಂಟಾದ ಕಲ್ಪನೆಯೇ ತ್ರಿಪುಟಿಯೆನಿಸುವದು. ಗರುಡನಂ ಕಂಡ ಸರ್ಪವು ಶರೀರವಂ ಸೆಳೆಕೊಳ್ಳುವಂತೆ ಸಂಸಾರ ದುಃಖದಿಂ ಪ್ರವೃತ್ತಿ ಮಾರ್ಗವಂ ಬಿಟ್ಟು ಸಂಕೋಚವಂ ಪಡೆದ ಮನವು ಸ್ವರೂಪಸ್ಮರಣೆಯಿಂ ಚಿದ್ರೂಪವನ್ನೇ ಹೊಂದುವದು. ವಿಚಾರವೆಂಬ ಔಷಧದಿಂ ಆತ್ಮನಿಗೆ ಮನೋರೋಗದಿಂದುಂಟಾದ ದೃಶ್ಯಭ್ರಾಂತಿ ತೊಲಗಲು ನಿರ್ದುಃಖವಾದ ಬ್ರಹ್ಮಭಾವವೇ ಸಿದ್ಧವಾಗುವದು. ಈ ಪರಬ್ರಹ್ಮವೇ ಪ್ರಕಾಶ ಸ್ವಭಾವವಾದ್ದರಿಂ ಪ್ರಕಾಶಪಡಿಸಲು ಯೋಗ್ಯವಾದ ದೃಶ್ಯಕಲ್ಪನೆಯಿಂ ಜೀವನೆನಿಸಿಕೊಂಡು ದೃಶ್ಯಾನುಗುಣವಾದ ಸಂಕಲ್ಪ ವಿಕಲ್ಪಗಳಿಂ ಮನೋಭಾವವಂ ಹೊಂದಿ ಸ್ವರೂಪ ವಿಸ್ಮೃತಿಯಿಂ ಪ್ರಪಂಚದಲ್ಲೇ ಮಗ್ನವಾಗಿರುವನಾದ್ದರಿಂದ ಇದಕ್ಕೆ ವಿಚಾರದಿಂದಲೇ ಜ ವಿಸ್ಮೃತಿಯು ತಪ್ಪಬೇಕಾಗಿರುವದು. ಅದು ಕಾರಣ ವಿವೇಕ ವೈರಾಗ್ಯಗಳಿಂದಿಂದ್ರಿಯಗಳಂ ಕಟೆದು ಸ್ವರೂಪಾಜ್ಞಾನ ನಿದ್ರೆಯು ನಿಶ್ಶೇಷವಾಗಿ ಪೋಗುವಂತೆ ಜ್ಞಾನಪ್ರದೀಪವಂ ತೋರಬೇಕು. ಈ ಪ್ರಪಂಚವು ಕಲ್ಪಿತವೆಂದು ಗೊತ್ತಾಗಲು ಮರೆತಿದ್ದ ಪದಾರ್ಥವು ಸಿಕ್ಕುವಂತೆ ಬ್ರಹ್ಮಭಾವವು ಲಬ್ಧವಾಗುವದು. ಕೊನೆ

ಹುಟ್ಟಿದ ವಿಚಾರದಿಂ ಕೂಡಿದ ಈ ಮನವು ದೃಶ್ಯಪದಾರ್ಥ ಸ್ವರೂಪವಂ ಕಲ್ಪಿತವೆಂದು ಚೆನ್ನಾಗಿ ತಿಳಿಯುವುದು. ಬಳಿಕ ವೈರಾಗ್ಯಬಲದಿಂ ಸನ್ಯಾಸಿಯಾಗಿ ವಿಚಾರದಿಂ ಬ್ರಹ್ಮವಂ ಹೊಂದಿದವನಂತೆ ಈ ಮನವು ಮರಳಿ ಈ ಭೋಗಕ್ಕೆ ಮರುಳಾಗದು. ಕಲ್ಲಿನ ಬೊಂಬೆಯು ಕೆತ್ತಿ ಮಡಗಿದಾಗ್ಯೂ ಹ್ಯಾಗೆ ಕುಣಿಯದೋ ಹಾಗೆ ವಿಚಾರದಿಂ ದೇಹಾದಿ ಜ್ಞಾನವಿಲ್ಲದೆ ಸ್ತಬ್ಧವಾದ ಮನವು ಭೋಗಕ್ಕೋಸುಗ ಚಂಚಲವಾಗದು. ಎಲೈ ರಘುವರನೇ! ಎಲ್ಲಾದರೂ ಚಿತ್ರಪಟದಲ್ಲಿದ್ದ ಧೊರೆಯ ಬೊಂಬೆಗಳು ಯುದ್ಧವಂ ಮಾಡುವವೆ! ಚಿತ್ರದಲ್ಲಿದ್ದ ಚಂದ್ರನ ಕಿರಣಗಳಿಂ ವನೌಷಧಿಗಳು ಸಂತೋಷಪಡುವವೆ! ಶವಗಳು ರಕ್ತಲೇಪವಂ ಮಾಡಿಕೊಂಡು ಕುಣಿಯುವವೆ! ಕಲ್ಲುಗಳು ಗಾನವಂ ಮಾಡುವವೆ! ಸ್ಥಂಡಿಲಗಳಲ್ಲಿ ಬರದ ಸೂರ್ಯಮಂಡಲಗಳಿಂದಂಧಕಾರ ಪೋಗುವದೆ! ಸಂಕಲ್ಪ ಕಲ್ಪಿತವಾದ ಮರಗಳಿಂ ಗಗನದಲ್ಲಿ ನೆರಳು ಬೀಳುವದೆ! ಹೀಗೆ ಭ್ರಾಂತಿಸಿದ್ಧವಾಗಿರುವ ಜಡವಾದ ಈ ಮನಗಳಿಂ ಯಾವಕೆಲಸವೂ ಮಾಡಲ್ಪಡದೆಂದು ತಿಳಿಯತಕ್ಕದ್ದು. ಆತ್ಮ ಪ್ರಾಣ ಸಂಯೋಗದಲ್ಲಿ ಚಲನಾತ್ಮಕವಾದ ಪ್ರಾಣಾಂಶವೇ ಮನವೆಂತಲೂ ಸಂಕಲ್ಪ ವಿಕಲ್ಪಾತ್ಮಕವಾದ ಮನದ ಚಲನದಿಂ ನಾನು ನನ್ನದೆಂಬ ಜ್ಞಾನದಿಂ ಕೂಡಿದ ಚಿದಂಶವೇ ಜೀವನೆಂತಲೂ ಇದಕ್ಕೇ ಬುದ್ಧಿ ಚಿತ್ತ ಮೊದಲಾದ ಸಂಜ್ಞೆಗಳೆಂತಲೂ ಯೋಗಿಗಳು ಪೇಳುವರು. ಪರಮಾರ್ಥವಾಗಿ ಮನವು, ಬುದ್ಧಿಯು, ಜ್ಞಾನವು, ಜೀವನು, ಈ ಶರೀರವು ಕೂಡಾ ಇಲ್ಲವೇ ಇಲ್ಲವೆಂತಲೂ, ಪರಮಾತ್ಮನೊಬ್ಬನೇ ನಾನಾ ಪ್ರಕಾರವಾಗಿ ತೋರುತ್ತಿರುವನೆಂತಲೂ ತಿಳಿಯುವನಾಗು. ಈ ಆತ್ಮನು ಸರ್ವವ್ಯಾಪಿಯಾಗಿದ್ದಾಗ್ಯೂ ಆಕಾಶಕ್ಕಿಂತಲೂ ಅತಿ ಸೂಕ್ಷ್ಮನಾದ್ದರಿಂದ ಘಟಾದಿಗಳಂತೆ ಗೋಚರವಾಗದೆ ಅಜ್ಞಾನಿಗಳಿಂದಿಲ್ಲನೆನಿಸಿ ಕೊಳ್ಳುವನು. ಚಕ್ಷುರಾದಿ ಕರಣಗಳಲ್ಲಿವನು ಇರುವದ್ದರಿಂದಲೇ ದೀಪದಿಂದಂಧಕಾರದಂತೆ ಆಯಾಯ ಅಜ್ಞಾನಗಳು ಪೋಗಿ ರೂಪಾದಿ ಜ್ಞಾನ ಉಂಟಾಗುವದು. ಮನಸ್ಸು ಅತಿ ಸೂಕ್ಷ್ಮವಾದರೂ ಅವಿಚಾರದಿಂದ ಜ್ಞಾನಮಯ ವಾಗಿರುವದಾದ್ದರಿಂದ ಆತ್ಮನಂ ತಿಳಿಯದಿರುವದು. ವಿಚಾರದಿಂ ಸ್ವರೂಪವಂ ತಿಳಿಯಲು ಅಜ್ಞಾನದೊಡನೆ ತಾನೇ ನಷ್ಟವಾಗುವದ್ದರಿಂದ ಆತ್ಮನು ಮನಸ್ಸಿಗೆ ಅಗೋಚರನೆನಿಸುವನು. ಮನೋನುಸಾರಿಯಾದ ಆತ್ಮನಿಗೆ ಸ್ವಸಂಕಲ್ಪ ಜನಿತವಾದ್ದರಿಂದ ಇದು ಪ್ರಕಾಶ್ಯವೆಂದು ಯಾವದು ಸಮ್ಮತವಾಗುವದೋ ಆ ವಸ್ತುವು ಗೋಚರವಾಗುವಲ್ಲಿ ಮನವು ಪಾರಮಾರ್ಥಿಕವಾದ ಆತ್ಮನ ಸ್ವರೂಪವಂ ಮರೆತು ಆ ವಿಷಯವಂ ಪಿಡಿಯುವದು. ಆತ್ಮನು ಯಾವ

ಪದಾರ್ಥವಂ ಗ್ರಹಿಸಲಿಚ್ಛೈಸಿ ಅದಕ್ಕೆ ತಕ್ಕ ಕರಣವಂ ಪಿಡಿವನೋ ಆಗಲೇ ಆ ಪದಾರ್ಥವನ್ನಾವರಿಸಿಕೊಂಡಿರುವ ಅಜ್ಞಾನವು ನಷ್ಟವಾಗುವದರಿಂದ ಆ ಕರಣವು ಆ ಪದಾರ್ಥವಂ ಪಿಡಿವದು, ಸಂಗಡಲೇ ಆ ಪದಾರ್ಥಜ್ಞಾನವುಂಟಾಗುವದು. ಹೀಗಿದ್ದಾಗ್ಯೂ ದೃಶ್ಯದಲ್ಲಿ ಅನುರಕ್ತವಾಗಿದ್ದ ಮನವು ಮದಾಂಧನಾದ ದುಷ್ಟನಂತೆ ತನಗೆ ಅವಲಂಬನವಾದ ಆತ್ಮನಂ ಸ್ಮರಿಸದಿರುವದು. ಈ ಮನವು ಆತ್ಮನ ಸಂಕಲ್ಪದಿಂದಲೇ ಉಂಟಾದ್ದರಿಂದ ಸಂಕಲ್ಪಾತ್ಮಕವಾಗಿ ದೃಶ್ಯ ಕಲ್ಪನೆಯಲ್ಲೇ ಆಸಕ್ತವಾಗಿರುವದು. ಆತ್ಮನು ಸಂಕಲ್ಪಿಸುವದಂ ಬಿಡುವಲ್ಲಿ ದೃಶ್ಯಭಾವನೆಯುಂ ಬಿಟ್ಟು ಮನವು ಮಾನಭಂಗವಂ ಪಡೆದ ಮಾನಶಾಲಿಯಂತೆ ಲಯವಂ ಹೊಂದುವದು. ಇದು ಪ್ರಾಣಾತ್ಮಸಂಯೋಗದಲ್ಲಿ ಕ್ರಿಯಾತ್ಮಕವಾದ ಪ್ರಾಣಾಂಶದಿಂ ಪುಟ್ಟಿರುವದರಿಂದ ಪ್ರಾಣಶಕ್ತಿಯ ನಿರೋಧದಿಂದೀ ಮನಕ್ಕೆ ಲಯವಾಗುವದು. ಆತ್ಮನ ಜ್ಞಾನಾಂಶವು ಪ್ರಾಣದ ಕ್ರಿಯಾಂಶವು ಸೇರಿ ಮನವಾಗಿರುವದು. ಇದರಲ್ಲಿ ಕ್ರಿಯಾಂಶವು ಕಲ್ಪನಾರೂಪವಾಗಿರುವದು. ಆತ್ಮನ ಸ್ಪಂದಶಕ್ತಿರೂಪವಾದ ಪ್ರಾಣವು ವ್ಯಾಪಕವಾದ್ದರಿಂದ ಇದಕ್ಕೆ ದೇಶಾಂತರ ಜ್ಞಾನಶಕ್ತಿ ಇರುವದು. ಈ ಜ್ಞಾನವೇ ಮನಕ್ಕೆ ವೃತ್ತಿರೂಪವಾಗಿರುವದು. ವೃತ್ತಿ ವೃತ್ತಿಮಂತರಿಗೆ ಅಭೇದವೆಂಬ ನ್ಯಾಯದಿಂ ಮನವು ಜ್ಞಾನಾತ್ಮಕವೆನಿಸುವದು. ಮನದಲ್ಲಿ ಈಜ್ಞಾನವು ಸಂಕಲ್ಪ ವಿಕಲ್ಪ ಕಲ್ಪನಾಭಾವನಾ ರೂಪದಿಂದಿರುವದು. ಪ್ರತಿಬಿಂಬವು ಬಿಂಬಕ್ಕೆ ಅಭಿನ್ನವಾಗುವಂತೆ ಕಾರ್ಯವು ಕಾರಣಕ್ಕೆ ಅಭಿನ್ನವಾದ್ದರಿಂದ ಪ್ರಾಣರೂಪವೆ ಮನವೆಂದು ಪೇಳಲ್ಪಡುವದು. ಅದರಿಂದಲೇ ಮನೋಜಯವಂ ಬಯಸುವರು ಪ್ರಾಣನಿರೋಧವಂ ಮಾಡುವರು. ಇಂತಾಗಿ ಕ್ರಿಯಾಜ್ಞಾನವುಳ್ಳದ್ದೇ ಮನವೆಂದು ತಿಳಿಯತಕ್ಕದ್ದು. ಇದು ಜ್ಞಾನವಿರುದ್ಧವಾದ ಅಜ್ಞಾನದ ಸ್ವರೂಪದಿಂದಿರುವದರಿಂದ ವೈರಾಗ್ಯದಿಂದಲೂ, ವಿಷಯತ್ಯಾಗದಿಂದಲೂ, ಪರಮಾರ್ಥಜ್ಞಾನದಿಂದಲೂ, ನಿರುದ್ಧವಾಗುವದು. ಇದರ ನಿರೋಧದಿಂ ಬ್ರಹ್ಮೇತರಪದಾರ್ಥಜ್ಞಾನವಿಲ್ಲದಿರುವದೇ ಸಮಾಧಿಯೆನಿಸುವದು. ಆಹಾರದ ಸತ್ವಾಂಶವು ಅಂತಃಕರಣಕ್ಕೆ ಬಂದು ಸೇರುವದರಿಂದ ಆಹಾರಕ್ಕೆ ಅನುಗುಣವಾಗಿಯೇ ಜ್ಞಾನವುಂಟಾಗುವದು. ಈ ಪಾರ್ಥಿವಾಂಶಸಂಬಂಧವಂ ನೋಡುವಲ್ಲಿ ಕಲ್ಲಾದರೂ ಚಲಿಸಬಹುದು. ಕಟ್ಟಿಗೆಯಾದರೂ ಜ್ವಲಿಸಬಹುದು. ಮನವು ತನ್ನ ಚಲನವನ್ನೀತಿಳಿಯಬಾರದೆಂದು ತಿಳಿಯಬೇಕಾಗುತ್ತೆ. ಚಲನ ಪ್ರಾಣವಾಯುಗಳ ರೂಪದಿಂದಿರುವ ಆತ್ಮನ ಕ್ರಿಯಾಶಕ್ತಿಯ ಸಂಬಂಧದಿಂದಿದಕ್ಕೆ ಜ್ಞಾನವೆಂದೆನಬೇಕು. ಆ ಕ್ರಿಯಾಶಕ್ತಿಯು ಜಡವಾದ್ದರಿಂದ ಹಾಗೆ ಪೇಳು

ವವಕ್ಕೆ ಆಗುವದಿಲ್ಲ. ಚಿಚ್ಛಕ್ತಿಸಂಬಂಧದಿಂದಿದಕ್ಕೆ ಜ್ಞಾನವೆಂಬ ಸರ್ವವ್ಯಾಪಕವಾದ ಚಿಚ್ಛಕ್ತಿ ಸಂಬಂಧಕ್ಕೆ ಚ್ಯುತಿಯೇ ಇಲ್ಲದ್ದರಿಂದ ಸರ್ವಕಾಲದಲ್ಲಿ ಜ್ಞಾನವಿರಬಹುದು. ಚಿಚ್ಛಕ್ತಿ ಕ್ರಿಯಾಶಕ್ತಿ ಸಂಬಂಧವೇ ಮನಸ್ಸೆಂತಲೂ ಕಲ್ಪಿಸಲ್ಪಡುವದು. ಇದೆಲ್ಲವೂ ಸುಳ್ಳಲ್ಲದೆ ಎಂದಿಗೂ ಯಥಾರ್ಥವಾಗಲಾರದು. ಈ ಅಜ್ಞಾನವೇ ಮಾಯೆಯೆಂತಲೂ, ಅವಿದ್ಯೆಯೆಂತಲೂ, ಪ್ರಸಿದ್ಧವಾಗಿ ಸಂಸಾರವೆಂಬ ಕಾಲಕೂಟ ವೃಕ್ಷಕ್ಕೆ ಬೀಜವಾಗಿರುವದು. ಬ್ರಹ್ಮೇತರ ಪದಾರ್ಥಜ್ಞಾನವೇ ಮನವೆನಿಸುವದಾದ್ದರಿಂದ ಈ ಅಜ್ಞಾನ ಉದಯಿಸುವಲ್ಲಿ ಚಿಚ್ಛಕ್ತಿಗೆ ಈಗ ಕ್ರಿಯಾಶಕ್ತಿಸಂಬಂಧವೆಂದರಿತು ಇತರ ಪದಾರ್ಥ ಸಂಕಲ್ಪವಂ ಬಿಟ್ಟು ತೋರಿದವಸ್ತುವು ಬ್ರಹ್ಮವಲ್ಲದೆ ಮತ್ತೊಂದಲ್ಲವೆಂದು ದೃಢವಾಗಿ ಧ್ಯಾನಿಸಲು ಸಂಸಾರಭ್ರಾಂತಿಯೇ ತಪ್ಪಿ ಆ ಭೀತಿಗಳೆಲ್ಲವೂ ಅಣಗಿಹೋಗುವವು. ಚಿಚ್ಛಕ್ತಿಯಿಂದ ವಾಯುವಿನ ಸ್ಪಂದಶಕ್ತಿ ಯಾವಾಗ ಎಚ್ಚರಿಸಲ್ಪಡುವದೋ ಆಗ ಸ್ಪಂದಶಕ್ತಿಯ ಸಂಬಂಧದಿಂ ಚಿಚ್ಛಕ್ತಿಗೆ ಕ್ರೀಡಾರ್ಥವಾದ ದ್ವಿತೀಯ ಪದಾರ್ಥವು ಸ್ಫುರಿಸುವದು. ಆ ಪದಾರ್ಥವನ್ನಾಗ ಸಂಕಲ್ಪಿಸುವ ಚಿಚ್ಛಕ್ತಿಯೇ ಚಿತ್ತವೆನಿಸುವದು. ಚಿತ್ತವಂ ಚಿತ್ತಿಗೆ ಭಿನ್ನವೆನ್ನುವಲ್ಲಿ ಬಾಲಕನಿಗೆ ಕತ್ತಲೆಯಲ್ಲಿ ತೋರುವ ಪಿಶಾಚದಂತೆ ಅಜ್ಞಾನಸಿದ್ಧವಾದ ಈಚಿತ್ತವು ಘೋರವಾದ ಸಂಸಾರರೋಗವಂ ತಂದು ಬಿಡುವದು. ಅಖಂಡಶಕ್ತಿಯಾದ ಇಂದ್ರನೊಡನೆ ಸೇರುವನು. ಮತ್ತೊಬ್ಬನಾಗಲಾರದವನಾದ್ದರಿಂದ ಚಿಚ್ಛಕ್ತಿಗೆ ಸೇರಿದ ಸ್ಪಂದಶಕ್ತಿಯನ್ನು ಚಿಚ್ಛಕ್ತಿಯೆಂತಲೇ ನಿಶ್ಚಯಿಸತಕ್ಕದ್ದು. ಮನುಷ್ಯನು ಮನುಷ್ಯಸ್ತ್ರೀಯೊಡನೆ ಸೇರುವಲ್ಲಿ ಪಿಶಾಚವು ಪುಟ್ಟಿತೆಂಬಂತೆಯೇ ಈ ಮನದ ಉತ್ಪತ್ತಿಯೆಂದು ತಿಳಿಯುವನಾಗು. ಚೈತನ್ಯಸ್ವರೂಪಾದಿಗಳೇನೂ ಇಲ್ಲದ ಸತ್ತಮನದಿಂ ಜನಗಳು ವ್ಯಥೆಪಡುವದು ಅತಿ ವಿಚಿತ್ರವಾಗಿರುವದು. ಆಕಾಶ ಪದ್ಮದಿಂ ತಲೆ ಒಡೆಯಿತೆಂಬಂತೆಯೇ ಮನದಿಂ ಕೆಟ್ಟೆನೆಂಬಮಾತು ಭ್ರಾಂತಸಮೂಹದಲ್ಲಿ ಸಿದ್ಧವಾಗಿರುವದು. ಜಡಶೂನ್ಯವಾದ ಮನದಿಂ ಯಾವನು ವ್ಯಥೆಪಡುವನೋ ಅವನು ಪೂರ್ಣಚಂದ್ರನಕಿರಣದಿಂ ಭಸ್ಮವಾಗುವನು. ಯಾವನು ಪುಟ್ಟಿದನೂ ಇರುವನೂ ನಶಿಸುವನೋ ಯಾವನು ಹುಡುಕಿದರೂ ಸಿಕ್ಕನೋ ಅಂಥಾ ಸುಳ್ಳು ಮನವು ಜಗದೆಲ್ಲಕೂ ಕಾರಣವಾಗಿ ಜನಗಳಂ ಬಾಧಿಸುವಲ್ಲಿ ಅಜ್ಞಾನದ ಮಹಿಮೆಯಂ ನಿಂತು ಬಣ್ಣಿಸತಕ್ಕದ್ದು. ಜೀವನು ಪರಮಾತ್ಮನಿಂದನ್ಯನಾದವನಾಗಲು ಬಹಾತ್ಮಜ್ಞಾನದಿಂ ಪರವಶನಾಗಿ ಸುಳ್ಳುಕಲ್ಪನೆಯುಳ್ಳ ಮನ ನೆಂಬಲಾದ ಭ್ರಾಂ

ಪದಾರ್ಥಗಳಿಂದಲೇ ಈ ಸುಳ್ಳು ಜಗವನ್ನುಂಟುಮಾಡಿಕೊಂಡು ಅದರಿಂದಲೇ ಸಂಸಾರಿಯಾಗಿ ದುರ್ವಾಸನೆಯಲ್ಲಿ ಬಿದ್ದಿರುವನಂತೆಯೂ, ದುಃಖೋದ್ವೇಗವುಳ್ಳವನಂತೆಯೂ, ಪುತ್ರ ಮಿತ್ರ ಕಳತ್ರ ಜ್ಞಾತಿವರ್ಗಗಳ ಸಂಬಂಧದಲ್ಲಿರುವವನಂತೆಯೂ ಮೋಹಪಡುತ್ತಿರುವನು. ಅವಿಚಾರ ಸಿದ್ಧವಾದ ಸೃಷ್ಟಿಯು ತರಂಗಗಳಿಂ ನೀರು ಚೂರು ಚೂರಾಗುವಂತೆಯೂ, ಕಾಡಿಗೆಯು ಕಲ್ಲುಪೆಟ್ಟಿನಿಂದರೆಯಲ್ಪಡುವಂತೆಯೂ, ಪೂರ್ಣ ಚಂದ್ರನ ಕಿರಣ ಸ್ಪರ್ಶದಿಂ ಮಂಜು ನುಚ್ಚಾಗಿ ಕುಣಿಯುವಂತೆಯೂ, ವಿಚಾರದಿಂದಲೇ ನಿರ್ಮೂಲವಾಗಿ ಹೋಗುವದು. ಅವಿಚಾರಸಿದ್ಧವಾದ ಈ ಜಗವು ವಿಚಾರ ಶುದ್ಧವಾದ ಮನದಿಂದ ಶೂರನ ನೇತ್ರಕಾಂತಿಯಿಂ ಕಟ್ಟಲ್ಪಟ್ಟು ಅವನ ಮನಃಕಲ್ಪಿತವಾದ ಸೇನೆಯಿಂ ಸಂಹರಿಸಲ್ಪಡುವ ಶತ್ರುವಿನಂತೆ ನಿರಾಕರಿಸಲ್ಪಡುವದು. ಬಂಧ ಮೋಕ್ಷಗಳೆರಡೂ ಕಲ್ಪಿತವಾದ್ದರಿಂದ ಅವುಗಳಿಗೆ ಸಾಧಕವಾದ ಅವಿಚಾರ ವಿಚಾರಗಳೂ ಕಲ್ಪಿತವೆಂದು ತಿಳಿಯುವನಾಗು. ಹೀಗಿರುವಲ್ಲಿ ಮನದಿಂದಲೇ ಮನವು ಜಯಿಸಲ್ಪಡುವುದೆಂಬುದು ಹೆಣದಿಂ ಹೆಣವು ಹೊಡೆಯಲ್ಪಟ್ಟಿತೆಂಬ ಕಥೆಯಂತೆ ವಿಚಿತ್ರವಾಗಿರುವದು. ಇಂತು ಅಸತ್ತಾದ ಮನವಂ ಜಯಿಸಲೋಸುಗ ಅಷ್ಟಾಂಗ ಯೋಗಾಭ್ಯಾಸವಂ ಮಾಡುವರಿಗೂ ಆಕಾಶವಂ ಗುದ್ದುವರಿಗೂ ಭೇದವೇನೂ ಇಲ್ಲವೆಂದು ತಿಳಿಯುವನಾಗು. ಸರ್ವವು ಬ್ರಹ್ಮವೆಂಬ ತತ್ತ್ವಾರ್ಥವಂ ಗ್ರಹಿಸಿ ಜೀವನ್ಮುಕ್ತರ ಪದವಿಗೆ ನೀನು ಬಂದಿರುವೆಯಾದ್ದರಿಂದ ವಿಚಾರ ವಿಚಾರಗಳೆರಡೂ ಪರಮಾರ್ಥವಲ್ಲವೆಂದು ನಿನಗೆ ಹೇಳಲ್ಪಡುವದು. ಶಾಸ್ತ್ರ ವಿಚಾರಸಂಘರ್ಷಣೆಯಂ ಕಾಣದೆ ಅವಿಚಾರ ಮನೋಹರವಾದ ಭೋಗಗಳ ಸುಖಭ್ರಾಂತಿ ಮುಳುಗಿರುವ ಅಜ್ಞಾನಿಗಳ ಪ್ರಜ್ಞೆಯು ವೀಣಾಧ್ವನಿಯಿಂದಲೂ, ಮಲಗಿರುವ ಬಂಧುವಿನ ಮುಖ ಕಾಂತಿಯಿಂದಲೂ, ಘಟ್ಟಿಯಾಗಿ ಗಾನವಂ ಮಾಡುವದ್ದರಿಂ ಶತ್ರುವೆಂದು ತಿಳಿಯಲ್ಪಟ್ಟ ಮಿತ್ರನಿಂದಲೂ ಭಯಪಡುವದು. ತನ್ನ ಮನದ ಕಲ್ಪನೆಯಿಂ ತಾನೆ ಭಯಪಡುತ್ತಾ ದಿಗಿಲುಬೀಳುವದೆ ಮುಖ್ಯವಾಗಿರುವ ಪ್ರಜ್ಞೆಯುಳ್ಳ ಜನಗಳಿಗೆ ಶಾಸ್ತ್ರಸಂಘ ಸಂಘರ್ಷಣದಿಂ ನಿಶ್ಚಯಿಸತಕ್ಕ ಈ ಸಿದ್ಧಾಂತವು ಹೇಗೆ ಸಮ್ಮತವಾದೀತು. ಇಂಥಾ ವಿವೇಕವಿಲ್ಲದ ಪ್ರಜ್ಞೆಯಿಂದ ಮೋಹಿಸಲ್ಪಟ್ಟ ಮರುಳನು ಪ್ರಾಜ್ಞನಿಗೆ ವಿಚಿತ್ರರೀತಿಯಾಗಿ ತೋರುವನು. ಯಾರ ಹೃದಯ ಬಿಲದಲ್ಲಿ ಕಣ್ಣು ಬಾಯಿಲ್ಲದೆ ಸೇರಿಕೊಂಡಿರುವ ಮನವೆಂಬ ಸರ್ಪವಂ ಜಯಿಸಬಾರದೆ ಸಂಸಾರ ಸಮುದ್ರಕ್ಕೆ ತೆರೆಗಳಂತಿರುವ ವಿಷಯಗಳಿಂ ಸೆಳೆಯಲ್ಪಡುವನೋ ಅವನಿಗೆ ಈ ಶಾಸ್ತ್ರಾರ್ಥವಂ ಹೇಳುವಂಥಾದ್ದು ಕುರುಡನಿಗೆ ಉದ್ಯಾನವಂ

ತೋರಿಸುವಂತೆಯೂ, ಕುಷ್ಟ ವ್ರಣದಿಂ ಮೂಗಿಲ್ಲದವನಿಗೆ ವಾಸನೆಯುಂ ತೋರು ವಂತೆಯೂ, ಮಧ್ಯಮದದಿಂ ಉನ್ಮತ್ತನಾದವನನ್ನು ಸಾಕ್ಷಿವಾದಕ್ಕೆ ಕರೆಯುವಂ ತೆಯೂ, ಹೆಣವಂ ಕಂಡು ಜನಸಮೂಹದ ಕಥೆಯಂ ಕೇಳುವಂತೆಯೂ, ವ್ಯರ್ಥ ವಾಗಿ ಹಾಸ್ಯಾಸ್ಪದವಾಗುವದು. ಪರಮಾರ್ಥವಾಗಿ ಇಲ್ಲದಿರುವ ಮನವಂ ಜಯಿಸದಿರುವನು. ವಿಷವಂ ತಿನ್ನದೆ ವಿಷ ಮೂರ್ಛೆಯಂ ಹೊಂದುವನೆಂದು ತಿಳಿಯುವನಾಗು. ಪ್ರಾಣಗಳ ಚಲನ ಶಕ್ತಿಯಿಂದಿಂದ್ರಿಯುಗಳು ತಮ್ಮ ತಮ್ಮ ವಿಷಯುಗಳಂ ಗ್ರಹಿಸುವಲ್ಲಿ ಆತ್ಮನಿಗೆ ಆ ವಸ್ತುಜ್ಞಾನ ವಾಗುವದು. ಹೀಗಿರುವಲ್ಲಿ ಮಧ್ಯದೊಳ್ ಮನವೆಂಬ ಕಲ್ಪನೆಗೆ ಕಾರಣವೇನಿರುವದು. ಈ ವ್ಯವಹಾರ ಶಕ್ತಿಗಳೆಲ್ಲವೂ ಚಿತ್ಸೂರ್ಯನ ಕಿರಣಗಳಾದ್ದರಿಂದ ಮನಃ ಪ್ರಾಣಾದಿಗಳು ಆ ಆತ್ಮನಿಗೆ ಭಿನ್ನವೆಂತಲೂ, ಮನಃ ಪ್ರಾಣಾದಿ ಶಬ್ದಗಳಿಗೆ ಆತ್ಮನೆ ವಾಚ್ಯನಾಗುವನೆಂತಲೂ ಪೇಳಲಶಕ್ಯವಾಗುವದು. ಜೀವನೆಂಬ ಶಬ್ದ ಮಾತ್ರದಿಂದಲೇ ಜಗವೆಲ್ಲವೂ ಕುರು ಡಾಗಿ ಪರಮಾರ್ಥವಂ ನೋಡದಿರುವದು. ವ್ಯಾಪಕಭಾವದಿಂದಿರುವ ಚಿತ್ತವೆಂ ಬುವದು ಚೇತನವಾದಲ್ಲಿ ಬೇರೆ ಎಂಬುವದು ಅಸಂಗತವಾಗುವದು. ಅಚೇತನ ವಾದಲ್ಲಿ ಇಂದ್ರಿಯುಗಳಿಗಿಂತ ವಿಶೇಷ ಶಕ್ತಿ ಇರಬೇಕು. ಆಯಾಯ ಇಂದ್ರಿಯುಗಳ ಸಹಾಯದಿಂದಲೇ ರೂಪಾದಿ ಜ್ಞಾನ ಶಕ್ತಿ ಕಾಣುವದ್ದರಿಂದಲೂ, ಜ್ಞಾನ ಶಕ್ತಿ ಆತ್ಮನದಾದ್ದರಿಂದಲೂ, ಚಿತ್ತವೆಂದು ಬೇರೆ ಪದಾರ್ಥವನ್ನಂಗೀಕರಿಸುವದಕ್ಕೆ ಕಾರ ಣವಿಲ್ಲ. ಅದುಕಾರಣ ಜೀವ ಚಿತ್ತಗಳೆರಡೂ ಅಸತ್ತೆಂತಲೇ ತಿಳಿಯತಕ್ಕದ್ದು. ಮನವೆಂಬ ಬೇರೇ ಪದಾರ್ಥವನ್ನಂಗೀಕರಿಸಿರುವರ ದುಃಖವಂ ನೋಡಿ ಕರು ಣೆಯಿಂ ನನ್ನ ಬುದ್ಧಿಯು ಮೂಢವಾಗಿರುವದು. ಅಜ್ಞಾನಿಗಳು ದುಃಖದ ಸ್ವರೂಪ ವನ್ನು ಅದರ ಉತ್ಪತ್ತಿಯನ್ನು, ಅದನ್ನನುಭವಿಸುವ ಪದಾರ್ಥವನ್ನು, ಅದು ಬರು ವುದಕ್ಕೆ ನಿಮಿತ್ತವನ್ನು, ವಿಚಾರಿಸದೆ ವ್ಯರ್ಥವಾಗಿ ದುಃಖ ಪಡುವದಂ ನೋಡಿದರೆ ಅವರು ಕತ್ತೆಗಳಂತೆ ದುಃಖ ಪಡಲೋಸುಗವೇ ಪುಟ್ಟಿರುವರೆಂದು ತೋರುತ್ತಲಿದೆ. ದುಷ್ಕರ್ಮದಿಂ ಜಡಪ್ರಾಣಿಗಳು ನೀರುಗುಳ್ಳೆಗಳಂತೆ ನಾಶಕ್ಕೋಸುಗವೇ ಪುಟ್ಟು ವವು. ಕಟುಕರಿಂದ ಪಶುಗಳು ವಾಯುವಿನಿಂದ ನೊಳ್ಳೆ ಗುಂಗುರುಗಳು, ಅಗ್ನಿಯಿಂ ಪತಂಗಗಳು, ಬೇಡರಿಂ ಮೃಗ ಪಕ್ಷಿಗಳು, ದೊಡ್ಡ ಮೀನುಗಳಿಂ ಸಣ್ಣ ಮೀನುಗಳು, ನೊಣಗಳಿಂ ಕೂರೆಗಳು, ಕಪ್ಪೆಗಳಿಂ ನೊಣಗಳು, ಸರ್ಪಗಳಿಂ ಕಪ್ಪೆ ಗಳು, ನವಿಲು ಗರುಡ ಕೀರಗಳಿಂ ಸರ್ಪಗಳು, ಬೆಕ್ಕುಗಳಿಂದ ಕೀರಗಳು, ನಾಯಿ ಗಳಿಂದ ಬೆಕ್ಕುಗಳು, ಕರಡಿಗಳಿಂದ ನಾಯಿಗಳು, ವ್ಯಾಘ್ರಗಳಿಂದ ಕರಡಿಗಳು,

ಸಿಂಹಗಳಿಂದ ಹುಲಿಗಳು, ಶರಭಗಳಿಂದ ಸಿಂಹಗಳು, ಮೇಘಗಳಿಂ ಶರಭಗಳು, ವಾಯುವಿನಿಂದ ಮೇಘಗಳು, ಪ್ರತಿ ದಿನದಲ್ಲು ಪ್ರತಿ ದೇಶದಲ್ಲು ಅನೇಕವಾಗಿ ಸಂಹರಿಸಲ್ಪಡುವವು. ಆ ವಾಯುವಂ ಗಿರಿಗಳು ತಡೆಯುವವು. ಗಿರಿಗಳ ರೆಕ್ಕೆಗಳಂ ವಜ್ರಾಯುಧವು ಕತ್ತರಿಸುವದು. ಆ ವಜ್ರವು ಇಂದ್ರನ ಕೈಲಿ ಇರುವದು. ಇಂದ್ರರು ವಿಷ್ಣುವಿಗೆ ಸ್ವಾಧೀನರಾಗಿರುವರು. ಅಂಥಾ ಮಹಾ ವಿಷ್ಣುವು ಜಲಜಂತು ಮೊದಲಾದ ರೂಪುಗಳಂ ತಾಳುವನು. ನಿರಂತರದಲ್ಲು ಹೇನು ಕೂರೆ ಸೊಳ್ಳೆ ಇರುವೆಗಳು ಪುಟ್ಟುವವು. ಮತ್ತು ಭೂಮಿಯಲ್ಲಿ ವೃಶ್ಚಿಕ ಮೊದಲಾದ ಕ್ರಿಮಿ ಕೀಟಗಳು, ಅಂತರಿಕ್ಷದಲ್ಲಿ ವಿಹಗಾದಿಗಳು, ವನದಲ್ಲಿ ಸಿಂಹಾದಿಗಳು, ಕಲ್ಲುಗಳಲ್ಲಿ ಭೇಕಾದಿಗಳು ಪುಟ್ಟುತ್ತಲಿರುವವು. ಮತ್ತು ಪ್ರಾಣಿಗಳ ಅಂಗಗಳಲ್ಲೂ, ಅಮೇಧ್ಯದಲ್ಲೂ, ವೃಕ್ಷಾದಿ ಸ್ಥಾವರ ಯೋನಿಯಲ್ಲಿ ಸಹ ಅನೇಕ ಪ್ರಾಣಿಗಳು ಅನೇಕ ಪ್ರಕಾರವಾಗಿ ಪುಟ್ಟುವವು. ಹೀಗೆ ಪುಟ್ಟಿ ಪುಟ್ಟಿ ಸಾಯುವ ಪ್ರಾಣಿಗಳ ವಿಷಯದಲ್ಲಿ ಕರುಣಾಶಾಲಿಗಳಾದಾಗ್ಯೂ ಸತ್ಪುರುಷರು ಯೇನುಮಾಡುವರು. ನಿತ್ಯಜನ್ಮ ನಿತ್ಯಮರಣವಾದ ಈ ಸಂಸಾರ ಸಂಭ್ರಮದಲ್ಲಿ ಹರ್ಷಶೋಕಗಳಿಂದುಪಯೋಗವೇನು. ಇಲ್ಲಿ ಬಿದ್ದಿರುವ ಪ್ರಾಣಿಗಳನ್ನಾವನು ದುಃಖದಿಂ ಬಿಡಿಸಲಿಚ್ಛೈಸುನೋ ಅವನು ತನ್ನ ಛತ್ರಿಯಿಂದಾಕಾಶಕ್ಕೆ ಸೂರ್ಯತಾಪವಂ ತಪ್ಪಿಸಲಿಚ್ಛೈಸುವನು. ಮತ್ತು ಅವನು ಭೂಮಿಯನ್ನೆಲ್ಲವನ್ನೂ ಗುಡಿಸಲಿಚ್ಛೈಸುವನು. ಮೋಟು ಮರಗಳಿಗೆ ಕಥೆಯುಂ ಪೇಳುವದು, ಪಶುಗಳಂತೆ ಮನೋಗುಣದಿಂದೆಳೆಯಲ್ಪಡುವ ಜನಗಳಿಗೆ ಉಪದೇಶವಂಮಾಡುವದು ಸಹ ಸಮವೆನಿಸುವದು. ವಿಚಾರ ಸಮರ್ಥವಾದ ಮನುಷ್ಯಜನ್ಮವಂ ಪಡೆದಾಗ್ಯೂ ನಾಶಕವಾದ ಕರ್ಮಗಳಲ್ಲೇ ಆಸಕ್ತರಾದಪ್ರಾಣಿಗಳಂನೋಡಿ ಕಲ್ಲುಗಳೂಕೂಡ ದುಃಖಪಡುವವು. ದುಷ್ಕರ್ಮವಿಲ್ಲದ್ದರಿಂದ ಮೂರ್ಖರಿಗಿಂತಲೂ ಕಲ್ಲುಗಳು ಉತ್ತಮವೆಂದು ತೋರುತಲಿಧೆ. ಮನವಂ ಜಯಿಸಿ ಭೋಗದಲ್ಲಿ ಬೀಳದಿರುವನ ದುಃಖಗಳು ಹೋಗಲಾಡಿಸುವದಕ್ಕೆ ಶಕ್ಯವಾದ್ದರಿಂದ ತಿಳಿದವರು ಅವನಿಗೆ ಉಪದೇಶವಂ ಮಾಡಲಿಚ್ಛೈಸುವರು. ಅದುಕಾರಣವೆ ವಿಚಾರಪರನಾದ ನಿನಗೆ ಹಿತವಂ ನಾನುಪೇಳುತ್ತಿರುವೆನು. ಅನ್ಯಕಲ್ಪಿತವಾದ ಪಿಶಾಚದಿಂ ಮತ್ತೊಬ್ಬನು ದಿಗಲುಪಡುವಂತೆ ಪ್ರಾಣಶಕ್ತಿ ಕಲ್ಪಿತವಾದ ಮನದಿಂ ನೀನು ದುಃಖಪಡಬೇಡ, ವಾರಸುಂದರಿಯುಂ ಕಂಡವನು ಸ್ವಧರ್ಮವಂಮರೆತು ಭೋಗವಂ ಬಯಸುವಂತೆ ಪ್ರಾಣಶಕ್ತಿಯಲ್ಲಾಸಕ್ತನಾದ ಆತ್ಮನು ಸ್ವರೂಪವಂ ಮರೆತು ದೃಶ್ಯಸಂಕಲ್ಪವಂ ಮಾಡಿದ್ದರಿಂ ಆ ಸಂಕಲ್ಪವೇ ಮನೋರೂಪದಿಂದ ದೃಶ್ಯಸಂಕಲ್ಪವಂ

ಮಾಡಿದ್ದರಿಂದ ಆ ಸಂಕಲ್ಪವೇ ಮನೋರೂಪದಿಂದ ಈ ಸಂಸಾರವನ್ನುಂಟುಮಾಡಿ ಇರುವದು. ಸಂಕಲ್ಪವಂ ನೀನು ಬಿಟ್ಟರೆ ಮನವು ಪ್ರಪಂಚವು ಸಹ ಶಾಂತವಾಗುವದು. ಕಟ್ಟಿಕೊಂಡವನ್ನೆಲ್ಲಾ ಕಷ್ಟವು, ಬಿಟ್ಟದ್ದೆಲ್ಲಾ ಸುಖವೆನ್ನುವದು ಅನುಭವಸಿದ್ಧವಾದ್ದರಿಂದ ವಿಚಾರಕ್ರಮದಿಂ ಸರ್ವವನ್ನೂ ಬಿಟ್ಟು ನಿತ್ಯಮುಕ್ತಸ್ವಭಾವದಿಂದಿರುವನಾಗು. ನಾನೆಂಬುವದ್ದರಿಂದಿದೆಂಬುವದು ಸಿದ್ಧವಾಗಿರುವದು. ಇದೆಂಬುವದನ್ನೇ ನಾನೆಂಬುವದು ಆಶ್ರಯಿಸಿಕೊಂಡಿರುವದು. ನಾನು ಇದೆಂಬ ಆತ್ಮಪ್ರಪಂಚಗಳ ಮಧ್ಯದಲ್ಲಿ ಉಭಯಾಧಾರವಾದ ಕಲ್ಪನೆಯಿರುವದು. ಅಖಂಡವಿಚಾರದಿಂದದಂ ನೀನು ಬಿಡಲು ನಾನು ಇದೆಂಬ ಭೇದವಿಲ್ಲದ ಕೈವಲ್ಯವು ಸಿದ್ಧವಾಗುವದು. ದೃಷ್ಟೃದರ್ಶನ ದೃಶ್ಯಾದಿ ತ್ರಿಪುಟಿಗಳಲ್ಲಿ ನಿರಾಲಂಬವಾದ ಮಧ್ಯಭಾಗವಂ ದೃಢವಾಗಿ ಹಿಡಿಯಲು ನಿರ್ವಿಕಲ್ಪವಾದ ಸ್ವರೂಪವು ಗೊತ್ತಾಗುವದು. ಅದನ್ನೇ ಭಾವಿಸುತ್ತಿರುವನಿಗೆ ಮರೆತಿದ್ದ ಒಡವೆಯಂತೆ ಕೈವಲ್ಯವು ಲಬ್ಧವಾಗುವದು. ವ್ಯಾಪಕವಾದ ನಿಜತತ್ವವಂ ನೋಡದೆ ಭಿನ್ನವಾಗಿ ದೃಶ್ಯವಂ ಹಿಡಿದದ್ದರಿಂದ ಸ್ವರೂಪವಂ ಮರೆತ ಆತ್ಮನೇ ಚಿತ್ತಭಾವವಂ ಹೊಂದುವನು. ಆಗ ಸಮಸ್ತ ಸಂಸಾರವೂ ಉಂಟಾಗುವದು. ಬೇರೆ ಸತ್ವವಿಲ್ಲದ್ದರಿಂದೀಜಗವಸತ್ಯವೆಂದು ನಿಶ್ಚಯಿಸಿದಾತ್ಮನು ಮರಳಿ ಸ್ವಸ್ವರೂಪಸ್ಥಿತಿಯನ್ನೇ ಪಡೆವನು. ಸಮಸ್ತಪದಾರ್ಥಗಳಿಗೂ ಒಂದೇ ಸತ್ವವಾದ್ದರಿಂದ ಸರ್ವವೂ ಆತ್ಮನೆಂದು ನಿಶ್ಚಯವಾಗಲು ಮನ ಮೊದಲಾದ ಸರ್ವ ಪ್ರಪಂಚವೂ ಶಾಂತವಾಗುವದು. ಚಿತ್ತಕ್ಕೊಂದು ಸತ್ವವಿರುವದೆಂಬ ನಿನ್ನ ಭಾವನೆಯೇ ಸಂಸಾರಕ್ಕೆ ಬೀಜವಾಗಿ ನಿನಗೆ ಬಾಧಕವಾಗಿರುವದು. ಈ ಭಾವನೆಯಿಂ ಚಿತ್ತಕ್ಕೊಂದು ಸತ್ವತೋರುವಲ್ಲಿ ನೀರುಹಾಕಿದ ಬೀಜದಿಂ ಲತೆಯಂತೆ ಈ ಚಿತ್ತದಿಂದಲೇ ದಾಹ ದೋಷ ಜನಕವಾದ ಆಶೆಯುಂಟಾಗುವದು. ಜಾರ ಚೋರಾದಿಯ ಸ್ವೈರಿಗನುಕೂಲವಾದ್ದರಿಂದಲೂ, ದೃಷ್ಟಿಯಂ ತಡೆದು ಪದಾರ್ಥಗಳಲ್ಲಿ ವಿಪರೀತ ಜ್ಞಾನವನ್ನುಂಟುಮಾಡುವದರಿಂದಲೂ, ರೋಗಗಳಿಗೆ ವರ್ಧಕವಾದ್ದರಿಂದಲೂ, ಕತ್ತಲೆಯಂ ವಿಗಲು ಬೀಳುವ ಪ್ರಾಣಿಗಳಿಗೆ ಮೃತ್ಯುರೂಪವಾದ್ದರಿಂದಲ. ಭೂಮ್ಯಂತರಿಕ್ಷಗಳಲ್ಲಿ ಮಾಲಿನ್ಯವನ್ನುಂಟುಮಾಡುವದರಿಂದಲೂ, ಅನಂತ ವಿಕಾರಕಾರಣವಾದ ವರ್ಷಾಕಾಲದ ಕೃಷ್ಣಪಕ್ಷದ ರಾತ್ರಿಗೆ ಸಮವಾದ ಈ ಆಶೆಯು ವಿವಿಧ ಶಾಕಿನಿಯಂತೆ ಮೋಹವನ್ನುಂಟುಮಾಡುವದು. ಹರಿಹರಾದಿಗಳು ಕಲ್ಪಾಗ್ನಿಜ್ವಾಲೆಗಳನ್ನು ಕೂಡ ತಡೆವರಲ್ಲದೆ ಆಶೆಯಂತಡೆಯಲಿಲ್ಲವಾದ್ದರಿಂದ ಆಶಾಗ್ನಿಜ್ವಾಲೆಯಂ ಸಹಿಸುವದಕ್ಕೆ ಯಾರೂ ಸಮರ್ಥರಲ್ಲವೆಂದು ತಿಳಿಯತಕ್ಕದ್ದು. ತೀಕ್ಷ್ಣ ವಾಗ್ನಿ

ಯೂ, ದೀರ್ಘವಾಗಿಯೂ, ಕಪ್ಪಾಗಿಯೂ, ಬೆಳಗುವಕತ್ತಿಯು ಮುಟ್ಟಲು ತನುವಾಗಿರುವಂತೆ ಈ ಆಶೆಯು ಮೊದಲು ಸುಖವಾಗಿ ತೋರುವದು. ಬಳಿಕ ಸರ್ಪದಂತೆ ಪ್ರಾಣವನ್ನೇ ಹೀರುವದು. ಲೋಕದಲ್ಲಿ ದುಃಖಗಳೆಷ್ಟಿರುವವೋ ಅವೆಲ್ಲವೂ ಈ ಆಶಾಲತೆಯ ಫಲಗಳೆಂದು ಹೇಳಲ್ಪಡುವವು. ಆಶೆಯೆಂಬ ಕಾಡುನಾಯಿ ಹೃದಯಬಿಲಕ್ಕೆ ಬರಲು ಮಹಾತ್ಮರ ಶರೀರವೂ ಕೂಡ ಕೃಶವಾಗುವದು. ಮಳೆಗಾಲದ ಕ್ಷುದ್ರನದಿಯಂತಿದು ಕ್ಷಣಮಾತ್ರದೊಳ್ ಉಲ್ಲಾಸವನ್ನು ಮತ್ತೊಂದು ಕ್ಷಣದಲ್ಲೇ ಶೂನ್ಯಭಾವವನ್ನು ಹೊಂದುವದು. ಆಶಾಪಿಶಾಚಿಯ ಆವೇಶಬಂದವನಿಗೆ ಮೋಹರೋದನ ದೈನ್ಯನಿಪಾತ ಮೊದಲಾದ ವಿಕಾರಗಳೆಲ್ಲವೂ ಸಿದ್ಧವಾಗುವವು. ಈ ಆಶಾರೋಗವಿಲ್ಲದೆ ಸ್ವಸ್ಥವಾಗಿರುವ ಹೃದಯಾಕಾಶದೊಳ್ ಚಂದ್ರನಕಿರಣಗಳಂತೆ ಪರಮಾರ್ಥರೀತಿಗಳು ಪ್ರಕಾಶಿಸುತ್ತಿರುವವು. ಆಶೆಯೆಂಬ ಕಾಮಾಲೆಯಿಂದ ಪ್ರಪಂಚವೆಲ್ಲವೂ ಸ್ತ್ರೀಮಣಿ ಕನಕಮಯವಾಗಿ ಕಾಣುವದರಿಂದ ಪ್ರಾಣಿಗಳು ತಿರುಗಿ ತಿರುಗಿ ಬಡಿದಾಡುತ್ತಾ ಚೂರುಚೂರಾಗಿ ಬೀಳುವವು. ಕೊನೆಯಲ್ಲಿ ತೀಕ್ಷ್ಣವಾಗಿ ಹೃದಯದೊಳ್ ಕಠಿಣವಾಗಿ ಮೂಲವನ್ನೇ ಛೇದಿಸುವ ಈ ಆಶೆಯೆಂಬ ಪರಶುವು ಹೃದಯವಂ ಸೇರಲು ಜನಗಳು ಕುರಡ ಜಿಂಕೆಯಂತೆ ಹಾರಾಡುತ್ತಾ ಹಳ್ಳಗಳಲ್ಲಿ ಬೀಳುವರು. ಜರೆಯಂತಿದು ದೃಷ್ಟಿಮಾಂದ್ಯವನ್ನುಂಟುಮಾಡುತ್ತಾ ಹೃದಯಕ್ಕೆ ದೈನ್ಯವನ್ನು ಶರೀರಕ್ಕೆ ಆಲಸ್ಯವನ್ನೂ ಪುಟ್ಟಿಸುವದು. ಗೂಬೆಯಂತೀ ಆಶೆಯು ಪೊಕ್ಕ ಮನೆಯನ್ನೇ ಹಾಳುಮಾಡುವದು. ಏನೋ ಬಂದಾಶೆಯಿಂದ ಮುಕುಂದನು ವಾಮನನಾದನು. ಚಂದ್ರಶೇಖರನು ಭಿಕ್ಷುಕನಾದನು. ಬ್ರಹ್ಮನು ಹಂಸವಾದನು. ಸೂರ್ಯ ಚಂದ್ರಾದಿಗಳು ಅಂತರಿಕ್ಷದೊಳಲೆಯುತ್ತಿರುವರು. ನಿರ್ಗುಣನಾದ ಪರಮಾತ್ಮನೂ ಕೂಡ ಜಡಪದಾರ್ಥವಂ ಕಲ್ಪಿಸಿಕೊಂಡು ಅದನ್ನೇ ತಾನೆಂದು ಗ್ರಹಿಸಿ ಭ್ರಮಿಸುತ್ತಿರುವನು. ಜಾಡನ ಬಲೆಯೊಳ್ ಹುಳುಗಳಂತೆ ಸಮಸ್ತ ಪ್ರಾಣಿಗಳೂ ಈ ಆಶೆಯಲ್ಲಿ ತಗಲಿಕೊಂಡಿರುವರು. ಕಾಲಪಾಶದಂತೆ ತೀವ್ರವಾದ ಆಶಾ ಸೂತ್ರದಿಂದಲೇ ಸಕಲಲೋಕ ವ್ಯಾಪಾರಗಳು ನಡೆಯುತ್ತಿರುವವು. ಅಷ್ಟಂದಾಶಾಪಾಶಕ್ಕಿಂತಲೂ ಮತ್ತೊಂದು ಬಂಧವಿಲ್ಲವೆಂದು ತಿಳಿಯಬರುತ್ತೆ, ಈ ಆಶೆಯು ಜಾಡನ ಹೊಟ್ಟೆಯೊಳ್ ಹಕ್ಕಿಯಂತೆ ಮನದೊಳ್ ಸಂಕಲ್ಪ ಕಲ್ಪನಾರೂಪದಿಂದಿರುವದು. ಕಾಲಪಾಶಕ್ಕೆ ತಗಲದೆ ಅದನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಹರಿಹರಾದಿಗಳೂ ಕೂಡ ಈ ಆಶಾಪಾಶಕ್ಕೊಳಗಾಗಿ ನಡೆಯುವಲ್ಲಿ ಕಡಮೆಯವರ ಪಾಡೇನೆಂದು ಹೇಳಬೇಕು? ನಾನು ನೀನೆಂಬ ಕಲ್ಪನೆಗಳ

ಕೂಡ ಈ ಆಶೆಯೇ ಕಾರಣವಾಗಿರುವದು. ಅನಾತ್ಮ ಪದಾರ್ಥವಲ್ಲಿ ಆತ್ಮಭಾವನೆಯುನ್ನುಂಟುಮಾಡಿ ಇಲ್ಲದ ಅಹಂಭಾವವಂ ಪುಟ್ಟಿಸುವ ಈ ಆಶೆಯುಂ ಬಿಡದೆ ಯಾರೂ ಮುಕ್ತರಾಗಲಾರರಾದ್ದರಿಂದ ನಿಜವಾದ ಅಖಂಡ ಭಾವವನ್ನೇ ಭಾವಿಸುತ್ತಾ ನಿತ್ಯಾನಂದನಾಗಿರುವ ನಾನೆಂದು ವಸಿಷ್ಠನು ಪೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯೊಳ್ ಉಪಶಮಪ್ರಕರಣವಲ್ಲಿ ಜನಕ ಸಿದ್ಧಿಕ್ರಮನಿರೂಪಣವೆಂಬ ಎರಡನೇ ತರಂಗಕ್ಕೆ ಮಂಗಳಮಸ್ತು. ಶ್ರೀ ಶ್ರೀ ಶ್ರೀ ಜಯತು.

—o—

## ಆಶಾಪರಿತ್ಯಾಗಾದಿ ಸಾಧನಕ್ರಮ ನಿರೂಪಣವು.

ಬಳಿಕ ಶ್ರೀ ರಾಮಚಂದ್ರನಿಂತೆಂದನು,-ಎಲೈ ಗುರುವೇ! ಆಹಾರ ನಿದ್ರಾ ಮೊದಲಾದ ವ್ಯಾಪಾರಗಳೆಲ್ಲವೂ ಆಶೆಗೆ ಅಧೀನವಾಗಿರುವವು. ಆ ಆಶೆಗೆ ಅಹಂಭಾವವೇ ಆಧಾರವಾಗಿರುವದು. ಪ್ರಾಣವಿರುವವರಿಗೆ ಅಹಂಭಾವವು ತಪ್ಪದಾದ್ದರಿಂದ ಅಹಂಭಾವವಂ ನಿಶ್ಶೇಷವಾಗಿ ಬಿಡುವಲ್ಲಿ ಪ್ರಾಣಸ್ಥಿತಿಗೆ ಸಂದೇಹ ಬರುವದು. ದೇಹಕ್ಕೆ ಮೂಲಸ್ತಂಭದಂತೆ ಅವಲಂಬನವಾದ ಅಹಂಭಾವವಂ ಬಿಟ್ಟು ಬದುಕುವದು ಹ್ಯಾಗೋ ತಿಳಿಯಲಿಲ್ಲ. ಅಹಂಭಾವ ವಿರುವವರಿಗೆ ದುಃಖ ತಪ್ಪಲಾರದು. ಅದಂಬಿಡುವಲ್ಲಿ ಪ್ರಾಣವೇ ನಿಲ್ಲದು ಹೀಗಿರುವದ್ದರಿಂದ ಹ್ಯಾಗೆ ಅಹಂಭಾವಮಂ ಬಿಟ್ಟು ಜೀವನ್ಮುಕ್ತನಾಗತಕ್ಕದ್ದೋ! ಆ ವಿಷಯವಂ ಪೇಳಬೇಕು ಎಂದು ಬೆಸಗೊಳ್ಳುವ ಶ್ರೀರಾಮನಂ ಕುರಿತು ವಸಿಷ್ಠನು ಪೇಳಿದನದೆಂತೆನೆ,- ಎಲೈ ಮನುಕುಲೋತ್ತಮನೇ ತ್ಯಾಗವೆಂಬುವದು ವಾಸನೆಗಲ್ಲದೆ ವಸ್ತುವಿಗಲ್ಲವೆಂದು ನಿಶ್ಚಯಿಸುವನಾಗು. ಆ ವಾಸನಾತ್ಯಾಗವು ಜ್ಞೇಯವೆಂತಲೂ, ಧ್ಯೇಯವೆಂತಲೂ, ಎರಡು ಬಗೆಯಾಗಿ ಪೇಳಲ್ಪಡುವದು. ಅವುಗಳಲ್ಲಿ ಧ್ಯೇಯವೆಂಬುವದು ಸಾಧನವಾದ್ದರಿಂದ ಅದರ ರೀತಿಯಂ ಮೊದಲು ಪೇಳುವೆನು. ಸತ್ಸಹವಾಸದಿಂದುದಿತವಾದ ವೈರಾಗ್ಯದಿಂ ವಿಚಾರಿಸುವಲ್ಲಿ ಪುತ್ರ ಮಿತ್ರ ಕಳತ್ರಾದಿ ಬಂಧುಗಳೆಲ್ಲರೂ ಬೇರೆಯೆಂತಲೂ ತಾನು ಬೇರೆಯೆಂತಲೂ ಗೊತ್ತಾಗುವದು. ಬಳಿಕ ಆಪ್ತ ಬಂಧುಗಳಂತೆ ಬಿಡಲಶಕ್ಯವಾದ ದೇಹೇಂದ್ರಿಯಗಳಲ್ಲಿ ನನ್ನಂ ಬಿಟ್ಟು ಇವು ಇರಲಾರವು. ಇವುಗಳಂ ಬಿಟ್ಟು ನಾನು ಇರಲಾರೆನು. ಆದ್ದರಿಂದ ಇವುಗಳೇ ನನ್ನ ಪದಾರ್ಥಗಳು ಇವುಗಳಿಂದಲೇ ನಾನು ಬದುಕುವೆನೆಂದು ನಿಶ್ಚಯವಾಗುವದು. ಬಳಿಕ ಚಿದಚಿದ್ವಿವೇಕದಿಂದ ಚಿನ್ಮಾತ್ರಸ್ವರೂಪನು ತಾನೆಂತಲೂ ಅಂತಃಕರಣಾದಿ ಸ್ಥೂಲಾಂತವಾದ

ಈ ಜಡಪದಾರ್ಥಗಳು ತಾನಲ್ಲವೆಂತಲೂ ತನಗೂ ಇವುಗಳಿಗೂ ಸಂಬಂಧವಿಲ್ಲವೆಂತಲೂ ಗೊತ್ತಾಗುವುದು. ಇದರ ಪರಿಭಾವನೆಯಿಂದ ತಾನು ತಟಸ್ಥನೆಂತಲೂ, ಅಸಂಗನೆಂತಲೂ, ನಿತ್ಯಸುಭಾವನೆಯಿಂದ ತಾನು ತಟಸ್ಥನೆಂತಲೂ, ಅಸಂಗನೆಂತಲೂ, ನಿತ್ಯನೆಂತಲೂ, ಅಂತಃಕರಣಾದಿಗಳು ಅನಿತ್ಯವೆಂತಲೂ ನಿಶ್ಚಯವಾಗುವದು. ಈ ರೀತಿಯಾದ ಸಾಕ್ಷಿ ಭಾವ ಭಾವನೆಯಿಂದ ಅಂತಃಕರಣಾದಿಗಳಿಂದುಂಟಾದ ಸಂತಾಪವು ಕಡಿಮೆಯಾಗುತ್ತ ಬರಲು ಆ ಪದಾರ್ಥಗಳ ಭಾವನೆಯು ಅವುಗಳಿಗಭಿಮತವಾದ ಪದಾರ್ಥಗಳ ವಾಸನೆಯು ಸಹ ತಪ್ಪುವದು. ಆಗ ಈಶ್ವರಾಜ್ಞಾರೂಪವಾದ ಶಾಸ್ತ್ರದಿಂ ವಿಧಿಸಲ್ಪಟ್ಟ ವ್ಯಾಪಾರಗಳು ಬಿಡತಕ್ಕದ್ದಲ್ಲವೆಂದು ಕರ್ಮಗಳು ತಟಸ್ಥಭಾವದಿಂದಲೆ ನಡೆಸಲ್ಪಡುವವು. ಈ ವಾಸನಾ ತ್ಯಾಗವೇ ಧ್ಯೇಯವೆನಿಸುವದು. ಇಂತಪ್ಪ ಸಾಕ್ಷಿ ಭಾವ ವಿದ್ದಾಗ್ಯೂ ಸಮಾಧಿ ತಪ್ಪಿದ ಕಾಲದಲ್ಲಿ ಅಂತಃಕರಣಾದಿಗಳು ನಿಷ್ಠವಾಗಿರುವದ್ದರಿಂದ ಇವುಗಳು ಅನಿತ್ಯವೆಂತಲೂ, ಜಡವೆಂತಲೂ ಎಷ್ಟೆಷ್ಟು ಬಗೆಯಾಗಿ ನಿರಾಕರಿಸಿದಾಗ್ಯೂ ಮೊಂಡರಂತೆ ಬಿಡದಿರುವದಕ್ಕೆ ಕಾರಣವೇನು. ಯಾತರಿಂದಿವುಗಳಿರುವವೆಂದು ಸತ್ತಾಬಲವಂ ವಿಚಾರಿಸುವಲ್ಲಿ ತನಿಗೂ ಇವುಗಳಿಗೂ ಪರಮಾತ್ಮನ ಸತ್ಯವೇ ಆಧಾರವಾಗಿರುವದು. ಒಂದೇ ಸತ್ವವಾದ್ದರಿಂದಲು ಬ್ರಹ್ಮಕ್ಕೆ ದೇಶ ಕಾಲ ವಸ್ತು ಭೇದವಿಲ್ಲದ್ದರಿಂದಲೂ, ನಾನು ಇವುಗಳೆಂಬುವದೇ ಮೊದಲಾದ ಸಮಸ್ತ ಪ್ರಪಂಚವು ಬ್ರಹ್ಮವೆಂತಲೂ ಇದರ ಮಹಿಮೆಯುಂ ನೋಡುವಲ್ಲಿ ನಾನೆನ್ನುವದಕ್ಕೂ ಅವಕಾಶವಿಲ್ಲದ್ದರಿಂದ ಬ್ರಹ್ಮಕ್ಕೆ ಇದು ಭಿನ್ನವಾದ್ದೆಂಬ ಜ್ಞಾನವಸತ್ಯವೆಂತಲೂ, ಗೊತ್ತಾಗುವದು. ಈ ವಿಚಾರದಲ್ಲಾಸಕ್ತನಾದವನು ಕರ್ತೃ, ಕರಣ ಕಾರ್ಯಾದಿ ತ್ರಿಪುಟೀ ರೂಪದಿಂದಿರುವ ಪದಾರ್ಥಗಳೆಲ್ಲವೂ ಬ್ರಹ್ಮವೆಂದು ಪರಿಭಾವನೆಯುಂ ಮಾಡುತ್ತಾ ಸಕಲ ಕಾರ್ಯಗಳನ್ನೂ ಮಾಡುತ್ತಿರುವನು. ಈ ನಡಿಸುತಿರುವನಿಗೆ ಪದಾರ್ಥಗಳ ವಾಸನೆಯು ಮೂಲಾಜ್ಞಾನದೊಡನೆ ನಷ್ಟವಾಗುವದು. ಇಂತಪ್ಪ ವಾಸನಾತ್ಯಾಗವೇ ಜ್ಞೇಯವೆನಿಸುವದು. ಧ್ಯೇಯದಲ್ಲಿ ನಾನೆಂಬುವದು ಇದ್ದಾಗ್ಯೂ ಅದು ಅಖಂಡ ಸಚ್ಚಿದಾನಂದ ಸ್ವರೂಪವಾದ ಪರಮಪದವಲ್ಲ ನೆಲಸಿದ್ದರಿಂದ ಮರಳಿ ಜಡಾತ್ಮಜ್ಞಾನಿಗಳಿಗೆ ಸಹಜವಾಗಿ ನನ್ನದೆಂಬುವದುಂ ಕೂಡಿರುವ ಅಜ್ಞಾನಸಿದ್ಧವಾದ ನಾನೆಂಬ ಬುದ್ಧಿಯುಂಟಾಗದು. ಈ ಅಜ್ಞಾನಕ್ಕೆ ಪುನರಾವೃತ್ತಿ ಇಲ್ಲದ್ದರಿಂದ ಈ ಧ್ಯೇಯ ವಾಸನಾತ್ಯಾಗವು ಜೀವನ್ಮುಕ್ತಿ ಮಾನಿಸುವದು. ಇದರಲ್ಲಿರುವ ಜನಕಾದಿ ಮಹಾತ್ಮರು ಜೀವನ್ಮುಕ್ತರೆಂದು ಪ್ರಸಿದ್ಧರಾಗಿರುವರು. ಜ್ಞೇಯದಲ್ಲಿ ನಾನೆಂಬುವದೇ ಇಲ್ಲದ್ದರಿಂದ ಅಲ್ಲಿರುವ ಮಹಾತ್ಮರು

ವಿದೇಹ ಮುಕ್ತರೆಂದು ಪ್ರಸಿದ್ಧರಾಗಿ ಬ್ರಹ್ಮದಲ್ಲೇ ನಿಂದಿರುವರು. ಅವರಿರುವ ದೇಹವು ನಮ್ಮ ದೃಷ್ಟಿಗೆ ಗೋಚರವಾಗಿ ಇಧೆಯಲ್ಲದೆ ಅವರ ದೃಷ್ಟಿಗೆ ಗೋಚರವಾಗಿಲ್ಲವಾದ್ದರಿಂದ ಅವರಂ ವಿದೇಹಮುಕ್ತರೆಂತಲೇ ತಿಳಿಯತಕ್ಕದ್ದು. ಧ್ಯೇಯತ್ಯಾಗದಿಂ ಸಿದ್ಧಿಸಿದ ಮುಕ್ತಿಯಲ್ಲಿ ದೇಹನಾನೆಂಬ ಅಜ್ಞಾನವು ಪೂರ್ವದಂತೆ ಇಲ್ಲದಿದ್ದಾಗ್ಯೂ ದೇಹಕ್ಕೆ ಬಂದಿದ್ದ ಪೆಸರಂ ಪಿಡಿದು ಜನಗಳು ಕೂಗುವ ಕಾಲದಲ್ಲಿ ಪೂರ್ವಾಭ್ಯಾಸಸ್ಮೃತಿಯಿಂ ಸಿದ್ಧವಾಗಿ ಮರಳಿ ವಿಚಾರದಿಂ ಪೋಗುವದು. ಅದರಿಂದದು ಜೀವನ್ಮುಕ್ತಿಯೆನಿಸುವದು. ಜ್ಞೇಯತ್ಯಾಗದಲ್ಲಿ ಪೆಸರಂ ಪಿಡಿದು ಕೂಗಿದಾಗ್ಯೂ ಅದು ಸಿದ್ಧವಾಗದಾದ್ದರಿಂದದು ವಿದೇಹ ಮುಕ್ತಿಯೆನಿಸುವದು. ಅದಂ ಪಡೆದವರಿಗೆ ಪ್ರಾರಬ್ಧ ಭೋಗಾಂತವಾಗಿ ಇರತಕ್ಕ ಶರೀರವು ಪರರ ದೃಷ್ಟಿಗೆ ಗೋಚರವಾಗಿರುವದಲ್ಲದೆ ಅವರ ದೃಷ್ಟಿಗೆ ಗೋಚರವಾಗದು. ಜನರಿಗೆ ಅವರಿಂದಾಗತಕ್ಕ ಕಾರ್ಯಗಳಿದ್ದಲ್ಲಿ ಪ್ರಾರಬ್ಧವಶದಿಂ ಬಂದ ಜನಗಳ ಇಚ್ಛೆಯು ಆತ್ಮೈಕ್ಯವಿರುವದ್ದರಿಂದವರಲ್ಲಿ ಸ್ವಾಭಾವಿಕವಾಗಿರುವ ಜ್ಞಾನೇಚ್ಛಾಕ್ರಿಯಾ ಶಕ್ತಿಗಳಲ್ಲಿ ಸೇರುವದು. ಬಳಿಕ ಪರಮಾತ್ಮನಿಂ ಪ್ರಪಂಚದ ಸೃಷ್ಟಿಯಾದಂತೆ ಜನಗಳ ಕಾರ್ಯವು ಅವರಿಂದಾಗುವದು. ಕಾರ್ಯಕಾಲದಲ್ಲಿ ಅವರಿಗೆ ಸ್ವೇಚ್ಛೆಯಿಂದಲೇ ಅಹಂಕಾರಾದಿಗಳು ಸಿದ್ಧವಾಗುವವಲ್ಲದೆ ಪೂರ್ವಾಭ್ಯಾಸ ಸ್ಮೃತಿಯಿಂ ಬರಲಾರವು. ಅವರಿಗೆ ಶರೀರವು ಕರಕಾಗಿ ನಿಂದಿದ್ದ ಬಟ್ಟೆಯಂತೆ ಪರರಿಗೆ ಗೋಚರವಾಗಿರುವದು. ಶರೀರವು ಕರ್ಮಜಾತವಾದ್ದರಿಂದ ಪ್ರಾರಬ್ಧ ಭೋಗವು ಅವರ ಶರೀರಕ್ಕೆ ಸಂಭವಿಸಿದ್ದು ಅಲ್ಲಿಯೇ ನಷ್ಟವಾಗುವದು. ಆ ಪ್ರಾರಬ್ಧವೂ ಕೂಡ ಅವರಿಗೆ ಆತ್ಮಾಭಿನ್ನವಾಗಿಯೇ ತೋರುತ್ತಿರುವದು. ಜನಗಳ ಕಾರ್ಯಾರ್ಥವಾಗಿ ಅಹಂಕಾರ ಮಮಕಾರಗಳು ಸಿದ್ಧವಾದಾಗ್ಯೂ ಅವುಗಳು ವಿಚಾರದೊಡನೆಯೇ ಸಿದ್ಧವಾಗುವದ್ದರಿಂದ ಇಷ್ಟಾನಿಷ್ಟ ಕಾರ್ಯಗಳಲ್ಲಿ ಜೀವನ್ಮುಕ್ತರು ಹರ್ಷಶೋಕ ಭಯಕಾರ್ಪಣ್ಯ ಕಾಮಕ್ರೋಧಾದಿಗಳೊಳ್ ತಟಸ್ಥಭಾವದಿಂದಲೇ ಇರುವರು. ವಿದೇಹ ಮುಕ್ತರಿಗೆ ಆತ್ಮೇತರ ಪದಾರ್ಥಜ್ಞಾನವೇ ಉಂಟಾಗಲಾರದು. ಇದರಿಂದಲೇ ಇವರ ಭೇದವಂ ತಿಳಿಯತಕ್ಕದ್ದು. ವಿದೇಹ ಮುಕ್ತರ ರೀತಿಯು ಪರಮಾತ್ಮ ವಿಲಾಸದಂತೆ ವಾಙ್ಮನಗಳಿಗೆ ಅಗೋಚರವಾದ್ದರಿಂದ ವಿಚಾರ ಪರರಾದವರಿಗೆ ಮೊದಲು ಸಿದ್ಧವಾಗತಕ್ಕ ಜೀವನ್ಮುಕ್ತರ ಕ್ರಮವಂ ಕೇಳುವನಾಗು.- ವಿವೇಕ ವಿಚಾರಾದಿಗಳಿಂದಿವರಿಗೆ ಕರ್ಮಫಲವಾದ ಐಹಿಕಾಮುಷ್ಮಿಕ ಭೋಗಗಳು ಅನಿತ್ಯವೆಂತಲೂ, ಅವುಗಳಲ್ಲಿ ಆಸಕ್ತಿಯೇ ಬಂಧಕವೆಂತಲೂ, ಅಂತಃಕರಣಾದಿ ಜಡಪದಾರ್ಥಗಳಲ್ಲಿ ನಾನೆಂಬ

ಜ್ಞಾನವೇ ಬಂಧವೆಂತಲೂ, ಈ ಅಜ್ಞಾನವು ನಿಶ್ಶೇಷವಾಗಿ ಪೋಗುವಲ್ಲಿ ಪ್ರಕಾಶಿಸುವ ವಿಜ್ಞಾನವದೇ ಮೋಕ್ಷವೆಂತಲೂ, ದೇಶಕಾಲವಸ್ತು ಭೇದವಿಲ್ಲದ್ದರಿಂದ ಸತ್ಯಜ್ಞಾನಾನಂತ ಸ್ವರೂಪವಾದ ಪರತತ್ವಕ್ಕೆ ಬ್ರಹ್ಮವೆಂಬ ಸಂಜ್ಞೆಯು ವ್ಯವಹಾರಾರ್ಥವಾಗಿ ಉಂಟಾಗಿರುವದು. ಅದರ ಮಹಿಮೆಯಂ ವಿಚಾರಿಸುವಲ್ಲಿ ನಾನು ನನ್ನದೆಂಬುವದೇ ಮೊದಲಾದ ಯಾವವಾತಿಗೂ ಅವಕಾಶವಿಲ್ಲವೆಂತಲೂ, ಅದಕ್ಕೆ ಭಿನ್ನವಾಗಿ ಪದಾರ್ಥಗಳು ತೋರುವದೇ ಮಾಯೆಯೆಂತಲೂ, ಬ್ರಹ್ಮ ಭಿನ್ನವಾಗಿ ಪದಾರ್ಥಗಳಂ ತಿಳಿಯುವದೇ ಅವಿದ್ಯೆಯೆಂತಲೂ, ಜಗದ್ರೂಪದಿಂ ಪ್ರಕಾಶಿಸುವಲ್ಲಿ ಬ್ರಹ್ಮವೇ ಅಹಂಭಾವವನ್ನವಲಂಬಿಸಿ ಪೊರಮಟ್ಟಿತಾದ್ದರಿಂದ ನಾನೆಂಬುವದು ಸರ್ವವ್ಯಾಪಕವಾಗಿರುವದೆಂತಲೂ, ಬ್ರಹ್ಮಭೇದದಿಂ ನಾನೇ ಸರ್ವಸ್ವರೂಪನಾಗಿರುವೆನೆಂತಲೂ, ನನಗೆ ಭಿನ್ನವಾಗಿ ನಾನಾವಿಧ ನಾಮರೂಪಗಳಿಂ ತೋರುವ ದೃಶ್ಯಪ್ರಪಂಚವು ಅಜ್ಞಾನಿಕವಾದ್ದರಿಂದ ಅಸತ್ಯವೆಂತಲೂ, ನಿಶ್ಚಯವಾಗುವುದು. ಅದ್ದರಿಂ ಜೀವನ್ಮುಕ್ತರು ಫಲಾಪೇಕ್ಷೆ ಇಲ್ಲದೆ ಈಶ್ವರಾಜ್ಞಾರೂಪವಾದ ಶಾಸ್ತ್ರಗಳಂ ಉಲ್ಲಂಘಿಸತಕ್ಕದ್ದಲ್ಲವೆಂದು ಕರ್ಮಗಳಂ ಮಾಡುವದು ಒಳ್ಳೆಯದೆಂತಲೂ, ಕೆಟ್ಟದ್ದೆಂತಲೂ, ಇಷ್ಟವೆಂತಲೂ, ಅನಿಷ್ಟವೆಂತಲೂ, ಯಾವದನ್ನೂ ಭಾವಿಸರು ಅವರಿಂವರೇ ರಾಗದ್ವೇಷಗಳಿಲ್ಲದಿರುವರು. ಸಮದೃಷ್ಟಿಗಳಾದಾಗ್ಯೂ ಲೋಕಕ್ಕೆ ವಿರೋಧವಾಗದಂತೆ ದುಷ್ಟರಲ್ಲಿ ಉಪೇಕ್ಷೆಯನ್ನು, ದೀನರಲ್ಲಿ ದಯವನ್ನು, ಸತ್ಕಾರ್ಯದಲ್ಲಿ ಸಂತೋಷವನ್ನು, ಸತ್ಪುರುಷರಲ್ಲಿ ಸ್ನೇಹವನ್ನು ಪರಿಗ್ರಹಿಸುವರು. ಲಾಭಾಲಾಭಗಳಲ್ಲೂ ವೃದ್ಧಿ ಹಾನಿಗಳಲ್ಲೂ ಹರ್ಷ ಶೋಕಂಗಳಂ ಹೊಂದರು. ಇತರರಿಗೆ ಇವರ ನಿಶ್ಚಯವಿಲ್ಲದ್ದರಿಂದ ವಿಷಮ ದೃಷ್ಟಿಗಳಾಗಿ ಅವಿವೇಕದಿಂ ಜಡವಾದ ದೇಹವಂ ತಾನೆಂದು ತಿಳಿದು ಅಭಿಮಾನದಿಂ ಪತ್ನೀಪುತ್ರರನ್ನೂ ಕೂಡ ಆತ್ಮನೆಂತಲೂ, ಭೋಗ ದ್ರವ್ಯಗಳನ್ನೂ ಹೊರಗಣ ಪ್ರಾಣವೆಂತಲೂ, ಭಾವಿಸುತ್ತಾ ನಿಜ ಯೋಗ ಕ್ಷೇಮಾರ್ಥವಾಗಿ ಕರ್ಮಗಳಂ ಮಾಡುವರು. ಕ್ಷಣಿಕವಾದ ಹರ್ಷ ಶೋಕಗಳಿಂದಲೂ ಜಿರಗಾಗುವರು, ಅತ್ಯಲ್ಪವಾದ ವಿದ್ಯಾಧನ ಲಾಭದಲ್ಲೂ ಮೈಮರೆತು ನಡೆವರು. ಫಲಸಾಧಕವಾದ್ದೇ ಧರ್ಮವೆಂತಲೂ, ಪ್ರಾಣಪ್ರಿಯಳ ವಚನವೇ ವೇದವೆಂತಲೂ, ತನಗೆ ತೋರಿದ್ದೇ ಪ್ರಮಾಣವೆಂತಲೂ, ತಾನು ಮಾಡಿದ್ದೇ ಸತ್ಕಾರ್ಯವೆಂತಲೂ, ಗುರು ಹಿರಿಯರಿಗಂಜದ ನಡೆಯುವ ಅಜ್ಞಾನಿಗಳ ನಡತೆಯಂ ಸ್ಮರಿಸಿದವನಿಗೂ ಕೂಡ ಪಾಪ ಬರುವದು. ಎಲೈ ಶ್ರೀರಾಮನೆ ಮಾತಾಪಿತೃ ಸಂಬಂಧದಿಂದುಂಟಾದ ದೇಹವೇ ನಾನೆಂತಲೂ, ಕೂದಲಿನ ಕೊನೆ

ಗಿಂತಲೂ ಅತಿ ಸೂಕ್ಷ್ಮವಾದ ಸ್ವರೂಪವುಳ್ಳವನಾಗಿ ಸಮಸ್ತಭಾವ ಪದಾರ್ಥ ಗಳನ್ನತಿಕ್ರಮಿಸಿರುವನು ನಾನೆಂತಲೂ, ಸಕಲ ಜಗತ್ತೂ ಪದಿಂ ಪ್ರಕಾಶಿಸು ತಿದ್ದಾಗ್ಯೂ ನಾನು ಅಕ್ಷಯನಾಗಿರುವೆನೆಂತಲೂ, ನಾನೆಂತಲೂ, ಜಗವೆಂತಲೂ, ಹೇಳುವದಕ್ಕೆ ಅವಕಾಶವಿಲ್ಲದೆ ಸರ್ವ ಶೂನ್ಯವಾಗಿ ಆಕಾಶದಂತೆ ಸರ್ವ ವ್ಯಾಪಕ ವಾಗಿ ಸಮ ಭಾವದಿಂದಿರುವ ವಸ್ತುವೇ ನಾನೆಂತಲೂ ನಿಶ್ಚಯ ಜ್ಞಾನವು ನಾಲ್ಕು ಬಗೆಯಾಗಿರುವದು. ಇವುಗಳಲ್ಲಿ ಮೊದಲಿನ ನಿಶ್ಚಯಕ್ಕೆ ವಿಷಯವಸತ್ತಾದ್ದರಿಂದ ಬಂಧಕ್ಕೆ ಅದು ಸಾಧಕವಾಗುವದು. ಇತರವಾದ ನಿಶ್ಚಯಗಳಿಗೆ ಅವಲಂ ಬನವಾದ್ದು ಸದ್ವಸ್ತುವಾದ್ದರಿಂದ ಅವುಗಳು ಮೋಕ್ಷ ಸಾಧಕವಾಗುವವು. ಇವು ಗಳಂ ಗ್ರಹಿಸಿರುವರು ಜೀವನ್ಮುಕ್ತರೆನಿಸುವರು. ಈ ಚತುರ್ವಿಧ ಜನಗಳಲ್ಲಿ ಪ್ರಥ ಮರು ದುಃಖಕ್ಕೆ ಮೂಲವಾದ್ದು ಅಜ್ಞಾನವೆಂದು ಅರಿಯುವದ್ದರಿಂದ ದುಃಖ ನಾಶವೇ ಮೋಕ್ಷವೆಂದು ತಿಳಿದಿರುವರು. ಎರಡನೆಯವರು ವಿವೇಕಿಗಳಾದಾಗ್ಯೂ ಎರಡನೇ ಪದಾರ್ಥವನ್ನಿಟ್ಟುಕೊಂಡು ಅದರಲ್ಲಿ ಅಭಿಮಾನ ವಿಲ್ಲದ ಅಸಂಗವಾದ ಸ್ಥಿತಿಯೇ ಮೋಕ್ಷವೆಂದು ಹೇಳುವರು. ದ್ವೈತ ಜ್ಞಾನವು ಸ್ವಲ್ಪವಾಗಿ ದ್ದಾಗ್ಯೂ ಭಯ ತಪ್ಪದಾದ್ದರಿಂದ ಇವರ ನಿಶ್ಚಯವು ಬಂಧಕವೆಂತಲೇ ಹೇಳಬೇಕಾ ಗುತ್ತೆ. ಆದರೆ ಇವರಿಗೆ ಸ್ವರೂಪ ಸ್ಥಿತಿಯಾಗಿರುವದ್ದರಿಂದ ಭೇದವು ಅಭಿಮತಿ ವಾಗಿದ್ದಾಗ್ಯೂ ಕೆಲವು ಕಾಲದಲ್ಲೇ ಗಾಳಿ ಬಡಿದ ದೀಪದಂತೆ ಹೋಗುವದ್ದರಿಂದ ಜೀವನ್ಮುಕ್ತಿ ಸಾಮೀಪ್ಯದಿಂ ಜೀವನ್ಮುಕ್ತರೆನಿಸುವರು. ಮೂರನೆಯವರಿಗೆ ಭೇದ ಜ್ಞಾನವು ಮೂಲಜ್ಞಾನದೊಡನೆ ಹೋಗಿರುವದ್ದರಿಂದ ಕೃತಕೃತ್ಯರಾಗುವರು. ನಾಲ್ಕನೆಯವರನ್ನು ಬಂಧವೂ ಇಲ್ಲವೆನ್ನುವದ್ದರಿಂದ ಶೂನ್ಯವಾದಿಗಳೆಂದು ಕೆಲವರು ಹೇಳುವರು. ಸರ್ವಭಾವಗಳನ್ನು ಅತಿಕ್ರಮಿಸಿರುವದ್ದರಿಂದ ಶೂನ್ಯವೆಂತಲೂ, ಸ್ವಭಿನ್ನರಿಗೆ ಇದೆಂದು ಗೋಚರವಾಗದ್ದರಿಂದ ತತ್ತ್ವೆಂತಲೂ, ಪಕ್ಷಿ ನ್ಯಾಯದಿಂ ಪ್ರತ್ಯಕ್ಷಯೆಂತಲೂ, ನಾನೆಂಬುವದರಿಂದ ಅನುಭವ ಗೋಚರವಾಗಿದ್ದಾಗ್ಯೂ ಮಾಯೆಯಂತೆ ಇಲ್ಲವೆಂದು ತೋರುವದ್ದರಿಂದ ಮಾಯೆಯೆಂತಲೂ, ಅಖಂಡ ಭಾವದಿಂ ಬ್ರಹ್ಮವೆಂತಲೂ, ಜಡವಲ್ಲದ್ದರಿಂದ ವಿಜ್ಞಾನವೆಂತಲೂ, ಸ್ಮರಣಮಾತ್ರ ದಿಂದ ಅಮಂಗಳಗಳಿಗೆ ನಾಶಕನಾಗಿ ಸರ್ವಮಂಗಳ ಸ್ವರೂಪನಾದ್ದರಿಂದಲೂ, ಜಗಜ್ಜನ್ಮಾದಿ ವ್ಯಾಪಾರದಲ್ಲಿದ್ದಾಗ್ಯೂ ಸುಪ್ತನಂತೆ ನಿರಭಿಮಾನಿಯಾಗಿರುವದ್ದರಿಂ ದಲೂ, ತೇಜದಂತೆ ಸರ್ವ ಪ್ರಕಾಶಕನಾದ್ದರಿಂದಲೂ ಕೂಡ ಶಿವನೆಂತಲೂ, ಪೂರ್ಣ ಭಾವದಿಂದಿರುವದ್ದರಿಂದಲೂ, ಪುರವೆನಿಸುವ ಸರ್ವಪ್ರಾಣಿಗಳ ಶರೀರದಲ್ಲಿರುವದ್ದ

ರಿಂದಲೂ ಕೂಡ ಪುರುಷನೆಂತಲೂ, ಅಖಂಡೈಶ್ವರ್ಯದಿಂದೀಶಾನ ನೆಂತಲೂ, ನಾಶ ವಿಲ್ಲದ್ದರಿಂ ನಿತ್ಯನೆಂತಲೂ, ವ್ಯಾಪಕ ಭಾವದಿಂದಾತ್ಮನೆಂತಲೂ, ಪರಮಾತ್ಮನೆ ಪ್ರಸಿದ್ಧನಾಗಿರುವನು. ಸರ್ವ ಭಾವಾತಿರಿಕ್ತವಾದ ಇವನ ಸ್ವರೂಪವಂ ಯಥಾ ಸ್ಥಿತಿಯಾಗಿ ಪೇಳುವ ಜ್ಞಾನಿಗಳನ್ನು ಯಾರು ಶೂನ್ಯವಾದಿಗಳೆಂದು ಪೇಳುವರೋ ಅವರೇ ಜ್ಞಾನ ಶೂನ್ಯರೆಂದು ತಿಳಿಯತಕ್ಕದ್ದು. ಸರ್ವ ರೂಪವಾಗಿರುವ ಈ ಬ್ರಹ್ಮವು ಸರ್ವಕಾಲದಲ್ಲೂ ಇರುವದ್ದರಿಂದ ಸತ್ತೆಂತಲೂ, ಜ್ಞಾನಸ್ವರೂಪವಾದ್ದ ರಿಂದ ವಿದ್ಯೆಯೆಂತಲೂ ಪೇಳಲ್ಪಡುವದು. ಜಲದಿಂ ಸಮುದ್ರದಂತೆ ಈ ಜಗ ವೆಲ್ಲವೂ ಬ್ರಹ್ಮದಿಂ ಪೂರ್ಣವಾಗಿರುವದು. ಜಲದಲ್ಲಿ ತರಂಗಗಳಂತೆ ಜಗದಲ್ಲಿ ದ್ವೈತಾದ್ವೈತ ಪ್ರಕಾಶಗಳು ತೋರುತ್ತಿರುವವು. ಆದ್ದರಿಂದ ಸಮುದ್ರವೆಲ್ಲವು ಜಲವೆಂಬಂತೆ ಜಗವೆಲ್ಲವು ಬ್ರಹ್ಮವೆನಿಸುವದು. ಒಡವೆಗಳೆಲ್ಲವು ಚಿನ್ನಕ್ಕೆ ಅಭಿನ್ನ ವಾಗಿರುವಂತೆ ತೃಣ ತರು ಮೊದಲಾದ ಸಮಸ್ತ ಆಕಾರಗಳು ಬ್ರಹ್ಮಕ್ಕೆ ಅಭಿನ್ನ ವಾಗಿರುವವು. ಹೀಗಿರುವದ್ದರಿಂದ ಎಲೈ ರಾಮಭದ್ರನೆ ನೀನು ಸ್ವಪರ ಪದಾರ್ಥ ಗಳಲ್ಲೂ, ಅವುಗಳ ನಾಶ ವೃದ್ಧಿಗಳಲ್ಲೂ, ಸುಖದುಃಖಗಳಂ ಗ್ರಹಿಸಬೇಡ. ಎಲೈ ರಾಜೇಂದ್ರನೆ ಚಿಜ್ಜಡಗಳ ಸತ್ವಗಳಿಗೆ ಭೇದವಿಲ್ಲದ್ದರಿಂದ ಚಿನ್ಮಾತ್ರ ದೃಷ್ಟಿಯಂ ಪಿಡಿದ ನೀನು ಸರ್ವ ಪದಾರ್ಥಗಳಲ್ಲೂ ಅಭೇದವನ್ನೇ ಗ್ರಹಿಸುವನಾಗು. ಇದೇ ಭಾವದ್ವೈತವೆನಿಸುವದು. ಇದನ್ನು ಕರ್ಮಗಳಲ್ಲೂ ಗ್ರಹಿಸುವೆಯಾದರೆ ಆಪತ್ಸಂಪತ್ತು ಗಳೆರಡೂ ಸಮವಾಗುವದ್ದರಿಂದ ಆಪತ್ತಿಗೆ ಪರಿಹಾರವು ಸಂಪತ್ತಿಗೆ ಅಭ್ಯು ದಯವೂ ತಪ್ಪಿ ಜನಗಳಿಗೆ ದುಃಖವೇವುಂಟಾಗುವದು. ಯಾವಕಾಲದಲ್ಲೂ ಯಾವ ದಕ್ಕೆ ನಾಶವಿಲ್ಲವೋ ಆ ವಸ್ತುವೇ ಸತ್ತೆನಿಸುವದು. ಅದರ ಭಾವವೇ ಸತ್ತೆಂತಲೂ, ಸತ್ವವೆಂತಲೂ ಪೇಳಲ್ಪಡುವದು. ಚಿದ್ವಸ್ತುವಿನ ಸತ್ತೆಯೇ ಜಡಪದಾರ್ಥದಲ್ಲೂ ಕಾಣುತ್ತಿರುವದಲ್ಲದೆ ಜಡಪದಾರ್ಥಕ್ಕೆ ಬೇರೆ ಸತ್ತೆಯಿಲ್ಲ. ಬಹು ರೂಪವಾಗಬೇ ಕೆಂದು ಚಿದ್ವಸ್ತುದಾಲೋಚಿಸುವಲ್ಲಿ ಜ್ಞಾನದೃಷ್ಟಿಯೂ ದೃಶ್ಯವಾಗತಕ್ಕ ಜಡವಾದ ಪದಾರ್ಥವಂ ಪಿಡಿದಿದ್ದರಿಂದ ಚಿದ್ವಸ್ತುವಿನ ಸಂಕಲ್ಪದಿಂ ಚಿಜ್ಜಡಾತ್ಮವಾಗಿ ಪುಟ್ಟಿ ದಮನವು ಜಡದಲ್ಲೇ ಆಸಕ್ತವಾಗಿರುವದಲ್ಲದೆ ಚಿಜ್ಜಡ ಭೇದಜ್ಞಾನಕ್ಕೂ ಕಾರಣ ವಾಗಿರುವದು. ಜಗದಿಂದ್ರ ಜಾಲವಂತೆ ತೋರುವ ಈ ಮನದಿಂದಲೇ ಜಗತ್ತಿಗೆ ಬೇರೆಸತ್ವವಿರುವಂತೆ ತೋರುತ್ತಿರುವದು. ಸತ್ವವುಳ್ಳ ಪದಾರ್ಥಕ್ಕೆ ನಾಶವಿಲ್ಲವಿರು ವದನ್ನೂ, ದೃಶ್ಯಪದಾರ್ಥಕ್ಕೆ ನಾಶವಾಗುವದನ್ನೂ ವಿಚಾರಿಸುವಲ್ಲಿ ಬೇರೆ ಸತ್ವವಿಲ್ಲ ವೆಂದು ಗೊತ್ತಾಗುವದು. ಚಿದ್ವಸ್ತುವಖಂಡವಾದ್ದರಿಂದ ಅದರಲ್ಲಿ ದ್ವೈತವನ್ನಿ

ಣಿಸಲಾಗದು. ಸತ್ತಿಭೇದವಿಲ್ಲದ್ದರಿಂದಲೂ, ಚಿತ್ತಿನಲ್ಲಿ ಭೇದವಿಲ್ಲದ್ದರಿಂದಲೂ. ಬ್ರಹ್ಮವೊಂದೇ ಪ್ರಕಾಶಿಸುತ್ತಿರುವದೆಂದು ತಿಳಿಯತಕ್ಕದ್ದು. ಒಂದೆನುವದರಲ್ಲಿ ಎರಡನೇದ್ಯಾವದೆಂದು ಆಕ್ಷೇಪಬರುವದ್ದರಿಂದ ಇಲ್ಲಿ ಒಂದೆನುವದಂ ಸಂಖ್ಯೆಯಂ ದೆಣಿಸದೆ ದ್ವಂದ್ವವಿಕಲ್ಪವಿಲ್ಲದ ಕೈವಲ್ಯಾರ್ಥಕ್ಕೆಬೋಧಕವೆಂದು ತಿಳಿಯುವನಾಗು. ಈ ಅದ್ವೈತವು ಚಿನ್ಮಾತ್ರದೃಷ್ಟಿಯಲ್ಲೇ ಉಪಯುಕ್ತವಾದ್ದರಿಂದ ಇದನ್ನು ಕರ್ಮ ದೃಷ್ಟಿಯಲ್ಲಂಗೀಕರಿಸಲಾಗದು. ಬ್ರಹ್ಮವೇ ಕರ್ಮರೂಪವಾಗಿ ತೋರುತ್ತಿರು ವಲ್ಲಿ ಯಾಕೆ ಅಭೇದವಂ ಗ್ರಹಿಸಲಾಗದೆಂದರೆ ಕೇವಲ ಜ್ಞಾನಸ್ವರೂಪವಾದ ಬ್ರಹ್ಮದಲ್ಲಿ ಜ್ಞಾನೇಚ್ಛಾಕ್ರಿಯಾಶಕ್ತಿಗಳು ಸಹಜವಾಗಿರುವದ್ದರಿಂದಲೆ ಬಹುರೂಪದಿಂ ವಿಹರಿಸಬೇಕೆಂಬ ಇಚ್ಛೆಯುಂಟಾಗುವದು. ಆಗಲೇ ಕ್ರಿಯಾಶಕ್ತಿಪ್ರಭಾವದಿಂ ಶಕ್ತಿಭೇದ ಭಿನ್ನವಾದ ಬ್ರಹ್ಮಪ್ರಕಾಶಗಳು ಸತ್ವ ರಜಸ್ತಮೋಗುಣ ರೂಪದಿಂಭಿನ್ನ ವಾಗಿ ತೋರುವವು. ಈ ತೋರಿಕೆಯೆ ಮೂಲಾಜ್ಞಾನರೂಪವಾದ ಮಾಯೆಯೆ ನಿಸುವದು. ಆದರಿಂದುಂಟಾದ ಪ್ರಪಂಚದಲ್ಲಿ ಪದಾರ್ಥಗಳು ಗುಣಗಳು ವ್ಯಾಪಾರಗಳು ಸಹ ಗುಣ ತಾರತಮ್ಯದಿಂದುತ್ತಮ, ಮಧ್ಯಮಾಧಮ, ಕಿಂಚಿದುತ್ತಮಾದಿ ಭೇದಗಳಿಂದ ಅನೇಕಪ್ರಕಾರವಾಗಿರುವವು. ಇವುಗಳಲ್ಲಿ ಅಭೇದಜ್ಞಾನದಿಂ ಮಾತೃ ಪತ್ನಿಯರಿಗೂ ಬ್ರಾಹ್ಮಣ ಚಂಡಾಲರಿಗೂ, ಧರ್ಮಾಧರ್ಮಗಳಿಗೂ, ಗುಣದೋಷಗಳಿಗೂ, ಜ್ಞಾನಾಜ್ಞಾನಗಳಿಗೂ, ಸುಖದುಃಖಗಳಿಗೂ, ಉತ್ತಮಾಧಮಗಳಿಗೂ ಸಾಂಕರ್ಯದಿಂದನೇಕವಾದ ಅನರ್ಥಗಳುಂಟಾಗುವವು. ಅದ್ದರಿಂದ ಗ್ರಾಹ್ಯ ಗ್ರಾಹಕಜ್ಞಾನವಿರುವ ಪರ್ಯಂತವು ಈ ಕರ್ಮಾದ್ವೈತವಂ ಪರಿಗ್ರಹಿಸಲಾಗದು. ಮೂಲಾಜ್ಞಾನವಣಗಿ ಬ್ರಹ್ಮಭಾವವಂ ಪಡದವನು ಹೇಗಿದ್ದಾಗ್ಯೂ ಶುದ್ಧಾಶುದ್ಧ ಪ್ರದೇಶಗಳಂ ನೋಡದೆ ಕರಗಳಂಬಿಡುವ ಸೂರ್ಯನಂತೆ ಪೂಜ್ಯನಾಗುವನು. ಪ್ರಕೃತದಲ್ಲಿ ಚಿನ್ಮಾತ್ರವಿಚಾರಾಸಕ್ತನಾದ ನೀನು, ನೀನು, ಇದು, ಅದು, ಇವನು, ಅವನೆಂಬ ಭೇದವನ್ನೆಣಿಸದೆ ಪರಿಪೂರ್ಣಭಾವದಿಂದಿರುವನಾಗು. ಹೀಗಿರುವದೇ ಜ್ಞಾನಿಗಳ ಸ್ವಭಾವವಾದ್ದರಿಂದ ಧ್ಯೇಯವೆಂಬ ವಾಸನಾತ್ಯಾಗವನ್ನವಲಂಬಿಸಿ ಪ್ರಕೃತವಾದ ವರ್ಣಾಶ್ರಮ ಧರ್ಮಕಾರ್ಯಗಳಂ ಬಿಡದೆ ದುಷ್ಕಾರ್ಯಗಳೊಳ್ ತಟಸ್ಥನಾಗಿ ಬಾಹ್ಯದೃಷ್ಟಿಗಳಲ್ಲಿ ಮಧ್ಯಸ್ಥನಾಗಿಯುಂ ವಿನೋದದಿಂ ಜಗದ್ವ್ಯಾಪಾರಗಳಂ ನೋಡುತ್ತಿರುವನಾಗು, ಬರತಕ್ಕದ್ದು ಬಿಡದೆಂತಲೂ, ಬಾರದ್ದು ಬಾರ ದೆಂತಲೂ, ಆಗತಕ್ಕದ್ದು ಆಗುವದೆಂತಲೂ, ಆಗದಿರುವದು ಆಗದೆಂತಲೂ, ನಿಶ್ಚಯಿಸಿ ಎಲ್ಲಾ ಕಡೆಯಲ್ಲೂ ಭಯಪಡದೆ ಲಾಭಾಲಾಭಗಳಲ್ಲೂ, ವೃದ್ಧಿನಾಶಗಳಲ್ಲೂ,

ಪಪಾರ್ಗಮರ್ಗಗಳಂ ಹೊಂದದೆ ಜ್ಞಾನಮಯನಾದ ಉದ್ಯಾನದಲ್ಲಿ ವಿವೇಕಪ್ರಕಾಶದಿಂ ಮಾನಸ ಸರೋವರದಲ್ಲಾಡುತ್ತಿರುವ ಆತ್ಮರಾಜಹಂಸದ ವಿಲಾಸವಂನೋಡುತ್ತಾ ಅಂತಃ ಶತ್ರುಗಳಂ ನಿಗ್ರಹಿಸಿ ಬಾಹ್ಯ ಶತ್ರುಗಳಲ್ಲಿ ಮಧ್ಯಸ್ಥನಾಗಿ ಯಾವವಿಷಯದಲ್ಲೂ, ಕೃಪಣನಾಗದೆ ಎಲ್ಲಾಕಡೆಯಲ್ಲೂ ಸದಾ ದಾಕ್ಷಿಣ್ಯಪರನಾಗಿ ಇರುವದನ್ನುಪೇಕ್ಷಿಸದೆ ಇಲ್ಲದ್ದನ್ನಪೇಕ್ಷಿಸದೆ ಸರ್ವಕಾರ್ಯಗಳಿಗೂ ಪ್ರೋತ್ಸಕನಾಗಿ ಒಬ್ಬರ ಮನವನ್ನು ನೋಯಿಸದೆ ಅಮಿತಜ್ಞಾನಿಯಾದಾಗ್ಯೂ ಮಿತೋಕ್ತಿಯಾಗಿ ಲೋಕವೃತ್ತಾಂತವಂ ತಿಳಿದು ಕರಗತವಾದ ಬಿಲ್ವದಂತೆ ಯುಕ್ತಾಯುಕ್ತಗಳಂ ನೋಡುತ್ತಾ ಸಾರವಾದ ಲೋಕಾಚಾರವಂಗ್ರಹಿಸಿ ಕೇಳುವರಿಗೆ ಮೃದೂಕ್ತಿಯಿಂದಲಿ ಉತ್ತರವಂ ಪೇಳುತ್ತಾ ಕೇಳದಿರುವಲ್ಲಿ ಮೌನಿಯಾಗಿ ಜನಗಳ ಅಭಿಪ್ರಾಯವಂ ತಿಳಿದು ವಿಹಿತವಾದ ಕಾರ್ಯವಂ ನಡೆಸುತ್ತಾ ನಿಷ್ಫಲವಾದ ವಾಕ್ಯಗಳನ್ನೂ ಕಾರ್ಯಗಳನ್ನೂ ತ್ಯಜಿಸಿ ಅಂತರ್ದೃಷ್ಟಿಯಿಂ ಸರ್ವತ್ರ ಸಮಭಾವವಂ ಪಿಡಿದು ನಡೆಯುವ ಪುರುಷನು ಸಂಸಾರದಲ್ಲಿದ್ದರೂ ದುಃಖಪಡನು. ಜಡವಾದ ಚಿತ್ತವಂ ಜೈಸಿ ನಿಜೋತ್ತಮರೀತಿಗಳಂ ತಿಳಿದು ಪರಮಾರ್ಥಜ್ಞಾನದಿಂ ಮಹಾತ್ಮರಾದ ಜನಗಳಿಗೆ ಸಹಜವಾದ ನಡತೆಯನ್ನೀನಿನಗೀಗ ಪೇಳಿರುವೆನು. ಚಿತ್ತವಂಜಯಿಸದೆ ನಾನಾವಿಧ ಭೋಗದಲ್ಲಾಸಕ್ತರಾಗಿ ಅಜ್ಞಾನದಲ್ಲಿ ಬಿದ್ದಿದ್ದಾಗ್ಯೂ ಸರ್ವರೆಂದು ಅಭಿಮಾನಪಡುವ ಮೂರ್ಖರಿಗೆ ಯಾವದು ಸಮ್ಮತವೋ ಯಾವದು ಪೇಳತಕ್ಕದ್ದೋ ಅದಂ ನಾವರಿಯೆವು. ಆಜನಗಳು ನರಕಾಗ್ನಿಜ್ವಾಲೆಗಳಾದ ಕಾಮಿನಿಯರ ಸಮೂಹವನ್ನೇ ಕನಕಲತಾಮಯವಾದ ಆರಾಮವೆಂದು ತಿಳಿದಿರುವರು. ಪರಮಾರ್ಥಲಾಭವಿಲ್ಲದ್ದರಿಂ ನಿರರ್ಥಕವಾಗಿಯೂ, ಅನರ್ಥಕಾರಣವಾಗಿಯೂ, ನೀಚಾರ್ಥವಾಗಿಯೂ, ಲೋಕಪ್ರಸಿದ್ಧವಾದ ಕಾರ್ಯಗಳನ್ನೇ ಸತ್ಕಾರ್ಯಗಳೆಂದು ಗ್ರಹಿಸಿರುವರು, ಅವರು ಪರಮಾರ್ಥವಂ ತಿಳಿದಿದ್ದಾಗ್ಯೂ ಸರ್ವಜ್ಞರೆಂದು ಅಭಿಮಾನಪಡುವದರಿಂದ ಅನಭಿಸಂಧಿಯಾದ ಅವರಸಂಕಲ್ಪವು ವಾಙ್ಮಾತ್ರದಲ್ಲೇ ಪ್ರಕಾಶಿಸುವದು. ಅದ್ದರಿಂದವರು ಯಜ್ಞಾದಿ ಸತ್ಕರ್ಮಗಳಂ ಮಾಡಿದಾಗ್ಯೂ ಆ ಕರ್ಮಗಳು ಚಿತ್ತಶುದ್ಧಿಗೆ ಸಾಧನವಾಗದೆ ಬಾಹ್ಯ, ಸುಖದುಃಖಗಳಿಂ ಪೂರ್ಣವಾದ ಸಂಸಾರಫಲಕ್ಕೆ ಸಾಧಕವಾಗುವವು. ವಾಙ್ಮನಃ ಕರ್ಮಭೇದಗಳಿಂದವರ ರೀತಿಗಳು ವಿಚಿತ್ರವಾದ್ದರಿಂದ ಪೇಳಲಶಕ್ಯವಾಗಿರುವವು. ಎಲೈ ರಾಜಕುಮಾರನೆ ನೀನು ರಾಜ್ಯಭಾರವಂ ಮಾಡಬೇಕಾದ್ದರಿಂದಲೂ, ಪರಮಾರ್ಥವಂ ಪಡೆಯಬೇಕಾದ್ದರಿಂದಲೂ, ಸನ್ಯಾಸಿಯಂತೆ ತಟಸ್ಥನಾಗದೆ ಪಾಮರನಂತೆ ಸಂಸಾರಾಸಕ್ತನಾಗದೆ ಉಭಯ ಮಧ್ಯ

ಸ್ಥನಾಗಿ ಅಂತರ್ದೃಷ್ಟಿಯಿಂದ ಆತ್ಮೈಕ್ಯವನ್ನೂ, ಬಾಹ್ಯದೃಷ್ಟಿಯಿಂದ ಇಷ್ಟಾನಿಷ್ಟ ಯುಕ್ತಾಯುಕ್ತ ಶುಭಾಶುಭ ಲಾಭಾಲಾಭ ವೃದ್ಧಿಹ್ರಾಸ ಸದಸದ್ವ್ಯಾಪಾರಗಳನ್ನೂ, ಅವರ ತಾರತಮ್ಯಗಳನ್ನೂ, ನೋಡುತ್ತಾ ಧ್ಯೇಯವಾದ ವಾಸನಾತ್ಯಾಗವಂ ಪಿಡಿದು ಅಂತರಂಗದೊಳ್ ನಿರ್ವಿಕಾರದಿಂ ಸಿದ್ಧವಾದ ಪರಮಪದವನ್ನೇ ಪಿಡಿದು ಪೂರ್ಣಭಾವದಿಂ ರಾಗದ್ವೇಷಗಳಿಲ್ಲದವನಾದಾಗ್ಯೂ ಜನರಂಜಕವಾಗಿರುವ ಉತ್ಕೃಷ್ಟವಾದ ಆಚಾರವನ್ನೇ ಪರಿಗ್ರಹಿಸುವನಾಗು. ಹೊರಗೂ ಕಾಮಕ್ರೋಧಗಳಂ ಬಿಟ್ಟವನಿಗೆ ಆಹಾರತ್ಯಾಗದಿಂ ಶರೀರವು ಶಿಥಿಲವಾಗಲು ರೋಗಗಳಿಗೆ ಅವಕಾಶವಾಗುವದು. ಯುಕ್ತವಾದ ಆಹಾರದಿಂ ಶಕ್ತಿಗೆ ಅಭಿವೃದ್ಧಿಯಾಗುವದು. ಹೊರಗಣಿಂದ ಹಣ ಬಾರದ್ದರಿಂದ ಇದ್ದ ಹಣಕ್ಕೆ ವ್ಯಯವಾಗಲು ಬೊಕ್ಕಸವೇ ಬರಿದಾಗುವದು. ಹಣವಂ ಕೊಡದಿರಲು ಸೇವಕರು ಸಮೀಪಕ್ಕೆ ಬಾರರು ಯುಕ್ತವಾಗಿ ಧನವಂ ಗ್ರಹಿಸಿದಲ್ಲಿ ಬೊಕ್ಕಸಕ್ಕೆ ಬೆಳವಳಿಗೆ ತಪ್ಪದು. ಸೇವಕರು ಸನ್ನಿಧಿಯಂ ಬಿಡರು. ಕೇವಲ ಕ್ಷಮಾಗುಣವಂ ನೋಡಿದ ದುಷ್ಟರು ಸರ್ವಸ್ವವನ್ನು ಆಕ್ರಮಿಸಲುಪಕ್ರಮಿಸುವರು. ಅತಿ ಕ್ರೋಧವಂ ಮಾಡಲು ಪತಿವ್ರತೆಯಾದ ಪತ್ನಿಯೂ ಕೂಡ ಪಡೆಯಾಡಲು ಭಯಪಡುವಳು. ಸದ್ವಿಷಯದಲ್ಲಿ ಕಾಮವನ್ನು ಅಸದ್ವಿಷಯದಲ್ಲಿ ಕ್ರೋಧವನ್ನು ನಿಲ್ಲಿಸುವಲ್ಲಿ ದುಷ್ಟರು ಸಮೀಪಕ್ಕೆ ಸೇರದ್ದರಿಂದಲೂ, ಶಿಷ್ಟರು ಬರುವದ್ದರಿಂದಲೂ, ಸರ್ವವಿಷಯದಲ್ಲು, ದಿನದಿನಕ್ಕೆ ಅಭಿವೃದ್ಧಿಯೇ ಆಗುವದು. ಉದ್ಯೋಗವಿಲ್ಲದ ಪುರುಷನು ಕಾಮಿನಿಯರಿಗೆ ನಪುಂಸಕನಂತೆ ಲಕ್ಷ್ಮಿಗೆ ತಿರಸ್ಕರಣೀಯನಾಗುವನು. ಊಷರಭೂಮಿಯನುಳುವರಂತೆ ಬುದ್ಧಿಶಾಲಿಗಳು ಉದ್ಯೋಗವಿಲ್ಲದವನಂ ನೋಡರು, ಶಾಸ್ತ್ರೀಯವಾದ ಉದ್ಯೋಗವಂ ಮಾಡುವನಿಗೆ ಸಕಲದೇವತೆಗಳು ವಿದ್ಯಾವಂತರು ಸಹ ಸಹಾಯರಾಗುವದ್ದರಿಂದ ವೃಕ್ಷವಂ ಲತೆಗಳಂ ಸಕಲಸಂಪತ್ತುಗಳು ಅವನನ್ನಾಶ್ರಯಿಸುವವು. ಆದ್ದರಿಂ ನೀನು ಅಂತರಂಗದೊಳ್ ಕರ್ತೃತ್ವವನ್ನು ಹರ್ಷಾಮರ್ಷಗಳನ್ನು ತ್ಯಜಿಸಿದಾಗ್ಯೂ ಹೊರಗೆ ಕೃತ್ರಿಮವಾದ ಹರ್ಷಾಮರ್ಷಗಳಂ ತೋರಿಸುತ್ತಾ ದುರ್ಜನರಿಗೆ ಆಶೆಯಂ ತೋರದೆ ರಾಜಕುಲ ಸಿದ್ಧವಾದ ಸಕಲ ಸದಾಚಾರಗಳನ್ನೂ ನಡೆಸುವನಾಗು. ಹೀಗಿರಲು ನಿನಗೆ ಅನೇಕ ವಿಧವಾದ ಪ್ರಜೆಗಳ ರಂಜನೆಯಿಂದಲೂ, ಅಂತಃಶತ್ರು ಬಹಿಃಶತ್ರುಗಳ ನಿಗ್ರಹೋಪಾಯಗಳಿಂದಲೂ, ಸಾಧುಗಳ ಸಂರಕ್ಷಣೆಯಿಂದಲೂ, ಕೋಶಪ್ರದವಾದ ದಾನಸಾದ ಸಮಯಾಸಮಯ ನಿರೀಕ್ಷಣೆಯಿಂದಲೂ, ಅತಿ ಕಠಿಣವಾದ ಈ ರಾಜ್ಯಭಾರವು ವಿಹಾರಪ್ರಾಯವಾಗುವದು.

ಪರಮಾರ್ಥವಾಗಿ ಈ ಜಗವೆಲ್ಲವೂ ಭ್ರಾಂತಿಮಾತ್ರವಾದ್ದರಿಂದ ಸರ್ವವ್ಯಾಪಿಯಾದ ಆತ್ಮನಿಗೆ ಇದರಿಂದ ಬಂಧವು ಮೋಕ್ಷವು ಸಹ ಹ್ಯಾಗೆ ಸಂಭವಿಸೀತು. ಪ್ರಚಂಡ ಮಾರ್ತಾಂಡ ಮಂಡಲವಂ ಕತ್ತಲೆ ಆವರಿಸಿತೆಂಬಂತೆಯೇ ಬಂಧವಾರ್ತೆಯು ಲೋಕದೋಳ್ ಸಿದ್ಧವಾಗಿರುವದು. ಸ್ವರೂಪ ವಿಸ್ಮೃತಿಯಿಂ ಸಿದ್ಧವಾದ ಅಜ್ಞಾನದಿಂ ಪುಟ್ಟಿದ ಈ ಜಗವು ಅನೇಕ ಜನ್ಮಗಳಿಂ ದೃಢಮೂಲವಾಗಿ ವಾಸನಾ ರೂಪದಿಂ ಹೃದಯದಲ್ಲಿರುವದ್ದರಿಂದ ರಜ್ಜುವಿನಲ್ಲಿ ಭುಜಗದಂತೆ ದೃಗ್ರೂಪನಾದ ತನ್ನಲ್ಲಿಯೇ ಬಂದು ಸೇರುವುದು. ಗುರೂಪದೇಶದಿಂ ಸ್ವಸ್ವರೂಪ ವಿದಿತವಾಗಲು ಗಾಳಿ ಬಡಿದ ದೀಪದಂತದು ಎಲ್ಲಿಗೋ ಪೋಗುವದು. ಸೂಕ್ಷ್ಮವಾದ ಬುದ್ಧಿಯಿಂ ಸ್ವರೂಪವಂ ತಿಳಿವದ್ದರಿಂದ ಅಹಂಕಾರವಂ ಬಿಟ್ಟು ನೀನು ಮೇಘಾವರಣವಿಲ್ಲದ ಗಗನದಂತೆ ನಿರ್ಮಲನಾಗಿದ್ದೀಯೆ, ಎಲೈ ಸುಬುದ್ಧಿಯೇ ಈಗ ನೀನು ಸಾಕ್ಷಿ ಭಾವದಿಂದಿರುವದ್ದರಿಂದಲೂ, ಇಲ್ಲದ ಪದಾರ್ಥವಂ ಭಾವಿಸುವದು ಅಸಂಗತವಾದ್ದರಿಂದಲೂ, ದೃಶ್ಯಪದಾರ್ಥಗಳಲ್ಲಿ ಸುಹೃತ್ತುಗಳೆಂತಲೂ, ಬಂಧುಗಳೆಂತಲೂ, ಪ್ರವರ್ತಿಸಿರುವ ವಾಸನೆಯುಂ ಬಿಡುವನಾಗು. ಕಾಲತ್ರಯ ಬಾಧೆಯಿಲ್ಲದೆ ಸುಷುಪ್ತಿ ಪ್ರಳಯಗಳಲ್ಲೂ ನಿತ್ಯಸಿದ್ಧನಾಗಿ ಉತ್ಪತ್ತಿಯನ್ನೇ ಕಾಣದಿರುವ ನಿನಗೆ ಬಂಧುಗಳೆಲ್ಲಿಂದ ಬಂದರು, ಇವರ ಸುಖದುಃಖ ಭೋಗಭ್ರಮೆಗಳು ಅಂತಃಕರಣಾದಿ ವಾಸನಾಕ್ರಮದಿಂ ದೇಹವಂ ನಾನೆಂದು ಪಿಡಿದಿರುವದ್ದರಿಂದ ಉಂಟಾಗಿರುವವು. ವಾಸನಾಮಯವಾದ ಸೋಪಾನಕ್ರಮದಿಂ ನೀನು ಹ್ಯಾಗೆ ಇಳಿದು ಬಂದೆಯೋ ಆದೇ ಪ್ರಕಾರವಾಗಿ ಹಿಮ್ಮೆಟ್ಟುವೆಯಾದರೆ ಸಹಜ ನಿತ್ಯಾನಂದವಾದ ಸ್ವರೂಪದಲ್ಲೇ ನೆಲಸುತ್ತೀಯೆ, ಪ್ರಾಣಗಳಿಗಿಂತಲೂ ಅಧಿಕವಾಗಿರುವ ಭೋಗಗಳನ್ನು ಪ್ರಾಣಾಧಾರವಾದ ಬಂಧುಗಳನ್ನೂ ಬಿಡುವದು ಹೇಗೆಂದರೆ,- ಬಾಂಧವ್ಯವೆಂಬುವದು ಮಾನಸಿಕವೆಂತಲೂ, ಶಾರೀರಕವೆಂತಲೂ, ಎರಡು ಬಗೆಯಾಗಿರುವವು. ಸೂಕ್ಷ್ಮ ಸ್ಥೂಲ ಶರೀರಗಳಂ ಗ್ರಹಿಸಿದವನಿಗೆ ಇವುಗಳು ಸಂಭವಿಸುವುವಲ್ಲದೆ ಅಶರೀರವಾಗಿರುವ ಅಸಂಗನಾದ ಆತ್ಮನಿಗೆ ಸಂಭವಿಸಲಾರವು. ಇದ್ದ ಶರೀರವಂ ಬಿಟ್ಟು ಮತ್ತೊಂದು ಶರೀರವಂ ಗ್ರಹಿಸುವದೇ ಉತ್ಪತ್ತಿಯೆನಿಸುವದು. ಸತ್ತಾಮಾತ್ರವಾದ ನಿನ್ನ ಶರೀರಕ್ಕೆಂದಿಗೂ ಚ್ಯುತಿ ಇಲ್ಲದ್ದರಿಂದ ನಿನಗೆ ಲಿಂಗಶರೀರಾದಿ ಗ್ರಹವಾದ್ದು ಗೃಹ ಪ್ರವೇಶದಂತಾಗುವದು. ಆದ್ದರಿಂದಿದು ಉತ್ಪತ್ತಿ ಎನಿಸಲಾರದು. ಸಹವಾಸದಿಂ ಭೋಗ ಬಾಂಧವ್ಯಗಳು ಸಂಬಂಧಿಸಬಹುದೆಂದರೆ! ಜನ್ಮಾಂತರ ಬಂಧುಗಳನ್ನೂ ಬಾಲ್ಯದ ಬಂಧುಗಳನ್ನೂ ಏಕೆ ಹೀಗೆ ಸ್ಮರಿಸಲಾಗದು. ಅಜ್ಞಾನ

ದಿಂದಲೂ, ದೇಶ ಕಾಲ ಭೇದದಿಂದಲೂ, ಬಾಂಧವ್ಯಾದಿಗಳು ಭೇದಿಸುವುವಾದವ ಕ್ಷಣಿಕವಾದ ಭೋಗಗಳಿಂದಲೂ, ಅವುಗಳಿಂ ಬಂದ ಬಂಧುಗಳಿಂದಲೂ, ಅಗಕಕ್ಕ ದ್ದೇನಿರುವದು. ಶಾಶ್ವತನಾದ ಆತ್ಮನಿಗೂ ಕ್ಷಣಿಕವಾದ ಭೋಗಾದಿಗಳಿಗೂ ದುಃಖಪಡುವ ಪರ್ಯಂತವಾದ ಸಂಬಂಧವು ಹ್ಯಾಗೆ ಆದೀತು. ಆತ್ಮನಿಗೆ ಕ್ಷಣಿಕತ್ವ ವೆಂಬುವದು ಎಂದಿಗೂ ಸಂಭವಿಸಲಾರದು. ಅದನ್ನಂಗೀಕರಿಸಿದಾಗ್ಯೂ ವಿಜ್ಞಾನ ಪರಂಪರೆಗೆ ವಿಚ್ಛಿತ್ತಿ ಇಲ್ಲದ್ದರಿಂದ ಆತ್ಮನಿಗೆ ಸ್ಥಿರತ್ವವನ್ನೇ ಅಂಗೀಕರಿಸಬಹುದು. ಇರುವವನ ದುಃಖ ಕಾಣುವದಲ್ಲದೆ ಹೋದವನ ದುಃಖವು ಕಾಣಲಾರದಾದ್ದರಿಂದ ಆತ್ಮನು ಇರುವನೆಂತಲೂ, ಬಂಧು ಭೋಗಾದಿಗಳು ಹೋಗುವವೆಂತಲೂ ತಿಳಿಯು ತಕ್ಕದ್ದು. ಗುಣಾಧಿಕ್ಯದಿಂ ಕ್ಷಣ ಸಹವಾಸವು ದುಃಖಕರವೆನ್ನುವಲ್ಲಿ ಹೋದ ದ್ದಕ್ಕೆ ದುಃಖಪಟ್ಟದ್ದರಿಂ ಉಪಯೋಗವಿಲ್ಲವೆಂದು ತಿಳಿಯುಬಹುದು. ಇರುವದಕ್ಕೆ ಪದಾರ್ಥ ಸಂಬಂಧ ತಪ್ಪಿದ್ದರಿಂದ ದುಃಖ ಪಡಬೇಕಾಗಿದೆ ಎಂದರೆ ಬರತಕ್ಕದ್ದಾದರೆ ಬಂದೇ ಬರುವದು. ತಪ್ಪಿಹೋಗತಕ್ಕದ್ದು ನಿಲ್ಲಲಾರದು. ಆದ್ದರಿಂದ ಯಾವ ಬಗೆಯಿಂದಲೂ, ಭೋಗ ಬಂಧುಗಳ ಸ್ಮರಣೆಯೇ ಯುಕ್ತವಾದ್ದಲ್ಲವೆಂದು ನಿಶ್ಚ ಯಿಸುವನಾಗು. ಕ್ಷಣಮಾತ್ರ ಸಹವಾಸದಿಂ ದುಃಖಪ್ರದವಾದ್ದನ್ನು ಸಾಧುವೆಂದು ಹ್ಯಾಗೆ ನಂಬಬಹುದು ? ದುಃಖಕರವಾದ್ದು ಸಾಧುವಾದಾಗ್ಯೂ ಅಸಾಧುವೆಂತಲೇ ತಿಳಿಯತಕ್ಕದ್ದಾದ್ದರಿಂದ ಅದು ಹೋದದ್ದೇ ಉತ್ತಮವೆಂದು ಸಂತೋಷ ಪಡ ಬಹುದು. ಸರ್ವ ಪ್ರಕಾರದಿಂದಲೂ, ದುಃಖಪಡುವದ್ದರಿಂದ ಪ್ರಕೃತ ಕಾರ್ಯ ಭಂಗವಲ್ಲದೆ ಮತ್ತೊಂದಿಲ್ಲವಾದ್ದರಿಂದ ಸ್ವೇತರ ಪದಾರ್ಥಗಳಂ ಸ್ಮರಿಸದೆ ನಿರುತ್ಸಾಹದಿಂ ನಿಜ ಕ್ಷೇಮಕ್ಕೋಸುಗ ಶಾಸ್ತ್ರೀಯವಾದ ವಿಚಾರದಲ್ಲಿರುವ ನಾಗು. ಸ್ವರೂಪಜ್ಞಾನವಾಗಲು ಸ್ವಭಿನ್ನವಾದ ಪದಾರ್ಥಗಳು ಅಭಿನ್ನವಾಗು ವವು. ಭಿನ್ನವಾಗಿದ್ದಾಗ್ಯೂ ಭ್ರಾಂತಿಸಿದ್ಧವೆಂತಲಾಗಲೀ ಜಡವೆಂತಲಾಗಲೀ ಅಭಿ ಮಾನಕ್ಕೆ ಪಾತ್ರವಾಗದಿರುವವು. ಸ್ವಗುಣದೋಷಜ್ಞಾನವಿಲ್ಲದೆ ಪರಗುಣ ದೋಷಗಳಂ ನೋಡುವದು ಅಸಂಗತವಾದ್ದರಿಂದಲೂ, ಸ್ವಗುಣ ದೋಷಗಳೇ ಪರರಲ್ಲಿರುವಂತೆ ಕಾಣುವದ್ದರಿಂದಲೂ, ತನ್ನಲ್ಲಿ ಗುಣದೋಷಗಳಿಲ್ಲದೆ ಪರಗುಣ ದೋಷಜ್ಞಾನ ವಾಗುವುದಿಲ್ಲವಾದ್ದರಿಂದಲೂ, ತನ್ನಲ್ಲಿ ಯಾವ ದೋಷವಿದೆಯೋ ಯಾವ ಗುಣವಿದೆಯೋ ಮೊದಲೇ ನೋಡತಕ್ಕದ್ದು. ತಾನು ಗುಣದೋಷ ಹೀನ ನಾಗುವಲ್ಲಿ ಸರ್ವವೂ ಹಾಗೆಯೇ ಆಗುವದ್ದರಿಂದ ತನ್ನಲ್ಲಿನ ಸತ್ವವೆ ಹೊರಗೆ ಕಾಣು ತ್ತಿರುವದೆಂದು ಚೆನ್ನಾಗಿ ಗೊತ್ತಾಗುವದು. ಸರ್ವಪ್ರಕಾರದಿಂದಲೂ, ಸ್ವವಿಚಾರ

ದಲ್ಲೇ ಸುಖವಾಗತಕ್ಕದ್ದಾದ್ದರಿಂದ ಅದರಲ್ಲೇ ನೀನು ಆಸಕ್ತನಾಗಿರುವನಾಗು. ಅಥವಾ ಪರಮಾತ್ಮನ ಅಖಂಡ ಸ್ವಭಾವವನ್ನೇ ಪರಿಭಾವಿಸುತ್ತಾ ಎಲ್ಲಾ ಕಡೆಯಲ್ಲೂ ಸಮದೃಷ್ಟಿಯಿಂದಿರುವನಾಗು. ನಾನು ಯಾರೆಂದು ವಿಚಾರಿಸುತ್ತಾ ನನ್ನದೆನಿಸುವ ಪದಾರ್ಥಗಳಂ ನಾನಲ್ಲವೆಂದು ಬಿಟ್ಟು ಚಿನ್ಮಾತ್ರ ಸ್ವರೂಪಾಂತವಾಗಿ ಶಿಮ್ಮೆಟ್ಟು ತ್ತಿರುವನಿಗೆ ನನ್ನದೆಂಬುವದು ಸತ್ತಾವಿಚಾರದಿಂ ಪೋಗುವಲ್ಲಿ ಅದರೊಡನೆಯೇ ನಾನೆಂಬುವನು ಕೂಡ ನಷ್ಟವಾಗುವದು. ಪರಮಾತ್ಮನ ಮಹಿಮೆಯಂ ವಿಚಾರಿ ಸುವಲ್ಲಿ ನಾನು ನನ್ನದೆಂಬುವದಕ್ಕೆ ಅವಕಾಶವೇ ಇಲ್ಲದಿರುವದು. ಎರಡು ಮಾರ್ಗ ಗಳೂ ಪರಿಪೂರ್ಣ ಸ್ಥಾನವನ್ನೇ ಹೊಂದಿಸುವವಾದ್ದರಿಂದ ಯಾವ ಮಾರ್ಗವನ್ನಾ ದರೂ ಹಿಡಿಯುವನಾಗು. ನಾನೆಂಬುವನು ಇರುವವರಿಗೆ ನನ್ನದೆಂಬುವದು ತಪ್ಪದು, ಅದು ಇರುವವರಿಗೆ ದುಃಖ ತಪ್ಪದು. ಆದ್ದರಿಂದ ನಾನೆಂಬುವದೇ ಸರ್ವ ದುಃಖಮೂಲವೆಂದು ನಿಶ್ಚಯಿಸಿ ಅದು ತಪ್ಪುವಂತೆ ಶಾಸ್ತ್ರೀಯವಾದ ಯಾವ ಮಾರ್ಗವನ್ನಾದರೂ ಅನುಸರಿಸುವನಾಗು. ಸತ್ತಾಮಾತ್ರ ಸ್ವರೂಪದಿಂ ನಾಶ ರಹಿತನಾಗಿ ಆಕಾಶದಂತೆ ಸರ್ವವ್ಯಾಪಕನಾಗಿದ್ದಾಗ್ಯೂ ಬಾಹ್ಯದೃಷ್ಟಿಯುಳ್ಳವರಿಗೆ ಅಗೋಚರನಾಗಿ ಮಣಿಗಳ ಮಧ್ಯದೊಳ್ ತಂತುವಿನಂತೆ ಸರ್ವಪ್ರಾಣಿ ಹೃದಯ ಗಳಲ್ಲೂ, ಅವಿಚ್ಛಿನ್ನವಾಗಿ ಬೆಳಗುತ್ತೀಯೆ. ಹುಟ್ಟಿ ಹುಟ್ಟಿ ಹೋಗುವದು ಆಧಿವ್ಯಾಧಿ ಯುಕ್ತವಾಗಿರುವದು ಸಹ ಸಂಸಾರಕ್ಕೆ ಸ್ವಭಾವವೆನಿಸುವದು. ಅವಿಚಾರದಿಂದಿದು ಬಲವಾಗುವದು. ಸ್ವಪ್ನದಲ್ಲೂ, ಭ್ರಮೆಯಲ್ಲೂ, ಸಂಸಾರದಲ್ಲೂ, ಅದರದರ ಕ್ರಮವೇ ಇರುವುದಲ್ಲದೆ ಇನ್ನೇನೂ ಇಲ್ಲ. ಸರ್ವ ಶಕ್ತಿಯಾದ ಪರಮಾತ್ಮನ ಮಾಯೆಯಂಬ ಶಕ್ತಿಯೇ ಈ ರೂಪದಿಂ ಪ್ರಕಾಶಿಸುತ್ತಿರುವದು. ಈ ಮಾಯಾ ಚಕ್ರದಲ್ಲಿ ಯಾವನಿಗೆ ಯಾವನು ಬಂಧುವು ಯಾವನಿಗೆ ಯಾವನು ಶತ್ರುವೆನ್ನಬಹುದು. ಸರ್ವೇಶ್ವರನ ಇಚ್ಛೆಯಿಂದಲೇ ಸರ್ವರೂ ಪರಸ್ಪರವಾಗಿ ಸೇರಿರುವರು. ಸಮುದ್ರ ದಲ್ಲಿ ತರಂಗಗಳಂತೆ ಪುಟ್ಟಿ ಪುಟ್ಟಿ ಪೋಗುತ್ತಲಿರುವರು. ಈ ಮಾಯಾ ಚಕ್ರಕ್ಕೆ ಭ್ರಮಣವೇ ಸ್ವಾಭಾವಿಕವಾದ್ದರಿಂದ ಇದಕ್ಕೆ ಧೂಳಿಯಂತೆ ತಗಲಿಕೊಂಡಿರುವ ಪ್ರಾಣಿಗಳು ಸ್ವರ್ಗದಿಂ ನರಕಕ್ಕೂ ನರಕದಿಂ ಸ್ವರ್ಗಕ್ಕೂ ದ್ವೀಪಾಂತರದಿಂ ದ್ವೀಪಾಂತರಕ್ಕೂ ಯೋನ್ಯಂತರದಿಂದ ಯೋನ್ಯಂತರಕ್ಕೂ ಪೋಗುತ್ತಲಿರುವರು. ಇಲ್ಲಿ ಧೀರರಾದವರು ದೀನರಾಗುವರು. ದೀನರು ಧೀರರಾಗುವರು. ಪುಣ್ಯಶಾಲಿ ಗಳು ಬಹುಜನಗಳು ಸಹ ಇಲ್ಲಿ ಎಷ್ಟೋ ಮಂದಿ ನಷ್ಟರಾದರು. ಇಲ್ಲಿ ಸ್ವಚ್ಛವಾಗಿ ಸಂತಾಪಶೂನ್ಯವಾದದ್ದು, ಅಗ್ನಿಯಲ್ಲಿ ಹಿಮಕಣದಂತೆ ದೊರೆಯಲಾರದು. ಇಲ್ಲಿ

ಯಾವದೂ ಸ್ಥಿರವಾಗಿರದೇ ಭ್ರಮಾತ್ಮಕವಾಗಿರುವದ್ದರಿಂದ ಇವನು ಪರನೆಂತಲೂ ಇವನು ಬಂಧುವೆಂತಲೂ, ನಾನೆಂತಲೂ, ನೀನೆಂತಲೂ, ಭ್ರಾಂತಿಯುಕ್ತಾಂತರಂಗ ದಲ್ಲಿಡದೆ ನಿಶ್ಶೇಷವಾಗಿ ಇದರ ವಾಸನೆಯೇ ಪೋಗುವಂತೆ ವಿಚಾರವಂ ಮಾಡುತ್ತಾ ಲೋಕ ವಿರೋಧವಾಗದಂತೆ ಪ್ರಕೃತೋಚಿತ ಕಾರ್ಯಗಳಂ ನಡಸುವನಾಗು. ಸ್ವರೂಪಸಾಕ್ಷಾತ್ಕಾರದಿಂ ಅಜ್ಞಾನಾವರಣವಂ ತಿರಸ್ಕರಿಸಿದ ಮಹಾತ್ಮರು ನಾನಲ್ಲದ ವಸ್ತುವು ಯಾವದೂ ಇಲ್ಲವೆಂತಲೇ ಸರ್ವವ್ಯಾಪಕವಾದ ಜ್ಞಾನದಿಂ ದುದಯಾಸ್ತಗಳಿಲ್ಲದೆ ಸರ್ವ ಸಾಕ್ಷಿಭಾವದಿಂದಿರುವರು. ಎಲೈ ರಾಜೇಂದ್ರನೇ ಇಲ್ಲಿರುವರೆಲ್ಲರೂ ನಿನ್ನವರೇ ಆದ್ದರಿಂದ ಸರ್ವ ಸಮಭಾವದಿಂದಿರುವನಾಗು. ನಿನ್ನಂಥಾ ಮಹಾತ್ಮರಿಗೆ ಸಾಕ್ಷಿಭಾವದಿಂದಲೂ ಸಮದೃಷ್ಟಿಯಿಂದಲೂ ಪ್ರಪಂಚ ವೆಲ್ಲವು ಬಂಧುವಾಗುವದು. ಮತ್ತು ಅಖಂಡಭಾವದಿಂ ಸರ್ವಪ್ರಪಂಚ ಸ್ವರೂ ಪನು ನೀನೆ ಆಗುತ್ತಲಿದ್ದೀಯೆ ಆದ್ದರಿಂದ ಪ್ರಾಜ್ಞನಾದ ನೀನು ಬಂಧುಭೋಗ ದುಃಖಗಳಂ ಬಿಟ್ಟು ಸುಖದಿಂದಿರುವನಾಗೆಂದು ವಸಿಷ್ಠನು ಪೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯಲ್ಲಿ ಉಪಶಮಪ್ರಕರಣದೊಳಾಶಾಪರಿತ್ಯಾಗಾದಿ ಸಾಧನ ಕ್ರಮ ನಿರೂಪಣವೆಂಬ ಮೂರನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ ಜಯತು.

---

ಶ್ರೀ ರಾಮಾಯನಮಃ.

---

## ಪುಣ್ಯ ಪಾವನೋಪಾಖ್ಯಾನ ಪ್ರಾರಂಭವು.

ಬಳಿಕ ವಸಿಷ್ಠನಿಂತೆಂದನು,- ಎಲೈ ಲೋಕಬಂಧುವೇ! ಬಂಧುವಿಷಯದ ಕಥೆಯಿಂ ಜ್ಞಪ್ತಿಗೆ ಬಂದ ಪುಣ್ಯೋಪದೇಶದ ವೃತ್ತಾಂತವಂ ಪೇಳುವೆನು. ಸಾವಧಾನವಾಗಿ ಕೇಳುವನಾಗು. ಈ ಜಂಬೂ ದ್ವೀಪದೊಳ್ ಶಿಖರಾಗ್ರದಲ್ಲಿ ರುವ ವನಸಮೂಹದಿಂ ಮರಕತ ಮಯವಾದ ಶಿಖರವಂ ಧರಿಸುವಂತೆಯೂ, ತಟಭಾಗದಲ್ಲಿರುವ ಕಲ್ಪವೃಕ್ಷಾದಿ ವೃಕ್ಷಗಳ ನೆರಳೊಳ್ ವಿಶ್ರಮಿಸಿಕೊಳ್ಳುವ ಕಿನ್ನರ ಕಿಂಪುರುಷಾದಿಗಳ ಸಂಗೀತದಿಂ ಗಾಯಕಶಾಲೆಯಂತೆಯೂ, ಗಗನ ಮಂಡ ಲವಂ ಭೇದಿಸಿಕೊಂಡು ಬ್ರಹ್ಮ ಲೋಕವಂ ಪೊಂದಿರುವ ಶೃಂಗಗಳಲ್ಲಿರುವ ಗುಹೆಗಳೊಳ್ ಸಾಮಗಾನವಂ ಮಾಡುತ್ತಿರುವ ಋಷಿಗಳ ಪ್ರತಿ ಧ್ವನಿಯಿಂದ ಪಾಡುತ್ತಿರುವಂತೆಯೂ, ತಪೋವನದಲ್ಲಿರುವ ಶರಭಗಳ ಗರ್ಜನೆಯಿಂದಲೂ, ಗುಹೆ

ಗಳಿಂ ಪೊರಮಡುವ ಪ್ರವಾಹಧ್ವನಿಯಿಂದಲೂ ಕೂಡ ಪ್ರಳಯಕಾಲದ ಮೇಘ ಗಳನ್ನು ಚಂದ್ರೋದಯದಿಂ ವಡವನ್ನಾಕ್ರಮಿಸುವ ಕಲ್ಲೋಲಗಳಿಂ ಕೂಡಿದ ಸಮುದ್ರವಂ ಕೂಡ ಅಣಕಿಸುವಂತೆಯೂ, ಪ್ರಕಾಶಿಸುತ್ತಾ ಮುಂಗುರುಳುಗಳಂ ತೆಸೆವ ನೀಲಮೇಘಗಳಿಂದಲಂಕೃತವಾದ ಮಂದರವೆಂಬ ಗಿರಿ ಇರುವದು. ಅದರ ಲ್ಲೊಂದು ಭಾಗದೊಳ್ ಮನೋಹರವಾಗಿರುವ ಮಣಿಮಯ ಶೃಂಗದಲ್ಲಿ ಮುನಿ ಗಳಿಂ ಸ್ನಾನಾರ್ಥವಾಗಿ ಬ್ರಹ್ಮಲೋಕದಿಂದಿಳುಹಲ್ಪಟ್ಟ ಮಂದಾಕಿನಿಯ ತೀರದಲ್ಲಿ ರತ್ನಸಾನುವಿನ ತಟವನದಂತೆ ಕನಕಕಾಂತಿಯಾಗಿ ನಿತ್ಯವಿಕಾಸವಾದ ವೃಕ್ಷ ಸಮೂಹದಿಂ ಕೂಡಿದ ಆಶ್ರಮದೊಳ್ ಮಹಾ ತಪಸ್ವಿಯಾದ ದೀರ್ಘತಪಸೆಂಬ ಮುನೀಶ್ವರನಿದ್ದನು. ಅವನಿಗೆ ಎರಡನೇ ಸೂರ್ಯ ಚಂದ್ರರಂತೆ ತೇಜಸ್ವಿಗಳಾದ ಪುಣ್ಯ ಪಾವನರೆಂಬ ಇಬ್ಬರು ಮಕ್ಕಳಾದರು. ಅವರಲ್ಲಿ ವಯಸ್ಸಿನಿಂದಲೂ, ಗುಣದಿಂದಲೂ, ಜ್ಯೇಷ್ಠನಾದ ಪುಣ್ಯನು ಪೂರ್ಣ ಜ್ಞಾನಿಯಾದನು. ಪಾವನನು ಲೌಲ್ಯದಿಂ ಜ್ಞಾನಲಕ್ಷ್ಮಿಯಂ ಸಂಪೂರ್ಣವಾಗಿ ಪಡಯದೆ ಪ್ರಾತಃ ಸಂಧ್ಯಾ ಕಾಲದ ಕಮಲದಂತೆ ಅರ್ಧೋಲ್ಲಾಸನಾಗಿದ್ದನು. ಹೀಗಿರುವಲ್ಲಿಯೇ ಆ ಮುನೀ ಶ್ವರನು ವೃಕ್ಷ ಛಾಯೆಯಂ ಕಂಡ ಕಾಷ್ಠಭಾರವಾಹಿಯು ಭಾರವನ್ನಿಳುಹಿ ಛಾಯೆಯಲ್ಲಿ ವಿಶ್ರಮಿಸಿಕೊಳ್ಳುವಂತೆ ಕಲ್ಪನಾಶ್ರಯವಾದ ದೇಹವಂ ಬಿಟ್ಟು ದೃಶ್ಯವಿಕಲ್ಪವಿಲ್ಲದ ಚಿದ್ವಸ್ತುವಿನಲ್ಲಿ ನೆಲಸಿದನು. ಕಾಲವಾಯುವಿನಿಂದಪಹೃತ ವಾದ ಚೈತನ್ಯ ಪರಿಮಳವುಳ್ಳ ಆ ಶರೀರವಂ ಕಂಡ ಮಹಾ ಪತಿವ್ರತೆಯಾದ ಅವನ ಪತ್ನಿಯು ಸಾಯಂಕಾಲದೊಳ್ ಸಂಕೋಚವಾಗುವ ಕಮಲವಂ ಭ್ರಮರಿ ಯಂತೆ ಯೋಗಾಭ್ಯಾಸ ಬಲದಿಂ ತನ್ನ ಶರೀರವಂ ಬಿಟ್ಟಳು. ಲೋಕಗತಿಯಂ ತಿಳಿದ ಪುಣ್ಯನು ದೀನನಾಗದೆ ಆ ಮಾತಾ ಪಿತೃಗಳಿಗೆ ಸಂಸ್ಕಾರವಂ ಮಾಡಿ ಶೋಕಾಕುಲನಾಗಿದ್ದ ಪಾವನನಂ ಕುರಿತು ಪೇಳಿದನದೆಂತೆನೆ,- ಎಲೈ ಮಗನೇ ವರ್ಷಾಕಾಲವು ಕ್ಷುದ್ರಪ್ರವಾಹವಂ ವೃದ್ಧಿ ಹೊಂದಿಸುವಂತೆ ಜಾಡ್ಯ ಪ್ರಚುರ ವಾದ ದುಃಖವನ್ನೇಕೆ ಬೆಳಸುತ್ತೀಯೆ ? ದಕ್ಷಿಣ ದಿಕ್ಕಿನೊಳಿದ್ದ ಸೂರ್ಯನು ಉತ್ತರ ದಿಕ್ಕಂ ಪೊಂದುವಂತೆ ಸಂಸಾರ ಮಾರ್ಗದಲ್ಲಿ ನಮ್ಮ ತಂದೆಯು ಛಾಯೆಯಂತಿದ್ದ ಪತ್ನಿಯೊಡನೆ ಸರ್ವೋತ್ತಮವಾದ ಮೋಕ್ಷ ಮಾರ್ಗವಂ ಪೊಂದಿದನು. ಅತಿ ಕಷ್ಟವಾದ ಕ್ಷುದ್ರಮಾರ್ಗವಂ ಬಿಟ್ಟು ಶುಭವಾದ ರಾಜಮಾರ್ಗವಂ ಪೊಂದಿ ದವನು ದುಃಖ ಪಡುವದಕ್ಕೆ ಯೋಗ್ಯನಾಗನು. ನಿನಗೆ ಅವರ ವಿಯೋಗವಾಯಿ ತೆಂದು ದುಃಖ ಪಡುವೆಯಾದರೆ ನಿನಗೆ ಅವರೇ ತಾಯಿ ತಂದೆಗಳೆಂತಲೂ, ಅವರಿಗೆ

ನೀನು ಮಗನೆಂತಲೂ, ತಿಳಿಯಬೇಡ ಹರಿಯುವ ಮಹಾ ಪ್ರವಾಹಕ್ಕೆ ಹಳ್ಳಗಳಂತೆ ಎಷ್ಟೋ ತಾಯಿ ತಂದೆಗಳು ನಮಗೆ ಸಂಭವಿಸಿರುವರು. ಬಳ್ಳಿ ಮರಗಳಿಗೆ ಪತ್ರ ಪುಷ್ಪಗಳಂತೆ ನಮ್ಮ ತಾಯಿ ತಂದೆಗಳಿಗೆ ನಮ್ಮಂಥಾ ಮಕ್ಕಳುಗಳು ಎಣಿಕೆಯಿಲ್ಲದೇ ಆಗಿರುವರು. ಮರಗಳಿಗೆ ಪ್ರತಿವರ್ಷವಲ್ಲೂ, ಫಲಗಳಂತೆ ಪ್ರಾಣಿಗಳಿಗೆ ಪ್ರತಿ ಜನ್ಮದಲ್ಲೂ, ಹೊಸ ಹೊಸದಾಗಿ ಬಂಧುಗಳು ಸಂಭವಿಸುವರು. ಹೋದ ಫಲಗಳಂ ಮರಗಳು ಕೂಡ ಸ್ಮರಿಸದಿರುವಲ್ಲಿ ತಂದೆ ತಾಯಿಗಳು ಹೋದವರೆಂದು ನಾವು ದುಃಖಪಡುವದಕ್ಕೆ ಕಾರಣವೇನಿರುವದು. ಸಂಸಾರಮಾರ್ಗದಲ್ಲಿ ಜನ್ಮಗಳಿಗೂ ಸಮುದ್ರದಲ್ಲಿ ತೆರೆಗಳಿಗೂ ಎಣಿಕೆ ಎಂದಿಗೂ ಆಗಲಾರದು. ಪರಮಾರ್ಥವಾಗಿ ವಿಚಾರಿಸುವಲ್ಲಿ ಈ ಪ್ರಪಂಚವು ಬಿಸಲು ದೊರೆಯಂತೆ ಭ್ರಾಂತಿಸಿದ್ಧವೆನಿಸುವದಾದ್ದರಿಂದ ಮಿತ್ರರು ಬಂಧುಗಳು ಸಹ ಯಾರೂ ಇಲ್ಲವೆಂತಲೂ ತಿಳಿಯತಕ್ಕದು. ಮರುಭೂಮಿಯಲ್ಲಿ ಜಲ ಕಣಗಳಂತೆ ಇವರು ಭ್ರಾಂತಿಯಿಂ ದೃಶ್ಯವಾಗಿರುವದಾದ್ದರಿಂದ ಇವರಿಗೋಸುಗ ದುಃಖಪಡುವುದಕ್ಕೆ ಕಾರಣವೇನು ಆತ್ಮನಿಗೆ ನಾಶವಿಲ್ಲದ್ದರಿಂದಲೂ, ದೇಹಕ್ಕೆ ಸ್ಥಿತಿಯಿಲ್ಲದ್ದರಿಂದಲೂ, ದುಃಖಪಡುವದಕ್ಕೆ ಕಾರಣವೇ ಕಾಣುವುದಿಲ್ಲ. ದುಃಖದಿಂ ಪ್ರಯೋಜನವೂ ತೋರುವದಿಲ್ಲ. ರಾಜಾಧಿರಾಜರ ಐಶ್ವರ್ಯಗಳೂ ಕೂಡ ಛತ್ರಚ್ಛಾಯೆಗಳಂತೆ ಹ್ರಾಸವಿಸ್ತಾರಗಳಂ ಹೊಂದುತ್ತಾ ಚಾಮರಗಳಂತೆ ಚಂಚಲಗಳಾಗಿರುವದ್ದರಿಂದ ಸಂಸಾರನಿದ್ರೆಯೊಳುಂಟಾದ ಸ್ವಪ್ನವೈಭವವೆಂತಲೇ ತಿಳಿಯತಕ್ಕದ್ದು. ಪರಮಾರ್ಥದೃಷ್ಟಿಯಿಂ ನಾನು ನನ್ನದೆನ್ನುವದಕ್ಕೆ ಅವಕಾಶವಿದಿರುವಲ್ಲಿ ಅಜ್ಞಾನಾತ್ಮಕವಾದ ಪ್ರಪಂಚವೆಂಬ ಮರುಭೂಮಿಯೊಳ್ ಶುಭಾಶುಭ ತರಂಗರೂಪದಿಂ ಪ್ರಕಾಶಿಸುವ ವಾಸನಾತ್ಮಕವಾದ ಸಂಸಾರಪ್ರವಾಹದಲ್ಲಿ ಮಗ್ನರಾಗುವದಕ್ಕೆ ಕಾರಣವೇನಿರುವದು. ಪುತ್ರ ಮಿತ್ರ ಬಂಧು ಸ್ನೇಹಾತ್ಮಕವಾದ ಮೋಹದಿಂದುಂಟಾದೀಪ್ರಪಂಚದಲ್ಲಿ ತಾಯಿತಂದೆಗಳು ಮಿತ್ರರು ಬಂಧುಗಳು ಸಹ ಯಾರೆಂದು ತಿಳಿಯತಕ್ಕದ್ದು? ಆಹಾರಪದಾರ್ಥವು ಭಾವನೆಯಿದ್ದಂತೆ ವಿಷಭಾವವನ್ನು ಅಮೃತದ ಭಾವವನ್ನು ಹ್ಯಾಗೆ ಹೊಂದುವದೊ ಹಾಗೆ ಜನಗಳು ಭಾವಿಸಿದಂತೆ ಮಿತ್ರಭಾವವನ್ನು ಶತ್ರುಭಾವವನ್ನು ಸಹ ಹೊಂದುವರು. ಸರ್ವವ್ಯಾಪಕನಾಗಿರುವ ಅದ್ವಿತೀಯನಾದ ಆತ್ಮನಿಗೆ ಇವನು ಬಂಧುವೆಂತಲೂ ಇವನಲ್ಲವೆಂತಲೂ ಕಲ್ಪನೆ ಹ್ಯಾಗೆ ಉಂಟಾದೀತು. ರಕ್ತ ಮಾಂಸಾಸ್ಥಿಮಯವಾದ ದೇಹದೊಳ್ ನಾನು ಯಾರೆಂದು ವಿಚಾರಿಸುವಲ್ಲಿ ನಮ್ಮಿಬ್ಬರ ಭೇದಿಸುವ ಜ್ಞಾನವೇ ಕಾಣುವನೆಂದು ತಿಳಿಯಬರುತ್ತೆ. ಆಗ ನಿನಗೆ

ಯಾರು ತಾಯಿತಂದೆಗಳೊ ಯಾರು ಮಿತ್ರರೊ ಯಾರು ಭಿನ್ನರೊ ಇದೆಲ್ಲವೂ ಗೊತ್ತಾಗುವದು. ನೀನು ಲಿಂಗಶರೀರದಲ್ಲಿರುವನಾದರೆ ಈಗಿನ ಬಂಧುಗಳಿಗೋಸ್ಕರ ದುಃಖಪಡುವಂತೆ ಜನ್ಮಾಂತರದ ಬಂಧುಗಳಿಗೋಸುಗ ಯಾಕೆ ದುಃಖಪಡುವದಿಲ್ಲ. ನೀನು ಮೃಗಯೋನಿಯಲ್ಲಿ ಪುಟ್ಟಿದ್ದಾಗಲು ರಾಜೀವ ಸರೋವರದಲ್ಲಿ ರಾಜಹಂಸವಾಗಿದ್ದಾಗಲೂ ವೃಕ್ಷವಾಗಿದ್ದಾಗಲೂ ಸಿಂಹವಾಗಿದ್ದಾಗಲೂ ಮತ್ಸ್ಯವಾಗಿದ್ದಾಗಲೂ ಬಂಧುವಾಗಿದ್ದ ಮೃಗಪಕ್ಷಿ ವೃಕ್ಷಾದಿಗಳನ್ನು ಏಕೆ ಸ್ಮರಿಸುವದಿಲ್ಲ. ದಶಾರ್ಣವದಲ್ಲಿ ಕಪಿಯಾಗಿಯೂ, ತುಷಾರದೇಶದಲ್ಲಿ ರಾಜಪುತ್ರನಾಗಿಯೂ, ಪುಂಡ್ರದೇಶದಲ್ಲಿ ತಪಸ್ವಿಯಾಗಿಯೂ, ವಿದೇಹದಲ್ಲಿ ಹಸ್ತಿಯಾಗಿಯೂ, ತ್ರಿಗರ್ತದಲ್ಲಿ ಕತ್ತೆಯಾಗಿಯೂ, ಸಾಲ್ವದಲ್ಲಿ ನಾಯಿಯಾಗಿಯೂ, ಸರಳವೃಕ್ಷದಲ್ಲಿ ಪಕ್ಷಿಯಾಗಿಯೂ ಅತ್ತಿಯ ಹಣ್ಣಿನಲ್ಲಿ ಸೊಳ್ಳೆಯಾಗಿಯೂ, ಹಳ್ಳದಲ್ಲಿ ಘುಣವೆಂಬ ಹುಳುವಾಗಿಯೂ, ಮಂದರದಲ್ಲಿ ಕೋಳಿಯಾಗಿಯೂ, ಅದರ ಗುಹೆಯಲ್ಲಿ ಬ್ರಾಹ್ಮಣನಾಗಿಯೂ, ಮರಳಿ ತುಷಾರಕೋಸಲವಂಗಾದಿದೇಶದಲ್ಲಿ ಅಶ್ವಾದಿಜನ್ಮಗಳಂ ಪಡೆದು ಬ್ರಹ್ಮನ ಯಜ್ಞದೊಳ್ಪಶುವಾದಾಗ್ಯೂ ಜನ್ಮ ಕರ್ಮಗಳು ಬಿಡದೆ ಬಕತಿತ್ತಿರಿ ಪಿಪೀಲಿಕಾದಿ ಜನ್ಮಗಳಂ ಪೊಂದಿದ್ದ ನೀನೆ ಈ ಜನ್ಮದೊಳ್ ನನಗೆ ತಮ್ಮನಾಗಿದ್ದೀಯೆ ನಿನಗೂ ನನಗೂ ಪೂರ್ವದಲ್ಲುಂಟಾದ ಜನ್ಮಗಳನ್ನು ಜ್ಞಾನದೃಷ್ಟಿಯಿಂ ನಾನು ನೋಡುತಲಿರುವೆನು, ತ್ರಿಗರ್ತಾದಿ ದೇಶಗಳಲ್ಲಿ ಶುಕಬಕಾದಿ ಜನ್ಮಗಳಂ ಪಡೆದಿದ್ದ ನಾನೇ ಈಗ ನಿನಗೆ ಅಣ್ಣನಾಗಿರುವೆನು. ಕುರುಡ ಹಳ್ಳಿಯಲ್ಲಿ ಚಕೋರಪಕ್ಷಿಯಂತೆ ಪುಟ್ಟಿ ಮುಂಜಿನದೇಶದೊಳ್ ಧೊರೆಯಾಗಿದ್ದ ಶ್ರೀಶೈವಾಚಾರ್ಯ ಪುತ್ರನಾದ ನನ್ನಿಂದ ಇದು ಪೇಳಲ್ಪಡುವದೆಂದು ಲೌಕಿಕ ಜನರು ಸುಳ್ಳುಕಥೆಯಂ ಪೇಳುವಂತೆಯೂ ಪರಮಾರ್ಥದೃಷ್ಟಿಯಿಂ ಶುದ್ಧ ಸುಳ್ಳಾದ ನಮ್ಮ ಈ ಜನ್ಮವೃತ್ತಾಂತವಂ ಪೇಳಿರುವೆನು. ಬಗೆಬಗೆಯಾದ ಸಂಸಾರಗಳು ಪರಿಪರಿಯಾದ ವ್ಯಾಪಾರಗಳು ಸಹ ಅಜ್ಞಾನದ ವಿಲಾಸವಲ್ಲದೆ ಮತ್ತೊಂದಲ್ಲ. ಹೀಗಿರುವಲ್ಲಿ ಯಾವಜನ್ಮದ ಬಂಧುಗಳಂ ಸ್ಮರಿಸಿಕೊಂಡಳಬೇಕು. ಈಗಿನ ಬಂಧುಗಳಂ ಪಿಡಿದು ದುಃಖಪಡುವದರಿಂ ಪ್ರಯೋಜನವೇನಾಗುವದು. ಕಾಡುಮರಕ್ಕೆ ಎಲೆಗಳಂತೆ ಸಂಸಾರಿಗೆ ಬಂಧುಗಳು ಎಲ್ಲೆಲ್ಲೂ ಸಿದ್ಧವಾಗಿಯೇ ಇರುವರು. ಜಗತ್ತಿನರೀತಿಯೇ ಇಂಥಾದ್ದಾದ್ದರಿಂದ ದುಃಖಪ್ರದವಾದ ಪ್ರಪಂಚದ ಭಾವನೆಯಂ ಬಿಟ್ಟು ಜ್ಞಾನಿಗಳ ಮಾರ್ಗಾನುಸರಣೆಯಿಂದ ಜರಾಮರಣಗಳಿಂದಲೂ, ಅಸ್ತಿನಾಸ್ತಿಯೆನಿಸುವ ಭಾವಾ ಭಾವಪದಾರ್ಥಗಳ ವಿಕಾರದಿಂದಲೂ, ವರ್ಜಿತನಾಗಿ ನಿತ್ಯಾನಂದಸ್ವರೂಪನಾಗಿರುವ ಆತ್ಮ

ನನ್ನೇ ವಿಚಾರಿಸುತ್ತಿರುವವನಾಗು. ಚಿನ್ಮಾತ್ರಸ್ವರೂಪನೇ ನಾನೆಂದು ಗೊತ್ತಾಗು
ವಲ್ಲಿ ಯಾರಿಗೆ ಯಾರೂ ತಾಯಿತಂದೆಗಳೋ, ಯಾವದಕ್ಕೆ ಯೇನು ದುಃಖವೋ ಅದು
ನಿನಗೆ ಗೋಚರವಾಗುವದು. ಸಂಸಾರಭ್ರಾಂತಿಯಿಂ ಸರ್ವದಾ ದುಃಖಪಡುತ್ತಿ
ರುವ ಮೂಢರಮಾರ್ಗಕ್ಕೆ ಪೋಗುವದು ಯುಕ್ತವಲ್ಲವಾದ್ದರಿಂದ ಸುಖದುಃಖಾದಿ
ದ್ವಂದ್ವಗಳಿಂ ಬೆರಗಾಗದೆ ದೃಗ್ದೃಶ್ಯಾದಿ ತ್ರಿಪುಟಿಗಳಲ್ಲಿ ಮಧ್ಯಸ್ಥವಾದ ದೃಷ್ಟಿ
ಯಿಂದ ಪ್ರಕೃತೋಚಿತವಾದ ಕರ್ಮಗಳೆಲ್ಲವನ್ನೂ ಮಾಡುತ್ತಾ ಅಹಂಭಾವವಿಲ್ಲದ್ದ
ರಿಂದ ಆ ಕರ್ಮಸಂಬಂಧವಿಲ್ಲದೆ ಪರಿಪೂರ್ಣಭಾವದಿಂ ರಾಗದ್ವೇಷಹೀನರಾಗಿ ಪ್ರತಿ
ಬಿಂಬಗಳಂ ಪಿಡಿದಾಗ್ಯೂ ಅವುಗಳ ಸಂಬಂಧವಿಲ್ಲದಿರುವ ಕನ್ನಡಿಗಳಂತೆ ಸಂಗದೋ
ಷವಿಲ್ಲದವರಾಗಿ ಲೀಲೆಯುಂವಲೆ ಲೋಕಯಾತ್ರೆಯುಂನನುಸರಿಸುವ ಮಹಾತ್ಮರವೃ
ಷ್ಟಿಯುಂಗ್ರಹಿಸಿ ಸಂಸಾರ ಸಂಭ್ರಮಗಳನ್ನೆಣಿಸದೆ ಸ್ವರೂಪಾನುಸಂಧಾನನಿರತ
ವಾದ ಮನಸ್ಸಿನಿಂದ ಆತ್ಮನ ಅಖಂಡಭಾವವಂ ನಿಶ್ಚಯಿಸಿ ಪರಮಾನಂದ ಸ್ವಭಾವ
ನಾಗಿರುವನಾಗು. ಎಂದು ಪುಣ್ಯನು ಪೇಳಲಾಗಿ ತತ್ವವಿಚಾರದಿಂದ ಪಾವನನ
ಹೃದಯವಂ ಜ್ಞಾನಲಕ್ಷ್ಮಿಯು, ಪ್ರಪಂಚವಂ ಸೂರ್ಯಪ್ರಭೆಯಂತೆ ಪೊಕ್ಕು ಅಜ್ಞಾ
ನ ತಮೋರಹಿತವಂ ಮಾಡಿದಳು. ಬಳಿಕ ಏಕಚಿತ್ತರಾದ ಆಪುಣ್ಯಪಾವನರು ಏಕ
ಕಾಲದಲ್ಲುದಿಸಿದ ಸೂರ್ಯಚಂದ್ರರಂತೆ ಬಹುಕಾಲ ಭುವನಾನಂದಕರಾಗಿದ್ದು ಭೂಮಿ
ಸ್ಥಿತಿ ಋಣಾನುಬಂಧ ತೀರಲು ಎಣ್ಣೆಯಿಲ್ಲದ ದೀಪದಂತೆ ವಿದೇಹಸಾಮ್ರಾಜ್ಯವಂ
ಪಡೆದರು. ಹೀಗೆ ಮಹಾತ್ಮರು ಗತವಾರ್ತೆಯಂ ಸ್ಮರಿಸದೆ ಪ್ರಕೃತಕಾರ್ಯವಂ
ನನುಸರಿಸುವರಾದ್ದರಿಂದ ಮುಕ್ತರಂತೆ ಆಶೆಗಳು ಬಿಡುವದಕ್ಕೆ ಯೋಗ್ಯವೆಂದು ತಿಳಿ
ಯುವನಾಗು. ವಿಷಯಾಲೋಚನೆಯುಂಬಿಟ್ಟದ್ದರಿಂದ ಕಟ್ಟಿಗೆಇಲ್ಲದ ಬೆಂಕಿಯಂತೆ
ಚಿಂತೆಯು ಶಾಂತವಾಗುವದು. ಎಲೈ ರಾಘವನೆ, ನೀನು ಆಲಸ್ಯಪಡದೆ ಧೈರ್ಯ
ತ್ಯಾಗವೆಂಬ ರಥವನ್ನೇರಿ ಕರುಣಾಮಯವಾದ ದೃಷ್ಟಿಯಿಂದ ಲೋಕಸಂರಕ್ಷಣ
ರೂಪವಾದ ನಿಜಕಾರ್ಯವಂ ಮಾಡುತ್ತಿರುವನಾಗು. ರಾಗ ರೋಗವಿಲ್ಲದ ಈ ಅವ
ಸ್ಥೆಯೇ ಬ್ರಹ್ಮಸ್ಥಿತಿಯೆನಿಸುವದು. ಇದಂ ಪಡೆದವನು ಲೋಕವ್ಯವಹಾರದಲ್ಲಿ
ಚತುರನಲ್ಲದೆ ಇದ್ದಾಗ್ಯೂ ಮೋಹಪಡನು. ವಿವೇಕ ಪರಮಾರ್ಥಜ್ಞಾನಗಳೆಂಬ
ಮಿತ್ರರಿಂ ಕೂಡಿರುವನು, ಸಂಕಟಗಳಲ್ಲೂ ಮೂಢನಾಗನು. ಬಂಧುಗಳಲ್ಲೂ,
ವಿಷಯಗಳಲ್ಲೂ, ಎಡೆಯಾಡದೆ ಪರಮಾರ್ಥವಂ ಪಿಡಿದಿರುವದೇ ಧೈರ್ಯವೆನಿಸುವ
ದು. ಇದಿಲ್ಲದೆ ಸಂಸಾರ ಸಂಕಟದಿಂದುದ್ಧರಿಸುವದಕ್ಕೆ ಯಾವದೂ ಸಮರ್ಥವಾಗ
ಲಾರದು. ವಿನಯ ವೈರಾಗ್ಯದಿಂದಲೂ, ಪರಮಾರ್ಥವಿಚಾರದಿಂದಲೂ, ಪರಿಪೂ

ರ್ಣಭಾವದ ಸಂಭಾವನೆಯಿಂದಲೂ, ಮೈತ್ರೀಕರುಣಾದಿಗುಣದಿಂದಲೂ ಕೂಡ ಮನವು ನಿಲ್ಲಿಕೊಂಡಿರುವವನಿಗೆ ಸಮಸ್ತವಾದ ಆಪತ್ತುಗಳೂ ತೊಲಗುವವಲ್ಲದೆ ತ್ರೈಲೋಕ್ಯೈಶ್ವರ್ಯಕ್ಕಿಂತಲೂ, ಅಧಿಕವಾದ ಪರಮಾನಂದವು ಸಿದ್ಧವಾಗುವದು. ಜೋಡಿದ್ದವನ ಕಾಲಿಗೆ ಭೂಮಿಯೆಲ್ಲವೂ ಚರ್ಮಮಯವಾಗುವಂತೆ ಸಂತೋಷವಿದ್ದವನಿಗೆ ಪ್ರಪಂಚವೆಲ್ಲವೂ, ಬೆಳ್ದಿಂಗಳಿಂ ತುಂಬಿರುವಂತಿರುವದು. ಸ್ವರ್ಗ ನರಕಗಳಿಗೆ ಹಾರಿಬೀಳುತ್ತ ಜನನ ಮರಣ ದುಃಖಾತ್ಮಕವಾದ ದಂಡವಂ ಧರಿಸಿರುವ ಆಶಾಪಿಶಾಚಿಯಿಂದ ಹೊಡೆಯಲ್ಪಡುವ ಚಂಡಿನಂತಿರುವ, ಪ್ರಾಣಿಗಳಿಗೆ ಮನವು ವಿಷಯದುಃಖಾಕುಲವಾದ್ದರಿಂದ ಜಗವೆಲ್ಲವು ಬಿಸಿಬಿಸಲಿನಿಂ ಮುರಿಯುವಂತಿರುವದು. ವೃಷ್ಟಿಪ್ರವಾಹದಿಂ ತುಂಬಿದ ಕೆರೆಯಂತೆ ದುರಾರ್ಜನೆಗಳಿಂ ಮನವು ಪೂರ್ಣವಾಗಿದ್ದಾಗ್ಯೂ ಕಲುಷವಾಗಿಯೆ ಇರುವದು. ವೈರಾಗ್ಯವೆಂಬ ಶರತ್ಕಾಲದಿಂ ಕೆಸರಡಗಲು ಅದೇ ಕೆರೆಯಂತೆ ಮನವು ನಿರ್ಮಲವಾದ ಆಶಯದಿಂ ಸರ್ವರಿಗೂ ಗ್ರಾಹ್ಯವಾಗಿ ಸರಸವೆನಿಸುವದು. ಆರ್ಜನೆಯಿಲ್ಲದ್ದರಿಂ ವ್ಯರ್ಥವಾಗಿ ಆಶಿಸುವವನ ಮನವು ಅಗಸ್ತ್ಯಮಹಾಮುನಿಯಿಂ ನಿಶ್ಶೇಷಿತ ಜಲವಾದ ಸಮುದ್ರದಂತೆ ಶೂನ್ಯವಾಗಿ ಸಂತಾಪಪಡುವದು. ಮತ್ತು ನಾನಾವಿಧ ವ್ಯಸನಗಳೆಂಬ ಕಪಿಗಳಿಂದಾಕ್ರಮಿಸಲ್ಪಟ್ಟ ವೃಕ್ಷದಂತೆ ಚಪಲಪಡುತ್ತಿರುವದು. ತತ್ವಜ್ಞಾನದಿಂ ವೈರಾಗ್ಯಶಾಲಿಯಾದವನಿಗೆ ಪ್ರಪಂಚವು ತಾವರೆಯ ಮಣಿಯಂತೆಯೂ, ಯೋಜನಸಮೂಹವು ಗೋಷ್ಪದದಂತೆಯೂ, ಮಹಾಕಲ್ಪವು ನಿಮಿಷದಂತೆಯೂ ಕಾಣ್ಬರುವದು. ನಿಸ್ಪೃಹನ ಮನದಂತೆ ಚಂದ್ರಮಂಡಲವು ಹಿಮಾಚಲದ ಗುಹೆಯು ಬಾಳೆತೋಟವು, ಚಂದನವನವೂ ಕೂಡ ತಾಪಹೀನವಾಗಿರಲಾರದು. ಸಂಪೂರ್ಣನಾದ ಚಂದ್ರನು ಉಕ್ಕಿದ ಕ್ಷೀರಸಮುದ್ರವು ನಾರಾಯಣನೊಡನೆ ವಿಹರಿಸುತ್ತಿರುವ ಲಕ್ಷ್ಮೀವದನವೂ ಕೂಡ ವಿರಕ್ತನಮನದಂತೆ ಪ್ರಕಾಶಿಸಲಾರದು. ಸಾಮ್ಯರಹಿತವಾದ ಬ್ರಹ್ಮಭಾವವಂ ಹೊಂದಿದ ಜ್ಞಾನಿಯ ಗುಣಗಳಿಗೆ ವಿಷಮವಾದ ದೃಶ್ಯಪದಾರ್ಥಗಳು ಸರಿಯಾಗದಿದ್ದಾಗ್ಯೂ ದೃಷ್ಟಾಂತವಿಲ್ಲದೆ ಬೋಧೆಗೆ ಬರಲಾರದಾದ್ದರಿಂದ ಅವುಗಳೇ ದೃಷ್ಟಾಂತವಾಗಿ ಹೇಳಲ್ಪಡುವವು. ಬೀಜವಾದ ಅಜ್ಞಾನವಿರುವವರಿಗೆ ಆಶೆಯೆಂಬ ಬಳ್ಳಿಯು ಕತ್ತರಿಸಲ್ಪಡುತ್ತಿದ್ದಾಗ್ಯೂ ವಿಷಯಸ್ಮೃತಿ ಮಾತ್ರದಿಂ ಬೆಳೆಯುತ್ತಾ ಚಂದ್ರನಂ ನೋಡದಂತೆಯೂ, ಬಿಳೀಗೋಡೆಯಂ ಮಸಿಯಂತೆಯೂ, ಸಾಧಾರಣವಿರಕ್ತನಂ ಕಾಂಗೆಡಿಸುವದು. ಪರಮಾತ್ಮನ ಪೂರ್ಣಭಾವವು ಅನುಭವಾರೂಢವಾಗಲು ಅದರಿಂ ಧೀವರರೂಪವಾದ ಅಜ್ಞಾನವಳಿಯಲು ಅಹಂಭಾವವೆಂಬ ಆಧಾರಸ್ತ

ಕ್ಷವು ಬೆಳೆವಲ್ಲಿ ಮನವೆಂಬ ಪಾತಿಯಲ್ಲಿ ಶಮ ದಮ ಸಂತೋಷಾದಿಗುಣಗಳೆಂಬ ಕೊಂಬೆಗಳಿಂ ದಿಕ್ಕುಗಳಂ ವ್ಯಾಪಿಸುವ ಧೈರ್ಯವೆಂಬ ವೃಕ್ಷವು ಪುಷ್ಟಿ ವೃದ್ಧಿ ಹೊಂದುವದು. ವಿಚಾರರೂಪವಾದ ಈ ವೃಕ್ಷದ ಬೇರುಗಳಿಂ ಮನಸ್ಸರೂಪವಾದ ಮನವೆಂಬ ಪಾತಿಯು ಮುಚ್ಚಲು ಆ ಮನವು ಚಿದಚಿದ್ಭೇದ ಬೋಧಕವಾದ ಸ್ವಭಾವವಂ ಬಿಟ್ಟು ಕೇವಲ ಚಿದ್ರೂಪದಿಂ ಬೆಳಗುವದು. ಇದೇ ಮೋಕ್ಷವೆನಿಸುವದು. ಚಿತ್ತಕ್ಕೆ ಚಿಂತನವೇ ವೃತ್ತಿಯು ಅದಂ ಬಿಡದೆ ಅದು ನಷ್ಟವಾಗದು. ಅದು ನಷ್ಟವಾಗದೆ ಮುಕ್ತಿಯಾಗಲಾರದು. ಆದ್ದರಿಂದ ಚಿತ್ತವೃತ್ತಿ ಕ್ಷಯವಾಗುವಂತೆ ವಿಷಯಗಳ ಆಶೆಯನ್ನು ಅದರ ಆಲೋಚನೆಯುಂ ಸಹ ಬಿಟ್ಟು ಸರ್ವಕಾಲದಲ್ಲೂ ಪರಮಾರ್ಥ ವಿಚಾರ ಪರನಾಗಿ ಪರಿಪೂರ್ಣಭಾವವಂ ಪಡೆಯುವನಾಗು. ಯಾವ ಮಾರ್ಗದಿಂದಲಾದರೂ ಪರಮಾರ್ಥವಿಚಾರ ಉಂಟಾಗಿ ಆಸಾಕ್ಷ್ಯತೆಗಳು ತಪ್ಪಲು ಯಾರುತಾನೆ ಮುಕ್ತರಾಗಲಾರರು. ಆಕಸ್ಮಿಕವಾಗಿ ವಿವೇಕ ವಿಚಾರಗಳಂ ಪಡೆದ ಬಲಿಯ ವೃತ್ತಾಂತವಂ ಕೇಳಿಂದು ಪೇಳುವಲ್ಲಿ ಶ್ರೀರಾಮಚಂದ್ರನಿಂತೆಂದನು.—ಎಲೈ ಪರಮಗುರು! ಸರ್ವಜ್ಞನಾದ ನಿನ್ನಪ್ರಸಾದದಿಂ ಪಡೆಯತಕ್ಕದ್ದೆಲ್ಲವೂ ಪಡೆಯಲ್ಪಟ್ಟಿತಾದ್ದರಿಂದ ನಿರ್ಮಲವಾದ ಪರಮಪದದೊಳ್ ನನಗೆ ವಿಶ್ರಾಂತಿಯುಂಟಾಗಿರುವದು. ಶರತ್ಕಾಲದ ಗಗನದಿಂ ಮೇಘದಂತೆ ನನ್ನ ಹೃದಯದಿಂ ದಾಕ್ಷಿಯೆಂಬ ತಮವು ಓಡಿಹೋಯಿತು. ಈಗ ನಾನು ಅಮೃತಕಲೆಗಳಿಂ ಪೂರ್ಣನಾದ ಚಂದ್ರನಂತೆ ಸಂತಾಪವಿಲ್ಲದೆ ಪ್ರಕಾಶಿಸುವೆನು. ಆದಾಗ್ಯೂ ಸಕಲಸಂಶಯ ಮೇಘಗಳಿಗೆ ಶರತ್ಕಾಲನಾಗಿರುವ ಜ್ಞಾನಮೂರ್ತಿಯಾದ ನಿನ್ನ ವಚನಾಮೃತಧಾರೆಗಳಂ ಕರ್ಣಾಂಜಲಿಗಳಿಂದೆಷ್ಟು ಕುಡಿದಾಗ್ಯೂ ನನಗೆ ತೃಪ್ತಿಯಾಗದಿರುವದೆಂದು ಶ್ರೀರಾಮನು ಪೇಳುತ್ತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯೊಳುಪಶಮಪ್ರಕರ

ಣದಲ್ಲಿ ಪುಣ್ಯಪಾವನೋಪಾಖ್ಯಾನ ನಿರೂಪಣವೆಂಬ ನಾಲ್ಕನೆಯ ತರಂಗಕ್ಕೆ
ಮಂಗಳಮಸ್ತು. ಶ್ರೀ. ಶ್ರೀ. ಶ್ರೀ. ಜಯತು. ಶ್ರೀರಾಮಾಯನಮಃ.

## ಪಂಚಮತರಂಗ ಪ್ರಾರಂಭ.

### ಮಹಾಬಲಿ ಜ್ಞಾನಪ್ರಾಪ್ತಿನಿರೂಪಣ ಪ್ರಾರಂಭವು.

ಆ ಬಳಿಕ ಬಲಿಜ್ಞಾನ ಪ್ರಾಪ್ತಿರೀತಿಯಂ ಕೇಳಲಿಚ್ಛೈಸಿದ ಶ್ರೀರಾಮನನು ಕುರಿತು ವಸಿಷ್ಠನಿಂತೆಂದನು.- ಎಲೈ ರಘುವರನೆ ಈ ಭೂಮಂಡಲದ ಕೆಳಗನೆ

ಯೊಳ್ ಒಂದೆಡೆಯಲ್ಲಿ ಕ್ಷೀರ ಸಮುದ್ರದಲ್ಲಿ ಪುಟ್ಟಿ ಅಮೃತ ಕಿರಣಗಳಂ ಮೈಗೆ ತೊಡಕೊಂಡಿರುವಂತೆ ಪ್ರಕಾಶಿಸುವ ದಾನವ ಕನ್ಯೆಯರಿಂ ಪೂರ್ಣವಾಗಿ ಒಂದೆಡೆ ಯೊಳ್ವ್ಯಾಕರಣ ಸಂಗೀತ ಛಂದಸ್ಸು ಮೊದಲಾದ ಶಾಸ್ತ್ರಗಳಿಗೆ ಪ್ರವರ್ತಕರಾಗಿ ಸಾವಿರ ಶಿರಗಳಿಂದಲೂ, ನೂರು ಶಿರಗಳಿಂದಲೂ, ಕೂಡಿರುವ ಸರ್ಪಗಳಿಂ ಪೂರ್ಣವಾಗಿ ಒಂದೆಡೆಯೊಳ್ ಪ್ರಪಂಚವನ್ನೆತ್ತುವದರಲ್ಲಿಯೂ, ತಿನ್ನುವದರಲ್ಲೂ ಆಕ್ರಮಿಸುವದರಲ್ಲೂ ಸಮರ್ಥರಾಗಿ ಚರಿಸುವ ಮೇರು ಗಿರಿಗಳಂತಿರುವ ದಾನವರಿಂ ವ್ಯಾಪ್ತವಾಗಿ, ದಂತಗಳಿಂದಲೂ, ರತ್ನಾಭರಣ ಸಹಿತವಾದ ಅವುಗಳ ಕಿರಣ ಸಮೂಹಗಳಿಂದಲೂ, ಶೃಂಗೋದ್ಯಾನಗಳಿಂ ಶೋಭಿಸುವ ಗಿರಿಗಳಂತೆ ಪ್ರಕಾಶಿಸುತ್ತಾ ಕುಂಭಗಳಿಂ ಚಲಿಸದಂತೆ ಭೂಮಂಡಲವಂ ಧರಿಸಿರುವ ಗಜಗಳಿಂ ಎಂಟು ದಿಕ್ಕುಗಳಲ್ಲೂ ಆಕ್ರಮಿತವಾಗಿ ಹಲ್ಲು ಕಡಿಯುವ ಸದ್ದಿನಿಂದಲೇ ಪ್ರಾಣಿಗಳಂ ತಲ್ಲಣ ಪಡಿಸುವ ಯಮಭಟರಿಂ ಭಯಂಕರವಾದ ನರಕಮಂಡಲದಿಂ ಕೆಳಗಡೆಯೊಳ್ ಸಂಪೂರ್ಣವಾಗಿ ಮೇಲ್ಗಡೆಯೊಳುಪ್ಪರಿಗೆಗಳಂತೆ ಮೇಲ ಮೇಲಿರುವ ರಸಾತಲಾದಿ ಲೋಕಗಳಿಂ ಶೋಭಿತವಾಗಿ ಒಂದೆಡೆಯೊಳ್ ತಮ್ಮ ಪ್ರತಿಬಿಂಬಗಳಂತೆಸೆವ ರತ್ನೋತ್ಪತ್ತಿ ಸ್ಥಾನವಾದ ಸಪ್ತ ಕುಲಾಚಲಗಳ ಮೂಲ ಭಾಗಗಳಿಂ ಪ್ರಕಾಶಮಾನವಾಗಿ ಒಂದೆಡೆಯೊಳ್ ಸಕಲ ಸುರಾಸುರ ಶಿರೋಭೂಷಣವಾದ ಚರಣಕಮಲ ಪರಾಗವುಳ್ಳ ಮಹಾತ್ಮನಾದ ಕಪಿಲನಿಂದತಿಪವಿತ್ರವಾಗಿ ಒಂದೆಡೆಯೊಳಸುರ ನಾರೀ ಸಮೂಹದಿಂ ಪೂಜಿಸಲ್ಪಡುತ್ತಾ ಅವರ ಭಕ್ತಿ ಭಾವದಿಂ ಪರವಶನಾಗಿರುವಂತೆ ಸುವರ್ಣಮಯವಾದ ಲಿಂಗರೂಪದಿಂ ಬೆಳಗುವ ಭಗವಂತನಾದ ಹಾಟಕೇಶ್ವರನಂತೆ ತೇಜೋಮಯನಾಗಿರುವ ಪಾತಾಳ ಲೋಕವಿರುವದು. ತ್ರೈಲೋಕ್ಯದೊಳ್ ರತ್ನಪ್ರಾಯವಾದ ಸಕಲ ವಸ್ತುಗಳಿಗೂ ಬೊಕ್ಕಸವಾಗಿ ಸಮಸ್ತ ಶರೀರಗಳಿಗೂ ರಕ್ಷಕನಾಗಿ ಸಕಲ ಲೋಕ ಪಾಲಕರಿಂದಲೂ, ಶಿರದಿಂ ವಹಿಸಲ್ಪಡುವ ಆಜ್ಞಾ ಪತ್ರವುಳ್ಳಂಥಾ ನರಸಿಂಹಾನುಗ್ರಹಕ್ಕೆ ಪಾತ್ರನಾದ ಪ್ರಹ್ಲಾದನಿಗೆ ಮೊಮ್ಮಗನಾದ ಬಲಿಚಕ್ರವರ್ತಿಯು ಅಸುರರ ಭುಜಸ್ತಂಭಗಳಿಂ ಧರಿಸಲ್ಪಡುವ ಆ ಪಾತಾಳ ಲೋಕದಲ್ಲಿ ರಾಜ್ಯಭಾರವಂ ಮಾಡುತ್ತಿರುವನು. ಸಕಲ ದೇವ ಗಂಧರ್ವ ವಿದ್ಯಾಧರ ಭುಜಂಗರಾಜರೊಡನೆ ದುಃಖಿಸುತ್ತಿರುವ ದೇವೇಂದ್ರನಿಂದ ವಾಮನನ ಪಾದಸೇವೆ ಅಪೇಕ್ಷಿಸಲ್ಪಟ್ಟಿತೊ, ವಾಮನನ ನಾಮ ಶ್ರವಣ ಮಾತ್ರದಿಂದಲೆ ಐರಾವತದ ಗಂಡಭಾಗದಲ್ಲಿ ಪ್ರವಹಿಸುವ ಮದಧಾರೆಗಳು ಶುಷ್ಕವಾದವೋ, ವಾಮನನ ನಾಮ ಕೀರ್ತನೆಯು ಸರ್ಪರಾಜರಿಗೆ ಮಯೂರ ಕುಲಾಧಿಪತಿಯ ಕೇಕಾ

ಧ್ವನಿಯಾದುದೋ, ಯಾವನಿಗೆ ಕೋಪಬರುವಲ್ಲಿ ಪ್ರತಾಪಕ್ಕೆ ಭಯಪಟ್ಟು ಸಪ್ತ ಸಮುದ್ರಗಳು ಪ್ರಳಯ ಕಾಲದೊಳಗಾಗುವಂತೆ ಶೋಷೆಯಂ ಪಡದವೋ ಯಾವನ ಯಜ್ಞಾಗ್ನಿ ಧೂಮಗಳಿಂದುಂಟಾದ ಮೇಘಗಳು ಸಮುದ್ರಗಳಂ ವ್ಯಾಪಿಸಿಕೊಂಡು ಪ್ರಪಂಚಕ್ಕೆ ಕವಚವಾಗಿರುವವೋ, ಯಾವನಿಂ ಕಟಾಕ್ಷಿಸಲ್ಪಟ್ಟ ದಿಗಂಗನೆಯರು ಲತೆಗಳಂತೆ ನಮ್ರರಾಗಿ ಕೈಕಾಣಿಕೆಗಳಂ ಒಪ್ಪಿಸಿದರೊ, ತನ್ನ ವಂಚನೆಯಂ ತಿಳಿದಾಗ್ಯೂ ಸ್ವಲ್ಪವಾದರೂ ವಿಕಾರವಿಲ್ಲದೆ ಏಕಾಗ್ರ ಚಿತ್ತನಾಗಿ ಕೆಳಗೇಳುಲೋಕಗಳನ್ನು ಮೇಲೇಳು ಲೋಕಗಳನ್ನು ತನ್ನನ್ನೂ ಸಹ ಮೂರು ಹೆಜ್ಜೆ ಭೂಮಿಯಾಗಿ ಕೊಟ್ಟದ್ದರಿಂದ ಭಕ್ತಿಗೆ ಮೆಚ್ಚಿದ ಲಕ್ಷ್ಮೀ ಸಹಾಯನಾದ ಅಚ್ಯುತನು ಅಖಂಡ ಜ್ಞಾನೈಶ್ವರ್ಯಗಳಂ ಕೊಟ್ಟಾಗ್ಯೂ ಸಾಲದೆಂದು ರುಣಗ್ರಸ್ತನಂತೆ ಯಾವನ ಮನೆಯೊಳ್ ದ್ವಾರಪಾಲಕನಾಗಿರುವನೊ, ಆ ಬಲಿಚಕ್ರವರ್ತಿಯು ಪೂರ್ವದೊಳ್ ಹತ್ತು ಕೋಟಿ ವರುಷ ತ್ರಿಲೋಕಾಧಿಪತ್ಯವಂ ಮಾಡಿದನು. ಆಗ ಬಂದಾನೊಂದು ಕಾಲದೊಳೆಷ್ಟು ಜಯಿಸಿದರೂ ಎಷ್ಟು ಸಂಪಾದಿಸಿದರೂ ಎಷ್ಟು ಭೋಗಿಸಿದರೂ ಸಾಲದೆ ತಂದೆಯಾದ ವಿರೋಚನನ ಬಳಿಗೆ ಪೋಗಿ ಸಾಷ್ಟಾಂಗ ಪ್ರಣಾಮವಂ ಮಾಡಿ ಅವನ ಆಜ್ಞೆಯಿಂ ಸಮೀಪದಲ್ಲಿ ಕುಳಿತು ಪ್ರಶ್ನೆಗೈದನದೆಂತೆನೆ, ಎಲೈ ಗುರುವೆ,- ಲೋಕವಲ್ಲಾಗಲೀ ಶಾಸ್ತ್ರಗಳಲ್ಲಾಗಲಿ ತ್ರಿಲೋಕಾಧಿಪತ್ಯಕ್ಕಿಂತಲೂ, ಅಧಿಕವಾದ ಐಶ್ವರ್ಯವಿಲ್ಲವೆಂದು ಪ್ರಸಿದ್ಧವಾಗಿರುವದು. ಚತುರ್ದಶ ಭುವನಗಳೆಂತಲೂ, ಇಪ್ಪತ್ತೊಂದು ಲೋಕಗಳೆಂತಲೂ, ಅನೇಕ ಪ್ರಕಾರವಾಗಿ ಈ ಮೂರು ಲೋಕಗಳೇ ಪೇಳಲ್ಪಡುವವಲ್ಲದೆ ಇದಕ್ಕಿಂತಲೂ ಅಧಿಕವಾದ್ದು ಮತ್ತೊಂದು ಕಾಣಿಸುವದಿಲ್ಲ, ಭೋಗಾಶೆಯುಳ್ಳವನಿಗೂ, ರಕ್ಷಿಸಲಪೇಕ್ಷಿಸುವನಿಗೂ, ಜಯೋತ್ಸಾಹ ಶಾಲಿಗೂ, ಇವು ಮೂರು ಹಳ್ಳಿಗಳಿಗಿಂತಲೂ ಕಡೆಯಾಗಿರುವವು. ಇವುಗಳನ್ನು ಎಷ್ಟೋಜನ ಜಯಿಸಿ ರಕ್ಷಿಸುತ್ತಾ ಭೋಗಿಸಿರುವರಾದ್ದರಿಂದ ಉಚ್ಛಿಷ್ಟವೆಂದು ತಿಳಿಯುತ್ತೇನೆ ಮತ್ತು ಇದರಲ್ಲಿ ಮಾಡಿದುದನ್ನೇ ಮಾಡಿ, ಉಂಡದ್ದನ್ನೇ ಉಂಡು, ಕುಡದದ್ದನ್ನೇ ಕುಡಿದು, ಪಿಡಿದದ್ದನ್ನೇ ಪಿಡಿದು, ಭೋಗಿಸಿದ್ದನ್ನೇ ಭೋಗಿಸಿ, ಅನುಭವಿಸಿದ್ದನ್ನೇ ಅನುಭವಿಸಬೇಕಾಗಿರುವದು. ಎಂಥಾ ಶೂರರಾದರೂ ಕುತ್ಸಿತ ಜನಗಳು ಜೈವಂತೆಯೂ, ನಾಯಿಗಳು ಬೊಗಳುವಂತೆಯೂ, ಮನಬಂದಂತೆ ಕೂಗುತ್ತಾ ದ್ವೇಷ ವಿಶೇಷದಿಂ ಪರರು ಭೋಗಿಸುತ್ತಿದ್ದದ್ದನ್ನೇ ಆಕ್ರಮಿಸಿ ಭೋಗಿಸುವೆವಲ್ಲದೆ ಇಲ್ಲಿ ಉಚ್ಛಿಷ್ಟ ದೋಷವಂ ನಾವೇ ನೋಡಲಿಲ್ಲ. ಈ ಭೋಗ ಪದಾರ್ಥಗಳು ಪ್ರೀತಿ ವಿಶೇಷದಿಂ ಹೊಸ ಹೊಸವಾಗಿ ತೋರುವು

ವಲ್ಲದೆ ಹೊಸದಾಗಿ ಯಾವದೂ ಕಾಣಿಸುವದಿಲ್ಲ. ಇದಂ ನೋಡುವಲ್ಲಿ ಲೋಕ ವ್ಯಾಪಾರಗಳೆಲ್ಲವೂ ಅಂಧಪರಂಪರೆಯಿಂದಲೇ ಸಿದ್ಧವಾಗಿರುವವೆಂದು ಕಾಣುತ್ತಲಿಧೆ ಮತ್ತು ಇವುಗಳನ್ನೆಷ್ಟುಸಾರಿ ಅನುಭವಿಸಿದಾಗ್ಯೂ ಪದಾರ್ಥಗಳು ಹಳವಾದ್ದರಿಂದ ತೃಪ್ತಿಯಾಗುವುದಿಲ್ಲ. ಮತ್ತು ಇದರಲ್ಲುಂಟಾಗುವ ಸುಖಗಳೆಲ್ಲವೂ ದುಃಖಮಿಶ್ರವಾಗಿ ಖಂಡವಾಗಿವೆಯಲ್ಲದೆ ಅಖಂಡವಾಗಿ ಯಾವದೂ ಕಾಣಿಸುವದಿಲ್ಲ. ಹೀಗಿದ್ದಾಗ್ಯೂ ವಿಷಯಗಳು ಮನದೊಡನೆ ಇಂದ್ರಿಯಗಳಂ ಸೆಳೆಯುತ್ತಾ ಇಂದ್ರಜಾಲ ವ್ಯಾಪಾರಗಳಂತೆ ಬುದ್ಧಿಶಾಲಿಗಳನ್ನು ಕೂಡ ಮೋಹಪಡಿಸಿ ಕೆಡಹುವವು. ಇವುಗಳಲ್ಲಿ ಶ್ರಮವಲ್ಲದೆ ದುಃಖಮಿಶ್ರವಲ್ಲದ ಸುಖವಿಲ್ಲವಾದ್ದರಿಂದ ಯಾವದರಲ್ಲಿ ವಿಶ್ರಾಂತಿಯು ತೃಪ್ತಿಯು ಅಖಂಡ ಸುಖವು ಸಹ ಸಿದ್ಧವಾಗಿರುವದೋ ಅಂಥಾ ರಾಜ್ಯವಿದ್ದಲ್ಲಿ ಪೇಳುವನಾಗು. ಎಂದು ಬಲಿಯು ಕೇಳುವಲ್ಲಿ ಅಂಗಳವಲ್ಲಿ ತಂದು ಮುಡಗಿಕೊಂಡಿರುವ ಕಲ್ಪವೃಕ್ಷದಿಂದುದಿರುವ ಪುಷ್ಪಗಳಿಂ ಪರಿಮಳಿಸುವ ರತ್ನವೇದಿಕೆಯೊಳ್ ಬೆಳ್ದಿಂಗಳಲ್ಲಿ ತಂಗಾಳಿಯಿಂ ಸೇವಿಸಲ್ಪಡುತ್ತಿದ್ದ ವಿರೋಚನನಿಂತೆಂದನು. ಎಲೈ ಮಗನೆ,— ಬಿಸಲುಗೋಲಿನಲ್ಲಿ ತ್ರಸರೇಣುಗಳಂತೆಯೂ, ಸಮುದ್ರದಲ್ಲಿ ನೀರು ಗುಳ್ಳೆಗಳಂತೆಯೂ, ಎಲ್ಲಿ ಅನೇಕ ಕೋಟಿ ಬ್ರಹ್ಮಾಂಡಗಳಾಡುತ್ತಿರುವವೋ ಎಲ್ಲಿ ಎಲ್ಲೆಗಲ್ಲುಗಳು ಎಲ್ಲೆಲ್ಲೂ ಇಲ್ಲವೋ ಅಂಥಾದ್ದೊಂದು ದೇಶವಿರುವದು. ಅಲ್ಲಿ ಸರ್ವಕರ್ತೃವಾಗಿಯೂ, ಸರ್ವ ಭೋಕ್ತೃವಾಗಿಯೂ, ಸರ್ವರೂಪನಾಗಿಯೂ, ಸರ್ವವ್ಯಾಪಿಯಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಸ್ವಾಮಿಯಾಗಿಯೂ, ಸರ್ವಸಾಕ್ಷಿಯಾಗಿಯೂ, ಸುಮ್ಮನಿರುವ ಮಹಾರಾಜನೊಬ್ಬನೇ ಇರುವನಲ್ಲದೆ ಗಿರಿ ನದಿ ವನ ಸರಸ್ಸಮುದ್ರಾದಿಗಳು ಪೃಥಿವ್ಯಪ್ತೇಜೋವಾಯ್ವಾಕಾಶಗಳು ಹರಿಹರಬ್ರಹ್ಮಾದಿ ದೇವತೆಗಳು ಸ್ಥಿರಚರ ಪ್ರಾಣಿಗಳು ಸಹ ಯಾವದೊಂದೂ ಇಲ್ಲ. ಅವನಿಗೆ ಸಂಕಲ್ಪ ಸಿದ್ಧನಾದ ಒಬ್ಬ ಮಂತ್ರಿಯಿರುವನು ಆಲೋಚನೆಯಲ್ಲಿ ಸಮರ್ಥನಾದ ಆ ಮಂತ್ರಿಯು ತನಗೆ ಭೋಗಜ್ಞಾನಗಳಿಲ್ಲದಿದ್ದಾಗ್ಯೂ ಇಚ್ಛಾಮಾತ್ರದಿಂ ಸೇರದಿರುವದಂ ಸೇರಿಸುತ್ತಲೂ ಸೇರಿರುವದಂ ಚದರಿಸುತ್ತಲೂ ರಾಜನಿಗೋಸುಗವೇ ಸರ್ವ ಕಾರ್ಯಗಳನ್ನೂ ಮಾಡುತ್ತಿರುವನು. ಎಂದು ವಿರೋಚನನು ಪೇಳುವಲ್ಲಿ ಎಲೈ ತಂದೆಯೆ! ಲೀಲೆಯಿಂದಲೆ ಭೇದಿಸಲ್ಪಟ್ಟ ಸಕಲ ಪ್ರಪಂಚಗಳುಳ್ಳ ನಮ್ಮ ದೃಕ್ಕಿಗೂ ಗೋಚರವಾಗದಿರುವ ಆ ರಾಜ್ಯವೆಲ್ಲಿರುವದು. ಅದಂ ಸಾಧಿಸುವದು ಹೇಗೆನಲು ಮರಳೆ ವಿರೋಚನನಿಂತೆಂದನು. ಎಲೈ ಬಾಲಕನೆ ದೇವಾಸುರರೆಲ್ಲರೂ ಅನೇಕ ಕೋಟಿ ರೂಪರಾಗಿ ಒಟ್ಟುಗೂಡಿ

ದಾಗ್ಯೂ ಅಲ್ಲಿಯ ಮಂತ್ರಿಯು ಜಯಿಸಲಶಕ್ಯನಾಗುವನು. ಅವನು ದೇವಾಸುರ ಮನುಷ್ಯಾದಿ ಕೂಟಗಳಲ್ಲಿ ಸೇರಿದವನಾಗಿದ್ದರೆ ಜಯೋಪಾಯವನ್ನಾಲೋಚಿಸಬಹುದು. ಸಮಸ್ತವಾದ ಶಸ್ತ್ರಗಳೂ ಅಸ್ತ್ರಗಳೂ ಸಹ ಭಂಡೆಗಲ್ಲುಗಳಂ ಸೂಜಿಗಳಂತೆ ಆ ಮಂತ್ರಿಯಂ ಭೇದಿಸಲಾರವು. ವಿಷ್ಣುವಲ್ಲದ ಆ ಮಂತ್ರಿಯಿಂದಲೇ ನಮ್ಮ ಪಿತಾಮಹರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳು ಪ್ರಳಯಕಾಲದ ಬಿರುಗಾಳಿಯಿಂ ಮೇರುವಿನ ಮರಗಳಂತೆ ಕೆಡವಲ್ಪಟ್ಟರು. ಸಕಲ ಪ್ರಪಂಚಗಳನ್ನು ಕೈಯಲ್ಲಿಟ್ಟುಕೊಂಡಿರುವ ಆ ಮಂತ್ರಿಯು ಸರ್ವಜ್ಞರೆನಿಸುವ ಹರಿವಿರಂಚಿ ಮಹೇಶ್ವರಾದಿಗಳನ್ನೂ ಕೂಡ ಹಳ್ಳಗಳಲ್ಲಿ ಕೆಡಹಿ ಹೊರಳಾಡಿಸುವನು. ಅತಿ ಮೃದುವಾದ ಧನುರ್ಬಾಣಗಳುಳ್ಳ ಪಂಚಶರನು ಈ ಮಂತ್ರಿಯ ಪ್ರಸಾದದಿಂದಲೆ ಅನಂಗನಾದಾಗ್ಯೂ ಜಗವೆಲ್ಲವಂ ಜಯಿಸುವನು. ಲೋಕದಲ್ಲಿ ನಡೆವ ದೇವಾಸುರ ಯುದ್ಧ ಮೊದಲಾದ ಕ್ರೂರವ್ಯಾಪಾರಗಳೆಲ್ಲವೂ ಈ ಮಂತ್ರಿಯ ಕ್ರೋಧವಿಲಾಸವೆಂದು ತಿಳಿಯತಕ್ಕದ್ದು. ಈ ಮಂತ್ರಿಯೆಂಬ ಸೂರ್ಯನೊಡನೆಯೇ ಈ ಜಗತ್ತಿಗೆ ಉದಯಾಸ್ತಗಳಾಗುವವು. ಇಂಥಾ ಸಾಮರ್ಥ್ಯವುಳ್ಳ ಈ ಮಂತ್ರಿಯನ್ನುಸ್ಮರ್ಯಾದನೆಂದು ತಿಳಿದು ಯಾವಾಗ ಇವದಂ ಪ್ರಭುವು ಜಯಿಸಲಿಚ್ಛೈಸುವನೋ ಆಗ ಆ ಪ್ರಭುವಿಗೆ ಇವನು ಜಯಿಸಲು ಶಕ್ಯನಾಗುವನು. ಏಕಾಗ್ರವಾದ ಬುದ್ಧಿಯಿಂದ ವನಂ ನೀನು ಜಯಿಸಿದೆಯಾದರೆ ನೀನು ಧೀರನೆನಿಸಿಕೊಳ್ಳುತ್ತೀಯೆ ಆಗ ನಿನಗೆ ಜಯಿಸಲ್ಪಡದ ಲೋಕಗಳೂ ಕೂಡ ಸ್ವಾಧೀನವಾಗುವವು. ಆದ್ದರಿಂದವನಂ ನೀನು ಜಯಿಸಲು ಯತ್ನವಂ ಮಾಡುವನಾಗೆಂದು ಪೇಳುವಲ್ಲಿ ಆ ದೇಶವಾವುದು, ಆ ಮಂತ್ರಿಯಾವನು, ಆ ಪ್ರಭುಯಾವನು, ಆ ಮಂತ್ರಿಯು ಹೇಗೆ ಜಯಿಸಲ್ಪಡುವನು, ಅವಂ ವಿವರಿಸುವನಾಗೆಂದು ಬಲಿಯು ಕೇಳಲು ಮರಳಿ ವಿರೋಚನನಿಂತೆಂದನು. ಎಲೈ ಮಗನೆ ಮೋಕ್ಷವೆ ದೇಶವೆಂತಲೂ, ಆತ್ಮನೆ ಪ್ರಭುವೆಂತಲೂ, ಮನವೆ ಮಂತ್ರಿಯೆಂತಲೂ, ನನ್ನಿಂದ ಪೇಳಲ್ಪಟ್ಟಿತು. ಜಾಡನ ನಾಭಿಯೋಳ್ ಪತ್ತಿಯುಂತೆ ಮನದಲ್ಲಿರುವ ಜಗದ್ವಾಸನೆಯೇ, ಮಣ್ಣು ಗಡಿಗೆಯಾಗುವಂತೆ ಈ ಪ್ರಪಂಚರೂಪವಾಗುವದು. ಈ ಮನದ ಭಾವನೆಯೇ ವಾಸನೆಯಾಗಿ ಪರಿಣಮಿಸುವದಕ್ಕೆ ಕಾರಣವಾಗಿರುವದು. ಆತ್ಮನ ಅಭಿಮಾನವೇ ಈ ಮನಸ್ಸು ಭಾವಿಸುವದಕ್ಕೆ ನಿಮಿತ್ತವಾಗುವದು. ಆದ್ದರಿಂದ ಆತ್ಮನ ಜಯಾಪೇಕ್ಷೆಯಿಂದಲೇ ಈ ಮನವು ಜಿತವಾಗುವದು. ಈ ಮಂತ್ರಿಯು ಜಿತನಾಗದೆ ರಾಜನ ದರ್ಶನವಾಗದು. ರಾಜದರ್ಶನವಾಗದೆ ಈ ಮಂತ್ರಿಯು ಜಿತನಾಗನು. ಆದ್ದರಿಂದ ರಾಜದರ್ಶನಕ್ಕೂ

ಮಂತ್ರಿಯು ಜಯಕ್ಕೂ ಒಂದೇ ಕಾಲದಲ್ಲಿ ಪ್ರಯತ್ನಪಡಬೇಕು. ಬಾಲಕನಂ ಲಾಲಿಸುವಂತೆ ಯುಕ್ತಿಯಿಂದಲೇ ಈ ಮಂತ್ರಿಯಂ ಜಯಿಸಬೇಕು. ರಾಜದರ್ಶನವಿಲ್ಲದ ಮಂತ್ರಿ ಜಯದಿಂ ರಾಗದ್ವೇಷಾದಿ ದುಷ್ಫಲಗಳೇ ಉಂಟಾಗುವವು. ಮಂತ್ರಿಜಯವಿಲ್ಲದ ರಾಜ ದರ್ಶನಾಪೇಕ್ಷೆಯು ದರಿದ್ರನ ಮನೋರಥದಂತೆ ವ್ಯರ್ಥವೇ ಆಗುವದು. ಮಂತ್ರಿಜಯಕ್ಕೆ ವಿಷಯ ವೈರಾಗ್ಯವಲ್ಲದೆ ಮತ್ತೊಂದುಪಾಯವಿಲ್ಲ. ವೈರಾಗ್ಯವಿಲ್ಲದ ಯಾವನಿಗೂ ದುಃಖ ತಪ್ಪಲಾರದಾದ್ದರಿಂದ ವೈರಾಗ್ಯವನ್ನೇ ಮೊದಲು ಸಾಧಿಸಬೇಕು. ಅಭ್ಯಾಸದಿಂದೀ ವೈರಾಗ್ಯವು ನೇರುಪಡುವದ್ದರಿಂ ಲತೆಯು ಪುಷ್ಪ ಫಲಗಳಂ ವಹಿಸುವಂತೆ ಶಾಂತಿ ಮೊದಲಾದ ಗುಣಗಳಂ ಪಡೆವುದು. ವೈರಾಗ್ಯವು ಸಿದ್ಧವಾಗುವಲ್ಲಿ ಮದವಿಳಿದ ಆನೆಯಂತೆ ಮನವು ಸ್ವಾಧೀನವಾಗುವದು. ಆದ್ದರಿಂ ಬುದ್ಧಿಶಾಲಿಯಾದವನು ಧ್ಯೇಯತ್ಯಾಗ ರೀತಿಯಂ ಹಿಡಿದು ವಿಷಯಗಳ ವೈರಸ್ಯವನ್ನು ಆತ್ಮನ ಸುಖ ಸ್ಥಿತಿಯನ್ನು ಬಾಲಕನಿಗೆ ಕಥೆಯಂ ಪೇಳುವಂತೆ ಮನಕ್ಕೆ ಬೋಧಿಸುತ್ತಿರಲು ಆತ್ಮನ ಮಹಿಮಜ್ಞಾನದಿಂದಾಮನವು ವಿಚಿತ್ರವಾದ ಆಟವಂ ಕಂಡ ಬಾಲಕನು ಸಾಧಾರಣವಾದ ಆಟವಂ ಬಿಡುವಂತೆ ವಿಷಯಭಾವನೆಯಂ ಬಿಡುವದು. ಈ ಕ್ರಮದಿಂ ವಿಷಯವಾಸನೆ ತಪ್ಪಿ ಬ್ರಹ್ಮವಾಸನೆಯುಂಟಾಗುವಲ್ಲಿ ಸತ್ಸಹವಾಸವಿಚಾರಾದಿಗಳಿಂದ ಆಹಾರಾದಿ ಭೋಗಗಳು ತಪ್ಪುತಬರಲು ಇಂದ್ರಿಯಗಳ ಸೊಕ್ಕಬಗುವದು. ಆಹಾರಾದಿಗಳು ತಪ್ಪದಿದ್ದಾಗ್ಯೂ ಬ್ರಹ್ಮಭಾವನಾಬಲದಿಂ ವಿಷಯಭಾವನೆ ತಪ್ಪುವದರಿಂದ ಇಂದ್ರಿಯಗಳಿಗೆ ವಿಷಯಾಪೇಕ್ಷೆಯಧಿಕವಾಗದು. ಆದ್ದರಿಂದಿಂದ್ರಿಯಗಳಿಗೆ ವಿಷಯಪ್ರಚಾರ ತಪ್ಪಲು ಕಟ್ಟೆಗೆ ಬಡಿವ ಪ್ರವಾಹದಂತೆ ಮನವು ಹಿಂತಿರುಗುವದು. ಆಗ ಆತ್ಮವಿಚಾರವೇ ಬಲವಾಗುವದರಿಂದ ಅದರ ಮಹಿಮೆಯು ಗೊತ್ತಾಗುವದು. ಅದರಿಂ ತಾನು ತನ್ನದೆಂಬುವದು ತಪ್ಪುವದೇ ಜೀವನ್ಮುಕ್ತಿಯೆನಿಸುವದು. ಈ ಕ್ರಮದಿಂ ಸರ್ವೋತ್ತಮವಾದ ನಿಜಸ್ಥಿತಿಯಂ ಸಾಧಿಸದೆ ಯಾರಿಗೂ ತೃಪ್ತಿಯಾಗದಾದ್ದರಿಂದ ಆಶೆಯು ತಪ್ಪುವದಿಲ್ಲ. ಈ ವಿಷಯವು ಬರೀಬಾಯಿಮಾತುಗಳಿಂದಲೂ, ಬರೀಬಯಕೆಗಳಿಂದಲೂ, ಸಿದ್ಧವಾಗಲಾರದಾದ್ದರಿಂದ ಸತ್ಸಹವಾಸ ಕ್ರಮದಿಂದಿವಂ ಚನ್ನಾಗಿ ಸಾಧಿಸಬೇಕು. ಈ ವಿಷಯದಲ್ಲಿ ದೈವವಿದ್ದಂತೆ ನಡೆವದೆಂದು ಯಾರು ತಿಳಿವರೋ ಅವರಿಗಿಂತಲೂ ದುರ್ಮತಿಗಳು ಯಾರೂ ಇಲ್ಲವೆಂದು ತಿಳಿಯತಕ್ಕದ್ದು. ಮುಂದೆ ಬರತಕ್ಕ ಸ್ವಕರ್ಮಫಲವೇ ದೈವವೆನಿಸುವದು. ದೇಹಮಾತ್ರಕ್ಕೆ ಭೋಗಸ್ವರೂಪವಾಗಿ ಬರುವ ಆ ದೈವವು ದೇಹಾಭಿಮಾನಿಗೆ ಅಸಾಧ್ಯವಾಗುವದಲ್ಲದೆ ಮಹಾಮಂತ್ರಜ್ಞನಿಗೆ ಪಿಶಾಚದಂತೆ

ಸತ್ಸಂಗ ವಿವೇಕವಿಚಾರಾದಿ ಪೌರುಷ ಪ್ರಯತ್ನೋಪಾಯಗಳಂ ತಿಳಿದ ಶಾಸ್ತ್ರಜ್ಞನಿಗೆ ಅಸಾಧ್ಯವಾಗಲಾರದು, ಜಗವೆಲ್ಲವೂ ಅಜ್ಞಾನಾತ್ಮಕವಾದ್ದರಿಂದಲೂ, ಅಜ್ಞಾನಕ್ಕೆ ಜ್ಞಾನವೇ ಶತ್ರುವಾದ್ದರಿಂದಲೂ, ಜ್ಞಾನಾಜ್ಞಾನಗಳೆರಡೂ ಮನಸ್ಸಿಗೆ ವೃತ್ತಿಯಾದ್ದರಿಂದಲೂ, ಮನಸ್ಸು ಭಾವಿಸಿದಂತೆಯೇ ಸಮಸ್ತವೂ ಆಗುವದೆಂದು ನಿಶ್ಚಯಿಸುವನಾಗು. ಆದ್ದರಿಂದಲೇ ತತ್ವಜ್ಞಾನದಿಂ ಬಿಸಿಲು ದೊರೆಯಂತೆ ಭ್ರಮಾತ್ಮಕವಾದ ಜಗವು ಶಾಂತವಾಗುವದು. ಅಖಂಡಜ್ಞಾನರೂಪವಾದ ನಿರ್ವಿಕಲ್ಪ ಸಮಾಧಿಯಲ್ಲಿ ಜಗತ್ಕಲ್ಪನೆಯೇ ಶಾಂತವಾಗಲು ಅದಕ್ಕೆ ಸಂಬಂಧಿಸಿದ ದೈವವು ಎಲ್ಲಿರುವದೆಂದು ತಿಳಿಯಬೇಕು. ಮನದ ಪೂರ್ವಕರ್ಮವೇ ದೈವವೆನಿಸಿಕೊಳ್ಳುವದರಿಂದಲೂ; ಕ್ಲಿಪ್ತ ಸ್ಥಿತಿಯಾದ ಆ ದೈವಕ್ಕೆ ವೃದ್ಧಿ ಇಲ್ಲದ್ದರಿಂದ, ಈಗಿನ ಕರ್ಮಕ್ಕೆ ವೃದ್ಧಿಯಾಗುವ ಯೋಗ್ಯತೆ ಇರುವದ್ದರಿಂದಲೂ, ಯೌವನಸ್ಥನಿಂ ವೃದ್ಧನಂತೆ ಈಗಿನ ಕರ್ಮದಿಂ ಪೂರ್ವಕರ್ಮವು ಜಯಿಸಲ್ಪಡುವದೆಂದು ನಿಶ್ಚಯಿಸಿ ಬುದ್ಧಿಶಾಲಿಯಾದವನು ಪೌರುಷನಂ ಬಿಡದೆ ನಿತ್ಯವಾದ ನಿಜಸುಖವಂ ಸಾಧಿಸಬೇಕು, ಪ್ರಪಂಚಕಲ್ಪನಾಸಕ್ತವಾದ ಮನವು ಬ್ರಹ್ಮವಾಸನೆಯಿಂ ಶಾಂತವಾಗುವಲ್ಲಿ ಯಾವದು ನಿಲ್ಲುವದೋ ಅದೇ ನಿಲ್ಲುವದಲ್ಲದೆ ದೈವವೆಂಬುವದು ಎಲ್ಲಿಯೂ ನಿಲ್ಲಲಾರದು. ಪುರುಷನ ಸಂಕಲ್ಪವಿದ್ದಂತೆಯೇ ಪೌರುಷವ್ಯಾಪಾರವು ಫಲಿಸುವದ್ದರಿಂದ ಪರಮಪುರುಷಾರ್ಥವಾದ ಮೋಕ್ಷವೂ ಕೂಡ ಪುರುಷಪ್ರಯತ್ನದಿಂದಲೇ ಸಿದ್ಧವಾಗುವದೆಂದು ನಿಶ್ಚಯಿಸಿ ಸತ್ಸಂಗಾದಿಗಳಿಂದ ಮೋಕ್ಷ ಸಾಧಕವಾದ ವೈರಾಗ್ಯವಂ ಸಾಧಿಸುವನಾಗು। ಮೋಕ್ಷವು ಸಹಜವಾದಾಗ್ಯೂ ಭ್ರಾಂತಿ ಸಿದ್ಧವಾದ ವಿಷಯಾಪೇಕ್ಷೆ ತಪ್ಪುವವರಿಗೆ ತೋರಲಾರದು. ಎಲೈ ಬಾಲಕನೇ ಸತ್ಸಂಗ ಪರಮಾರ್ಥ ವಿಚಾರಾದಿಗಳಿಂದ ಆತ್ಮಜ್ಞಾನವಾಗುವಲ್ಲಿ ಈ ವೈರಾಗ್ಯವು ಹುಟ್ಟುವದು. ಆ ಜ್ಞಾನದೊಡನೆಯೇ ಈ ವೈರಾಗ್ಯವು ಜಲದಲ್ಲಿ ಲಕ್ಷ್ಮಿಯಂತೆ ಹೃದಯದಲ್ಲಿ ಸ್ಥಿರವಾಗುವದು. ಭೋಗದಲ್ಲಿ ವೈರಸ್ಯ ಜ್ಞಾನವಾಗದೆ ಮನವು ವಿಷಯಂಗಳಿಂ ಹಿಂತಿರುಗದು. ಆದ್ದರಿಂದ ಸತ್ಸಹವಾಸವಂ ಬಲವಾಗಿ ಹಿಡಿದು ಆತ್ಮಜ್ಞಾನಕ್ಕೂ ವಿಷಯ ವೈರಾಗ್ಯಕ್ಕೂ ಸಾಧಕವಾದ ತತ್ವವಿಚಾರವಂ ಸರ್ವಕಾಲದಲ್ಲೂ ಮಾಡುತ್ತಿರಬೇಕು. ಭೋಜನವಂಮಾಡುವ ಬುದ್ಧಿಶಾಲಿಯು ಉದರದ ಎರಡು ಭಾಗಗಳನ್ನನ್ನದಿಂದಲೂ ಒಂದು ಭಾಗವಂ ಜಲದಿಂದಲೂ ತುಂಬಿ ವಾಯುಸಂಚಾರಕ್ಕೆ ಒಂದು ಭಾಗವಂ ಹೇಗೆ ಉಳಿಸಿಕೊಳ್ಳುವನೋ ಹಾಗೆ ಮೋಕ್ಷಾಪೇಕ್ಷೆಯು ಆರಂಭದಲ್ಲಿ ಚಿತ್ತದ ಎರಡು ಭಾಗಗಳಂ ಭೋಗಗಳಿಂದಲೂ ಒಂದು ಭಾಗವಂ ಶಾಸ್ತ್ರವಿಚಾರ

ದಿನವಲೂ ತುಂಬಿಕೆರಡು ಮತ್ತೊಂದು ಭಾಗವಂ ಗುರುಶುಶ್ರೂಷೆಗೋಸುಗ ಸಲ್ಲಿಸಬೇಕು. ಇವರಿಂ ಗುರುಭಕ್ತಿಯಧಿಕವಾದಬಳಿಕ ಗುರುಶುಶ್ರೂಷೆಯಿಂದೆರಡುಭಾಗಗಳನ್ನೂ, ಶಾಸ್ತ್ರದಿಂದೊಂದುಭಾಗವನ್ನೂ, ಮತ್ತೊಂದು ಭಾಗವಂ ಭೋಗದಿಂದಲೂ ತುಂಬಬೇಕು. ಇದರಿಂ ಸ್ವಲ್ಪ ಜ್ಞಾನೋದಯವಾಗುವದು. ಆಬಳಿಕ ಭೋಗವನ್ನಪೇಕ್ಷಿಸದೆ ಶಾಸ್ತ್ರವಿಚಾರ ವೈರಾಗ್ಯಬ್ರಹ್ಮಾನುಸಂಧಾನಗುರುಪೂಜೆಗಳಿಂದಲೇ ನಾಲ್ಕುಭಾಗಗಳಂ ತುಂಬಬೇಕು. ಈಸುಖದಿಂದ ಅಜ್ಞಾನವಳಿಯಲು ನಿರ್ಮಲವಾದ ಬಟ್ಟೆಗೆ ರಂಗುಹತ್ತುವಂತೆ ಗುರುವಿನ ಪರಮಾರ್ಥೋಪದೇಶವು ಮನಸ್ಸಿಗೆ ಬರುವದು. ಬಹುಕಾಲದಿಂ ಬಂದಭೋಗವು ಒಂದೇಬಾರಿಗೆ ಬಿಡಲಶಕ್ಯವಾದ್ದರಿಂದ ಪರಮಾರ್ಥೋಪದೇಶದಿಂ ಚಿತ್ತವಂ ಲಾಲಿಸುತ್ತಾ ಕ್ರಮವಾಗಿ ಭೋಗವೈರಾಗ್ಯವಂ ಸಾಧಿಸಬೇಕು. ವಿಚಾರಬಲದಿಂ ಪರಮಾತ್ಮನಲ್ಲಿ ನೆಲಸಿದ ಮನವು ಬೆಂದ್ರಂಗಗಳಲ್ಲಿರುವ ಸ್ಫಟಿಕದಂತೆ ರಾಗದ್ವೇಷ ಸಂತಾಪವಡಗಿ ಶಾಂತವಾಗಿರುವದು. ವೈರಾಗ್ಯವಿಲ್ಲದೆ ಬ್ರಹ್ಮಜ್ಞಾನವಾಗದು. ಬ್ರಹ್ಮಜ್ಞಾನವಾಗದೆ ವೈರಾಗ್ಯವುಂಟಾಗದಾದ್ದರಿಂದ ಜ್ಞಾನಿಗೆ ಮನಃಪೂರ್ವಕವಾದ ವೈರಾಗ್ಯವೇ ಲಕ್ಷಣವೆಂದು ತಿಳಿಯತಕ್ಕದ್ದು. ಪರಮಾತ್ಮನಲ್ಲಿ ವಿಶ್ರಾಂತಿಯಾಗದೆ ಯಾರಿಗೂ ಅಖಂಡಸುಖವಾಗಲಾರದು. ಯಜ್ಞ ದಾನ ತೀರ್ಥಸೇವಾ ತಪಸ್ಸುಗಳಿಂದತಿಶಯವಾದ ವಿಷಯ ಸುಖವೇ ಸಂಭವಿಸುವದ್ದರಿಂದ ಅವುಗಳಿಂ ವೈರಾಗ್ಯವೆಂದಿಗೂ ಉಂಟಾಗಲಾರದು. ಹುಚ್ಚು ಬಿಡದೆ ಮದುವೆಯಾಗಲಾರದು. ಮದುವೆಯಾಗದೆ ಹುಚ್ಚು ಬಿಡದೆಂಬಂತೆ ವೈರಾಗ್ಯಬ್ರಹ್ಮಾನಂದಗಳಿಗೆ ಪರಸ್ಪರ ಸಾಧನಭಾವವಿದ್ದಾಗ್ಯೂ ಕಣ್ಣಿಗೆಕಾಣುವವರಲ್ಲಿ ಪ್ರಯತ್ನವಂ ಮಾಡುವದು ಸುಕರವಾದ್ದರಿಂದ ಮೊದಲು ವಿಷಯವೈರಸ್ಯವನ್ನೇ ಚಿಂತಿಸುತ್ತಾ ಅವುಗಳಲ್ಲಿ ಜಿಗುಪ್ಸೆಯನ್ನೇ ವೃದ್ಧಿಹೊಂದಿಸಬೇಕು. ಮಿತವಾಗಿಯೂ, ಸಾತ್ವಿಕವಾಗಿಯೂ, ಆಹಾರವಂ ಮಾಡುವದ್ದರಿಂದ ಇಂದ್ರಿಯಗಳಿಗೆ ವಿಷಯ ವಿನೋದಾತ್ಮದವು ಕಡಮೆಯಾಗುತಬರಲು ವಿಷಯಗಳಲ್ಲಿ ದೋಷವಂ ನೋಡುವದ್ದರಿಂ ಜಿಗುಪ್ಸೆಯೇ ಬಲವಾಗುವದು. ಅದು ಬಲವಾಗುತಬಲವಾಗುತ ವಿಚಾರವುಂಟಾಗುವದು. ಆಗ ವಿಷಯಗಳಿಂ ಮನವು ಹಿಂತಿರುಗುವಲ್ಲಿ ಪರಮಾರ್ಥವಾದ ಪರಮಾತ್ಮನ ಪ್ರಭಾವವು ಭ್ರಮಾತ್ಮಕವಾದ ವಿಷಯಗಳ ಹೇಯಭಾವವು ಸಹ ಗೊತ್ತಾಗುವದು. ಮೇಘ ಸಮುದ್ರಗಳಂತೆ ಇವೆರಡೂ ಅನುಭವಾರೂಢವಾಗುವಲ್ಲಿ ಮನವು ಜಿಗುಪ್ಸೆಯಿಂ ವಿಷಯಾಭಿಮುಖವಾಗಿ ಪ್ರವರ್ತಿಸದಿರಲು ಸ್ವಲ್ಪಸ್ವಲ್ಪವಾಗಿ ಬ್ರಹ್ಮಾನಂದವು ಪ್ರಕಾಶಿಸುವದು. ವಿಚಾರಬಲದಿಂದದ

ಸ್ಥೇಪಿಡಿದ ಮನವು ಮರಳಿ ವಿಷಯಾಭಿಮುಖವಾಗದು. ಬಳಿಕ ಬ್ರಹ್ಮವಾಸನೆಯೇ ಬಲವಾಗಿರುವದ್ದರಿಂದ ದೃಶ್ಯಪದಾರ್ಥಗಳೆಲ್ಲವೂ ಬ್ರಹ್ಮವಾಗಿಯೇ ತೋರುತ್ತಿರುವವು, ಸರ್ವಾತ್ಮಕವಾಗಿರುವ ಬ್ರಹ್ಮದಲ್ಲಿ ಮನಸ್ಸಿಗೆ ಜಗದ್ವಾಸನೆ ಇರುವದ್ದರಿಂದಲೇ ಶುಕ್ತಿಯಲ್ಲಿ ರಜತದಂತೆ ಜಗತ್ತು ಉಂಟಾಗುವದು. ಪರಮಾರ್ಥವಿಚಾರದಿಂ ಬ್ರಹ್ಮವಾಸನೆಯುಂಟಾಗುವಲ್ಲಿ ಜಗದ್ವಾಸನೆಯಳಿಯಲು ಪರಮಾತ್ಮನಿಗೆ ಬ್ರಹ್ಮಶಬ್ದದಂತೆ ಜಗತ್ತೆಂಬ ಶಬ್ದವು ಸಂಜ್ಞೆಯೆಂದು ಗೊತ್ತಾಗುವದು. ಈಸ್ಥಿತಿಯುಳ್ಳವನೇ ಜೀವನ್ಮುಕ್ತನೆನಿಸುವನು. ಇವನಿಗೆ ಮರಳಿ ದೇಹಾದಿಜ್ಞಾನವುಂಟಾಗದಿರಲು ವಿದೇಹಮುಕ್ತನೆನಿಸುವನು. ಈ ಸುಖಸ್ಥಿತಿಗೆ ಭೋಗವೈರಾಗ್ಯವೇ ಮೊದಲನೆ ಭೂಮಿಕೆಯಾದ್ದರಿಂದ ಕೈಯಿಂದ ಕೈಯಂ ಹಿಸುಕಿಕೊಳ್ಳುತಲಾಗಲೀ ಹಲ್ಲುಗಳಿಂದ ಹಲ್ಲಂ ಕಡಿಯುತಲಾಗಲೀ ಹಠಪ್ರಯತ್ನದಿಂದ ವಿಷಯಗಳ ದೋಷವನ್ನೇ ಚಿಂತಿಸುತ್ತಾ ವೈರಾಗ್ಯವಂ ಸಾಧಿಸಬೇಕು. ಈ ಸಮಸ್ತ ವಿಚಾರಕ್ಕೂ ಸತ್ಸಂಗವೇ ಮೊದಲನೇದೆಂದು ತಿಳಿಯತಕ್ಕದ್ದು. ಗೃಹಕೃತ್ಯದ ತೊಂದರೆಗಳು ಕಿವಿಗೆ ಬೀಳುವಲ್ಲಿ ವಿಚಾರವೆಂಬುವದು ಎಲ್ಲಿಗೋ ಪೋಗುವದಾದ್ದರಿಂದ ನಿರಾತಂಕಸ್ಥಿತಿಯೇ ಸತ್ಸಂಗಕ್ಕೂ ಸಾಧನವೆಂದು ತಿಳಿಯುವದಾಗು. ನಿರಾತಂಕಸ್ಥಿತಿಗೆ ಗೃಹಕೃತ್ಯಾದ್ಯುಪಪತ್ತಿಗಳೇ ಸಾಧನವಾದ್ದರಿಂದಲೂ, ಉಪಪತ್ತಿಗಳಿಗೆ ಧನವೇ ಸಾಧನವಾದ್ದರಿಂದಲೂ, ದೇಶಕಾಲಾಚಾರ ಜನವಿರೋಧದಿಂದಾರ್ಜಿತವಾದ ಧನವು ದುಃಖಕರವಾದ್ದರಿಂದಲೂ, ಶಾಸ್ತ್ರೀಯವಾದ ಸನ್ಮಾರ್ಗದಿಂದಧಿಕವಾಗಿ ಆಶಿಸದೆ ಪ್ರಕೃತಕಾರ್ಯ ನಿರ್ವಾಹವಾಗುವಂತೆ ಮೊದಲು ಧನವಂ ಸಂಪಾದಿಸಿಕೊಂಡು ವಿಚಾರಸಮರ್ಥರಾಗಿರುವ ಸಹೃದಯರಾದ ಸತ್ಪುರುಷರಂ ಬರಮಾಡಿಕೊಂಡು ಅವರಿಗೂ ತನಗೂ ಸಹ ಗೃಹಕೃತ್ಯಾದ್ಯುಪಪತ್ತಿಗಳಂ ಸಿದ್ಧವಾಗಿ ಮಾಡಿಕೊಂಡು ಇತರಬಾಧೆಯಿಲ್ಲದಂತೆ ಪರಮಾರ್ಥಶಾಸ್ತ್ರ ವಿಚಾರಂ ಮಾಡುವಲ್ಲಿ ವೈರಾಗ್ಯಾದಿಗುಣಗಳು ಕ್ರಮವಾಗಿ ಉಂಟಾಗುವವು. ಹಾಗೆ ಯಥೇಷ್ಟವಾಗಿ ಧನವು ಪ್ರಾಪ್ತವಾಗದಿರುವಲ್ಲಿ ಸೇವಾಪ್ರವೃತ್ತಿಯಿಂದ ಸತ್ಪುರುಷರ ದಯಕ್ಕೆ ಪಾತ್ರನಾಗಿ ದೈವಾಜ್ಞೆಯಿಂ ಪ್ರಾಪ್ತವಾದ್ದರಿಂದಲೇ ಸಂತೋಷಿಸುತ್ತಾ ಕ್ರಮವಾಗಿ ಪರಮಾರ್ಥ ಶಾಸ್ತ್ರಜ್ಞಾನವಂ ಸಂಪಾದಿಸಬೇಕು. ಅವಿಚಾರದಿಂದಲೇ ಬಂಧ ಬಂದಿರುವದ್ದರಿಂದ ಅದು ವಿಚಾರದಿಂದಲೇ ಹೋಗಬೇಕಲ್ಲದೆ ಇನ್ನು ಯಾವದರಿಂದಲೂ ಹೋಗಲಾರದು. ಆದ್ದರಿಂದ ಸರ್ವಪ್ರಕಾರದಿಂದಲೂ ಬುದ್ಧಿಶಾಲಿಯಾದವನು ವಿಚಾರಪರನಾಗಬೇಕು. ಸಂಪಾದಿಸಲ್ಪಟ್ಟ ಶಾಸ್ತ್ರಜ್ಞಾನವು ಯಾವ್ವನ

ದಲ್ಲಿ ವಿಷಯ ವೈರಾಗ್ಯವಂ ಪುಟ್ಟಿಸಲಾರದೇ ಇದ್ದಲ್ಲಿ ವಾರ್ಧಿಕದಲ್ಲಿ ಪಶ್ಚಾತ್ತಾಪದೊಡನೆ ವೈರಾಗ್ಯವಂ ಪುಟ್ಟಿಸುವದಾದ್ದರಿಂದ ಸರ್ವ ಪ್ರಕಾರದಿಂದಲೂ ಸಚ್ಛಾಸ್ತ್ರವಂ ಸಾಧಿಸಬೇಕು. ರಾಜಧರ್ಮದಲ್ಲಿರುವ ನಿನಗೆ ದುಷ್ಟ ನಿಗ್ರಹ ಶಿಷ್ಟ ಪರಿಪಾಲನೆಗಳು ಮುಖ್ಯವಾದ್ದರಿಂದ ಸಜ್ಜನರಿಗೂ ಧರ್ಮಕ್ಕೂ ಬಾಧೆಯಿಲ್ಲದಂತೆ ಯಥೇಷ್ಟವಾಗಿ ಧನವಂ ಸಂಪಾದಿಸಿ ಆ ಧನವಂ ತುಚ್ಛವಾದ ವಿಷಯಗಳ ಪಾಲುಮಾಡದೇ ಸತ್ಪುರುಷರ ಸೇವೆಗೋಸುಗನೇ ಅದರ ವ್ಯಯವಂ ಮಾಡುತ್ತಾ ಸಾಧಾರಣವಾದ ಮಾತುಗಳೆಲ್ಲವೂ ಸಮೀಪಕ್ಕೆ ಬಾರದಂತೆ ಆಯಾಯ ಅಧಿಕಾರಿಗಳಲ್ಲಿ ಯೋಗ್ಯರಾದ ಜನರಂ ನಿಲ್ಲಿಸಿ ಇತರ ಬಾಧೆಯಿಲ್ಲದಂತೆ ಸಾವಧಾನವಾದ ಚಿತ್ತದಿಂ ಸತ್ಪುರುಷರೊಡನೆ ವಿಚಾರವಂ ಮಾಡಲು ಪರಮಾರ್ಥಜ್ಞಾನವುಂಟಾಗುವದು. ಅಭ್ಯಾಸಬಲದಿಂದದು ಅನುಭವಕ್ಕೆ ಬರಲು ಮರಳಿ ನೀನು ವಿಷಯ ಸುಖಕ್ಕೆ ಮರುಳಾಗದಂತೆ ಅಖಂಡ ಸುಖವಂ ಪಡೆಯುತ್ತೀಯೆ. ನೀನು ಪುತ್ರನಾದಾಗ್ಯೂ ಈ ಪರಮಾರ್ಥವಂ ಕೇಳಲಿಷ್ಟೈಸಿದೆಯಾದ್ದರಿಂದ ಪರಮೇಶ್ವರನಂತೆ ನನಗೆ ನಮಸ್ಕಾರಯೋಗ್ಯನಾಗಿದ್ದೀಯೆ ಎಂದು ವಿರೋಚನನು ಹೇಳಲು ಅದೇ ಪ್ರಕಾರ ನಡೆಯಬೇಕೆಂದು ಅವನ ಬಳಿಯಿಂ ಪೊರಮಟ್ಟ ಬಲಿಗೆ ರಾಜಕಾರ್ಯಾಂತರಗಳಿಂದವನ ವಚನವು ಮರವೆಗೆ ಬಂದುದು. ಬ್ರಹ್ಮವಿದ್ಯಾ ವಚನಗಳೊಂದುವೇಳೆ ಕಿವಿಗೆ ಬಿದ್ದಿದ್ದಾಗ್ಯೂ ಸಮಯ ವಿಶೇಷದಲ್ಲಿ ಪ್ರಕಾಶಿಸತಕ್ಕದ್ದಾದ್ದರಿಂದ ವಸಂತ ಕಾಲದಲ್ಲಿ ಕೋಗಿಲೆಗೆ ಧ್ವನಿ ಮಾಧುರ್ಯದಂತೆ ಒಂದಾನೊಂದು ಕಾಲದೊಳ್ ಬಲಿಚಕ್ರವರ್ತಿಯ ಸ್ಮರಣೆಗೆ ಬಂದುದು. ಆಗ ವಿರೋಚನನ ವಚನವೆಲ್ಲವಂ ಜ್ಞಾಪಿಸಿಕೊಂಡ ಬಲಿಯು ಎಷ್ಟುವೇಳೆ ದಿಕ್ಕುಗಳಂ ಜಯಿಸಿದರೂ ಯಾವಯಾವನಂ ಸಂಪಾದಿಸಿದರೂ ಎಷ್ಟು ಬಗೆಯಾಗಿ ಯಾವಯಾವ ಸ್ತ್ರೀಯರುಗಳಂ ರಮಿಸಿದರೂ ಮಾಡಿದ್ದೇ ಮಾಡಿದ್ದಾಗುವುದಲ್ಲದೆ ಹೊಸದಾಗಿ ಯಾವದೂ ಕಾಣಿಸುವದಿಲ್ಲ. ಮನಸ್ಸಿನ ಕಲ್ಪನಾಮಾತ್ರವಾದ ಜಗದ ಅಪೇಕ್ಷೆಯಿಂ ವ್ಯರ್ಥವಾಗಿ ದೇವತೆಗಳೊಡನೆ ದ್ವೇಷವಂ ಮಾಡಿ ಹುಡುಗನಂತೆ ಜಗಳವಾಡಿದ್ದರಿಂದೀಗ ನನಗೆ ಪಶ್ಚಾತ್ತಾಪ ಉಂಟಾಗಿರುವದಲ್ಲದೆ ವಿಶೇಷವಾದ ಲಾಭವೇನೂ ಕಾಣಿಸಲಿಲ್ಲ. ಅತಿಪ್ರಯಾಸದಿಂ ಲಬ್ಧವಾದ್ದೆಲ್ಲವೂ ಕಾಲನ ಪಾಲಾಗಿ ಹೋಗುವುವಲ್ಲದೆ ಯಾವದೂ ನಿಲ್ಲುವುದಿಲ್ಲ. ಇದ್ದುದಿದೆಲ್ಲವನ್ನೂ ಬಿಟ್ಟು ವಿಶ್ರಾಂತಿ ಸುಖವನ್ನನುಭವಿಸುವೆನೆಂದು ನಿಶ್ಚಯಿಸಿ ತತ್ವಜ್ಞಾನಾರ್ಥವಾಗಿ ಕಣ್ಣುಗಳಂ ಮುಚ್ಚಿಕೊಂಡು ಹೃದಯದಲ್ಲಿ ಶುಕ್ರಾಚಾರ್ಯನಂ ಧ್ಯಾನಿಸಲು ಸರ್ವಾತ್ಮಭಾವದಿಂದಿರುವ ಆ ಮಹಾ ಮುನಿಯು

ತನ್ನ ಹೃದಯದೊಳ್ ಅವನಂ ಕಂಡು ತನ್ನನ್ನಿವನು ಸ್ಮರಿಸುವನೆಂದು ತಿಳಿದು ಅವನಿದ್ದ ರತ್ನದ ಗವಾಕ್ಷದ ಬಳಿಗೆ ತನ್ನ ಶರೀರವಂ ಹೊಂದಿಸಲು ಆತನ ದೇಹ ಕಾಂತಿಯು ಸಮೀಪಕ್ಕೆ ಬಂದ ಸೂರ್ಯಪ್ರಭೆಯಂತೆ ಹೊಳೆಯುವಲ್ಲಿ ಸೂರ್ಯೋದಯದಿಂ ವಿಕಸಿತವಾದ ಕಮಲವುಳ್ಳ ಸರೋವರದಂತೆ ಕಣ್ಗಳಂ ತೆರದ ಆ ದೈತ್ಯೇಶ್ವರನು ಆ ಗುರುವಂ ಕಂಡು ಝುಗ್ಗನೆದ್ದು ರತ್ನಮಯವಾದ ಅರ್ಘ್ಯವಂ ಸಮರ್ಪಿಸಿ ಸಾಷ್ಟಾಂಗ ಪ್ರಣಾಮವಂ ಮಾಡಿ ರತ್ನಾಸನವನ್ನಂಗೀಕರಿಸಿದ ಆ ಗುರುವಿನ ಆಜ್ಞೆಯಿಂದವನ ಸಮೀಪದಲ್ಲಿ ಕುಳಿತು ಬದ್ಧಾಂಜಲಿಯಾಗಿ ಎಲೈ ಗುರುವರನೇ ಸೂರ್ಯಪ್ರಭೆಯು ಜನಗಳನ್ನಾಯಾಯ ವ್ಯಾಪಾರಗಳಲ್ಲಿ ಸೇರಿಸುವಂತೆ ತಮ್ಮ ಅನುಗ್ರಹವೇ ನಮ್ಮಂ ನೂತನಾಡುವಂತೆ ಮಾಡುತ್ತಿರುವದು. ಪ್ರಕೃತದೊಳ್ ತಿಮಿರದಂತೆ ಭೋಗಾನುರಾಗವು ಜೇಸಕೆಯಿಂ ತಪ್ಪಿರುವದ್ದರಿಂದ ಭೋಗ ಸುಖಕ್ಕೆ ಕೊನೆ ಯಾವದು? ಭೋಗದ ಸ್ವರೂಪವೇನು? ಭೋಕ್ತೃಭಾವವಂ ದಿರುವ ನಾವು ಯಾರು? ಭೋಗಯೋಗ್ಯವಾದ ಈ ಪ್ರಪಂಚದ ಸ್ವರೂಪವೇನು? ಇದೆಲ್ಲವಂ ವಿವರಿಸಿ ನಮ್ಮಂ ಅನುಗ್ರಹಿಸಬೇಕೆಂದು ಪ್ರಶ್ನೆಗೆಯ್ಯಲು ಶುಕ್ರಾಚಾರ್ಯನಿಂತೆಂದನು- ಎಲೈ ಸುಮತಿಯಾದ ದೈತ್ಯೇಶ್ವರನೆ ದೇವಕಾರ್ಯ ವಿಶೇಷಾರ್ಥವಾಗಿ ಸತ್ಯಸಂಕಲ್ಪರಾದ ಮುನಿಗಳು ಸ್ವರ್ಗಲೋಕಕ್ಕೀಗ ಬಂದು ಸೇರುವರು. ಅಲ್ಲಿ ನಾನು ಅವಶ್ಯವಾಗಿರಬೇಕಾದ್ದರಿಂದ ಇಲ್ಲಿ ನಾನು ನಿಲ್ಲುವದಕ್ಕೆ ಅವಕಾಶ ವಿಲ್ಲದಿರುವದು. ಅದರಿಂದಲೂ, ಬುದ್ಧಿಶಾಲಿಗೆ ವಿಶೇಷವಾಗಿ ಹೇಳತಕ್ಕ ನಿಮಿತ್ತ ವಿಲ್ಲದ್ದರಿಂದಲೂ, ನಿನಗೆ ಸಂಕ್ಷೇಪವಾಗಿ ಹೇಳುವೆನು. ದೃಶ್ಯವಾದ ಈ ಪ್ರಪಂಚ ಸಮೂಹದಲ್ಲಿ ಬ್ರಹ್ಮವೊಂದೇ ಎಲ್ಲಾ ಕಡೆಯಲ್ಲೂ ಪ್ರಕಾಶಿಸುತ್ತಿಹುದು. ಅದರ ಪ್ರಕಾಶದಿಂದಲೇ ಇದೆಲ್ಲವೂ ಗೋಚರವಾಗುವದ್ದರಿಂದ ಅದರಿಂದಿದೆಲ್ಲವೂ ವ್ಯಾಪ್ತ ವಾಗಿರುವದೆಂದು ತಿಳಿಯತಕ್ಕದ್ದು. ಈ ಪ್ರಪಂಚಗಳಿಗೆ ಬೇರೆ ಸತ್ವವಿಲ್ಲದ್ದರಿಂದಲೂ, ನಿರ್ವಿಕಾರವಾದ ವಸ್ತುವಿಗೆ ಸವಿಕಾರವಾದ ಪ್ರಪಂಚದ ಸಂಬಂಧವನ್ನುವದು ಅಸಂಗತವಾದ್ದರಿಂದಲೂ ಕೂಡ ಭೋಕ್ತೃಭಾವದಲ್ಲಿರುವ ನಾವುಗಳು ಭೋಗ ಸಾಧನವಾದ ಮನವು ಭೋಗ್ಯವಾದ ಈ ಪ್ರಪಂಚಗಳೆಲ್ಲವೂ ಕೂಡ ಬ್ರಹ್ಮವೆಂತಲೂ ನಿಶ್ಚಯಿಸತಕ್ಕದ್ದು. ಎಷ್ಟು ಹೇಳಿದರೂ ಇಷ್ಟೇ ಕೊನೆಗೆ ನಿಲ್ಲುವದ್ದರಿಂದ ಈ ನಿಶ್ಚಯದಿಂದಲೇ ಬುದ್ಧಿಶಾಲಿಗಳು ಕೃತಕೃತ್ಯರಾಗುವರು. ಈ ನಿಶ್ಚಯ ನಾಗದಿದ್ದಲ್ಲಿ ಹೇಳಿದ್ದೆಲ್ಲವೂ ಭಸ್ಮ ಹವನದಂತೆ ನಿಷ್ಫಲವೆಂದು ತಿಳಿಯತಕ್ಕದ್ದು. ಚಿನ್ಮಾತ್ರಸ್ವರೂಪವಾದ ಬ್ರಹ್ಮವೇ ಸ್ವಕಲ್ಪನೆಯಿಂ ಸಿದ್ಧವಾದ ದೃಶ್ಯ

ಪ್ರಪಂಚವು ಜೀರೆಯಿಂದಭಿಮಾನಿಸುತ್ತಾ ಜೀವನೆಂತಲೂ ಬದ್ಧನೆಂತಲೂ ಹೇಳಲ್ಪಡುವದು. ಸತ್ಯ ವಿಚಾರದಿಂ ಬೇರೆ ಸತ್ಯವಿಲ್ಲದ್ದರಿಂದ ದೃಗ್ರೂಪನಾಗಿರುವ ನಾನೇ ದೃಶ್ಯವೆನಿಸುವೆನು. ದೃಗ್ದೃಶ್ಯಭಾವವಿಲ್ಲದ ಕೇವಲ ಚಿತ್ಸ್ವರೂಪವಾದ ಬ್ರಹ್ಮವೇ ಪರಿ ಪರಿಯಾಗಿ ಪ್ರಕಾಶಿಸುತ್ತಿಹುದೆಂದು ಯಾವಾಗ ನಿಶ್ಚಯಿಸುವನೋ ಆಗ ಮುಕ್ತನೆಂತಲೂ ಬ್ರಹ್ಮವೆಂತಲೂ ಹೇಳಲ್ಪಡುವನು. ಇದರಿಂದ ದೃಶ್ಯಕಲ್ಪನೆಯೇ ಬಂಧನೆಂತಲೂ ಅದಿಲ್ಲದಿರುವದೇ ಮುಕ್ತಿಯೆಂತಲೂ ತಿಳಿಯುವನಾಗು. ಎಷ್ಟು ತಿಳಿದಿದ್ದಾಗ್ಯೂ ದೇಹಜ್ಞಾನವಿರುವವರಿಗೆ ಪ್ರಕೃತೋಚಿತವಾಗಿ ಬಂದ ಕರ್ಮವು ಬಿಡತಕ್ಕದಲ್ಲವಾದ್ದರಿಂದೀಗಲೇ ನಾನು ಸ್ವರ್ಗಲೋಕಕ್ಕೆ ಪೋಗಿಬರುವನೆಂದು ಹೇಳುತ್ತಾ ರಾಜಹಂಸದಂತೆ ಗಗನಮಾರ್ಗವಂ ಹೊಂದಲು ರಹಸ್ಯವಾದ ಆ ಸ್ಥಳದಲ್ಲೇ ಕುಳಿತ ಬಲಿಚಕ್ರವರ್ತಿ ಆಲೋಚಿಸಿದನದೆಂತೆನೆ:— ನನ್ನದೆನಿಸುವ ಜಡವಾದ ಈ ಪ್ರಪಂಚವೆಲ್ಲವು ನಾನೆನಿಸುವ ಚಿತ್ತು ಭಾವಿಸಿದಂತೆಯೇ ತೋರುತ್ತಿರುವದು. ಪ್ರಕಾರಾಂತರದಿಂ ದೃಢವಾದ ಭಾವನೆಯಾದಲ್ಲಿ ಪೂರ್ವ ರೂಪವಂ ಬಿಟ್ಟು ಭಾವಾನುರೂಪವಾದ ರೂಪವನ್ನೇ ಪಡೆಯುವದು. ಅದ್ದರಿಂದ ದಿಗ್ದೇಶಕಾಲಗಳು, ಸೂರ್ಯಚಂದ್ರಾದಿ ಗ್ರಹನಕ್ಷತ್ರಗಳು, ಬ್ರಹ್ಮ ವಿಷ್ಣು ಮಹೇಶ್ವರಾದಿ ದೇವತೆಗಳೂ ಕೂಡ ಎಲ್ಲಾ ಕಡೆಯಲ್ಲು ನಾನೆಂದು ಪ್ರಕಾಶಿಸುವ ಪರಮಾತ್ಮನಿಂದಲೇ ಕಲ್ಪಿತವಾಗಿರುವವೆಂದು ಗೊತ್ತಾಗುತ್ತಲಿದೆ. ಅನ್ಯಭಾವ ಸಿದ್ಧವಾದ ಪದಾರ್ಥವು ಅನ್ಯರಿಗೆ ಗೋಚರವಾಗಲಾರದ್ದರಿಂದ ಪರಮಾತ್ಮನೇ ಸರ್ವ ಪ್ರಾಣಿಗಳಲ್ಲೂ ಆತ್ಮನೆನಿಸಿಕೊಳ್ಳುತಿಹನೆಂದು ನಿಶ್ಚಯಿಸತಕ್ಕದ್ದು. ಮತ್ತು ಸಾಧುವೆಂತಲೂ, ಅಸಾಧುವೆಂತಲೂ, ಭಿನ್ನವೆಂತಲೂ, ಅಭಿನ್ನವೆಂತಲೂ, ಚಿತ್ತೆಂತಲೂ, ಜಡವೆಂತಲೂ, ದೃಢನಾಗಿ ಭಾವಿಸಿದಂತೆಯೇ ಪದಾರ್ಥಗಳು ಪರಿಣಮಿಸುವದ್ದರಿಂದ ಸಮಸ್ತವು ಜ್ಞಾನಮಯವೆಂತಲೇ ತಿಳಿಯಬೇಕಾಗುತ್ತೆ. ಜ್ಞಾನಸ್ವರೂಪನಾದ ಆತ್ಮನಿಗೆ ಪರಿಣಾಮವಿಲ್ಲದ್ದರಿಂದ ಆತ್ಮನ ವಿವರ್ತವೆ ಜಗವೆನಿಸುವದೆಂದು ನಿಶ್ಚಯಿಸತಕ್ಕದ್ದು. ಸೂರ್ಯನೆಂತಲೂ, ಚಂದ್ರನೆಂತಲೂ, ಭೂಮಿಯೆಂತಲೂ, ಆಕಾಶವೆಂತಲೂ, ದಿಕ್ಕುಗಳೆಂತಲೂ, ದೇಶವೆಂತಲೂ, ಕಾಲನೆಂತಲೂ, ಶರೀರವೆಂತಲೂ, ಪ್ರಾಣವೆಂತಲೂ, ಇಂದ್ರಿಯವೆಂತಲೂ, ಮನವೆಂತಲೂ, ಯಾವದು ಹೇಗೆ ಉಜ್ಜೀವಿತವಾಗಿರುವದೋ ಅದು ಹಾಗೇ ಪ್ರಕಾಶಿಸುತ್ತಾ ತನ್ನ ಕೃತ್ಯವಂ ಮಾಡುತ್ತಿರುವದು. ಈ ಚಿತ್ಪದಾರ್ಥದಿಂದಲೆ ಚಿನ್ಮಾತ್ರಸ್ವರೂಪನಾದ ನಾನು ಇಚ್ಛಾಪೂರ್ವಕವಾಗಿ ಇಂದ್ರಿಯ ವಿಷಯ ಸಂಬಂಧದಿಂದುಂಟಾದ ಸುಖವನ್ನನುಭವಿಸುವೆನಲ್ಲದೆ

ಕಾಷ್ಠಸಮವಾದ ಈ ಶರೀರದಿಂ ನನಗೇನೂ ಪ್ರಯೋಜನವಿಲ್ಲ. ನಾನೆನ್ನುವು ದೆಲ್ಲವೂ ಚಿತ್ತೇ ಆದ್ದರಿಂದ ಪಂಚಭೂತಗಳಲ್ಲೂ, ಸಕಲ ಪ್ರಾಣಿಗಳಲ್ಲೂ, ನಾನೇ ಇರುವೆನು. ಚಿದ್ವಸ್ತುವಿನ ಮಹಿಮೆಯಂ ನೋಡುವಲ್ಲಿ ಎರಡನೇ ಪದಾರ್ಥವೆಂಬ ಕಲ್ಪನೆಗೆ ಅವಕಾಶವಿಲ್ಲದ್ದರಿಂದ ಇವನು ಶತ್ರುವು ಇವನು ಮಿತ್ರನೆಂಬುವದೇ ಮೊದಲಾದ ಮಾತುಗಳೆಲ್ಲವೂ ಭ್ರಾಂತಿಸಿದ್ಧವೆನಿಸುವವು. ಇದುವರೆಗೆ ಇದೇ ನಾನೆಂದು ಅಭಿಮಾನಿಸಿದ್ದ ಬಲಿಯಂಬೀ ಶರೀರವು ಛಿನ್ನಾಭಿನ್ನವಾದಗ್ಯೂ ಸರ್ವ ವ್ಯಾಪಕವಾಗಿರುವ ಚಿತ್ತಿಗೆ ಹಾನಿಯೇನೂ ಕಾಣಿಸುವುದಿಲ್ಲ. ರಾಗದ್ವೇಷಾದಿ ಗಳೂ ಕೂಡ ಚಿದ್ವಸ್ತುವಿನ ಪ್ರಭಾವದಿಂದಲೇ ತಲೆಯತ್ತಿರುವದ್ದರಿಂದ ಸಮಸ್ತ ಭಾವಗಳೂ ಚಿತ್ಪ್ರಕಾಶಗಳೆಂತಲೇ ಪೇಳಲ್ಪಡುವವು. ಎಷ್ಟು ಪ್ರಕಾರವಾಗಿ ವಿಚಾರಿಸಿದರೂ ಎಲ್ಲೆಲ್ಲಿ ನೋಡಿದರೂ ಚಿತ್ತಿಗೆ ಭಿನ್ನವಾಗಿ ಯಾವದೂ ಕಾಣಿಸುವು ದಿಲ್ಲವಾದ್ದರಿಂದ ರಾಗದ್ವೇಷಾದಿಗಳೂ, ಅಂತಃಕರಣಗಳೂ, ಬಾಹ್ಯಕರಣಗಳೂ, ಅವುಗಳ ವೃತ್ತಿಗಳೂ ಅವುಗಳ ವಿಷಯಗಳೂ ಕೂಡ ಚಿತ್ಪದಾರ್ಥದಿಂದುಂಟಾದ ವಿಕಲ್ಪಕಲ್ಪನೆಗಳೆಂತಲೇ ನಿಶ್ಚಯಿಸತಕ್ಕದ್ದು. ಈ ಪರಿಯಿಂ ಚಿದ್ಭಿನ್ನವಾದ ಪದಾರ್ಥ ಗಳೆಲ್ಲವೂ ತುಚ್ಛವಾಗುವದ್ದರಿಂದ ಪರಿಶಿಷ್ಟನಾದ ನಾನೇ ಸರ್ವಾಂತರ್ಯಾಮಿಯಾಗಿ ಯೂ, ಸರ್ವವ್ಯಾಪಕನಾಗಿಯೂ, ಸರ್ವಸ್ವರೂಪನಾಗಿಯೂ, ಪ್ರಕಾಶಿಸುತ್ತಿರು ವೆನೆಂದು ನಿಶ್ಚಯಿಸುತಲಿಧೇನೆ. ನಿರ್ವಿಶೇಷ ಚಿನ್ಮಾತ್ರವಾದ ಚಿತ್ತಿಗೆ ಚಿತ್ತೆಂಬ ನಾಮಧೇಯವು ಶಬ್ದಾತ್ಮಕವಾಗಿ ಪ್ರಕಾಶಿಸುವ ಚಿಚ್ಛಕ್ತಿಯ ಪ್ರಕಾಶವಾದ್ದರಿಂದ ಚಿದ್ವಸ್ತುವಿಗೆ ರೂಪವಂತೆ ನಾಮವೂ ಇಲ್ಲವೆಂದು ಪೇಳಲ್ಪಡುವದು. ದೃಶ್ಯದರ್ಶ ನಗಳಿಲ್ಲದ್ದರಿಂ ದ್ರಷ್ಟೃಭಾವವಿಲ್ಲದಿದ್ದಾಗ್ಯೂ ದೃಕ್ಕೆನಿಸುವ ನಿತ್ಯಪ್ರಕಾಶನಾದ ನನಿಗೆ ಜೀವಭಾವವು ಭ್ರಾಂತಿಮಾತ್ರವಲ್ಲದೆ ಎಂದಿಗೂ ವಾಸ್ತವವಾಗಲಾರದು. ಆದ್ದರಿಂದ ಸ್ವರೂಪವಿಚಾರದಿಂ ಜೀವಭಾವವಂ ತಿರಸ್ಕರಿಸಿದ ನಾನು ನಿಜಸ್ವ ರೂಪದಲ್ಲಿ ನೆಲಸಿ ಬ್ರಹ್ಮಭಾವದಿಂ ಪ್ರಕಾಶಿಸುತ್ತಿರುವೆನು. ಪ್ರಾಪಂಚಿಕವ್ಯಾಪಾ ರಗಳು ನಡೆಯುತ್ತಿದ್ದಾಗ್ಯೂ ಅಭಿಮಾನಾತ್ಮಕವಾದ ಅಹಂಭಾವವಿಲ್ಲದ್ದರಿಂದವು ಗಳ ಲೇಪವಿಲ್ಲದ ಕಾರಣ ನಿತ್ಯಮುಕ್ತನಾಗಿ ಅಖಂಡಭಾವದಿಂ ಮಹಾತ್ಮನೆನಿಸು ತ್ತಾ ಪ್ರತ್ಯಗಾತ್ಮರೂಪದಿಂ ಬೆಳಗುವ ಸ್ವರೂಪಕ್ಕೋಸುಗ ನಮಸ್ಕಾರವಾಗಲಿ ಯೋಗ್ಯವಾದ ಯುಕ್ತಿಯಿಂದ ಪ್ರಪಂಚವಾಸನೆಯಂಬಿಟ್ಟು ಜ್ಞಾನಸ್ವರೂಪದಿಂ ಸರ್ವಪ್ರಕಾಶಕನಾದ ನನಿಗೋಸುಗ ನಮಸ್ಕಾರವಾಗಲಿ, ದೃಶ್ಯಾತೀತವಾದ ಪೃಗ್ರೂಪದಿಂ ದೃಶ್ಯ ಪ್ರಪಂಚವನ್ನೊಳಗೂ ಹೊರಗೂ ಸಹ ವ್ಯಾಪಿಸಿಕೊಂಡು

ಸರ್ವಸ್ವರೂಪವಾದ್ದರಿಂದ ಅಖಂಡವಾಗಿ ಸರ್ವಭಾವಾತೀತವಾದ ಜ್ಞಾನವುಳ್ಳ ಜನರಿಗೆ ಅನುಭವ ಗೋಚರವಾದ ಬ್ರಹ್ಮವೇ ನಾನು. ಪರಮಾಣುವಿಗೂ ಪರಮಾಣುವಾಗಿ ಆಕಾಶಕ್ಕು ವ್ಯಾಪಕನಾಗಿರುವ ನನ್ನಲ್ಲಿ ಸುಖದುಃಖ ದೃಷ್ಟಿಗಳು ಹೊಂದುವದು ಹೇಗೆ ತಿಳಿಯಲಳವಲ್ಲದ ತಿಳಿವಳಿಕೆಯಂತಲೂ, ಚೈತನ್ಯವಿಲ್ಲದ ಚೇತನವೆಂತಲೂ ಪ್ರಸಿದ್ಧವಾಗಿ ಅಖಂಡಭಾವದಿಂದಿರುವ ನನ್ನಲ್ಲಿ ಜಗತ್ತಿನ ಭಾವಗಳು ಖಂಡಿಸಲಾರವು. ಒಂದುವೇಳೆ ಖಂಡಿಸಿದಾಗ್ಯೂ ಖಂಡಿತವಾದ ಅಂಶಗಳು ಖಂಡಿಸುವ ಭಾವಗಳೂ ಸಹ ನನಿಗೆ ಅಭಿನ್ನವಾದ್ದರಿಂದ ನನ್ನ ಅಖಂಡಭಾವಕ್ಕೆ ಹಾನಿಯಾಗಲಾರದು. ಸ್ವಾಭಾವಿಕವಾದ ಜ್ವಾಲೆಗಳಲ್ಲಿ ಅಧಿಕವಾದ ಒಂದೆರಡು ಜ್ವಾಲೆಗಳಿಂದ ಅಗ್ನಿಯ ಸಂತಾಪವು ಸೆಳೆಯಲ್ಪಟ್ಟಾಗ್ಯೂ ಇನ್ನೊಂದೆಡೆಯಲ್ಲಿ ಆ ಸಂತಾಪವು ಸೇರಿಸಲ್ಪಟ್ಟಾಗ್ಯೂ ಅಗ್ನಿಗೆ ಹೇಗೆ ನ್ಯೂನತೆಯಿಲ್ಲವೋ ಹಾಗೆ ಜ್ಞಾನೇಚ್ಛಾದಿ ಶಕ್ತಿಗಳಿಂ ಸೆಳೆಯಲ್ಪಡುವ ನನ್ನ ಅಖಂಡಭಾವವು ಸೆಳದು ಇನ್ನೊಂದು ಬಳಿಯಲ್ಲಿ ಸೇರಿಸಲ್ಪಡುತ್ತಿದ್ದಾಗ್ಯೂ ಅದೂ ನಾನೇ ಆಗುವದ್ದರಿಂದ ನನಿಗೇನೂ ಹಾನಿ ಕಾಣಿಸುವದಿಲ್ಲ. ಸರ್ವಕಾಲಗಳಲ್ಲೂ, ಸರ್ವದೇಶಗಳಲ್ಲೂ, ಸರ್ವವಸ್ತುಗಳಲ್ಲೂ, ಪರಿಪೂರ್ಣನಾಗಿರುವ ನನಿಗೆ ಭಿನ್ನವಾದ್ದು ಯಾವದೂ ಇಲ್ಲವಾದ್ದರಿಂದ ನನ್ನ ಸಂಕಲ್ಪ ವಿಕಲ್ಪಗಳಿಂದುದಿತವಾದದ್ದೂ ಕ್ಷತವಾದದ್ದೂ ಸಹ ಮತ್ತೊಂದಲ್ಲ. ಆದ್ದರಿಂದ ಚಿತ್ತು ಒಂದೇ ಪರಿಪರಿಯಾಗಿ ಪ್ರಕಾಶಿಸುತ್ತಿಹುದೆಂದು ತಿಳಿಯತಕ್ಕದ್ದು. ನನ್ನಲ್ಲಿ ನನ್ನಪೇಕ್ಷೆಯಿಂದ ನಾನೇ ನನಗಭಿನ್ನವಾದ ವಿಕಾರಗಳಂತಾಳಿ ನಾನೇ ಶಾಂತನಾಗುವೆನಲ್ಲವೆ ನನಿಗೆ ಭಿನ್ನವಾದ್ದು ಯಾವದೂ ಇಲ್ಲವೆಂದು ಚಕ್ರವರ್ತಿಯು ಚಿಂತಿಸುತ್ತಾ ಸ್ಥೂಲ ಸೂಕ್ಷ್ಮ ಕಾರಣಾತ್ಮಕವಾದ ಪ್ರಪಂಚಗಳನ್ನಕಾರೋಕಾರ ಮಕಾರಗಳಲ್ಲಣಗಿಸಿ ಅರ್ಧಮಾತ್ರೆಗೆ ಅರ್ಥವಾದ ಚಿನ್ಮಾತ್ರಸ್ವರೂಪದಿಂ ಸರ್ವವ್ಯಾಪಕವಾದ ನಿಜಸ್ವರೂಪದೊಳೊಂದು ಧ್ಯಾತೃ ಧ್ಯಾನ ಧ್ಯೇಯ ಕಲ್ಪನಾವಾಸನೆಗಳೇನೂ ಇಲ್ಲದೆ ಶಾಂತಾಂತಃಕರಣನಾಗಿ ನಿರ್ವಾತ ಪ್ರದೇಶದಲ್ಲಿರುವ ದೀಪದಂತೆ ನಿಶ್ಚಲನಾಗಿ ಕಲ್ಲು ಬೊಂಬೆಯಂತೆ ಕುಳಿತಿರಲು ಕಾಲೋಚಿತವಾದ ಸೇವೆಗೋಸುಗ ಸಿದ್ಧರಾದ ದಾಸವರು, ಡಿಂಭ ಮೊದಲಾದ ಮಂತ್ರಿಗಳು, ಕುಮುದ ಮೊದಲಾದ ಸಾಮಂತರು, ಹಯಗ್ರೀವ ಮೊದಲಾದ ಸೇನಾಪತಿಗಳು, ಚಕ್ರಜ ಮೊದಲಾದ ಬಂಧುಗಳು, ಲಡುಕ ಮೊದಲಾದ ಸ್ನೇಹಿತರು, ವಲ್ಗುಕ ಮೊದಲಾದ ಪಾರ್ಶ್ವಜನರು, ಉಪಾಯನ ಹಸ್ತರಾದ ಇಂದ್ರ, ಯಮ, ವರುಣ, ಕುಬೇರ ಮೊದಲಾದ ದೇವತೆಗಳು, ಸೇವಾಕಾಲವಂ ನೋಡುವ ಯಕ್ಷ, ಕಿನ್ನ

ರ, ಕಿಂಪುರುಷ, ಸಿದ್ಧ, ಸಾಧ್ಯ, ಗಂಧರ್ವ, ವಿದ್ಯಾಧರ, ಸರ್ವಾಧಿಪತಿಗಳು, ಕೃಪಾಕಟಾಕ್ಷ ಪ್ರತೀಕ್ಷರಾದ್ದರಿಂ ರೂಪಾಂತರಧಾರಿಗಳಾದ ಗಿರಿ ನದೀ ಸಮುದ್ರ ದಿಗ್ದೇವತೆಗಳು ಚಾಮರಾದಿ ಸೇವಾಪಾತ್ರ ಹಸ್ತರಾದ ರಂಭಾ ತಿಲೋತ್ತಮಾದ್ಯಪ್ಸರಸ್ತ್ರೀಯರುಗಳು, ಇನ್ನೂ ಲೋಕತ್ರಯದಲ್ಲಿರುವ ದೇಶಾಧೀಶ್ವರರೂ ಕೂಡ ಬಲಿಚಕ್ರವರ್ತಿ ಇದ್ದ ಸ್ಫಟಿಕಮಯವಾದ ಉಪ್ಪರಿಗೆಯನ್ನೇರಿ ಪ್ರಣಾಮವಂ ಮಾಡುತ್ತಾ ಸ್ತಬ್ಧನಂತಿರುವ ಆ ದಾನವೇಂದ್ರನಂ ನೋಡುತ್ತಿರುವಲ್ಲಿ ಮಿತ್ರರು ದುಃಖವನ್ನೂ, ಮಧ್ಯಸ್ಥರು ಆಶ್ಚರ್ಯವನ್ನೂ, ತತ್ವಜ್ಞರು ಆನಂದವನ್ನೂ, ಶತ್ರುಕಾಟಿಗೆ ಸೇರಿದವರು ಭಯವಂ ಸಹ ಹೊಂದುತ್ತಿರುವಲ್ಲಿ ಮಂತ್ರಿಗಳು ಪರಿಪರಿಯಾಗಿ ಆಲೋಚಿಸಿದಾಗ್ಯೂ ಒಂದೂ ತೋರಲಿಲ್ಲವಾದ್ದರಿಂದ ಅಜ್ಞಾನಕಷ್ಟದೊಳ್ಮುಳುಗುರುವೇಗತಿಯೆಂದು ಶುಕ್ರಾಚಾರ್ಯನಂ ಸ್ಮರಿಸಲು ಆಕ್ಷಣದೊಳ್ದೇಹಕಾಂತಿಯಿಂ ಕ್ಷೀರಸಾಗರವಂ ಸುತ್ತಮುತ್ತಲೂ ಚಲ್ಲುವನಂತೆ ಪ್ರಕಾಶಿಸುತ್ತಿರುವ ಭಾರ್ಗವನು ಅಲ್ಲಿಗೆಬಂದು ಸುರಾಸುರರಿಂ ಪೂಜಿತನಾಗುತ್ತಾ ಸಮಾಧಿ ನಿಷ್ಠನಾದ ಆ ದಾನವೇಶ್ವರನಂ ನೋಡಿ ಎಲೈ ಮಂತ್ರಿಗಳಿರಾ ಈ ರಾಜೇಂದ್ರನು ವಿಚಾರಬಲದಿಂ ಸ್ವಸ್ವರೂಪದಲ್ಲಿ ನೆಲಸಿರುವನಾದ್ದರಿಂದ ಇವನಂ ಮಾತನಾಡಿಸದೆ ನಿಮ್ಮ ನಿಮ್ಮ ಕಾರ್ಯಗಳಲ್ಲಿ ನೀವು ಜಾಗರೂಕರಾಗಿರುವರಾಗಿ. ಇವನು ನಿಜಸ್ಥಿತಿಯೊಳ್ ಸಹಸ್ರವರ್ಷ ಪರ್ಯಂತವಾಗಿ ವಿಶ್ರಾಂತಿಯಂ ಹೊಂದಿ ತಾನಾಗಿ ಎಚ್ಚರವಾಗುವನೆಂದು ಹೇಳಲು ಆ ಮಂತ್ರಿ ಮೊದಲಾದವರು ಫಲಕಾಲದಲ್ಲಿ ಶುಷ್ಕವಾದ ಗೊಂಚಲುಗಳಂ ಬಿಟ್ಟುಬಿಡುವಂತೆ ದುಃಖೋದಿತವಾದ ಆ ಚಿಂತೆಯಂ ಬಿಟ್ಟು ತಮ್ಮ ತಮ್ಮ ಕಾರ್ಯಗಳಲ್ಲಾಸಕ್ತರಾದರು. ಬಳಿಕ ವರ್ಷ ಸಹಸ್ರಾಂತದಲ್ಲಿ ದೇವದುಂದುಭಿ ಘೋಷದಿಂ ಎಚ್ಚರಗೊಂಡ ಆ ಬಲಿಚಕ್ರವರ್ತಿಯು ಆಲೋಚಿಸಿದನದೆಂತೆನೆ,- ಎಲಎಲಾ ಇದೇನು ಆಶ್ಚರ್ಯವು! ಒಂದು ಕ್ಷಣ ಮಾತ್ರದಿಂದಲೇ ನನಗೆ ಸಕಲ ಸಂತಾಪಗಳೂ ಅಣಗಿ ವಿಶ್ರಾಂತಿಯಾಗಿರುವದು. ಆದ್ದರಿಂದ ಈ ಮಾರ್ಗಕ್ಕಿಂತ ಯಾವನೂ ನನಗೆ ಶಾಂತವಾದದ್ದಾಗಿ ಕಾಣುವದಿಲ್ಲ. ಇಲ್ಲಿ ಸಿದ್ಧವಾದ ಆನಂದಗಳಂತೆ ಚಂದ್ರಬಿಂಬ ಸ್ಥಿತಿಯಿಂದುಂಟಾದ ಆನಂದಗಳೂ ಕೂಡ ಮನೋಹರವಾಗಲಾರವು. ಮರಳಿ ಮರಳಿ ಮರುಳತನದಿಂ ಭೋಗಿಸಲ್ಪಟ್ಟ ಭೋಗ್ಯವಸ್ತುಗಳಿಂ ಫಲವೇನೂ ಇಲ್ಲದ್ದರಿಂದ ಮರಳಿ ಈ ಸಮಾಧಿಮಾರ್ಗವನ್ನೇ ಹೊಂದುವೆನು ಎಂದು ಆಲೋಚಿಸುವಲ್ಲಿ ಚದ್ರನಂ ಮೇಘಗಳಂತೆ ಆ ಬಲಿಚಕ್ರವರ್ತಿಯಂ ಮಂತ್ರಿ ಮೊದಲಾದವರು ಆವರಿಸಿಕೊಂಡು ಪ್ರಣಾಮವಂ ಮಾಡಿದರು. ಅವರಂ ನೋಡಿದ ಆ ದಾನವೇಶ್ವರನು ಮರಳಿ ಆಲೋಚಿಸಿದ

ವದೆಂತೆಂದರೆ,— ನಿರ್ವಿಕಲ್ಪಚಿನ್ಮಾತ್ರಸ್ವರೂಪನಾದ ನನಗೆ ಯಾವದು ತ್ಯಾಜ್ಯಗ್ರಾಹ್ಯವಾಗುವದು. ಇದುವರಿಗೂ ಮನಸ್ಸು ಸಮಾಧಿ ಮಾರ್ಗದಲ್ಲೇ ಸುಖವಾಗಿದ್ದದ್ದರಿಂದ ಮರಳಿ ಅದನ್ನೇ ಬಯಸುವದು ನನಗೆ ಯಾವ ಬಂಧವಿರುವದೆಂದು ಮೋಕ್ಷವನ್ನಪೇಕ್ಷಿಸಬೇಕು. ಬಂಧವಂ ಕಾಣದೆ ಮೋಕ್ಷವಂ ಬಯಸುವ ರೀತಿಯು ಹುಡುಗಾಟದಂತೆಯೇ ಕಾಣುತಲಿದೆ. ಸತ್ಯಮುಕ್ತವಾದ ನಿಜಸ್ವರೂಪವು ಗೊತ್ತಾದ್ದರಿಂದ ಬಂಧ ಮೋಕ್ಷಗಳೆರಡೂ ಸುಳ್ಳೆಂತಲೇ ತಿಳಿಯುತಲಿದ್ದೇನೆ. ಅಖಂಡ ಚಿನ್ಮಾತ್ರಸ್ವರೂಪನಾದ ನನಗೆ ಧ್ಯಾನಯೋಗ್ಯವಾದ ವಸ್ತುವು ಬೇರೆ ಇಲ್ಲದ್ದರಿಂದ ಧ್ಯಾನಿಸುವದನ್ನೂ ಧ್ಯಾನವಿಲ್ಲದಿರುವದನ್ನೂ ಸಹ ಭ್ರಮೆಯೆಂತಲೇ ತಿಳಿಯುತಲಿದ್ದೇನೆ. ನಿಜಸುಖದಲ್ಲಿ ನೆಲಸಿರುವ ನನಗೆ ಒಂದು ಬಂದದ್ದರಿಂದಲೂ, ಬಂದು ಹೋದದ್ದರಿಂದಲೂ, ವೃದ್ಧಿಕ್ಷಯಗಳು ಕಾಣಿಸುವದಿಲ್ಲ. ಆದ್ದರಿಂದ ಬರತಕ್ಕದ್ದೆಲ್ಲವೂ ಬರಬಹುದು. ಹೋಗತಕ್ಕದ್ದೆಲ್ಲವೂ ಹೋಗಬಹುದು. ಪರತತ್ವ ಬೇರೆ ಇಲ್ಲದ್ದರಿಂದಲೂ, ಜಗತ್ತೆಂಬುವದು ತುಚ್ಛವಾದ್ದರಿಂದಲೂ, ಧ್ಯಾನದೃಷ್ಟಿಯೂ ಭೋಗವೈಭವವೂ ಕೂಡ ನಿಷ್ಫಲವಾದ್ದರಿಂದಲೂ, ಯಾವ ಭೋಗವನ್ನೂ ಅಪೇಕ್ಷಿಸದೆ ಬಂದದ್ದನ್ನುಪೇಕ್ಷಿಸದೆ ಚಿನ್ಮಾತ್ರಸ್ವಭಾವದಿಂ ಸಂತಾಪವಿಲ್ಲದ ನಾನು ಸರ್ವತ್ರ ಸಮಭಾವದಿಂದಿರುವೆನು. ಪ್ರಾಣವಿರುವದ್ದರಿಂದ ಬದುಕಿರುವದೆಂತಲೂ ಪ್ರಾಣವಿಲ್ಲದಿರುವದ್ದರಿಂದ ಸತ್ತದ್ದೆಂತಲೂ ದೇಹಕ್ಕೆ ಪ್ರಸಿದ್ಧಿಯಿರುವದು. ನನಗೆ ಮೂರ್ತಾಮೂರ್ತ ಪದಾರ್ಥಗಳ ಸಂಬಂಧವಿಲ್ಲದ್ದರಿಂದ ನಾನು ಸತ್ತವನೆಂತಲೂ, ಬದುಕಿರುವನೆಂತಲೂ, ಸ್ಥೂಲ ಸೂಕ್ಷ್ಮಾದಿ ಭಾವಗಳುಳ್ಳವನೆಂತಲೂ, ಹೇಳಿಸಿಕೊಳ್ಳಲಾರೆನು. ಇಂಥಾ ನನಗೆ ಧ್ಯಾನದೃಷ್ಟಿಯಿಂದಲೂ ಭೋಗವೈಭವದಿಂದಲೂ, ಆಗತಕ್ಕದ್ದೇನು. ಬರತಕ್ಕದ್ದು ಬರುವದ್ದರಿಂದಲೂ, ಹೋಗತಕ್ಕದ್ದು ಹೋಗುವದರಿಂದಲೂ, ಸರ್ವಸಾಕ್ಷಿಯಾದ ನನಗೆ ಸಂಬಂಧವೇ ಇಲ್ಲದಿರುವಲ್ಲಿ ಅದರ ಹಾನಿವೃದ್ಧಿಗಳಿಂದಾಗತಕ್ಕದ್ದೇನಿರುವದು. ಹೀಗಿರುವದ್ದರಿಂದ ಕೃತಕರ್ಮಗಳ ಆಚರಣೆಯಿಂದಲೂ ತ್ಯಾಗದಿಂದಲೂ ನನಗೆ ಪ್ರಯೋಜನವೇನೂ ಇಲ್ಲ. ಆದಾಗ್ಯೂ ರಾಜಾಚಾರವು ಮಹಾತ್ಮರ ಆಚಾರವು ಸಹ ಲೋಕಗಳಿಗೆ ಗ್ರಾಹ್ಯವಾಗುವದ್ದರಿಂದ ತಿಳಿದವರು ಲೋಕಾನುಗ್ರಹಾರ್ಥವಾಗಿ ಕರ್ಮವಂ ಮಾಡುವರು. ಆತ್ಮೈಕ್ಯವಿದ್ದಾಗ್ಯೂ ಮನೋಭೇದದಿಂ ಪ್ರಪಂಚ ವೈಚಿತ್ರ್ಯವಿರುವದ್ದರಿಂದಲೂ, ವಿಚಾರಿಸುವ ಮನಸು ಮುಕ್ತವಾಗುವದ್ದರಿಂದಲೂ, ಮನದಲ್ಲಿರುವ ಆತ್ಮನ ಸುರವೇ ತಿಳಿವಳಿಕೆಗಳೇ ಬಂಧಮೋಕ್ಷಗಳೆನಿಸುವದ್ದರಿಂದಲೂ, ವಿಚಾರವಿಲ್ಲದವನ ಮನವು

ದುಃಖಮಗ್ನವಾಗಿರುವದ್ದರಿಂದಲೂ, ಮನವಿರುವವರಿಗೆ ವಿಚಾರವು ವಿಶೇತಕ್ಕದ್ದಾ
ವಾದ್ದರಿಂದಲೂ, ಲೋಕವ್ಯವಸ್ಥಾಪಕನಾದವನು ಪ್ರಕೃತೋಚಿತವಾದ ವ್ಯಾಪಾರ
ಗಳಂ ಬಿಡಲಾಗದು. ಆದ್ದರಿಂದ ನಾನು ಸ್ವತಃ ಪ್ರಯೋಜನವಿಲ್ಲದಿದ್ದರೂ ಪರ
ಪ್ರಯೋಜನಾರ್ಥವಾಗಿ ಪ್ರಕೃತವಾದ ಕರ್ಮಗಳಂ ನೆರವೇರಿಸುವೆನೆಂದು ನಿಶ್ಚಯಿಸಿ
ಕಮಲಾ ಕರಗಳಂ ದಿವಾಕರನಂತೆ ಸೇವಾರ್ಥವಾಗಿ ಬಂದ ಜನಗಳೆಲ್ಲವನ್ನು
ಯಥೋಚಿತವಾಗಿ ಸನ್ಮಾನಿಸಿ ಧೈರ್ಯ ತ್ಯಾಗಮಾರ್ಗದಿಂ ರಾಜ್ಯಾಧಿಪತ್ಯವಂ ಮಾಡು
ತ್ತಿದ್ದನು. ಒಂದಾನೊಂದು ಕಾಲದಲ್ಲಾ ಬಲಿಚಕ್ರವರ್ತಿಯು ಅಶ್ವಮೇಧಯಾಗವಂ
ಮಾಡುತ್ತಿರಲು ಜಗನ್ನಾಟಕ ಸೂತ್ರಧಾರಿಯಾದ ಮಹಾವಿಷ್ಣುವು ಜೀವನ್ಮುಕ್ತ
ಸ್ಥಿತಿಯಿಂ ನಿರಪೇಕ್ಷನಾಗಿರುವ ಮಹಾ ಬಲಿಯನ್ನು ಸ್ವರ್ಗ ರಾಜ್ಯಾಧಿಪತ್ಯ ತಪ್ಪಿದ್ದ
ರಿಂದ ದೀನನಾಗಿರುವ ಇಂದ್ರನನ್ನು ನೋಡಿ ಬಲಿಯು ವೈಭವನಂ ಇಂದ್ರನಿಗೆ
ಕೊಡಲು ಇಬ್ಬರ ಮನೋರಥವೂ ಫಲಿಸುವದು. ಸಂದೇಹವಿಲ್ಲದೆ ತನ್ನ ಮಗ
ನಾದ ಇಂದ್ರನಿಗೆ ಆಧಿಪತ್ಯವಾಗಬೇಕೆಂದು ಬೇಡಿಕೊಂಡ ಅದಿತಿದೇವಿಗೆ ತಾನು
ವರವಂಕೊಟ್ಟಿದ್ದು ಸಫಲವಾಗುವದೆಂದಾಲೋಚಿಸಿ ವಾಮನರೂಪದಿಂ ಯಜ್ಞಶಾ
ಲೆಗೆ ಬಂದು ಮೂರು ಹಜ್ಜೆ ಭೂಮಿಯಂ ಕೊಡಬೇಕೆಂದು ಬಲಿಯಂ ಯಾಚಿಸಿ
ಅವನ ಹಸ್ತದಿಂ ತನ್ನ ಹಸ್ತಕ್ಕೆ ದಾನೋದಕವು ಬೀಳಲು ತನ್ನ ತ್ರಿವಿಕ್ರಮಭಾವವಂ
ತೋರುವಂತೆ ಮಹತ್ತರವಾದ ರೂಪವಂ ವಹಿಸಿ ಒಂದು ಪಾದದಿಂ ಭೂಲೋಕ
ವನ್ನೂ ಮತ್ತೊಂದು ಪಾದದಿಂದಂತರಿಕ್ಷ ಲೋಕಗಳನ್ನೂ ಆಕ್ರಮಿಸಿ ಇನ್ನೊಂದು
ಪಾದದಿಂದ ಬಲಿಚಕ್ರವರ್ತಿಯನ್ನೇ ಪಾತಾಳವಂ ಸೇರಿಸಿದನು. ನೆಲಮನೆಯಲ್ಲಿ ಕಪಿ
ಯಂತೆ ಪಾತಾಳದಲ್ಲಿ ನಿಲ್ಲಿಸಲ್ಪಟ್ಟ ಬಲಿಗೆ ಮರಳಿ ಇಂದ್ರಾಧಿಪತ್ಯವಂ ಮಾಡತಕ್ಕ
ಪ್ರಾರಬ್ಧವಿರುವದ್ದರಿಂದವನು ಚಿರಂಜೀವಿಯಾಗುವನು. ಅವನು ಜೀವನ್ಮುಕ್ತನಾ
ದ್ದರಿಂದ ಆಪತ್ತು ಸಂಪತ್ತುಗಳನ್ನು ಸಮವಾಗಿಯೇ ನೋಡುತ್ತಿರುವನು.
ಚಿತ್ರ ಸೂರ್ಯ ಪ್ರಭೆಯಂತೆ ಅವನ ಬುದ್ಧಿಯು ಸುಖ ದುಃಖಗಳಲ್ಲಿ ವಿಕಾರ
ವಂ ಹೊಂದುವದಿಲ್ಲ. ಹತ್ತುಕೋಟಿ ವರುಷಗಳು ತ್ರಿಲೋಕಾಧಿಪತ್ಯವಂ
ಮಾಡಿದ ಆ ಬಲಿಯು ಮನವು ಬಗೆಬಗೆಯಾದ ಪ್ರಾಣಿಗಳ ಉತ್ಪತ್ತಿ ನಾಶ ಪ್ರವಾಹ
ಪರಂಪರೆಯಂ ನೋಡಿ ಬೇಸತ್ತು ವೈರಾಗ್ಯದಿಂ ಶಾಂತವಾದುದು. ಅನೇಕ ಸ್ವ
ಪ್ನಪ್ರಕಾರವಾದ ಊಹಾಪೋಹ ಸುಖದುಃಖ ಸಂಪದ್ವಿಪತ್ತುಗಳ ರೀತಿಯಂ ಕಂಡ
ವನಾದ್ದರಿಂದವನ ಮನಕ್ಕೆ ಮರಳಿ ಎಲ್ಲಿಯೂ ಆಸಕ್ತಿಯಾಗುವದಿಲ್ಲ. ಪರಮಾರ್ಥ
ಜ್ಞಾನದಿಂದಾತ್ಮಾರಾಮನಾದ ಆ ಮಹಾಬಲಿಗೆ ಆಪತ್ಸಂಪತ್ತುಗಳೆಂಬವನು ಮನ

ಗಾಟದ ಮಾತುಗಳಿಂದು ಗೊತ್ತಾಗಿರುವದ್ದರಿಂದ ಈ ಪಾತಾಳಸ್ಥಿತಿಯಿಂದ ದುಃಖವು ರಾಜ್ಯಾಧಿಪತ್ಯಚ್ಯುತಿಯಿಂದ ಸಂತಾಪವು, ಮುಂದೆ ಇಂದ್ರಾಧಿಪತ್ಯ ಬರುವಲ್ಲಿ ಕುತೂಹಲವು ಸಹ ಸಂಭವಿಸುವದಿಲ್ಲ. ಜ್ಞಾನ ಸಮುದ್ರನಾದ್ದರಿಂದಲಾತನು ಬಂದದ್ದಲ್ಲಿವು ತನ್ನ ತರಂಗಗಳಂತಲೇ ನಿಶ್ಚಯಿಸಿ ಸಮಸ್ತ ಭಾವಗಳನ್ನೂ ಸಮದೃಷ್ಟಿಯಿಂದಿರುತ್ತಾ ಪ್ರಕೃತೋಚಿತವಾಗಿ ಬಂದ ಕಾರ್ಯಗಳೆಲ್ಲವನ್ನೂ ನಡಸುತ್ತಿರುವನು. ಈ ಬಲಿಚಕ್ರವರ್ತಿಯ ದೃಷ್ಟಿಯಂ ನೀನು ಪರಿಗ್ರಹಿಸಿದರೆ ಅವನಂತೆ ನೀನು ನಿತ್ಯಾನಂದನಾಗಿರುತ್ತೀಯೆ, ಈ ದೃಶ್ಯದೃಷ್ಟಿಗಳು ದೂರದ ಬೆಟ್ಟಗಳಂತೆಯೇ ಮನೋಹರವಾಗಿರುವವೆಂಬ ನಿಶ್ಚಯಿಸಿ ಅತ್ತಿತ್ತಲೋಡಾಡುತ್ತಿರುವ ಮನವಂ ಹೃದಯದಲ್ಲೇ ನಿಲ್ಲಿಸಿಕೊಳ್ಳುವನಾಗು. ಅಸ್ತೋದಯಗಳಿಲ್ಲದೆ ನಿತ್ಯಪ್ರಕಾಶನಾದ ಜ್ಞಾನಸೂರ್ಯನೇ ನೀನಾಗಿರುವಲ್ಲಿ ನಿನಗೆ ನನ್ನವನಿವನು ಪರಕೀಯ ನಿವನೆಂಬುವನು ಹೇಗೆ ಯೋಗ್ಯವಾದೀತು. ಸಕಲ ಪದಾರ್ಥ ಸ್ವರೂಪದಿಂ ಪ್ರಪಂಚ ರೂಪನಾಗಿ ನೀನೇ ಪ್ರಕಾಶಿಸುತ್ತೀಯೆ. ಸೂತ್ರದಲ್ಲಿ ಮಣಿಗಳಂತೆ ನಿನ್ನಲ್ಲಿಯೇ ಈ ಪದಾರ್ಥಗಳೆಲ್ಲವೂ ತಗಲಿಕೊಂಡಿರುವವು. ವಿಶ್ವತೈಜಸ ಪ್ರಾಜ್ಞವಿರಾಡ್ಡಿರಣ್ಯಗರ್ಭೇಶ್ವರ ರೂಪಗಳಿಂ ವಿಚಿತ್ರವಿಲಾಸನಾಗಿರುವ ಶುದ್ಧ ಚಿನ್ಮಾತ್ರ ಸ್ವರೂಪನಾದ ನಿನಗೆ ಜನನ ಮರಣ ಭ್ರಮೆಗಳು ಹೇಗೆ ಉಂಟಾದವು. ಜನ್ಮರೋಗಗಳ ಬಲಾಬಲಗಳಂ ವಿಚಾರಿಸಿ ನಿಜವಾದ ನಿರಪೇಕ್ಷಾ ರೀತಿಯಿಂದಲೇ ನೀನು ಭೋಗಗಳನ್ನು ಅನುಭವಿಸುವನಾಗು. ಈ ಸಂಸಾರಪ್ರಪಂಚವೆಲ್ಲವೂ ನಿನ್ನ ಸತ್ವವನ್ನವಲಂಬಿಸಿಯೇ ಪ್ರಕಾಶಿಸುತ್ತಿರುವಲ್ಲಿ ಇವುಗಳಿಗೆ ನೀನು ಸ್ವಾಧೀನವಾಗುವದಕ್ಕೆ ಕಾರಣವೇನು. ವೇದವೇದಾಂತ ಶಾಸ್ತ್ರಗಳನ್ನೆಷ್ಟು ಹೊರಗೆ ವಿಚಾರಿಸಿದರೂ ತನ್ನಲ್ಲಿ ಅವುಗಳಂ ಪರಿಭಾವಿಸುತ್ತಾ ಸ್ವಪ್ರಯತ್ನದಿಂದಲೇ ಸ್ವರೂಪವಂ ಯಾವನಿಗೆ ನೋಡಿಕೊಳ್ಳುವದಿಲ್ಲವೋ ಇವನಿಗೆ ಆ ಪರಮಾತ್ಮನ ಪ್ರಸಾದ ಉಂಟಾಗಲಾರದು. ಎಲೈ ರಾಮಭದ್ರನೇ ನೀನು ನೀನಾಗಿಯೇ ಸ್ವಪರಸ್ವ ಭಾವಗಳನ್ನು ವಿಚಾರಿಸುತ್ತಾ ಪರಮಾರ್ಥವಂ ತಿಳಿದವನಾದಾಗ್ಯೂ ನನ್ನ ಮಾತಿನಿಂದಲೇ ನಿಶ್ಚಯವಂ ಪಡೆದವನಾದೆ ಅದು ಕಾರಣ ಸ್ವರೂಪವಂ ತಿಳಿಯಲಿಚ್ಛೆಯುಳ್ಳವನಿಗೆ ಗುರೂಪದೇಶಾದಿ ಬಾಹ್ಯ ವ್ಯಾಪಾರವು ದೃಷ್ಟಿ ದರ್ಶನ ದೃಶ್ಯಭೋಕ್ತೃ ಭೋಗ ಭೋಗ್ಯಾತ್ಮಕವಾದ ಆತ್ಮಾಂತಃಕರಣ ಬಹಿಃಕರಣ ವಿಷಯ ಸಂಬಂಧಗಳಿಂದುಂಟಾದ ಸುಖ ದುಃಖಾದ್ಯಂತರ್ವ್ಯಾಪಾರವೂ ಕೂಡ ಅನಿತ್ಯಕನೆಂದು ತಿಳಿಯತಕ್ಕದ್ದು. ಸಕಲ ವೇದ ವೇದಾಂತಗಳ ಸಾರವಂ ನಾನು

ನಿರೂಪಿಸುವಲ್ಲಿ ಶ್ರವಣ ಮನನ ನಿಧಿಧ್ಯಾಸನಾದಿ ಬಾಹ್ಯಾಂತರ ವ್ಯಾಪಾರಗಳಿಂ ನೀನು ಕೃತಕೃತ್ಯನಾಗಿದ್ದೀಯೆ. ಆದ್ದರಿಂದ ಇಲ್ಲದ ಸುಖ ದುಃಖಾಪೇಕ್ಷೆಗಳಿಂ ನೀನು ವ್ಯಥೆಪಡದೆ ನಿರ್ದುಃಖವಾದ ನಿಜಸುಖದಲ್ಲಿರುವನಾಗು. ಲೌಕಿಕರಿಗೆ ಯಾವದು ಇಷ್ಟವೋ ಅದು ಪಾರಮಾರ್ಥಿಕರಿಗೆ ಅನಿಷ್ಟವಾಗುವದು. ಪಾರಮಾರ್ಥಿಕರಿಗೆ ಯಾವದು ಇಷ್ಟವೋ ಅದು ಲೌಕಿಕರಿಗೆ ಅನಿಷ್ಟವಾಗುವದು. ಪ್ರಕೃತದಲ್ಲಿ ಪಾರಮಾರ್ಥಿಕ ರೀತಿಯೇ ಗ್ರಾಹ್ಯವಾದ್ದರಿಂದ ಅವರಿಗೆ ಇಷ್ಟವಾದ ವಿವೇಕ ವಿಚಾರಾದಿಗಳನ್ನೇ ಗ್ರಹಿಸಿ ಅನಿಷ್ಟವಾದ ವಿಷಯ ಭೋಗಗಳಂ ತ್ಯಜಿಸುವನಾಗು. ಅದರಿಂ ನಿನಗೆ ನಿಜಸ್ವರೂಪ ಪ್ರಕಾಶವಾಗಲು ಪ್ರತ್ಯಗಾತ್ಮನ ಮಹಿಮ ವಿಚಾರದಲ್ಲಿ ಆತ್ಮನಿಗೆ ಭಿನ್ನವಾದ್ದು ಯಾವದೂ ಇಲ್ಲದ್ದರಿಂದ ಇಷ್ಟಾನಿಷ್ಟಭಾವಗಳು ಕಲ್ಪಿತವೆಂದು ಗೊತ್ತಾಗುವದು. ಆಗ ನಿಶ್ಚಿತವಾದ ಸಮದೃಷ್ಟಿಯುಂಟಾಗುವದು. ಬಳಿಕ ಹೃದಯದಲ್ಲಿ ರೂಢಮೂಲವಾದ ಆ ಸಮಭಾವದಿಂ ಮರಳಿ ಅಜ್ಞಾನವು ಜನ್ಮವು ಸಹ ಉಂಟಾಗಲಾರದು. ಯಾವಯಾವದರಲ್ಲಿ ಹುಡುಗನಂತೆ ಮನವು ಬೀಳುವದೋ ಆಯಾಯ ವಿಷಯಗಳಿಂದಾ ಮನವನ್ನೆತ್ತಿ ತತ್ವಾರ್ಥದಲ್ಲಿ ನಿಲ್ಲಿಸಲು ಮದಗಜದಂತೆ ಉನ್ಮರ್ಯಾದವಾಗಿದ್ದ ಆ ಮನವು ಪರಮಾರ್ಥದ ರುಚಿಯಂ ಕಾಣುವದ್ದರಿಂದ ಸ್ವಾಧೀನವಾಗುವದು. ಹೀಗೆ ಸರ್ವಭಾವಗಳಲ್ಲೂ ತಡೆಯಲ್ಪಟ್ಟ ಮನವು ಸರ್ವಾತ್ಮಭಾವ ಭಾವನೆಯಲ್ಲಿ ನಿಂದು ಸರ್ವೋತ್ತಮವಾದ ಶ್ರೇಯಸ್ಸಿಗೆ ಸಾಧಕವಾಗುವದು. ಹೀಗಿರುವದ್ದರಿಂದ ಸಂಕಲ್ಪ ವಿಕಲ್ಪಾಧೀನವಾದ ಮನವುಳ್ಳವರಾಗಿ ದೇಹವನ್ನೇ ಆತ್ಮನೆಂದು ತಿಳಿದಿರುವ ಮೂಢರಿಗೆ ನೀನು ಸರಿಯಾಗದಿರುವನಾಗು. ನೀಚೋಕ್ತಿಗಳನ್ನವಲಂಬಿಸಿ ವಿವೇಕ ವೈರಾಗ್ಯಾದಿಗಳಿಗೆ ದೂರವಾಗಿರುವ ಅಜ್ಞಾನಕ್ಕಿಂತಲೂ ದುಃಖಪ್ರದನಾದ ಶತ್ರುವಿನ್ನೊಂದಿಲ್ಲವೆಂದು ನಿಶ್ಚಯಿಸುವನಾಗು. ಹೃದಯಾಕಾಶದೊಳ್ವ್ಯಾಪ್ತರುವ ಅವಿವೇಕ ಮೇಘವನ್ನು ವಿವೇಕವಾಯುವಿನಿಂದ ಹಾರಿಸಲು ಚಿದಾದಿತ್ಯನ ಪ್ರಕಾಶವು ಚನ್ನಾಗಿ ಪಸರಿಸುವದು. ಬಳಿಕ ಸಂಕಲ್ಪ ವಿಕಲ್ಪ ಸಂದೇಹ ಕುತೂಹಲ ಸ್ವರೂಪವಾದ ಅಂಧಕಾರವು ತೊಲಗುವದು. ಈಗ ನೀನು ನನ್ನ ಉಪದೇಶದಿಂ ತತ್ವಜ್ಞಾನಿಯಾಗಿರುವೆಯಾದ್ದರಿಂದ ಯಾವದನ್ನು ಹೊಳಿಡುತ್ತೀಯೊ, ಯಾವದಂ ರಕ್ಷಿಸುತ್ತೀಯೊ, ಯಾವದಂ ನಿಗ್ರಹಿಸುತ್ತೀಯೊ, ಯಾವದರಲ್ಲಿ ಭೋಗ ಪಡುತ್ತೀಯೊ, ಯಾವದರಲ್ಲಿ ಆಶ್ಚರ್ಯಪಡುತ್ತೀಯೊ, ಯಾವದರಲ್ಲಿ ವೃದ್ಧಿಯಂ ಪಡುತ್ತೀಯೊ, ಯಾವದರಲ್ಲಿ ನೀನು ಪ್ರವರ್ತಿಸುತ್ತೀಯೊ, ಯಾವದರಿಂ ಚಿಂತಿಸುಗುತ್ತೀಯೊ, ಅದೆಲ್ಲವನ್ನು ನಿಜ ಮಹಿಮ ವಿಚಾರದಿಂ

ಬ್ರಹ್ಮವೆಂತಲೇ ತಿಳಿಯುತ್ತಾ ಪರಿಪೂರ್ಣಭಾವದಿಂದಿರುವನಾಗೆಂದು ಶ್ರೀರಾಮಚಂದ್ರನಂ ಕುರಿತು ವಸಿಷ್ಠ ಮಹಾಮುನಿಯು ನಿರೂಪಿಸುತ್ತಿದ್ದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಉಪಶಮ ಪ್ರಕರಣದೊಳ್ ಮಹಾ ಬಲಿಜ್ಞಾನಪ್ರಾಪ್ತಿ ನಿರೂಪಣನೆಂಬ ೫ನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ ಜಯತು.

## ಪ್ರಹ್ಲಾದೋಪಾಖ್ಯಾನ.

### ಗಣೇಶಾಯನಮಃ.

ಅನಂತರದಲ್ಲಿ ವಸಿಷ್ಠನಿಂತೆಂದನು- ಎಲೈ ಶ್ರೀರಾಮಚಂದ್ರನೇ ದೈತ್ಯಾಧಿಪತಿಯಾದ ಪ್ರಹ್ಲಾದನು ಸ್ವೇಚ್ಛಾಪ್ರಯತ್ನದಿಂ ಯಾವ ಪ್ರಕಾರವಾಗಿ ಸಿದ್ಧಿಯಂ ಪಡೆದನೋ ಆ ಜ್ಞಾನಕ್ರಮವಂ ಕೇಳು- ಪೂರ್ವದೊಳ್ ನಾರಾಯಣನಿಗೆ ಸಮಾನವಾದ ಪರಾಕ್ರಮವುಳ್ಳ ಹಿರಣ್ಯಕಶಿಪುವೆಂಬ ದೈತ್ಯೇಶ್ವರನು ಪಾತಾಳಲೋಕದಲ್ಲಿದ್ದನು. ಅವನು ಪರಾಕ್ರಮದಿಂದಾಕ್ರಮಿಸಲ್ಪಟ್ಟ ಲೋಕಗಳುಳ್ಳವನಾಗಿ ಭ್ರಮರದಿಂದಾಕ್ರಮಿಸಲ್ಪಟ್ಟ ಕಮಲವಂ ರಾಜಹಂಸದಂತೆ ಇಂದ್ರನಿಂದನುಭವಿಸಲ್ಪಡುವ ಸ್ವರ್ಗಲೋಕವನ್ನಾಕ್ರಮಿಸಿದನು. ಮತ್ತು ಆ ದೈತ್ಯನು ವಶೀಕೃತರಾದ ಸುರಾಸುರರುಳ್ಳವನಾಗಿ ತಿರಸ್ಕೃತವಾದ ಹಂಸಗಳುಳ್ಳ ಆನೆಯು ಸರೋವರದಲ್ಲಿ ಭ್ರಮರಗಳನ್ನೋಡಿಸಿ ಅವುಗಳ ಆಧಿಪತ್ಯವಂ ವಹಿಸುವಂತೆ ಈ ಪ್ರಪಂಚದಲ್ಲಿ ಲೋಕಾಧಿಪತಿಗಳನ್ನೋಡಿಸಿ ಅವರ ಆಧಿಪತ್ಯವಂ ತಾನೇ ಮಾಡುತ್ತಿದ್ದನು. ಸೂರ್ಯಕಿರಣಗಳಂತೆ ದಿಕ್ಕುಗಳಂ ಬೆಳಗುವ ಪ್ರತಾಪಶಾಲಿಗಳಾದ ಅವನ ಮಕ್ಕಳುಗಳಲ್ಲಿ ಮಣಿಗಳೊಳ್ ಕೌಸ್ತುಭದಂತೆ ಪ್ರಹ್ಲಾದನೆಂಬುವನು ಪ್ರಖ್ಯಾತನಾದನು. ವಸಂತಋತುವಿನಿಂದ ಸಂವತ್ಸರದಂತೆ ಸಕಲ ಸೌಭಾಗ್ಯಯುಕ್ತನಾದ ಆ ಮಗನಿಂದ ಪ್ರಕಾಶಿಸುವ ಹಿರಣ್ಯಕಶಿಪುವು ಇತರರಾದ ಮಕ್ಕಳುಗಳಿಂದಲೂ, ಅವನಿಂದಲೂ, ಸಮೃದ್ಧವಾದ ಕೋಶಬಲಗಳುಳ್ಳವನಾಗಿ ಮದೋನ್ಮತ್ತವಾದ ವನಗಜದಂತೆ ಮೆರೆಯುತ್ತಾ ಪ್ರಳಯಕಾಲದಲ್ಲಿ ಪುಟ್ಟುವ ಸೂರ್ಯರ ಸಮೂಹದಂತೆ ಜಗತ್ತಿಗೆ ಸಂತಾಪವನ್ನುಂಟುಮಾಡುತ್ತಿರಲಾಗ ಅವನಂ ನೋಡುತ್ತಿರುವ ಸೂರ್ಯಚಂದ್ರಮೊದಲಾದ ದೇವತೆಗಳು ದುಷ್ಪುತ್ರನ ಪ್ರಭಾವವಂ ನೋಡುವ ತಂದೆ ತಾಯಿ ಬಳಗಗಳಂತೆ ವ್ಯಥೆಪಡುತ್ತಾ ಮಹಾತ್ಮರಾದಾಗ್ಯೂ ಅವನ ದುಷ್ಕರ್ಮಗಳಂ ಸಹಿಸಲಾರದೆ ಅವನ ಸಂಹಾರಕ್ಕೋಸುಗ ಪರಮೇಶ್ವರನಂ ಪ್ರಾರ್ಥಿಸಿದರು.

ಬಳಿಕ ಜಗದೀಶ್ವರನಾದ ನಾರಾಯಣನು ಪ್ರಳಯಕಾಲದಲ್ಲೊಡೆಯುವ ಬ್ರಹ್ಮಾಂಡದ ಚಟಚಟಾತ್ಕಾರದಂತೆ ಭಯಂಕರವಾದ ಗರ್ಜನೆಯಿಂದಲೂ ದಿಗ್ಗಜಗಳ ದಂತಗಳಂತೆಯೂ, ವಜ್ರಾಯುಧದಂತೆಯೂ, ಕಠಿನವಾದ ನಖಗಳಿಂದಲೂ, ಚಾಂಚಲ್ಯವಂ ಬಿಟ್ಟಿರುವ ಮಿಂಚುಗಳಂತೆಸೆವ ದಂತಗಳಿಂದಲೂ, ಅತಿ ಘೋರವಾಗಿ ತೇಜಸ್ಸಿನಿಂದ ದಶದಿಕ್ಕುಗಳಲ್ಲೂ ಅಗ್ನಿಜ್ವಾಲಾ ಸಮೂಹವನ್ನುಂಟುಮಾಡುತ್ತಾ ಕುಲಾಚಲಗಳ ಆಧಾರ ಪೀಠದಂತೆ ಭೀಕರವಾದ ಹೊಟ್ಟೆಯುಳ್ಳದ್ದಾಗಿ ಮಹತ್ತರವಾದ ವೃಕ್ಷಗಳಂತೆ ದೀರ್ಘವಾದ ತೋಳುಗಳಿಂ ಕೂಡಲ್ಪಡುವ ಬ್ರಹ್ಮಾಂಡಕಪಾಲವುಳ್ಳದ್ದಾಗಿ ನಿಟ್ಟುಸುರಗಳಿಂದ ಪರ್ವತಗಳಂ ಹಾರಾಡಿಸುತ್ತಾ ಸಮಸ್ತಜಗತ್ತುಗಳಂ ದಹಿಸುವ ಪ್ರಳಯಾಗ್ನಿಯಂತೆ ತೇಜೋಭರಿತವಾಗಿ ಕಂಠದ ಹಿಂಭಾಗದಲ್ಲಿರುವ ಜಡೆಗಳ ಪೆಟ್ಟಿನಿಂದ ಸೂರ್ಯಾದಿ ಗ್ರಹಗಳಂ ಕೆಡುವುತ್ತಾ ರೋಮಕೂಪಗಳಿಂ ಪೊರಮಡುವ ಜ್ವಾಲೆಗಳಿಂ ಹೊಂಬಣ್ಣವಾಗಿ ಮಾಡಲ್ಪಟ್ಟ ಸಕಲ ಕುಲಾಚಲಗಳುಳ್ಳಂಥಾದ್ದಾಗಿ ಸರ್ವಾಂಗಗಳಿಂ ಪೊರಮಡುವ ಶಸ್ತ್ರಗಳಿಂದ ಕುಲಪರ್ವತಗಳಂ ದಿಕ್ಕು ದಿಕ್ಕುಗಳಂ ಸೇರಿಸುತ್ತಿರುವಂತೆ ತೋರುವ ಜಗದ್ವ್ಯಾಪಿಯಾದ ನರಸಿಂಹ ರೂಪವಂ ವಹಿಸಿ ರಣಾಂಗಣದೊಳ್ ಮದೋದ್ಧತವಾದ ಗಜವು ತುರಗವಂ ಸೀಳುವಂತೆ ಅತ್ಯಂತವಾದ ಆರ್ಭಟೆಯಿಂದ ಹಿರಣ್ಯಕಶಿಪುವಂ ಸಂಹರಿಸಿ ಕಣ್ಣುಗಳಿಂ ಪೊರಮಡುವ ಅಗ್ನಿಜ್ವಾಲೆಗಳಿಂದ ಪ್ರಳಯ ಕಾಲಾಗ್ನಿಯಂತೆ ಅವನ ಪಟ್ಟಣವಂ ದಹಿಸುತ್ತಿರಲು ಆಗ ಕಲ್ಪಾಂತಕಾಲದ ಮೇಘಗಳ ಗುಡುಗಿನಾರ್ಭಟೆಯಂತೆ ನರಸಿಂಹನು ಭುಜಗಳಂ ತಟ್ಟಿಕೊಳ್ಳುವ ಶಬ್ದವು ಕೇಳುತ್ತಿರಲು ಪ್ರಚಂಡವಾಯುವಿನ ವೇಗದಿಂ ಸೊಳ್ಳೆಗಳಂತೆ ಕೆಲವರೋಡಿಹೋದರು. ಕೆಲವರು ಕಿಚ್ಚಿನೊಳ್ ಪತಂಗಗಳಂತೆ ಆ ನರಸಿಂಹನ ಜ್ವಾಲೆಯಲ್ಲಿ ಬಿದ್ದು ಭಸ್ಮವಾದರು. ಈ ಪ್ರಕಾರ ಅಸುರರ ಪಟ್ಟಣವೆಲ್ಲವನ್ನೂ ಕಲ್ಪಾಗ್ನಿಯಂತೆ ದಹಿಸಿ ದೇವತಾಸಮೂಹಗಳಿಂ ನಾನಾ ಪ್ರಕಾರವಾದ ಸ್ತುತಿಗಳಿಂದ ಶ್ಲಾಘಿಸಲ್ಪಟ್ಟ ಪರಾಕ್ರಮವುಳ್ಳ ಆ ನರಸಿಂಹಸ್ವಾಮಿಯು ಅದೃಶ್ಯವಾಗಲು ಹತಶಿಷ್ಟರಾದ ದೈತ್ಯರು ಪ್ರಹ್ಲಾದನಿಂ ಸಂರಕ್ಷಿಸಲ್ಪಟ್ಟವರಾಗಿ ಶ್ಮಶಾನ ಸದೃಶವಾದ ಆ ಪುರವನ್ನು ಶುಷ್ಕವಾದ ಸರೋವರವಂ ಪಕ್ಷಿಗಳಂತೆ ಪುನಃ ಹೊಂದಿದಂಥಾವರಾಗಿ ಕಾಲೋಚಿತವಾದ ರೋದನಗಳಿಂದ ಮೃತರಾದ ಬಂಧುಗಳ ಸಂಸ್ಕಾರವಂ ಮಾಡಿದರು. ಪ್ರಹ್ಲಾದನು ಬಂಧುನಾಶದಿಂ ದುಃಖಪಡುವ ಆ ಸ್ವಜನರಂ ನಾನಾ ಪ್ರಕಾರವಾದ ಕ್ರಮದಿಂ ಮೆಲ್ಲನೆ ಸಮಾಧಾನ ಪಡಿಸಿದನು. ಆವಾಗ್ಯೂ ಆ ಜನರು ಚಿತ್ರ ಪ್ರತಿಮೆಗಳಂತೆ

ಸ್ತಬ್ಧರಾಗಿರುತ್ತಾ ಮಂಜಿನಿಂದ ಹೊಡೆಯಲ್ಪಟ್ಟ ಕಮಲಗಳಂತೆಯೂ, ಕಡಿಗಿ ...ನಿಂ ಬೆಂಮ ನಿಂದಿರುವ ವೃಕ್ಷಗಳಂತೆಯೂ, ಕಾಣುತ್ತಿರಲು ಮಹಾತ್ಮನಾದ ಪ್ರಹ್ಲಾದನು ದುಃಖಾಕುಲನಾಗಿ ಮನಸ್ಸಿನೊಳಾಲೋಚಿಸಿದನದೆಂತೆನೆ,- ನಾವು ವೃದ್ಧಿ ಹೊಂದುವುದಕ್ಕೆ ಉಪಾಯವೇನು ಅಂಕುರಿಸಿದ ಬೀಜವಂ ಕಪಿಯು ಭಕ್ಷಿಸು ವಂತೆ ಉದಯಿಸುವ ದೈತ್ಯರೆಲ್ಲರನ್ನೂ ನಾರಾಯಣನು ಸಂಹರಿಸುವನು. ಅದ್ದರಿಂದ ಹಿಮಾಚಲದಲ್ಲಿ ಕಮಲಗಳಂತೆ ಬಾಹುಶಾಲಿಗಳಾದ ದೈತ್ಯರು ಯಾರೂ ಈ ಪಾತಾಳ ದಲ್ಲಿ ನಿಲ್ಲುವದಿಲ್ಲ. ಸಮುದ್ರದ ತೆರೆಗಳಂತೆ ಮೊರೆಯುವ ಮಹಾಸುರರು ಅಭ್ಯು ದಯ ಸಮಯದಲ್ಲಿಯೇ ನಷ್ಟರಾಗುವರು. ಒಳಗೂ ಹೊರಗೂ ಕೂಡ ನಮ್ಮ ತೇಜ ವಂ ತಿರಸ್ಕರಿಸುವ ಅಪೂರ್ವವಾದ ಕತ್ತಲೆಯಂತೆ ಶತ್ರುಗಳು ವೃದ್ಧಿಯಂ ಪಡೆವರು. ರಾತ್ರಿಯಲ್ಲಿ ಕಮಲಾಕರಗಳಂತೆ ತಪಸ್ಸಿನಿಂ ಪೂರ್ಣವಾದ ಹೃದಯವುಳ್ಳ ನಮ್ಮ ಮಿತ್ರರು ದುಃಖಪಡುವರು. ಕ್ಷುದ್ರಮೃಗಗಳು ವನವನ್ನಾಕ್ರಮಿಸುವಂತೆ ನಮ್ಮ ತಂದೆಯ ಪಾದಸೇವಕರೇ ನಮ್ಮ ದೇಶವನ್ನಾಕ್ರಮಿಸಿದರು. ಗ್ರೀಷ್ಮಕಾಲದಲ್ಲಿ ನೀರಿಲ್ಲದ ಎಳೆಯಮರಗಳಂತೆ ನಮ್ಮವರು ಶುಷ್ಕರಾದರು. ಪೂರ್ವದಲ್ಲಿ ಧೂಪಧೂ ಮಗಳಂತೆ ಈಗ ನಮ್ಮವರ ಮನೆಗಳಲ್ಲಿ ಭಸ್ಮದಂತಿರುವ ಮಂಜುಗಳು ತುಂಬಿರು ವವು. ಅಂತಃಪುರದ ಗೋಡೆಗಳಲ್ಲಿ ಪೂರ್ವದೋಳ್ ಮರಕತದ ಕಿರಣಗಂತೆ ಈಗ ಹೈರುಪಚ್ಚೆಗಳು ಹುಟ್ಟಿರುವವು. ಲೋಕತ್ರಯವೆಂಬ ಸರಸ್ಸಿನ ಮಧ್ಯದಲ್ಲಿ ಮನ್ದಾರೆಗಳಂತಿದ್ದ ದಾನವರು ದೈನ್ಯವಂ ಹೊಂದಿರುವಲ್ಲಿ ವಿಧಿಗೆ ಯಾವಮತಾನೆ ಅಸಾಧ್ಯವಾದೀತು. ನಮ್ಮ ಸ್ತ್ರೀಯರುಗಳು ಮಾರ್ಗತಪ್ಪಿ ಗ್ರಾಮಕ್ಕೆ ಬಂದ ಹುಲ್ಲೆಗಳಂತೆ ಎಲೆಯಳ್ಳಾಡಿದರುಂ ಭಯಪಡುವರು. ಹಂಗಸರ ಕರ್ಣಾಭರಣ ಕ್ಕೋಸುಗ ಸಿದ್ಧವಾಗಿದ್ದ ಮಣಿಮಯವಾದ ಪೂಗುಚ್ಛಗಳುಳ್ಳ ವೃಕ್ಷಗಳು ಸುರ ರಿಂದ ಕೈಗಳಿಂದ ತೋಟಮರವಾಗಿ ಮಾಡಲ್ಪಟ್ಟವು. ದಿವ್ಯಾಂಬರ ಭೂಷಣ ಗಳಂ ಕೊಡುವ ಮಣಿಮಯವಾದ ಕಲ್ಪವೃಕ್ಷಗಳು ಸುರರ ನಂದನವನವಂ ಹೊಂ ದಿದವು. ಪೂರ್ವದಲ್ಲಿ ನಾವು ದೇವತಾಸ್ತ್ರೀಯರ ಮುಖವಂ ನೋಡುವಂತೆ ಈಗ ನಮ್ಮ ಸ್ತ್ರೀಯರ ಮುಖವಂ ದೇವತೆಗಳು ನೋಡುತ್ತಿರುವರು. ಈಗ ದೇವತಾಗ ಜಗಳ ಗಂಡಸ್ಥಳಗಳಲ್ಲಿ ಗಿರಿಗಳಲ್ಲಿ ಪ್ರವಾಹಗಳಂತೆ ಮದೋದಕಧಾರೆಗಳು ಹರಿ ಯುವವು. ನಮ್ಮ ಆನೆಗಳ ಗಂಡಭಾಗದಲ್ಲಿ ಭಸ್ಮದಂತೆ ಮದದ ಧೂಳಿಯು ಕಾಣು ತ್ತಿರುವದು. ಮಂದಾರಪುಷ್ಪಗಳ ಮಕರಂದಕ್ಕೋಸುಗ ಮಂದಮಾರುತನಿಂ ಸೇವಿಸಲ್ಪಡುವ ದೊಡ್ಡವರಾದ ದಾನವರು ದಿವ್ಯರತ್ನಗಳಂತೆ ದುರ್ಲಭರಾದರು,

ವೃಕ್ಷಗಳನ್ನೆ ಗೊಂಚಲುಗಳಂತೆ ದೇವಗಂಧರ್ವ ಸುಂದರಿಯರೀಗ ಮೇರುಪರ್ವತದಲ್ಲಿ ಸ್ಥಿತಿಯಂ ಪಡೆವರು. ನಮ್ಮ ಅಂತಃಪುರದಲ್ಲಿ ಗೌಡಿಯರಾಗಿದ್ದ ದೇವಕನ್ಯೆಯರು ರಸಹೀನರಾದ ದೈತ್ಯರಾಜ ಸ್ತ್ರೀಯರ ಮೊಗವಂ ನೋಡುತ್ತಾ ನಾನಾಪ್ರಕಾರವಾದ ಆಟಗಳಿಂದ ಪೂರ್ವವಿಲಾಸವನ್ನಣಕಿಸುತ ಧಿಕ್ಕಾರವಂ ಮಾಡುವರು. ನಮ್ಮ ತಂದೆಗೆ ಚಾಮರವಂ ಪಿಡಿದಿದ್ದ ಜನಗಳೇ ಈಗ ಸ್ವರ್ಗದಲ್ಲಿ ದೇವೇಂದ್ರನಿಗೆ ಚಾಮರವಂ ಹಾಕುತ್ತಿರುವರು. ದುಃಸ್ಸಹವಾದ ಪರಾಕ್ರಮವುಳ್ಳ ವಿಷ್ಣುವಿನಿಂದ ಇಂಥಾ ಆಪತ್ತು ನಮಗೆ ಉಂಟಾಯಿತು. ಇವನ ಬಾಹುಚ್ಛಾಯೆಯನ್ನಾಶ್ರೈಸಿದ ದೇವತೆಗಳು ಹಿಮಾಚಲದ ಅರದೊಪ್ಪಲುಗಳಂತೆ ಮೊಗದಾವರೆಯಲ್ಲಿ ತಾವರೆಯಲ್ಲಿ ಮಂಜಿನಂತೆ ಕಣ್ಣೀರು ನಿಂದಿರುವವು. ಈ ಪ್ರಪಂಚವೆಂಬ ಮಂಟಪವು ಒಡೆದುಬಿದ್ದು ಉರುಳುತ್ತಿರುವ ಬ್ರಹ್ಮಾಂಡಗಳೆಂಬ ಬುರುಡೆಗಳಿಂ ಕೂಡಿದ್ದಾಗ್ಯೂ ಆವಿಷ್ಣುವಿನ ಭುಜಗಳೆಂಬ ಇಂದ್ರನೀಲಸ್ತಂಭಗಳ ಆಧಾರದಿಂ ಸ್ಥಿರವಾಗಿರುವದು. ಕ್ಷೀರಸಮುದ್ರದೊಳ್ ಮುಳುಗುವ ಮಂದರಗಿರಿಯಂ ಮಹಾಕೂರ್ಮದಂತೆ ವಿಪತ್ತುಗಳಲ್ಲಿ ಮುಳುಗುವ ದೇವಸಮೂಹವನ್ನೀ ನಾರಾಯಣನುದ್ಧರಿಸುವನು. * ಕಲ್ಪಾಂತವಾತದಿಂ ಗಿರಿಗಳಂತೆ ನಮ್ಮ ತಂದೆ ಮೊದಲಾದವರು ಇವನಿಂದ ಸಂಹೃತರಾದರು. ಅತಿವಿಕ್ರಮವಾಗಿ ದೈತ್ಯರೆಂಬ ವೃಕ್ಷಗಳಿಗೆ ಪರಶುವಾಗಿರುವ ಈ ಪುರುಷೋತ್ತಮನ ಆಶ್ರಯದಿಂ ದೇವೇಂದ್ರನು ಬಾಲಕರಂ ಕಪಿಯಂತೆ ನಮ್ಮಂ ಭಯಪಡಿಸುವನು. ಗಿರಿಗಳಂ ಚಂಡಾಡುವ ಪ್ರಚಂಡರಾದ ನಮ್ಮ ತಂದೆ ಮೊದಲಾದವರಿಂ ಸೆಣಸಿ ವಜ್ರಮಯದಂತೆ ದೃಢವಾದ ಶರೀರವುಳ್ಳ ಆ ನಾರಾಯಣನು ಒಂದುವೇಳೆ ನಿರಾಯುಧನಾಗಿದ್ದಾಗ್ಯೂ ಜಯಿಸಲು ಶಕ್ಯನಾಗುವನೇ? ಅವನೇ ತಾನಾಗಿ ಅವನಂ ಜಯಿಸಬೇಕಲ್ಲದೆ ಮತ್ತೊಂದುಪಾಯವು ತೋರುವದಿಲ್ಲ. ಸರ್ವಪ್ರಕಾರದಿಂದಲೂ ಆ ನಾರಾಯಣನಲ್ಲದೆ ಮತ್ತೊಂದು ಗತಿಯಿಲ್ಲ. ಸಕಲ ಜಗತ್ತುಗಳ ಪ್ರಳಯ ಸ್ಥಿತಿ ಸರ್ಗಗಳಿಗೆ ಕಾರಣನಾದ ಆ ಪುರಾಣಪುರುಷನಗಿಂತ ದೊಡ್ಡವನು ಯಾರೂ ಇಲ್ಲವಾದ್ದರಿಂದವನನ್ನೇ ನಾನು ಶರಣು ಹೊಂದುವೆನು. ವಾಯುವಿಗೆ ಆಕಾಶದಂತೆ ನಮೋ ನಾರಾಯಣಾಯ ಎಂಬ ಮಂತ್ರಕ್ಕೆ ನನ್ನ ಹೃದಯವು ಆಶ್ರಯವಾಗಿರುವದು. ಭೂಮ್ಯಾಕಾಶಗಳು ದಿಕ್ಕುಗಳು ಸಹ ಹರಿಯೇ ಆಗಿರುವನಾದ್ದರಿಂದ ನಾನು ಹರಿಮಯನಾಗಿರುವೆನು. ಈ ಪ್ರಕಾರ ಅಭೇದಜ್ಞಾನದಿಂ ಪೂಜಿಸುವನಿಗೆ ಹರಿ ಪೂಜಾಫಲವ

* ಕಲ್ಪಾಂತವಾತದಿಂ-ಪ್ರಳಯಕಾಲದ ಬಿರುಗಾಳಿಯಿಂದ.

ಬರುವದಲ್ಲದೆ ಮತ್ತೊಬ್ಬನಿಗೆ ಬರಲಾರದು. ಎಂದು ನಿಶ್ಚಯಿಸಿ ಈ ಪ್ರಕಾರ ಭಾವ
ನೆಯಂ ಮಾಡಿದನದೆಂತೆನೆ,— ಶ್ರೀ ಮಹಾವಿಷ್ಣುವೇ ಸರ್ವವ್ಯಾಪಕನಾಗಿರುವದ
ರಿಂದ ಆ ವಿಷ್ಣುವೇ ಪ್ರಹ್ಲಾದರೂಪದಿಂದಿರುವನು. ಪ್ರಹ್ಲಾದನೆಂಬ ನನಗಿಂತ
ಆ ಮಹಾವಿಷ್ಣುವು ಭಿನ್ನನಲ್ಲ. ಕನಕ ಕಾಂತಿಯಾದ ಶರೀರದಿಂದಾಕಾಶವಂ
ವ್ಯಾಪಿಸಿಕೊಂಡಿರುವ ಈ ಗರುಡನೇ ನನಗೆ ಆಸನವಾಗಿರುವನು. ಮರಕತ ಸ್ತಂಭ
ಗಳಂತಿರುವ ಈ ನನ್ನ ಭುಜಗಳು ಬೆರಳುಗಳಲ್ಲಿ ನಿಂದಿರುವ ಶಂಖ ಚಕ್ರಾದ್ಯಾ
ಯುಧಗಳಿಂದಲೂ, ಉಗುರುಗಳ ನಿರ್ಮಲವಾದ ಕಾಂತಿಯಿಂದಲೂ, ಪೂಗುತ್ತಿ
ಗಳಿಂ ಕೂಡಿದ ಕೊಂಬೆಗಳಲ್ಲಿ ಕುಳಿತಿರುವ ಪಕ್ಷಿಗಳಿಂ ಕೂಡಿದ ಕಲ್ಪವೃಕ್ಷಗ
ಳಂತೆ ಪ್ರಕಾಶಿಸುತ್ತಿರುವವು. ಈ ಪಾರ್ಶ್ವದಲ್ಲಿ ಮಹಾಲಕ್ಷ್ಮಿಯು ಚಂದ್ರಕಿರಣ
ದಂತೆ ಶುಭ್ರವಾದ ಚಾಮರದಿಂ ನನ್ನಂ ಸೇವಿಸುತ್ತಿರುವಳು. ಮೂಜಗವೆಂಬ
ವೃಕ್ಷಕ್ಕೆ ಮಂಜರಿಯಂತಿರುವ ಕೀರ್ತಿಲಕ್ಷ್ಮಿಯು ಇತ್ತಲಾಗಿ ನಿಂದಿರುವಳು.
ಜಗದಿಂದ್ರಜಾಲ ವಿಲಾಸಿನಿಯಾದ ಮಾಯೆಯು ಇತ್ತಲಿರುವಳು. ಲೀಲೆಯಿಂದಾ
ಕ್ರಮಿಸಲ್ಪಟ್ಟ ಜಗತ್ತುಗಳುಳ್ಳ ಜಯಲಕ್ಷ್ಮಿಯು ಕಲ್ಪವೃಕ್ಷದೆಡೆಯೊಳ್ ಬಳ್ಳಿ
ಯಂತೆ ಇಲ್ಲಿ ಸಿದ್ಧವಾಗಿರುವಳು. ಸೂರ್ಯ ಚಂದ್ರಾತ್ಮಕವಾದ ಈ ನನ್ನ ಕಣ್ಣು
ಗಳೇ ಜಗತ್ತಿಗೆ ಸಾಕ್ಷಿಗಳಾಗಿರುವವು. ದಿಕ್ಕುಗಳೆಲ್ಲವನ್ನೂ ಹಸುರಾಗಿಮಾಡುವ
ಈ ನನ್ನ ದೇಹದ ಕಾಂತಿಯು ಯಮುನಾ ಪ್ರವಾಹದಂತೆ ಪ್ರಸರಿಸುವದು.
ಈ ನನ್ನ ಹಸ್ತದಲ್ಲಿ ರೂಪವಂ ವಹಿಸಿದ ಆಕಾಶದಂತೆ ಶಬ್ದಗುಣವಾದ ಪಾಂಚಜನ್ಯವು
ಕಮಲದಲ್ಲಿ ಹಂಸದಂತೆ ಪ್ರಕಾಶಿಸುತ್ತಿಹುದು. ಕರ್ಣಿಕಾ ಭಾಗದಲ್ಲಿರುವ ಬ್ರಹ್ಮ
ನುಳ್ಳ ಈ ನಾಭೀಕಮಲವು ಭ್ರಮರ ಗರ್ಭವಾದ ಕಮಲದಂತೆ ಈ ಹಸ್ತದಲ್ಲಿ
ಶೋಭಿಸುತ್ತಿರುವದು. ಮೇರು ಶಿಖರದಂತೆ ರತ್ನಮಯವಾಗಿರುವ ಕೌಮೋ
ದಕಿಯೆಂಬ ಗದೆಯು ಈ ಕೈಯಲ್ಲಿರುವದು. ಪ್ರಳಯಕಾಲದ ಮಾರ್ತಾಂಡ ಮಂ
ಡಲದಂತೆ ಜ್ವಾಲೆಗಳಿಂ ದಿಕ್ಕುಗಳಂ ತುಂಬುವ ಸುದರ್ಶನವು ಈ ಪಾಣಿಯಲ್ಲಿರು
ವದು. ಅಸುರರೆಂಬ ತರುಗಳಿಗೆ ಪರಶುವಾದ ನಂದಕವೆಂಬ ಖಡ್ಗವು ಧೂಮಾ
ವೃತವಾದ ಅಗ್ನಿಜ್ವಾಲೆಯಂತೆ ಕಪ್ಪಾಗಿ ಕಾಣುತ್ತಿಹುದು. ಪ್ರಳಯಕಾಲದ
ಮೇಘವು ಮಳೆಯಂ ಕರೆಯುವಂತೆ ಬಾಣಗಳಂ ವರ್ಷಿಸುವ ಶಾರ್ಙ್ಗವೆಂಬ
ಧನುವು ನೀಲಮೇಘದಲ್ಲಿ ಇಂದ್ರಚಾಪದಂತೆ ನನ್ನಲ್ಲಿ ಪೊಳೆಯುತ್ತಿರುವದು. ಭೂತ
ಭವಿಷ್ಯದ್ವರ್ತಮಾನಗಳಾದ ಜಗತ್ತುಗಳಂ ನಾನೇ ವಹಿಸಿ ಸಂರಕ್ಷಿಸುವೆನು.
ನನಗೆ ಈ ಭೂಮಿಯೇ ಕಾಲುಗಳು, ಗಗನವೇ ಶಿರಸ್ಸು, ದಿಕ್ಕುಗಳೇ ಕುಕ್ಷಿಯು,

ನೀಲಮೇಘಶ್ಯಾಮಳನಾಗಿ ಗರುಡಾರೂಢನಾಗಿರುವ ನಾರಾಯಣನೇ ನಾನು! ನನ್ನ ಭಯದಿಂದೀ ದೇವಶತ್ರುಗಳು ವಾಯುವೇಗದಿಂ ಶುಷ್ಕವಾದ ತೃಣರಾಶಿಗಳಂತೆ ಹಾರಿಹೋಗುತ್ತಿರುವರು. ಕಾಲಾಗ್ನಿಯಂ ಶಲಭದಂತೆ ಯಾವ ವಿರೋಧಿಯು ನನ್ನಂ ಹೊಂದಿ ಭಸ್ಮವಾಗದೆ ಪೋಗುವನು? ಪ್ರಚಂಡ ಮಾರ್ತಾಂಡ ಮಂಡಲವನ್ನು ಕಣ್ಣಿಸದ್ರವದ ಜನಗಳಂತೆ ಸುರಾಸುರರೆಲ್ಲರೂ ನನ್ನಂ ನೋಡಲಾರದೆ ಸ್ತಬ್ಧರಾಗಿ ನಿಂದಿರುವರು. ಚತುರ್ಮುಖ ಪಂಚಮುಖಾದಿ ದೇವತೆಗಳು ಬಹುಮುಖವಾಗಿ ಪೊರಮಡುವ ವೇದೋಕ್ತವಾದ ಸ್ತುತಿಗಳಿಂದ ನನ್ನಂ ಸ್ತುತಿಸುತ್ತಿರುವರು. ವಾಙ್ಮನಸ್ಸುಗಳಿಗೆ ಅಗೋಚರವಾದ ಮಹಿಮೆಯಿಂದ ಸಮಸ್ತವಾದ ದ್ವಂದ್ವಗಳನ್ನು ಅತಿಕ್ರಮಿಸಿ ಅಪ್ರಮೇಯನಾಗಿರುವೆನು. ಸಕಲ ಪ್ರಪಂಚಕ್ಕೂ ಬೇರೇಗತಿ ಇಲ್ಲದ್ದರಿಂದ ಸರ್ವವ್ಯಾಪಿಯಾದ ಜಗದ್ರಕ್ಷಿಯಾಗಿರುವ ನನ್ನ ಶರೀರವಂ ನಾನೇ ನಮಿಸುವೆನೆಂದು ಭಾವಿಸುತ್ತಾ ನಾರಾಯಣನಂ ಪೂಜಿಸಲೋಸುಗ ಮರಳಿ ಮನದೊಳಾಲೋಚಿಸಿದನದೆಂತೆನೆ,- ಪ್ರಾಣಾಪಾನ ಪ್ರವಾಹರೂಪವಾದ ನಿಶ್ವಾಸೋಚ್ಛ್ವಾಸಗಳೆಂಬ ಪುಷ್ಪಗಳಿಂ ಪೂಜಿಸಲ್ಪಡುವ ಪುರುಷ ರೂಪನಾದ ನಾರಾಯಣನೇ ನಾನಾಗಿರುವೆನು. ನನಗೆ ಅಭಿನ್ನನಾಗಿ ಕಾಲರೂಪದಿಂ ಹೊರಗೆ ಪ್ರಕಾಶಿಸುವ ಮಹಾ ವಿಷ್ಣುವಂ ನಾನು ಪೂಜಿಸುವೆನು. ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಅನುಗ್ರಹಶಕ್ತಿಗಳೆಂಬ ನಾಲ್ಕು ಶಕ್ತಿಗಳಿಂ ಸಹಿತನಾಗಿ ಆಕಾಶದ ಶಬ್ದಗುಣಕವಾದ ಶಂಖವನ್ನು ಭಕ್ತರಿಗೆ ಶುಭಕರವಾದ ದರ್ಶನವುಳ್ಳ ಸುದರ್ಶನವನ್ನೂ, ಅಸುರರ ಗರ್ವಾಂಧಕಾರಕ್ಕೆ ಶರತ್ಕಾಲದ ಕೌಮುದಿಯಂತಿರುವ ಕೌಮೋದಕಿಯೆಂಬ ಗದೆಯನ್ನೂ, ದೇವಕುಲಕ್ಕೆ ಆನಂದಕರವಾದ ನಂದಕವೆಂಬ ಖಡ್ಗವನ್ನೂ ಧರಿಸಿ ಶಾರ್ಙ್ಗವೆಂಬ ಧನುವಂ ಪಿಡಿದು ಕನಕರುಚಿಯಾದ ಗರುಡನ ಮೇಲೆ ಕುಳಿತಿರುವದ್ದರಿಂದ ಸುಮೇರು ಪರ್ವತದ ಮೇಲಿರುವ ಮೇಘದಂತೆಸೆವ ಲಕ್ಷ್ಮೀ ಸಹಾಯನಾದ ನಾರಾಯಣನೇ ನನಗೆ ಪ್ರತ್ಯಕ್ಷನಾಗಿರುವನು. ಇವನ ನಾನು ಪೂಜಿಸುತ್ತಲಿದೇನೆ ಎಂದು ಸಂಕಲ್ಪಿಸಿ ಮನದಿಂ ಕಲ್ಪಿತವಾಗಿ ಮಣಿಮಯವಾದ ಪಾತ್ರೆಗಳಲ್ಲಿ ಸಿದ್ಧವಾಗಿರುವ ಮನೋಹರವಾದ ಪೂಜಾದ್ರವ್ಯಗಳಿಂ ಪೂಜಿಸುತ್ತಾ ಇದೇಪ್ರಕಾರ ದೇವಗೃಹದಲ್ಲಿ ಬಾಹ್ಯಪೂಜೆಯಂ ಮಾಡುತ್ತಲೂ, ಸರ್ವಕಾಲದಲ್ಲೂ ಅತ್ಯಂತ ಭಕ್ತಿಯಿಂದ ನಾರಾಯಣ ಪರಾಯಣನಾಗಿದ್ದನು. ಜನರ ಆಚಾರಕ್ಕೆ ರಾಜನೇ ಕಾರಣನಾದ್ದರಿಂದ ಆ ಲೋಕದ ಜನರೆಲ್ಲರಿಗೂ ತಾಮಸ ರಾಜಸಾಚಾರಗಳು ತಪ್ಪಿ ಸಾತ್ವಿಕಾಚಾರಗಳಿಂದ ಮಹಾವಿಷ್ಣು ಭಕ್ತರಾ

ಪ್ರಸಿದ್ಧಿಯುಂಟಾದುದು. ಅದಂ ಕೇಳಿದ ದೇವತೆಗಳು ಆಶ್ಚರ್ಯಪಟ್ಟು ಕ್ಷೀರ ಸಮುದ್ರಕ್ಕೆ ಹೋಗಿ ಅಲ್ಲಿ ಶೇಷಶಾಯಿಯಾದ ಲಕ್ಷ್ಮೀಪತಿಯಂ ಕಂಡು ವಿಜ್ಞಾಪಿಸಿದರವೆಂತೆನೆ,- ಎಲೈ ಜಗದೀಶ್ವರನೇ ಯಾರು ನಿನಗೆ ಸರ್ವದಾ ವಿರೋಧಿಗಳಾಗಿರುವರೋ ಆ ಅಸುರರು ನಿನ್ನಲ್ಲಿ ಪರಮಭಕ್ತಿಯಿಂದ ನಿನ್ನ ಸ್ವರೂಪವಂ ಹೊಂದಿರುವರು. ಇದೇನೋ ಮಾಯೆಯೆಂದು ತೋರುತ್ತಲಿದೆ. ದುರಾಚಾರ ಪರಾಯಣರಾಗಿ ಗಿರಿನಗರಾದಿಗಳಂ ಸೀಳುತ್ತಲಿರುವ ದಾನವರೆಲ್ಲ ಕೊನೇಜನ್ಮವಂ ಪಡದು ಮುಕ್ತರಾಗುವ ಜನರಿಗೆ ಸುಲಭವಾದ ನಿನ್ನ ಭಕ್ತಿಯಲ್ಲಿ ಸಾಧಾರಣರಾದವರು ಮಹಾತ್ಮರಾದರೆಂಬ ಈ ವಾರ್ತೆಯು ಅಕಾಲದ ಕುಸುಮಮಾಲೆಯಂತೆ ಆಶ್ಚರ್ಯಕರವಾಗಿಯೂ, ಭಯಂಕರವಾಗಿಯೂ ಇರುವದು. ಯಾವದು ಎಲ್ಲಿ ಇರತಕ್ಕದ್ದೋ ಅದು ಅಲ್ಲಿರುವದೇ ಯುಕ್ತವಾದ್ದರಿಂದ ಗಾಜುಗಳ ಗುಂಪಿನಲ್ಲಿ ಅಮೂಲ್ಯವಾದ ಮಣಿ ಇರುವುದೆಂಬಂತೆ ಇದು ಅನುಪಪನ್ನವಾಗಿರುವದು. ಯಾವ ಪ್ರಾಣಿ ಎಂಥಾ ಗುಣವುಳ್ಳಂಥಾದ್ದೋ ಅದಕ್ಕೆ ಅನುಗುಣವಾದ ಸ್ಥಿತಿಯನ್ನೇ ಆ ಪ್ರಾಣಿಯು ಹೊಂದುವದ್ದರಿಂದ ಮೇಕೆಗಳಿಗೆ ಆಕಾರ ಪ್ರಮಾಣದಿಂ ಸಾಮ್ಯವಿದ್ದಾಗ್ಯೂ ಅವುಗಳ ಮಧ್ಯದಲ್ಲಿ ನಾಯಿ ವಿಹರಿಸುವದಿಲ್ಲ. ಸರಿಯಾಗದ ಗುಣಗಳುಳ್ಳ ವಸ್ತುಗಳ ದರ್ಶನದಿಂ ವ್ಯಥೆಯಾಗುವಂತೆ ಶರೀರವಂ ಚುಚ್ಚುತಲಿರುವ ಮಚ್ಛ್ರಸೂಜಿಗಳಿಂದಲೂ ಕೂಡ ವ್ಯಥೆ ಉಂಟಾಗುವದಿಲ್ಲ. ಎಲ್ಲಿ ಯಾವದು ಕ್ರಮವಾಗಿ ಬಂದಿರುವದೋ ಅದು ಅಲ್ಲಿಯೇ ಶೋಭಿಸುವದಾದ್ದರಿಂದ ಜಲಜವು ಜಲದಲ್ಲಿ ಶೋಭಿಸುವದಲ್ಲದೆ ಸ್ಥಳದಲ್ಲಿ ಶೋಭಿಸದು. ನೀಚವಾದ ಕರ್ಮದಲ್ಲಿ ನಿತ್ಯಾಸಕ್ತಿಯುಳ್ಳ ದೈತ್ಯಜಾತಿಯಲ್ಲಿ ಸದಾಚಾರ ಪರಾಯಣವಾದ ವೈಷ್ಣವ ಭಕ್ತಿಯೆಲ್ಲಿ ಊಷರಭೂಮಿಯಲ್ಲಿ ತಾವರೆ ಬಳ್ಳಿ ಎಲ್ಲಿ? ಎಂಬಂತೆ ದೈತ್ಯಜಾತಿಯಲ್ಲಿ ವಿಷ್ಣುಭಕ್ತಿ ಮಿಂಚುವದು ನಮಗೆ ಭಯಂಕರವಾಗಿರುವದು ಎಂದು ದೇವತೆಗಳು ವಿಜ್ಞಾಪನೆಯಂ ಮಾಡುತ್ತಿರಲು, ನವಿಲುಗಳು ಕೂಗುತ್ತಿರುವಲ್ಲಿ ನೀಲಮೇಘವು ಗುಡುಗುವಂತೆ ನಾರಾಯಣನು ಆಜ್ಞಾಪಿಸಿದನು. ಎಲೈ ದೇವತೆಗಳಿರಾ! ನೀವು ಭಯಪಡಬೇಡಿ ಪ್ರಹ್ಲಾದನಿಗೆ ಇದೇ ಕೊನೇ ಜನ್ಮವಾದ್ದರಿಂದ ಮುಕ್ತಿಸಾಧನವಾದ ನನ್ನ ಭಕ್ತಿಯುಂಟಾಗಿರುವದು. ಹುರಿದ ಬೀಜವು ಹೇಗೆ ಅಂಕುರಿಸುವುದಿಲ್ಲವೋ ಹಾಗೆ ಪ್ರಹ್ಲಾದನು ಮುಂದಿನ ಜನ್ಮವಂ ಪಡೆಯುವದಿಲ್ಲ. ಗುಣವಂತನು ನಿರ್ಗುಣನಾಗುವದು ಅನರ್ಥಕ್ಕೆ ಕಾರಣವಾಗುವದಲ್ಲದೆ ನಿರ್ಗುಣನು ಗುಣವಂತನಾಗುವದು ಅನರ್ಥ ಕಾರಣವಾಗಲಾರದು. ಇದು ಸಿದ್ಧಿಕ್ರಮವಾದ್ದರಿಂದ ಈ ವಿಷಯ

ದಲ್ಲಿ ನೀವು ದುಃಖಪಡದೆ ನಿಮ್ಮ ನಿಮ್ಮ ಸ್ಥಾನದಲ್ಲಿ ಸುಖದಿಂದಿರುವರಾಗಿ. ಎಂದು ಆಜ್ಞಾಪಿಸಿ ಮಹಾವಿಷ್ಣುವು ಅಂತರ್ಧಾನವಾಗಲು ಕ್ಷೀರ ಸಮುದ್ರದಲ್ಲಿ ಸೇರಿದ್ದ ಹೊರಗಣ ಪದಾರ್ಥಗಳು ಮಂದರಗಿರಿಯಿಂ ಮಥಿಸಲ್ಪಡುವ ಆ ಸಮುದ್ರದಿಂ ಹೊರಕ್ಕೆ ಬರುವಂತೆ ದೇವತೆಗಳು ಮರಳಿ ನಾಗಲೋಕವನ್ನೈದಿದರು. ಲೋಕ ದಲ್ಲಿ ದೊಡ್ಡವರು ಸಮ್ಮತಿಸಿದ ವಿಷಯವನ್ನಿತರರು ನಂಬುವರಾದ್ದರಿಂದ ಮಹಾ ವಿಷ್ಣುವಿಗೆ ಸಮ್ಮತನಾದ ಪ್ರಹ್ಲಾದನಲ್ಲಿ ದೇವತೆಗಳು ದ್ವೇಷವಂ ಬಿಟ್ಟು ಮಿತ್ರ ಭಾವದಿಂದಿರುತ್ತಿದ್ದರು. ಇತ್ತ ಪ್ರಹ್ಲಾದನು ಕಾಯವಾಙ್ಮನಸ್ಸುಗಳಿಂದ ನಾರಾ ಯಣ ಪರಾಯಣನಾಗಿ ಅವನ ಪೂಜಾದಿಗಳಲ್ಲಿಯೇ ಆಸಕ್ತನಾಗಿರಲು ಆ ಮಹಾ ಮತಿಗೆ ಕ್ರಮವಾಗಿ ನಿತ್ಯಾ ನಿತ್ಯ ವಸ್ತು ವಿವೇಕ ಮೊದಲಾದ ಸದ್ಗುಣಗಳುಂಟಾ ದವು ಅದೆಂತೆನೆ,- ಈ ಪ್ರಹ್ಲಾದನು ಶಾಸ್ತ್ರವಿಚಾರಾಸಕ್ತನಾಗಿ ನಗರ ಭೂಮಿಗಳಲ್ಲಿ ವನಮೃಗದಂತೆ ಮನೋಹರರಾದ ಸ್ತ್ರೀಯರುಗಳಲ್ಲಿ ಆಸಕ್ತನಾಗಲಿಲ್ಲ. ಸ್ಥಳದಲ್ಲಿ ತಾವರೇಬಳ್ಳಿಯಂತೆ ಅವನಿಗೆ ದೃಶ್ಯಪದಾರ್ಥದಲ್ಲಿ ರತಿಯುಂಟಾಗಲಿಲ್ಲ, ಮತ್ತು ಅವನ ಮನವು ಎಜ್ಜವಿಲ್ಲದೆ ಮುತ್ತಿನೋಳ್ ಮುತ್ತಿನಂತೆ ಯಾವ ಭೋಗದಲ್ಲೂ ಸಂಬಂಧಿಸಲಿಲ್ಲ. ಭೋಗಾದಿ ಕಲ್ಪನೆಯಂ ಬಿಟ್ಟಾಗ್ಯೂ ವಿಶ್ರಾಂತಿಯಂ ಹೊಂದ ದಿರುವ ಅವನ ಮನವು ಉಯ್ಯಾಲೆಯಲ್ಲಿ ಕುಳಿತಿರುವಂತೆ ಚಂಚಲವಾಗಿದ್ದುದು. ಇದಂ ತಿಳಿದ ಸರ್ವಜ್ಞನಾದ ನಾರಾಯಣನು ಅನುಗ್ರಹಿಸಲಿಚ್ಛೆಯಿಂದ ಪೂಜಾಗೃಹ ದಲ್ಲಿದ್ದ ಆ ಪ್ರಹ್ಲಾದನಿಗೆ ಪ್ರತ್ಯಕ್ಷನಾದನು. ಆಗ ಪ್ರಹ್ಲಾದನು ಮೂಜಗದಲ್ಲಿ ರುವ ಸೌಂದರ್ಯಗಳೆಂಬ ರತ್ನಗಳಿಗೆ ಜೊಕ್ಕಸವಾಗಿ ನಕ್ಷತ್ರಗಳಂತಿರುವ ನಖ ಗಳಿಂದಲೂ ಪೂರ್ಣಚಂದ್ರನಂತಿರುವ ಮುಖದಿಂದಲೂ, ಶರತ್ಕಾಲದ ಗಗನತಲದಂ ತೆಯೂ ಪ್ರಕಾಶಿಸುತ್ತಾ ವೇದಮಯವಾದ ಝುಂಕಾರದಿಂ ಮನೋಹರವಾದ ಬ್ರಹ್ಮ ನೆಂಬ ಭ್ರಮರದಿಂ ಪೂರ್ಣವಾದ ನಾಭೀ ಕಮಲವುಳ್ಳವನಾಗಿ ಸಂಧ್ಯಾರಾಗದಂತೆ ಕೆಂಪಾದ ಗಂಧದಿಂದಲೂ, ಕನಕರುಚಿಯಾಗಿ ಮಿಂಚಿನಂತೆ ಪೊಳೆಯುವ ವಸ್ತ್ರದಿಂ ದಲೂ, ಗಂಗಾ ಪ್ರವಾಹದಂತೆಸೆವ ಮುಕ್ತಾಸರಗಳಿಂದಲೂ, ಉದಯಿಸುವ ಸೂರ್ಯಬಿಂಬದಂತಿರುವ ಕೌಸ್ತುಭದಿಂದಲೂ, ಅಲಂಕೃತನಾಗಿ ವನಮಾಲೆಗೆ ಸಖಿ ಯಾದ ಮಹಾಲಕ್ಷ್ಮಿಯಿಂ ಭೂಷಿತನಾಗಿ ವಿಶಾಲವಾಗಿರುವ ವಕ್ಷಸ್ಥಳವುಳ್ಳವ ನಾಗಿ ಜಯಲಕ್ಷ್ಮಿಗೆ ಅವಲಂಬನವಾದ ಹೆಗಲುಗಳುಳ್ಳವನಾಗಿ ಅಸುರರಿಗೆ ಧೂಮ ಕೇತುಗಳಂತೆಯೂ, ಸುರರಿಗೆ ಪೂರ್ಣ ಚಂದ್ರಗಳಂತೆಯೂ, ಪ್ರಕಾಶಿಸುತ್ತಿರುವ ಶಂಖ ಚಕ್ರಾದ್ಯಾಯುಧಗಳಿಂದಲಂಕೃತವಾದ ಹಸ್ತಗಳುಳ್ಳವನಾಗಿ ಮುಂಭಾಗ

ದೊಳ್ಪ್ರಕಾಶಿಸುವ ಪುಂಡರೀಕಾಕ್ಷನಂ ಕಂಡು ಅಪರಿಮಿತವಾದ ಸಂತೋಷದಿಂ ಪರಿಪರಿಯಾಗಿ ಪೂಜಿಸಿ ಸಕಲ ಜಗತ್ಕಾರಣ, ಶರಣಾಗತಜನ ಭರಣ ಪರಾಯಣ, ಕರುಣಾನಿಧಿಯೇ, ಅನನ್ಯ ಶರಣನಾದ ನನ್ನಂ ಸಂರಕ್ಷಿಸೆಂದು ಸಾಷ್ಟಾಂಗಪ್ರಣಾಮವಂಗೈದು ಶರಣುಹೊಂದಲು, ಆಗ ಕರುಣಾಶಾಲಿಯಾದ ನಾರಾಯಣನು ಎಲೈ ಬಾಲಕನೆ ನಿನಿಗೆ ಬೇಕಾದುದಂ ವರಿಸುವನಾಗೆಂದು ನುಡಿಯಲು ಆ ಪ್ರಹ್ಲಾದನು ಮೇಘಧ್ವನಿಯಿಂದ ನವಿಲಿನಂತೆ ಆ ನಾರಾಯಣನ ಮಾತಿನಿಂದ ಸಂತುಷ್ಟನಾಗಿ ಎಲೈ ದೀನಬಂಧುವೇ ಸರ್ವಜ್ಞನಾದ ನಿನಗೆ ಯಾವದು ಸರ್ವೋತ್ತಮವೆಂದು ವಿದಿತವಾಗಿದೆಯೋ ಅದಂ ನನಿಗೆ ಕೊಡುವನಾಗೆಂದು ಬೇಡಿಕೊಳ್ಳಲು, ಆಗ ಸಂತುಷ್ಟನಾದ ಲಕ್ಷ್ಮೀಪತಿಯು ಎಲೈ ವತ್ಸನೆ ಸಮಸ್ತವಾದ ಅನರ್ಥಗಳ ಶಾಂತಿಗೋಸುಗವೂ ಪರಮಾರ್ಥಪ್ರಾಪ್ತಿಗೋಸುಗವೂ ಬ್ರಹ್ಮದಲ್ಲಿ ನಿನಿಗೆ ವಿಶ್ರಾಂತಿಯಾಗುವ ಪರ್ಯಂತವಾಗಿ ವಿಚಾರ ಉಂಟಾಗಲೆಂದು ಪೇಳಿದನೆಂದು ವಸಿಷ್ಠನು ಶ್ರೀರಾಮನಂ ಕುರಿತು ಪೇಳಿದನೆಂಬಲ್ಲಿಗೆ ಜ್ಞಾನಯೋಗ ತರಂಗಿಣಿಯಲ್ಲಿ ಮಂಗಳಮಸ್ತು ಶ್ರೀ.

## ಪ್ರಹ್ಲಾದ ವಿಚಾರಕ್ರಮ ನಿರೂಪಣ ಪ್ರಾರಂಭವು.

ಶ್ರೀ ಗಣಾಧಿಪತಯೇನಮಃ.

ಅನಂತರದಲ್ಲಿ ವಸಿಷ್ಠನಿಂತೆಂದನು- ಎಲೈ ರಘುಪುಂಗವನೆ! ನಾರಾಯಣನ ವರದಿಂದ ಆನಂದ ಭರಿತನಾದ ಪ್ರಹ್ಲಾದನು ಆ ಲಕ್ಷ್ಮೀಪತಿಗೆ ಸಾಷ್ಟಾಂಗವಾಗಿ ನಮಿಸಿ ಅವನು ಅಂತರ್ಧಾನವಾದ ಬಳಿಕ ಪದ್ಮಾಸನದಲ್ಲಿ ಕುಳಿತು ಆ ಪರಮಾತ್ಮನ ಸ್ತುತಿಯಂ ಪಠಿಸುತ್ತಾ ಮನಸ್ಸಿನಲ್ಲಾಲೋಚಿಸಿದನದೆಂತೆನೆ,- ಸಕಲ ಜಗನ್ನಾಯಕನಾದ ನಾರಾಯಣನು ನಿನಗೆ ಆತ್ಮ ವಿಚಾರವೇ ಉಂಟಾಗಲೆಂದು ವರವಂ ಕೊಟ್ಟನಲ್ಲವೇ ಆದ್ದರಿಂದ ನಾನು ಆತ್ಮವಿಚಾರವಂ ಮಾಡುವೆನು. ಈ ಲೋಕದಲ್ಲಿ ಮಾತನಾಡುವೆನು. ಪೋಗುವೆನು, ನಿಲ್ಲುವೆನು, ವಿಷಯಗಳಂ ಭುಂಜಿಸುವೆನೆಂದು ನಾನಾವಿಧ ವ್ಯಾಪಾರಗಳಲ್ಲಿ ಪ್ರವರ್ತಿಸುವೆನಷ್ಟೆ? ಇಲ್ಲಿ ನಾನೆನಿಸಿಕೊಳ್ಳುವ ಪದಾರ್ಥವು ಯಾವುದು. ನಾನು ನನ್ನದೆಂದು ಎರಡು ಪ್ರಕಾರವಿಂ ಪದಾರ್ಥವಂ ಭಾಗಿಸುವಲ್ಲಿ ನನ್ನದೆಂಬುದಕ್ಕೆ ವಿಷಯವಾದ ಈ ಪ್ರಪಂಚವು ಅತ್ಯಂತ ಬಾಹ್ಯವಾದ್ದರಿಂದ ನಾನಲ್ಲ. ಉತ್ಪತ್ತಿ ಮೊದಲಾದ ವಿಕಾರಗಳಿಂ ಕೂಡಿ ಸ್ವತಃ ಮಾತನಾಡುವದಕ್ಕೆ ಯೋಗ್ಯತೆಯಿಲ್ಲದೆ ವಾಯುವಿನಿಂದ ಅಲಿಸುತ್ತಾ ಸ್ವಲ್ಪ

ಕಾಲದಲ್ಲಿ ಕ್ಷೀಣವಾಗುವಂಥಾ ಅಚೇತನವಾದ ಶರೀರವು ನಾನೆನಿಸಿಕೊಳ್ಳಲಾರದು. ಜಡವಾದ ಕರ್ಣದಿಂ ಕಲ್ಪಿತವಾದಂಥಾ ಶೂನ್ಯವಾದ ಆಕಾಶದಿಂ ಪುಟ್ಟುವ ಶಬ್ದವು ನಾನಲ್ಲ. ತ್ವಕ್ಕಿನಿಂದ ತಿಳಿಯಲು ಯೋಗ್ಯವಾಗಿ ಚಿದ್ರೂಪನಾದ ಆತ್ಮನ ಪ್ರಸಾದದಿಂ ಸ್ವರೂಪ ಯೋಗ್ಯತೆಯಂ ಪಡೆದಿರುವ ಸ್ಪರ್ಶವು ನಾನಲ್ಲ. ಚಪಲವಾದ ನಾಲಿಗೆಯಿಂ ಗ್ರಹಿಸಲು ಯೋಗ್ಯವಾಗಿ ದ್ರವ್ಯಗಳಲ್ಲಿರುವಂಥಾ ಕ್ಷಣಿಕವಾದ ರಸವು ನಾನಲ್ಲ. ಘ್ರಾಣೇಂದ್ರಿಯದಿಂ ಕಲ್ಪಿತವಾಗಿ ಒಂದು ಕ್ಷಣವಾದರೂ ಏಕರೀತಿಯಾಗಿರಲಾರದಂಥಾ ಗಂಧವು ನಾನಲ್ಲ. ಜ್ಞಾನೇಂದ್ರಿಯಗಳೇ ನಾನೆನಿಸಿಕೊಳ್ಳಲಾರದೆ ಇರುವಲ್ಲಿ ಕರ್ಮೇಂದ್ರಿಯಗಳಿಗೂ ಅವುಗಳ ವಿಷಯಗಳಿಗೂ ಯಾವ ಯೋಗ್ಯತೆ ಇರುವದು? ಜಡವಾದ್ದರಿಂದ ಅಂತಃಕರಣಗಳು ಪ್ರಾಣಗಳು ಸಹ ನಾನೆನಿಸಿಕೊಳ್ಳಲಾರವು. ಜಡವಾದ ಇವುಗಳಿಗೆ ಸ್ವರೂಪಯೋಗ್ಯತೆಯಂ ಕೊಡುತ್ತಾ ಅಹಂಕಾರ ಮಮಕಾರ ಕಲ್ಪನೆಗಳಿಲ್ಲದ ನಿತ್ಯಸಿದ್ಧವಾದ ಚೈತನ್ಯವೇ ನಾನೆನಿಸಿಕೊಳ್ಳುವದು. ನಾನೆನಿಸಿಕೊಳ್ಳುತ ಉಪಾಧಿಭೇದದಿಂ ಭಿನ್ನವಾಗಿ ಕಾಣುವ ಚೈತನ್ಯವೆಲ್ಲವೂ ಒಂದೇ ಆದ್ದರಿಂದ ಈ ನಾನೇ ಸರ್ವವ್ಯಾಪಿಯಾಗಿರುವೆನು. ಘಟ ಪಟಾದಿಯಾಗಿ ಸೂರ್ಯಾಂತವಾದ ಪದಾರ್ಥಗಳೆಲ್ಲವೂ ಈ ಚೈತನ್ಯವೆಂಬ ದೀಪದಿಂದಲೇ ಪ್ರಕಾಶಿಸುವವು. ಬಿಸಲುಗಾಲದಿಂ ಮರು ಮರೀಚಿಗಳಂತೆ ಈ ಆತ್ಮನಿಂದಲೇ ಇಂದ್ರಿಯ ಪಙ್ತಿಗಳು ಕಾಣುತ್ತಿರುವವು. ಗೂಢವಾಗಿರುವ ಅಗ್ನಿಯಿಂದ ಕಿಡಿಗಳಂತೆ ಈ ಚೈತನ್ಯದಿಂದಲೇ ಇಂದ್ರಿಯ ವೃತ್ತಿಗಳು ಪ್ರಕಾಶಿಸುವವು. ಬೆಳಕಿನಿಂದ ವಸ್ತ್ರಗಳ ರಂಗು ಕಾಣುವಂತೆ ಈ ಚೈತನ್ಯದಿಂದಲೇ ಸಮಸ್ತ ವಸ್ತು ಗುಣಗಳು ಗೋಚರವಾಗುವವು. ಶಾಶ್ವತವಾದ ಈ ವಸ್ತುವಿನ ಸ್ಥಿತಿಯಿಂದಲೇ ಸಮಸ್ತವಸ್ತುಗಳಿಗೂ ಸ್ಥಿತಿಯುಂಟಾಗಿರುವದು. ಕನ್ನಡಿಯಲ್ಲಿ ಪದಾರ್ಥಗಳು ಪ್ರತಿಬಿಂಬಿಸುವಂತೆ ಸಕಲ ಕರಣ ವ್ಯಾಪಾರ ಫಲಗಳು ಸೇರುವದ್ದರಿಂದ ಈ ಆತ್ಮನೇ ಸಮಸ್ತ ಪ್ರಾಣಿಗಳ ಅನುಭವಕ್ಕೂ ಆಸ್ಪದನಾಗಿರುವನು. ನಿರ್ವಿಕಲ್ಪವಾದ ಈ ಚೈತನ್ಯದ ಪ್ರಸಾದದಿಂದಲೇ ಸೂರ್ಯನು ಉಷ್ಣಕರನು. ಚಂದ್ರನು ಶೀತಕರನು. ಬೆಟ್ಟವು ದೊಡ್ಡದಾಗಿರುವದು. ಜಲವು ದ್ರವಿಸುವದು. ಎಂದು ಸಮಸ್ತ ಪದಾರ್ಥಗಳೂ ತಮ್ಮ ತಮ್ಮ ಗುಣಕ್ಕೆ ಅನುಗುಣವಾದ ಖ್ಯಾತಿಯಂ ಪಡೆದಿರುವವು. ಸೂರ್ಯಾಗ್ನಿಗಳ ಪ್ರತಾಪದಿಂದ ಇತರ ಪದಾರ್ಥಗಳಿಗೆ ತಾಪಯೋಗ್ಯತೆ ಉಂಟಾಗುವಂತೆ ಈ ವಸ್ತುವಿನ ಪ್ರಭಾವದಿಂದಲೇ ಇತರ ವಸ್ತುಗಳಿಗೆ ವಸ್ತುತ್ವ ಉಂಟಾಗಿರುವದು. ಸಮಸ್ತವಾದ ಕಾರಣಗಳಿಗೂ ಕಾರಣವಾಗಿ ನಿರಾಕಾರ

ವಾಗಿರುವ ಈ ಕಾರಣದಿಂದಲೇ ಈ ಪ್ರಪಂಚವು ಹಿಮದಿಂ ಶೈತ್ಯದಂತೆ ಉಂಟಾಗುವದು. ಜಗತ್ತಿನ ಸ್ಥಿತಿಗೆ ಕಾರಣರಾದ ಬ್ರಹ್ಮ ವಿಷ್ಣು ರುದ್ರಾದಿಗಳಿಗೂ ಈ ಚೈತನ್ಯವೇ ಆದಿಕಾರಣವಲ್ಲದೆ ಇದಕ್ಕೆ ಮತ್ತೊಂದು ಕಾರಣವಿಲ್ಲ. ದ್ರಷ್ಟೃಭಾವವಿರುವ ಪರ್ಯಂತವೇ ದೃಶ್ಯ ಪದಾರ್ಥವಿರುವದು. ಹೀಗೆ ಚೈತನ್ಯವಂ ಕೊಡುವ ಚಿತ್ತೆಂಬ ಪದಾರ್ಥವಿರುವ ಪರ್ಯಂತವೇ ಚೈತನ್ಯವಂ ಪಡೆಯುವ ಜಡವಾದ ಜಗತ್ತು ಇರುವದು. ಈ ಎರಡು ಪದಾರ್ಥಗಳ ಸ್ಥಿತಿಯಂ ವಿಚಾರಿಸುವಲ್ಲಿ ಒಂದೇ ಸತ್ವವು ಎರಡು ಕಡೆಯಲ್ಲೂ ಕಾಣುವದ್ದರಿಂದ ಆ ಸತ್ವ ದೃಷ್ಟಿಯಿಂದೊಂದೇ ಸತ್ವವೆಂದು ಪರೀಕ್ಷಿಸುವಲ್ಲಿ ದೃಗ್ದೃಶ್ಯರೂಪದಿಂ ನಾನೇ ನಿಲ್ಲುವೆನಾದ್ದರಿಂದ ಚಿಚ್ಚೈತ್ಯದ್ರಷ್ಟೃ ದೃಶ್ಯಾದಿ ನಾಮರೂಪಗಳಿಂ ರಹಿತನಾದ ನನಗೋಸ್ಕರವೇ ನಮಸ್ಕಾರವಾಗಲಿ ಅದ್ವಿತೀಯನಾಗಿ ಚಿದ್ರೂಪನಾಗಿರುವ ಈ ಆತ್ಮನಲ್ಲಿ ಸಮಸ್ತ ಪ್ರಾಣಿಗಳು ದ್ರವ್ಯಗಳಲ್ಲಿ ಗುಣಗಳಂತೆ ಅಭಿನ್ನವಾದ ಸತ್ವವುಳ್ಳಂಥಾವಾಗಿ ಸೃಷ್ಟಿ ಸ್ಥಿತಿ ಲಯಂಗಳಂ ಪಡೆಯುವವು. ಈ ಆತ್ಮನಿಂದ ಸಂಕಲ್ಪಿತವಾದ ವಸ್ತುವು ಸಂಕಲ್ಪ ಕ್ಷಣವಲ್ಲಿಯೇ ಹುಟ್ಟುವುದು. ಇವನಿಂದುಂಟುಮಾಡಲ್ಪಟ್ಟ ಸತ್ವವುಳ್ಳದ್ದಾಗಿ ವ್ಯವಹಾರಗೋಚರವಾಗುವದು. ಈ ಆತ್ಮನಲ್ಲಿ ಸಮಸ್ತ ಪದಾರ್ಥಗಳು ಕನ್ನಡಿಯಲ್ಲಿ ಹೇಗೋ ಹಾಗೆ ಪ್ರತಿಬಿಂಬಿಸುವವು. ಜಲದಲ್ಲಿ ಪ್ರತಿಬಿಂಬಿಸುವ ಸೂರ್ಯನು ತರಂಗ ಬುದ್ಬುದ ಶೀಕರಗಳಲ್ಲಿ ವಿಚಿತ್ರವಾಗಿ ಪ್ರಕಾಶಿಸುವಂತೆ ಸ್ಥಿರಚಂಚಲ ವೃಕ್ಷ ವಿಷ್ಣುಗಳಾದ ಪದಾರ್ಥಗಳಲ್ಲಿ ಅವುಗಳ ಗುಣಾನುಗುಣವಾಗಿ ಈ ಆತ್ಮನೇ ಪ್ರಕಾಶಿಸುತ್ತಿರುವನು. ಸಮಸ್ತ ಪ್ರಾಣಿಗಳಿಗೂ ಅದೃಶ್ಯವಾಗಿ ಮೋಹಾತ್ಮಕವಾದ ಮನವಿಲ್ಲದವನಿಗೆ ಪ್ರಾಪ್ಯವಾಗಿ ಅತ್ಯಂತ ನಿರ್ಮಲವಾದ ಪರಮಾಕಾಶವೆನಿಸಿಕೊಳ್ಳುವ ಈ ವಸ್ತುವು ಮಹಾತ್ಮರಾದವರಿಂದ ಜ್ಞಾನದೃಷ್ಟಿಯಿಂ ಕಾಣಲ್ಪಡುವದು. ಬ್ರಹ್ಮಾಂಡ ಮಂಡಲಗಳೆಂಬ ಪೂಗುತ್ತಿಗಳಿಗೆ ಕಾರಣ ವೃಕ್ಷವಾಗಿ ನಾನೆನಿಸಿಕೊಳ್ಳುವ ಈ ಆತ್ಮನಿಂದ ಪರ್ವತದಿಂದರಣ್ಯಗಳಂತೆ ಸಕಲ ಸಂಸಾರ ವ್ಯಾಪಾರಗಳುಂಟಾಗುವವು. ಸೂರ್ಯಕಿರಣಗಳಿಗೆ ಸೂರ್ಯನಂತೆ ಬ್ರಹ್ಮಾದಿ ತೃಣಾಂತವಾದ ಪ್ರಪಂಚದಲ್ಲಿರುವ ಪ್ರಾಣಿಗಳಿಗೆ ಈ ಪರಮಾತ್ಮನು ಅಭಿನ್ನನಾಗಿ ಸರ್ವಪ್ರಕಾಶಕನಾಗಿರುವನು. ಆದ್ಯಂತಗಳಿಲ್ಲದೆ ಅದ್ವಿತೀಯನಾಗಿ ಸರ್ವವ್ಯಾಪಿಯಾದ ಸ್ವರೂಪವುಳ್ಳ ಈ ನಾನೇ ಚರಾಚರಗಳಾದ ಪ್ರಾಣಿಗಳ ಹೃದಯದಲ್ಲಿ ಅನುಭವರೂಪದಿಂ ಪ್ರಕಾಶಿಸುವೆನು. ಗಣನೆಗೆ ಬಹುವಾಗಿರುವ ಸ್ಥಿರಚರಾತ್ಮಕವಾದ ಈ ಪ್ರಾಣಿಗಳ ಶರೀರಗಳೇ ನನ್ನ ಸ್ವರೂಪಗಳು. ಸ್ವಾನುಭೂತಿಯಿಂದ ಅದ್ವಿತೀಯನಾಗಿ ಅನುಭವಸ್ವರೂಪನಾದ ನಾನು

ದೃಗ್ದೃಷ್ಟಿ ದೃಶ್ಯಭೇದಗಳಿಂದ ಸಹಸ್ರ ಕರಲೋಚನನೆನಿಸಿಕೊಳ್ಳುವೆನು. ನಾನೇ ಸೂರ್ಯ ಸ್ವರೂಪದಿಂದೀ ಆಕಾಶದಲ್ಲಿ ಪ್ರಕಾಶಿಸುತ್ತ ಜಗತ್ಪ್ರದೀಪನೆನಿಸಿಕೊಳ್ಳುವೆನು. ವಾಯುರೂಪದಿಂ ಚಲಿಸುತ್ತಾ ಜಗತ್ಪ್ರಾಣನೆಂದು ಪ್ರಖ್ಯಾತನಾಗಿರುವೆನು. ಕ್ರಮ ಪ್ರಾಪ್ತವಾದ ಸನ್ಯಾಸವುಳ್ಳ ಮಠಾಧಿಪತಿಯು ಮಠವಂ ರಕ್ಷಿಸುವಂತೆ ಇಂದ್ರರೂಪದಿಂದೀ ಮೂಜಗವಂ ರಕ್ಷಿಸುವೆನು. ದೂರ್ವಾದಳಶ್ಯಾಮಳಾಗಿ ಶಂಖಚಕ್ರ ಗದಾಧಾರಿಯಾಗಿ ಸರ್ವ ಸೌಭಾಗ್ಯಗಳಿಗೂ ಮಹಾನಿಧಿಯಾಗಿ ಲಕ್ಷ್ಮೀ ನಿವಾಸವಾಗಿರುವ ನನ್ನ ಶರೀರವೇ ಈ ಜಗತ್ತಿನಲ್ಲಿ ಮಹಾ ವಿಷ್ಣುವೆಂಬ ನಾಮ ಧೇಯದಿಂ ಪ್ರಖ್ಯಾತವಾಗಿ ಕ್ರೀಡಿಸುತ್ತಿರುವದು. ಈ ಶರೀರದ ನಾಭಿಯಲ್ಲಿ ಪುಟ್ಟಿದ ಪದ್ಮವನ್ನಾಶ್ರಯಿಸಿರುವ ನಾನು ನಿರ್ವಿಕಲ್ಪ ಸಮಾಧಿಯಿಂದ ಸಂತುಷ್ಟ ನಾಗಿರುವೆನು. ಮೂರುಗಣ್ಣುಗಳುಳ್ಳ ಆಕಾರದಿಂ ಪಾರ್ವತಿಯ ಮೊಗದಾವರೆಗೆ ಭ್ರಮರವಾದ ನಾನೇ ಪ್ರಳಯಕಾಲದಲ್ಲಿ ಕೂರ್ಮವು ತನ್ನ ಅಂಗಗಳಂ ಸೆಳೆಕೊಳ್ಳುವಂತೆ ಈ ಜಗವಂ ಸಂಹರಿಸುವೆನು. ಜಗತ್ತಿನಲ್ಲಿರುವ ಸ್ತ್ರೀಯು ಪುರುಷನು ಬಾಲಕನು ಇತರ ಪ್ರಾಣಿಯು ಸಹ ನಾನು. ನಾನಲ್ಲದೆ ಮತ್ತೊಂದಿಲ್ಲ. ದೇಹಾಭಿಮಾನಿಯಾದ ನಾನು ಪೂರ್ವದಲ್ಲಿ ಜೀರ್ಣನಾಗುತ್ತಿದ್ದೆನು. ಚಿನ್ಮಯವಾದ ನಿಜ ರೂಪದಲ್ಲಿ ದೃಷ್ಟಿಯುಳ್ಳ ನಾನು ಈಗ ಸರ್ವತೋಮುಖನಾಗಿರುವೆನು. ಹಳೇ ಭಾವಿಯು ತನ್ನೊಳಗೆ ಬಳ್ಳಿಗಳಂ ಪುಟ್ಟಿಸುವಂತೆ ರಸಸ್ವರೂಪನಾದ ನಾನು ಚಿನ್ಮಯವಾದ ಭೂಮಿಯಿಂದ ಹುಲ್ಲು ಬಳ್ಳಿ ಪೊದೆಗಳ ಸಮೂಹವನ್ನೆಬ್ಬಿಸುವೆನು. ಬಾಲಕನಿಂದ ಕ್ರೀಡೆಗೋಸುಗ ಮಾಡಲ್ಪಡುವ ಕೆಸರು ಅಧಿಕವಾಗಿರುವ ಹಳ್ಳದಂತೆ ನನ್ನಿಂದ ಈ ಜಗವು ನಿರ್ಮಿಸಲ್ಪಟ್ಟಿರುವದು. ನಾನೇ ಕಾರಣನಾದ್ದರಿಂದ ನನ್ನಿಂದೀ ಜಗವು ವ್ಯಾಪಿಸಲ್ಪಡುವದು. ಇದರ ಸತ್ವವು ನನ್ನಲ್ಲಿ ಲಯಿಸುವದು. ನನ್ನಿಂದ ಪರಿಗ್ರಹಿಸಲ್ಪಟ್ಟಂಥಾದ್ದೇ ಜೀವನ್ಮುಕ್ತವೆನಿಸಿಕೊಳ್ಳುವದು. ನನ್ನಿಂದ ಬಿಡಲ್ಪಟ್ಟದ್ದು ಯಾವದೂ ಸತ್ಪದಾರ್ಥವೆನಿಸಿಕೊಳ್ಳುವುದಿಲ್ಲ. ಈ ಪ್ರಪಂಚದ ಸೃಷ್ಟಿಯಲ್ಲಿ ಮೂಲ ವಾದ ನಾನೆಂಬ ಚಿದಾಕಾಶದಲ್ಲಿ ಯಾವದು ಪ್ರತಿಬಿಂಬಿಸಿತೋ ಅದೇ ಇದೆಯಲ್ಲದೆ ಮತ್ತೊಂದಿಲ್ಲವಾದ್ದರಿಂದ ನಾನುಂಟೋ? ಮೂರುಲೋಕವುಂಟು? ಎಂಬ ಲೋಕವಾರ್ತೆಯು ಸರಿಯಾಗಿರುವದು. ಪುಷ್ಪದಲ್ಲಿ ಪರಿಮಳವಾಗಿಯೂ, ಅದರ ಎಲೆಯಲ್ಲಿ ಕಾಂತಿಯಾಗಿಯೂ, ಕಾಂತಿಯಲ್ಲಿ ಚಾಕಚಕ್ಯವಾಗಿಯೂ, ಚಾಕಚಕ್ಯದಲ್ಲಿ ಆನಂದಕರವಾದ ಅನುಭವವಾಗಿಯೂ, ನಾನೇ ಪ್ರಕಾಶಿಸುವೆನು. ಸ್ಥಾವರ ಜಂಗಮಾತ್ಮಕವಾದೀ ಜಗದಲ್ಲಾವದು ದೃಶ್ಯವೆನಿಸಿಕೊಳ್ಳುವದೋ ಅದೆಲ್ಲವೂ

ಸರ್ವಸಂಕಲ್ಪ ರಹಿತವಾದಾಥ ಚಿದ್ರೂಪನಾದ ನಾನಲ್ಲದೆ ಮತ್ತೊಂದಲ್ಲ. ಯಾವ ದರಿಂದ ಜಲರೂಪವಾದ ಸಮಸ್ತ ಪ್ರಪಂಚವುಂಟಾದುದೋ ಆದಿಯಾದ ಆ ರಸ ಶಕ್ತಿಯು ತೃಣವೃಕ್ಷ ಲತಾದಿಗಳಲ್ಲಿ ವ್ಯಾಪಿಸಿರುವಂತೆ ಸಮಸ್ತ ಪದಾರ್ಥಗಳನ್ನೂ ನಾನು ವ್ಯಾಪಿಸಿಕೊಂಡಿರುವೆನು. ಇಂತಪ್ಪ ವ್ಯಾಪಕ ಭಾವವನ್ನಂಗೀಕರಿಸಿದ ನಾನೇ ಪ್ರಾಣಿಗಳಲ್ಲಿ ಜ್ಞಾನವೈಚಿತ್ರ್ಯವನ್ನುಂಟುಮಾಡಿರುವೆನು. ಹಾಲಿನಲ್ಲಿ ಘೃತ ಶಕ್ತಿಯಂತೆಯೂ, ಜಲದಲ್ಲಿ ರಸಶಕ್ತಿಯಂತೆಯೂ, ಚಿಚ್ಛಕ್ತಿರೂಪದಿಂ ಸರ್ವ ಪದಾರ್ಥಗಳಲ್ಲಿಯೂ, ನಾನೇ ಇರುವೆನು. ಜಡವೆನಿಸಿಕೊಳ್ಳುವ ಈ ಪದಾರ್ಥ ವೆಲ್ಲವೂ ಈ ಜಗತ್ತಿನಲ್ಲಿ ಹೇಗೆ ಇರುವದೋ ಹಾಗೆ ಈ ಜಗತ್ತೆಲ್ಲವೂ ಚಿದ್ರೂಪನಾದ ಆತ್ಮನಲ್ಲಿರುವದು. ನಾನೆನಿಸಿಕೊಳ್ಳುವ ಆ ಆತ್ಮನೇ ಸಂಕೋಚವಿಲ್ಲದೆ ಈ ಜಗವೆಲ್ಲ ವನ್ನೂ ತುಂಬಿಕೊಂಡು ಸರ್ವಾಂತರ್ವರ್ತಿಯಾಗಿಯೂ, ಸರ್ವ ಕರ್ತೃವಾಗಿಯೂ ವ್ಯಷ್ಟಿ ರೂಪದಿಂದಲೂ, ಸಮಷ್ಟಿರೂಪದಿಂದಲೂ, ಪ್ರಕಾಶಿಸುತ್ತಾ ವಿರಾಟ್ ಸಮ್ರಾಟ್ಟೆಂದು ಪೇಳಲ್ಪಡುವದು. ದೇವತೆಗಳನ್ನು ಕೇಳದೆ ಇಂದ್ರನನ್ನು ಕಟ್ಟದೆ ಅಪ್ರಾರ್ಥಿತವಾಗಿ ಈ ಜಗದ್ರಾಜ್ಯವು ನನ್ನಿಂದ ಪಡೆಯಲ್ಪಟ್ಟಿತು. ಎಲಾ ಇದೇನಾ ಶ್ಚರ್ಯವು ? ಪ್ರಳಯಕಾಲದ ಬಿರುಗಾಳಿಯಿಂ ವೃದ್ಧಿ ಹೊಂದಿಸಲ್ಪಟ್ಟ ಸಮುದ್ರ ದಂತೆ ಜಗವೆಲ್ಲವಂ ವ್ಯಾಪಿಸಿಕೊಂಡಿರುವ ನನ್ನಲ್ಲಿಯೂ ನಾನು ಅಣಗದೆ ಸರ್ವತೋ ಮುಖನಾಗಿ ಪೊರಮಡುತ್ತಿರುವೆನು. ಕ್ಷೀರವಾರಿಧಿಯಲ್ಲಿ ಕುಂಟಹಾವು ಕೊನೆಯಂ ಕಾಣದಿರುವಂತೆ ಅನುಭವ ಗೋಚರವಾದ ನಿಜಾನಂದದಲ್ಲಿ ನಾನು ಪಾರವಂ ಕಾಣ ದಿರುವೆನು, ಒಂದಕ್ಕೊಂದು ಸಂಬಂಧಿಸಿರುವದ್ದರಿಂದ ಸಂದಣಿಯಾಗಿರುವ ಈ ಬ್ರಹ್ಮಾಂಡವು ಸ್ವಲ್ಪವಾದರೂ ಸಣ್ಣ ಬಿಲದಲ್ಲಿ ಆನೆಯಂತೆ ನಾನು ಇಲ್ಲಿ ಅಣಗದೆ ಹೊರ ಹೊರಡುವೆನು. ಉತ್ತರೋತ್ತರ ದಶಗುಣವಾದ ಪೃಥಿವ್ಯಪ್ತೇಜೋ ವಾಯ್ವಾಕಾಶ ಮಾಯಾವರಣವುಳ್ಳ ಈ ಬ್ರಹ್ಮಾಂಡಕ್ಕಿಂತಲೂ ವಿಸ್ತಾರವಾಗಿ ಚತುರ್ವಿಂಶತಿ ತತ್ವಗಳ ಕೊನೆಯಲ್ಲಿ ಇರುವ ಸ್ಥಾನವನ್ನೂ ಪರಿಗ್ರಹಿಸಿದ ನನ್ನ ರೂಪವು ಸರ್ವತೋಮುಖವಾಗಿ ಮುಂದಕ್ಕೆ ಹೊರಡುತ್ತಿರುವುದಲ್ಲದೆ ಈಗಲೂ ಹಿಂತಿರುಗುವದಿಲ್ಲ. ಇದುವರಿಗೆ ಈ ದೇಹವೇ ನಾನೆಂತಲೂ ಪ್ರಾಣವು ನಾನೆಂ ತಲೂ, ಚಿದಾಭಾಸನಾದ ಜೀವನು ನಾನೆಂತಲೂ, ಈ ಕುತ್ಸಿತ ಕಲ್ಪನೆಗಳು ಎಲ್ಲಿಂದುಂಟಾಗಿದ್ದವು. ನಾನು ನೀನೆಂಬುವುದೆಲ್ಲವೂ ದೇಹಾಲಂಬನ ದೃಷ್ಟಿಯಿಂ ದುಂಟಾಗಿರುವವಾದ್ದರಿಂದ ನೀನೇ ಇವನು ಇವನೇ ನಾನೆಂಬ ಮಾತುಗಳೆಲ್ಲವೂ ಸುಳ್ಳಲ್ಲದೆ ಎಂದಿಗೂ ಯಥಾರ್ಥವಾಗಲಾರವು. ಸರ್ವವೂ ಚಿದಾತ್ಮಕವಾಗಿರುವಲ್ಲಿ

ದೇಹವೆಂಬುವದು ಯಾವದು? ದೇಹವೇ ಇಲ್ಲದಿರುವಲ್ಲಿ ದೇಹವುಳ್ಳವನೆಂತಲೂ, ದೇಹವಿಲ್ಲದವನೆಂತಲೂ, ಸತ್ತವನೆಂತಲೂ, ಬದುಕಿರುವನೆಂತಲೂ, ಮಾತುಗಳಿಗೆ ಅವಕಾಶವೇನಿರುವದು. ದೇಹವೇ ತಾನೆಂಬ ದೃಷ್ಟಿಯಿಂದ ನೀಚರಾಗಿ ದುರ್ಬುದ್ಧಿಗಳಾಗಿದ್ದ ನಮ್ಮವರು ಈ ಸಾಮ್ರಾಜ್ಯವಂ ಕಾಣದೆ ಪಶುಗಳಂತೆ ವಿಷಯಾಸಕ್ತರಾಗಿದ್ದರು. ಬ್ರಹ್ಮಾತ್ಮ ಜ್ಞಾನದಿಂ ಮಹತ್ತರವಾದ ಈ ಜ್ಞಾನದೃಷ್ಟಿಯಲ್ಲಿ ಸರ್ಪಗಳಂತೆ ಭಯಂಕರಗಳಾದ ಸುರಾಶಿಗಳಿಂ ಘೋರವಾದ ಸಂಪತ್ತುಗಳಲ್ಲಿ ಸಮಸ್ತವಾದ ದೃಷ್ಟಿಗಳಲ್ಲೂ ಈ ಜ್ಞಾನಮಯವಾದ ದೃಷ್ಟಿಯು ರಜಸ್ತಮೋವಿಕಾರಗಳಿಲ್ಲದೆ ಪರಿಶುದ್ಧವಾಗಿ ಸರ್ವೋತ್ತಮವಾದ ಉಪಶಾಂತಿಯಿಂದಲೂ, ಅಪರಿಮಿತವಾದ ಆನಂದಭೋಗದ ಸಂಪತ್ತಿನಿಂದಲೂ, ಸರ್ವೋತ್ತಮವೆನಿಸಿಕೊಳ್ಳುವದು. ಆದ್ದರಿಂದ ಸರ್ವ ಪದಾರ್ಥಗಳಿಗೂ, ಸರ್ವ ಭಾವಗಳಿಗೂ, ಅಂತರ್ವ್ಯಕ್ತಿಯಾಗಿ ದೃಶ್ಯ ಸಂಬಂಧವಿಲ್ಲದ ದೃಗ್ರೂಪವಾಗಿ ಪ್ರತ್ಯಕ್ಷಕ್ಕೆ ತನ್ನವೆನಿಸಿಕೊಳ್ಳುವ ನನ್ನನ್ನೇ ನಾನು ನಮಿಸುವೆನು. ಜಡಾತ್ಮದೃಷ್ಟಿ ತಪ್ಪಿದ್ದರಿಂದ ಜೀರ್ಣವಾದ ಸಂಸಾರ ಭ್ರಮೆಯುಳ್ಳ ನಾನು ಜ್ಞಾನಾತ್ಮ ದೃಷ್ಟಿಯಿಂದುತ್ಪತ್ತಿಯೇ ಇಲ್ಲದಂಥಾವನಾದೆನು ತಿಳಿಯತಕ್ಕದ್ದಂ ತಿಳಿದು ಪಡೆಯತಕ್ಕದ್ದಂ ಪಡೆದು ಮಹಾತ್ಮನಾಗಿರುವ ನಾನು ಈಗ ಬದುಕಿರುವೆನು. ಈಗ ಸರ್ವೋತ್ತಮನಾಗಿಯೇ ಸರ್ವೋತ್ತಮ ಸಾಮ್ರಾಜ್ಯರೂಪವಾಗಿ ಶಾಶ್ವತವಾಗಿರುವ ಈ ಜ್ಞಾನವಂ ಬಿಟ್ಟು ದುಃಖಕರವಾದ ರಾಜ್ಯಭೋಗಗಳಲ್ಲಿ ನಾನು ರಮಿಸುವುದಿಲ್ಲ. ನೀರು ಮರ ಕಲ್ಲುಗಳೇ ಮುಖ್ಯವಾಗಿರುವ ಭೂತಲವಲ್ಲಿ ಹುಳುವಿನಂತೆ ಹರಿದಾಡುವ ಅನಾತ್ಮಜ್ಞಾನಿಯಾದ ಮಾನವನ ಸುಡಬೇಕು. ಅವಿದ್ಯಾತ್ಮಕವಾದ ದ್ರವ್ಯಗಳಿಂದ ಅಜ್ಞಾನರೂಪವಾದ ಶರೀರವ ಪೋಷಿಸುತ್ತಿದ್ದ ಅಜ್ಞನಾದ ನಮ್ಮ ತಂದೆಯಿಂದೇನು ಮಾಡಲ್ಪಟ್ಟಿತು. ಸನ್ಯಾಸಿಯ ಮತದಂತಿರುವ ಈ ಜಗವಂ ಪರಿಗ್ರಹಿಸಿದ ನಮ್ಮ ತಂದೆಯಾದ ಹಿರಣ್ಯಕಶಿಪುವು ಉಚಿತವಾದ ಯಾವ ವಸ್ತುವನ್ನು ತಾನೇ ಪಡೆದನು. ಈ ಆನಂದ ಸಾಮ್ರಾಜ್ಯವನ್ನನುಭವಿಸದೆ ಅನೇಕ ರಾಜ್ಯಗಳನ್ನಾಳುತ್ತಿದ್ದ ನಮ್ಮ ತಂದೆಯಿಂದ ಯಾವ ಸೌಖ್ಯವೂ ಅನುಭವಿಸಲ್ಪಟ್ಟಿರಲಾರದು. ಯಾವನು ಬಾಹ್ಯ ವಿಷಯವೆನ್ನುವದನ್ನು ಪರಿಗ್ರಹಿಸದಿರುವನೋ ಅವನಿಂದ ಜ್ಞಾನಮಾತ್ರದಿಂದಿ ಪರಮಾಮೃತವು ಪಡೆಯಲ್ಪಡುವದು. ಮೂರ್ಖನಾದವನೇ ಸಿದ್ಧವಾಗಿರುವ ಈ ಪದವಿಯಂ ಬಿಟ್ಟು ಘೋರವಾದ ಸಂಸಾರವಂ ಹೊಂದುವನು. ಸರಸ ಸರಳವಾಗಿರುವ ದ್ರಾಕ್ಷಾಲತೆಯು ಬಿಟ್ಟು ಮುಳ್ಳುಮರವಂ ಹೊಂದುವಂಥಾದ್ದು ಒಂಟೆಯಲ್ಲದೆ ಮತ್ತೊಂದಲ್ಲ

ಈ ದೃಷ್ಟಿಯಂ ಬಿಟ್ಟು ಕೆಟ್ಟರಾಜ್ಯದಲ್ಲಿ ಯಾವನಾದರೂ ರಮಿಸುವನೇ ಎಂಥಾ
ವನೂ ಕೂಡ ಕಬ್ಬಿನರಸವಂ ಬಿಟ್ಟು ಕಹಿಯಾದ ಬೇವಿನರಸವಂ ಸೇವಿಸಲಾರನು.
ನಮ್ಮವರು ಮೂರ್ಖರಾದ್ದರಿಂದಲೇ ಈ ದೃಷ್ಟಿಯಂ ಬಿಟ್ಟು ರಾಜ್ಯ ಸಂಕಟದಲ್ಲಿ
ಬಿದ್ದರು. ವಿಕಸಿತವಾದ ಕುಸುಮಗಳುಳ್ಳ ನಂದನವನ ಪ್ರದೇಶಗಳಲ್ಲಿ ರಸಗಂಧ
ಲೇಶವಿಲ್ಲದ ಮರುಭೂಮಿಗಳಲ್ಲಿ ತಮಃಪ್ರಧಾನವಾಗಿ ಮನೋಹರವಾದ ಈ ಜ್ಞಾನ
ದೃಷ್ಟಿಗಳಲ್ಲಿ ರಾಗ ರೋಗಾಕುಲವಾದ ಭೋಗ ಬುದ್ಧಿಗಳಲ್ಲಿ ಯಾವವರಲ್ಲೇನೂ
ಇಲ್ಲವೋ ಆ ಜಗತ್ತಿನಲ್ಲಿ ರಾಜ್ಯವು ಅಪೇಕ್ಷಿಸಲ್ಪಡುತ್ತಲಿದೆ. ಯಾವದರಲ್ಲಿ ಸಮ
ಸ್ತವೂ ಸಿದ್ಧವಾಗಿರುವದೋ ಅಂತಾ ಆತ್ಮತ್ವವು ಏನು ನಿಮಿತ್ತವೋ ಅನುಭವಿ
ಸಲ್ಪಡುವದಿಲ್ಲ. ಸರ್ವವ್ಯಾಪಿಯಾದಾಗ್ಯೂ ತನ್ನಲ್ಲೇ ಇರುತ್ತಾ ಸರ್ವ ಸಮವಾಗಿ
ನಿರ್ವಿಕಾರವಾಗಿದ್ದಾಗ್ಯೂ ಸರ್ವ ರೂಪವಾಗಿರುವ ಈ ಚಿತ್ತಿನಿಂದ ಸರ್ವ ಕಾಲ
ದಲ್ಲೂ ಸರ್ವ ದೇಶದಲ್ಲೂ ಸರ್ವ ಸುಖವು ಅದರ ಸಾಧನವು ಸಹ ಚನ್ನಾಗಿ ಲಭಿ
ಸಲ್ಪಡುತ್ತಲಿದೆ. ತೇಜದಲ್ಲಿ ಪ್ರಕಾಶ ಶಕ್ತಿಯು ಚಂದ್ರನಲ್ಲಿ ಅಮೃತ ಪ್ರಾಪ್ತಿಯು,
ಬ್ರಹ್ಮನಲ್ಲಿ ಮಹತ್ವವು, ಶುಕ್ರನಲ್ಲಿ ತ್ರಿಲೋಕಾಧಿಪತ್ಯವು, ಈಶ್ವರನಲ್ಲಿ ಜ್ಞಾನ
ಶಕ್ತಿಯು, ವಿಷ್ಣುವಿನಲ್ಲಿ ಜಯಲಕ್ಷ್ಮಿಯು, ಮನಸ್ಸಿನಲ್ಲಿ ಶೀಘ್ರಗತಿಯು, ವಾಯು
ವಿನಲ್ಲಿ ಬಲಾಧಿಕ್ಯವು, ಅಗ್ನಿಯಲ್ಲಿ ದಹನಶಕ್ತಿಯು, ಜಲದಲ್ಲಿ ಆಪ್ಯಾಯನಶಕ್ತಿಯು,
ಮುನಿಗಳಲ್ಲಿ ಸಿದ್ಧಿಯು, ಬೃಹಸ್ಪತಿಯಲ್ಲಿ ವಿದ್ಯೆಯು, ವೈಮಾನಿಕರಲ್ಲಿ ವ್ಯೋಮ
ಗತಿಯು, ಗಿರಿಗಳಲ್ಲಿ ಸ್ಥೈರ್ಯಶಕ್ತಿಯು, ಸಮುದ್ರದಲ್ಲಿ ಗಾಂಭೀರ್ಯವು, ಮೇರುವಿ
ನಲ್ಲಿ ಔನ್ನತ್ಯವು, ಜೈನರಲ್ಲಿ ಅಹಿಂಸೆಯು, ಮದ್ಯದಲ್ಲಿ ಮಾದಕಶಕ್ತಿಯು, ವಸಂತ
ನಲ್ಲಿ ಪುಷ್ಪಸಮೃದ್ಧಿಯು, ವರ್ಷಋತುವಿನಲ್ಲಿ ಮೇಘವೃದ್ಧಿಯು, ಯಕ್ಷರಲ್ಲಿ
ಮಾಯೆಯು, ಗಗನದಲ್ಲಿ ಕಳಂಕಶೂನ್ಯತ್ವವು, ಹಿಮದಲ್ಲಿ ಶೈತ್ಯವು, ಬಿಸಿಲಿನಲ್ಲಿ
ತಪನಶಕ್ತಿಯು, ಇನ್ನೂ ಆಯಾಯ ಪದಾರ್ಥಗಳಲ್ಲಿ ದೇಶ ಕಾಲ ಕ್ರಿಯಾತ್ಮಕವಾದ
ಆಯಾಯ ಶಕ್ತಿಗಳು ಈ ಚಿಚ್ಛಕ್ತಿಯಿಂದಲೇ ಮಾಡಲ್ಪಟ್ಟಿರುವವು. ವಿಕಲ್ಪ
ರಹಿತವಾದ ಈ ಚಿತ್ತೇ ಸೂರ್ಯನ ಪ್ರಭೆಯಂತೆ ಸಮಸ್ತಪದಾರ್ಥಗಳಲ್ಲೂ ಸಮ
ವಾಗಿ ಪ್ರವರ್ತಿಸುತ್ತಲಿದೆ. ಸರ್ವ ಪದಾರ್ಥಗಳನ್ನೂ ಸೂರ್ಯಪ್ರಭೆಯು ಹೇಗೆ
ತೋರಿಸುವದೋ ಹಾಗೆ ಅಖಂಡವಾದ ಈ ಚಿತ್ತು ದೇಶ ಕಾಲ ವಸ್ತುಭೇದಗಳಿಂ
ಭಿನ್ನವಾಗಿರುವ ಆಯಾಯ ವಸ್ತುಗಳಂ ತೋರಿಸುವದು. ತ್ರಿಕಾಲಜ್ಞನಾಗಿ ಸರ್ವ
ವಸ್ತು ಸ್ವರೂಪಗಳಂ ತಿಳಿದ ಯೋಗೀಶ್ವರನ ಪ್ರಜ್ಞೆಯಂತೆ ಈ ಚಿತ್ತು ಪರಿಪೂರ್ಣ
ವಾಗಿಯೇ ಇರುವದು. ಕಹಿ ಸಿಹಿಯಾದ ಪದಾರ್ಥಗಳಂ ಸೇವಿಸುವಲ್ಲಿ ಪದಾ

ರ್ಥಭೇದದಿಂ ರಸಕ್ಕೆ ಭೇದವಲ್ಲದೆ ರಸನೆಗೆ ಹೇಗೆ ಭೇದವಿಲ್ಲವೋ ಹಾಗೆ ಈ ಚಿತ್ತಿಗೂ ಭೇದವಿಲ್ಲ. ಕಾಲ ದೇಶ ಭೇದಗಳಿಂದ ವಸ್ತುಗಳಿಗೆ ಭೇದವಿದ್ದಾಗ್ಯೂ ಸರ್ವಾಧಾರ ವಾದ ಭೂಮಿಗೆ ಹೇಗೆ ಭೇದವಿಲ್ಲವೋ ಹಾಗೆ ಸತ್ತಾ ಸಾಮಾನ್ಯರೂಪದಿಂ ಸರ್ವ ಪದಾರ್ಥಗಳಂ ಹೊಂದಿರುವ ಸಂಕಲ್ಪಾದಿ ಕಲ್ಪನೆಗಳಿಲ್ಲದ ಈ ಚಿತ್ತಿಗೆ ಭೇದವಿಲ್ಲ. ಕಾಲ ದೇಶ ಭೇದಗಳಿಂದ ವೈಲಕ್ಷಣ್ಯವಂ ಹೊಂದುವ ಪದಾರ್ಥಗಳಿಗೆ ಭೇದವಲ್ಲದೆ ಸರ್ವಕಾಲ ದೇಶಗಳಲ್ಲೂ ಪರಿಪೂರ್ಣವಾಗಿರುವ ವಸ್ತುವಿಗೆ ಕಾಲ ದೇಶ ಭೇದವಿಲ್ಲ. ಆದ್ದರಿಂದ ಈ ಚಿತ್ತಿನಿಂದ ಸಮಸ್ತವೂ ಏಕಕಾಲದಲ್ಲಿ ಏಕರೀತಿಯಾಗಿಯೇ ಅನು ಭವಿಸಲ್ಪಡುವದು. ಸೃಷ್ಟಿ ಸ್ಥಿತಿ ಲಯಗಳಿಗೆ ಈ ಚಿದ್ವಸ್ತುವೇ ಸ್ಥಾನವಾದ್ದರಿಂದ ಅದೇ ದೃಶ್ಯಸ್ವರೂಪದಿಂ ಪ್ರಕಾಶಿಸುವದೆಂತಾಗಲೀ, ಬೇರೆ ಸತ್ವವಿಲ್ಲದ್ದರಿಂದ ಇತರ ಪದಾರ್ಥವಿಲ್ಲವೇ ಇಲ್ಲವೆಂತಲಾಗಲೀ, ದೃಶ್ಯಪದಾರ್ಥವೆಲ್ಲವು ಜಡನಶ್ವರ ವಾದ್ದರಿಂದ ಚಿದ್ರೂಪವಾದ ವಸ್ತುವೇ ಸತ್ಯವೆಂತಲಾಗಲೀ, ಯಾವ ಮಾರ್ಗದಿಂದ ಲಾದರೂ ಚಿದ್ವಸ್ತುವಿನಲ್ಲಿ ದೃಷ್ಟಿಯನ್ನಿಡುವದ್ದರಿಂದ ದುಃಖ ಪರಿಹಾರವಾಗಬೇಕ ಲ್ಲದೇ ಮತ್ತೊಂದು ಮಾರ್ಗವಿಲ್ಲ. ಕಾಲತ್ರಯ ಕಲ್ಪನೆಯಿಲ್ಲದೆ ಧ್ರುವಾತ್ಮಕ ವಾದ ಜಗತ್ತನ್ನಪೇಕ್ಷಿಸುವ ಚಿತ್ತಿಗೆ ಅದ್ವಿತೀಯ ಭಾವವೇ ಸ್ಥಿರವಾಗುವದು. ವಾಙ್ಮನಸ್ಸುಗಳಿಗೆ ಅಗೋಚರವಾದ್ದರಿಂದ ಆ ಚಿತ್ತು ಶೂನ್ಯವಾದಿಗಳ ಸಿದ್ಧಾಂತವ ದೆಶೆಯನ್ನು ಹೊಂದಿದಂತೆ ತೋರುತ್ತಿರುವದು. ಚಿದ್ರೂಪವಾದ ಆತ್ಮ ವಸ್ತುವೇ ಇಲ್ಲದಿರೆ ಜಡವಾದ ಅಂತಃಕರಣ ಮೊದಲಾದ ಪದಾರ್ಥಗಳಿಗೆ ತಮ್ಮ ತಮ್ಮ ಕಾರ್ಯ ಗಳಂ ನಿರ್ವಹಿಸುವ ಸ್ವರೂಪಯೋಗ್ಯತೆ ಹೇಗೆ ಉಂಟಾದೀತು? ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ಕಾಲೋಚಿತ ವಿಷಯಗಳನ್ನನುಭವಿಸುತ್ತಾ ಸರ್ವವ್ಯಾಪಿಯಾಗಿ ದ್ದಾಗ್ಯೂ ಇದು ಆತ್ಮನಲ್ಲವೆಂದು ದೃಶ್ಯಪದಾರ್ಥಗಳಂ ತ್ಯಜಿಸುವಲ್ಲಿ ತನ್ನಂ ತ್ಯಜಿಸು ವದಕ್ಕೆ ತಾನೆನಿಸಿಕೊಳ್ಳುವ ಮತ್ತೊಂದು ವಸ್ತುವಿಲ್ಲದ್ದರಿಂದ ತ್ಯಜಿಸಲಾಗದೇ ಸ್ಥಿರ ವಾಗಿರುವ ಈ ಚಿತ್ತೇ ಆತ್ಮನೆನಿಸಿಕೊಳ್ಳುವುದು. ದೇಶ ಕಾಲ ವಸ್ತು ಭೇದವಿಲ್ಲದೆ ಅಖಂಡವಾಗಿರುವದ್ದರಿಂದ ಬ್ರಹ್ಮವೆನಿಸಿಕೊಳ್ಳುವದು. ವಾಙ್ಮನೋಗೋಚರವಾ ಗದ್ದರಿಂದ ದೃಶ್ಯ ನಿಷೇಧದಲ್ಲಿ ಶೂನ್ಯರೂಪದಿಂ ನಿಲ್ಲುವದು. ಕಾರ್ಯ ಕಾರಣ ಭಾವ ವಂ ವಿಚಾರಿಸುವಲ್ಲಿ ಸರ್ವ ಸ್ವರೂಪವಾಗುವದು. ದೃಶ್ಯವಾಸನೆಯು ನಿಶ್ಶೇಷವಾಗಿ ಹೋಗುವಲ್ಲಿ ಇದೇ ಮೋಕ್ಷವೆಂದು ಪ್ರಖ್ಯಾತವಾಗುವದು. ಸಂಕಲ್ಪ ಕಲ್ಪನೆ ಯಿಂ ಕೂಡಿದ ಈ ಚಿತ್ತೇ ಪಟಲದೋಷಯುಕ್ತವಾದ ಕಣ್ಣಿನಂತೆ ದೃಶ್ಯವಾದ ಜಗತ್ತಿನ ಸ್ವರೂಪವಂ ಚನ್ನಾಗಿ ನೋಡುವದಿಲ್ಲ. ಇದು ಜಿತಕ್ಕದ್ದು ಇದು ಜಿತ

ತಕ್ಕದ್ದಲ್ಲವೆಂದು ಬಾಹ್ಯದೃಷ್ಟಿಯಂ ಕೂಡಿದ ಈ ಚಿತ್ತ ಕಟ್ಟಲ್ಪಟ್ಟ ಪಕ್ಷಿಯಂತೆ ಹಾರುವದಕ್ಕೆ ಶಕ್ತಿಯಿಲ್ಲದೆ ಬದ್ಧವೆನಿಸಿಕೊಳ್ಳುವದು. ಸಂಕಲ್ಪ• ಕಲ್ಪನೆಯುಳ್ಳ ಈ ಜನಗಳು ಕುರುಡು ಹಕ್ಕಿಗಳಂತೆ ಈ ಮೋಹಪಾಶದ ಬಲೆಯಲ್ಲಿ ಬಿದ್ದಿರುವರು. ಸಂಕಲ್ಪ ಕಲ್ಪನೆಗಳಿಂದ ಗಂಧಮಾಲ್ಯ ಸುಂದರೀ ಮೊದಲಾದ ವಿಷಯಗಳೆಂಬ ಹಳ್ಳಗಳಲ್ಲಿ ಬಿದ್ದಿರುವ ನಮ್ಮ ಗುರುಜನಗಳಿಂದ ಯಾವ ಬಾಧೆಯೂ ಇಲ್ಲದ ಈ ಮಾರ್ಗವು ನೋಡಲ್ಪಡಲಿಲ್ಲ. ಆದ್ದರಿಂದ ಕೆಲವು ದಿನ ಭೂಮಿಯಲ್ಲಿದ್ದ ಆ ಜನಗಳು ಬಿಲಗಳಲ್ಲಿನ್ದ ಸೊಳ್ಳೆಗಳಂತೆ ನಷ್ಟರಾದರು. ಈ ತತ್ವಮಾರ್ಗವನ್ನವರು ನೋಡಿದ್ದರೆ ಭೋಗದುಃಖಾರ್ಥಗಳಾಗಿ ಭಾವಾಭಾವ ಪದಾರ್ಥ ಭ್ರಮೆಗಳಿಂ ಕಸ್ತಲೆಗವಿದ ಈ ಹಾಳು ಭಾವಿಗಳಲ್ಲಿ ಎಂದಿಗೂ ಬೀಳರು. ರಾಗದ್ವೇಷಗಳಿಂ ಬುಂಟಾದ ದ್ವಂದ್ವ ಮೋಹದಿಂ ಈ ಪ್ರಾಣಿಗಳು ಭೂಮಿಯ ಬಿಲಗಳಲ್ಲಿರುವ ಹುಳುಗಳಂತಿರುವರು. ರಾಗ ದ್ವೇಷೋದಿತವಾದ ಇಷ್ಟಾನಿಷ್ಟವೆನಿಸುವ ಕಲ್ಪನೆಗಳೆಂಬ ಈ ಮರು ಮರೀಚಿಕೆಗಳು ತತ್ವಜ್ಞಾನವೆಂಬ ಮೇಘದಿಂ ಯಾವನಿಗೆ ಆಣಗುವವೋ ಅವನೇ ಬದುಕಿರುವಂಥಾವನು. ಪರಿಪೂರ್ಣಭಾವದಿಂ ರಾಗದ್ವೇಷ ದೋಷಗಳಿಲ್ಲದ ಈ ಚಿತ್ತಿಗೆ ಈ ಕುಕಲ್ಪನೆಗಳು ಬೆಳದಿಂಗಳಿಗೆ ಉಷ್ಣವಾದ ಕಳಂಕಗಳಂತೆ ಎಂದಿಗೂ ಸಂಭವಿಸಲಾರವು. ಈ ಪ್ರಕಾರವಾಗಿ ಚಿದ್ರೂಪದಿಂದಾತ್ಮನೆನಿಸಿಕೊಳ್ಳುವ ನನ್ನಂ ನಾನೇ ನಮಿಸುವೆನು. ಲೋಕಗಳಿಗೆ ಜ್ಞಾನ ಪ್ರಕಾಶಕವಾದ ಮಣಿರೂಪದಿಂದಿರುವ ಆತ್ಮನೇ ನೀನು ನನ್ನಿಂದ ಬಹುಕಾಲಕ್ಕೆ ಲಬ್ಧನಾಗಿದ್ದೀಯೆ. ವಿಚಾರದಿಂ ಲಬ್ಧನಾದ ನೀನು ಈಗ ಅಭ್ಯುದಯವಂ ಹೊಂದಿದ್ದೀಯೆ. ಸಮಸ್ತ ವಿಕಲ್ಪಗಳಿಂದಲೂ ಉದ್ಧರಿಸಲ್ಪಟ್ಟನೀನು ನಿಜಸ್ವರೂಪದಿಂದೀಗ ಪ್ರಕಾಶಿಸುತಲಿದ್ದೀಯೆ. ಪರಿಪೂರ್ಣಭಾವದಿಂ ನನ್ನ ಸ್ವರೂಪದಿಂದಿರುವ ನಿನಗೋಸುಗವೂ ಪರಮ ಮಂಗಳ ಭಾವದಿಂ ನಿನ್ನ ಸ್ವರೂಪದಿಂದಿರುವ ನನಗೋಸುಗವೂ ನಮಸ್ಕಾರವು. ಸಮಸ್ತ ದೇವತೆಗಳಿಗೂ ಅಧಿದೇವತೆಯಾಗಿ ಸಮಸ್ತಭಾವಗಳಿಗೂ ದೂರನಾಗಿ ಪರಮಾತ್ಮನೆನಿಸಿಕೊಳ್ಳುವ ನನಗೋಸ್ಕರ ನಮಸ್ಕಾರ. ಮೇಘಾವರಣ ತಪ್ಪಿದ ಪೂರ್ಣ ಚಂದ್ರನಂತೆ ಕಲ್ಪನಾ ವಿಕಲ್ಪಗಳಿಲ್ಲದೆ ಅಖಂಡಾನಂದ ಸ್ವರೂಪವಾದ ತನ್ನಲ್ಲಿ ತಾನೇ ನಿಂತು ಪರಾಧೀನಪ್ರಕಾಶನಲ್ಲದೆ ಸ್ವಯಂ ಪ್ರಕಾಶನಾದ ಪರಮಾತ್ಮನನ್ನು ಅಭೇದಜ್ಞಾನದಿಂ ನಾನು ನಮಿಸುವೆನು. ಯಾವಾವದು ಈ ಜಗತ್ತಿನಲ್ಲಿರುವದೋ ಇದೆಲ್ಲವೂ ತಾರಕಾಕ್ಷರ ರೂಪದಿಂ ಪ್ರಖ್ಯಾತನಾಗಿ ನಿರ್ವಿಕಾರನಾಗಿರುವ ಆತ್ಮನಲ್ಲದೇ ಮತ್ತೊಂದಲ್ಲ. ಸರ್ವವ್ಯಾಪಕನಾದ್ದರಿಂದ ಸೂರ್ಯಾದಿ

ಗಳನ್ನು ಪ್ರಕಾಶಪಡಿಸುತ್ತಿರುವ ಈ ಆತ್ಮನು ಸರ್ವಾತೀತನಾದಾಗ್ಯೂ ವ್ಯಾಪಕವಾದ ಪ್ರಕಾಶರೂಪದಿಂದಲೇ ಸರ್ವಸ್ವರೂಪನೆಂದು ಪ್ರಖ್ಯಾತನಾಗಿರುವನು. ಈ ಆತ್ಮನು ಧೊರೆಯು ಜನಗಳಿಗೆ ಅಧಿಕಾರವಂ ಕೊಡುವಂತೆ ಅಗ್ನಿಗೆ ಉಷ್ಣಭಾವವನ್ನೂ, ರಸದ್ರವ್ಯಕ್ಕೆ ರುಚಿಯನ್ನೂ ಇದೇ ಪ್ರಕಾರ ಸಕಲ ಪದಾರ್ಥಗಳಿಗೂ ಆಯಾಯ ಗುಣಗಳಂ ಕೊಡುವನು. ಮತ್ತು ಪ್ರಜೆಗಳಿಂದ ಕಂದಾಯವನ್ನು ಸ್ವೀಕರಿಸುವಂತೆ ಇಂದ್ರಿಯಗಳ ಭೋಗವಂ ಗ್ರಹಿಸುವನು. ಇವನು ಚ್ಯುತಿಯಿಲ್ಲದ ಸ್ವಭಾವವುಳ್ಳವನಾದ್ದರಿಂದ ನಿಂತಿದ್ದರೂ ನಿಲ್ಲದಿರುವನು. ಕಲ್ಪನಾ ವಶೀಲತೆಗಳಿಂದ ಹೋಗುತ್ತಿದ್ದರೂ ನಿಂತಿರುವನು. ಶಾಂತನಾಗಿದ್ದರೂ ವ್ಯವಹಾರಪರನಾಗಿರುವನು. ಸಕಲ ಕರ್ಮಗಳಂ ನೆರವೇರಿಸುತ್ತಿದ್ದರೂ ಕರ್ಮಲೇಪವಿಲ್ಲದಿರುವನು. ಸಮಸ್ತ ಪ್ರಾಣಿಗಳ ಕ್ಷೇತ್ರನಲ್ಲಿದ್ದು ಕರ್ಮಸಾಕ್ಷಿಯಾಗಿರುವ ಸೂರ್ಯನಿಗೆ ಹೇಗೆ ದೃಶ್ಯ ಸಂಬಂಧದಿಂ ವಿಕಾರ ಸಂಭವಿಸುವುದಿಲ್ಲವೋ ಹಾಗೆ ಸಕಲ ಕರ್ಮಗಳನ್ನು ಪ್ರೇರಕ ಭಾವದಿಂ ನೆರವೇರಿಸುತ್ತಿದ್ದಾಗ್ಯೂ ಸರ್ವಪ್ರವೃತ್ತಿಸಾಕ್ಷಿ ಭಾವದಿಂದ ಪೂರ್ವದಲ್ಲೂ ಈಗಲೂ ಈ ಲೋಕದಲ್ಲೂ ಪರಲೋಕದಲ್ಲೂ ಸ್ವಪ್ನದಂತೆ ಉಭಯ ಸಂಧಿಗಳಲ್ಲೂ ಆಯಾಯ ವಿಕಾರಗಳು ಸಂಭವಿಸದೇ ಇವನು ಏಕರೀತಿಯಾಗಿಯೇ ಇರುವನು. ಉತ್ಪತ್ತಿರಹಿತನಾದ ಈ ಆತ್ಮನು ಅನವರತ ಆಯಾಯ ಕರ್ಮಕ್ಕೆ ಸರಿಯಾಗಿ ಆವಿರ್ಭವಿಸುವನು. ಭೋಕ್ತೃ ಭೋಗ್ಯಾದಿ ಭಾವಗಳನ್ನೂ, ಹದಿನಾಲ್ಕು ಲೋಕಗಳನ್ನೂ, ಬ್ರಹ್ಮ ಮೊದಲಾಗಿ ತೃಣಪರ್ಯಂತವಾದ ಜಗವನ್ನು, ಕಾಲಕರ್ಮ ಭೇದದಿಂದ ನಾನಾವಿಧ ವ್ಯಕ್ತಿಗಳನ್ನು ಉಂಟುಮಾಡುತ್ತಾ ರಕ್ಷಿಸುತ್ತಿರುವನು. ವಾಯುವಿಗಿಂತಲೂ ಗತಿಶಾಲಿಯಾಗಿ ಮರಕ್ಕಿಂತಲೂ ಸ್ಥಿರಸ್ವಭಾವನಾಗಿ ಆಕಾಶಕ್ಕಿಂತಲೂ ನಿರ್ಲೇಪನಾದ ಆತ್ಮನು ಚಿಗುರುಗಳಂ ಗಾಳಿಯಂತೆ ಪ್ರಾಣಿಗಳ ಮನಸ್ಸುಗಳನ್ನಲ್ಲಾಡಿಸುವನು. ರಥದ ಕುದುರೆಗಳಂ ಸಾರಥಿಯಂತೆ ಇಂದ್ರಿಯಗಳಂ ನಡೆಸುವನು. ಅತಿ ದರಿದ್ರನು ಗೃಹಕೃತ್ಯಗಳಂ ನೋಡುವಂತೆ ದೇಹವ್ಯಾಪಾರಗಳಂ ನೋಡಿಕೊಳ್ಳುತ್ತಾ ಸಾರ್ವಭೌಮನಂತೆ ಭೋಗಗಳನ್ನನುಭವಿಸುತ್ತಲೂ ಸ್ವಸ್ಥನಾಗಿರುವನು. ವಿಚಾರಮಾರ್ಗದಿಂ ಹುಡುಕುವದಕ್ಕೂ, ಸ್ತುತಿಸುವದಕ್ಕೂ, ಧ್ಯಾನಿಸುವದಕ್ಕೂ, ಇವನೇ ಯೋಗ್ಯನೆಂದು ನಂಬಿದವನಿಗೆ ಜರಾಮರಣ ಮೋಹವನ್ನಿವನೇ ತಪ್ಪಿಸುವನು. ಶರೀರಲ್ಲಿರುವ ಪದ್ಮಕ್ಕೆ ಭ್ರಮರನಂತಿರುವ ಆತ್ಮನು ಜ್ಞಾನಮಾತ್ರದಿಂ ಲಭ್ಯನಾದ್ದರಿಂದ ಸುಲಭನೆನಿಸುವನು. ಆಪ್ತ ಬಂಧುವಂತೆ ಸ್ಮೃತಿಮಾತ್ರದಿಂ ಸ್ವಾಧೀನ

ನಾಗುವನು. ಸೆಳೆಯುದಿದ್ದರೂ ಕರೆಯುದಿದ್ದರೂ ದೇಹದಲ್ಲಿಯೇ ಸಿದ್ಧವಾಗಿರುವನು. ಪ್ರಣವೋಚ್ಚಾರಣಾದಿಗಳಿಂದ ಕರದಕ್ಷಣವೇ ಸನ್ಮುಖನಾಗುವನು. ಧನಿಕನಿಗೆ ತಾನೇ ದೊಡ್ಡವನೆಂದು ಮದವು ತನ್ನಂ ತನ್ನಂ ಸೇವಿಸದಿರುವನಲ್ಲಿ ನೀಚನೆಂಬ ಬುದ್ಧಿಯೂ ಹೇಗೆ ಇರುವದೋ ಹಾಗೆ ಇವನಿಗೆ ಇಲ್ಲ. ಪುಷ್ಪದಲ್ಲಿ ಪರಿಮಳದಂತೆಯೂ, ತಿಲದಲ್ಲಿ ತೈಲದಂತೆಯೂ, ಚಂದ್ರನಲ್ಲಿ ಶೈತ್ಯದಂತೆಯೂ, ಮಸಿಯಲ್ಲಿ ಕಪ್ಪಿನಂತೆಯೂ, ಮರದಲ್ಲಿ ಅಗ್ನಿಯಂತೆಯೂ, ರಸವಸ್ತುವಿನಲ್ಲಿ ರುಚಿಯಂತೆಯೂ, ಈ ಆತ್ಮನು ದೇಹದಲ್ಲಿಯೇ ಇರುವನು. ಸರ್ವದಾ ಹೃದಯದಲ್ಲಿದ್ದಾಗ್ಯೂ ಬಹುಕಾಲಕ್ಕೆ ಕಂಡ ಬಂಧುವಿನಂತೆ ಈ ಆತ್ಮನು ವಿಚಾರದಿಂದಲೇ ತಿಳಿಯಲ್ಪಡುವನು. ತಿಳಿದ ಕ್ಷಣವೇ ಸಂತೋಷವನ್ನುಂಟುಮಾಡುವನು. ಈ ಬಂಧುವು ಇಂಥಾವನೆಂದು ತಿಳಿದ ಕೂಡಲೇ ದೇಹಾತ್ಮಜ್ಞಾನವು ತಪ್ಪುವದ್ದರಿಂದ ಕುಲಾಭಿಮಾನ ಮೊದಲಾದ ಪಾಶಾಷ್ಟಕವು ನಷ್ಟವಾಗುವದು. ಅದ್ವಿತೀಯ ಭಾವದಿಂದ ಮೂಷಕಗಳು ಮನೆಯಂ ಕೊರೆಯುವಂತೆ ಆಸೆಗಳು ಕಾಮಾದಿ ಶತ್ರುಗಳು ಸಹ ಮನವಂ ಭೇದಿಸಲಾರವು. ಅವನ ಸ್ಥಿತಿಯಿಂದಲೇ ಜಗತ್ತಿಗೆ ಸ್ಥಿತಿಯಾದ್ದರಿಂದ ಇವನ ದರ್ಶನದಿಂದಲೇ ಸಕಲವು ದೃಷ್ಟವಾಗುವದು. ಇವನ ಶ್ರವಣದಿಂದಲೇ ಸರ್ವವೂ ಶ್ರುತವಾಗುವದು. ಇವನ ಸ್ಪರ್ಶದಿಂದಲೇ ಸಮಸ್ತವು ಸ್ಪೃಷ್ಟವಾಗುವದು. ಎಲ್ಲರೂ ಮಲಗಿರುವಲ್ಲಿ ಇವನು ಎಚ್ಚರವಾಗಿರುವನು. ಮೂಢಭಕ್ತಿಯಿಂದ ಶರಣಾಗತರಾದವರಿಗೆ ವಿವೇಕವನ್ನುಂಟುಮಾಡುವನು, ಅಖಂಡೋಪಾಸನೆಯಂ ತಿಳಿಯದೆ ದುಃಖಪಡುವರ ದುಃಖವಂ ಪರಿಹರಿಸುವನು. ಭೇದೋಪಾಸನೆಯಂ ಮಾಡುವರಿಗೆ ದುಃಖವಂ ಕೊಡುವನು. ಇವನು ಅಖಂಡಾತ್ಮಭಾವದಿಂದ ಅಂತಶ್ಶಾಂತನಾಗಿ ಭೋಕ್ತೃಭಾವದಿಂದಿರುವ ತನ್ನನ್ನನುಭವಿಸುತ್ತಾ ಮೆಣಸಿನಲ್ಲಿ ಕಾರದಂತೆ ಸರ್ವಶರೀರದಲ್ಲೂ ಇರುವನು. ತ್ರಿಕಾಲಜ್ಞಾನದಿಂ ಪದಾರ್ಥಗಳಲ್ಲಿ ಒಳಗೂ ಹೊರಗೂ ಸಹ ವ್ಯಾಪಿಸಿಕೊಂಡು ಸತ್ತಾಸಾಮಾನ್ಯರೂಪದಿಂದಿರುವನು. ಕಾಲದಂತೆಯೂ, ದೇಶದಂತೆಯೂ, ರಾಜಾಜ್ಞೆಯಂತೆಯೂ, ಇವನು ಸರ್ವವ್ಯಾಪಿಯಾಗಿರುವನು. ಇಂದ್ರಿಯ ಮನೋವ್ಯಾಪಾರಗಳಿಂದ ಸೂರ್ಯಾದಿ ದೇವತೆಗಳಿಗೆ ಬೋಧೆಯನ್ನುಂಟುಮಾಡುವದ್ದರಿಂದ ಇವನು ಮಹಾದೇವನೆನಿಸುವನು. ಇಂಥಾ ನನಗೆ ಜಲದಿಂದ ಪದ್ಮಪತ್ರಕ್ಕೂ ಧೂಳಿಯಕಣದಿಂದ ಗಗನಕ್ಕೂ ಸಂಬಂಧವಿಲ್ಲದಂತೆ ಕಲ್ಪನಾಸಂಬಂಧವಿಲ್ಲ.

ಪಾಷಾಣಕ್ಕೆ ಭಯ ಕಂಪಾದಿಗಳಂತೆ ಮಾನಸಿಕ ಕಲ್ಪನೆಗಳು ನನಗೆ

ಸಂಭವಿಸಲಾರವು. ಸೋರೆ ಬುರುಡೆಯಮೇಲೆ ಜಲಧಾರೆಗಳಂತೆ ಸುಖ ದುಃಖ ಸಂಪತ್ತುಗಳು ನನ್ನ ದೇಹದಮೇಲೆ ಎಷ್ಟು ಬಿದ್ದರೂ ಅವರಿಂದ ನನಗೆ ಬಾಧಕವಿಲ್ಲ. ಎಣ್ಣೆ ಬತ್ತಿ ಹಣತೆಗಳನ್ನತಿಕ್ರಮಿಸಿರುವ ದೀಪದ ಬೆಳಕು ಹಗ್ಗದಿಂದ್ಹ್ಯಾಗೆ ಕಟ್ಟಲ್ಪಡಲಾರದೋ ಹಾಗೆ ಅಂತಃಕರಣ ಮೊದಲಾದ ಭಾವಪದಾರ್ಥಗಳನ್ನತಿಕ್ರಮಿಸಿರುವ ನಾನು ಆ ಪದಾರ್ಥಗಳ ಧರ್ಮದಿಂ ಬದ್ಧನಾಗುವದಿಲ್ಲ. ಇರುವ ಪದಾರ್ಥವಿದು, ಇದು ಇಲ್ಲದ್ದೆಂದು ಬಾಹ್ಯ ಪದಾರ್ಥಗಳನ್ನು ಪರಿಗ್ರಹಿಸುತ್ತಿರುವ ಚಕ್ಷುರಾದೀಂದ್ರಿಯಗಳಿಂದ ನನಗೆ ಸಂಬಂಧವೇನು ? ಯಾವನಿಂದಲಾದರೂ ಆಕಾಶವೂ ಮನವೂ ಕೂಡ ಕಟ್ಟಲ್ಪಡುವದೆ ? ಗಡಿಗೆ ತೂತಾದರೂ ಚೂರಾದರೂ ಅದರಲ್ಲಿರುವ ಆಕಾಶಕ್ಕೆ ಹ್ಯಾಗೆ ಬಾಧೆಯಿಲ್ಲವೋ ಹಾಗೆ ಶರೀರದ ಬಾಧೆಯಿಂ ನನಗೆ ಬಾಧೆಯಿಲ್ಲ. ಸುಖ ದುಃಖ ವಾಸನೆಗಳುಳ್ಳ ಮನವು ಭ್ರಾಂತಿ ಪಿಶಾಚವಂತೆ ಪುಟ್ಟಿರುವದು. ಮನಸ್ಸಾಕ್ಷಿಯಾದ ಪರಮಾತ್ಮನೇ ನಾನೆಂಬ ಜ್ಞಾನವಿರುವಲ್ಲಿ, ಜಡರೂಪ್ಯವಾದ ಆ ಮನದ ಬಾಧೆಯಿಂ ನನಗೇನು ಬಾಧೆಯುಂಟಾದೀತು. ಈಗ ಆ ಮನವು ಸುಳ್ಳೆಂದು ತೋರಿದ್ದರಿಂದ ಆನಂದಪೂರ್ಣನಾಗಿರುವೆನು. ಪ್ರಕೃತಿಯು ಭೋಗಿಸುವದು, ಮನವು ಸ್ವೀಕರಿಸುವದು, ದೇಹ ಸಂಕಟಪಡುವದು, ಇದರಿಂದ ಸಾಕ್ಷಿಯಾದ ಆತ್ಮನು ದುಃಖಪಡುವನು. ಇದೆಲ್ಲವೂ ಅವಿವೇಕದಿಂದಲ್ಲದೆ ಮತ್ತೊಂದರಿಂದಲ್ಲ. ಬರುವಂಥಾದ್ದೇ ಬರುವದಾದ್ದರಿಂದ ಸುಖದುಃಖಗಳು ಬಂದರೂ ಬರಲಿ, ಹೋದರೂ ಹೋಗಲಿ, ಭೋಗ ತ್ಯಾಗಗಳಲ್ಲಿ ನನಗೆ ಅಪೇಕ್ಷೆ ಇಲ್ಲ. ದೇಹದಲ್ಲಿ ವಾಸನೆಗಳು ಪುಟ್ಟಿದಾಗ್ಯೂ ಹೋದಾಗ್ಯೂ ಅವುಗಳಲ್ಲಿ ನಾನು ಸೇರದೆ ಇರುವದು. ನನ್ನಲ್ಲಿ ಅವುಗಳ ಸಂಬಂಧವೇನೂ ಇಲ್ಲದ್ದರಿಂದ ನಾನು ತಟಸ್ಥನಾಗಿದ್ದಾಗ್ಯೂ ಇದುವರೆಗೆ ಅಜ್ಞಾನವೆಂಬ ಶತ್ರುವಿನಿಂದ ಇತರ ಪದಾರ್ಥಗಳಲ್ಲಿ ನಾನೆಂದು ಅಭಿಮಾನಪಡುತ್ತಾ ದುಃಖಪಟ್ಟೆನು. ಈಗ ಮಹಾವಿಷ್ಣುವಿನ ಪ್ರಸಾದರೂಪವಾದ ವಿಚಾರದಿಂದಾ ಶತ್ರುವು ನಷ್ಟವಾಗಲು, ಬಂಧನ ವಿಮುಕ್ತನಂತೆ ಸುಖದಿಂದಿರುವೆನು. ತತ್ವಜ್ಞಾನವೆಂಬ ಮಂತ್ರದಿಂದಹಂಕಾರವೆಂಬ ಪಿಶಾಚವು ನನ್ನ ಶರೀರದಿಂದಾಚೆಗೆ ಓಡಿಹೋಯಿತು. ಈಗ ನನ್ನ ಸಂತೋಷದಿಂದೀ ಶರೀರ ವೃಕ್ಷವು ಪುಟ್ಟಿಸಿರುವಂತೆ ಪ್ರಕಾಶಿಸುತಲಿದೆ. ದುರಾಸೆಗಳಿಂ ಕೂಡಿದ ಅಜ್ಞಾನವೆಂಬ ದಾರಿದ್ರ್ಯವು ಹೋದ್ದರಿಂದ ವಿವೇಕವೆಂಬ ಧನದಿಂದೀಗ ನಾನು ಪರಮೋತ್ಕರ್ಷನಾಗಿರುವೆನು. ಈಗ ತಿಳಿಯತಕ್ಕದ್ದು ತಿಳಿಯಿತು. ಕಾಣತಕ್ಕದ್ದು ಕಂಡಿತು. ಯಾವದನ್ನು ಪಡೆದದ್ದರಿಂದ ಪಡೆಯತಕ್ಕದ್ದು ಮತ್ತೊಂದಿಲ್ಲವೋ

ಅಂಥಾದ್ದು ಪಡೆಯಲ್ಪಟ್ಟಿತು. ದೈವಯೋಗದಿಂದಹಂಕಾರವೆಂಬ ಅನರ್ಥ ಪಿಶಾಚವು ವಿಷಯಗಳೆಂಬ ಸರ್ಪಗಳು ಅಜ್ಞಾನವೆಂಬ ಮಂಜೂ, ಆಶೆಗಳೆಂಬ ಮರುಮರೀಚಿಗಳೂ, ರಜೋಗುಣವೆಂಬ ಧೂಳೂ ಸಹಾ ಇಲ್ಲದೆ ಶೀತಲವಾದ ಉಪಶಮನವೆಂಬ ಉದ್ಯಾನದಿಂ ಮನೋಹರವಾದ ಈ ಪರಮಾರ್ಥ ಭೂಮಿಯಂ ಹೊಂದಿದೆನು. ಸ್ತುತಿಯಿಂದಲೂ, ನಮಸ್ಕಾರದಿಂದಲೂ. ಅಂತಃಕರಣ ನಿಗ್ರಹದಿಂದಲೂ, ಸರ್ವ ಕಾಲಿಕವಾದ ವಿಚಾರ ನಿಯಮದಿಂದಲೂ, ಜ್ಞಾನ ಗೋಚರನಾದ ಈ ಆತ್ಮನು ಚನ್ನಾಗಿ ಕಾಣಿಸಿಕೊಂಡು ಪಡೆಯಲ್ಪಟ್ಟನು. ಅಖಂಡಭಾವದಿಂ ಬ್ರಹ್ಮವೆನಿಸಿಕೊಳ್ಳುತ್ತ ಅಹಂಕಾರಕ್ಕೆ ದೂರನಾದ ಈ ಆತ್ಮನು ಲಕ್ಷ್ಮೀಪತಿಯ ಪ್ರಸಾದದಿಂದ ಬಹುಕಾಲಕ್ಕೆ ನನ್ನ ಸ್ಮರಣಮಾರ್ಗವಂ ಹೊಂದಿದನು. ಭ್ರಾಂತಿ ಪಿಶಾಚವಂತಿರುವ ಅಂತಶ್ಶತ್ರುವಾದ ಅಹಂಕಾರದಿಂ ನಾನು ಇಂದ್ರಿಯಗಳೆಂಬ ಸರ್ಪಗಳಿಗೆ ಬಿಲವಾದ ವಿಷಯಗಳಲ್ಲಿ ಕಾಲನ್ನಿಟ್ಟೆನು. ಉತ್ಪತ್ತಿಗಳೆಂಬ ಭಾವಿಗಳಲ್ಲೂ ಮರಣಗಳೆಂಬ ಹಳ್ಳಗಳಲ್ಲೂ ಬಿದ್ದೆನು. ವಾಸನೆಗಳೆಂಬ ವನಗಳಲ್ಲಿ ಆಶೆಗಳೆಂಬ ಹೊಂಗೇ ಮಳೆಗಳಂ ಸೇರಿ ಕಾಮವಿಕಾರದಿಂ ಕೂಗಿಕೊಂಡೆನು. ಸ್ವದುಃಖಗಳೆಂಬ ಕಾಡುಗಿಚ್ಚುಗಳಿಂ ಸುಡಲ್ಪಟ್ಟೆನು. ಪರದುಃಖಗಳೆಂಬ ಕಳ್ಳರಿಂದ ವ್ಯಥೆಪಟ್ಟೆನು. ವಿಪತ್ಸಂಪತ್ತುಗಳಲ್ಲಿ ಬಿದ್ದೇಳುವದರಿಂದಲೂ, ಸುಖದುಃಖ ಸಮುದ್ರಗಳಲ್ಲಿ ಮುಳುಗಿ ತೇಲುವದರಿಂದಲೂ, ಜ್ಞಾನಾಜ್ಞಾನ ವಿಷಯಗಳಲ್ಲಿ ಪ್ರಕಾಶಿಸಿ ಮರೆಯಾಗುವದರಿಂದಲೂ ಆಶೆಗಳೆಂಬ ಪಾಶಗಳಿಗೆ ಸಿಕ್ಕಿಕೊಂಡು ಕಷ್ಟಪಟ್ಟೆನು. ಶ್ರೀಪತಿಯು ನಿಮಿತ್ತವಾಗಲಾಗಿ ಸ್ವಕೀಯವಾದ ವಿಚಾರರೂಪ ಪ್ರಯತ್ನದಿಂದೀಗ ವಿವೇಕ ಸಂಪತ್ತುಂಟಾಯಿತು. ಎಲೈ ಪರಮಾತ್ಮನೇ ಈಗ ನೀನು ಪ್ರಕಾಶವಾಗಲಾಗಿ ದೀಪದಿಂದಂಧಕಾರದಂತೆಯೂ, ಸೂರ್ಯನಿಂದ ಕಳ್ಳನಂತೆಯೂ, ಅಹಂಕಾರವು ಓಡಿಹೋಯಿತು. ಅಜ್ಞಾನದಿಂ ಪುಟ್ಟಿದ ಅಹಂಕಾರ ಪಿಶಾಚದಿಂ ಬಿಡಲ್ಪಟ್ಟ ನಾನು ಅಜಗರದಿಂ ಬಿಡಲ್ಪಟ್ಟ ಕ್ರೀಡಾವನದಂತಿರುವೆನು. ತಸ್ಕರನಿಂ ಬಿಡಿಸಲ್ಪಟ್ಟ ಧನಿಕನಂತೆ ಜ್ಞಾನಧನನಾದ ನಾನು ಇಂದ್ರಿಯ ತರಂಗಗಳ ಸಂಭ್ರಮಣಾಗಿ ಆಶೆಗಳೆಂಬ ಮರು ಮರೀಚಿಗಳಿಂದುಂಟಾದ ಭ್ರಮೆಯಂ ಬಿಟ್ಟು ಆನಂದಪಡುತ್ತಿರುವೆನು. ವರ್ಷಾಕಾಲದ ವರ್ಷಗಳಿಂ ಶಾಂತವಾದ ಕಾಡ್ಗಿಚ್ಚುಗಳುಳ್ಳ ವನಾಂತದಂತೆ ಶಾಂತನಾಗಿರುವೆನು. ವಿಚಾರದಿಂದಹಂಕಾರವು ತೊಡೆಯಲ್ಪಡಲು ಅಜ್ಞಾನವೂ, ದುಃಖಗಳೂ, ದುರಾಶೆಗಳೂ, ಮನೋವ್ಯಥೆಗಳೂ ಸಹ ಹೇಗೆ ಉಂಟಾಗುವವು? ಗೋಡೆ ಇದ್ದರೆ ಚಿತ್ರ ಉಂಟಾಗುವಂತೆ ಅಹಂಕಾರ

ವಿರುವದ್ದರಿಂದ ಸ್ವರ್ಗ, ನರಕ, ಬಂಧ, ಮೋಕ್ಷ ಸಂಭ್ರಮಗಳುಂಟಾಗುವವು. ಮಲಿನವಾದ ವಸ್ತ್ರದಲ್ಲಿ ರಂಗು ಹತ್ತದೇಯಿರುವಂತೆ ಅಹಂಕಾರವೆಂಬ ಪಿತ್ತವಿಕಾರ ದಿಂ ಮಲಿನನಾದ ನನ್ನಲ್ಲಿ ಪರಮಾತ್ಮನೇ ನಾನೆಂಬ ಜ್ಞಾನಚಮತ್ಕಾರವು ಹತ್ತಲಿಲ್ಲ. ದೇಹಾದ್ಯಂತಃಕರಣಾಂತವಾದ ಜಡಪದಾರ್ಥಗಳಲ್ಲಿ ಯಾವದೂ ನಾನಲ್ಲವೆಂದು ಜ್ಞಾನವೆಂಬ ಶರತ್ಕಾಲದ ಉದಯದಿಂ ಸೈಲ್ಯವನ್ನುಂಟುಮಾಡುವ ಆಶೆಯೆಂಬ ಜಲವು ಬಿದ್ದುಹೋಗಲು ಅಹಂಕಾರ ಮೇಘವು ನಿರಹಂಕಾರ ರೂಪದಿಂ ನಿರ್ಮಲ ವಾಗಿ ಚಿತ್ತಾಕಾಶದಲ್ಲಿ ಪ್ರಕಾಶಿಸಲು ಆತ್ಮನೆಂಬ ಚಂದ್ರನ ಅಖಂಡವಾದ ಜ್ಞಾನ ವೆಂಬ ಚಂದ್ರಿಕೆ ಈಗ ಪ್ರಕಾಶಿಸುತ್ತಿರುವದು. ಅಹಂಕಾರವೆಂಬ ಕೆಸರಡಗಲು ನಿರ್ಮಲಜ್ಞಾನವೆಂಬ ಜಲದಿಂ ಪೂರ್ಣವಾಗಿರುತ್ತಾ ನೀನು ನಾನೆಂಬ ಭೇದವಿಲ್ಲದ್ದ ರಿಂದ ನೀನೆಂತಲೂ ನಾನೆಂತಲೂ ಪೇಳಲ್ಪಡುವ ಆನಂದ ಸರೋವರಕ್ಕೆ ನಮಸ್ಕಾ ರವು. ಅಹಂಕಾರವೆಂಬ ಮೇಘವೂ ಆಶೆಯಂಬ ಕಾಡುಗಿಚ್ಚು ಇಲ್ಲದೆ ಆನಂದ ಪರ್ವತ ರೂಪದಿಂದಿರುವ ನನಿಗೋಸ್ಕರ ನಮಸ್ಕಾರ. ಚಿಂತೆಗಳೆಂಬ ಅಲೆಗಳಿಲ್ಲದೆ ಆನಂದ ಪದ್ಮದಿಂ ಪೂರ್ಣವಾಗಿ ಮಾನಸ ಸರೋವರ ರೂಪದಿಂದಿರುವ ನನಿಗೋ ಸ್ಕರ ನಮಸ್ಕಾರ. ಜ್ಞಾನಪ್ರಕಾಶಗಳೆಂಬ ರಕ್ಕೆಗಳಿಂದ ಸಮಸ್ತ ಪ್ರಾಣಿಗಳ ಮನಸ್ಸೆಂಬ ಮಾನಸ ಸರೋವರಗಳಲ್ಲಿ ಆಡುತ್ತಾ ಹೃದಯ ಕಮಲದಲ್ಲಿ ಹಂಸ ರೂಪನಾಗಿರುವ ನನಿಗೋಸ್ಕರ ನಮಸ್ಕಾರ. ಜ್ಞಾನ ಕಲೆಗಳಿಂ ಪೂರ್ಣನಾಗಿಅಜ್ಞಾ ನಕಳಂಕವಿಲ್ಲದೆ ಅಮೃತಸ್ವರೂಪದಿಂ ನಿತ್ಯಪ್ರಕಾಶನಾಗಿರುವ ನಾನೆಂಬ ಚಂದ್ರ ನಿಗೆ ನಮಸ್ಕಾ, ಮತ್ತು ದಶೇಂದ್ರಿಯ, ಪಂಚ ವಿಷಯಾಂತರಂಗಗಳಿಂ ಷೋಡಶ ಕಲಾ ಸಂಪೂರ್ಣನಾದ ಆತ್ಮ ಚಂದ್ರನಿಗೆ ನಮಸ್ಕಾರ, ನಿತ್ಯಪ್ರಕಾಶದಿಂದುದಯಾಸ್ತಗ ಳಿಲ್ಲದೆ ಅಜ್ಞಾನಾಂಧಕಾರವಂ ಓಡಿಸಿ ಚಂದ್ರನಂತೆ ಆನಂದಕರನಾಗಿರುವ ನನಿಗೆ ನಮಸ್ಕಾರ. ಎಲ್ಲಾ ಕಡೆಯಲ್ಲೂ ನಾನೆಂಬ ಭಾವದಿಂದತಿಶಯವಾದ ಪ್ರೇಮವೆಂಬ ಘೃತದಿಂ ಪ್ರಕಾಶಿಸುತ್ತಾ ಪ್ರಾಣಿಗಳ ಸ್ವಭಾವವೆಂಬ ಪಣತಯೇ ಆಧಾರವಾಗಿ ಸದಸದ್ಬುದ್ಧಿಗಳೆಂಬ ಪದಾರ್ಥಗಳಂ ತೋರಿಸುವ ಜ್ಞಾನದೀಪಕ್ಕೆ ನಮಸ್ಕಾರ. ಎಲೈ ಪರಮಾತ್ಮನೆ ಈಗ ನೀನೇ ನಾನೆಂಬ ನಿಶ್ಚಯ ಉಂಟಾಗಲು ಕಬ್ಬಿಣದ ಸುತ್ತಿಗೆ ಯಿಂದ ಕಾದ ಕಬ್ಬಿಣದಂತೆ ಶಾಂತಿಯುಕ್ತವಾದ ಮನಸ್ಸಿನಿಂದ ಕಾಮ ಸಂತಪ್ತ ವಾದ ಮನಸ್ಸು ಭಗ್ನವಾಯಿತು. ಈ ಪ್ರಕಾರ ಆತ್ಮನಿಗೆ ಅಭಿಮುಖವಾದ ಅಂತಃ ಕರಣಾದಿಗಳಿಂದ ಬಹಿರ್ಮುಖವಾದ ಆಯಾಯ ಕರಣಗಳು ಭಗ್ನವಾಗಿ ಸದ್ವೃತ್ತಿ ಗಳಿಂದ ಪ್ರಕಾಶಿಸುತ್ತಿರಲು ಬಾಹ್ಯ ವ್ಯಾಪಾರಗಳಿಲ್ಲದ ನನ್ನ ಶರೀರವು ಪ್ರಾಣಾ

ಪಾನಗಳ ಕ್ರಿಯೆಯಿಂದಲೇ ಕ್ರಿಯಾವಿಶಿಷ್ಟವಾಗಿರುವದು. ಲೀಲೆಯಿಂದನುಗ್ರಹಿಸಲ್ಪಟ್ಟ ಭಕ್ತರುಳ್ಳ ತ್ರಿಮೂರ್ತಿಗಳಿಗಿಂತಲೂ, ಈಗ ನಾನು ಪರಮಾನಂದನಾಗಿರುವೆನು. ಮೋಹವೆಂಬ ಭೇತಾಳನಿಂದಲೂ, ಅಹಂಕಾರವೆಂಬ ರಾಕ್ಷಸನಿಂದಲೂ, ದುರಾಸೆಗಳೆಂಬ ಪಿಶಾಚಿಗಳಿಂದಲೂ ಬಿಡಲ್ಪಟ್ಟ ನನಗೆ ಸಕಲ ಸಂತಾಪವೂ ಶಾಂತವಾಯಿತು. ಶರೀರವೆಂಬ ಪಂಜರದಲ್ಲಿದ್ದ ಅಹಂಕಾರವೆಂಬ ಪಕ್ಷಿಯು ಆಶೆಗಳೆಂಬ ಪಾಶಗಳಿಂ ಬಿಗಿದಿದ್ದ ಬಲೆಯಂ ಕತ್ತರಿಸಿಕೊಂಡು ಎಲ್ಲಿಗೋ ಹೋಯಿತು. ದುರಾಶೆಗಳಿಂ ಬೆಳೆವ ದೇಹಾದ್ಯಭಿಮಾನಗಳಿಂದುಷ್ಟವಾಗೆ ನಾನಾ ವಿಧ ಭಯಗಳೆಂಬ ಸರ್ಪಗಳಿಗೆ ಆಧಾರವಾದ ದುರ್ವಾಸನೆಗಳು ಈಗ ನಷ್ಟವಾದವು. ಎಲಾ ಇದೇನು ಆಶ್ಚರಿಯು, ಇದುವರಿಗೆ ನಾನು ಸರ್ವ ವಿಷಯದಲ್ಲೂ ನಾನು ನಾನೆಂದು ಎದೆಯಂ ತಟ್ಟಿಕೊಳ್ಳುತ್ತಿದ್ದೆನು. ಈಗಲಾ ದುರಹಂಕಾರದಿಂ ಬಿಡಲ್ಪಟ್ಟ ನಾನು ಮಹತ್ತಾದ ಕಷ್ಟದಿಂ ಬಿಡಲ್ಪಟ್ಟವನಂತೆ ಸಂತುಷ್ಟನಾಗಿ ಅಖಂಡಾಕಾರ ವೃತ್ತಿಯಿಂ ಬ್ರಹ್ಮಭಾವವಂ ಹೊಂದಿರುವೆನು. ಆದ್ದರಿಂದ ಪುನಃ ಪುಟ್ಟಿದವನಂತೆ ಇರುವೆನು. ಮಹಾತ್ಮನಾದ ಆತ್ಮನು ಶ್ರವಣ, ಮನನ, ನಿಧಿಧ್ಯಾಸಗಳಿಂದೀಗ ಅನುಭವ ಗೋಚರನಾದನು. ಸ್ತ್ರೀ, ಧನ, ಮೊದಲಾದ ವಿಷಯಗಳಿಂದಲೂ ಅದರ ಆಲೋಚನೆಯಿಂದಲೂ, ಅದರ ಅಪೇಕ್ಷೆಯಿಂದಲೂ, ದುರಹಂಕಾರದಿಂದಲೂ, ಬಿಡಲ್ಪಟ್ಟ ನನ್ನ ಮನವು ಇಂದ್ರಜಾಲ ಮಹೇಂದ್ರಜಾಲ ವಿದ್ಯೆಗಳಂ ತಿಳಿದವನ ಮನದಂತೆ ಯಾವ ವಿಷಯದಲ್ಲೂ ಮೋಹಿಸಿ ಬೀಳದೆ ಶಾಂತವಾಗಿರುವದು. ಸಮುದ್ರದಂತೆ ಅಪಾರವಾಗಿ ಬೆಟ್ಟಗಳಂತೆ ಮಹೋನ್ನತಗಳಾಗಿ ಕಾಡುಮಾರ್ಗದಂತೆ ಅತಿ ವಿಷಮಗಳಾಗಿ, ಕಾಡುಗಿಚ್ಚಿನಂತೆ ಸಹಿಸಲಶಕ್ಯವಾಗಿ ಜನನ ಮರಣ ರೋಗವಂ ಬೆಳಸುವದ್ದರಿಂದ ಮಹತ್ತರವಾದ ಕಾಮ ಕ್ರೋಧಾದಿ ರೋಗವನ್ನುಂಟುಮಾಡುತ್ತಾ ಮಹತ್ತಾದ ಆಪತ್ತುಗಳಂತಿದ್ದ ದುರ್ವಾಸನೆಗಳು ಈಗ ನಷ್ಟವಾದವು. ಭೇದಜ್ಞಾನವಳಿದದ್ದರಿಂದ ಪರಮಾತ್ಮನೆ ನಾನಾಗಿರುವೆನು. ಎಲೈ ಪರಮಾತ್ಮನೆ ಸಮಸ್ತವಾದ ಆನಂದ ಸಾಮ್ರಾಜ್ಯಸ್ಥಾನಗಳನ್ನತಿಕ್ರಮಿಸಿ ಅಖಂಡಾನಂದ ಸ್ವರೂಪದಿಂದಿರುವ ನೀನು ಬಹು ಕಾಲಕ್ಕೆ ಸ್ಮೃತಿವಿಷಯನಾಗಿ ದೈವಯೋಗದಿಂ ಪ್ರಾಪ್ತನಾಗಿದ್ದೀಯೆ, ನಿನಗೆ ನಮಸ್ಕಾರವಾಗಲಿ, ಗುರುವಿನಂತೆ ನಮಿಸಲ್ಪಡುತ್ತಾ ಪರಮ ಪವಿತ್ರನಂತೆ ನನ್ನಿಂದಾಲಿಂಗಿಸಲ್ಪಡುವ ನೀನು ಬಹುಕಾಲ ವಿರಹಿತಳಾದ ಕಾಮಿನಿಯಿಂದ ಪ್ರಾಣಕಾಂತನಂತೆ ನೋಡಲ್ಪಡುತ್ತಲಿದ್ದೀಯೆ, ವಿವೇಕ ವಿಚಾರವಿಲ್ಲದ ಜನರಂ ಹೊಡೆಯುತ್ತೀಯೆ, ಶರಣಾಗತರನ್ನು ರಕ್ಷಿಸುತ್ತೀಯೆ, ಉಪಾಸಕರಿಗೆ ಇಷ್ಟಾರ್ಥವಂ

ಕೊಡುತ್ತೀಯೆ, ಆತ್ಮಜ್ಞಾನಿಗಳನ್ನು ವಾತ್ಸಲ್ಯದಿಂ ಸ್ತುತಿಸುತ್ತೀಯೆ, ಭೇದಭಾವದಿಂ ಸೇವಿಸುವವರಿಗೆ ನಿತ್ಯಾನುಸಂಧಾನದಿಂ ಭೇದಭಾವವಳಿಯಲೋಸುಗ ಮರೆಯಾಗಿ ನಾನಾ ರೂಪದಿಂದಿವರ ಎದುರಿಗೆ ವಿಹರಿಸುತ್ತೀಯೆ, ಇಂಥಾ ನೀನು ವಿವೇಕದಿಂ ಕಾಣಲ್ಪಟ್ಟು ವಿಚಾರದಿಂದ ಅಭಿನ್ನನಾಗಿ ಪ್ರಾಪ್ತನಾಗಿದ್ದೀಯೆ, ಇನ್ನುಮೇಲೇನ ಮಾಡೀಯೆ, ಎಲ್ಲಿಗೆ ಹೋದೀಯೆ, ಸತ್ತಾಸ್ವರೂಪದಿಂದಾಕಾಶಕ್ಕಿಂತಲೂ ಅಧಿಕವಾಗಿ ಸರ್ವ ಪ್ರಪಂಚಗಳನ್ನೂ ವ್ಯಾಪಿಸಿಕೊಂಡು ಸಕಲ ದೇಶ ವಸ್ತು ಕಾಲಗಳಲ್ಲಿಯೂ ಕಾಣಿಸಿಕೊಳ್ಳುವ ನೀನು ಈಗೆಲ್ಲಿಗೆ ಓಡಿ ಹೋದೀಯೇ, ಅಜ್ಞಾನದಿಂದನೇಕ ಜನ್ಮಗಳಲ್ಲಿ ದೂರವಾಗಿದ್ದಂಥಾ ನಿತ್ಯ ಬಂಧುವಾದ ನೀನು ಈಗ ಸಮೀಪಕ್ಕೆ ಬಂದು ಅಭೇದಭಾವದಿಂ ಪ್ರಕಾಶಿಸುತ್ತೀಯೆ, ಸಮಸ್ತ ಕಾರ್ಯಗಳನ್ನೂ ಪೂರ್ವದಲ್ಲಿಯೇ ನೆರವೇರಿಸಿದ್ದಾಗ್ಯೂ ಮಧ್ಯ ಮಧ್ಯದಲ್ಲಿ ಆಯಾಯ ಕಾರ್ಯಗಳಂ ಮಾಡುತ್ತಲೂ, ಸಂರಕ್ಷಿಸುತ್ತಲೂ, ನಿತ್ಯನಾಗಿ ಸಂಸಾರವೆಂಬ ಕಮಲಕ್ಕೆ ತೊಟ್ಟಾಗಿದ್ದಾಗ್ಯೂ ನಿರ್ಮಲಾತ್ಮನಾಗಿರುವ ನಿನಗೋಸ್ಕರ ನಮಸ್ಕಾರವು. ರೂಪಭೇದದಿಂ ಕೈಯಲ್ಲಿ ಚಕ್ರವಂ ಪಿಡಿಯುತ್ತಲೂ, ಚಂದ್ರಕಲೆಯಂ ಸಿರಸ್ಸಿನಿಂದ ವಹಿಸುತ್ತಲೂ, ಕಮಲದಿಂ ಪುಟ್ಟುತ್ತಲೂ, ನಾನಾ ಪ್ರಕಾರವಾಗಿ ಕ್ರೀಡಿಸುವ ನಿನಗೆ ನಮಸ್ಕಾರವಾಗಲಿ. ತರಂಗಕ್ಕೂ ತರಂಗದ ಜಲಕ್ಕೂ ಹೇಗೆ ಭೇದವೆಂಬುವದು ಕಲ್ಪನಾಮಾತ್ರವೋ ಹೇಗೆ ಅಹಮೆಂಬ ಶಬ್ದದಲ್ಲಿ ವಾಚ್ಯ ವಾಚಕಗಳಿಗೂ ವಾಕ್ಯಾರ್ಥ ಲಕ್ಷ್ಯಾರ್ಥಗಳಿಗೂ ಭೇದವೆಂಬುವದು ಸುಳ್ಳು ಕಲ್ಪನೆಯಲ್ಲದೆ ಮತ್ತೊಂದಲ್ಲ. ವಿಚಿತ್ರವಾದ ಇಂಥಾ ಕಲ್ಪನೆಯಿಂದ ನಾನಾವಿಧ ಭೇದಗಳನ್ನುಂಟುಮಾಡಿಕೊಂಡು ಬಾಲಕನಂತೆ ನೀನು ವಿಹರಿಸುತಲಿದ್ದೀಯೆ, ಎಲೈ ಮಹೇಶ್ವರನೆ! ಸರ್ವವ್ಯಾಪಕನಾಗಿ ಸರ್ವ ರೂಪನಾಗಿದ್ದಾಗ್ಯೂ ತನ್ನಂ ತಾನೇ ಭೇದ ದೃಷ್ಟಿಯಿಂ ನೋಡುತ್ತಲೂ, ನಾನಾಪ್ರಕಾರವಾಗಿ ಪುಟ್ಟಿಸುತ್ತಲೂ, ವಿಚಿತ್ರವಾಗಿ ಕ್ರೀಡಿಸುವ ನಿನಗೆ ನಮಸ್ಕಾರವಾಗಲಿ. ಎಲೈ ಪರಮಾತ್ಮನೆ ಗುರುವಿನಂತೆಯೂ, ಆಪ್ತನಂತೆಯೂ, ಬುದ್ಧಿ ಪ್ರೇರಕನಾಗಿ ನನ್ನ ರೂಪದಿಂ ನಿಜತೇಜವಂ ಬಿಟ್ಟಿರುವನಂತೆ ತೋರುತ್ತಾ ಅನೇಕ ಜನ್ಮಗಳಲ್ಲಿ ವಿಚಿತ್ರವಾದ ಲೋಕಸೃಷ್ಟಿಗಳನ್ನೂ, ದೃಷ್ಟಾಂತ ದೃಷ್ಟಿಗಳನ್ನೂ, ನೋಡುತ್ತಾ ದುಃಖ ಪರಂಪರೆಗಳಂ ಸಹಿಸಲಾರದೆ ಶ್ರಮ ಪರಿಹಾರಕ್ಕೋಸುಗ ಈಗ ನೀನು ನಿಜಸ್ವಭಾವವಂ ಪಿಡಿದು ಆನಂದಪಡುತ್ತೀಯೆ, ಎಲೈ ದೇವದೇವನೆ ಕಲ್ಲು, ಮಣ್ಣು, ನೀರು, ಮರಗಳ ಸ್ವರೂಪಮಾತ್ರದಿಂದಿರುವ ಈ ಜಗತ್ತಿನಲ್ಲಿ ನಿನ್ನಂ ಹೊರತು ಯಾವದು ಇಲ್ಲದ್ದರಿಂದ ನಿನ್ನಂ ತಿಳಿದ ಜನವು ಯಾವದನ್ನೂ ಅಪೇಕ್ಷಿಸುವದಿಲ್ಲ. ಈ ಪ್ರಕಾರ

ಸಾರಭೂತನಾದ ನೀನು ಜಡಾ ಜಡ ವಿವೇಕದಿಂ ತೋರಿ ನಿತ್ಯಾನಿತ್ಯ ವಿವೇಕದಿನಿಂತು ಶ್ರವಣ ಮನನ ನಿದಿಧ್ಯಾಸಗಳಿಂದ ಅನುಭವ ಗೋಚರನಾಗಿ ಈಗ ಅಭೇದ ಭಾವದಿಂ ಪ್ರಕಾಶಿಸುತ್ತೀಯೆ, ಪ್ರತಿಬಿಂಬದಿಂ ಬಿಂಬದಂತೆ ಈ ನನ್ನ ರೂಪದಿಂ ನಿಜ ಸ್ವರೂಪವಂ ನೀನು ತಿಳಿದದ್ದರಿಂದ ಪೂರ್ವದಂತೆ ಈಗ ಮೋಹಪಡದೆ ನಿತ್ಯಾನಂದನಾಗಿದ್ದೀಯೆ ಇಂಥಾ ವಿಚಿತ್ರಚರಿತ್ರನಾದ ನಿನಗೆ ನಮಸ್ಕಾರವಾಗಲಿ. ಯಾವನು ಕಣ್ಣಿನೊಳ್ ಬೊಂಬೆಯು ಸ್ವರೂಪದಿಂ ಪ್ರಕಾಶಿಸುತ್ತಾ ವಸ್ತುಗಳಂ ನೋಡುವನೋ ಅವನು ಕಾಣದಿರುವದು ಹೇಗೆ? ಯಾವನು ತಿಲಕ್ಕೆ ಸೇರಿದ ಪುಷ್ಪ ಗಂಧವಂ ತೈಲವು ಗ್ರಹಿಸುವಂತೆ ತ್ವಕ್ಕಿನಿಂದುಂಟಾದ ಸ್ಪರ್ಶವಂ ತಿಳಿವನೋ ಅವನು ಹೇಗೆ ಅನುಭವಕ್ಕೆ ಬರದೇ ಇದ್ದಾನು. ಯಾವನು ಕಿವಿಯಿಂದ ಕೇಳಲ್ಪಟ್ಟ ಕಾವ್ಯೋಕ್ತಿಯನ್ನೊಳಗೆ ಆಲೋಚಿಸುತ್ತಾ ರಸಜ್ಞಾನದಿಂ ಮೈಯಲ್ಲಿ ರೋಮಾಂಚವಂ ಪುಟ್ಟಿಸುವನೋ ಅವನು ಹೇಗೆ ತಿಳಿಯದಿದ್ದಾನು. ಯಾವನು ನಾಲಿಗೆಯಿಂದ ಷಡ್ರಸವಂ ಪಿಡಿವನೋ ಅವನು ಯಾರಿಗೆ ರುಚಿಸಲಾರನು. ಯಾವನು ಮೈಯಲ್ಲಿರುವ ಪುಷ್ಪಮಾಲೆಗಳ ಗಂಧವಂ ಘ್ರಾಣದಿಂ ಗ್ರಹಿಸಿ ಸಂತೋಷದಿಂದ ಮೈಯುಂ ನೋಡುವನೋ ಅವನು ಹೇಗೆ ಗೋಚರವಾಗದೆ ಇದ್ದಾನು. ಈ ಆತ್ಮನು ವೇದ ವೇದಾಂತ ಪುರಾಣೇತಿಹಾಸಾದಿಗಳಿಂ ಚನ್ನಾಗಿ ತಿಳಿಯಲ್ಪಟ್ಟ ಬಳಿಕ ಮರಳಿ ಮರವೆಗೆ ಹ್ಯಾಗೆ ಬಂದಾನು. ಎಲೈ ಮಹಾತ್ಮನೇ! ಪೂರ್ವದಲ್ಲಿ ಸಕ್ಕರೆಯಂತಿದ್ದ ಭೋಗವಸ್ತುಗಳು ಈಗ ಬೇವಿನಕಾಯಿಗಳಂತೆ ಜುಗುಪ್ಸಿತವಾಗುವವು. ಎಲೈ ಪರಮೇಶ್ವರನೇ! ನೀನು ದೀಪದಂತೆ ಒಳಗೆ ಬೆಳಗುವದ್ದರಿಂದ ರತ್ನಕಲಶದಂತೆ ಸೂರ್ಯನು ಪ್ರಕಾಶಿಸುವನು. ಮಂಜಿನ ಸಾರದಂತೆ ನೀನು ಒಳಗಿರುವದ್ದರಿಂದ ಚಂದ್ರಕಾಂತದ ಕುಂಭದಂತೆ ಚಂದ್ರನು ತನುವಾಗಿರುವನು, ನಿನ್ನ ಚೈತನ್ಯದಿಂದಲೇ ಪರ್ವತಗಳು ದೊಡ್ಡವಾದವು. ಅಂತರಿಕ್ಷ ಸಂಚಾರಿಗಳು ಬೀಳದಿರುವರು. ನಿನ್ನಿಂದಲೇ ಅಂತರಿಕ್ಷವು ನಿರಾಲಂಬವಾಗಿ ಶೂನ್ಯವಾಗಿರುವದು. ನಿನ್ನಿಂದಲೇ ಭೂಮಿಯು ಅಚಲೆಯೆನಿಸುವದು, ಎಲೈ ಸರ್ವಾತ್ಮನೇ! ದೈವಯೋಗದಿಂ ನೀನು ನನ್ನ ಭಾವವಂ ಹೊಂದಿದವನಾದೆ, ನಿನ್ನ ಭಾವವಂ ನಾನೂ ಹೊಂದಿರುವೆನು, ಈಗ ನೀನು ನಾನೆಂಬುವದಕ್ಕೆ ಭೇದವಿಲ್ಲದೆ ಆ ಶಬ್ದಗಳು ಪರ್ಯಾಯವಾಗಿರುವವು. ನಾನು ನೀನೆಂಬ ಶಬ್ದಗಳಿಗೆ ವಾಚ್ಯವಾದ ನನ್ನಲ್ಲೂ ನಿನ್ನಲ್ಲೂ ಉಪಾಧಿರಹಿತನಾಗಿ ಭೇದವಿಲ್ಲದೆ ಪ್ರಕಾಶಿಸುವ ಚೈತನ್ಯಕ್ಕೋಸ್ಕರ ನಮಸ್ಕಾರವಾಗಲಿ, ಎಲೈ ಭಗವಂತನೇ! ಅಹಂಕಾರವಿಲ್ಲದೆ ನಾಮರೂಪರಹಿತನಾಗಿ ಪೂರ್ಣಭಾವದಿಂ ನನ್ನ ಸ್ವರೂ

ಪದಿಂದಿರುವ ನಿನಗೆ ನಮುಸ್ಕಾರವು, ಎಲೈ ಪರಮಾತ್ಮನೇ! ದಿಗ್ದೇಶ ಕಾಲಗಳಿಂ ಭೇದವಿಲ್ಲದೆ ನಿರಾಕಾರನಾಗಿ ಪ್ರತ್ಯಗಾತ್ಮನಾದ ನನ್ನಲ್ಲಿಯೇ ನೀನು ಇರುವನ ಲ್ಲದೆ ಹೊರಹೊರಡತಕ್ಕವನಲ್ಲ, ನೀನಿರುವದ್ದರಿಂದಲೇ ಮನಸ್ಸು ಕಲ್ಪಿಸುವದು, ಇಂದ್ರಿಯಗಳು ಚಲಿಸುವವು, ಪ್ರಾಣಾಪಾನಗಳ ಪ್ರವಾಹದಿಂ ಶಕ್ತಿಯುಂಟಾಗು ವದು. ಮನಸ್ಸೇ ಸಾರಥಿಯಾಗಿ ಚರ್ಮ ಮಾಂಸಾಸ್ಥಿಗಳಿಂದ ಯಂತ್ರಗಳಂತಿ ರುವ ಶರೀರ ರಥಗಳು ಆಶೆಗಳೆಂಬ ಹೊರಜೆಗಳಿಂದ ಸೆಳೆಯಲ್ಪಡುವವು. ಜ್ಞಾನ ಸ್ವರೂಪನಾದ ನನಗೆ ದೇಹದ ಸ್ಥಿತಿಯಿಂ ದುರುಪಯೋಗವಿಲ್ಲದ್ದರಿಂದ ಈ ದೇಹವಿ ದ್ದರೂ ಇರಲಿ ಬಿದ್ದರೂ ಬೀಳಲಿ ಬಹುಕಾಲಕ್ಕೆ ನನ್ನ ಸ್ವರೂಪವಂ ನಾನು ತಿಳಿ ದೆನು, ಈಗ ನಾನೇ ನಾನಾಗಿರುವೆನು ಕಲ್ಪಾಂತದಲ್ಲಿ ಜಗತ್ತಿನಂತೆ ಈಗ ನನ್ನ ಅಜ್ಞಾ ನವು ನಷ್ಟವಾಯಿತು, ಅಜ್ಞಾನ ನಾಶದಿಂದೀ ಜಗವೆಲ್ಲವು ಶಾಂತವಾಗಿರುವದು. ಸಂಸಾರ ಮೋಹಮಾರ್ಗದಲ್ಲಿ ಅಲೆಯುತ್ತಿದ್ದ ನಾನು ಕಲ್ಪಾಂತದಲ್ಲಿ ಗಾಳಿಯಂತೆ ಈಗ ವಿಶ್ರಾಂತಿ ಸುಖವನ್ನನುಭವಿಸುವೆನು. ಸರ್ವಾತೀತನಾಗಿಯೂ, ಸರ್ವರೂಪ ನಾಗಿಯೂ ಇರುವ ನಿನಗೂ ನನಗೂ ನಮ್ಮ ಕೀರ್ತನೆಯಂ ಮಾಡುವವರಿಗೆ ಸಹ ನಮುಸ್ಕಾರವಾಗಲಿ, ಸಮಸ್ತವಾದ ಭೋಗಗಳಿದ್ದಾಗ್ಯೂ ಅವುಗಳ ದೋಷಸಂ ಬಂಧವು ಅವುಗಳ ಸನ್ನಾಹವು ಇಲ್ಲದ ಆತ್ಮನ ಸಾಕ್ಷಿ ಭಾವವು ಸರ್ವೋತ್ತಮವಾಗಿ ರುವದು, ಎಲೈ ಚಿತ್ಪ್ರಕಾಶನೇ! ಅನಹಂಕಾರಸ್ವರೂಪನಾದ ನಿನಗೆ ಒಳಹೊರ ಗಿನ ವಿವೇಕವು ಮಾಯೆಯಾಗಿರುವದು. ಜ್ಞಾನರೂಪನಾದ ನೀನೇ ಸರ್ವರೂಪ ನಾಗಿರುವಲ್ಲಿ ಜಡವೆಂಬ ಪದಾರ್ಥವು ಯಾವದು, ಜಡಕ್ಕೆ ಚೈತನ್ಯವನ್ನುಂಟುಮಾ ಡುವನೆಂಬುವದೇ ಮಾಯೆಯಾಗಿರುವದು. ಆ ಮಾಯೆಯಿಂದ ನಾನು ಈಶ್ವರ ನಾಗಿ ಜಗವಂ ಪ್ರಕಾಶಪಡಿಸುತಲೂ, ಪುನಃ ಪ್ರಳಯದಲ್ಲಿ ಜಗವಂ ಮರೆಮಾಡು ತಲೂ, ಸರ್ವೋತ್ತಮನಾಗಿರುವೆನು. ಬೀಜದಲ್ಲಿ ಮರದಂತೆ ಪರಮಾಣುವಾದ ನಿನ್ನಲ್ಲಿ ಈ ಜಗವೆಲ್ಲವೂ ಆದುದು, ಆಗುವದು, ಆಗ ಹೋಗುವದೆಂದು ಕಾಲತ್ರಯದ ಮಾತಿಗೆ ವಿಷಯವಾಗಿರುವದು, ಗಗನದಲ್ಲಿ ಮೇಘವು ಕುದುರೆ ಆನೆ ರಥಗಳಂತೆ ಹ್ಯಾಗೆ ತೋರುವದೋ ಹಾಗೆ ನೀನು ಅನೇಕ ಪದಾರ್ಥರೂಪದಿಂ ಕಾಣಿಸಿಕೊಳ್ಳು ತ್ತೀಯೆ, ಎಲೈ ಆತ್ಮನೇ! ನೀನು ನಶ್ವರ ವಿಷಯಗಳು ಹೋಗಲೋಸುಗವೂ ನಿತ್ಯ ನಿಜಾನಂದ ಪ್ರಕಾಶಕ್ಕೋಸುಗವೂ ಭಾವಪದಾರ್ಥಗಳಲ್ಲಿ ಅಸಂಗತನಾಗಿ ರುತ್ತಾ ಸರ್ವಾತೀತ ಸ್ವಭಾವದಿಂ ಪ್ರಕಾಶಿಸುವನಾಗು, ಮಹಾತ್ಮನು ಪ್ರಾಕೃತ ನೀಚವಿಷಯದಲ್ಲಿ ಬೀಳುವದು ಯುಕ್ತವಲ್ಲವಾದ್ದರಿಂದ ಗರ್ವವನ್ನೂ, ಕೋಪ

ವನ್ನೂ, ಕೃತ್ರಿಮವನ್ನೂ, ಕ್ರೂರಭಾವವನ್ನೂ ಸಹ ಬಿಟ್ಟು ಇವುಗಳಿಂದುಂ ಟಾದ ದುಃಖವಂ ಸ್ಮರಿಸುತ್ತಾ ಯಾಕೆ ಹೀಗಾದೆನೆಂದು ವಿಚಾರಿಸುತ್ತಾ ಪ್ರಮಾ ದದಿಂ ಕೆಸರಿನಲ್ಲಿ ಕಾಲನಿಟ್ಟು ನಗುವ ಬಾಲಕನಂತೆ ನಿನ್ನರೀತಿಯಂ ನೀನೇ ಪರಿಹಾ ಸವಂ ಮಾಡುತ್ತಾ ದುರಾಶಾ ಕಲ್ಪನೆಗಳಂ ಬಿಡುವವನಾಗು, ಯಾವದರಲ್ಲಿ ನೀನು ಚಿಂತಾ ಶೋಕಾಗ್ನಿಗಳಿಂ ದುಃಖಪಟ್ಟಿಯೋ, ಆ ದಿವಸಗಳು ಆ ಸನ್ನಾಹಗಳು ಸಹ ಓಡಿಹೋದವು. ಈಗ ದೇಹವೆಂಬ ನಗರದಲ್ಲಿ ರಾಜನಂತೆ ಪೂರ್ಣ ಮನೋರಥ ನಾದ ನೀನು ಕೈಗಳಿಂದಾಕಾಶದಂತೆ ಸುಖದುಃಗಳಿಂ ಹೊಡೆಯಲ್ಪಡುವದಿಲ್ಲ. ಈಗ ಸ್ವಾಧೀನವಾದ ಮನೋರಥವುಳ್ಳ ನೀನು ಇಂದ್ರಿಯಾಶ್ವಗಳಂ ತಡದು ನಿಂದು ಭೋಗ ಶತ್ರುಗಳಂ ಸಂಹರಿಸಿ ಆನಂದ ಸಾಮ್ರಾಜ್ಯವನ್ನನುಭವಿಸುತ್ತೀಯೆ ? ಅಖಂ ಡಾಕಾಶದಲ್ಲಿ ಸಂಚರಿಸುವ ನೀನು ಸರ್ವ ಕಾಲದಲ್ಲೂ ಪದಾರ್ಥ ಸೃಷ್ಟಿ ಸ್ಥಿತಿಲಯ ಗಳಿಂ ಕ್ರೀಡಿಸುತ್ತಾ ಒಳಗೂ ಹೊರಗೂ ಕೂಡ ಸೂರ್ಯನಂತೆ ಪ್ರಕಾಶಿಸುತ್ತೀಯೆ, ಭೋಗಾರ್ಥವಾಗಿ ಕಾಮಿನಿಯಿಂದ ಕಾಮುಕನಂತೆ ಪ್ರಾಣಿಗಳ ಕರ್ಮಶಕ್ತಿಯಿಂದ ಬೋಧಿಸಲ್ಪಡುತ್ತೀಯೆ, ನೇತ್ರವೆಂಬ ಗವಾಕ್ಷದಲ್ಲಿರುವ ಶಕ್ತಿಯಿಂದ ನೀನು ದೃಷ್ಟಿಗಳೆಂಬ ಜೇನುಹುಳುಗಳಿಂದ ತರಲ್ಪಟ್ಟ ವಿಷಯವೆಂಬ ಮಧುವಂ ಪರಿಗ್ರಹಿ ಸುತ್ತೀಯೆ, ಎಲೈ ಜ್ಞಾನಾತ್ಮನೇ ! ಹೀಗೆ ಬಹಿರ್ಭಾವದಲ್ಲಿ ವಿಷಯರಸವಂ ಸ್ವೀಕ ರಿಸುವ ನೀನು ಅಂತರ್ಮುಖನಾಗಿ ಪರಬ್ರಹ್ಮನಿಗೆ ಪಟ್ಟಣವಾದ ಈ ಶರೀರದಲ್ಲಿ ಪ್ರಾಣಾಪಾನ ರೂಪವಾದ ಚಾಕರರ ಗಮನಾಗಮನಗಳಿಂದ ಬ್ರಹ್ಮಾಂಡದ ವಿವ ರಗಳೆಲ್ಲವನ್ನೂ ತಿಳಿಯುತ್ತೀಯೆ, ದೇಹವೆಂಬ ಪುಷ್ಪದ ಪರಿಮಳವೆಂತಲೂ, ದೇಹ ಚಂದ್ರನ ಅಮೃತವೆಂತಲೂ, ದೇಹವೃಕ್ಷದ ಸಾರವೆಂತಲೂ ದೇಹವೆಂಬ ಮಂಜಿನ ಶೈತ್ಯವೆಂತಲೂ, ಪ್ರಸಿದ್ಧನಾಗಿದ್ದೀಯೆ, ದೇಹವೆಂಬ ಕ್ಷೀರಕ್ಕೆ ಘೃತವಾದ ನಿನ್ನಲ್ಲಿ ಘೃತದಲ್ಲಿ ಜಿಡ್ಡಿನಂತೆ ಆಶ್ಚರ್ಯಕರವಾದ ಅನುರಾಗವಿರುವದ್ದರಿಂದ ಶುಭಾಶುಭ ಕಾರ್ಯಗಳೆಲ್ಲವೂ ವೃದ್ಧಿಹೊಂದುವವು. ಎಲೈ ದೇವನೇ ! ನೀನು ಪರಮಾನಂದ ಸ್ವರೂಪನಾದ್ದರಿಂದ ಲೋಕದಲ್ಲಿ ಸರ್ವೋತ್ತಮವಾದ ರಸದಂತೆ ಆಸ್ವಾದಿಸಲು ಯೋಗ್ಯನಾಗಿ, ಸೂರ್ಯ ಮೊದಲಾದ ತೇಜಸ್ಸುಗಳಿಗೂ, ನೇತ್ರ ಮೊದಲಾದ ಇಂದ್ರಿ ಯುಗಳಿಗೂ, ಪ್ರಕಾಶನಾಗಿ ಸರ್ವವನ್ನೂ ತಿಳಿಯುವಂಥಾವನು, ಪ್ರಾಣವಾಯುಗಳು ಚಾಂಚಲ್ಯವಾಗಿಯೂ, ಮನಸ್ಸೆಂಬ ಆನೆಗೆ ಮದವಾಗಿಯೂ, ಬುದ್ಧಿಯೆಂಬ ಅಗ್ನಿಜ್ವಾಲೆಗೆ ತೀಕ್ಷ್ಣಪ್ರಕಾಶವಾಗಿಯೂ, ನೀನು ಪ್ರಕಾಶಿಸುತ್ತೀಯೆ ? ಎಲೈ ಜಗತ್ಕಾರಣನೇ ! ದೀಪವು ಪದಾರ್ಥವಂ ತೋರುವಂತೆ ತತ್ವಾರ್ಥಗಳಂ ತೋರುವ

ವೇದರೂಪವಾದ ನಿನ್ನ ನುಡಿಯು ಪರಮಾರ್ಥವಾದ ನಿನ್ನಂ ತೋರಿಸಿ ನಿನ್ನಲ್ಲೇ ಶಾಂತವಾಗುವದು. ಸುವರ್ಣವು, ಕಡಗ, ಕಿರೀಟ, ಬಾಹುಪುರಿ ಮೊದಲಾದ ಒಡವೆಗಳ ರೂಪವಂ ವಹಿಸುವಂತೆ ನೀನೇ ಸಮಸ್ತ ಪದಾರ್ಥ ರೂಪವಂ ವಹಿಸುತ್ತೀಯೆ. ಎಲೈ ಸರ್ವಾತ್ಮನೇ ! ನೀನು ಇವನು ನಾನು ನಾನೇ ನೀನೆಂದು ನಿನ್ನನ್ನೇ ನೀನು ನಾನಾಪ್ರಕಾರವಾಗಿ ಸ್ವಾಭಾವಿಕವಾದ ಲೀಲೆಗೋಸುಗ ಸ್ತುತಿಸುತ್ತಾ ಮಾತನಾಡುತ್ತೀಯೆ ? ಎಲೈ ಸರ್ವವ್ಯಾಪಿಯೇ ! ನೀನು ಮುತ್ತಿನ ಸರದೊಳ್ ತಂತುವಿನಂತೆ ಬ್ರಹ್ಮಾಂಡಗಳಲ್ಲಿ ಅಂತರ್ಯಾಮಿಯಾಗಿದ್ದೀಯೆ, ಪೈರುಗಳಿಗೆ ಸರಸವಾದ ಕ್ಷೇತ್ರದಂತೆ ಚಿನ್ಮಯನಾದ ನೀನು ಪ್ರಾಣಿಗಳಿಗೆ ಉತ್ಪತ್ತಿಸ್ಥಾನವಾಗಿದ್ದೀಯೆ. ಪಾಕವಂ ಮಾಡುವಳು ಮಾಂಸಾದಿ ಪದಾರ್ಥಗಳ ರುಚಿಯಂ ತಿಳಿಪುವಂತೆ ಕಳೆಯುವ ಪದಾರ್ಥಗಳ ಸ್ವರೂಪವಂ ನೀನು ಸೃಷ್ಟಿಮಾರ್ಗದಿಂ ಪ್ರಕಾಶಪಡಿಸುತ್ತೀಯೆ ? ನೇತ್ರವಿಲ್ಲದೆ ಇದ್ದಲ್ಲಿ ಅಂಗನೆಯ ಸೌಂದರ್ಯಾದಿ ಗುಣವು ವ್ಯರ್ಥವಾಗುವಂತೆ ನೀನಿಲ್ಲದೆ ಇದ್ದಲ್ಲಿ ಸಮಸ್ತ ಪದಾರ್ಥಗಳ ಸಂಪದವು ವ್ಯರ್ಥವಾಗುವವು. ನಿನ್ನಿಂದ ಅನುಗ್ರಹಿಸಲ್ಪಡದ ವಸ್ತುವು ಗೋಚರವಾಗಿದ್ದಾಗ್ಯೂ ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ಕಾಮಿನಿಯ ರೂಪದಂತೆ ಫಲಸಾಧಕನಾಗುವದಿಲ್ಲ. ರಾತ್ರಿಯಲ್ಲಿ ಸೂರ್ಯನಿಲ್ಲದ್ದರಿಂದ ಪರ್ವತದ ಔನ್ನತ್ಯವಿದ್ದರೂ ಇಲ್ಲವಂತಿರುವದಷ್ಟೆ? ಅದೇಪ್ರಕಾರ ನೀನಿಲ್ಲದಿರೆ ಈ ದೇಹವಿದ್ದಾಗ್ಯೂ ಇಲ್ಲದಿರುವಂತೆ ತೋರುತ್ತಾ ಕಾಷ್ಠದಂತೆಯೂ, ಮಣ್ಣಿನ ಹೆಂಟೆಯಂತೆಯೂ ಹೊರಳುತ್ತಿರುವದು, ದೀಪವಂ ಹಿಡಿದಿರುವನಿಗೆ ತಮಸ್ಸಿನಂತೆಯೂ, ಅಗ್ನಿಯನ್ನಾಶ್ರಯಿಸಿದವನಿಗೆ ಛಳಿಯಂತೆಯೂ, ನಿನ್ನಂ ಪಡೆದವನಿಗೆ ಈ ಸುಖ ದುಃಖ ಕ್ರಮವು ನಷ್ಟವಾಗುವವು. ಎಲೈ ಜಗದೀಶನೇ ! ಸೂರ್ಯಪ್ರಭೆಯಿಂದ ಪದಾರ್ಥಗಳ ಬಿಳುಪು ಕಪ್ಪು ಮೊದಲಾದ ವರ್ಣಗಳು ಹೇಗೆ ಕ್ಲುಪ್ತವಾಗುವವೋ ಹಾಗೆ ನಿನ್ನ ದಯಾದೃಷ್ಟಿಯಿಂದ ಸುಖ ದುಃಖಗಳು ಸ್ಥಿತಿಯಂ ಪಡೆಯುವವು. ಸೂರ್ಯನಿಂ ಪೊರಮಟ್ಟ ಕಿರಣಗಳು ಸೂರ್ಯನಲ್ಲಿಯೇ ಅಡಗುವಂತೆ ನಿನ್ನಿಂದ ಸೃಷ್ಟವಾದ ಈ ಪದಾರ್ಥಗಳೆಲ್ಲವು ನಿನ್ನಲ್ಲೇ ಅಡಗುವವು. ದೀಪವಿಲ್ಲದಾಗ ಪುಟ್ಟಿದ ತಮಸ್ಸಿನಂತೆ ನಿನ್ನ ಜ್ಞಾನವಿಲ್ಲದಾಗ ಪುಟ್ಟಿದ ಈ ಸುಖ ದುಃಖ ಸಂಪತ್ತುಗಳು ನಿನ್ನ ದರ್ಶನವಾದ ಕ್ಷಣವೇ ನಷ್ಟವಾಗುವವು. ಇದರ ಭಾವನೆಯು ಸ್ವಪ್ನದಲ್ಲಿ ಸತ್ತು ಹುಟ್ಟಿದವಳಂತೆಯೂ, ಜಾಗರದಲ್ಲಿ ಹುಟ್ಟಿ ಸಾಯುವವನಂತೆಯೂ, ವಿಚಿತ್ರವಾಗಿ ಕಾಣಲ್ಪಡುವದು. ಕನ್ನೈದಿಲೆಯಂತೆ ಗೋಚರವಾದ ತರಂಗಗಳಿಂದ ಪುಷ್ಪವಾಟಿಯು ಹೇಗೆ ಕಟ್ಟಲಶಕ್ಯವೋ ಹಾಗೆ ಈ

ಭಾವನೆಗಳಿಂದ ಕಾರ್ಯಸಿದ್ಧಿಯು ಸಾಧಿಸಲಶಕ್ಯವಾಗುವದು. ಬೌದ್ಧರು ಹೇಳುವಂತೆ ಕ್ಷಣಿಕವಾದ ವಸ್ತುಗಳಿಂ ಕಾರ್ಯಸಿದ್ಧಿಯಾಗುವದಾದಲ್ಲಿ ಮಿಂಚು ಬಳ್ಳಿಗಳಿಂ ಮಾಡಿದ ಮಾಲಿಕಾದ್ಯಾಭರಣಗಳಂ ಧರಿಸಿಕೊಂಡು ಭೋಗಾಪೇಕ್ಷೆಯುಳ್ಳವನು ಕ್ರೀಡಿಸಬಹುದು. ಎಲೈ ಅಂತರಾತ್ಮನೇ! ಕನ್ನಡಿಯು ಸಾಧುದುಷ್ಟರಾದ ಜನರ ಛಾಯೆಯಂ ಗ್ರಹಿಸುವಂತೆ ವಿವೇಕಿಗಳ ಮನದಲ್ಲಿರುವ ನೀನು ಈ ಸುಖದುಃಖಾದಿ ಸಂಪದವಂ ಗ್ರಹಿಸುತ್ತಿದ್ದಾಗ್ಯೂ ನಿರ್ಮಲವಾಗಿಯೂ, ಸಮವಾಗಿಯೂ ಇರುವ ನಿಜಸ್ಥಿತಿಯಂ ಬಿಡುವದಿಲ್ಲ. ಅವಿವೇಕಿಗಳಲ್ಲಿರುವ ನಿನ್ನರೀತಿಯು ಕಲ್ಪನೆಗಳಿಂದ ಪರಿಮಿತವಾದ್ದರಿಂದಲೂ, ವ್ಯವಸ್ಥೆ ಇಲ್ಲದ್ದರಿಂದಲೂ, ಬಣ್ಣಿಸಲಶಕ್ಯವಾಗಿರುವದು. ಎಲೈ ಪರಮಾತ್ಮನೇ! ಪರಿಪೂರ್ಣನಾದ್ದರಿಂದ ಅಪೇಕ್ಷೆ ಇಲ್ಲದವನಾದಾಗ್ಯೂ ಅಂಶಾಂಶಿ ಭಾವವಿಲ್ಲದ್ದರಿಂದ ನಿರಂಶನಾದಾಗ್ಯೂ, ಅದ್ವಿತೀಯನಾದ್ದರಿಂದಹಂಕಾರ ರಹಿತನಾದಾಗ್ಯೂ, ನಿನ್ನನ್ನು ಸಾಕಾರನೆಂದು ಕೆಲವರು ಹೇಳುವರು. ಕೆಲವರು ನಿರಾಕಾರನೆನ್ನುವರು. ಹೀಗಿದ್ದಾಗ್ಯೂ ನೀನು ಸರ್ವವಿಷಯದಲ್ಲೂ ಕರ್ತೃತ್ವವಂ ವಹಿಸಿದ್ದೀಯೆ, ಎಲೈ ಮಹಾತ್ಮನೇ! ಅತ್ಯಂತ ಘೋರಾಕಾರನಾಗಿಯೂ, ಶಾಂತಿ ಪರಾಯಣನಾಗಿಯೂ. ಸರ್ವಗಮಾತೀತನಾಗಿಯೂ, ಸಮಸ್ತವಾದ ಜಗಮುಗಳಿಗೆ ಆಶ್ರಯನಾಗಿಯೂ, ಪುಟ್ಟಿದವನಾಗಿಯೂ, ಪುಟ್ಟದಿರುವನಾಗಿಯೂ, ಕ್ಷತನಾಗಿಯೂ, ಅಕ್ಷತನಾಗಿಯೂ, ಜನಿಸಲು ಶಕ್ಯನಾಗಿಯೂ, ಜನಿಸಲಶಕ್ಯನಾಗಿಯೂ, ನಾನಾರೂಪಗಳಿಂ ಪ್ರಕಾಶಿಸುವ ನೀನು ಸರ್ವೋತ್ತಮನಾಗಿರುವಂಥಾವನಾಗು? ಎಲೈ ಸಚ್ಚಿದಾನಂದಸ್ವರೂಪನೇ! ಈಗ ನಿನ್ನಲ್ಲಿ ಅಭೇದವಂ ಪಡೆದಿರುವ ನಾನು ಅತ್ಯಂತವಾಗಿ ಪ್ರಕಾಶಿಸುವೆನು, ಶಾಂತನಾಗಿರುವೆನು, ಸ್ಥಿರವಾಗಿರುವೆನು, ಅಖಂಡಾನಂದ ಪದವಂ ಪಡೆದಿರುವೆನು, ಜಯಶೀಲನಾದಾಗ್ಯೂ ಪ್ರಾರಬ್ಧಶೇಷವಿರುವದ್ದರಿಂದ ಜಯಾಪಜಯ ವಿಶಿಷ್ಟನಾಗಿ ತೋರುತ್ತಿರುವೆನು. ಹೀಗಿದ್ದಾಗ್ಯೂ ಈಗ ನನಗೂ ನಿನಗೂ ಭೇದವಿಲ್ಲದ್ದರಿಂದ ನಿನಗೋಸುಗವೂ ನನಗೋಸುಗವೂ ಸಹ ಈ ನಮಸ್ಕಾರವಾಗಲಿ, ರಾಗ ದ್ವೇಷ ಮೋಹಗಳಿಲ್ಲದೆ ನಿಜಸ್ಥಾನದಲ್ಲಿರುವ ನನ್ನ ಸ್ವರೂಪದಿಂ ನೀನು ಪ್ರಕಾಶಿಸುವಲ್ಲಿ ಸಂಸಾರ ವಿಸ್ತರಸಂಬಂಧ ಮೋಕ್ಷಗಳ ಪ್ರಸ್ತಾಪವೆಲ್ಲಿಯದೆಂದು ವಿಚಾರದೃಷ್ಟಿಯಿಂದಾ ಶೋಧಿಸುತ್ತಾ ನಿರ್ವಿಕಲ್ಪ ಸಮಾಧಿಯಂ ಹೊಂದಿ ಚಿತ್ರದಲ್ಲಿ ಬರೆಯಲ್ಪಟ್ಟವನಂತೆಯೂ, ಪರ್ವತದಲ್ಲಿ ಕೆತ್ತಲ್ಪಟ್ಟವನಂತೆಯೂ ಪ್ರಕಾಶಿಸುತ್ತಾ ಬ್ರಹ್ಮಾನಂದ ಪದ

ವಂ ಹೊಂದಿದನೆಂಬಲ್ಲಿಗೆ ಜ್ಞಾನಯೋಗತರಂಗಿಣಿಯಲ್ಲಿ ಪ್ರಹ್ಲಾದ ವಿಚಾರಕ್ರಮ ನಿರೂಪಣವೆಂಬ ೭ ನೇ ತರಂಗಕ್ಕೆ ಮಂಗಳಮಸ್ತು.

ಶ್ರೀ ಗಣಾಧಿಪತೇಯನಮಸ್ತು.

ಪ್ರಹ್ಲಾದ ಪಟ್ಟಾಭಿಷೇಕನಿರೂಪಣ ಪ್ರಾರಂಭವು.

ಬಳಿಕ ಶ್ರೀ ರಾಮನಂ ಕುರಿತು ವಸಿಷ್ಠನಿಂತೆಂದನು— ಎಲೈ ರಾಮ ಭದ್ರನೇ,- ಹೀಗೆ ಸಮಾಧಿನಿಷ್ಠನಾದ ಪ್ರಹ್ಲಾದನು ಅಸುರಶ್ರೇಷ್ಠರಿಂದೆಚ್ಚರಿಸಲ್ಪಟ್ಟಾಗ್ಯೂ ಅಕಾಲದಲ್ಲಿ ನೀರು ಬಿಡುವದ್ದರಿಂದ ಬೀಜದ ಮೊಳಕೆಯಂತೆ ಏಳದೆ ಇರುವಲ್ಲಿ ಸಾವಿರಾರು ವರ್ಷಗಳು ಕಳೆಯಲು ಅರಾಜಕವಾದ ಆ ಪಾತಾಳದಲ್ಲಿ ಮತ್ತೊಬ್ಬ ನಾಯಕನಿಲ್ಲದ್ದರಿಂದ ಮತ್ಸ್ಯಗಳಂತೆ ಬಲಿಷ್ಠರಾದವರು ದುರ್ಬಲರನ್ನಾಕ್ರಮಿಸುತ್ತಿರಲು ಪೂರ್ವ ಮರ್ಯಾದೆಗಳು ತಪ್ಪಿದ್ದರಿಂದ ದುಷ್ಟರಿಗೆ ಶಿಕ್ಷೆಯೂ, ಶಿಷ್ಟರಿಗೆ ರಕ್ಷಣೆಯೂ ಸಹ ಇಲ್ಲದೆ ಕಲಿಯುಗದಂತೆ ಗಂಡಸರಿಗೆ ದುರಾಚಾರವೂ, ಸ್ತ್ರೀಯರಿಗೆ ವ್ಯಭಿಚಾರವೂ, ಸಾಧುಗಳಿಗೆ ಅನ್ನ ವಸ್ತ್ರ ವಿಚಾರವೂ, ಮಾಂತ್ರಿಕರಿಗೆ ಅಭಿಚಾರವೂ, ಅಂತ್ಯಜರಿಗೆ ಆಚಾರವೂ ಸಹ ವೃದ್ಧಿ ಹೊಂದುತ್ತಿರಲು ಸಾಧುಗಳು ರಾತ್ರಿಯಲ್ಲಿ ಕಮಲವಂ ಕಾಣದ ಭ್ರಮರಗಳಂತೆ ರಕ್ಷಕನಂ ಕಾಣದೆ ಆ ದೇಶವಂ ಬಿಟ್ಟು ಹೊರಟು ಹೋದರು. ಕಳ್ಳರಂತೆ ದೇವಬಾಲಕರು ಆ ಪಟ್ಟಣವಂ ಸೂರೆಗೊಂಡರು. ಅಲಕ್ಷ್ಮಿಯಿಂದಾಕ್ರಮಿಸಲ್ಪಟ್ಟ ಮನೆಯಂತೆ ಆ ಪಟ್ಟಣವು ನಿಸ್ಯರೋದನವಾಗಿದ್ದುದು. ರಣಭೂಮಿಯಂತೆ ನಾಯಿ ನರಿಗಳಿಂದಲೂ, ಭಯಂಕರವಾದ ಉತ್ಪಾತಗಳಿಂದಲೂ, ರಾಕ್ಷಸ ಪಿಶಾಚಗಳಿಂದಲೂ ಆಕ್ರಮಿಸಲ್ಪಟ್ಟಿತು. ಅಕಾಲ ಪ್ರಳಯದಿಂ ಪಾಳಾಗುವಂತೆ ಆ ಪಾತಾಳಲೋಕವು ಅವಲಕ್ಷಣಗಳಿಂದಲೇ ಸಂಪೂರ್ಣವಾಯಿತು. ಹೀಗಿರುವಲ್ಲಿ ಶೇಷಶಾಯಿಯಾದ ಲಕ್ಷ್ಮೀಪತಿಯು ಯೋಗನಿದ್ರೆಯಿಂದೆಚ್ಚತ್ತು ಜ್ಞಾನದೃಷ್ಟಿಯಿಂ ಮೂರು ಲೋಕಗಳಂ ನೋಡುತ್ತಾ ಈ ಪರಿಯಿಂದಿರುವ ಪಾತಾಳವಂ ಕಂಡು ಆಲೋಚಿಸಿದನದೆಂತೆನೆ,- ಈ ಪರಿಯಿಂದ ಪ್ರಹ್ಲಾದನು ಪರಮಾತ್ಮನೋಳ್ವಿಶ್ರಾಂತನಾದ್ದರಿಂದ ಪಾತಾಳವು ಅನಾಯಕವಾಗಿದೆ. ಹೀಗೆ ಇದ್ದಲ್ಲಿ ಈ ನನ್ನ ಸೃಷ್ಟಿಯಲ್ಲಿ ದೈತ್ಯರು ನಿಶ್ಶೇಷರಾಗುವರು. ಹಾಗಾಗುವಲ್ಲಿ ಜಯೋದ್ಯೋಗವಿಲ್ಲದ ದೇವತೆಗಳು ಅನಾವೃಷ್ಟಿಯಲ್ಲಿ ನದಿಗಳಂತೆ ಶಾಂತ

ರುಗುವರು. ದೇವತೆಗಳು ಶಾಂತರಾಗುವದ್ದರಿಂದ ಭೂಲೋಕದಲ್ಲಿ ಯಜ್ಞಾದಿ ಕ್ರಿಯೆಗಳು ನಡೆಯಲಾರವು. ಕರ್ಮನಾಶದಿಂ ಭೂಲೋಕವು ನಷ್ಟವಾಗುವದ ರಿಂದ ಅಕಾಲದಲ್ಲಿ ಜಗತ್ತಿಗೆ ಪ್ರಳಯಬಂದಂತೆ ಆಗುವದು. ಹಾಗಾದಲ್ಲಿ ನನ್ನ ಲೀಲೆಗೆ ನಾನೇ ನಾಶವನ್ನುಂಟುಮಾಡಿದಂತೆ ಆಗುವದು. ಆದ್ದರಿಂದ ನಾನು ಈ ಸ್ವರೂಪವಂ ಬಿಟ್ಟು ನಿರ್ಗುಣರೂಪದಿಂ ಶಾಂತನಾಗಿರಬೇಕಾಗಿರುವದು. ಹೀಗೆ ಅಕಾಲದಲ್ಲಿ ಜಗತ್ಪ್ರಳಯವಾಗುವದು ಅಯುಕ್ತವಾದ್ದರಿಂದ ದೈತ್ಯರಂ ಬದುಕಿಸು ವೆನು. ಪ್ರಹ್ಲಾದನಂ ಹೊರ್ತು ಮತ್ತೊಬ್ಬ ದಾನವನಿಗೆ ಆಧಿಪತ್ಯವಂ ನಾನು ಕೊಟ್ಟರೆ ಅವನು ದೇವತೆಗಳಿಗೆ ವಿರೋಧವಂ ಮಾಡುತ್ತಾ ನನಿಗೂ ತೊಂದರೆಯ ನ್ನುಂಟುಮಾಡ್ಯಾನು. ಆದ್ದರಿಂದ ಪ್ರಬಲನಾಗಿಯೂ ಸನ್ಮಾರ್ಗನಾಗಿಯೂ ಇರುವ ಈ ಪ್ರಹ್ಲಾದನನ್ನೆಚ್ಚರಗೊಳಿಸಿ ಇವನಿಗೆ ಆಧಿಪತ್ಯವಂ ಕೊಡುವೆನು. ವಸಂತ ನಿಂದ ವೃಕ್ಷದಂತೆ ಇವನು ನನ್ನಿಂದುಲ್ಲಾಸವಂ ಪಡೆಯಲು ಪಾತಾಳಕ್ಕೆ ಸೌಖ್ಯವು ದೇವಲೋಕಕ್ಕೆ ಉದ್ಯೋಗವು, ಭೂಲೋಕಕ್ಕೆ ಕರ್ಮವು ಸಹ ಸ್ಥಿರವಾಗುವದ್ದ ರಿಂದ ಜಗತ್ತಿಗೆ ಸ್ಥಿತಿಯುಂಟಾಗುವದು. ಇದು ಚನ್ನಾಗಿರುವದ್ದರಿಂದ ನನ್ನ ಲೀಲೆಗೆ ನ್ಯೂನತೆಯಾಗುವದಿಲ್ಲ. ಪ್ರಹ್ಲಾದನಿಗೆ ಇದೇ ಚರಮ ದೇಹವು. ಇದು ಪಾವನ ವಾದ್ದರಿಂದ ಈ ಶರೀರದಿಂದಲೇ ಇವನು ಕಲ್ಪಾಂತವಾಗಿರತಕ್ಕದ್ದೆಂದು ಪರಮೇಶ್ವ ರನ ಕ್ಲುಪ್ತಿಯಿರುವದ್ದರಿಂದ ಗಿರಿ ನದಿಯಲ್ಲಿ ಮಲಗಿರುವ ಮಯೂರವಂ ಮೇಘ ದಂತೆ ಸಮಾಧಿನಿಷ್ಠನಾದ ಪ್ರಹ್ಲಾದನಂ ನಾನೆಬ್ಬಿಸುವೆನು. ಮಣಿದರ್ಪಣವು ಪ್ರತಿ ಬಿಂಬವಂ ಹಿಡಿಯುವಂತೆ ಜೀವನ್ಮುಕ್ತನಾಗಿ ನಿರಹಂಕಾರನಾದ ಪ್ರಹ್ಲಾದನುದಾನ ವಾಧಿಪತ್ಯವಂ ಪರಿಗ್ರಹಿಸಲಿ. ಜಗತ್ತಿನ ಉತ್ಪತ್ತಿ ಪ್ರಳಯಗಳೆರಡೂ ನನಿಗೆ ಸಮವೇ ನಲಿ. ಆವಾಗ್ಯೂ ಪೂರ್ವದಂತೆ ಜಗವಂ ನಿಲ್ಲಿಸುವದೆ ಯುಕ್ತವಾಗಿರುವದು. ಪದಾರ್ಥಗಳು ಹುಟ್ಟುವಲ್ಲು ಹುಟ್ಟದೆ ಇರುವಲ್ಲು ಅವುಗಳ ಸ್ಥಿತಿಯಲ್ಲು ನಾಶದಲ್ಲು ಸಹ ಸಮವಾಗಿರುತ್ತಾ ಅನಭಿಮಾನದಿಂದಾ ವಸ್ತುಗಳ ಸ್ಥಿತಿ ಮೊದಲಾದ ವಿಷಯ ಗಳಲ್ಲಿ ಪ್ರಯತ್ನಪಡುವದೆ ಯೋಗನಿದ್ರಾ ಸ್ವಭಾವವಾದ್ದರಿಂದ ಕಮಲವಂ ಸೂರ್ಯ ನಂತೆ ಪ್ರಹ್ಲಾದನನ್ನೆಬ್ಬಿಸಿ ವರ್ಷಋತುವು ಗಿರಿಯಲ್ಲಿ ಮೇಘಗಳಂ ಸೇರಿಸುವಂತೆ ಪಾತಾಳದಲ್ಲಿ ದಾನವರಂ ಕೂಡಿಸುವೆನೆಂದಾಲೋಚಿಸಿ ಪರಿವಾರ ಸಮೇತನಾಗಿ ಪ್ರಹ್ಲಾದನ ಪುರವಂ ಕುರಿತು ಬರಲು ಪ್ರಹ್ಲಾದನ ಸಮೀಪದಲ್ಲಿದ್ದ ದಾನವರು ಆ ಮಹಾತ್ಮನ ತೇಜಸ್ಸಿನಿಂದ ಸೂರ್ಯನ ತೇಜಸ್ಸಿನಿಂ ಗೂಬೆಗಳಂತೆ ಓಡಿ ಹೋದರು. ಆ ಮಹಾತ್ಮನಾದ ಜಗನ್ನಾಥನು ತಾರಾ ಸಹಿತನಾದ ಚಂದ್ರನು

ಗಗನವಂ ಸೇರುವಂತೆ ಪರಿವಾರದೊಡನೆ ಪ್ರಹ್ಲಾದನ ಮನೆಯಂ ಹೊಂದಿ ಎಲೈ ಮಹಾತ್ಮನೆ ಎಚ್ಚರವಾಗೆಂದು ನುಡಿಯುತ್ತಾ ಪಾಂಚಜನ್ಯವನ್ನೂದಿದನು. ಆಗ ಏಳು ಸಮುದ್ರಗಳು ಸೇರುವವೋ ಎಂದು ಸಂದೇಹವನ್ನುಂಟುಮಾಡುವ ಆ ಶಬ್ದದಿಂ ಘನಘರ್ಜನೆಯಿಂದ ಹಂಸಗಳಂತೆ ಭಯಪಟ್ಟ ದುರಾತ್ಮರಾದ ಅಸುರರು ಮೂರ್ಛಿತರಾದರು. ಮತ್ತೀಮರಗಳಂತೆ ವಿಷ್ಣು ಭಕ್ತರು ಸಂತುಷ್ಟರಾದರು. ಕದಂಬ ವೃಕ್ಷದಂತೆ ಪ್ರಹ್ಲಾದನು ಮೆಲ್ಲನೆ ಜ್ಞಾನವಂ ಪಡೆದನು. ಆಗ ಬ್ರಹ್ಮಾಂಡ ಬಾಹ್ಯಾವರಣದಲ್ಲಿದ್ದ ಗಂಗೆಯು ಸಮುದ್ರವಂ ತುಂಬುವಂತೆ ಆ ಪ್ರಹ್ಲಾದನ ಬ್ರಹ್ಮರಂಧ್ರದಲ್ಲಿದ್ದ ಪ್ರಾಣಶಕ್ತಿಯು ಶರೀರವಂ ವ್ಯಾಪಿಸಿತು. ಉದಯಾನಂತರ ದಲ್ಲಿ ಸೂರ್ಯನ ಕಾಂತಿಯು ಪ್ರಪಂಚವಂ ಪ್ರವೇಶಿಸುವಂತೆ ಕ್ರಿಯಾರೂಪವಾದ ಪ್ರಾಣಶಕ್ತಿಯು ಸಂಪದವು ಆ ದೈತ್ಯನ ಅಂಗಗಳಂ ವ್ಯಾಪಿಸಿತು. ಇಂದ್ರಿಯಗಳು ತಮ್ಮ ತಮ್ಮ ಸ್ಥಾನಗಳಂ ಸೇರಲು ಲಿಂಗಶರೀರದಲ್ಲಿದ್ದ ಬುದ್ಧಿಯು ಬಹಿರ್ಮುಖ ವಾಯಿತು. ಚಿತ್ತ ಉದಯಿಸಲಾಗಿ ಸೂರ್ಯೋದಯದಲ್ಲಿ ಕಮಲಗಳಂತೆ ಅವನ ಕಣ್ಣುಗಳು ವಿಕಾಸವಂ ಹೊಂದಿದವು. ಪ್ರಾಣಾಪಾನಪ್ರಚಾರದಿಂ ಚಲಿತವಾದ ನಾಡಿಗಳುಳ್ಳ ಆ ಪ್ರಹ್ಲಾದನ ಶರೀರವು ಮಂದಮಾರುತದ ಸಂಬಂಧದಿಂ ಕಮಲ ದಂತೆ ಕೊಂಚ ಚಲಿಸಿತು. ಹೀಗೆ ಪ್ರಾಣಶಕ್ತಿಯಿಂ ಪೂರ್ಣವಾದ ಪ್ರಹ್ಲಾದನ ಶರೀರದಲ್ಲಿ ಉಪಕದಲ್ಲಿ ತರಂಗದಂತೆ ಮನವು ವಿಜೃಂಭಿಸಿತು. ವಿಕಾಸವಂ ಪಡೆದ ಮನೋನೇತ್ರ ಪ್ರಾಣಗಳುಳ್ಳ ಪ್ರಹ್ಲಾದನ ಶರೀರವು ಸೂರ್ಯೋದಯದ ಸಮಯ ದಲ್ಲಿ ವಿಕಸಿತವಾದ ಕಮಲವುಳ್ಳ ಸರೋವರದಂತೆ ಪ್ರಕಾಶಿಸಿತು. ಆಗ ಎಚ್ಚರ ವಾಗೆಂದು ಮಹಾವಿಷ್ಣುವು ಹೇಳಿದ್ದರಿಂದ ಮೇಘಧ್ವನಿಯಿಂ ನವಿಲಿನಂತೆ ಆ ಪ್ರಹ್ಲಾದನು ಪ್ರಬೋಧವಂ ಪಡೆದನು. ಆ ಸಮಯದಲ್ಲಿ ಮುಖನಯನೋಲ್ಲಾಸ ವಂ ಪಡೆದಿರುವ ಪ್ರಹ್ಲಾದನಂ ಕುರಿತು ಆ ಲಕ್ಷ್ಮೀಕಾಂತನು ಪೇಳಿದನದೆಂತೆನೆ,- ಎಲೈ ಸಾಧುವೆ! ನಿನ್ನ ಸಂಪದವನ್ನು ಆಕೃತಿಯನ್ನು ಸ್ಮರಿಸುವನಾಗು. ಅಕಾಲದಲ್ಲಿ ಶರೀರವನ್ನೇಕೆ ಬಿಡುತ್ತೀಯೆ, ಇದು ಗ್ರಹಿಸತಕ್ಕದ್ದು ಇದು ಬಿಡತಕ್ಕದ್ದೆಂಬ ಸಂಕ ಲ್ಪವಿಲ್ಲದ ನಿನಗೆ ಶರೀರದ ಸುಖದುಃಖಗಳಿಂದೇನು ಈಗ ಏಳುವಂಥಾವನಾಗು. ಈ ಲೋಕದೊಳ್ ಈ ಶರೀರದಿಂದಲೇ ನೀನು ಕಲ್ಪಾಂತವಾಗಿ ರಾಜ್ಯಭಾರವಂ ಮಾಡತಕ್ಕದ್ದೆಂದು ಪರಮೇಶ್ವರ ಕ್ಲಿಪ್ತಿಯಿರುವದ್ದರಿಂದ ನೀನು ಜೀವನ್ಮುಕ್ತ ಭಾವದಿಂದಿ ಲೋಕಾಧಿಪತ್ಯವಂ ವಹಿಸುವನಾಗು. ಕಲ್ಪಾಂತದಲ್ಲಿ ಶರೀರವು ಬೀಳಲು ಘಟಾಕಾಶವು ಮಹಾಕಾಶವಂ ಸೇರುವಂತೆ ನೀನು ನಿಜವಾದ ಅಖಂಡ

ನಾಶ ಪದವಂ ಹೊಂದಹೋಗುತ್ತೀಯೆ ದ್ವಾದಶಾದಿತ್ಯರು ಉದಯಿಸದೆ ಪರ್ವತಗಳು ಲಯವಂ ಹೊಂದದೆ ಜಗತ್ತು ಅಗ್ನಿಜ್ವಾಲೆಯಿಂದಾಕ್ರಮಿಸಲ್ಪಡದೆ ಇರುವಲ್ಲಿ ನೀನು ಶರೀರವನ್ನೇಕೆ ಬಿಡುತ್ತೀಯೆ ಲೋಕತ್ರಯ ಭಸ್ಮದ ಧೂಳಿಯಿಂ ಸಾಂದ್ರವಾಗಿ ದೇವತೆಗಳ ಕಪಾಲಗಳನ್ನು ಅಲ್ಲಾಡಿಸುವ ವಾಯುವೀಗ ಬೀಸುವುದಿಲ್ಲ. ಅಶೋಕವೃಕ್ಷದಲ್ಲಿ ಪೂಗುಚ್ಛಗಳಂತೆ ಪುಷ್ಕರಾವರ್ತಗಳೆಂಬ ಪ್ರಳಯಕಾಲದ ಮೇಘಗಳಲ್ಲಿ ಮಿಂಚುಗಳು ಪ್ರಕಾಶಿಸುವುದಿಲ್ಲ. ಭೂಮಿಯ ಸಾರವಂ ಶೋಷಿಸುವ ಅಗ್ನಿಜ್ವಾಲೆಗಳಿಂ ಘೋಷಯುಕ್ತವಾದಂಥಾ ಪರ್ವತಗಳುಳ್ಳ ದಿಕ್ಕುಗಳು ಸೀಳುವುದಿಲ್ಲ. ಹೀಗಿರುವಲ್ಲಿ ನೀನು ಶರೀರವನ್ನೇಕೆ ಬಿಡುತ್ತೀಯೆ ಬ್ರಹ್ಮ ವಿಷ್ಣು ರುದ್ರರು ಆಧಿಪತ್ಯವಂ ಮಾಡುತ್ತಿರುವಲ್ಲಿ ನೀನು ಶರೀರವಂ ತ್ಯಜಿಸುವುದಕ್ಕೆ ನಿಮಿತ್ತವೇನು. ಮತ್ತು ಈಗ ಸೀಳುವ ಗಿರಿಶೃಂಗಗಳ ಶಬ್ದದಿಂದೂಹಿಸಲ್ಪಡುವ ಅವಕಾಶವುಳ್ಳ ದಿಕ್ಕುಗಳು ಶಿಥಿಲವಾಗಲಿಲ್ಲ. ಗಿರಿಗಳಂ ಸೀಳುವ ಸೂರ್ಯಕಿರಣಗಳು ಗಗನದಲ್ಲಿ ಚಲಿಸುವುದಿಲ್ಲ. ಕಲ್ಪಾಂತ ಮೇಘಗಳು ಗುಡುಗುವುದಿಲ್ಲ. ನಾನು ಈಗ ಗರುಡಾರೂಢನಾಗಿ ದಶ ದಿಕ್ಕುಗಳಲ್ಲೂ ವಿಹರಿಸುತ್ತಲಿದ್ದೇನೆ. ಇದು ಭೂಮಿ, ಇದು ಆಕಾಶ, ಇವು ದಿಕ್ಕುಗಳು, ಇವು ಗಿರಿಗಳು, ಇವು ಪ್ರಾಣಿಗಳು, ಇದು ಜಗತ್ತೆಂದು ಸ್ಪಷ್ಟವಾಗಿರುವಲ್ಲಿ ನೀನು ಶರೀರವಂ ಧಿಕ್ಕರಿಸುವುದಕ್ಕೆ ನಿಮಿತ್ತವೇನು, ಯಾವನಿಗೆ ಮನಸ್ಸು ಕೆಡುವದೊ, ಯಾವನ ಬುದ್ಧಿಯು ವ್ಯಾಕುಲವಾಗುವದೊ, ಯಾವನು ಆಶೆಯೆಂಬ ಪಾಶಗಳಿಂ ಬದ್ಧನಾಗಿ ಮನೋವೃತ್ತಿಗಳಿಂದಿತ್ತತ್ತಲಾಗಿ ಸೆಳೆಯಲ್ಪಡುವನೊ, ಯಾವನ ಹೃದಯವೆಂಬ ಮೊಳಕೆಯನ್ನು ತತ್ವಾಲೋಚನೆಯಂ ಕೆಡಿಸುವ ದುರಾಶೆಗಳೆಂಬ ಹುಳುಗಳು ಸೆಳೆಯುವವೋ ಯಾವನ ಚಿತ್ತವೃತ್ತಿಯೆಂಬ ಲತೆಯು ರಾಗದ್ವೇಷಾದಿಗಳಿಂ ವೃದ್ಧಿಹೊಂದಿರುವ ಸುಖ ದುಃಖಗಳೆಂದ ಫಲಯುಕ್ತವಾಗಿರುವದೊ, ರೋಗರಾಜಿಗಳೆಂಬ ಬಳ್ಳಿಗಳಿಂ ಕೂಡಿದ ಯಾವನ ಶರೀರ ವೃಕ್ಷವನ್ನು ಅನರ್ಥಗಳು ಮೇಲಕ್ಕೆ ಹಾರಿಸುವವೋ ಯಾವನ ದೇಹವೆಂಬ ವನವನ್ನು ಶರೀರ ಮನೋದುಃಖಗಳೆಂಬ ಕಾಡುಗಿಚ್ಚುಗಳು ಸುಡುವವೋ ಯಾವನ ಶರೀರದಲ್ಲಿ ವೃಕ್ಷದಲ್ಲಿ ಹೆಬ್ಬಾವುಗಳಂತೆ ಕಾಮಕ್ರೋಧಾದಿಗಳು ಸೇರಿಕೊಂಡಿರುವವೊ, ಅವನಿಗೆ ಮರಣವು ಶೋಭಿಸುವದು, ದೇಹವಂ ಬಿಡುವದೇ ಮರಣವೆನಿಸಿಕೊಳ್ಳುವದು. ಜಡವಾದ ದೇಹಕ್ಕೆ ತನ್ನಂ ತಾನು ಬಿಡುವ ಯೋಗ್ಯತೆ ಇಲ್ಲದ್ದರಿಂದ ಅದು ಆತ್ಮನಿಗೆಂದು ತಿಳಿಯಬೇಕು. ಸ್ವಸ್ವರೂಪವಂ ತಿಳಿದ ಜ್ಞಾನಿಗೆ ದೇಹಾಭಿಮಾನವೇ ಇಲ್ಲದ್ದರಿಂದ ದೇಹಾಭಿಮಾ

ನದಿಂ ಜಡಪ್ರಾಯನಾದ ಪುರುಷನಿಗೆ ಮರಣವೆನ್ನುವದು ಯುಕ್ತವಾಗಿದೆಯಾಗಿ ಜ್ಞಾನಿಯಾದ ನೀನು ಈಗ ದೇಹವಂ ಬಿಡುವದಕ್ಕೆ ಕಾರಣವಿಲ್ಲ. ಯಾವನು ಸ್ವರೂಪವಂ ತಿಳಿದು ವ್ಯವಹಾರದಲ್ಲಿದ್ದಾಗ್ಯು ಸರ್ವ ಪದಾರ್ಥವನ್ನು ಆತ್ಮನಿಗೆ ಭಿನ್ನವಾದ್ದಲ್ಲವೆಂದು ತಿಳಿಯುತ್ತಾ ಹೊರಕ್ಕೆ ಬುದ್ಧಿಯಂ ಬಿಡದಿರುವನೊ, ಯಾವನು ಪರಮಾತ್ಮನ ಮಹಿಮ ವಿಚಾರದಿಂ ನಾನೆಂಬ ಅಭಿಮಾನವಂ ಬಿಟ್ಟು ಕರ್ಮಗಳಂ ನೆರವೇರಿಸುವದ್ದರಿಂದ ಅಸಂಗತವಾದ ಬುದ್ಧಿಯುಳ್ಳವನಾಗಿ ಸುಖ ದುಃಖಾದಿ ಭಾವಗಳಲ್ಲಿ ಸಮವಾಗಿರುವನೊ, ಯಾವನು ರಾಗದ್ವೇಷಾದಿಗಳಿಲ್ಲದೆ ಶಾಂತವಾದ ಬುದ್ಧಿಯಿಂದ ಸಾಕ್ಷಿಯಂತೆ ಸರ್ವವನ್ನೂ ನೋಡುತ್ತಿರುವನೋ, ಯಾವನು ಅಖಂಡಜ್ಞಾನದಿಂದ ಇದು ಗ್ರಾಹ್ಯವಿದು ತ್ಯಾಜ್ಯವೆಂಬ ಯೋಚನೆ ಇಲ್ಲದೆ ಆತ್ಮವಿಚಾರ ಪರಾಯಣವಾದ ಚಿತ್ತದಿಂ ಬಹಿರ್ಮುಖವಾಗುವ ಚಿತ್ತವಂ ತಡದು ಕೊಂಡಿರುವನೊ, ಯಾವನ ಮನವು ಶುಕ್ತಿರಜತಕ್ಕೆ ಸಮಾನವಾದಂಥಾ ಕಲ್ಪನಾಮಯವಾಗಿರುವ ವಿಷಯದಲ್ಲಿ ಸೇರದೆ ಬ್ರಹ್ಮದಲ್ಲಿ ಲೀನವಾಗಿರುವದೊ, ಯಾವನು ಅಖಂಡಜ್ಞಾನದಿಂ ಬಾಹ್ಯವಾಸನೆ ಇಲ್ಲದೆ ಆಯಾಯ ಕರ್ಮಗಳಂ ನೆರವೇರಿಸುವನೊ, ಯಾವನು ತ್ಯಾಜ್ಯಗ್ರಾಹ್ಯವಾದ ವಿಷಯಗಳ ಪ್ರಾಪ್ತಿಯಲ್ಲಿ ವಿಹರಿಸುತ್ತಿದ್ದಾಗ್ಯೂ ಸರ್ವತ್ರ ಬ್ರಹ್ಮಭಾವದಿಂದ ಸುಖದಿಂ ಕೊಬ್ಬದೆ ದುಃಖದಿಂ ಕಂಗೆಡದೆ ತಟಸ್ಥನಂತಿರುವನೊ, ಯಾವನ ಶಮದಮ ಜ್ಞಾನಾದಿಗಳು ಸರೋವರದಿಂ ಪೊರಮಡುವ ಹಂಸಗಳಂತೆ ದೇಶಾಂತರಗಳಲ್ಲಿ ಸಂಚರಿಸುವವೊ, ಯಾವನನ್ನು ಕೇಳಿದರೂ ಕಂಡರೂ ಸ್ಮರಿಸಿದರೂ ಕೂಡ ಪ್ರಾಣಿಗಳಿಗೆ ಸಂತೋಷವಾಗುವದೊ ಅಂಥಾವನು ಬದುಕುವದು ಸರ್ವರಿಗೂ ಸಮ್ಮತವಾದ್ದರಿಂದ ಶೋಭಿಸುತ್ತಿರುವದು. ಯಾವನಿಗೆ ಸಂಪತ್ತು ಬರುವದ್ದರಿಂದ ಚಂದ್ರೋದಯದಿಂ ಕನ್ನೈದಿಲೆಗಳಂತೆ ಜನಗಳು ಸಂತುಷ್ಟರಾಗುವರೊ ಅವನ ಜೀವನವೇ ಸರ್ವರಿಗೂ ಮನೋಹರವಾಗಿ ಶೋಭಿಸುವದು. ಎಲೈ ಮಹಾತ್ಮನೇ! ದೇಹವು ಸ್ಥಿರವಾಗಿರುವದೇ ಜೀವನವೆಂತಲೂ ಮತ್ತೊಂದು ದೇಹವಂ ಪಿಡಿಯಬೋಸುಗ ದೇಹವಂ ಬಿಡುವದೇ ಮರಣವೆಂತಲೂ ಪ್ರಸಿದ್ಧವಾಗಿರುವದು. ದೇಹಾಭಿಮಾನವಿಲ್ಲದೆ ಸ್ವರೂಪಸ್ಥಿತಿಯಂ ಪಡೆದಿರುವ ನಿನಗೆ ಈ ಎರಡು ಭಾವವು ಕಾಣುವದಿಲ್ಲ. ಜ್ಞಾನಾಜ್ಞಾನ ಗುಣದೋಷಗಳ ತಿಳುವಳಿಕೆಗೋಸುಗವೇ ಜೀವನ ಮರಣಗಳ ರೀತಿಯು ಹೇಳಲ್ಪಡುವದು. ಮನಸ್ಸಿಗೆ ಸಾಕ್ಷಿಯಾಗಿರುವದ್ದರಿಂದ ಸರ್ವಜ್ಞನಾಗಿರುವ ನೀನು ದೇಹಧರ್ಮವಾದ ಜೀವನ ಮರಣಗಳಂ ಪಡೆಯುವನಲ್ಲ.

ವಾಯುವು ಆಕಾಶದಲ್ಲಿಯೇ ಇದ್ದಾಗ್ಯೂ ಹೇಗೆ ಆಕಾಶಧರ್ಮವಂ ಹೊಂದಲಾರದೊ ಹಾಗೆ ನೀನು ದೇಹದಲ್ಲಿದ್ದಾಗ್ಯೂ ದೇಹಧರ್ಮವಂ ಹೊಂದುವದಿಲ್ಲ. ಶಬ್ದ ಸ್ಪರ್ಶಾದಿಗಳ ಜ್ಞಾನದಿಂ ನೀನು ದೇಹದಲ್ಲಿರುವನೆಂದು ತಿಳಿಯಬೇಕಾಗಿದೆ. ಎಚ್ಚರವಾದ ಬಳಿಕ ಸ್ವಪ್ನದೇಹವು ಹೇಗೆ ಇಲ್ಲದಂತಿರುವದೊ ಹಾಗೆ ಈ ದೇಹವು ಆತ್ಮಜ್ಞಾನವುಂಟಾದ ಬಳಿಕ ಇಲ್ಲದಂತಿರುವದು. ಈ ದೇಹವು ಪಾಂಚಭೌತಿಕ ಭಾವದಿಂದೇಕರೂಪವಾಗಿದ್ದಾಗ್ಯೂ ಅಜ್ಞರಿಗೆ ಅನೇಕ ಪ್ರಕಾರವಾಗಿರುವದು. ಸರ್ವಸ್ವರೂಪನಾದ ಪರಮಾತ್ಮನಲ್ಲಿ ನೀನು ಅಭೇದಭಾವದಿಂ ನೆಲಸಿ ಸರ್ವರೂಪನಾಗಿರುವದ್ದರಿಂದ ಅಜ್ಞನಂತೆ ದೇಹವೇ ನಾನೆಂಬುವನಲ್ಲವಾದ ಕಾರಣ ನಿನಗೆ ದೇಹವಿದ್ದಾಗ್ಯೂ ಇಲ್ಲವಂತೆಯೇ ಇರುವದು. ಇಂಥಾ ನೀನು ಯಾವದನ್ನು ನಾನೆಂದು ಪರಿಗ್ರಹಿಸುತ್ತೀಯೆ, ಯಾವದನ್ನು ನಾನಲ್ಲವೆಂದು ಬಿಟ್ಟೀಯೆ ಈ ಪ್ರಕಾರ ದೇಹಭಾವವಿದ್ದದ್ದರಿಂದ ಸಕಲ ಸುಖ ದುಃಖಗಳನ್ನತಿಕ್ರಮಿಸಿರುವ ನಿನಗೆ ವಸಂತಕಾಲ ಬಂದದ್ದರಿಂದ ಸುಖವು ಪ್ರಳಯದ ಗಾಳಿ ಬೀಸಿದ್ದರಿಂದ ದುಃಖವು ಸಹ ಏನು ಉಂಟಾದೀತು. ಗಿರಿಗಳು ಉರುಳುತ್ತಿದ್ದರೂ ಉತ್ಪಾತವಾತಗಳು ಬೀಸುತ್ತಿದ್ದರೂ ಪ್ರಳಯಕಾಲಾಗ್ನಿಗಳು ಜಗವಂ ಸುಡುತ್ತಿದ್ದರೂ, ಪ್ರಾಣಿಗಳು ಸ್ಥಿರವಾಗಿದ್ದರೂ, ಹೋಗುತ್ತಿದ್ದರೂ, ಕೃಶವಾಗುತ್ತಿದ್ದರೂ, ವೃದ್ಧಿಹೊಂದುತ್ತಿದ್ದರೂ ಕೂಡ ಆತ್ಮಜ್ಞನು ತನ್ನಲ್ಲಿಯೇ ನೆಲಸಿರುವನು. ದೇಹಕ್ಕಭಿಮಾನಿಯು ನಾನು ಇದು ನನ್ನ ದೇಹವೆಂಬ ಚಿತ್ತದ ವಿಲಾಸವು ಬ್ರಹ್ಮಾಭೇದಜ್ಞಾನದಿಂ ಕ್ಷಯವಾಗಲಾಗಿ ದೇಹದ ವೃದ್ಧಿ ಕ್ಷಯಾದಿ ಧರ್ಮವು ಇದನ್ನು ಗ್ರಹಿಸುವೆನು, ಇದನ್ನು ಬಿಡುವೆನೆಂಬ ಕಲ್ಪನೆಯು ಸಹ ಹೇಗೆ ಉಂಟಾದೀತು. ಇದನ್ನು ಮಾಡಿ ಇದನ್ನು ಮಾಡುವೆನೆಂತಲು ಇದಂ ಬಿಟ್ಟು ಇದಂ ಬಿಡುವೆನೆಂತಲೂ ಸಂಕಲ್ಪಗಳು ಜ್ಞಾನಿಗೆ ನಷ್ಟವಾಗುವವು. ಜ್ಞಾನಿಗಳು ಸರ್ವವನ್ನು ಮಾಡುತ್ತಿದ್ದಾಗ್ಯೂ ಸಂಕಲ್ಪಾಭಿಮಾನಗಳಿಲ್ಲದ್ದರಿಂದ ಕರ್ಮಹೀನರೆಂದು ಪ್ರಖ್ಯಾತರಾಗುವರು. ಬೀಜವಂ ಬಿತ್ತದವನಿಗೆ ಫಲವಿಲ್ಲದಿರುವಂತೆ ಕರ್ತೃತ್ವವಿಲ್ಲದವನಿಗೆ ಭೋಕ್ತೃತ್ವವೂ ಇಲ್ಲ. ಹೀಗೆ ಕರ್ತೃತ್ವ ಭೋಕ್ತೃತ್ವಗಳು ಹೋಗಲಾಗಿ ಶಾಂತಿಯೊಂದೇ ನಿಲ್ಲುವದು. ಅಖಂಡಾತ್ಮ ಭಾವದಿಂ ಸರ್ವವನ್ನೂ ಆಕ್ರಮಿಸಿಕೊಂಡಿರುವ ಜ್ಞಾನಿಗಳು ಬಿಟ್ಟದ್ದೆಂದು ಯಾವದನ್ನು ಗ್ರಹಿಸುವರು, ಗ್ರಹಿಸಿದ್ದೆಂದು ಯಾವದನ್ನು ಬಿಟ್ಟಾರು, ಗ್ರಾಹ್ಯ ಗ್ರಾಹಕ ಸಂಬಂಧ ಲಕ್ಷಣಗಳಿಂದ ಅಜ್ಞಾನಕಾಲದಲ್ಲಿ ತಿಳಿಯಲ್ಪಟ್ಟ ಕ್ರಿಯಾಕಾರಕಗಳಾದ ಅಂಗಾಂಗೀಭಾವವುಳ್ಳ ಮಹಾವಾ

ಕ್ಯಾರ್ಥ ನಿರ್ಣಯ ಕ್ರಮಗಳಂ ವಿಚಾರಿಸುವ ಅಖಂಡ ಜ್ಞಾನಿಗೆ ಪರಿಗ್ರಹಿಸತಕ್ಕದ್ದು ಯಾವದು, ಬಿಡತಕ್ಕದ್ದು ಯಾವದು, ಮಹಾವಾಕ್ಯ ತಾತ್ಪರ್ಯ ವಿಚಾರದಿಂದಾತ್ಮನ ಪರಿಪೂರ್ಣಭಾವವು ತಿಳಿಯುತ್ತಾ ರಾಗದ್ವೇಷಾದಿಗಳು ಅಣಗುತ್ತಿರೆ ಗ್ರಾಹ್ಯ ಗ್ರಾಹಕ ಸಂಬಾಧಕ್ಕೆ ಮೂಲವಾದ ಅಜ್ಞಾನವಳಿಯಲು ಶಾಂತಿಯುಂಟಾಗುವದು. ಇದೇ ರೂಢಮೂಲವಾಗಿ ಮೋಕ್ಷವೆನಿಸಿಕೊಳ್ಳುವದು. ಅಹಂಕಾರ ಮಮಕಾರಗಳಿಗೆ ಶಾಂತಿರೂಪವಾದ ಈ ಶಾಂತಿಯಂ ಪಡದಿರುವ ನಿನ್ನಂಥಾ ಮಹಾತ್ಮರು ನಿದ್ರೆಯಂ ಮಾಡುವವನ ಅಂಗಚಲನೆಯಂತೆ ಸಂಕಲ್ಪಾಭಿಮಾನರಹಿತವಾಗಿ ಸಿದ್ಧವಾದ ಕರ್ಮಗಳಂ ನೆರವೇರಿಸುತ್ತಾ ಈ ಲೋಕಗಳಲ್ಲಿ ಸಂಚರಿಸುತ್ತಿರುವರು. ಆದ್ದರಿಂದ ಪರಮಾರ್ಥಜ್ಞಾನದಿಂ ವಿಶ್ರಾಂತಿಯಂ ಪಡೆದ ವಾಸನೆಯುಳ್ಳ ನೀನು ನಿದ್ರಾ ಜಾಗರಗಳ ಸಂಧಿಯಲ್ಲಿರುವನಂತೆ ಆತ್ಮೈಕನಿಷ್ಠವಾದ ದೃಷ್ಟಿಯಿಂದ ಈ ಜಗವಂ ನೋಡುತ್ತಾ ಅಖಂಡವಾದ ಸೌಖ್ಯವನ್ನನುಭವಿಸುವನಾಗು. ಪರಮಾತ್ಮನ ಅಖಂಡಭಾವದಿಂ ತಮ್ಮಲ್ಲಿಯೇ ನೆಲಸಿರುವ ಮಹಾತ್ಮರು ಮನೋಹರವೆಂದು ಯಾವದನ್ನು ಗ್ರಹಿಸಿ ಸುಖಪಡುವರು. ದುಃಖವೆಂದು ಯಾವದರಿಂದ ಭಯಪಡುವರು. ತಿಳಿದವರು ಕನ್ನಡಿಗಳಂತೆ ಯದೃಚ್ಛೆಯಾಗಿ ಬಂದ ಪದಾರ್ಥಗಳ ಛಾಯೆಯಂ ಪಿಡಿಯುತ್ತಾ ನಿತ್ಯಜಾಗರನಾದ ಆತ್ಮನಲ್ಲಿ ಜಾಗರೂಕರಾಗಿರುವರು. ಸ್ವಪ್ನಪ್ರಾಯವಾದ ಸಂಸಾರದಲ್ಲಿ ಬಾಲಕರಂತೆ ಆಸಕ್ತರಾಗಿದ್ದಾಗ್ಯೂ ಸಾಕ್ಷಿಯಂತೆ ಸುಖದುಃಖಗಳಿಗೆ ಒಳಗಾಗದೆ ವಿಹರಿಸುತ್ತಿರುವರು. ಈ ಪ್ರಕಾರ ನೀನು ಅಖಂಡಪದವಿಯ ಸುಖವನ್ನನುಭವಿಸುತ್ತಾ ಪಾತಾಳ ರಾಜ್ಯಾಧಿಪತ್ಯವಂ ಮಾಡುತ್ತಿರುವನಾಗು ? ಚತುರ್ಮುಖನಿಗೆ ಒಂದು ದಿವಸವಾದ ಬಳಿಕ ನಿಜವಾದ ಸ್ಥಾನವಂ ಹೊಂದುತ್ತೀಯೆ ? ಎಂದು ಅಮೃತಮಯವಾದ ವಾಕ್ಕಿನಿಂದ ನಾರಾಯಣನು ಬೋಧಿಸುತ್ತಿರಲು, ಚಂದ್ರನ ಕಿರಣಗಳಿಂದಾಪ್ಯಾಯನವಂ ಪಡೆದ ಚಕೋರ ಪಕ್ಷಿಯಂತೆ ಪ್ರಬೋಧವಂ ಪಡೆದ, ಪ್ರಹ್ಲಾದನು ಜಗತ್ತುಗಳೆಂಬ ರತ್ನಗಳಿಗೆ ರತ್ನಾಕರನಾಗಿರುವ ಆ ಶ್ರೀಪತಿಯಂ ಕಂಡು ಪ್ರಣಾಮವಂಗೈದು ಬಿನ್ನವಿಸಿದನದೆಂತೆನೆ:—ಎಲೈ ಜಗದಿಂದ್ರಜಾಲ ವಿಲಾಸಿಯಾದ ನಾರಾಯಣನೇ ! ಹಿತಾಹಿತ ವಿಚಾರನೇ! ಮುಖ್ಯವಾದ ರಾಜಕಾರ್ಯಗಳಿಂದ ಬಳಲಿದ ನಾನು ಒಂದುಕ್ಷಣ ವಿಶ್ರಮಿಸಿಕೊಂಡೆನು. ಎಲೈ ಮಹಾನುಭಾವನೇ ! ನಿನ್ನ ಪ್ರಸಾದದಿಂ ನಾನು ಸಮಾಧಿಯಲ್ಲೂ ಇತರ ಕಾಲಗಳಲ್ಲೂ ಸಹ ಸಮವಾದ ತತ್ವಜ್ಞಾನದಲ್ಲಿ ಸ್ಥಿತಿಯಂ ಪಡೆದೆನು. ಜಗದ್ಗುರುವಾದ ನಿನ್ನ ಅನುಗ್ರಹವಿಲ್ಲದವನಿಗೆ ಯಾವ ಸೌಖ್ಯವೂ

ಉಂಟಾಗಲಾರದಾದ್ದರಿಂದ ಅಂತರ್ಮುಖವಾದ ದೃಷ್ಟಿಯಿಂದ ನಿನ್ನ ಪದವಂ ಹಿಡಿದು ನಿನ್ನ ಅನುಗ್ರಹದಿಂದಲೇ ಅಖಂಡವಾದ ನಿನ್ನ ಸ್ವರೂಪವನ್ನೊಂದುಕ್ಷಣ ನೋಡುತ್ತಿದ್ದೆನು. ಈಗ ಬಹಿರ್ಮುಖವಾದ ದೃಷ್ಟಿಯುಳ್ಳವನಿಗೆ ಜಗನ್ಮನೋಹರವಾದ ಈ ರೂಪದರ್ಶನ ಸುಖವು ನಿನ್ನ ಪ್ರಸಾದದಿಂದಲೇ ಉಂಟಾಗಿದೆ. ಎಲೈ ಶ್ರೀಪತಿಯೇ! ಸ್ವಯಂಪ್ರಕಾಶನಾದ ನಿನ್ನ ಅನುಗ್ರಹದಿಂ ತಾನಾಗಿ ಪುಟ್ಟಿದ ನಿರ್ದೋಷವಾದ ಅಪೇಕ್ಷೆಯಿಂದ ನಿರ್ಮಲವಾದ ಆಕಾಶದಲ್ಲಿ ಆಕಾಶವು ಸೇರುವಂತೆ ಅನಂತವಾದ ಈ ಜ್ಞಾನದೃಷ್ಟಿಯಲ್ಲಿ ನಿಂತಿದ್ದೆನಲ್ಲದೆ ಶೋಕದಿಂದಾಗಲೀ, ಮೋಹದಿಂದಾಗಲೀ, ವೈರಾಗ್ಯದಿಂದಾಗಲೀ, ದೇಹತ್ಯಾಗಾಪೇಕ್ಷೆಯಿಂದಾಗಲೀ, ಸಂಸಾರ ಭಯದಿಂದಲಾಗಲೀ, ಈ ಮಾರ್ಗಕ್ಕೆ ನಾನು ಬಂದವನಲ್ಲ. ನಿನ್ನ ಅನುಗ್ರಹವುಳ್ಳಂಥಾವರಿಗೆ ಈ ಶೋಕಾದಿಗಳು ಹೇಗೆ ಬಂದಾವು? ಅಖಂಡವಾದ ಒಂದೇ ವಸ್ತುವು ಪ್ರಕಾಶಿಸುತ್ತಿರುವಲ್ಲಿ ಶೋಕವು ಹಾನಿಯು ದೇಹವು ಸಂಸಾರವು ಕಲ್ಪಸ್ಥಿತಿಯು ಭಯವು ಸಹ ಹೇಗೆ ಉಂಟಾದೀತು, ಅಕಟಕಟಾ ನಾನು ವಿರಕ್ತನಾಗಿದ್ದೇನೆ. ಈ ಸಂಸಾರವಂ ಬಿಟ್ಟುಬಿಡುವೆನೆಂದು ಶೋಕ ಹರ್ಷಗಳನ್ನುಂಟು ಮಾಡುವ ಈ ಚಿಂತೆಯು ಅಜ್ಞಾನಿಗಳಿಗೇ ಉಂಟಾಗುವದು. ಅದ್ವಿತೀಯ ಸ್ವಭಾವವಂ ತಿಳಿದವನಿಗೆ ದೇಹದೇಹಿ ಭಾವವೇ ಇಲ್ಲದ್ದರಿಂದ, ದೇಹವಿರುವದ್ದರಿಂದ ದುಃಖವೆಂತಲೂ, ದೇಹವಿಲ್ಲದಿರೆ ಸುಖವೆಂತಲೂ, ಎಂದಿಗೂ ಚಿಂತೆಯುಂಟಾಗಲಾರದು. ಇದು ಸುಖ, ಇದು ದುಃಖ, ಇದು ಇರುವದು, ಇದು ಇಲ್ಲ, ಇವನು ಬೇರೆ, ನಾನು ಬೇರೆ, ಇದು ತ್ಯಾಜ್ಯವು, ಇದು ಗ್ರಾಹ್ಯ ಎಂಬ ಚಿಂತೆಯು ನಿನ್ನ ಮಹಿಮೆಯಂ ತಿಳಿದವನಿಗೆ ಹೇಗೆ ಉಂಟಾದೀತು. ದೃಶ್ಯವಾದೀಪ್ರಪಂಚವೆಲ್ಲವು ಅಜ್ಞಾನಿಗಳಿಗೆ ಸತ್ಯವಾಗಿಯು, ನಿನ್ನ ಸ್ವಭಾವವಂ ತಿಳಿದವರಿಗೆ ಅಸತ್ಯವಾಗಿಯೂ, ಇರುವದ್ದರಿಂದ ಸದಸದ್ಭಾವಗಳಂ ಹೊಂದಿ ಶುಕ್ತಿರಜದಂತೆ ಪ್ರಾತಿಭಾಸಿಕವಾದ ಜ್ಞಾನಾಭಾಸವೆನಿಸಿಕೊಳ್ಳುವದು ಸದ್ವಸ್ತುವಾದವನಿಗೂ, ಅಸತ್ತಾದ ಮಾಯೆಗೂ, ಪರಸ್ಪರ ಸಂಬಂಧದಿಂ ಜಡಾಜಡರೂಪವಾಗಿ ಪುಟ್ಟಿರುವದಾದಕಾರಣ, ಈ ಪ್ರಪಂಚವು ಸದಸತ್ತೆಂತಲೂ, ಜ್ಞಾನಾಭಾಸವೆಂತಲೂ ಹೇಳಿಸಿಕೊಳ್ಳುವದು. ಕಾರ್ಯಕಾರಣ ರೂಪದಿಂ ಸದಸತ್ತೆನಿಸಿಕೊಳ್ಳುವ ಈ ಪ್ರಪಂಚವು ನಿನ್ನ ಮಹಿಮೆಯಂ ತಿಳಿದವರಿಗೆ ನಿನ್ನ ಪ್ರಕಾಶರೂಪವಾಗಿಯೇ ಕಾಣುವದಾದ್ದರಿಂದ ವಿಜ್ಞಾನಾಭಾಸವೆನಿಸಿಕೊಳ್ಳುವದು. ಮತ್ತು ಸರ್ವವ್ಯಾಪಕವಾದ ನಿನ್ನ ಸತ್ವದ ಅವಲಂಬನದಿಂದ ಸತ್ತೆಂತಲೂ, ನಿನ್ನ ಮಹತ್ವ ವಿಚಾರದಲ್ಲಿ ಇಲ್ಲದೆ ಹೋಗುವದ್ದರಿಂದ ಅಸ

ತ್ತೆಂತಲು ಪೇಳಲ್ಪಡುವ ಈ ಪ್ರಪಂಚವು ಸತ್ಯವೆಂದು ಗ್ರಹಿಸಿದಾಗ್ಯೂ, ಅಸತ್ಯ ವೆಂದು ಗ್ರಹಿಸಿದಾಗ್ಯೂ ಯಾವದು ಗ್ರಾಹ್ಯವೆಂತಲೂ, ಯಾವದು ತ್ಯಾಜ್ಯವೆಂ ತಲೂ ಸಮ್ಮತವಾದೀತು. ವಿವೇಕ ಮಾರ್ಗದಿಂ ನಾನು ದೃಗ್ದೃಶ್ಯಗಳಂ ವಿಚಾ ರಿಸುತ್ತಾ ಶುಕ್ತಿ ರಜದಂತೆ ಜ್ಞಾನಾಭ್ಯಾಸ ರೂಪವಾದ ಈ ಪ್ರಪಂಚವಂ ಬಿಟ್ಟು ಸರ್ವಾತೀತನಾದ ನಿನ್ನಂ ಹೊಂದಿ ಸುಖವಾಗಿ ವಿಶ್ರಮಿಸಿಕೊಂಡೆನು. ಎಲೈ ಮಹಾದೇವನೇ! ಈಗ ನೀನು ಹೇಗೆ ಆಜ್ಞಾಪಿಸುತ್ತೀಯೊ ಹಾಗೆ ನಡೆಕೊಳ್ಳುವೆನು. ಎಂದು ವಿಜ್ಞಾಪಿಸಿದ ಪ್ರಹ್ಲಾದನು ಸಪರಿವಾರನಾದ ಆ ದೇವದೇವನಂ ಪರಿಪರಿ ಯಾದ ಉಪಚಾರಗಳಿಂ ಪೂಜಿಸಿದನು. ಬಳಿಕ ಲಕ್ಷ್ಮೀಪತಿಯು ಪ್ರಹ್ಲಾದನಂ ಸಿಂಹಾಸನದಮೇಲೆ ಕುಳ್ಳಿರಿಸಿ ಸ್ಮರಣಮಾತ್ರದಿಂ ಸಿದ್ಧರಾದ ದೇವರ್ಷಿ ಬ್ರಹ್ಮರ್ಷಿ ಮಹರ್ಷಿಗಳಿಂದಲೂ, ಸಿದ್ಧ ಸಾಧ್ಯ ವಿದ್ಯಾಧರ ಮೊದಲಾದವರಿಂದಲೂ ಸಹಿತ ನಾಗಿ ಸ್ವರ್ಗದಲ್ಲಿ ಇಂದ್ರನಿಗೆ ಪಟ್ಟಾಭಿಷೇಕವಂ ಮಾಡಿದಂತೆ ಕ್ಷೀರಾಬ್ಧಿ ಮೊದ ಲಾದ ಸಮುದ್ರಗಳ ಉದಕಗಳಿಂದಲೂ, ಗಂಗಾನದೀ ಜಲಗಳಿಂದಲೂ, ಸಕಲ ತೀರ್ಥೋದಕಗಳಿಂದಲೂ, ಪ್ರಹ್ಲಾದನಿಗೆ ದಾನವ ಸಾಮ್ರಾಜ್ಯಾಭಿಷೇಕವಂ ಮಾಡಿ ಪಾಂಚಜನ್ಯ ಧ್ವನಿಯಂ ಕೇಳಿಬಂದ ದೇವೇಂದ್ರಾದಿ ದೇವತೆಗಳಿಂದಲೂ, ಸಿದ್ಧ ಸಾಧ್ಯಾದಿಗಳಿಂದಲೂ, ಮಂಗಳ ಶಾಸನದ ಪೂರ್ವಕವಾಗಿ ಸ್ತುತಿಸಲ್ಪಡುವ ಆ ಪ್ರಹ್ಲಾದನನ್ನಾಜ್ಞಾಪಿಸಿದನದೆಂತೆನೆ;—ಎಲೈ ದಾನವೇಂದ್ರನೇ! ಮೇರುಪರ್ವ ತವು, ಭೂಮಿಯು, ಸೂರ್ಯ ಚಂದ್ರರು ಸಹ ಯಾವವರಿಗೆ ಇರುವವೋ ಅವರಿಗೆ ಅಖಂಡಿತವಾದ ಗುಣಗಳಿಂ ಶ್ಲಾಘ್ಯನಾದ ನೀನು ರಾಜ್ಯಾಧಿಪತ್ಯವಂ ಮಾಡುತ್ತಾ ಸುಖದಿಂದಿರುವನಾಗು. ಸರ್ವವ್ಯಾಪಕನಾಗಿ ಸಮವಾಗಿರುವ ಪರಮಾತ್ಮನಲ್ಲಿ ದೃಷ್ಟಿಯನ್ನಿಟ್ಟು ಇಷ್ಟವೆಂತಲೂ, ಅನಿಷ್ಟವೆಂತಲೂ ಫಲಗಳನ್ನೋಡದೆ ರಾಗ ದ್ವೇಷ ಭಯ ಹೀನನಾಗಿ ರಾಜ್ಯಭಾರವಂ ಮಾಡು, ಅಖಂಡಾತ್ಮನಾದ ಪರಮಾತ್ಮನಿಗೆ ಈ ಪ್ರಪಂಚವು ಅಭಿನ್ನವಾಗಿರುವದ್ದರಿಂದ ದೇವ ಮಾನವ ಭೋಗಗಳಿಂ ಪೂರ್ಣ ವಾದ ಈ ಲೋಕವಲ್ಲಿ ದೃಶ್ಯವಿದೆಂಬ ಬುದ್ಧಿಯಿಂದ ವೈರಸ್ಯವಂ ಹೊಂದಬೇಡ. ಈಶ್ವರೇಚ್ಛೆಯಿಂದ ದೇಶ ಕಾಲ ಕ್ರಿಯಾರೂಪವಾಗಿ ಬಂದ ಶತ್ರು ಮಿತ್ರ ಗುಣದೋ ಷಾದಿ ದೃಷ್ಟಿಗಳಲ್ಲಿ ಪ್ರಕೃತವಾದ ನಿಗ್ರಹಾನುಗ್ರಹಗಳಂ ನೆರವೇರಿಸುತ್ತಾ ಬ್ರಹ್ಮ ಭಿನ್ನವೆಂದು ಪದಾರ್ಥಗಳಂ ತೋರಿಸುವ ಮನವಂ ತಿರಸ್ಕರಿಸುವನಾಗು ? ನಾನು ನನ್ನದೆಂಬುವದು ಮೊದಲಾದ ಸಮಸ್ತ ಭಾವಗಳಿಗೂ ಪರಮಾತ್ಮನೇ ಆಶ್ರಯವಾ ದ್ದರಿಂದ ಸುಖದುಃಖ ಲಾಭಾದಿಗಳಲ್ಲಿ ವಿಕಾರವಿಲ್ಲದೇ ಸಮಭಾವದಿಂ ಕಾರ್ಯಗಳಂ

ಮಾಡುವ ನೀನು ಎಂದಿಗೂ ಬದ್ಧನಾಗುವದಿಲ್ಲ. ಪ್ರಪಂಚದ ರೀತಿಯನ್ನೂ, ಪರಮಾತ್ಮ ಸ್ವರೂಪವನ್ನೂ, ಸರ್ವ ದೇಶಕಾಲ ವಸ್ತುಗಳಲ್ಲಿ ವ್ಯವಹಾರ ಪರಮಾರ್ಥ ರೀತಿಗಳಂ ಸಹ ತಿಳಿದಿರುವ ನಿನಗೆ ಉಪದೇಶವಂ ಮಾಡತಕ್ಕದ್ದೇನು ? ರಾಗದ್ವೇಷ ಭಯಗಳಿಲ್ಲದೆ ನೀನು ರಾಜ್ಯಭಾರವಂ ಮಾಡುತ್ತಿರಲು, ದ್ವೇಷ ದುಃಖದಿಂದ ಸುರರು ವ್ಯಥೆಪಡುವದಿಲ್ಲ. ಮಿತಿಯಿಲ್ಲದ ಪ್ರವಾಹದಿಂ ದಡದಲ್ಲಿರುವವನ ಪಂಜೆಯನ್ನೆನೆಸುವ ನದಿಯಂತೆ ಅಸುರ ಸ್ತ್ರೀಯರುಗಳ ಕಣ್ಣೀರು ಪ್ರವಾಹಗಳು ಕರ್ಣಾಭರಣಗಳಂ ನೆನಸುವದಿಲ್ಲ. ಇದು ಮೊದಲುಗೊಂಡು ದೇವಾಸುರ ಯುದ್ಧವಿಲ್ಲದ ಈ ಜಗವು ಮಂದರ ಪರ್ವತದಿಂ ಬಿಡಲ್ಪಟ್ಟ ಕ್ಷೀರ ಸಮುದ್ರದಂತೆ ಸ್ವಸ್ಥವಾಗಿರಲಿ, ದೇವಾಸುರ ಸ್ತ್ರೀಯರುಗಳು ಶತ್ರುಬಾಧೆ ಇಲ್ಲದೆ ತಮ್ಮತಮ್ಮ ಅಂತಃಪುರಗಳಲ್ಲಿಯೇ ಸುಖದಿಂದಿರಲಿ, ಸಂಸಾರ ಮೋಹವೆಂಬ ಕೃಷ್ಣಪಕ್ಷದ ರಾತ್ರಿಯ ಅಂಧಕಾರವಂ ತಿರಸ್ಕರಿಸಿ ನಿತ್ಯಪ್ರಕಾಶವಾದ ಜ್ಞಾನಲಕ್ಷ್ಮಿಯಂ ಪಡದಿರುವ ನೀನು ಅಸುರಕನ್ಯೆಯರ ವಿಲಾಸದಿಂ ಮನೋಹರವಾದ ರಾಜ್ಯಲಕ್ಷ್ಮಿಯನ್ನನುಭವಿಸುತ್ತಿರುವನಾಗು ? ಎಂದು ಆಜ್ಞಾಪಿಸಿ ಪ್ರಹ್ಲಾದನಿಂ ಪೂಜಿತನಾದ ಲಕ್ಷ್ಮೀಪತಿಯು ಸಪರಿವಾರನಾಗಿ ಕ್ಷೀರಸಮುದ್ರವನ್ನೈದಿ ಸಂಗಡ ಬಂದ ದೇವಾಸುರಾದಿಗಳನ್ನ ಪರದರ ಲೋಕಕ್ಕೆ ಕಳುಹಿ ಲಕ್ಷ್ಮಿ, ಭೂದೇವಿಗಳೊಡನೆ ಶೇಷಶಯನವಂ ಹೊಂದಿದನು. ಆಗ ಸ್ವರ್ಗದಲ್ಲಿ ದೇವೇಂದ್ರನು, ಪಾತಾಳದಲ್ಲಿ ಪ್ರಹ್ಲಾದನು, ಕ್ಷೀರಸಮುದ್ರದಲ್ಲಿ ಮಹಾ ವಿಷ್ಣುವು ಸಹ ಸುಖದಿಂದಿದ್ದರು. ಪ್ರಹ್ಲಾದನಿಗೆ ಜ್ಞಾನಸಿದ್ಧಿಯಾದೀ ಕಥೆಯನ್ನು ಯಾರು ವಿಚಾರಪರರಾಗಿ ಕೇಳುವರೋ ಅವರು ಅಖಂಡಾನಂದ ಸಾಮ್ರಾಜ್ಯವಂ ಹೊಂದುವರು. ಸಾಧಾರಣವಾದ ವಿಚಾರದಿಂದಲೇ ಪಾಪವು ಹೋಗುವಲ್ಲಿ ವಿಶೇಷವಾಗಿ ವಾಕ್ಯಾರ್ಥಗಳಂ ವಿಚಾರಿಸುವನು ಯಾವನು ತಾನೇ ಪರಮಪದವಂ ಪೊಂದದಿದ್ದಾನು. ಜೀವ ಬ್ರಹ್ಮರುಗಳಲ್ಲಿ ಭೇದ ದೃಷ್ಟಿಯೇ ಅಜ್ಞಾನವೆನಿಸಿಕೊಳ್ಳುವದು. ಇದನ್ನೇ ಪಾಪವೆನ್ನುವರು, ಇದು ವಿಚಾರದಿಂದಲೇ ಹೋಗತಕ್ಕದ್ದಾದ್ದರಿಂದೊಂದು ಕ್ಷಣವಾದರುಂ ವಿಚಾರವಂ ಬಿಡಲಾಗದು. ಈ ಪ್ರಹ್ಲಾದನ ಸಿದ್ಧಿಕ್ರಮವಂ ಚನ್ನಾಗಿ ವಿಚಾರಿಸುವವನಿಗೆ ಏಳು ಜನ್ಮಗಳ ಪಾಪವು ಹೋಗುವದರಲ್ಲಿ ಸಂದೇಹವಿಲ್ಲವೆಂದು ವಸಿಷ್ಠ ಮಹಾಮುನಿಯು ಶ್ರೀರಾಮಚಂದ್ರನಂ ಕುರಿತು ನಿರೂಪಿಸಿದ ನೆಂಬಲ್ಲಿಗೆ:—

ಪ್ರಹ್ಲಾದ ಪಟ್ಟಾಭಿಷೇಕ ನಿರೂಪಣವೆಂಬ
ಏಳನೇ ತರಂಗಕ್ಕೆ ಮಂಗಳಮಸ್ತು.

ಶ್ರೀ ಶಾರದಾ ಗುರುಭ್ಯೋನಮಃ.

## ಗಾಧಿವೃತ್ತಾಂತ ನಿರೂಪಣ ಪ್ರಾರಂಭವು.

ಇಂತು ಪ್ರಹ್ಲಾದನ ವೃತ್ತಾಂತವಂ ವಸಿಷ್ಠನು ನಿರೂಪಿಸುತ್ತಿರುವಲ್ಲಿ, ಶ್ರೀರಾಮಚಂದ್ರನು ಎಲೈ ಗುರುವೇ! ನಿರ್ವಿಕಲ್ಪ ಸಮಾಧಿಯಲ್ಲಿ ಬಹುಕಾಲದಿಂ ಮಲಗಿದ್ದ ಜೀವನ್ಮುಕ್ತನಾದ ಪ್ರಹ್ಲಾದನ ಮನಕ್ಕೆ ಶ್ರೀ ಲಕ್ಷ್ಮೀಪತಿಯು ಪಾಂಚಜನ್ಯ ಧ್ವನಿಯಿಂದೆಚ್ಚರವಾದದ್ದು ಹೇಗೆ? ಆ ವಿಷಯವಂ ಪೇಳಬೇಕೆಂದು ಕೇಳುವಲ್ಲಿ ವಸಿಷ್ಠನಿಂತೆಂದನು:—ಎಲೈ ರಾಮಭದ್ರನೇ! ದೇಹಸಹಿತವೆಂತಲೂ, ದೇಹರಹಿತವೆಂತಲೂ ಮುಕ್ತಿ ಎರಡುಪ್ರಕಾರವಾಗಿರುವದು. ತ್ಯಾಗಗ್ರಹಣ ವ್ಯಾಪಾರಗಳಲ್ಲಿ ಅಪೇಕ್ಷೆಯಿಲ್ಲದ ಸ್ಥಿತಿಯೇ ಜೀವನ್ಮುಕ್ತಿ ಎನಿಸುವದು. ದೇಹಧಾರಣ ನಿಮಿತ್ತವಾದ ಪ್ರಾರಬ್ಧ ಕರ್ಮವಳಿಯುವಲ್ಲಿ ದೇಹಪಾತವಾದ್ದರಿಂದ ಪುನರ್ಜನ್ಮಕ್ಕೆ ಕಾರಣವಾಗದ ನಿಜಸ್ವರೂಪ ಸ್ಥಿತಿಯೇ ವಿದೇಹಮುಕ್ತಿ ಎನಿಸುವದು. ಜೀವನ್ಮುಕ್ತರ ಮನಸ್ಥಿತಿಗೆ ತಮಸ್ಸಂಬಂಧವಿಲ್ಲದ್ದರಿಂದೆಂದಿಗೂ ಅಖಂಡಭಾವಕ್ಕೆ ಚ್ಯುತಿಯಿಲ್ಲದಿರುವದು. ರಜಸ್ಸಂಬಂಧವಿಲ್ಲದ್ದರಿಂದ ಕಾರ್ಯಾಕಾರ್ಯಗಳಲ್ಲಿ ಅಪೇಕ್ಷೆಯುಂಟಾಗಲಾರದು, ಕೇವಲ ಸತ್ವಸ್ಥಿತಿಯಾದ್ದರಿಂದ ಅವರ ವಾಸನೆಯು ಅಖಂಡಾತ್ಮಜ್ಞಾನರೂಪವಾಗಿಯೇ ಇರುವದು. ಗಾಢ ಸುಷುಪ್ತಿ ನಿರ್ವಿಕಲ್ಪ ಸಮಾಧಿಗಳೇ ಈ ಸ್ಥಿತಿಗೆ ಸರಿಯೆನಿಸುವವು. ಪುನರ್ಜನ್ಮ ಸಾಧಕವಾದ ಅಜ್ಞಾನಕ್ಕೆ ಪ್ರಾಪ್ತಿ ಇಲ್ಲದ್ದರಿಂದ ಈ ಸ್ಥಿತಿಯೇ ಮುಕ್ತಿ ಎನಿಸುವದು. ಕರ್ಮ ಪರಿಣಾಮರೂಪವಾದ ದೇಹಕ್ಕೆ ಬರತಕ್ಕ ಪ್ರಾರಬ್ಧ ಶೇಷವಿದ್ದಲ್ಲಿ ಆ ಸ್ಥಿತಿಯು ಸತ್ವಶೇಷವಾಗಿರುವದು ಸತ್ವಾವಶೇಷವಾದ ಸ್ಥಿತಿಯೇ ಜೀವನ್ಮುಕ್ತಿಯೆಂತಲೂ, ಸತ್ವಶೇಷವಿಲ್ಲದ ನಿರ್ಗುಣಸ್ಥಿತಿಯೇ ವಿದೇಹ ಮುಕ್ತಿಯಂತಲೂ ಪೇಳಲ್ಪಡುವದು. ಸತ್ವವಿಶೇಷವಿದ್ದಲ್ಲಿ ಅವರು ಅನೇಕ ಸಹಸ್ರವರ್ಷಗಳು ನಿರ್ವಿಕಲ್ಪಜ್ಞಾನ ಸಮಾಧಿಯಲ್ಲಿದ್ದಾಗ್ಯೂ ಪ್ರಾರಬ್ಧವಶದಿಂದವರಿಗೆ ಬಾಹ್ಯಜ್ಞಾನ ಉಂಟಾಗುವದು. ಪ್ರಾರಬ್ಧ ವಶದಿಂದಲೇ ಅವರಿಗೆ ಕಾರ್ಯಪ್ರಸಕ್ತಿಯುಂಟಾಗುವದು. ಆದಾಗ್ಯೂ ಅವರಿಗೆ ಸ್ವರೂಪಜ್ಞಾನ ಚ್ಯುತಿಯಿಲ್ಲದ್ದರಿಂದವರ ಕರ್ಮವು ಹುರದ ಬೀಜದಂತೆ ಜನ್ಮಾಂತರ ಕಾರಣವಾಗಲಾರದು. ಅವರಿಗೆ ಒಂದು ವೇಳೆ ಸ್ಥೂಲದೇಹ ನಷ್ಟವಾದಾಗ್ಯೂ ಸತ್ವಾವಲಂಬನವಾದ ಸೂಕ್ಷ್ಮದೇಹವಿರುವದ್ದರಿಂದ ಲೀಲೆಯಂತೆ ಐಚ್ಛಿಕವಾದ ಸ್ಥೂಲ ದೇಹವನ್ನವರು ಮರಳಿ ಪಡೆಯುವರು. ಸತ್ವಶೇಷವೆ ಹೋಗಿದ್ದಲ್ಲಿ ಪರ

ಮಾತ್ಮನಲ್ಲಿ ಸೇರಿಹೋದ ಆ ಜನರಿಗೆ ಅಜ್ಞಾನವು ನಿಶ್ಶೇಷವಾದ್ದರಿಂದ ಪರಮಾತ್ಮ ನಂತೆಯೇ ಅವರು ವಾಙ್ಮನಸ್ಸುಗಳಿಗೆ ಅಗೋಚರರಾಗುವರು. ಪ್ರಹ್ಲಾದನು ಜೀವನ್ಮುಕ್ತನಾಗಿದ್ದುದರಿಂದ ಪಾಂಚಜನ್ಯ ಧ್ವನಿಯಿಂದವನಿಗೆ ಎಚ್ಚರವಾದುದು. ಶ್ರೋತ್ರಾದೀಂದ್ರಿಯಗಳು ಅವನಿಗೆ ಲೀನವಾಗಿದ್ದಾಗ್ಯೂ ಸರ್ವಾತ್ಮನಾದ ಶ್ರೀಪ ತಿಯ ಇಚ್ಛಾಮಾತ್ರದಿಂದವನಿಗೆ ಉಂಟಾದವು. ಪರಮಾತ್ಮನ ಇಚ್ಛೆಯನ್ನತಿಕ್ರಮಿಸು ವಂಥಾದ್ದು ಯಾವದೂ ಇಲ್ಲವಾದ್ದರಿಂದಲೂ ಲೋಕಾನುಗ್ರಹಾರ್ಥವಾದ ಸೃಷ್ಟಿ ಗೋಸುಗ ಆ ಪರಮಾತ್ಮನೆ ಈ ವಾಸುದೇವ ರೂಪನಾಗಿರುವದ್ದರಿಂದಲೂ ಈ ಪರ ಮಾತ್ಮನು ಸರ್ವಾಂತರ್ಯಾಮಿಯಾಗಿಯೂ ಸರ್ವಪ್ರೇರಕನಾಗಿಯೂ ಸಿದ್ಧಸಂಕಲ್ಪ ನಾಗಿಯೂ ವಿಹರಿಸುತ್ತಿರುವನಾದ್ದರಿಂದಲೂ ಈ ಪ್ರಹ್ಲಾದನು ಎಚ್ಚರವಾಗಲೆಂದು ಲಕ್ಷ್ಮೀಪತಿಯು ಇಚ್ಛೈಸಿದ ಕೂಡಲೆ ಪ್ರಹ್ಲಾದನಿಗೆ ಸಕಲ ಕರಣಗಳೂ ಸಿದ್ಧವಾ ದವು. ಅವನ ಇಚ್ಛೆಯೇ ಪ್ರಹ್ಲಾದ ರೂಪವಂ ವಹಿಸಿರುವ ಆತ್ಮನಿಗೆ ಇಚ್ಛೆಯಾ ದುದು ಸತ್ವಶೇಷವಿದ್ದುದ್ದರಿಂದ ಈ ಆತ್ಮನ ಇಚ್ಛೆಯು ಸಕಲ ಕರಣಗಳನ್ನುಂಟು ಮಾಡಿತೆಂದು ತಿಳಿಯುವನಾಗು, ಆತ್ಮಪರಮಾತ್ಮರುಗಳಿಗೆ ಅವಿದ್ಯಾಮಾಯಾ ರೂಪವಾದ ಉಪಾಧಿಗಳಿಂ ಭೇದವಲ್ಲದೆ ಚಿತ್ಸ್ವರೂಪದಿಂ ಭೇದವಿಲ್ಲದ್ದರಿಂದ ಶ್ರೀ ಪತಿಯ ಪ್ರಸಾದದಿಂದಾತ್ಮನು ಆತ್ಮನ ಪ್ರಸಾದದಿಂ ಶ್ರೀಪತಿಯು ಸಹ ಪ್ರಸನ್ನನಾಗಿ ಪ್ರತ್ಯಕ್ಷನಾಗುವನು. ಉಪಾಧಿಗಳು ಕಲ್ಪನಾಸಿದ್ಧವಾದ್ದರಿಂದ ಆತ್ಮ ಪರಮಾತ್ಮ ವಿಚಾರದಲ್ಲಿ ನಿಲ್ಲಲಾರವು ಎಲೈ ರಾಘವನೆ ಈ ದೃಷ್ಟಿಯಂ ಪಿಡಿದು ನೀನು ವಿಚಾರ ಮಾರ್ಗದಿಂ ವಿಹರಿಸುವೆಯಾದರೆ ವಿಚಾರವೆಂಬ ಸೂರ್ಯನ ಉದಯಮಾತ್ರದಿಂದಲೇ ಜಾಡ್ಯಪ್ರದವಾದ ಸಂಸಾರ ಓಡಿಹೋಗುವುದು. ಮಹಾವಿಷ್ಣುವಿನ ಪ್ರಸಾದ ವಾಗುವಲ್ಲಿ ಮಹಾಮಂತ್ರಜ್ಞನಂ ಪಿಶಾಚಿಯಂತೆ ಆತ್ಮವಿಚಾರದಲ್ಲಿರುವವನನ್ನು ಮಾಯೆ ಬಾಧಿಸಲಾರದು. ಗಾಳಿಯಿಂದಗ್ನಿಜ್ವಾಲೆಯಂತೆ ಆತ್ಮೇಚ್ಛೆಯಿಂದಲೆ ಈ ಸಂಸಾರವು ವೃದ್ಧಿ ಹೊಂದಿರುವದ್ದರಿಂದ ಅಪರಿಮಿತ ಕಲ್ಪನೆಯಾದ ಈ ಸಂಸಾರ ಮಾಯೆಯು ಆತ್ಮನ ಪ್ರಸಾದದಿಂದಲೇ ಪೋಗುವದೆಂದು ನಿಶ್ಚಯಿಸುವನಾಗು. ಎಂದು ವಸಿಷ್ಠನು ಪೇಳುವಲ್ಲಿ ಎಲೈ ಕುಲಗುರುವೆ, ಚಂದ್ರಕಿರಣಗಳಿಂದೋಷಧಿಗ ಳಂತೆ ಸರ್ವಜ್ಞನಾದ ನಿನ್ನ ಮಾತುಗಳಿಂ ನಾವು ಬದುಕಿಸಲ್ಪಡುವೆವು ಗಂಗಾಜಲಗ ಳಂತೆ ಪಾಪಹಾರಿಗಳಾದ್ದರಿಂದಲೂ ಪುಷ್ಪಗಳಂತೆ ಮೃದುಗಳಾದ್ದರಿಂದಲೂ ಅಮೃತಪ್ರವಾಹಗಳಂತೆ ಸರಸಗಳಾದ್ದರಿಂದಲೂ ಕರ್ಣರಸಾಯನವಾದ ತಮ್ಮ ವಚನಗಳು ಎಷ್ಟು ಕೇಳಿದಾಗ್ಯೂ ತೃಪ್ತಿಯಾಗುವದಲ್ಲವಾದ್ದರಿಂದ ಮರಳಿ ಮರಳಿ

ಕೇಳುವೆನು. ಪ್ರಹ್ಲಾದನಿಗೆ ಮಾಧವನ ವರವಿಲ್ಲದೆ ಜ್ಞಾನೋದಯವಾಗಲಿಲ್ಲವಾದ್ದರಿಂದ ಪೌರುಷದಿಂದಲೇ ಸರ್ವವು ಆಗುವದೆಂಬ ವಚನವು ಹೇಗೆ ನಿರ್ಣಯವಾದೀತು. ಇದನ್ನಪ್ಪಣೆಕೊಡಿಸಬೇಕೆಂದು ಶ್ರೀರಾಮಚಂದ್ರನು ಕೇಳಲು ಮರಳಿ ವಸಿಷ್ಠನಿಂತೆಂದನು:—ಎಲೈ ರಾಮಭದ್ರನೇ! ಆತ್ಮನು ನಾರಾಯಣನು ಸಹ ತಿಲ ತೈಲಗಳಂತೆಯೂ, ಪುಷ್ಪ ಪರಿಮಳಗಳಂತೆಯೂ, ಬಿಳಪು ಬಟ್ಟೆಗಳಂತೆಯೂ, ಅಭಿನ್ನರಾಗಿರುವರಾದ್ದರಿಂದ ಆತ್ಮನಾರಾಯಣರಿಗೆ ನಾಮ ಭೇದವಲ್ಲದೆ ವಸ್ತುಭೇದವಿಲ್ಲ. ಪ್ರಹ್ಲಾದನೆನಿಸಿದ ಆತ್ಮನು ಮೊದಲು ತನ್ನಂ ತಾನೆ ವಿಚಾರಿಸಿಕೊಂಡು ವಿಷ್ಣುಭಕ್ತಿಯಂ ಪಡದು ಮರಳಿ ವಿಷ್ಣುವರವೆಂಬ ನಿಮಿತ್ತದಿಂ ವಿಚಾರಿಸುತ್ತಾ ಸ್ವಸ್ವರೂಪ ಸ್ಥಿತಿಯಂ ಪಡದನು ಆದ್ದರಿಂದಲೂ ಈ ಪ್ರಹ್ಲಾದನು ವಿಚಾರಿಸದಿರುವಲ್ಲಿ ಇವನು ಕೊನೆ ಜನ್ಮದವನೆಂದು ತಿಳಿದಿದ್ದಾಗ್ಯೂ ನಾರಾಯಣನು ಜ್ಞಾನವನ್ನವನಿಗೆ ಕೊಡದೆಯಿದ್ದದ್ದರಿಂದಲೂ, ಈ ಮಹಾವಿಷ್ಣುವು ಶರಣಾಗತನಾಗದಿರುವನಿಗೆ ಪ್ರಸನ್ನನಾಗುವನಲ್ಲವಾದ್ದರಿಂದಲೂ, ಪ್ರಸನ್ನನಾದಾಗ್ಯೂ ವಿಚಾರವಿಲ್ಲದವನಿಗೆ ಜ್ಞಾನವಂ ಕೊಡುವನಲ್ಲವಾದ್ದರಿಂದಲೂ, ಪೌರುಷಪ್ರಯತ್ನವೇ ಮುಖ್ಯವೆನಿಸುವದು. ಆದ್ದರಿಂದ ಗೌಣವಾದ ವರಾದಿಗಳನ್ನೆಣಿಸದೆ ಬಲಾತ್ಕಾರದಿಂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನಾಕ್ರಮಿಸಿಕೊಂಡು ಭೋಗ ವೈರಾಗ್ಯವಂ ಸಾಧಿಸುತ್ತಾ ತತ್ವವಿಚಾರದಲ್ಲಿ ಚಿತ್ತವಂ ನಿಲ್ಲಿಸುವನಾಗು. ಹೀಗೆ ಪೌರುಷ ಪ್ರಯತ್ನದಲ್ಲಿರುವನಿಗೆ ಪರಮ ಪದವು ಲಬ್ಧವಾಗುವದು. ತತ್ವಜ್ಞಾನವೆಂಬುವದು ಸ್ವಶಕ್ತಿಯಿಂದಲೆ ಒಂದುವೇಳೆಯಲ್ಲುಂಟಾಗುವದು. ಭಕ್ತಿಲಭ್ಯನಾದ ವಿಷ್ಣುವಿನಿಂದೊಂದು ವೇಳೆ ಲಬ್ಧವಾಗುವದು. ವಿಷ್ಣುವಿನಿಂದ ಲಬ್ಧವಾದಾಗ್ಯೂ ವಿಷ್ಣುದರ್ಶನಕ್ಕೆ ಭಕ್ತಿಯೇ ಸಾಧಕವಾದ್ದರಿಂದ ಪುರುಷ ಪ್ರಯತ್ನವೆ ಸರ್ವ ಶ್ರೇಯಸ್ಸಾಧನವೆಂದು ತಿಳಿಯತಕ್ಕದ್ದು. ಭಕ್ತಿ ಮೊದಲಾದ ಪುರುಷ ಪ್ರಯತ್ನವಿಲ್ಲದೆ ನಾರಾಯಣನು ಪ್ರಸನ್ನನಾಗುವನಾಗಿದ್ದಲ್ಲಿ ಮೃಗ ಪಕ್ಷಿ ಮೊದಲಾದ ಅಜ್ಞಾನಿಪ್ರಾಣಿಗಳನ್ನೇಕೆ ಉದ್ಧರಿಸಲಾಗದು ಜಗದ್ಗುರುವಾದ ನಾರಾಯಣನಿಗೆ ಈ ಪಾಡಾಗುವಲ್ಲಿ ಕಡಮೆ ಗುರುಗಳಿಗೇನು ಸಾಮರ್ಥ್ಯವಿರುವದು. ಗುರುವೆ ಬಲಿಷ್ಠನಾದಲ್ಲಿ ತನ್ನ ಸ್ವಾಧೀನಕ್ಕೆ ಬಾರದ ಎತ್ತುಗಳನ್ನೇಕೆ ಜ್ಞಾನೋಪದೇಶದಿಂ ಸ್ವಾಧೀನವಾಗಿ ಮಾಡಿಕೊಳ್ಳಲಾಗದು. ಹರಿ ಗುರುಗಳು ಧನವು ಸಹಾ ಆತ್ಮವಿಚಾರಕ್ಕೆ ಸಾಮಗ್ರಿಯಲ್ಲದೆ ವಿಚಾರದಂತೆ ಯಾವದು ಮುಖ್ಯವಲ್ಲ ಅಭ್ಯಾಸ ವೈರಾಗ್ಯಗಳಿಂ ನಿಗ್ರಹಿಸಲ್ಪಟ್ಟ ಇಂದ್ರಿಯಗಳುಳ್ಳ ಪುರುಷ ಪ್ರಯತ್ನಕ್ಕೆ ಅಸಾಧ್ಯವಾದದ್ದು ಯಾವದೊ ಅದು

ಮೂಜಗಗಳ ಪ್ರಸಾದದಿಂದಲೂ ಸಾಧ್ಯವಾಗತಕ್ಕದ್ದಲ್ಲವೆಂದು ತಿಳಿಯುವನಾಗು. ಶ್ರವಣಮಾರ್ಗದಿಂದಾತ್ಮನ ಸ್ವರೂಪವಂ ತಿಳಿದು ಮನನಮಾರ್ಗದಿಂ ನಿರ್ಧರಿಸಿ ನಿಧಿಧ್ಯಾಸಮಾರ್ಗದಿಂ ಸ್ವಸ್ವರೂಪದಲ್ಲಿ ನಿಲ್ಲುವನಾಗು. ಸ್ವಸ್ವರೂಪದಲ್ಲಿ ನಿತ್ಯ ಸ್ಥಿತಿಯಾಗುವವರಿಗೆ ಮರಳಿ ಮರಳಿ ಈ ಅಭ್ಯಾಸವನ್ನೇ ಮಾಡುತ್ತಿರುವನಾಗು. ಇಂದ್ರಿಯ ನಿಗ್ರಹಾಭ್ಯಾಸ ಶಾಸ್ತ್ರ ವಿಚಾರ ಪ್ರಯತ್ನಗಳೆ ಶ್ರೇಯಸ್ಸಾಧನೆಗೆ ಮುಖ್ಯವಾದ ವಿಧಿಯೆನಿಸುವದು. ಇದಿಲ್ಲದವನಿಗೆ ಈ ಸಾಧನೆಗೋಸುಗವೆ ಹರಿಹರಾದಿ ಪೂಜೆಯುಂತಲೂ ಸೇವೆಯುಂತಲೂ ಭಕ್ತಿಯುಂತಲೂ ವಿಧಿಯುಂಟಾಗಿರುವದು. ಇಂದ್ರಿಯ ನಿಗ್ರಹವಿದ್ದವನಿಗೆ ಈ ಪೂಜಾದಿಗಳು ಫಲಿಸುವವಲ್ಲದೆ ಇತರರಿಗೆ ಫಲಿಸಲಾರವು. ಆದ್ದರಿಂದ ಇಂದ್ರಿಯನಿಗ್ರಹವೇ ಮುಖ್ಯವೆಂದು ತಿಳಿಯತಕ್ಕದ್ದು. ಇಂದ್ರಿಯನಿಗ್ರಹದಿಂದಲೂ ವಿಚಾರದಿಂದಲೂ ಸರ್ವಾತ್ಮನಾದ ಹರಿಯೇ ತಾನು ಆಗುವಲ್ಲಿ ಪೂಜಾದಿಗಳಿಗೆ ವಿಷಯವಾದ ಹರಿಯಿಂದವನಿಗೆ ಆಗತಕ್ಕದ್ದೇನಿರುವದು. ಸಕಲ ಪ್ರಾಣಿ ಹೃದಯಸ್ಥವಾದ ಚಿದ್ರೂಪವೆ ಹರಿಗೆ ನಿಜರೂಪವು. ಶಂಖ ಚಕ್ರಾದಿಗಳಂ ಪಿಡಿದಿರುವದು ಗೌಣವು. ತಿಳಿಯದ ನರಾಧಮರೆ ಇಲ್ಲಿ ಮುಖ್ಯವಂ ಬಿಟ್ಟು ಗೌಣವಂ ಗ್ರಹಿಸುವರು. ತಿಳಿದ ಮಹಾತ್ಮರು ಶ್ರೀಹರಿಯ ಅಖಂಡಭಾವವನ್ನೇ ಭಾವಿಸುತ್ತಾ ಖಂಡ ಪೂಜಾದಿ ವಿಧಿಗಳಂ ಗ್ರಹಿಸದಿರುವರು. ವಿಚಾರೋಪಶಮಗಳಿಂ ಚಿತ್ತವಂ ನಿಗ್ರಹಿಸಿ ಸ್ವಸ್ವರೂಪನಾಗಿರುವ ಸರ್ವಾತ್ಮನಾದ ಹರಿಯನ್ನಾರು ಭಾವಿಸರೊ ಅವರು ಕಾಡು ಕತ್ತೆಗಿಂತಲೂ ಕಡೆಯೆನಿಸುವರು. ಯಾವನು ಶ್ರೀಹರಿಯ ಮುಖ್ಯ ಸ್ವರೂಪವಂ ಬಿಟ್ಟು ಗೌಣವಂ ಗ್ರಹಿಸುವನೊ ಅವನು ಸಿದ್ಧವಾದ ರಸಾಯನವಂ ಬಿಟ್ಟು ಸಾಧ್ಯವಾದ ಅನ್ನಾದಿಗಳಿಗೆ ಆಶೆಪಡುವನೆಂದು ತಿಳಿಯತಕ್ಕದ್ದು. ಯಾವನಿಗೆ ವಿವೇಕವಿಲ್ಲದೆ ಚಿತ್ತಕ್ಕೆ ಅಧೀನನಾಗಿರುವನೊ ಅವನಿಗೆ ಮುಖ್ಯೋಪಾಸನೆಯಲ್ಲಿ ಯೋಗ್ಯತೆಯಿಲ್ಲದ್ದರಿಂದ ಅವನ ಉಪಾಸನಾರ್ಥವಾಗಿಯೇ ಗೌಣವಾದ ಶ್ರೀಹರಿ ಪೂಜೆಯು ವಿಧಿಸಲ್ಪಟ್ಟಿರುವದು. ಇಂಥಾ ಪೂಜೆಯನ್ನಾದರು ಯಥಾವಿಧಿಯಾಗಿ ಯಾವನು ಮಾಡುವನೋ ಅವನಿಗೆ ಕ್ರಮವಾಗಿ ಚಿತ್ತಶುದ್ಧಿಯು ವೈರಾಗ್ಯವು ಸಹ ಉಂಟಾಗುವದು. ಬಳಿಕ ವಿವೇಕ ನಿತ್ಯಾಭ್ಯಾಸಗಳಿಂ ಚಿತ್ತವು ಪ್ರಸನ್ನವಾಗಲು ಪರಮಪದ ಪ್ರಾಪ್ತಿಯಾಗುವದು. ಒಂದುವೇಳೆ ಹರಿಯೇ ಪ್ರಸನ್ನನಾಗಿ ಬಂದು ವರವಂ ಕೊಟ್ಟಾಗ್ಯೂ ಅವನ ಪ್ರಸಾದಕ್ಕೆ ಭಕ್ತಿಯಾಗಲಿ ವಿವೇಕಾಭ್ಯಾಸಾದಿಗಳಾಗಲಿ ಕಾರಣವಾಗುವದ್ದರಿಂದೆಲ್ಲಾ ಕಡೆಯಲ್ಲೂ ಶ್ರೇಯಸ್ಸಾಧಕವಾದ್ದು ಪೌರುಷವೆಂತಲೇ ನಿಶ್ಚಯಿಸತಕ್ಕದ್ದು. ಉತ್ತಮವಾದ

ಅಪೇಕ್ಷೆಗಳಿಗೂ ಸಂಪತ್ತುಗಳಿಗೂ ಪೈರುಗಳಿಗೆ ಭೂಮಿಯಂತೆ ಮನೋನಿಗ್ರಹವೆ ಜನ್ಮಭೂಮಿಯೆನಿಸುವದು. ನೆಲವನ್ನಗೆಯುವವನಿಗೂ ತಿಲೆಯಂ ಸೀಳುವವನಿಗೂ ಸಹ ಮನೋನಿಗ್ರಹವೆ ಕಾರ್ಯಸಾಧಕವಾಗದೆಂದು ತಿಳಿಯಬೇಕು. ಬಹುಕಾಲ ಪೂಜಿತರಾದ ಬ್ರಹ್ಮ ವಿಷ್ಣು ಮಹೇಶ್ವರಾದಿ ದೇವತೆಗಳೂ ಕೂಡ ಮನೋವ್ಯಾಧಿಯಂ ಪರಿಹಂಸುವಲ್ಲಿ ವಿಚಾರವನ್ನೇ ತೋರುವರಾದ್ದರಿಂದ ಮನಸ್ಸಿಗೆ ಮೃತ್ಯುವಾದ್ದು ಆವಿಚಾರವಲ್ಲದೆ ಮತ್ತೊಂದಲ್ಲವೆಂದು ತಿಳಿಯತಕ್ಕದ್ದು. ಮನವೆಂಬ ಮಹಾಸಮುದ್ರವು ಯಾವವರಿಗೆ ಉನ್ಮರ್ಯಾದವಾಗಿರುವದೋ ಅವರಿಗೆ ಜರಾಮರಣ ಜನ್ಮಗಳೆಂಬ ತೆರೆಗಳ ಹೊಡೆತವು ತಪ್ಪದಾದ್ದರಿಂದ ವಿಚಾರವೆಂಬ ನಾವೆಯನ್ನೇರಿ ಬಾಹ್ಯಾಂತರ ವಿಷಯಗಳಂ ಬಿಟ್ಟು ಜ್ಞೇಯವಿಲ್ಲದ ಜ್ಞಾನಸ್ವರೂಪನಾದ ಆತ್ಮನನ್ನೇ ಚಿಂತಿಸುತ್ತಾ, ಮನವೆಂಬ ಸಮುದ್ರವನ್ನು ಅದರಿಂದುಂಟಾದ ಸಂಸಾರ ಸಮುದ್ರವನ್ನೂ ಕೂಡ ದಾಟುವನಾಗು. ಎಲೈ ರಘುವರನೇ! ಆದ್ಯಂತವಿಲ್ಲದ ಈ ಸಂಸಾರವೆಂಬ ಮಾಯೆಯಂ ಜಯಿಸುವದಕ್ಕೆ ಚಿತ್ತಜಯವಲ್ಲದೆ ಮತ್ತೊಂದುಪಾಯವಿಲ್ಲ, ಈ ಮಾಯಾ ಪ್ರಪಂಚದ ವೈಖರೀ ಜ್ಞಾನಕ್ಕೋಸುಗ ಈ ಗಾಧಿಯ ವೃತ್ತಾಂತವಂ ಕೇಳುವನಾಗು. ಮೇರುಗಿರಿ ತಟಪ್ರದೇಶದಂತೆ ಮಣಿಹಿರಣ್ಯಮಯವಾದ ಕೋಸಲವೆಂಬ ದೇಶದೊಳ್ ಮೂರ್ತಿಯಂ ವಹಿಸಿರುವ ಧರ್ಮದಂತೆ ಶ್ರೋತ್ರಿಯೋತ್ತಮನಾದ ಗಾಧಿಯೆಂಬ ಬ್ರಾಹ್ಮಣನಿದ್ದನು. ಆ ಬಾಲ್ಯ ವಿರಕ್ತನಾದ ಆ ಬ್ರಾಹ್ಮಣೋತ್ತಮನು ಪದ್ಮಮಯವಾದ್ದರಿಂದ ನಕ್ಷತ್ರಗಳಿಂ ಕೂಡಿದ ಅಂತರಿಕ್ಷದಂತೆ ಪ್ರಕಾಶಿಸುತ್ತಿರುವ ನಿರ್ಮಲವಾದ ಒಂದು ಸರೋವರದಲ್ಲಿ ಕಂಠಪರ್ಯಂತವಾದ ಜಲದಲ್ಲಿ ನಿಂತು ತಪವಂ ಮಾಡುತ್ತಿರುವಲ್ಲೆಂಟು ತಿಂಗಳಾಗಲು ಬೇಸಿಗೆಯಿಂ ಬಳಲಿದ ಭೂತಲವಂ ಸಂತೋಷಪಡಿಸಲೋಸುಗ ವರ್ಷಾಕಾಲದ ಮೇಘದಂತೆ ಆ ತಪಸ್ವಿಯ ಸಮೀಪಕ್ಕೆ ಬಂದ ನಾರಾಯಣನು, ಎಲೈ ಬ್ರಾಹ್ಮಣೋತ್ತಮನೇ! ನಿನ್ನ ತಪೋವೃಕ್ಷವು ಫಲೋನ್ಮುಖವಾಗಿರುವದ್ದರಿಂದ ನೀರಿನಿಂದೆದ್ದು ಬೇಕಾದ ವರವಂ ಬೇಡಿಕೊಳ್ಳುವನಾಗೆಂದು ಪೇಳಲಾ ಬ್ರಾಹ್ಮಣೋತ್ತಮನು ಎಲೈ ಮಹಾವಿಷ್ಣುವೇ! ಸಕಲ ಪ್ರಾಣಿಗಳ ಹೃದಯ ಕಮಲಗಳಿಗೆ ಭ್ರಮರ ರೂಪನಾಗಿ ಪ್ರಪಂಚವೆಂಬ ತಾವರೆ ಬಳ್ಳಿಗೆ ಸರೋವರ ರೂಪನಾದ ನಿನಗೋಸುಗ ನಮಸ್ಕಾರವೆಂದು ಕೈಗಳಂ ಮುಗಿದು, ಎಲೈ ಜಗನ್ನಾಯಕನೇ! ಸಂಸಾರ ರೂಪದಿಂ ಸಕಲ ಜಗನ್ಮೋಹಕವಾದ ನಿನ್ನ ಮಾಯೆಯಂ ನೋಡಲಿಚ್ಛೈಸುವೆನೆಂದು ಬೇಡಿಕೊಂಡನು. ಎಲೈ ತಪಸ್ವಿಯೇ! ನೀನು ಸ್ವಲ್ಪದಿವಸ

ಗಳಲ್ಲಿಯೇ ನನ್ನ ಮಾಯೆಯಂ ಕಾಣುವವಲ್ಲದೆ ಆ ಪಾಶವನ್ನೂ ಅತಿಕ್ರಮಿಸುತ್ತೀ ಎಂದು ಪೇಳಿದ ನಾರಾಯಣನು ಅಂತರ್ಧಾನವಾಗಲು, ಚಂದ್ರನಂ ಕಂಡ ಕುವಲಯದಂತೆ ಸಂತುಷ್ಟನಾಗಿ ನೀರಿನಿಂದೆದ್ದು ಶ್ರೀಪತಿಯ ಸಂದರ್ಶನದಿಂದುಂಟಾದ ಆನಂದೋತ್ಸವದಿಂದಾತಪೋವನದಲ್ಲೇ ಕೆಲವು ದಿವಸಗಳಿದ್ದನು. ಒಂದಾನೊಂದು ದಿವಸ ಪ್ರಾತಃಕಾಲದೊಳ್ ಸ್ನಾನಾರ್ಥವಾಗಿ ಸರೋವರಕ್ಕಿಳಿದು ಅಘಮರ್ಷಣ ಮಂತ್ರಮಂ ಜಪಿಸುತ್ತಿರುವಲ್ಲಿ, ಮಂತ್ರದೇವತಾ ಧ್ಯಾನವು ತಪ್ಪುವದಲ್ಲದೆ ಆ ಮಂತ್ರವು ಕೂಡ ಮರವೆಗೆ ಬಂದುದು. ಬಳಿಕ ಸ್ವಪ್ನದಂತೆ ಆ ಬ್ರಾಹ್ಮಣನು ಕಂಡಿದ್ದೇನೆಂದರೆ.—ಮನೆಯಲ್ಲೇ ಇದ್ದ ಆ ಬ್ರಾಹ್ಮಣನು ಗುಹೆಯೊಳ್ ವಾತವೇಗದಿಂದ ಬೀಳುವ ವೃಕ್ಷದಂತೆ ಮೃತ್ಯುವಿನಿಂದ ಹೊಡೆಯಲ್ಪಟ್ಟು ನೆಲದಮೇಲೆ ಬಿದ್ದನು. ಪ್ರಾಣಾಪಾನ ಪ್ರಚಾರವಿಲ್ಲದ ಅವನ ಶರೀರವು ಗಾಳಿಯಿಲ್ಲದ ಬಳಿಯೊಳ್ಬಿದ್ದಿರುವ ಎಲೆಯ ಚೂರಿನಂತೆ ನೀರಸವಾಗಿದ್ದುದು. ಅವನ ಮುಖವು ನಾಳದಿಂ ಕತ್ತರಿಸಲ್ಪಟ್ಟು ಬಿಸಿಲಿನಲ್ಲಿ ಒಣಗುತ್ತಿರುವ ಕಮಲದಂತಿದ್ದುದು. ಪ್ರಾತಃಕಾಲದ ಗಗನದಂತೆ ಮಗ್ನತಾರಕವಾಗಿ ಅನಾವೃಷ್ಟಿಯಿಂದುಪಹತವಾದ ಗ್ರಾಮದಂತೆ ಧೂಳೀ ಧೂಸರವಾಗಿ ಕುರರವೆಂಬ ಪಕ್ಷಿಗಳಿಂ ವೃಕ್ಷದಂತೆ ಅಳುತ್ತಿರುವ ಬಂಧುಗಳಿಂ ಸುತ್ತುವರಿಯಲ್ಪಟ್ಟು ಅಣೆಕಟ್ಟು ಒಡೆದ್ದರಿಂದ ಬೀಳುವ ಪ್ರವಾಹದಂತೆ ಹರಿಯುವ ಕಣ್ಣೀರಿನಿಂ ಕಾಂತಿಹೀನವಾದ ಮುಖಕಮಲವುಳ್ಳ ಮಡದಿಯಿಂ ನಾಕ್ರಮಿಸಲ್ಪಟ್ಟ ಕಾಲ್ಗಳುಳ್ಳದ್ದಾಗಿ ಪರಿಪರಿಯಾಗಿ ಪ್ರಲಾಪಮಂ ಮಾಡುವ ಮಾತೃವಿನಿಂ ಹಿಡಿಯಲ್ಪಟ್ಟ ಗಡ್ಡವುಳ್ಳದ್ದಾಗಿ ನಮಗೆ ವಿಯೋಗಕಾಲ ಬಂತೆಂದು ತಿಳಿದು ಪೊರಮಟ್ಟು ಪೋಗಲಾರದೆ ಬಿದ್ದಿರುವಂತೆ ಪರವಶವಾಗಿರುವ ಕೈಕಾಲುಗಳಿಂದಲೂ, ಬಂಧುಗಳಿಂದಲೂ, ಸಂಯುಕ್ತವಾಗಿ ತೆರೆದ ಬಾಯಲ್ಲಿ ಪಲ್ಲುಗಳು ಪ್ರಕಾಶಿಸುವದ್ದರಿಂದ ತನಗೆ ಬಂದಿರುವ ಅವಸ್ಥೆಯಂ ನೋಡಿ ನಗುತಲಿರುವಂತೆಯೂ, ಬಹು ದಿವಸಗಳಿಂದಾಶ್ರಯಿಸಿಕೊಂಡಿದ್ದಾಗ್ಯೂ ಸ್ವಲ್ಪವು ದಯವಿಲ್ಲದೆ ಬಿಟ್ಟುಹೊರಟ ಪ್ರಾಣವಂ ಪರಿಹಾಸವಂ ಮಾಡುವಂತೆಯೂ, ಕಾಣುತ್ತಾ ಎಷ್ಟು ದಿನವಿದ್ದರೂ ತನ್ನ ಪಾಡೇ ಇಷ್ಟೆಂದು ಯಾವ ವ್ಯಾಪಾರವನ್ನೂ ಮಾಡದೆ ಸುಮ್ಮನಿರುವಂತೆಯೂ, ಎಷ್ಟು ಕರ್ಮಗಳಂ ಮಾಡಿದರೂ ತನ್ನ ಅವಸ್ಥೆ ಹೀಗಾಯಿತೆಂದು ಚಿಂತಿಸುವಂತೆಯೂ, ಅನೇಕ ವ್ಯಾಪಾರಗಳಿಂ ಶ್ರಮಪಟ್ಟಿರುವದರಿಂದ ವಿಶ್ರಮಿಸಿಕೊಳ್ಳುವಂತೆಯೂ, ಸುತ್ತಮುತ್ತಲೂ ಮುತ್ತಿಕೊಂಡಿರುವ ಸ್ವಜನರು ಕರುಣ ರಸಾವೇಶದಿಂ ಬಗೆಬಗೆಯಾಗಿ ಬಣ್ಣಿಸುವ ತನ್ನ ಗುಣಗಳನ್ನೇಕಾಗ್ರ ಬುದ್ಧಿ

ಯಿಂ ಕುಳುತ್ತಿರುವಂತೆಯೂ, ಕಾಣಬರುವ ಅವನ ಶರೀರವನ್ನು ತಲೆಯಂ ಚಚ್ಚಿಕೊಳ್ಳುತ್ತಲೂ, ಎದೆಯಂ ಹೊಡದುಕೊಳ್ಳುತ್ತಲೂ, ಬಾಯಿ ಬಡುಕೊಳ್ಳುತ್ತಲೂ, ಪರಿಪರಿಯಾಗಿ ರೋದನವಂ ಮಾಡುತ್ತಲೂ, ಮೂರ್ಛೆಹೋದಾಗ್ಯೂ ಎಚ್ಚತ್ತೆಚ್ಚತ್ತು, ಕೈಕಾಲು ಮೊಗಗಳಂ ಪಿಡಿಯ ಬಿಡದಿರುವ ಮಡದಿ ತಾಯಿ ಮೊದ ಮೊದಲಾದ ಮುಖ್ಯಜನರಿಂ ಬಲಾತ್ಕಾರದಿಂ ಬಿಡಿಸಿಕೊಂಡು ಬಂಧುಜನಗಳು ಆ ಹೆಣವನ್ನು ತೆಗದುಕೊಂಡು ಕರುಳು ಮಾಂಸ ರಕ್ತ ಕೊಬ್ಬುಗಳಿಂದಲೂ, ಕೆಲವು ಒಣಗಿ ಕೆಲವು ಹಸಿಯಾಗಿಯೂ ಬಿದ್ದಿರುವ ಮೂಳೆಗಳಿಂದಲೂ, ವ್ಯಾಪ್ತವಾಗಿ ಒಂದೆಡೆಯೊಳ್ ಕಾಗೆ ಹದ್ದುಗಳು ಮಂಡಲಾಕಾರವಾಗಿ ತಿರುಗುವದ್ದರಿಂದದರ ನೆರಳುಗಳಿಂದ ಕತ್ತಲೆ ಗವಿದಿರುವಂತೆಯೂ, ಒಂದೆಡೆಯೊಳ್ ನರಿಗಳ ಮುಖಜ್ವಾಲೆಗಳಿಂದ ಸುತ್ತುಮುತ್ತಲೂ ಬೆಳಗಿರುವಂತೆಯೂ ಒಂದೆಡೆಯೊಳುರಿಯುವ ಚಿತಾ ಜ್ವಾಲೆಗಳಿಂದ ಜನಗಳ ಹೃದಯದೊಳ್ ತಾವು ಬಹುಕಾಲ ಬದುಕುವೆವೆಂದು ನಂಬಿರುವ ಭ್ರಾಂತಿಯೆಂಬ ಕತ್ತಲೆಯಂ ಕೊಡಹುವಂತೆಯೂ, ನಾಯಿ ನರಿ ಕಾಗೆ ಹದ್ದು ಮೊದಲಾದವುಗಳ ಕೋಲಾಹಲದಿಂ ಹೊಗಳಲ್ಪಡುವಂತೆಯೂ ಕಾಣಬರುತ್ತಾ ಅಮಂಗಳಕ್ಕೆ ಆವಾಸಸ್ಥಾನವಾಗಿ ಭಯಂಕರವಾಗಿರುವ ಸ್ಮಶಾನಕ್ಕೆ ತೆಗದುಕೊಂಡು ಹೋಗಿ ಸಮುದ್ರದ ತೆರೆಗಳು ತಮ್ಮ ಪ್ರವಾಹವಂ ಬಡಬಾಗ್ನಿಯಂ ಹೊಂದಿಸುವಂತೆ ಆ ಹೆಣವಂ ಚಿತಾಗ್ನಿಯಂ ಹೊಂದಿಸಿದರು. ಬೆರಣಿ ಕಟ್ಟಿಗೆಗಳು ಅಧಿಕವಾಗಿದ್ದುದರಿಂದ ಚಟಚಟನೆ ಉರಿಯುವ ಚಿತಾಗ್ನಿಯು ಅನೇಕ ರಂಧ್ರಗಳುಳ್ಳ ಒಣಗಿದ ಬಿದಿರು ಮೆಳೆಯಂ ಕಾಡಾನೆಯಂತೆ ಆ ಹೆಣದ ಅಸ್ಥಿ ಪಂಜರವಂ ಚೂರುಚೂರು ಮಾಡಿತು. ಇಂತು ಬ್ರಾಹ್ಮಣ ಶರೀರವಂ ಕಳಕೊಂಡ ಗಾಧಿಗೆ ಭೂತಮಂಡಲವೆಂಬ ದೇಶದ ಎಲ್ಲೆಕಟ್ಟಿನೊಳ್ ವಾಸವಂ ಮಾಡಿಕೊಂಡಿರುವ ಚಂಡಾಲರ ಗುಂಪಿನಲ್ಲೊಬ್ಬಾಳೊಬ್ಬ ನಾರಿಯ ಗರ್ಭದಲ್ಲಿರುವ ಶರೀರವು ಪ್ರಾಪ್ತವಾದುದು. ನಾಯಿಯ ಅಮೇಧ್ಯದಲ್ಲಿ ಕ್ರಿಮಿಯಂತೆ ಗರ್ಭವಾಸದಲ್ಲಿ ಕಷ್ಟಪಡುತ್ತಿದ್ದ ಆ ಶಿಶುವು ವರ್ಷಾಕಾಲದಿಂ ಕರೀಮೋಡದಂತೆ ಆ ನಾರಿಯಿಂ ಪ್ರಸವಿಸಲ್ಪಟ್ಟಿತು. ಆ ಮಗುವಿಗೆ ಆ ಶ್ವಪಚದಿಂದ ಕಟಂಜನೆಂದು ನಾಮಧೇಯವಿಡಲ್ಪಟ್ಟಿತು. ಆ ಕಟಂಜನು ದಿನದಿನಕ್ಕೆ ವೃದ್ಧಿಹೊಂದುತ್ತಾ ಗಾನವಿದ್ಯೆಯಲ್ಲಿ ನಿಪುಣನಾಗಿ ಚಂಡಾಲಮಂಡಲಕ್ಕೆ ಪೂಜ್ಯನಾದನು. ಹದಿನಾರುವರ್ಷಗಳಾಗಲು ನೂತನವಾದ ಯೌವ್ವನದ ಕೊಬ್ಬಿನಿಂದ ನಾಯಿಗಳು ಸುತ್ತುಮುತ್ತಲೂ ಕಟ್ಟಿಕೊಂಡು ಬೇಟೆಯನ್ನಾಡುತ್ತಾ ವನದಿಂ ವನಕ್ಕೆ ತಿರು

ಗುತ್ತಲೂ, ಅನೇಕ ಮೃಗಪಕ್ಷಿ ಲಕ್ಷಗಳಂ ಹೊಡೆದು ಬೇಟೆಯೊಳತಿ ಶೂರನೆಂದು ಪ್ರಸಿದ್ಧನಾದನು. ಗಾನವಿದ್ಯೆಯಿಂದಲೂ ಪರಾಕ್ರಮಾತಿಶಯದಿಂದಲೂ ಒಲಿದು ಬಂದೊರ್ವ ಚಂಡಾಲಕನ್ಯೆಯಂ ಮದುವೆಯಂ ಮಾಡಿಕೊಂಡು ಭ್ರಮರಿಯಂದೊಡಗೂಡಿದ ಕನ್ನೈದಿಲೆಯಂತೆ ಪ್ರಕಾಶಿಸುತ್ತಾ ಮನೋಹರವಾದ ಗಿರಿವನಗಳಲ್ಲೂ, ನದೀತೀರದಲ್ಲಿರುವ ಲತಾಗೃಹಗಳಲ್ಲೂ, ವಿಚಿತ್ರವಾದ ಕುಸುಮಗಳಿಂದಲಂಕೃತನಾಗಿ ಪುಷ್ಪಪಲ್ಲವ ಶಯನಾದಿಗಳಿಂ ರಮಣೀಯವಾದ ಕ್ರೀಡಾಸ್ಥಳಗಳಲ್ಲಿ ಅವಳೊಡನೆ ಯಥೇಚ್ಛವಾಗಿ ಕ್ರೀಡಿಸುತ್ತಾ ಕುಲಕ್ಕೆ ಅಂಕುರಗಳಾದ ಮಕ್ಕಳುಗಳನ್ನು ಪಡೆದು ದೊಡ್ಡ ಸಂಸಾರಿಯಾಗಿ ಚಂಡಾಲ ಮಂಡಲದೊಳತಿಶಯವಾದ ಸಮೃದ್ಧಿಗಳಂ ಪಡೆದನು. ಬಳಿಕ ಯೌವನವು ಗಳಿತವಾಗುತ್ತಿರಲು ಅತಿವೃಷ್ಟಿಯಿಂದ ಮನೆಯಂತೆ ಮೃತ್ಯುವಿನಿಂದವನ ಸಂಸಾರವೆಲ್ಲವೂ ಅಪಹರಿಸಲ್ಪಟ್ಟಿತು. ಬಳಿಕ ಗುಂಪು ತಪ್ಪಿದ ಜಿಂಕೆಯಂತೆ ದುಃಖಾತುರನಾದ ಆ ಕಟಂಜನು ಶುಷ್ಕವಾದ ಸರೋವರವಂ ಪಕ್ಷಿಯಂತೆ ಆ ದೇಶವಂ ಬಿಟ್ಟು ದೇಶಾಂತರಗಳಲ್ಲಿ ತಿರುಗುತ್ತಾ ಮತ್ತೊಬ್ಬರಿಂ ಪ್ರೇರಿಸಲ್ಪಟ್ಟವನಂತೆ ಕೀರವೆಂಬ ದೇಶಕ್ಕೆ ಬಂದನು. ಗಾಳಿಬಡಿದ ಮೇಘದಂತೆ ಬರುತ್ತಿರುವ ಆ ಕಟಂಜನು ಗಗನಚಾರಿಯು ಒಳ್ಳೇವಿಮಾನವಂ ಪೊಂದುವಂತೆ ಆ ದೇಶಕ್ಕೆ ಅಲಂಕಾರ ಪಟ್ಟಣವಂ ಪೊಂದಿದನು. ಬುಡದಪರ್ಯಂತವಾಗಿ ಪುಷ್ಪಿಸಿರುವ ಲತೆಗಳಂತೆ ಸುಂದರವಾಗಿ ನರ್ತನವಂ ಮಾಡುತ್ತಿರುವ ಸರ್ವಾಭರಣ ಭೂಷಿತರಾದ ವಾರಸುಂದರಿಯರಿಂದಲಂಕೃತವಾಗಿ ಹೆಜ್ಜೆ ಮುಳುಗುವಂತೆ ಚೆಲ್ಲಿರುವ ಚಂದನಾಗರು ಪುಷ್ಪಗಳಿಂ ಶೋಭಿಸುತ್ತಾ ಮಣಿಮಯ ತೋರಣಗಳಿಂದಲೂ, ಕದಳೀಸ್ತಂಭಾದ್ಯಲಂಕಾರಗಳಿಂದಲೂ, ಮನೋಹರವಾಗಿ ಮಂತ್ರಿ ಸಾಮಂತರಿಂದಲೂ, ಸ್ತ್ರೀಬಾಲಕ ಸಮೇತರಾದ ಪುರಜನರಿಂದಲೂ, ನಿಬಿಡವಾಗಿ ಭೂಮಿಗಿಳಿದುಬಂದ ಸ್ವರ್ಗಮಾರ್ಗದಂತಿರುವ ರಾಜಬೀದಿಗೆ ಆ ಕಟಂಜನು ಬರುತ್ತಿರಲು, ಆ ಪಟ್ಟಣದೊಳ್ ರಾಜನು ಮೃತನಾದ್ದರಿಂದಲೂ, ರಾಜ್ಯಕ್ಕೆ ಯೋಗ್ಯನಾದವನು ಯಾರೂ ದೊರೆಯದ್ದರಿಂದಲೂ, ಯಾವನು ರಾಜ್ಯಾಧಿಕಾರಕ್ಕೆ ಯೋಗ್ಯನೋ ಅವನನ್ನಿದು ತನ್ನಮೇಲೆ ಕುಳ್ಳಿರಿಸಿಕೊಂಡು ಬರಲೆಂದು ಮಂತ್ರಿಗಳಿಂ ಬಿಡಿಸಲ್ಪಟ್ಟ ಪಟ್ಟದಾನೆಯು ಸರ್ವಾಭರಣಗಳಿಂದಲಂಕೃತವಾಗಿ ನಡೆಯುವ ಚಿನ್ನದ ಬೆಟ್ಟದಂತೆ ಕಾಣಬರುತ್ತಾ ತಾನು ಬರುವದನ್ನೇ ನೋಡುತ್ತಾ ಧೀರನಾಗಿ ನಿಂದಿರುವ ಆಕಟಂಜನಂ ಎತ್ತಿ ತಲೆಯಮೇಲೆ ಕುಳ್ಳಿರಿಸಿಕೊಳ್ಳಲು, ಮೇಲಕ್ಕೆ ಹಾರಿಬಂದ ಸಮುದ್ರಗಳಂತಿರುವ ಕಲ್ಪಕಾಲದ ಮೇಘಗಳು

ಗಗನದಲ್ಲಿ ಗುಡುಗುವಂತೆ ಸುತ್ತಮುತ್ತಲೂ ಜಯದುಂದುಭಿಗಳು ಧ್ವನಿಗೈದವು. ಪ್ರಾತಃಕಾಲದಲ್ಲಿ ಪಕ್ಷಿಗಳ ಶಬ್ದದಂತೆ ಆಗ ರಾಜರು ಸರ್ವೋತ್ತಮನಾಗಿರುವನೆಂಬ ಜನಗಳಿಂದುಂಟಾದ ಶಬ್ದಗಳಿಂ ದಿಕ್ಕುಗಳಲ್ಲಿ ಪ್ರತಿಧ್ವನಿಯುಂಟಾದುದು. ಉಲ್ಲಾಸಪಡುವ ಸಮುದ್ರದ ತರಂಗಗಳಂ ಶಬ್ದದಂತೆ ಜಯ ವಿಜಯೀಭವ ಮಹಾರಾಜ ಎಂದು ಪೊಗಳುವ ವಂದಿ ಮಾಗಧರ ಕೋಲಾಹಲವುಂಟಾದದು. ಬಳಿಕ ಪಟ್ಟಾಭಿಷೇಕಕ್ಕೋಸುಗ ಆ ಪಟ್ಟದಾನೆಯಿಂದ ಆ ಮಂತ್ರಿಗಳು ಆ ರಾಜನನ್ನಿಳುಹಿದ ಕೂಡಲೆ ಮಂಗಳ ಪದಾರ್ಥ ಪಾಣಿಗಳಾದ ಸುಮಂಗಲಿಯರು ಮಂದರಗಿರಿಯಂ ಕ್ಷೀರಸಾಗರದ ತೆರೆಗಳಂತೆ ಆವರಿಸಿಕೊಂಡು ಪ್ರಾತಃಕಾಲದ ಸೂರ್ಯಕಿರಣಗಳಿಂ ಥಳಥಳಿಸುವ ಸಮುದ್ರದ ತೆರೆಗಳು ದಡದಲ್ಲಿರುವ ಗಿರಿಯಂ ನೀರುಗಳಿಂ ತುಂಬುವಂತೆ ಆ ರಾಜನಂ ರತ್ನಾಭರಣಗಳಿಂದಲಂಕರಿಸಿದರು. ಗಿರಿ ತಟ ಭೂಮಿಗಳು ಗೈರಿಕಾದಿ ಧಾತುಪ್ರಭೆಗಳಿಂ ಪ್ರಕಾಶಪಡಿಸುವಂತೆ ಆ ರಾಜನಿಗೆ ದಿವ್ಯ ಚಂದನವಂ ಲೇಪಿಸಿ ಪುಷ್ಪಹಾರಾದಿಗಳಿಂದಲಂಕರಿಸಿದರು. ವರ್ಷಾಕಾಲದ ನದಿಗಳಿಂ ಗಿರಿಶಿಖರದಂತೆ ಅವರುಗಳಿಂ ಭೂಷಿತನಾದ ಆ ರಾಜನು ಸಂಧ್ಯಾರಾಗ ನಕ್ಷತ್ರ ಚಂದ್ರಗಳಿಂ ಪೂರ್ಣವಾದ ಗಗನದಂತೆ ಪ್ರಕಾಶಿಸುತ್ತಾ ಲತೆಗಳಿಂ ಕಲ್ಪವೃಕ್ಷದಂತೆ ಸೇವಕರಾದ ವಾರನಾರಿಯರಿಂ ಸುತ್ತುವರೆಯಲ್ಪಟ್ಟು ಪಥಿಕರಿಂ ಮಾರ್ಗವೃಕ್ಷದಂತೆ ಪ್ರಜೆಗಳಿಂ ಪೂಜಿತನಾದನು. ಬಳಿಕ ಪುರೋಹಿತ ಋತ್ವಿಕ್ಕು ಮಂತ್ರಿ ಸಾಮಂತರು ಗವಲನೆಂದು ತನ್ನ ಪೆಸರಂ ಪೇಳಿಕೊಂಡ ಆ ರಾಜನಂ ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕವಂ ಮಾಡಿ ಪಟ್ಟದಾನೆಯಿಂದ ಮೆರವಣಿಗೆಯಂ ಮಾಡಿಸಿದರು. ಈ ಪರಿಯಿಂ ರಾಜ್ಯವಂ ಪಡದ ಆ ಚಂಡಾಲನು ಅರಣ್ಯದಲ್ಲಿ ಹೊಸದಾದ ಹುಲ್ಲಿಯ ಹೆಣವಂ ಪಡದ ವಾಯಸದಂತೆ ಸಂತುಷ್ಟನಾದನು. ವಿಚಿತ್ರ ರತ್ನಾಭರಣಗಳಿಂದಲೂ, ಕುಂಕುಮ ಗಂಧ ದಿವ್ಯಮಾಲಾಂಬರಗಳಿಂದಲೂ, ಅಲಂಕೃತನಾದ ಆ ರಾಜನು ಕೀರನಾರಿಯರಿಂದೊಡಗೂಡಿ ಪುಷ್ಪಿತವಾದ ಗಿರಿವನಗಳಲ್ಲಿ ಮೃಗರಾಜನಂತೆಯೂ ನದೀ ಸರೋವರಾದಿಗಳಲ್ಲಿ ಗಜರಾಜನಂತೆಯೂ ವಿಹರಿಸುತ್ತ ತನ್ನ ಜಾತಿ ಮೊದಲಾದುದಂ ಜನರಿಗೆ ತೋರ್ಪಡಿಸದೆ ಕ್ರಮವಾಗಿ ರಾಜನೀತಿರೀತಿಗಳಂ ತಿಳಿದು ರಾಜ್ಯಭಾರವಂ ಮಾಡುತ್ತಾ ಸಿದ್ಧಶಾಸನನಾಗಿ ರಾಜಭೋಗಗಳಿಂದಲೂ, ವಂದಿಮಾಗಧ ಯಾಚಕ ಮೊದಲಾದವರ ಸ್ತುತಿಗಳಿಂದಲೂ, ಮರೆತು ತಾನು ಪೂರ್ವದಲ್ಲಿದ್ದ ರೀತಿಯನೆಲ್ಲವನ್ನೂ ಮರತು ಎಂಟು ವರ್ಷ ರಾಜ್ಯಭಾರವಂ ಮಾಡಿದನು. ಆರೋಪಿತವಾದ ರಾಜಭಾವವು ಸಹಜವೆಂದು ಅವನಿಗೆ ತೋರಿದ್ದಿಂತೆಂದೊಂ

ನಾನೊಂದು ಕಾಲದೊಳ್ ರಾಜೋಚಿತವಾದ ಭೂಷಣಾದಿಗಳಂ ಬಿಟ್ಟು ಏಕಾಕಿಯಾಗಿ ಅರಮನೆಯ ಹೊರಗಳ ಭಾಗಕ್ಕೆ ಬಂದನು. ಅಲ್ಲಿ ರಾಜದರ್ಶನಾರ್ಥವಾಗಿ ಬಂದು ಕಾದುಕೊಂಡಿದ್ದ ಚಂಡಾಲ ಗಾಯಕ ಮಂಡಲವಂ ಕಂಡು ಭ್ರಮರ ಪಙ್ಕ್ತಿಯಂ ವೃಕ್ಷದಂತೆ ವೀಣೆಯಂ ಧ್ವನಿಗೈಯುತ್ತಿರುವ ಅವರ ರೀತಿಯಂ ನೋಡುತ್ತಿರುವಲ್ಲಿ ಆ ಗುಂಪಿನಿಂದೊಬ್ಬ ವೃದ್ಧನೆದ್ದು ಎಲೈ ಕಟಂಜನೆ ನೀನು ಕ್ಷೇಮವಾಗಿದ್ದೀಯಾ ಇಲ್ಲಿಯ ಧೊರೆಯು ಕೋಗಿಲೆಯಂ ರಾಗಜ್ಞಾನಿಯಂತೆ ನಿನ್ನಂ ಸನ್ಮಾನಿಸುತಲಿರ್ಧಾನೆ! ವಸಂತದಿಂ ಮಾವಿನ ಮರದಂತೆ ಗೃಹವಸ್ತ್ರಾದಿಗಳಂ ಕೊಡುವ ರಾಜನಿಂ ನೀನು ಸಂತುಷ್ಟನಾಗಿದ್ದೀಯಾ! ಸೂರ್ಯೋದಯದಿಂ ಪದ್ಮದಂತೆಯೂ, ಚಂದ್ರೋದಯದಿಂದಬ್ಧಿಯಂತೆಯೂ, ಆಪ್ತನಾದ ನಿನ್ನ ದರ್ಶನದಿಂ ನಾನು ಪರಮಾನಂದವಂ ಪಡೆದೆನು. ಸಮಸ್ತವಾದ ಆನಂದಗಳಿಗೂ ಲಾಭಗಳಿಗೂ ವಿಶ್ರಾಂತಿ ಸುಖಗಳಿಗೂ ಕೊನೆಯೆಂದು ಬಂಧುದರ್ಶನ ಸೌಖ್ಯವು ಪ್ರಖ್ಯಾತವಾಗಿರುವದು. ಎಂದಾ ಮುದುಕನು ಕೂಗುವಲ್ಲಿ ಆ ಕಟಂಜನು ಆ ಕಾಲಕ್ಕೆ ಉಚಿತವಾದ ವ್ಯಾಪಾರಗಳಿಂದಾ ಮುದುಕನಂ ಧಿಕ್ಕರಿಸಿದನು. ಅದಾಗ್ಯೂ ಮೇಲಣ ಉಪ್ಪರಿಗೆಯೊಳ್ ರಾಜನಂ ನೋಡುತ್ತಿದ್ದ ನಾರಿಯರು ಆ ಮುದುಕನು ಕೂಗಿದ್ದಂ ಕೇಳಿ ಈ ರಾಜನು ಶ್ವಪಚನೆಂದು ನಿಶ್ಚಯಿಸಿ ಮಂಜಿನ ಗಾಳಿ ಬಡಿದ ಪದ್ಮಗಳಂತೆ ಕಾಂತಿಹೀನರಾದರು. ಆಗ ಸುತ್ತ ಮುತ್ತಲೂ ನಿಂದಿದ್ದ ಪುರಜನರು ಆಗಿನ ರಾಜವ್ಯಾಪಾರವಂ ಕಂಡು ಕಾಡುಗಿಚ್ಚಿನಿಂ ಕೂಡಿದ ಗಿರಿಗಳಂತೆ ಅಂತಸ್ಸಂತಾಪವಂ ಪಡೆದರು. ಚಿಕ್ಕನ ಶಬ್ದದವಂ ಸಿಂಹದಂತೆ ಆ ಚಂಡಾಲ ಶಬ್ದವಂ ತಿರಸ್ಕರಿಸುತ್ತಾ ಆ ಕಟಂಜನು ಅರಮನೆಯಂ ಪ್ರವೇಶಿಸಿದನು. ಅಷ್ಟರೊಳ್ ಆ ಚಂಡಾಲ ಶಬ್ದವು ವ್ಯಾಪಿಸಿದ್ದರಿಂದ ಅರಮನೆಯಲ್ಲವೂ ಅನಾವೃಷ್ಟಿಯಿಂ ಬಡಿಯಲ್ಪಟ್ಟ ಸರೋವರದಂತೆ ನೀರಸವಾಗಿದ್ದುದು. ಅದಂ ಕಂಡ ಆ ಕಟಂಜನು ಬುಡದ ಪೊಟ್ಟರೆಯೊಳ್ ಬೆಂಕಿಯಿಂ ಕೂಡಿದ ವೃಕ್ಷದಂತೆ ಸಂತಾಪವಂ ಹೊಂದಿದನು. ಅರಮನೆಯ ಜನಸಮೂಹವು ಇಲಿಯಿಂ ಕತ್ತರಿಸಲ್ಪಟ್ಟ ಬೇರುಗಳುಳ್ಳ ಹೂವಿನಗಿಡದಂತೆ ಬಾನೊಗವಾಗಿದ್ದುದು. ಪ್ರಸಿದ್ಧನಾಗಿದ್ದವನಿಗೆ ಬಂದ ಕೆಟ್ಟವಾರ್ತೆಗೂ ಪ್ರಸಿದ್ಧಿಯಾಗುವದ್ದರಿಂದ ವಿಷದ ಗಾಳಿಯಂತಾ ಚಂಡಾಲ ಶಬ್ದವು ನಿಮಿಷಮಾತ್ರದಿಂದಾ ಪಟ್ಟಣವೆಲ್ಲವನ್ನೂ ವ್ಯಾಪಿಸಿತು. ಆದ್ದರಿಂದಲ್ಲಿಗೆ ಬಂದ ನಗರ ಜನರು ಮಂತ್ರಿಗಳು ಅಲ್ಲಿಯೇ ಇದ್ದ ನಾರಿಯರೂ ಭೃತ್ಯರೂ ಕೂಪಶವದಂತೆ ಅವನಂ ಸ್ನೇಹರಹಿತರಾಗಿ ನೋಡುತ್ತಿದ್ದರು. ಗಿಡ ಗಿಡ್ಡಗಳಿಲ್ಲದ ಗಿರಿತಟದಗ್ನಿಯಂತೆ ಅವನ ಸಮಾ

ಸಮಂಸ್ಯಾವನೂ ಪೊಂದಲಿಲ್ಲ. ಶ್ಮಶಾನದಂತೆ ಅಶುಭದರ್ಶನನಾದ ಅವನು ಕಾಡುಬಿದಿರಿನಂತೆ ತಾನೇ ಕೂಗುತ್ತಿದ್ದನಲ್ಲದೆ ಅವನಿಗೊಬ್ಬನೂ ಪ್ರತ್ಯುತ್ತರವಂ ಪೇಳಲಿಲ್ಲ. ಸಭಾಜನರಿಗೆ ಉತ್ಸಾಹ ಭಂಗವಾದ್ದರಿಂದ ಅವರಲ್ಲವನ ಆಕ್ಷಿಗಳು ಭಸ್ಮರಾಶಿಯಲ್ಲಿ ಬಿದ್ದ ಜಲಕಣಗಳಂತೆ ಗೊತ್ತಿಗೆ ಬರಲಿಲ್ಲ. ಅವನಂ ಕಂಡ ಜನರು ರಾಕ್ಷಸನಂ ಕಂಡವರಂತೆ ಓಡುವದ್ದರಿಂದ ಪರದೇಶಕ್ಕೆ ಬಂದ ವಾಸಿಯಾದ ದರಿದ್ರನಂತವನು ದೀನನಾದನು. ಕೆಲವು ಜನಗಳು ಸಮೀಪದಲ್ಲಿದ್ದಾಗ್ಯೂ ಪರದೇಶಿಯಂತವನು ತಾನು ಏಕಾಕಿಯೆಂತಲೇ ನಿಶ್ಚಯಿಸಿದನು. ಬಹುಕಾಲದಿಂದೀಶ್ವಪಚ ಸಹವಾಸದಲ್ಲಿದ್ದ ನಮಗೆ ಪ್ರಾಯಶ್ಚಿತ್ತಾದಿಗಳಿಂ ಶುದ್ಧಿಯಾಗಲಾರದಾದ್ದರಿಂದ ಅಗ್ನಿಯಂ ಪ್ರವೇಶಿಸೋಣವೆಂದು ಮಂತ್ರಿಗಳು ಪುರಜನರೂ ಸಹ ನಿಶ್ಚಯಿಸಿ ತಮ್ಮ ಮನೆಗಳ ಸುತ್ತಮುತ್ತಲೂ ಕಟ್ಟಿಗೆಗಳ ರಾಶಿಗಳಂ ಸೇರಿಸಿ ಅಗ್ನಿಯಂ ಸ್ಥಾಪಿಸಲು ಕಾಡುಗಿಚ್ಚಿನಂತೆ ಸುತ್ತಮುತ್ತಲೂ ವ್ಯಾಪಿಸಿಕೊಂಡು ಬರುವ ಗಾಢಾಗ್ನಿ ಜ್ವಾಲೆಗಳಿಂ ಮನೆಗಳು ಬೀಳುವದ್ದರಿಂದಲೂ ಕೋಟೆ ಕಲ್ಲುಗಳು ಉರುಳುವದ್ದರಿಂದಲೂ, ಗೋಪುರಗಳ ನಿಪಾತದಿಂದಲೂ, ಜನಗಳು ಭಯಪಡದೆ ಜಾಗ್ರತೆಯಾಗಿ ಪ್ರಾಣಹೋಗುವದೇ ಉತ್ತಮವೆಂದು ಅಂಥಾ ಘಾತಪಾತ ಸ್ಥಳಗಳನ್ನೇ ನೋಡಿಕೊಂಡು ಪೋಗುತ್ತಿದ್ದರು. ಅಗ್ನಿಜ್ವಾಲೆಗೆ ಭಯಪಟ್ಟೋಡಿಬರುವ ಮಕ್ಕಳುಗಳಂ ತಪ್ಪಿಕೊಂಡು ಶೋಕದಿಂ ಮೂರ್ಛಿತರಾಗಿದ್ದ ಹೆಂಗಸರು ಹಾಗೆ ಪ್ರಾಣಬಿಟ್ಟರು. ಕೆಲವು ಪತಿವ್ರತೆಯರು ಚಿತಾಗ್ನಿಯಂ ಪ್ರವೇಶಿಸುವ ಪತಿಗಳೊಡನೆಯೇ ತಾವು ಪೊರಮಟ್ಟರು. ಒಬ್ಬರಿಗೂ ಪ್ರಾಣರಕ್ಷಣೆಯಲ್ಲಪೇಕ್ಷೆಯಿರಲಿಲ್ಲವಾದ್ದರಿಂದ ಪ್ರಾಣಾಂತಕರವಾದ ವ್ಯಥೆಗಳೆಲ್ಲವೂ ಅಗಪಿತವಾಗಿದ್ದವು. ಆದಾಗ್ಯೂ ಅಗ್ನಿತಾಪವು ತಡೆಯಲಶಕ್ಯವಾದ್ದರಿಂದ ಆ ಪುರವೆಲ್ಲವೂ ರೋದನಧ್ವನಿಮಯವಾಗಿದ್ದುದು. ಚಿತಾಗ್ನಿಗಳಿಂದಹಿಸಲ್ಪಡುವ ಶವಗಳ ಗಂಧದಿಂದೋಡಿ ಬಂದ ಕಾಗೆ ಹದ್ದು ಮೊದಲಾದ ಪಕ್ಷಿ ಸಮೂಹಗಳಿಗೆ ಹಾರುವ ಕಿಡಿಗಳಿಂದ ಅಗ್ನಿವೃಷ್ಟಿಯ ಭೀತಿಯುಂಟಾಗುತ್ತಿದ್ದುದು. ಮಕ್ಕಳುಗಳಂ ತಪ್ಪಿಕೊಂಡು ಅಗ್ನಿಯಂ ಪ್ರವೇಶಿಸುವ ಜನರಿಗೆ ಅಗ್ನಿಯ ಸಮೀಪ ಪ್ರವೇಶದಿಂ ಮಕ್ಕಳಿಗೆ ಮೊದಲೇ ಪ್ರಾಣ ಹೋದದ್ದರಿಂದ ಆ ದುಃಖವೂ ಕೂಡ ತಾವು ಪ್ರಾಣವಂ ಬಿಡುವದಕ್ಕೆ ಸಹಕಾರವಾಗಿದ್ದುದು. ಶರೀರಗಳ ಕೊಬ್ಬಿನ ವಾಸನೆಯಿಂದೆರಗುವ ಪಕ್ಷಿಮಂಡಲಗಳಿಂದಂತರಿಕ್ಷವು ಮೋಡದಿಂ ತುಂಬಿರುವಂತೆ ಕಾಣುತ್ತಿದ್ದುದು. ಅಗ್ನಿಜ್ವಾಲೆಗಳಿಂ ಕೂಡಿದ ಧೂಮ ಪರಂಪರೆಗಳು ಅಂತಸ್ತಾಪದಿಂ ಸೇರಿಕೊಂಡಿರುವ ಚಂಡಾಲ ಸಹವಾಸ ದೋಷಗಳೇ

ಪುರದಿಂ ಪೊರಮಡುವವೋ ಎಂಬಂತೆ ತೋರುತ್ತಿದ್ದವು. ಉನ್ಮತ್ತರಾದ ಕಳ್ಳರಿಂದಪಹರಿಸಲ್ಪಡುವ ಒಡವೆಗಳುಳ್ಳ ಬಾಲಕರುಳ್ಳದ್ದಾಗಿದ್ದರೂ ಆ ಪಟ್ಟಣವು ಜನಗಳಿಗೆ ಪ್ರಾಣತ್ಯಾಗವೇ ಮುಖ್ಯವಾಗಿದ್ದರಿಂದ ರಕ್ಷಿಸಲ್ಪಡಲಿಲ್ಲ. ಮಕ್ಕಳಿಗೆ ಒಡವೆ ಹೋದ ದುಃಖದಿಂ ಬಂದ ಮೂರ್ಛೆಯು ಪ್ರಾಣತ್ಯಾಗಕ್ಕನುಕೂಲವಾದುದು. ಅರಮನೆ ಮನೆ ತೋಟ ದೇವಸ್ಥಾನದ ಗುರುತುಗಳೊಂದೂ ಕಾಣದಂತೆ ಆ ಪುರವು ಭಸ್ಮವಾಗುವಲ್ಲಿ ಗವಲನೆಂದು ಪ್ರಸಿದ್ಧನಾಗಿ ರಾಜಭಾವದಿಂವಿದ್ದ ಕಂಟಜನು ರಾಜ್ಯಭಾರದಲ್ಲಿ ಸಂಬಂಧಿಸಿದ ಸಜ್ಜನರ ಸಹವಾಸದಿಂ ಸದ್ಬುದ್ಧಿಯಾಗಿದ್ದನಾದ್ದರಿಂದ ಆ ಜನರ ನಾಶನವಂ ನೋಡಿ ನನ್ನ ನಿಮಿತ್ತವಾಗೀ ಪಟ್ಟಣವೆಲ್ಲವೂ ಹೀಗೆ ಹಾಳಾಗುವಲ್ಲಿ ತನ್ನ ಜೀವನದಿಂದುಪಯೋಗವೇನೆಂದು ಅಗ್ನಿಯಂ ಪ್ರವೇಶಿಸದನು. ಆಗ ಅವನ ಅಂಗಗಳಿಗೆ ಉಂಟಾದ ಸಂತಾಪದಿಂ ಜಲದಲ್ಲಿ ಮುಳುಗಿಕೊಂಡಿದ್ದ ಗಾಧಿಗೆ ಎಚ್ಚರವಾದುದು. ಆಗ ಪ್ರಳಯಕಾಲದಲ್ಲಿ ಬ್ರಹ್ಮನಂತೆ ಮನಕಲ್ಪನೆಯಿಲ್ಲದ ಆ ಗಾಧಿಯು ಆ ಕಟಂಜ ಸಂಸಾರ ಭ್ರಮೆಯಂ ಬಿಟ್ಟು ನಿದ್ರಾಂಧಕಾರದಿಂ ಕೂಡಿದ ರಾತ್ರಿಯಳಿಯಲು ಇಂಥಾವನು ನಾನು ಈ ಕಾರ್ಯವಿಂಥಾದ್ದು ಇದು ಮಾಡತಕ್ಕದ್ದು ಇದು ಬಿಡತಕ್ಕದ್ದು ಇದಂ ಮಾಡಕೂಡದೆಂದು ಆಲೋಚಿಸುವ ಜನದಂತೆ ಎಚ್ಚತ್ತು ಶಿಶಿರ ಕಾಲಾಂತದಲ್ಲಿ ವೈಶಾಖಮಾಸವು ಕಮಲವಂ ತೋರುವಂತೆ ನೀರಿನಿಂದ ತಲೆಯನ್ನೆತ್ತಿ ಸುತ್ತಮುತ್ತಲೂ ನೋಡುತ್ತಾ ಭ್ರಾಂತಿ ಸಿದ್ಧವಾದ ದಿಗ್ದೇಶಕಾಲಗಳ ವ್ಯತ್ಯಾಸದಿಂದಾಶ್ಚರ್ಯಪಟ್ಟು ಪೂರ್ವಸ್ಮರಣೆಗೆ ಸರಿಯಾಗಿರುವದರಿಂದ ಹುಬ್ಬುಗಂಟಿನಿಂ ಸ್ವಲ್ಪ ಸಂಕೋಚವಂ ಪಡದ ನೇತ್ರವುಳ್ಳವನಾಗಿ ಶಾಂತನಾಗಿದ್ದ ನನಗೆ ಈ ಭ್ರಾಂತಿಯುಂಟಾಗಿರುವದೆಂದು ಚಿಂತಿಸುತ್ತಾ ಉದಯಿಸುವ ಸೂರ್ಯನಂತೆ ನೀರಿನಿಂದೆದ್ದು ಗಾಳಿಯಿಂದುದುರಿದ ಎಲೆಯಂತೆ ನೆಲವಂ ಪಡದ ನನಗೆ ಬಾಲ್ಯದಲ್ಲಿಯೇ ಲತಾವೃಕ್ಷಗಳಂತಿದ್ದ ತಾಯಿತಂದೆಗಳು ನಷ್ಟರಾದ್ದರಿಂದವರ ಗುರುತನ್ನೆ ನಾನರಿಯೆನು. ವಿವಾಹವಿಲ್ಲದ್ದರಿಂದ ಮದ್ಯಘಟವಂ ಬ್ರಾಹ್ಮಣನಂತೆ ಹೆಂಡತಿಯನ್ನೇ ಕಾಣೆನು. ದೇಶತ್ಯಾಗದಿಂ ಬಂಧುಗಳು ನನಗೆ ಬಹುದೂರದಲ್ಲಿರುವರು. ಇಂಥಾ ನಾನು ತಾಯಿ ಮಡದಿಯರ ನಡುವೆ ಬಂಧು ಸಮೂಹದಲ್ಲಿ ಸಾವದೆಂದರೇನು. ಸತ್ತವನು ತನ್ನ ಸಾವನ್ನಾಲೋಚಿಸುವದು ಹೇಗೆ? ಈ ಸಾವೇ ಇಲ್ಲದಿರುವಲ್ಲಿ ಮುಂದಿನ ಚಂಡಾಲಜನ್ಮಾದಿಗಳು ಸಂಭವಿಸಿದ್ದು ಹೇಗೆ? ಹೀಗೆ ಅಸಂಬಂಧ ಭ್ರಾಂತಿ ಪರಂಪರೆಯೊಳ್ ಮನವು ಕಾಡಿನಲ್ಲಿ ಹುಲಿಯಂತೆ ಸರ್ವಕಾಲದಲ್ಲೂ ತಿರುಗುತ್ತಿರುವದು. ಅದರಿಂದಲೇ ಈ ಸಂಭ್ರಮ ಉಂಟಾಯಿತೆಂದು ನಿಶ್ಚಯಿಸಿ, ಎಂದಿ

ನಂತೆ ಸ್ವಕಾರ್ಯಪರನಾಗಿದ್ದನು. ಒಂದುದಿನ ದೂರ್ವಾಸನು ಶಕ್ರಲೋಕಕ್ಕೆ ಪೋದಂತೆ ಒರ್ವ ಅತಿಥಿಯು ಗಾಧಿಯ ಆಶ್ರಮಕ್ಕೆ ಬಂದನು. ಅತಿ ಶ್ರಮದಿಂ ಬಂದ ಆ ಬ್ರಾಹ್ಮಣನು ವಸಂತಕಾಲದಿಂ ವೃಕ್ಷದಂತೆ ಆ ಗಾಧಿಯಿಂದ ಫಲಪುಷ್ಪರಸಾದಿಗಳಂ ಪಡದು ಸುಖದಿಂ ವಿಶ್ರಮಿಸಿಕೊಂಡನು. ಬಳಿಕ ಸಾಯಂಕಾಲದ ಸಂಧ್ಯಾವಂದನಾದಿ ಕರ್ಮವಂ ನೆರವೇರಿಸಿ ಗಾಧಿಯೊಡನೆ ನಿಜಶಯನವಂ ಪೊಂದಿದ ಆ ತಾಪಸನು ಇಷ್ಟು ಶ್ರಮಕ್ಕೂ ಕೃಶವಾಗಿರುವದಕ್ಕೂ ಕಾರಣವೇನೆಂದು ಗಾಧಿಮುನಿಯಿಂದ ಕೇಳಲ್ಪಟ್ಟವನಾಗಿ ಪೇಳಿದನದೆಂತೆನೆ;—ಎಲೈ ಮುನಿವರನೇ! ಇತ್ತ ಉತ್ತರದಿಕ್ಕಿನೊಳ್ ಸಂಪತ್ಸಮೃದ್ಧಿಗೆ ಆಧಾರವಾದ ಕೀರವೆಂಬ ದೇಶವಿರುವದು. ಅಲ್ಲಿ ನಾನು ಪರಿಪರಿಯಾದ ಮಧುರ ಪದಾರ್ಥಗಳಿಗೆ ಚಪಲಪಡುತ್ತಾ ಜನಗಳಿಂ ಪೂಜಿತನಾಗಿ ಒಂದು ತಿಂಗಳಿದ್ದೆನು. ಆವಾಗ್ಯೂ ಚಾಪಲ್ಯಪಡಗದಿರುವದಕ್ಕೆ ನಿಮಿತ್ತವೇನೆಂದು ನಾನೊಂದುವೇಳೆ ಚಿಂತಿಸುತ್ತಿರುವಲ್ಲಿ ಕಥಾಪ್ರಸಂಗದಿಂದೀ ದೇಶದಲ್ಲೊಬ್ಬ ಕಟಂಜನೆಂಬ ಶ್ವಪಚನು ಗವಲನೆಂಬ ನಾಮದಿಂ ಪ್ರಸಿದ್ಧನಾಗಿ ರಾಜ್ಯಭಾರವಂ ಮಾಡುತ್ತಿದ್ದನು. ಇವನು ಶ್ವಪಚನೆಂದು ಜನಗಳಿಗೆ ತಿಳಿದ ಕೂಡಲೇ ಅವನು ಅಗ್ನಿಯಂ ಪ್ರವೇಶಿಸಿದನು. ಅವನ ಸಹವಾಸದಲ್ಲಿದ್ದ ಅನೇಕ ಜನ ದ್ವಿಜರು ಅಗ್ನಿಪ್ರವೇಶವಂ ಮಾಡಿದರೆಂದೊಬ್ಬನು ಪೇಳಿದನು. ಸುತ್ತುಮುತ್ತಲೂ ವಿಚಾರಿಸುವಲ್ಲಿ ಆ ಮಾತು ನಿಶ್ಚಯವಾದ್ದರಿಂದ ಆ ದೇಶವಂ ಬಿಟ್ಟು ಪ್ರಯಾಗದಲ್ಲಿ ಪ್ರಾಯಶ್ಚಿತ್ತವಂ ಮಾಡಿಕೊಂಡು ಚಾಂದ್ರಾಯಣ ವ್ರತವನ್ನಾರಂಭಿಸಿ ಪೊರಮಟ್ಟೆನು. ಮೂರನೇ ಚಾಂದ್ರಾಯಣಕ್ಕೆ ಈ ದಿವಸ ನಿಮ್ಮ ಆಶ್ರಮದಲ್ಲಿ ಪಾರಣೆಯಾದುದು. ವ್ರತ ಯಾತ್ರೆಗಳಿಂ ನನಗೆ ದೇಹಕಾರ್ಶ್ಯವೂ ಶ್ರಮವೂ ಸಹ ಉಂಟಾಯಿತೆಂದು ಪೇಳುವಲ್ಲಿ, ಆಶ್ಚರ್ಯಪಟ್ಟ ಗಾಧಿಯು! ಆ ಕಥೆಯನ್ನೇ ಬಾರಿಬಾರಿಗೂ ಕೇಳಿ ಚೆನ್ನಾಗಿ ತಿಳಿದುಕೊಂಡನು:—ಎರಡನೇ ದಿನ ಅತಿಥಿಯಾಗಿ ಬಂದಿದ್ದ ಆ ಬ್ರಾಹ್ಮಣನು ತನ್ನ ಅನುಜ್ಞೆಯಂ ಪಡೆದು ಪೊರಮಟ್ಟು ಪೋಗಲು, ನಾನು ಕಂಡ ಪುರಣವು ಸ್ವಪ್ನದಂತೆ ಸುಳ್ಳೆಂದು ಗೊತ್ತಾಗಿರುವದು. ಶ್ವಪಚವೃತ್ತಾಂತವನ್ನೇ ಬ್ರಾಹ್ಮಣನು ಪೇಳಿದ್ದರಿಂದ ನೋಡಬೇಕಾಗಿ ಇರುವದೆಂದಾಲೋಚಿಸಿ ಮೇರುವಿನ ಪಾರ್ಶ್ವಭಾಗವಂ ನೋಡಲಿಚ್ಛೈಸಿದ ಸೂರ್ಯನಂತೆ ಪೊರಮಟ್ಟನು. ಎಲೈ ರಾಜೀವಾಕ್ಷನೇ! ಉದ್ಯೋಗಪರರಾದ ಪ್ರಾಜ್ಞರು ಮನೋರಾಜ್ಯವನ್ನು ಕೂಡ ಪ್ರತ್ಯಕ್ಷವಾಗಿ ನಡೆಸುವರಾದ್ದರಿಂದ ಗಾಧಿಯು ಸ್ವಪ್ನದೃಷ್ಟವನ್ನೂ ಕೂಡ ಪ್ರತ್ಯಕ್ಷವಾಗಿ ಕಂಡನು. ಆದ್ದರಿಂದ ಮಹಾತ್ಮರಿಗೆ ನಿಶ್ಚಿತ

ನಾಗಿ ಮಾಡಿದ ಪ್ರಯತ್ನದಿಂದ ಪಡೆಯಲಶಕ್ಯವಾದದ್ದಾದರೂ ಪ್ರಾಪ್ತವಾಗುವ
ದೆಂದು ನಿಶ್ಚಯಿಸತಕ್ಕದ್ದು. ಇಂತು ಪೊರಮಟ್ಟ ಗಾಧಿಯು ವರ್ಷಾಕಾಲದ
ಪ್ರವಾಹದಂತೆಯೂ ವಾಯುವೇ ವಾಹನವಾಗಿ ಉಳ್ಳವನಂತೆಯೂ ಬಿರುಗಾ
ಳಿಯಿಂ ಬಡಿಯಲ್ಪಟ್ಟ ಮೇಘದಂತೆಯೂ, ವಾಯುವಿಗೆ ವಾಹನವಾದ ಹುಲ್ಲೆಯಂ
ತೆಯೂ, ಅತಿವೇಗದಿಂ ಪೋಗುತ್ತಾ, ಬಂಟೆಯು ಹೆಂಗೆ ಕೋಟೆಕ್ಕೆ ಹೋಗು
ವಂತೆ ಭೂತಮಂಡಲವೆಂಬ ದೇಶಕ್ಕೆ ಹೋದನು. ಅವರ ಎಲ್ಲೆಕಟ್ಟಿನಲ್ಲಿ
ನರಕದಂತಿರುವ ಶ್ವಪಚ ಗ್ರಾಮವಂ ಕಂಡು ತನ್ನ ಅನುಭವಕ್ಕೆ ಸರಿಯಾದ ಗುರು
ತುಗಳಿಂದ ತಾನೇ ಶ್ವಪಚನಾಗಿದ್ದವನೆಂದು ನಿಶ್ಚಯಿಸಿದನು. ಅನ್ನೈಷ್ಟಿಯಿಂ
ಬಿದ್ದ ಮನೆಯನ್ನು ಪಾಳು ಗೋಡೆಗಳಲ್ಲಿರುವ ಯಮೆಯ ಮೂಳೆಗಳನ್ನು ಹಾಸಿಕೆ
ಹೊದ್ದಿಕೆಗಳಾಗಿದ್ದ ಚರ್ಮಾದಿಗಳನ್ನೂ ಕಂಡನು, ಮತ್ತು ದೃಢವಾದ ದಾರಿದ್ರ್ಯದಂ
ತೆಯೂ, ಅವಲಂಬನವಂ ಪಡೆಯದಿರುವ ದೌರ್ಭಾಗ್ಯದಂತೆಯೂ, ಒಂದೆಡೆಯೊಳ್
ನಿಶ್ಶೇಷವಾಗಿರುವದ್ದರಿಂದ ಕೊಂಚ ಕಡಮೆಯಾಗಿರುವ ಕಳ್ಳತನ ಮೊದಲಾದ
ದೋಷಗಳ ರಾಶಿಯಂತೆಯೂ, ಅಬಾಧವಾದ ದುರ್ದಶೆಯಂತೆಯೂ ಕಾಣುತ್ತಿ
ರುವ ತನ್ನ ಪಾಳುಮನೆಯಂ ಚನ್ನಾಗಿ ನೋಡಿದನು. ಆ ಕಟಂಜನಿಂದ ದಂತ
ಗಳಿಂ ಸೀಳಲ್ಪಟ್ಟ ಗೋಮಹಿಷಾಶ್ವ ಮೊದಲಾದವುಗಳ ಮೂಳೆಗಳು ನೀನು ಚಂಡಾ
ಲದಶೆಯನ್ನನುಭವಿಸಿದ್ದಕ್ಕೆ ನಾವೇ ಸಾಕ್ಷಿಯೆಂದು ಹೇಳುವಂತೆ ಕಾಣುತಿದ್ದವು.
ಅವನ ಪಾನ ಭೋಜನಾರ್ಥವಾಗಿದ್ದ ಕ್ರಾವೆಗಳು ಮಡಕೆ ಚಿಪ್ಪುಗಳು ಸಹ ಪಾಸ
ಪೂರ್ಣವಾಗಿರುವಂತೆ ಮೇಘೋದಕದಿಂ ತುಂಬಿದ್ದವು. ಅವನ ವೀಣಾದಿ
ವಾದ್ಯಗಳು ದುರಾಶೆಯಂತೆ ದೀರ್ಘವಾದ ಕರಳಿನ ತಂತಿಗಳಿಂದಲೂ, ಲತೆಗಳಿಂ
ದಲೂ ಕೂಡಿಕೊಂಡಿದ್ದವು. ಅನುಭೂತವಾದೀ ಪದಾರ್ಥಗಳಿಂ ಕೂಡಿರುವ
ತನ್ನ ಮನೆಯನ್ನು ಸ್ವಪ್ನದಲ್ಲಿ ತನ್ನ ಹೆಣವಂ ನೋಡುವಂತೆ ಚನ್ನಾಗಿ ನೋಡುತ್ತಾ
ಅತಿ ಜುಗುಪ್ಸೆಯಿಂ ಕೂಡಿದ ವೈರಾಗ್ಯವನ್ನೂ ಅಮಿತವಾದ ಆಶ್ಚರ್ಯವನ್ನೂ ಹೊಂ
ದಿದನು. ಬಳಿಕ ಅಲ್ಲಿಂದ ಪೊರಮಟ್ಟ ಗಾಧಿಯು ಆ ಮನೆಯ ಸಮೀಪದಲ್ಲಿರುವ
ಗ್ರಾಮಕ್ಕೆ ಬಂದು ಅಲ್ಲಿರುವ ಒಬ್ಬ ಪುರುಷನಂ ಕೇಳಿದನದೆಂತೆನೆ:—ಎಲೈ ಸಾಧು
ವೇ! ಈ ಗ್ರಾಮದ ಕೊನೆಯಲ್ಲಿದ್ದ ಶ್ವಪಚನ ಕ್ರಮವಂ ತಿಳಿದಿದ್ದೀಯಾ? ಬುದ್ಧಿಶಾ
ಲಿಗಳು ಬಹುಕಾಲದಲ್ಲಿ ನಡೆದ್ದನ್ನೂ ಕೂಡ ಕೈಲಿರುವ ಪದಾರ್ಥದಂತೆ ನೋಡುತ್ತಿ
ರುವರೆಂದು ನಾನು ಕೇಳಿದೇನೆಯಾದ್ದರಿಂದ ಕೇಳುತ್ತೇನೆ? ನೀನು ತಿಳಿದಿದ್ದಲ್ಲಿ
ಹೇಳುವನಾಗು? ಮಹಾಗಸ್ಕರ ಸಂಶಯವಂ ಪರಿಹರಿಸಿದ್ದರಿಂದ, ಅಧಿಕವಾದ

ಸ್ವಪ್ನವುಂಟಾಗುವದೆಂದು ಕೇಳುವಲ್ಲಿ, ಆ ಪುರುಷನು ಅಲ್ಲಿ ಕಟಂಜನೆಂಬ ಶ್ವಪಚನು ಪ್ರಸಿದ್ಧನಾಗಿದ್ದದ್ದನ್ನೂ, ಅವನಿಗೆ ಪುತ್ರ ಪೌತ್ರಾದಿ ನಾಶವಾದದ್ದನ್ನೂ, ಅವನು ಕೀರದೇಶದಲ್ಲಿ ರಾಜ್ಯಭಾರವಂ ಮಾಡುತ್ತಿದ್ದದ್ದನ್ನೂ ಅವನು ಚಂಡಾಲನೆಂದು ತಿಳಿದ ಬಳಿಕ ಅವನ ಸಮೀಪದಲ್ಲಿದ್ದವರು ಅಗ್ನಿಪ್ರವೇಶವಂ ಮಾಡಿದ್ದನ್ನೂ, ಅದಂ ಕಂಡು ಅವನೂ ಅಗ್ನಿಪ್ರವೇಶವಂ ಮಾಡಿದ್ದನ್ನೂ ಸಹ ಹೇಳಿದನು. ಅದಂ ಕೇಳಿದ್ದರಿಂದ ತೃಪ್ತಿಯಿಲ್ಲದ ಗಾಧಿಯು ರೋಗಿಯು ತನ್ನ ರೋಗ ವೃತ್ತಾಂತವಂ ಚಿಕಿತ್ಸಕರಂ ಕೇಳುವಂತೆ ಕಂಡ ಕಂಡವರೆಲ್ಲರನ್ನೂ ಆ ಶ್ವಪಚ ವೃತ್ತಾಂತವಂ ಕೇಳುತ್ತಾ ಅವರೆಲ್ಲರೂ ಒಂದೇರೀತಿಯಾಗಿ ಹೇಳುತ್ತಿದ್ದಾಗ್ಯೂ, ಮರಳಿ ಮರಳಿ ಕೇಳುವದರಿಂದ ನಿನಗೆ ಆ ಕಟಂಜನು ಬಂಧುವೋ? ಅಥವಾ ಅವನಿಗೆ ನೀನು ಮಗನಾಗಿದ್ದೀಯೋ? ಈಪರಿಯಾಗಿ ಅವನ ವೃತ್ತಾಂತವಂ ಕೇಳುವದಕ್ಕೆ ಕಾರಣವೇನೆಂದು ಜನಗಳು ತಿರಸ್ಕರಿಸುತ್ತಿದ್ದಾಗ್ಯೂ, ಆ ವಿಚಾರವಂ ಬಿಡದೆ ಆ ಕಥೆಯಂ ಕೇಳುವವರಲ್ಲೇ ಆಸಕ್ತನಾಗಿ ಅಲ್ಲೇ ಒಂದು ತಿಂಗಳಿದ್ದನು. ಆ ಆಶ್ಚರ್ಯವಂ ನೋಡುವದರಲ್ಲಿ ತೃಪ್ತಿಯಿಲ್ಲದ ಆ ಗಾಧಿಯು ಒಣಮರದಲ್ಲಿ ಪಿಶಾಚದಂತೆ ಪಾಳಾಗಿರುವ ತನ್ನ ಮನೆಯ ತೋಟದಲ್ಲಿ ನಿಂದು ಪ್ರಳಯದೋಳ್ಜಗವಂ ನೋಡುವ ಬ್ರಹ್ಮನಂತೆ ಹರಹರಿಯಾಗಿ ಅಲ್ಲಲ್ಲಿ ಬಿದ್ದಿರುವ ತನ್ನ ಮನೆಯ ಪಾತ್ರೆ ಪದಾರ್ಥಗಳಂ ನೋಡುತ್ತಾ, ಪ್ರಳಯದೋಳ್ಮೇರು ಶಿಖರಗಳಂತೆ ಜೇಡಿ ಗೋಡೆಗಳಲ್ಲಿ ನೆಟ್ಟಿದ್ದ ಆನೆಯ ಮೂಳೆಗಳು ಅಲ್ಲಲ್ಲಿಯೇ ನಿಂತಿರುವವು. ಅಲ್ಲಿ ಬಿದಿರುಗಳಿಂ ಜೋಡಿಸಲ್ಪಟ್ಟ ನಾನದ ಮಾಂಸವು ಸುರಾಪಾನ ಮತ್ತರಾದ ಬಂಧುಗಳೊಡನೆ ತಿನ್ನಲ್ಪಟ್ಟಿತು. ಈ ಸಿಂಹದ ಚರ್ಮದಮೇಲೆ ಕುಳಿತ ನಾನು ಆ ಪ್ರಾಣಕಾಂತೆಯೊಡನೆ ಕುಳಿತು ಮದದಿಂ ಕೂಡಿದಸುರೆಯಂ ಹೀರಿದೆನು, ಇಲ್ಲಿ ನೆಟ್ಟಿರುವ ಗಜದಂತಗಳೊಳ್ ಹಿಂಡಿ ಮಾಂಸಗಳಿಂ ಬೆಳಸಲ್ಪಟ್ಟ ಹೆಣ್ಣು ನಾಯಿಗಳು ಕಟ್ಟಿದ್ದವು. ಇಲ್ಲಿ ಗಜಮುಕ್ತಾ ಫಲಗಳಿಂ ತುಂಬಿದ್ದ ಕೋಣನ ಚಕ್ಕಳದ ಮೂರು ಪೆಟ್ಟಿಗೆಗಳಿದ್ದವು. ಇಲ್ಲಿ ಹಾವಿನಸಿಪ್ಪೆಗಳಿಂ ಮಾಡಲ್ಪಟ್ಟ ಪುಟ್ಟಮನೆಯೊಳ್ಮಕ್ಕಳುಗಳಾಡುತ್ತಿದ್ದವು. ಇಲ್ಲಿ ನಾವು ರಕ್ತವಂ ಕುಡಿದು ಸ್ಮಶಾನದ ಗಂಧಮಾಲ್ಯಗಳಂ ಧರಿಸಿ, ಮಕ್ಕಳೂದುವ ಕೊಳಲಿಗೆ ಸರಿಯಾಗಿ ಹಾಡಲ್ಪಟ್ಟಿತು. ಈ ಸ್ಥಳದೊಳ್ ವಿವಾಹೋತ್ಸವದಲ್ಲಿ ಸೇರಿದ್ದ ಪತ್ನೀ ಬಂಧುಗಳು ಕಡಲಿನೊಳ್ತೆರೆಗಳಂತೆ ಸಂಭ್ರಮದಿಂ ಇದ್ದರು. ಇಲ್ಲಿ ತಿನ್ನಲೋಸುಗ ಸಾಕಿಕೊಂಡಿದ್ದ ಪಕ್ಷಿಗಳಂ ಮಡಗಲೋಸುಗ ಬಿದಿರಿನ ಪಂಜರವು ಮಾಡಲ್ಪಟ್ಟಿತ್ತೆಂದು ನೆನೆನೆನೆದು ತಾನು ಸೇರಿ ಆಶ್ಚರ್ಯಪಡುತ್ತಾ !

ಕೆಲವುಕಾಲವಲ್ಲೇ ತಿರುಗುತ್ತಿದ್ದು, ಅಲ್ಲಿಂ ಪೊರಮಟ್ಟು ತಾನು ನೋಡಿದ್ದ ಮಾರ್ಗದಿಂದಲೇ ಹಿಮವತ್ಪರ್ವತದ ಸಮೀಪದಲ್ಲಿರುವ ಕೀರದೇಶಕ್ಕೆ ಬಂದನು. ಅಲ್ಲಿಯೂ ತನ್ನ ಅನುಭವಕ್ಕೆ ಸರಿಯಾಗಿದ್ದ ಆಯಾಯ ಸ್ಥಾನಗಳಂ ನೋಡುತ್ತಾ, ಅಲ್ಲಿ ಶ್ವಪಚನು ರಾಜನಾಗಿದ್ದ ವೃತ್ತಾಂತವು ತನಗೆ ತಿಳಿಯುವದೇ ಎಂದು, ಅಲ್ಲಿಯ ಜನರಂ ಕೇಳಿದನು. ಇಲ್ಲಿ ಹನ್ನೆರಡು ವರ್ಷಗಳಿಗೆ ಪೂರ್ವದೊಳ್ ಪಟ್ಟದಾನೆಯಂಗೀಕರಿಸಿದ ನಿಮಿತ್ತದಿಂ ರಾಜನಾಗಿದ್ದ ಕಟಂಜನೆಂಬ ಶ್ವಪಚನು ಗವಲನೆಂಬ ನಾಮದಿಂ ಎಂಟುವರ್ಷ ರಾಜ್ಯಭಾರವಂ ಮಾಡಿದನು. ಅವನು ಶ್ವಪಚನೆಂದು ತಿಳಿಯಲು ಆಗಿನ ಜನರು ಅವನ ಸಹವಾಸ ದೋಷಗಳ ಶಾಂತಿಗೋಸುಗ ಚಿತೆಗಳಿಗೆ ಅಗ್ನಿಯಂ ಹಾಕಿಕೊಂಡು ಸಕುಟುಂಬರಾಗಿ ನಷ್ಟರಾದರು. ಆ ಸತ್ಪುರುಷರ ಸಂಗದಿಂ ಸುಬುದ್ಧಿಯಾಗಿದ್ದ ಆ ಶ್ವಪಚನು ಅಗ್ನಿಯಂ ಪ್ರವೇಶಿಸಿದನು. ಎಂದು ಆ ಜನಗಳು ಹೇಳುವಲ್ಲಿ:—ಪರಮಾಶ್ಚರ್ಯವಂ ಹೊಂದುವ ! ಆ ಗಾಧಿಯು ಕಂಡಕಂಡವರೆಲ್ಲರನ್ನೂ ಕೇಳಿ ಅವರೆಲ್ಲರೂ ಏಕರೀತಿಯಾಗಿ ಹೇಳುವಲ್ಲಿ, ಪರಮಾಶ್ಚರ್ಯವಂ ಹೊಂದುತ್ತಾ! ಅರಮನೆಯಿಂ ಸಬಲವಾಹನನಾಗಿ ಸಾಕ್ಷಾಲ್ಲಕ್ಷ್ಮೀಪತಿಯಂತೆ ಪೊರಮಟ್ಟ ರಾಜನ ವೈಭವವಂ ನೋಡಿ, ಪದ್ಮಗರ್ಭ ಸಮಾನ ವರ್ಣರಾದ ಈ ನಾತನಾರಿಯರೆನ್ನಂ ಸೇವಿಸಿಕೊಂಡಿದ್ದರು. ಇಂದ್ರುಚಂದ್ರಕರ ಪ್ರಭೆಗಳಾದ ಈ ಛತ್ರ ಚಾಮರಗಳಿಂದಲೇ ನಾನು ಸೇವಿತನಾದೆನು. ನೀಲಮೇಘ ಸಮಾನವಾದೀ ಆನೆಗಳೇ ನನ್ನ ಹಿಂದೆ ಮುಂದೆ ಬರುತ್ತಿದ್ದವು. ಶ್ರೀಪತಿಯಂ ಲೋಕಪಾಲರಂತೆ ಸಾಮಂತರೇ ನನ್ನಂ ಸೇವಿಸುತ್ತಿದ್ದರು. ಸ್ವಪ್ನದಲ್ಲನುಭವಿಸಿದ ಈ ವೈಭವವೆಲ್ಲವೂ ನನಗೀಗ ಪ್ರತ್ಯಕ್ಷವಾಗಿರುವದು. ಸ್ವಪ್ನವಂ ಸತ್ಯವಾಗಿ ತೋರಿಸುವ ಈ ಮಾಯೆ ಏಕೆ ಉಂಟಾದುದೋ ತಿಳಿಯಲಿಲ್ಲ. ಈ ವೈಭವವೇ ನನ್ನ ಮನದೊಳ್ ಪ್ರತಿಬಿಂಬಿಸಿದ್ದರಿಂದ ಬಲೆಯಿಂ ಪಕ್ಷಿಯಂತೆ ನಾನು ಪರವಶನಾದೆನು. ಶ್ರೀಮನ್ನಾರಾಯಣನಿಂದಲೇ ಈ ಮಾಯೆ ತೋರಿಸಲ್ಪಟ್ಟಿತೆಂದು ತಿಳಿಯುತ್ತೇನೆ. ಹೇಗುಂಟಾದೀ ಸಂಭ್ರಮದ ವೃತ್ತಾಂತವಂ ಚನ್ನಾಗಿ ತಿಳಿಯಬೇಕೆಂದು ನಿಶ್ಚಯಿಸಿ ಸಮೀಪದಲ್ಲಿರುವ ಪರ್ವತದ ಗುಹೆಯಂ ಸೇರಿ ಒಬ್ಬ ಆಸನಕ್ಕೆ ತಕ್ಕಷ್ಟು ಜಲವಂ ಕುಡಿಯುತ್ತಾ ಒಂದೂವರೆ ವರ್ಷ ತಪವಂ ಮಾಡಿದನು. ಆಗ ಪ್ರತ್ಯಕ್ಷವಾಗಿ ಬಂದ ಶ್ರೀಮಹಾವಿಷ್ಣುವು, ಎಲೈ ಗಾಧಿಯೇ ! ನೀನು ನನ್ನ ಮಾಯೆಯಂ ನೋಡಿದೆಯಲ್ಲವೆ ? ಮರಳಿ ಏನುಕಾರಣ ತಪವಂ ಮಾಡುತ್ತೀ ಎಂದು ಕೇಳಲಾ ಗಾಧಿ ಇಂತೆಂದನು.—ಎಲೈ ದೇವದೇವನೇ ! ನಿನ್ನಿಂದಾದ ಮಾಯೆ

ತೋರಿಸಲ್ಪಟ್ಟಿತೋ, ತಮೋಮಯವಾದ ಆ ಮಾಯೆಯನ್ನು ಪ್ರಾತಃಕಾಲದಲ್ಲಿ ಭೂಮಿಯಂ ಸೂರ್ಯನಂತೆ ಪ್ರಕಟವಾಗಿ ತೋರಿಸುವನಾಗು. ವಾಸನಾಮಲಗಳಿಂ ಕೂಡಿದ ಯಾವ ಭ್ರಮೆಯಂ ಸ್ವಪ್ನದಂತೆ ಮನಸ್ಸು ನೋಡಿತೋ, ಅದು ಮನಸ್ಸಿನ ಒಳಗಿರದೆ ಪ್ರತ್ಯಕ್ಷವಾಗಿ ಹೊರಕ್ಕೆ ಬಂದದ್ದು ಹೇಗೆ ? ನನಗೆ ಭ್ರಮಜನಕವಾಗಿದ್ದ ಮುಹೂರ್ತಮಾತ್ರದಲ್ಲಿ ದೀರ್ಘವಾದ ಶ್ವಪಚೋತ್ಪತ್ತಿ ಮೊದಲಾದ ಕಾಲವಾಗಿದ್ದು ಹೇಗೆ ಇದಂ ನಿರೂಪಿಸಿ ನನ್ನ ಸಂದೇಹವಂ ಪರಿಹರಿಸುವನಾಗೆಂದು ಬೇಡಿಕೊಳ್ಳುವ ಗಾಧಿಯಂ ಕುರಿತು ರಮಾರಮಣನಿಂತೆಂದನು. ಎಲೈ ಬ್ರಾಹ್ಮಣನೇ ! ಮಹತ್ತಾದ ಯಾವ ವಿಭ್ರಮವಂ ನೋಡುವೆಯೋ ಅದು ಸ್ವವಿಚಾರವಿಲ್ಲದ್ದರಿಂದ ತತ್ವಜ್ಞಾನವಿಲ್ಲದೆ ನಾನಾಪ್ರಕಾರವಾದ ವಾಸನೆಗಳಿಂ ಮನೋರೂಪವಂ ತಾಳಿರುವ ಸ್ವರೂಪದ ಪ್ರಕಾಶವಲ್ಲದೆ ಮತ್ತೊಂದಲ್ಲ, ಸ್ವರೂಪಕ್ಕೆ ಭಿನ್ನವಾಗಿದೆಯೆಂದು ತಿಳಿಯುವೆಯಾದರೆ ದೃಶ್ಯವಾಗಿರುವ ಭೂಮ್ಯಾಕಾಶ ಮೊದಲಾದುವೆಲ್ಲವು ಮೊಳಕೆಯಲ್ಲಿ ಪತ್ರಸಮೂಹದಂತೆ ವಾಸನಾತ್ಮಕವಾದ ಮನಸ್ಸಿನಲ್ಲೇ ಇರುವದೆಂದು ತಿಳಿಯುವನಾಗು. ಅಂಕುರದಿಂ ಪತ್ರಪುಷ್ಪ ಫಲಗಳಂತೆ ಮನಸ್ಸಿನ ಕಲ್ಪನೆಯಿಂದಲೇ ದೃಶ್ಯಪದಾರ್ಥಗಳೆಲ್ಲವೂ, ಪ್ರತ್ಯಕ್ಷವಾಗಿ ಕಾಣುತ್ತಿದ್ದು ಮರಳಿ ಮನದಲ್ಲೇ ಲಯವಂ ಹೊಂದಿದವು. ಸ್ವಪ್ನಭ್ರಮ ಮನೋನೇತ್ರ ರೋಗ ಯೋಗಾದಿ ದೃಷ್ಟಿಗಳಲ್ಲಿ ಹೀಗಾಗುವಂಥಾದ್ದು ಬಾಲರಿಗೂ ಕೂಡ ಅನುಭವ ಸಿದ್ಧವಾಗಿರುವಲ್ಲಿ ನೀನು ಈ ವಿಷಯದೊಳ್ ಸಂದೇಹಪಡುವದಕ್ಕೆ ಕಾರಣವೇನು ? ಪ್ರಪಂಚವೆಲ್ಲಕ್ಕೂ ಆಧಾರವಾಗಿರುವ ಮನದಲ್ಲಿ ಶ್ವಪಚಕ್ರಮ ಒಂದು ತೋರಿದ್ದರಿಂದ ಆಶ್ಚರ್ಯವೇನು ! ಶ್ವಪಚಕ್ರಮದಂತೆ ಆ ತಿಥಿಯನ್ನು ಭೂಮಂಡಲವನ್ನೂ ಕೀರದೇಶವನ್ನು ಸಹ ನೀನು ಕಂಡೆಯಲ್ಲವೆ, ಇದರಲ್ಲಿ ಒಂದೂ ಸತ್ಯವಲ್ಲ, ನಿನಗೆ ಅಸತ್ಯವೆಂದು ತೋರಿರುವದೂ ಸತ್ಯವೆಂದು ನಿಶ್ಚಿತವಾಗಿರುವದೂ ಸಹ ಮೋಹವೆಂತಲೇ ತಿಳಿಯುವನಾಗು. ಅತಿಥಿಯು ಮಾತಿನಿಂ ಪೊರಮಟ್ಟ ನೀನು ಮಾರ್ಗಶ್ರಮದಿಂದರಣ್ಯದಲ್ಲಿ ಹುಲ್ಲೆಯಂತೆ ಗಿರಿ ಗುಹೆಯಲ್ಲಿ ವಿಶ್ರಮಿಸಿಕೊಳ್ಳುತ್ತಿ ಇದೇ ಭೂತಮಂಡಲವೆಂದು ತಿಳಿಯಲ್ಲದೆ ನೀನು ಭೂತಮಂಡಲಕ್ಕೆ ಪೋದವನಲ್ಲ, ಇದೇಮೇರೆಗೆ ಕೀರನಗರವನ್ನೂ ನೀನು ನೋಡಿದ್ದೀಯೆ ! ಮುಖ್ಯವಾಗಿ ಮನವಲ್ಲಿರುವದೇ ಗೋಚರವಾಗುವದ್ದರಿಂದಲೂ, ವಾಸನಾತ್ಮಕವಾದ ಮನಸಿನವರಿಗೆ ಪುನರ್ಜನ್ಮಾದಿಗಳಿಲ್ಲದ್ದರಿಂದಲೂ, ಸಮಸ್ತವಾದ ಪ್ರಪಂಚವೂ ಮಾಯೆಯೆಂದು ನಿಶ್ಚಯಿಸಿ ಉಪಶಾಂತನಾಗಿ ಸ್ವಕರ್ಮವಂ ಮಾಡುತ್ತಿರು

ನನಾಗು. ಸ್ವಕರ್ಮವಿಲ್ಲದೆ ಶ್ರೇಯಸ್ಸು ಎಂದಿಗೂ ಆಗಲಾರದಾದ್ದರಿಂದ, ತಾನಿಂಥಾವನೆಂದು ಜ್ಞಾನವಿರುವವನಿಗೆ ಸ್ವಾಶ್ರಮೋಚಿತವಾದ ಕರ್ಮವಂ ಬಿಡಲಾಗದು. ಎಂದು ನುಡಿದು ಶ್ರೀ ಮಹಾವಿಷ್ಣುವಂತರ್ಧಾನವಾಗಲು, ಭೂತಮಂಡಲ ಕೀರದೇಶಂಗಳಂ ನಾನು ಭ್ರಾಂತಿಯಿಂ ಕಂಡವನಾದೆನಾದ್ದರಿಂದ, ಅಲ್ಲಿಗೆ ಪೋಗುವೆನೆಂದು ಮರಳಿ ಪೊರಮಟ್ಟು ಆ ದೇಶಗಳಿಗೆ ಪೋಗಿ ವಿಚಾರಿಸುವಲ್ಲಿ ಭ್ರಾಂತಿಯಲ್ಲ ಕಂಡಂತೆಯೇ ಅಲ್ಲಿಯ ಜನರು ಪೇಳಲು, ಮರಳಿ ತಪವಂ ಮಾಡುತ್ತಾ ಸ್ವಲ್ಪ ದಿವಸಗಳಲ್ಲೇ ಪ್ರತ್ಯಕ್ಷವಾಗಿ ಬಂದ ಶ್ರೀಹರಿಯಂ ಕಂಡು, ಎಲೈ ನಾರಾಯಣನೇ! ನಾನು ಕಂಡದ್ದು ಮಾಯೆಯೆ, ಆದರೆ ಏಕರೀತಿಯಾಗಿಯೆ ಎಲ್ಲರೂ ಪೇಳುವದಕ್ಕೂ ಏಕರೀತಿಯಾಗಿಯೇ ಇರುವದಕ್ಕೂ ಕಾರಣವೇನೆಂದು ಕೇಳಲು ನಾರಾಯಣನಿಂತೆಂದನು:—ಎಲೈ ಗಾಧಿಯೇ! ಕಾಕತಾಳನ್ಯಾಯದಿಂ ತ್ವದೀಯ ವೃತ್ತಾಂತವು ನಿನ್ನ ಮನದಲ್ಲಿ ಪ್ರಕಾಶಿಸಿರುವಂತೆ ಆ ದೇಶದವರ ಮನದಲ್ಲೂ ಪ್ರಕಾಶಿಸಿರುವದು. ಪ್ರಕಾಶಿಸಿದ್ದಕ್ಕೆ ಅಪ್ರಕಾಶವಿಲ್ಲದ್ದರಿಂದಲೂ, ಪ್ರಕಾಶವು ಪ್ರಕಾಶಭಿನ್ನವಾಗದ್ದರಿಂದಲೂ, ಅನೇಕಜನ ಹುಡುಗರು ಒಂದೇ ಆಟವನ್ನಾಡುವಂತೆಯೂ, ಅನೇಕ ಜನರಿಗೆ ಒಂದೇ ಸ್ವಪ್ನವಾಗುವಂತೆಯೂ, ಅನೇಕಜನರೊಂದೇ ಕೆಲಸವಂ ಮಾಡುವಂತೆಯೂ ನಿನ್ನಂತೆ ಆ ಜನರಿಗೂ ಭ್ರಾಂತಿಯುಂಟಾಗಿರುವದು. ಮೂರ್ತಾಮೂರ್ತವಾದ ಕಾಲಗಳಲ್ಲಿ ಮೂರ್ತವಾದ ಕಾಲವೇ ಮುಹೂರ್ತದಿವಸ ಮಾಸಾದಿ ರೂಪಗಳಿಂ ಲೌಕಿಕವೆನಿಸುವದು. ತ್ಯಾಗ ಗ್ರಹಣಾದಿಗಳೇನೂ ಇಲ್ಲದೆ ತಟಸ್ಥವಾಗಿರುವ ಮೂರ್ತಿ ಇಲ್ಲದ ಕಾಲವೇ ಬ್ರಹ್ಮವೆನಿಸುವದು. ಮೂರ್ತಿ ಮತ್ತಾದ ಕಾಲದ ಪ್ರಕಾಶವು ಸಮಾನರೀತಿಗಳಾದ ಜನರಿಗೆ ಏಕರೀತಿಯಾಗಿಯೇ ಆಗುವದ್ದರಿಂದ ನಿಮಗೆಲ್ಲರಿಗೂ ಏಕರೀತಿಯಾದ ಭ್ರಾಂತಿಯುಂಟಾಗಿರುವದು. ಆದ್ದರಿಂದೀವಿಷಯದಲ್ಲಿ ನೀನು ಮೋಹಪಡದೆ ಇಲ್ಲಿಯೇ ಸ್ವಾಚಾರಪರನಾಗಿ ತತ್ತ್ವವಿಚಾರವಂ ಮಾಡುತ್ತಿರುವನಾಗೆಂದು ಪೇಳಿ ಅಂತರ್ಧಾನವಾಗಲು, ಆ ಗಾಧಿಯು ಎಂದಿಗೂ ಇಲ್ಲದ ಚಂಡಾಲ ಕ್ರಮವು ನನಗೆ ತೋರಿದ್ದು ಹೇಗೆಂದು ಚಿಂತಿಸುತ್ತಾ ಮರಳಿ ತಪವಂ ಮಾಡಲುಪಕ್ರಮಿಸಿ, ಪ್ರತ್ಯಕ್ಷವಾಗಿ ಬಂದ ಲಕ್ಷ್ಮೀಪತಿಯಂ ಪೂಜಿಸಿ, ಎಲೈ ಜಗದೀಶ್ವರನೆ! ನೀನೆಷ್ಟು ಪೇಳಿದರೂ ನನಗೆ ಸಂಸಾರ ಭ್ರಾಂತಿ ತಪ್ಪಲಿಲ್ಲವಾದಕಾರಣ ನಿಶ್ಚಯವಾಗಿ ಮೋಹಕ್ಕೆ ನಾಶವಾಗುವಂತೆ ನನಗೆ ತತ್ತ್ವಾರ್ಥವಂ ಪೇಳಬೇಕೆಂದು ಬೇಡಿಕೊಂಡು, ಆ ದೇವದೇವನಿಂ ಪೇಳಲ್ಪಟ್ಟನದೆಂತೆನೆ:—ಎಲೈ ಗಾಧಿಯೇ! ಈ ಜಗದ್ರೂಪವಾದ ನನ್ನ ಮಾಯಾವಿಲಾಸದಲ್ಲಿ ಇದ್ದದ್ದು ಇಲ್ಲ

ದಂತೆಯೂ, ಇಲ್ಲದ್ದು ಇರುವಂತೆಯೂ, ವಿಚಿತ್ರವಾಗಿ ಕಾಣುವಂಥಾದ್ದು ಸ್ವಾಭಾವಿಕವೇ ಸರಿ ಆದಾಗ್ಯೂ ಭೂತಮಂಡಲದಲ್ಲಿ ಕಟಂಜನೆಂಬ ಶ್ವಪಚನು ಪುಟ್ಟಿ ಸಂಸಾರ ಹೀನನಾಗಿ ಕೀರದೇಶದೊಳ್ ರಾಜ್ಯಭಾರವಂ ಮಾಡಿ ತಾನು ಶ್ವಪಚನೆಂದು ಜನಗಳಿಗೆ ತಿಳಿದ ಬಳಿಕ ಅಗ್ನಿಪ್ರವೇಶವಂ ಮಾಡಿದನು. ಅವನ ಕ್ರಮವೇ ಸೀರಿನಲ್ಲಿದ್ದ ನಿನ್ನ ಚಿತ್ತದಲ್ಲಿ ಪ್ರತಿಫಲಿಸಿತು. ಜಡವಾದ ದೇಹದಲ್ಲಿ ನಾನೆಂಬ ಜ್ಞಾನ ಉಂಟಾಗುವಂತೆ ಅವನ ವೃತ್ತಾಂತದಲ್ಲಿ ನನ್ನದೆಂಬ ಜ್ಞಾನವು ನಿನಗೆ ಉಂಟಾಯಿತು. ಒಂದರಲ್ಲಿ ಮತ್ತೊಂದು ಜ್ಞಾನವುಂಟಾಗುವದೇ ಮಾಯಾಸ್ವರೂಪವು. ಸ್ವಪ್ನದಲ್ಲಿ ಪ್ರಪಂಚವಂ ಕಾಣುವಂತೆಯೇ ಜಾಗ್ರದಲ್ಲಿಯೂ ಮನವು ಪ್ರಪಂಚವಂ ಕಾಣುವದು. ಹಿಂದಕ್ಕೆ ಆದದ್ದು ಮುಂದಕ್ಕೆ ಆಗುವಂಥಾದ್ದು ಈಗಾಗುವದು ಸಹ ಕಾಲ ದೇಶ ವ್ಯತ್ಯಾಸದಿಂದ ಮನಸ್ಸಿಗೆ ಗೋಚರವಾಗುವದು. ಮನವು ಮಾಯಿಕವಾದ್ದರಿಂದ ಕಾಲ ದೇಶೋಚಿತವಾಗಿ ನಿಲ್ಲದೆ ಸುಳ್ಳನ್ನು ಸತ್ಯವಾಗಿಯೂ, ಸತ್ಯವನ್ನು ಸುಳ್ಳಾಗಿಯೂ, ಸಾಧುವಂ ದುಷ್ಟವಾಗಿಯೂ, ದುಷ್ಟವಂ ಸಾಧುವಾಗಿಯೂ, ವಿಚಿತ್ರವಾಗಿ ಭಾವಿಸುತ್ತಾ ಭಾವನಾನುಸಾರವಾಗಿ ಫಲವನ್ನು ಅನುಭವಿಸುವದು. ಇಲ್ಲಿ ಆತ್ಮಜ್ಞಾನವಿಲ್ಲದವನೇ ಇವನು ಅವನು ನಾನೆಂಬುದಾಗಿ ಮಾಯಾವಿಲಾಸದಿಂ ಭ್ರಮಿಸುತ್ತಿರುವನು. ಜ್ಞಾನಿಯಾದರೋ ಸರ್ವ ವ್ಯವಹಾರಕ್ಕೂ ಮೂಲವಾದ ನಾನೆಂಬ ಶಬ್ದವು ಸರ್ವವ್ಯಾಪಕವಾದ ಚೈತನ್ಯದಿಂದಾಗೀಕರಿಸಲ್ಪಟ್ಟಿರುವದ್ದರಿಂದ ನಾನೆಂಬ ಮಾತಿಗೆ ಪರಮಾತ್ಮನೇ ಗೋಚರನಾಗುವನು. ಅದರಿಂ ನಾನೇ ಸರ್ವಸ್ವರೂಪನೆಂಬ ಮಾತು ಯುಕ್ತವಾಗುವದು. ಸರ್ವಸ್ವರೂಪನಾಗಿ ಪರಮಾತ್ಮನೇ ಪ್ರಕಾಶಿಸುತ್ತಿರುವಲ್ಲಿ ಇವನು ಅವನು ನಾನು ನೀನೆಂಬ ಮಾತುಗಳಿಗೆ ಅವಕಾಶವೇನಿರುವದೆಂದು ನಿಶ್ಚಯಿಸಿ, ಸರ್ವಾತ್ಮಭಾವದಿಂ ಸರ್ವವೂ ತಾನೆಂದು ಪರಿಭಾವಿಸುತ್ತಾ ಪದಾರ್ಥವಿಭಾಗವಂ ಪರಿಗ್ರಹಿಸುವದಿಲ್ಲವಾದ್ದರಿಂದ ಸಂಸಾರ ಸಮುದ್ರದಲ್ಲಿ ಮುಳಗಿದ್ದರೂ ನೀರೇಕಾಯಿಯಂತೆ ಮುಳುಗದಿರುವನು. ನಿನ್ನ ಮನವು ವಾಸನಾ ಸಮೂಹವೆಂಬ ಬಲೆಗೆ ಸಿಗಲಿಕೊಂಡಿರುವದ್ದರಿಂದ ಬಾಹ್ಯಸಂಸಾರವಿಲ್ಲದವನಾದಾಗ್ಯೂ ರೋಗಕ್ಕೀಡಾಗಿರುವನಂತೆ ಬಳಲುತಲಿದ್ದೀಯೆ:— ಪೂರ್ಣ ಜ್ಞಾನವಿಲ್ಲದವನಾದ್ದರಿಂದ ಮನೋಭ್ರಮೆಯಂ ತಡೆಯಲು ಸಮರ್ಥನಾಗದೇ ಅದರಿಂದಲೇ ಆಕ್ರಮಿಸಲ್ಪಡುತಲಿದ್ದೀಯೇ? ಯಾವನು ಮಾಯಾಚಕ್ರಕ್ಕೆ ನಾಭಿಯಾದ ಮನವಂ ಪಿಡಿದು ನಿಲ್ಲುವನೋ ಅವನು ಮಾಯಾಚಕ್ರದ ಪೆಟ್ಟಿಗೆ ಸಿಕ್ಕದೆ ಸ್ವಸ್ಥನಾಗಿರುವನು. ಈ ನಿಂಬು ಲತಾಗೃಹದಲ್ಲಿ ನೀನು ನಿಂದು ಪೆಸ್ಸ್ರವ ...

ಮನೋನಿರೋಧವನ್ನಭ್ಯಾಸವಂ ಮಾಡುವೆಯಾದರೆ ಅಖಂಡವಾದ ಜ್ಞಾನವಂ ಪಡೆಯುತ್ತೀ? ಎಂದು ನಾರಾಯಣನು ಪೇಳಿ ಅಂತರ್ಧಾನವಾಗಲು ಶರತ್ಕಾಲದ ಮೇಘದಂತೆ ಕರ್ಮ ವೈರಾಗ್ಯವಂ ಪಡೆದ ಗಾಧಿಯು ಋಶ್ಯಮೂಕ ಪರ್ವತವಂ ಸೇರಿ ಸಮಸ್ತ ಸಂಕಲ್ಪಗಳಿಂ ವರ್ಜಿತವಾಗಿರುವ ಮನೋನಿರೋಧ ರೂಪವಾದ ತಪವನ್ನಲ್ಲಿ ಮಾಡುತ್ತಾ ಹತ್ತುವರ್ಷಕ್ಕೆ ಆತ್ಮಜ್ಞಾನದಿಂ ಸ್ವಸ್ವರೂಪ ಸ್ಥಿತಿಯಂ ಪಡೆದು ಭೋಗ ಭೂಮಿಯೊಳ್ ರಾಗದ್ವೇಷ ಭಯ ಶೋಕ ಮೋಹರಹಿತವಾದ ಜೀವನ್ಮುಕ್ತ ಸ್ಥಿತಿಯಂ ಕಳಂಕವಿಲ್ಲದ ಪೂರ್ಣ ಚಂದ್ರನಂತೆ ಶಾಂತನಾಗಿದ್ದನೆಂದು ವಸಿಷ್ಠನು ನಿರೂಪಿಸಿದನೆಂಬಲ್ಲಿಗೆ;—ಜ್ಞಾನಯೋಗ ತರಂಗಿಣಿಯಲ್ಲಿ ಉಪಶಮನ ಪ್ರಕರಣದೊಳ್ಗಾಧಿ ವೃತ್ತಾಂತ ನಿರೂಪಣವೆಂಬ, ಒಂಭತ್ತನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀಃ.

---

ಶ್ರೀ ನೃಸಿಂಹಾಯ ನಮೋನಮಃ.

ಉದ್ದಾಲಕೋಪಾಖ್ಯಾನ ನಿರೂಪಣ ಪ್ರಾರಂಭವು.

ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನಿಂತೆಂದನು:—ಎಲೈ ಶ್ರೀರಾಮಭದ್ರನೇ! ಗಾಧಿಯು ನೀರಿನಲ್ಲಿದ್ದ ಮುಹೂರ್ತದ್ವಯವೆಲ್ಲಿ? ಅನೇಕ ವರ್ಷಗಳಿಂದನುಭವಿಸಲ್ಪಟ್ಟ ಶ್ವಪಾಕಕ್ರಮವೆಲ್ಲಿ? ಸುಳ್ಳೆಂದು ನಿರ್ಣಯವಾಗಿ ತೋರುವ ಮನೋಭ್ರಮೆಯೆಲ್ಲಿ? ಪ್ರತ್ಯಕ್ಷ ನಿದರ್ಶನವಾಗಿ ಕಾಣುವ ಸ್ವಾನುಭವವೆಲ್ಲಿ? ಸತ್ಯವೆಂಬುವದು ಸ್ವರೂಪ ಹಾನಿಯಿಂದೆಲ್ಲಿಗೋ ಪೋದುದು. ಅಸತ್ಯಕ್ಕೆ ಘನತರವಾದ ಸ್ವರೂಪ ಉಂಟಾದುದು. ಇಂಥಾ ವಿಷಮವಾದ ಪರಮಾತ್ಮನ ಮಾಯೆಯು ಸ್ವಸಂಬಂಧಿಯಾದ ಅಜ್ಞಾನ ವಿಲಾಸವಿರುವವರಿಗೆ ಎಂಥಾವನನ್ನೂ ದುಃಖಪಡಿಸದೆ ಬಿಡಲಾರದಾದ್ದರಿಂದ, ಮಾಯಾ ಸಂಬಂಧಿಯಾದ ಮನವಂ ನಿಗ್ರಹಿಸಬೇಕೆಂದು ಬಾರಿಬಾರಿಗೂ ಪೇಳುತ್ತಿರುವೆನು. ಮಾಯಾಮಯವಾದ ಸಂಸಾರ ಚಕ್ರಕ್ಕೆ ಮನವೇ ನಾಭಿಯಾದ್ದರಿಂದ ಅದಂ ದೃಢವಾಗಿ ಪಿಡಿಯಲು, ಆ ಚಕ್ರದ ತಿರುಗಾಟ ನಿಲ್ಲುವದು. ತರ್ಜನಿಯಲ್ಲಿರುವ ದಾರವಂ ತಡೆಯದೆ ಚಕ್ರದ ಆಟವು ಹೇಗೆ ನಿಲ್ಲುವದೋ ಹಾಗೆ ಮನವಂ ನಿಲ್ಲಿಸದೆ ಸಂಸಾರ ದುಃಖವು ತಪ್ಪದಾದ್ದರಿಂದ ತೀರ್ಥದಾನ ತಪಃಕರ್ಮಾದಿ ಭ್ರಾಂತಿಗಳೆಲ್ಲವನ್ನೂ ಬಿಟ್ಟು ಚಿತ್ತವಂ ತಡೆಯುವನಾಗು. ಕುಂಭದಲ್ಲಿ ಆಕಾಶದಂತೆ ಚಿತ್ತದಲ್ಲೇ ಸಂಸಾರವಿರುವದಾದ್ದರಿಂದ

ಚಿತ್ತನಾಶವಾಗದೆ ಸಂಸಾರ ಪೋಗದೆಂದು ನಿಶ್ಚಯಿಸಿ, ಸ್ವರೂಪ ವಿಚಾರದಿಂ ಚಿತ್ತವಂ ಹುಟ್ಟುಗೆಡಿಸಿ ಸ್ವರೂಪ ಸ್ಥಿತಿಯಂ ಪಡೆಯುವನಾಗು. ಹಿಂದು ಮುಂದಿನ ಆಲೋಚನೆಯಂ ಬಿಟ್ಟು ಸಿದ್ಧವಾಗಿರುವದನ್ನೇ ಹಿಡಿಯಲು ಚಿತ್ತಕ್ಕೆ ಸ್ವರೂಪ ಪ್ರಾಪ್ತಿಯಾಗುವದು. ಮುಂದೆ ಬರತಕ್ಕ ವಿಷಯಗಳ ಸಂಕಲ್ಪವನ್ನು ಅದರ ಅನುಸಂಧಾನವನ್ನೂ ಸಹ ಬಿಡಲು ಶ್ರೇಯಸ್ಸಾಗುವದಾದ್ದರಿಂದ ಸಂಕಲ್ಪ ಉಂಟಾಗದಂತೆ ಸ್ವರೂಪಸ್ಥಿತಿಯನ್ನಭ್ಯಾಸಂ ಮಾಡುವನಾಗು. ಬ್ರಹ್ಮೇತರವೊಂದು ದೃಶ್ಯಪದಾರ್ಥದಲ್ಲಿ ಜ್ಞಾನ ಉಂಟಾಗುವದೇ ಸಂಕಲ್ಪವೆನಿಸುವದು. ಇದರ ಕಲ್ಪನೆ ಎಂಬ ಮೇಘವಿರುವವರಿಗೆ ಮನೋವಿಲಾಸವೆಂಬ ಮಳೆ ಜಡಿಯು ತಪ್ಪದಾದ್ದರಿಂದ ದೃಶ್ಯವೆಲ್ಲವನ್ನೂ ಬ್ರಹ್ಮದ ಅಖಂಡಭಾವ ವಿಚಾರದಿಂ ಬ್ರಹ್ಮವೆಂತಲೇ ನಿಶ್ಚಯಿಸಬೇಕು. ಈರೀತಿಯಿಂ ಸಂಕಲ್ಪ ಕಲ್ಪನೆಗಳು ತಪ್ಪುವಲ್ಲಿ ಚಿತ್ತಕ್ಕೆ ಸ್ವರೂಪವೇ ಸ್ಪಷ್ಟವಾಗುವದು. ಚಂದ್ರಕಿರಣವಿರುವವರಿಗೆ ಶೈತ್ಯಬಾಧೆ ತಪ್ಪದಿರುವಂತೆ ಚಿತ್ತವಿರುವವರಿಗೆ ಚೈತನ್ಯಕ್ಕೆ ಸಂಕಲ್ಪಬಾಧೆ ತಪ್ಪದು. ಬ್ರಹ್ಮಭೇದ ಜ್ಞಾನದಿಂ ತಾನೇ ಸರ್ವಸ್ವರೂಪನಾಗಿರುವನೆಂದು ಭಾವಿಸುವಲ್ಲಿ, ಸಂಸಾರ ಬೀಜವಾದ ಕಾಮಕರ್ಮವಾಸನಾದಿಗಳು ಭಸ್ಮವಾಗಿ ಅಖಂಡವಾದ ಚೈತನ್ಯ ಒಂದೇ ಪ್ರಕಾಶಿಸುವದು. ಅಮನಸ್ಕವಾದ ಆ ಸುಖಸ್ಥಿತಿಯೇ ಪರಮಾರ್ಥವೆಂತಲೂ, ಪರಮಾತ್ಮ ಸ್ವರೂಪವೆಂತಲೂ, ಪರಮ ಶ್ರೇಯಸ್ಸೆಂತಲೂ, ಸರ್ವಜ್ಞತೆಯೆಂತಲೂ, ಅಖಂಡ ದೃಷ್ಟಿಯೆಂತಲೂ ಹೇಳಲ್ಪಡುವುದು. ಸಂಕಲ್ಪರೂಪವಾದ ಮನವೆಲ್ಲಿರುವದೋ ಅಲ್ಲಿ ಸ್ಮಶಾನದಲ್ಲಿ ಕಾಗೆಗಳಂತೆ ಆಶಾ ಸುಖದುಃಖಗಳೆಲ್ಲವೂ ಸಿದ್ಧವಾಗುವವು. ಜ್ಞಾನಿಗಳಿಗೆ ಮನವಿದ್ದಾಗ್ಯೂ ತತ್ವಜ್ಞಾನದಿಂದವರಿಗೆ ಸರ್ವಾತ್ಮಭಾವವಿರುವದ್ದರಿಂದ, ಸಂಸಾರ ಬೀಜವಾದ ಸಂಕಲ್ಪವುಂಟಾಗುವದಿಲ್ಲ. ಶಾಸ್ತ್ರವಿಚಾರ ಸಜ್ಜನಸಂಗ ಸಾರ್ವಕಾಲಿಕ ಬ್ರಹ್ಮಾಭ್ಯಾಸಗಳಿಂದಲೇ ಜಗತ್ತಿನ ಭಾವಾಭಾವಾದಿ ವಿಕಾರಗಳು ಕಲ್ಪಿತವೆಂದು ಕಾಣತಕ್ಕಂಥಾದ್ದರಿಂದ ಬಲಾತ್ಕಾರದಿಂದ ಅವಿವೇಕವಂ ತಪ್ಪಿಸಿ, ಶಾಸ್ತ್ರವಿಚಾರಾದಿಗಳಲ್ಲಿ ಮನವಂ ನಿಲ್ಲಿಸಬೇಕು. ಮುಂದಕ್ಕೆ ಎಂಥಾ ಜನ್ಮ ಬರುವದೋ ತಿಳಿಯಲಶಕ್ಯವಾಗಿದೆಯಾದ್ದರಿಂದೀ ಜನ್ಮದಲ್ಲೇ ನಾನು ಕೃತಾರ್ಥನಾಗಬೇಕೆಂದು ನಿಶ್ಚೈಸಿ, ಚಿತ್ತಕ್ಕೆ ಅವಿವೇಕ ಸಂಗತಿಯಂ ತಪ್ಪಿಸಬೇಕು. ರತ್ನದ ಶೋಧಕನೇ ನೋಡಿಯೆ ರತ್ನವಂ ತಿಳಿಯಬೇಕಾದ್ದರಿಂದ, ಆತ್ಮಜ್ಞಾನಕ್ಕೆ ಆತ್ಮನೇ ಮುಖ್ಯಕಾರಣನಾಗುವನು. ಇತರ ಸಹಾಯವೆಷ್ಟಿದ್ದರೂ ತನ್ನ ದುಃಖವಂ ಪರಿಹರಿಸಿಕೊಳ್ಳುವದಕ್ಕೆ ತಾನೇ ನಿಲ್ಲಬೇಕಾದ್ದರಿಂದ, ಶ್ವಾಸ ನಿಶ್ವಾಸ ನಿಮೇಷೋನ್ಮೇಷ ಮೊದ

ಲಾದ ಸಮಸ್ತ ವ್ಯಾಪಾರಗಳಲ್ಲೂ ಪರಮಾತ್ಮನ ಮಹಿಮೆಯನ್ನೇ ಪರಿಭಾವಿಸುತ್ತಾ ನಾನು ನೀನು ಅವನು ಇವನು ನನ್ನದು ಇವನದು ಅವನದೆಂಬುವದೇ ಮೊದಲಾದ ಭೇದವಂ ಭಾವಿಸದಿರುವನಾಗು. ಹಿಂದಿನ ಕಥೆಯನ್ನಾಲೋಚಿಸದೆ ಮುಂದಕ್ಕೇನು ಗತಿಯೆಂದು ಭಯವಂ ತಾಳಿ ಚಿಜ್ಜಡಭಾವಗಳಿಂದಲೂ ನಿತ್ಯಾನಿತ್ಯಭಾವಗಳಿಂದಲೂ ದೇಹಕ್ಕೂ ನನಿಗೂ ಸಂಬಂಧವೇನೆಂಬಾಲೋಚನೆಯಿಂ ದೇಹ ನಾನೆಂಬ ಬುದ್ಧಿಯನ್ನು ಇದೇಪ್ರಕಾರ ಪ್ರಕೃತಿ ಗುಣಾಂತವಾದ ಜಡಪದಾರ್ಥಗಳಲ್ಲಿ ಆತ್ಮಭಾವನೆಯಂ ಸಹ ಬಿಟ್ಟು ಚಿನ್ಮಾತ್ರವಾದ ಸ್ವರೂಪದ ವಿಚಾರದಲ್ಲೆ ನೀನು ನಿಲ್ಲಲು ನಿನಗೆ ಅಖಂಡವಾದ ಜ್ಞಾನವು ತಾನಾಗಿ ಸಂಭವಿಸುವದು. ಈಗ ಬಾಲ್ಯದಲ್ಲೂ ಮುಂದೆ ಬರುವ ಯೌವ್ವನ ರಾಜ್ಯಾಧಿಪತ್ಯಗಳಲ್ಲೂ ಇದರ ಸುಖದುಃಖಗಳಲ್ಲೂ ಬಾಹ್ಯದೃಷ್ಟಿಯಂ ಪಸರಿಸುವ ಮನವಂ ನಿಗ್ರಹಿಸಿ ಶುಭಾಶುಭಗಳಲ್ಲಿ ನಿನ್ನ ದೃಷ್ಟಿ ಇಲ್ಲದ್ದರಿಂ ಶಾಂತವಾದ ಆಸೆಯುಳ್ಳವನಾಗಿ ಕರ್ತೃ ಕರಣ ಕಾರ್ಯಗಳಲ್ಲಿ ಕನ್ನಡಿಯಲ್ಲಿ ಪದಾರ್ಥಗಳು ಪ್ರತಿಬಿಂಬಿಸುವಂತೆಯೇ ಸಂಸಾರಗಳು ತನ್ನಲ್ಲಿ ಸಂಬಂಧಿಸಿರುವುವಲ್ಲದೆ ನಿತ್ಯಾನಿತ್ಯ ಚಿಜ್ಜಡ ಸತ್ಯಾಸತ್ಯ ರೂಪಗಳಾದ ತನಿಗೂ ಅವುಗಳಿಗೂ ಸಂಬಂಧವೇನೂ ಇಲ್ಲವೆಂದು ನಿಶ್ಚಯಿಸಿ ನಿರಾಲಂಬ ನಿರ್ವಿಕಲ್ಪ ಚಿನ್ಮಾತ್ರಸ್ವರೂಪನಾದ ಆತ್ಮನಲ್ಲೆ ದೃಷ್ಟಿಯಂ ನಿಲ್ಲಿಸುವನಾಗು. ಜಾಗರೂಕನಾಗಿ ಚೈತನ್ಯದ ಮಹಿಮೆಯಂ ನೋಡುತ್ತಾ ಬಾಹ್ಯವಿಷಯ ವ್ಯಾಪಾರಗಳಲ್ಲಿದ್ದಾಗ್ಯೂ ಸರ್ವವು ಆತ್ಮನೆಂದು ತತ್ವಾರ್ಥವಂ ಚಿಂತಿಸುವದ್ದರಿಂದ ಸುಪ್ತನಂತೆ ನೀನು ನಿರ್ಲೇಪನಾಗುತ್ತೀಯೆ ಚಿನ್ಮಾತ್ರದೃಷ್ಟಿಯಿಂದಾತ್ಮಾನಾತ್ಮ ವಿಭಾಗವಂ ತ್ಯಜಿಸಿರುವ ನಿನಗೆ ಕಾಲಕೂಟವಿಷವೂ ಕೂಡ ಅಮೃತವಾಗುವದು. ಶುದ್ಧಿವಿಶೇಷಗಳಿಂ ನಿರ್ದೋಷವಾಗಿ ಮಾಡಲ್ಪಟ್ಟ ವಿಷವು ಅಮೃತವಾಗುವಂತೆ ಸರ್ವಾತ್ಮಭಾವದಿಂದಿರುವ ನಿನಗೆ ದುಃಖಾತ್ಮಕವಾದ ಸಂಸಾರವು ಕೂಡ ನಿತ್ಯ ಸುಖಸ್ವರೂಪವಾಗುವದು. ಸರ್ವಾತ್ಮಭಾವಕ್ಕೆ ಚ್ಯುತಿಯಾದೊಡನೆಯೇ ತೇಜವು ಮರೆಯಾದೊಡನೆ ಕತ್ತಲೆಯಂತೆ ಸಕಲ ಸಂಸಾರ ಕಾರಣವಾದ ಮೋಹವುಂಟಾಗುವದು. ಚಿನ್ಮಾತ್ರ ದೃಷ್ಟಿಯಿಂ ಸ್ವಸ್ವರೂಪ ಸ್ಥಿತಿಯುಂಟಾದ ಕೂಡಲೆ ಸೂರ್ಯಮಂಡಲದಿಂ ಕಿರಣಸಮೂಹದಂತೆ ಸರ್ವಾತ್ಮಭಾವವು ಪಸರಿಸುವದು. ಯೋಗ್ಯತೆಯಿದ್ದಾಗ್ಯೂ ಸರ್ವಾತ್ಮಭಾವವಂ ಪಡೆಯದಿರುವ ಜನಗಳು ದೀರ್ಘಬಾಹುಗಳಾದ ಕತ್ತೆಗಳಂತಲೇ ಹೇಳಲ್ಪಡುವರು. ಸರ್ವಾತ್ಮಜ್ಞಾನಿಯು ಸರ್ವಾತ್ಮನಾದ್ದರಿಂದ ನೀರುಣಿಸುವರಿಗೆ ಮಣ್ಣು ದಿಣ್ಣೆಗಳಂ ಪೊಂದುವ ಆನೆಗಳಂತೆ ಈ ಜ್ಞಾನಿಯು

ಎಮುರಿಗೆ ಇತರ ಮತದವರು ವಿಶ್ರಾಂತಿಯಿಲ್ಲದೆ ಅಲೆಯುತ್ತಿರುವರು. ಸೂರ್ಯನಿಗೆ ದೀಪಗಳಂತೆ ಸೂರ್ಯಾದಿ ತೇಜಗಳು ಆ ಪರಮಹಿಮನಾದ ಜ್ಞಾನಿಗೆ ಉಪಕರಿಸಲಾರವು ಈ ಸೂರ್ಯಾದಿ ತೇಜಗಳು ಯಾವನ ತೇಜದಿಂ ಪ್ರಕಾಶಿಸುವವೋ ಆ ತೇಜೋನಿಧಿಯಂ ತಿಳಿದ ಪುರುಷನು ಮಹಾಕಾಶವಂ ಪೊಂದಿದ ಘಟಾಕಾಶದಂತೆ ಸರ್ವವ್ಯಾಪಕನಾಗಿ ಆ ಪರಮಾತ್ಮನಂತೆಯೇ ಪ್ರಕಾಶಿಸುವನು. ಅವನಂ ತಿಳಿಯದ ಪುರುಷನು ಭೂಮಿಯ ಬಿಲದಲ್ಲಿರುವ ಕುರುಡ ಹುಳುವಿಗಿಂತಲೂ ಕಡೆಯೆನಿಸುವನು. ಬದುಕಿರುವರನ್ನೂ ಕೂಡ ಹೆಣವೆನಿಸುವ ಅಜ್ಞಾನ ಪಿಶಾಚಕ್ಕೆ ಜ್ಞಾನ ಮಂತ್ರೋಪದೇಶವಾದೊಡನೆಯೇ ಜಂಘಾಬಲ ತಪ್ಪುವದಾದ್ದರಿಂದ ಓಡಿಹೋಗಲಾರದೆ ಚಿತ್ತವನ್ನಾಶ್ರಯಿಸಿ ಭೋಗ ಭಾವನೆಯನ್ನುಂಟುಮಾಡುತ್ತಾ, ಸ್ವಚೈತನ್ಯವಂ ಪಡೆಯುವದಾದ್ದರಿಂದ ಬುದ್ಧಿಶಾಲಿಯಾದವನು ಭೋಗ ತಿರಸ್ಕಾರದಿಂ ಮನಕ್ಕೆ ಮನನ ವ್ಯಾಪಾರವಂ ತಪ್ಪಿಸಿ, ಆತ್ಮಜ್ಞಾನದ ಅಭ್ಯಾಸದಲ್ಲೇ ನಿಲ್ಲಲು, ನಿರಾವರಣ ಮಣಿದೀಪ ಪ್ರಕಾಶದಿಂ ಅಂಧಕಾರದಂತೆ ಜ್ಞಾನಸ್ವರೂಪನಾದ ಆತ್ಮನ ಪ್ರಕಾಶದಿಂದ ಜ್ಞಾನಸ್ವರೂಪನಾದ ಆತ್ಮನ ಪ್ರಕಾಶದಿಂದ ಅಜ್ಞಾನ ಪಿಶಾಚವಲ್ಲೇ ನಷ್ಟವಾಗುವದು. ಜಡವಾದ ಅಂತಃಕರಣಾದಿಗಳಲ್ಲಿ ಆತ್ಮಭಾವನೆಯಿಂದುದಿಸಿದ ಅಹಂಕಾರ ವಿಕಾರದಿಂದಲೂ ಇದು ನನ್ನದೆಂಬ ಮಮಕಾರ ಮಂದಕ್ರೀಡೆಯಿಂದಲೂ, ಅಭಿಮಾನ ವಿಷಯವಾದ ದೇಹಾದಿಗಳ ದುಃಖಾಲೋಚನೆಯಿಂದಲೂ, ಇದು ಗ್ರಾಹ್ಯವಿದು ತ್ಯಾಜ್ಯವೆಂಬ ವಿಚಾರದಿಂದಲೂ, ಇದು ಮನೋಹರವೆಂಬ ರಾಗದಿಂದಲೂ, ಇದು ಕಾರ್ಯಕಾರಿಯಲ್ಲವೆಂಬ ದ್ವೇಷದಿಂದಲೂ, ಇದು ಹೋದರೆ ನನಗೇನು ಗತಿ ಎಂಬ ಲೋಭದಿಂದಲೂ, ಭೋಗ ವಿಷಯಗಳ ಲಾಭದಿಂದಲೂ, ಅವುಗಳ ಸೇವನೆಯಿಂದಲೂ ಮನವು ವೃದ್ಧಿಯಂ ಪಡೆಯುವದು. ಶರೀರ ಬಿಲದಲ್ಲಿ ಪುಟ್ಟಿ ಕಾಮಭೋಗ ಚಿಂತೆಗಳೆಂಬ ಪೂಗುತ್ತಿಗಳಿಂದಲೂ, ಸಂಕಲ್ಪ ವಿಕಲ್ಪಗಳೆಂಬ ಪತ್ರಗಳಿಂದಲೂ, ಆಶೆಗಳೆಂಬ ಕೊಂಬೆಗಳಿಂದಲೂ, ಜರಾ ಮೃತ್ಯುಗಳೆಂಬ ಫಲಗಳಿಂದಲೂ ಕೂಡಿಕೊಂಡು ಬೆಟ್ಟದಂತೆ ಬೆಳದಿರುವ ವಿಚಿತ್ರ ಪ್ರಕಾಶವಾದ ಮನವೆಂಬ ವಿಷವೃಕ್ಷವಂ ವಿಚಾರವೆಂಬ ಗರಗಸದಿಂ ಕತ್ತರಿಸುವನಾಗು. ಎಲೈ ರಘುವೀರನೇ! ಶರೀರವೆಂಬ ಅರಣ್ಯದಲ್ಲಿ ಬಹಿರ್ಮುಖ ಭಾವವೆಂಬ ಗಟ್ಟಿಸಲ್ಲಿರುತ್ತಾ, ಮದಸ್ರವಾದಗಳೆಂಬ ನೇತ್ರಗಳಿಂದಲೂ, ಸುಖ ದುಃಖಗಳೆಂಬ ಗಂಡಸ್ಥಲಗಳಿಂದಲೂ, ಭಾವನೆಎಂಬ ಸೊಂಡಿಲಿನಿಂದಲೂ, ಸಂಕಲ್ಪ ವಿಕಲ್ಪಗಳೆಂಬ ಕುಂಭಗಳಿಂದಲೂ, ಸಾ

ಸ್ತ್ರವಾಕ್ಯಗಳು ಶ್ರವಣೇಂದ್ರಿಯವಂ ಹೊಂದದಂತೆ ಬೀಸುತ್ತಿರುವ ಕಿವಿಗಳಿಂದಲೂ, ಆಶೆಯೆಂಬ ಹೊಟ್ಟೆಯಿಂದಲೂ, ಉಚ್ಚನೀಚ ಶುಭಾಶುಭ ಕರ್ಮಗಳೆಂಬ ಕಾಲ್ಗಳಿಂದಲೂ, ಕೂಡಿ ಅವಿಚಾರವೆಂಬ ಬಾಲವಂ ಬೀಸುತ್ತಾ. ಸದ್ಗುಣಗಳೆಂಬ ಕಮಲಗಳಂ ಕೀಳುತ್ತಲೂ, ವಿಶ್ರಾಂತಿ ಗಂಧವಿಲ್ಲದೆ ಅತಿ ಭಯಂಕರವಾಗಿ ಮೆರೆಯುವ ಮನವೆಂಬ ಮದ್ದಾನೆಯಂ ತೀಕ್ಷ್ಣವಾದ ಪ್ರಜ್ಞೆಯೆಂಬ ನಖಪಙ್ಕ್ತಿಯಿಂ ಸೀಳುವೆಯಾದರೆ ನೀನೆ ರಾಜಸಿಂಹನೆನಿಸಿಕೊಳ್ಳುತ್ತೀಯೆ ? ಅನೇಕ ಶರೀರಗಳ ಮಾಂಸವಂ ತಿನ್ನುತ್ತಲೂ, ಶೂನ್ಯವಾದವೆಂಬ ಸ್ಮಶಾನಕ್ಕೂ ಉಚ್ಛಿಷ್ಟವಾದ ಭೋಗ ವಿಷಯಕ್ಕೂ ಕೂಡ ಆಶಿಸುತ್ತಲೂ, ಶುಭಾಶುಭ ಕರ್ಮಗಳಿಂ ಕ್ರೂರವಾದ ಮೂರ್ತಿಯಿಂದಲೂ, ಭೋಗವೇ ಮುಖ್ಯವೆಂಬ ಒಂಟಿ ಕಣ್ಣಿನಿಂದಲೂ, ಸಂಶಯ ವಿಪರ್ಯಯವೆಂಬ ಕಾಲ್ಗಳಿಂದಲೂ, ಸಂಕಲ್ಪ ವಿಕಲ್ಪಗಳೆಂಬ ರೆಕ್ಕೆಗಳಿಂದಲೂ, ಅವಿಚಾರವೆಂಬ ಪುಚ್ಛದಿಂದಲೂ, ಕೂಡಿ ಅಜ್ಞಾನದ ಮೂರ್ತಿಯೋ ! ಎಂಬಂತೆ ಅತ್ಯಂತ ಕಪ್ಪಾಗಿ ಕಲ್ಪನೆಗಳಿಂ ಹಾರಾಡುತ್ತಲೂ, ದುರಾಲೋಚನೆಗಳಿಂ ಕಟುವಾಗಿ ಕೂಗುತ್ತಲೂ ಮೆರೆಯುತ್ತಿರುವ ಮನವೆಂಬ ಕಾಗೆಯಂ ನೀನು ಕಾಯವೆಂಬ ವೃಕ್ಷದಿಂ ಹೊರಡಿಸದಿರಲು, ಸಜ್ಜನರೆಂಬ ಕೋಗಿಲೆಗಳು ಬಂದು ಸೇರಲಾರವು. ಎಲೈ ರಾಮಚಂದ್ರನೇ ! ಸಂಸಾರವೆಂಬ ಅರಣ್ಯದಲ್ಲಿ ಆಶೆಯೆಂಬ ಕಾಮಿನಿಯೊಡನೆ ದೇಹಗಳೆಂಬ ವೃಕ್ಷಗಳೊಳ್ ಅನೇಕ ಪ್ರಕಾರದಿಂ ಹಾರಾಡಿ ಅಜ್ಞಾನವೆಂಬ ಪಾಳು ಹಳ್ಳದೊಳ್ ವಿಶ್ರಾಂತಿಯಂ ಪಡೆಯುತ್ತಿರುವ ಮನವೆಂಬ ಪಿಶಾಚವಂ ವಿವೇಕ ವೈರಾಗ್ಯ ಮಂತ್ರಗಳಿಂದೋಡಿಸದೆ ಯಾರಿಗೂ ಆತ್ಮಸಿದ್ಧಿಯಾಗಲಾರದು. ಎಲೈ ದಾಶರಥಿಯೇ ! ಶುಭಾಶುಭಗಳೆಂಬ ಕೋರೆದಾಡೆಗಳಿಂದಲೂ, ಚಿಂತೆಯೆಂಬ ವಿಷದಿಂದಲೂ, ಮಾನವರಂ ಕೊಲ್ಲುತ್ತಾ ಕಾಯವೆಂಬ ಪರೆಯಂ ಬಿಡದೆ ಪ್ರಾಣಿಗಳ ಪ್ರಾಣವಾಯುಗಳಿಂ ಜೀವಿಸುತ್ತಾ, ಸಕಲ ಭಯಂಕರವಾಗಿ ಹೃದಯ ಬಿಲವಂ ಸೇರಿಕೊಂಡಿರುವ ಚಿತ್ತಸರ್ಪವಂ ತತ್ವಜ್ಞಾನ ಮಂತ್ರದಿಂ ಶಾಂತಿಯಂ ಹೊಂದಿಸಿ ಸುಖದಿಂದಿರುವನಾಗು. ಹದ್ದಿನಂತೆ ಅಚೇತನವಾದ ಶರೀರಗಳಂ ಪಿಡಿಯುತ್ತಾ ಮರ್ಕಟದಂತೆ ಚಪಲವಾಗಿ ಭುಜಗದಂತೆ ಭೋಗಾಶೆಯಂ ಬಿಡದೆ ವರ್ಷಾಕಾಲದ ಮೇಘದಂತೆ ಜಡಪಂಕವೃದ್ಧಿಕರವಾಗಿ ಕತ್ತಲೆಯ ಪಿಶಾಚದಂತೆ ಸಂಕಲ್ಪ ಸಿದ್ಧವಾಗಿ ಹೆಬ್ಬಾವಿನಂತೆ ಇಚ್ಛಾಮಾತ್ರದಿಂ ಭೋಗ ಪದಾರ್ಥಗಳಂ ಸೆಳಕೊಂಡು ಅನುಭವಿಸುತ್ತಾ ಭ್ರಾಂತಿಭೂತದಂತೆ ಅಜ್ಞಾನಮಯವಾಗಿ ಪರವಣಿಯಂತೆ ಕರ್ಮಗ್ರಂಥಿ ನಿಬಿಡವಾಗಿ ಮಂತ್ರಗಳಿಗೆ ಸಗ್ಗದೆ

ಯಜ್ಞೇಶ್ವರನಿಂ ತಪಿಸದೆ ತೀರ್ಥಗಳಿಂ ನೆನೆಯದೆ ಮಹಾಕರ್ಮಗಳಿಂ ಹಿಮ್ಮೆಟ್ಟದೆ ಸಂಕಲ್ಪ ಕಲ್ಪನಾ ಮಾತ್ರದಿಂ ಪರಿಪರಿಯಾದ ಪೀಡೆಗಳನ್ನುಂಟುಮಾಡುವ ಚಿತ್ತವೆಂಬ ಮಹಾಭೂತವಂ ವಿಚಾರಮಂತ್ರದಿಂದ ಹೃದಯದಿಂದೋಡಿಸಿ ಸರ್ವಾತ್ಮಭಾವದಿಂ ಯಥೇಚ್ಛವಾಗಿ ವಿಹರಿಸುವನಾಗು. ಎಲೈ ರಾಘವನೇ ! ಕತ್ತಿಯ ಹರತದಂತೆ ತೀಕ್ಷ್ಣವಾದ ಚಿತ್ತದ ವೃತ್ತಿಗೆ ಸಿಕ್ಕದೆ ಬಹುಕಾಲಕ್ಕೆ ಹೃದಯದೊಳಂಕುರಿಸಿದ ಬುದ್ಧಿಯೆಂಬ ಬಳ್ಳಿಯಂ ವಿವೇಕಜಲದಿಂ ಬೆಳಿಸುತ್ತಾ ನನ್ನ ವಾಕ್ಯದಲ್ಲಿ ನಿಲ್ಲುವೆಯಾದರೆ ಮೇಘಧ್ವನಿಯಿಂ ನವಿಲಿನಂತೆ ನೀನು ಸಂತೋಷಪಡುತ್ತೀಯೆ ? ಚಿತ್ತಶಾಂತಿಗೋಸುಗ ಉದ್ದಾಲಕನು ಮಾಡಿದ ಪಂಚಭೂತಲಯ ಕ್ರಮವಂ ಕೇಳುವನಾಗು ? ಈ ಭೂಮಂಡಲದೊಳ್ವಾಯವ್ಯ ದಿಕ್ಕಿನಲ್ಲೆರಡನೇ ಮೇರುವಿನಂತೆ ವಿಚಿತ್ರರತ್ನಮಯೋದ್ಯಾನ ಮನೋಹರವಾದ ಗಂಧಮಾದನವೆಂಬ ಪರ್ವತವಿರುವದು. ಅತಿ ಸರಳವಾದ ಫಲಕುಸುಮ ಛಾಯಾವೃಕ್ಷಗಳಿಂ ನಿಬಿಡವಾಗಿ ಹೆಜ್ಜೆ ಮುಳುಗುವಂತೆ ವೃಕ್ಷಗಳಿಂದುದುರಿರುವ ಪುಷ್ಪಗಳಿಂ ಸಾಂದ್ರವಾದ ಆ ಪರ್ವತದ ಬಾದು ದಡದೊಳ್ ಮಹಾ ತಪಸ್ವಿಯಾದ ಉದ್ದಾಲಕನೆಂಬ ಮುನಿಕುಮಾರನಿದ್ದನು. ಅವನಿಗೆ ಯೌವ್ವನೋದಯದಲ್ಲಿಯೇ ಶಾಸ್ತ್ರೀಯವಾದ ನಿಯಮಾಚಾರಗಳಿಂ ವಿವೇಕವುಂಟಾದುದು. ವಸಂತೋದಯದಿಂ ಉದ್ಯಾನದಂತೆ ವಿವೇಕ ವಿಚಾರದಿಂ ಶೋಭಿಸುವ ಆ ಮುನಿಯು ಜನ್ಮ ಪರಂಪರೆಗಳಿಂ ಕೂಡಿರುವ ಮಹಾ ಮೋಹಮಯವಾದ ಸಂಸಾರದ ರೀತಿಯ ಆಲೋಚನೆಯಿಂ ಭೀತನಾಗಿ ಒಂದಾನೊಂದು ಸಮಯದೊಳೇಕಾಂತದೊಳ್ ಕುಳಿತು ಚಿಂತಿಸಿದನದೆಂತೆನೆ:—ಯಾವದರ ಲಾಭದಿಂ ಪುನರ್ಜನ್ಮ ದುಃಖವಿಲ್ಲದೆ ಅಖಂಡಾನಂದದಲ್ಲಿ ವಿಶ್ರಾಂತಿಯಾಗುವದು ? ಮುಕ್ತಿಯಂ ಪಡೆಯಬೇಕೆಂದು ಶಾಸ್ತ್ರಜ್ಞರು ಹೇಳುವರಲ್ಲವೆ ಆ ಮುಕ್ತಿಯ ಸ್ವರೂಪವೇನು ? ಮೇರುಶಿಖರದಲ್ಲಿ ಮೇಘದಂತೆ ಯಾವಾಗ ನಾನು ಮನಸ್ಸಿನ ವ್ಯಾಪಾರಗಳಿಗೊಳಗಾಗದೆ ಸರ್ವೋತ್ತಮ ಸ್ಥಾನದಲ್ಲಿ ವಿಶ್ರಮಿಸಿಕೊಳ್ಳುವೆನು ? ಸಮುದ್ರದಲೆಗಳಂತಿರುವ ನನ್ನ ಭೋಗ ಭಾವನೆಗಳು ಯಾವಾಗ ಶಾಂತವಾಗುವವು ? ಇದಂ ಮಾಡಿ ಇದಂ ಮಾಡಬೇಕೆಂದು ಪರಂಪರೆಯಾಗಿ ಬರುವ ಬಾಹ್ಯ ಕಲ್ಪನೆಗಳಂ ಬಿಟ್ಟು ನನ್ನ ಬುದ್ಧಿ ಯಾವಾಗ ನಿರ್ವಾತದೀಪದಂತೆ ನಿಶ್ಚಲವಾಗುವದು ? ಗುಣಗುಣಿಗಳು ಕಾರ್ಯಕಾರಣಗಳು ಸಹ ಬೇರೆಯೆಂತಲೂ, ದೃಶ್ಯಗಳಲ್ಲಿಯು ಬೇರೆ ಅದು ಬೇರೆಯೆಂತಲೂ, ದೃಶ್ಯವು ಬೇರೆಯಾಗದಿರುವಲ್ಲಿ ದೃಕ್ಕಿಗೆ ಗೋಚರವಾಗುವದು ಹೇಗೆಂತಲೂ, ಪರಮಾರ್ಥವಾಗಿ ಭೋಗವಸ್ತುಗ

ಕೆಲ್ಲದೇ ಇವ್ವಲ್ಲಿ ಕಾಣ್ಬರುವದು ಹೇಗೆಂತಲೂ, ಇದರಲ್ಲಿ ಅದರ ಗುಣವಿಲ್ಲದಿರಲು, ಅವರಂತಿದು ಕಾಣುವದಕ್ಕೆ ಕಾರಣವೇನೆಂತಲೂ, ವಿಕಲ್ಪ ಸಮೂಹಗಳು ಕಮಲ ದಳದಲ್ಲಿ ಜಲಬಿಂದುಗಳಂತೆ ಯಾವಾಗ ನನ್ನ ಮನದಲ್ಲಿ ಸಂಬಂಧಿಸದಿದ್ದಾವು. ಯಾವದು ಬಂದರೂ ಸಾಲದೆ ಇದಾಗಬೇಕಿದಾಗಬೇಕೆಂಬ ತೆರೆಗಳಿಂದುನ್ಮರ್ಯಾದೆ ಯಾಗಿರುವ ಆಶೆಯೆಂಬ ನದಿಯಂ ನಾನು ಯಾವಾಗ ದಾಟುವೆನು ? ಪ್ರಜ್ಞೆಬಂದ ಬಾಲಕನಿಗೆ ಆಟಗಳಂತೆ ಯಾವಾಗ ನನಗೆ ಬಾಹ್ಯ ವ್ಯಾಪಾರಗಳು ತಪ್ಪುವವು ? ಪಿತ್ಥ ವಾತರೋಗಿಯ ಚಿತ್ತ ಭ್ರಮದಂತಿರುವ ವಿಕಲ್ಪಗಳಿಂದ ಮಹೋತ್ಸವವನ್ನ ನುಭವಿಸುವ ನನ್ನ ಮನವಾವಾಗ ಸ್ಥಿಮಿತವಾದೀತು ! ಬ್ರಹ್ಮಾಂಡ ಮಂಡಲಾಕಾ ರನಾದ ವಿರಾಟ್ಪುರುಷನಂತೆ ಅಖಂಡ ಜ್ಞಾನವುಳ್ಳ ನಾನು ಬಾಹ್ಯದೃಶ್ಯವಂ ಕಾಣದೆ ಅಂತರ್ದೃಷ್ಟಿಯಾಗಿ ಭ್ರಾಂತಿಯಿಂ ಬಹಿರ್ದೃಷ್ಟಿಗಳಾದ ಜನಗಳರೀತಿಯಂ ನೋಡಿ ಯಾವಾಗ ನಗುತಿದ್ದೇನು ? ಯಾವಾಗ ನಾನು ಆಶಾವೈಷಮ್ಯ ಸಂತಾಪ ವಿಕಾರಗಳಿಲ್ಲದೇ ತಣಿಯುವದು ? ನಿಂತ ಕಡಲಿನಂತೆ ಸ್ವಸ್ಥನಾಗಿರುವೆನು ? ಆಶಾ ಪಾಶಗಳಿಗೆ ತಗಲಿರುವ ದೃಶ್ಯ ಸಂಪತ್ತಿನ ವ್ಯಾಪಾರಗಳಿಗೆ ನಾನಾವಾಗ ಸಾಕ್ಷಿ ಯಂತಿರುವೆನು ? ಅಖಂಡ ಚಿನ್ಮಾತ್ರ ಜ್ಞಾನದಿಂದತಿ ಮಹತ್ವವಂ ಪಡೆದ ನಾನು ಯಾವಾಗ ಬಾಹ್ಯಾಂತರ ವಿಕಲ್ಪವಿಲ್ಲದೆ ಸರ್ವವನ್ನು ಚಿನ್ಮಾತ್ರವೆಂದು ನಿಶ್ಚಯಿಸು ವೆನು ? ಯಾವಾಗ ಬಾಹ್ಯಾಂತಃಕರಣ ವ್ಯಾಪಾರ ವಿಕಾರಗಳಿಲ್ಲದೆ ಶಾಂತನಾಗಿ ರುವ ನನಗೆ ನಿರ್ಮಲವಾದ ಜ್ಞಾನದೃಷ್ಟಿಯುಂಟಾದೀತು ? ಯಾವಾಗ ನಾನು ವಿವೇಕ ವಿಚಾರಾಭ್ಯಾಸದಿಂ ಸರ್ವತತ್ವ ಸಾಕ್ಷಿಯಾದ ಸ್ವರೂಪದ ಜ್ಞಾನದಲ್ಲಿ ನಿಂದು ಬಹು ದೂರವಾದ ಮೃತ್ಯುವಿನ ವಿಲಾಸವನ್ನತ್ಯಂತ ಕೃಶವಾಗಿರುವದನ್ನಾಗಿ ನೋಡು ವೆನು ! ಯಾವಾಗ ನಾನು ಇಷ್ಟಾನಿಷ್ಟ ಗ್ರಾಹ್ಯಾಗ್ರಾಹ್ಯ ದುಃಖವಿಲ್ಲದೆ ಅಖಂಡಾ ನಂದ ಸ್ವರೂಪನಾಗಿರುವೆನು ? ದುರಪೇಕ್ಷೆಗಳೆಂಬ ಗೂಬೆಗಳ ಪ್ರಚಾರದಿಂ ಹೃದಯಕಮಲಕ್ಕೆ ಜಾಡ್ಯ ಶೈಥಿಲ್ಯಗಳನ್ನುಂಟುಮಾಡಿದ ಆಶೆಯೆಂಬ ಕೃಷ್ಣಪ ಕ್ಷದ ರಾತ್ರಿಯು ಪೋಗಿ ಜ್ಞಾನ ಸೂರ್ಯೋದಯದಿಂ ಗೋಚರವಾದ ಸ್ವರೂ ಪದಲ್ಲಿ ನೆಲಸಿದ ನಾನು ಯಾವಾಗ ನಿರ್ವಿಕಲ್ಪ ಸಮಾಧಿ ಸ್ಥಿತಿಯಿಂ ಗಿರಿಯಂತೆ ಧೀರ ನಾಗಿರುವೆನು. ಜಾತಿ ಗುಣಾದ್ಯಭಿಮಾನವೆಂಬ ಮದದಿಂ ಮೆರೆಯುವ ನನ್ನ ಮನ ವೆಂಬ ಗಜವು ತತ್ವಜ್ಞಾನವೆಂಬ ಸಿಂಹದಿಂದಾವಾಗ ಸಂಹರಿಸಲ್ಪಟ್ಟೀತು ! ನಿರ್ವಿ ಕಲ್ಪ ಧ್ಯಾನದಿಂ ಮೃಗನಂತೆಯೂ, ನೋಟು ಮರದಂತೆಯೂ, ಕುಳಿತಿರುವ ನನ್ನ ತಲೆ ಮದೆಗಳಲ್ಲಿ ಪಕ್ಕಿ ಮೊಳು ಪೆಂಪಲಾದ ಪ್ರಾಣಿಗಳು ಯಾವಾಗ ಗೂಡು

ಗಳಂ ಮಾಡಿಕೊಂಡಿದ್ದಾವು. ಯಾವಾಗ ನಾನು ಆಶೆಯೆಂಬ ಹೊಂಗೇಮರಗಳ ಸಾಲಿನಿಂದಲೂ ಜನ್ಮಗಳೆಂಬ ಹೊದೆಗಳಿಂದಲೂ ಸುತ್ತುವರೆಯಲ್ಪಟ್ಟ ಸಂಸಾರವೆಂಬ ನಿಸ್ಸಾರವಾದ ಸರೋವರವಂ ಬಿಟ್ಟು ಹಕ್ಕಿಯಂತೆ ಹಾರಿಹೋದೇನೆಂದು ಚಿಂತಿಸುವ ಉದ್ದಾಲಕನು ಧ್ಯಾನಾಭ್ಯಾಸವಂ ಮಾಡುತ್ತಿರುವಲ್ಲಿ, ಅವನ ಮನವೆಂಬ ವನಮರ್ಕಟವು ವಿಷಯಗಳಿಂ ಸೆಳೆಯಲ್ಪಡುವದ್ದರಿಂದ ಸುಖವಂ ಹೊಂದದೆ ಬಾಹ್ಯ ವಿಷಯ ತ್ಯಾಗದಿಂದೊಂದುವೇಳೆ ಭಯಾಲಸ್ಯಾದಿಗಳಂ ಹೊಂದಿತು. ಆಂತರ ವಿಷಯ ತ್ಯಾಗದಿಂದೊಂದುವೇಳೆ ವಿಷಹತನಾದವನಂತೆ ಲೋಕಾಂತರವಂ ಹೊಂದಿತು. ಮಂಜು ಹೊಗೆ ಸೂರ್ಯಾದಿ ತೇಜಗಳನ್ನೊಳಗೆ ಕಾಣುವಲ್ಲಿ ಸರಿಯಾದ ವಸ್ತುಸ್ಮೃತಿಯಿಂದ ಬಾಹ್ಯ ವಿಷಯವಂ ಹೊಂದಿತು. ಒಂದುವೇಳೆ ತಮದಿಂ ತೇಜವುದಯಿಸುವಲ್ಲಿ ಉಷಃಕಾಲದ ಗಾಳಿ ತಗಲಿದ ನಿದ್ರೆಗೆಟ್ಟವನಂತೆ ನಿದ್ರೆಯನ್ನೈದಿತು. ಒಂದೊಂದುವೇಳೆ ಆ ತೇಜಗಳ ದರ್ಶನದೊಳ್ ಸುಖಸ್ಥಿತಿಯಂ ಪಡೆಯಿತು. ಇಂತು ಮನದ ಚಾಪಲದಿಂ ವಿಶ್ರಾಂತಿಯಂ ಕಾಣದ ಆ ಮುನಿಯು ಮೇರುವಿನಲ್ಲಿ ಸೂರ್ಯನಂತೆ ಏಕಾಕಿಯಾಗಿ ಆ ಗಾಢವಾದ ನಗಿರಿಯೊಳ್ ಸಂಚರಿಸುತ್ತಾ, ಒಂದಾನೊಂದು ಕಾಲದಲ್ಲಿ ದೇವ ಗಂಧರ್ವಾದಿಗಳಿಗೂ ಗೋಚರವಾಗದೆ ಅತಿ ರಹಸ್ಯವಾಗಿರುವ ಒಂದು ಗುಹೆಯಂ ಕಂಡನು. ಮಣಿದೀಪಗಳಿಂದಲೂ, ಪರಿಮಳ ಕುಸುಮಾಸ್ತರಣಗಳಿಂದಲೂ, ಸುಳಿ ಗಾಳಿಗಳಿಂದಲೂ, ಮೃದು ಮನೋಹರವಾದ ತೃಣಪತ್ರಗಳಿಂದಲೂ, ಶೀತಳವಾದ ಛಾಯಾವೃಕ್ಷಗಳ ನೆರಳುಗಳಿಂದಲೂ, ತೋರಣದಂತಿರುವ ಪೂಗುಚ್ಛಗಳಿಂದಲೂ, ಸುಂದರವಾಗಿ ಶರತ್ಕಾಲದ ಬಿಸಿಲಿನಂತೆ ಶೀತೋಷ್ಣಾಧಿಕ್ಯವಿಲ್ಲದೆ ವನದೇವತೆಗಳ ಅಂತಃಪುರದಂತೆಯೂ, ಬ್ರಹ್ಮನ ವಿಶ್ರಾಂತಿ ಸ್ಥಾನದಂತೆಯೂ, ಯೋಗರಾಜನ ವಿಹಾರ ಗೃಹದಂತೆಯೂ, ಉಪಶಾಂತಿಗೆ ತವರುಮನೆಯಂತೆಯೂ, ಮನೋಹರವಾದ ಆ ಗುಹೆಯಂ ಪ್ರವೇಶಿಸಿದ ಆ ಮುನಿಯು ಕಮಲವನವಂ ನುಗ್ಗಿದ ಭ್ರಮರದಂತೆಯೂ, ಕ್ರೀಡಾಗೃಹಕ್ಕೆ ಬಂದ ಭೋಗರಸಿಕನಂತೆಯೂ ಸಂತುಷ್ಟನಾದನು. ನಿದ್ರೆಗೈಯ್ಯಲಿಚ್ಛೈಸಿದವನಿಗೆ ಹಂಸತೂಲಿಕಾತಲ್ಪದಂತೆ ಸಮಾಧಿಯಂ ಮಾಡಲಿಚ್ಛೈಸಿದ ಆ ಮುನಿಗೆ ಆ ಗುಹೆಯು ಚಿತ್ತವಿಶ್ರಾಂತಿಯನ್ನುಂಟುಮಾಡಿತು. ಬಳಿಕ ಆ ಮುನಿಯು ಮೇಘಗಳಂ ಸೇರಿಸುವ ಇಂದ್ರನಂತೆ ಚಿಗುರುಗಳಂ ಸೇರಿಸಿ, ಅದರಮೇಲೆ ಕೃಷ್ಣಾಜಿನವಂ ಹಾಸಿ ರತ್ನಸಾನುವಿನ ಮರಕತ ಮಯವಾದ ಪಡದಲ್ಲಿ ಬೆಳ್ದಿಂಗಳಂ ನಿಲ್ಲಿಸುವ ಶರತ್ಕಾಲದಂತೆ

ಅಜಿನದಮೇಲೆ ಬಟ್ಟೆಯಂ ಹಾಸಿಕೊಂಡು ಅದರಮೇಲೆ ಪದ್ಮಾಸನದಿಂದುತ್ತರಾಭಿಮುಖನಾಗಿ ಕುಳಿತು ಬಾಹ್ಯ ವಿಷಯಗಳಿಂ ಮನವಂ ಸೆಳೆದುಕೊಂಡು ವಿಚಾರವಂ ಮಾಡಿದನದೆಂತೆನೆ;—ಎಲೈ ಮನವೇ ! ದುಃಖಾಂತವಾದ ಸಂಸಾರ ವೃತ್ತಿಗಳೊಳ್ನೀನೇಕೆ ಮೂರ್ಖತೆಯಂ ಹೊಂದುತ್ತೀಯೆ ! ಯಾರು ಬುದ್ಧಿಯಂ ಬಿಟ್ಟು ವಿಷಮವಾದ ಭೋಗಗಳಿಗೆ ಭ್ರಾಂತರಾಗಿ ಪೋಗುವರೋ ಅವರು ಮಂದಾರೋದ್ಯಾನವಂ ಬಿಟ್ಟು ಪಾಳುಕಾಡಿಗೆ ಪೋಗುವರೆಂದು ತಿಳಿಯತಕ್ಕದ್ದು. ನೀನು ಪಾತಾಳವಂ ಪ್ರವೇಶಿಸಿದರೂ, ಬ್ರಹ್ಮಲೋಕವಂ ಪೊಂದಿದರೂ, ಭೋಗಭ್ರಮೆಯಂ ಬಿಟ್ಟು ಉಪಶಾಂತಿಯಂ ಪೊಂದದೆ ಎಂದಿಗೂ ಅಖಂಡಸುಖದೊಳ್ ವಿಶ್ರಾಂತಿಯು ಸಂಭವಿಸದು. ಇಷ್ಟ ಸಂಗ್ರಹಣ ಅನಿಷ್ಟ ತ್ಯಾಗಗಳ ಕಲ್ಪನೆಗಳಿಂ ದುಃಖವಲ್ಲದೆ ಸುಖವೆಂದಿಗೂ ಆಗಲಾರದು. ಆದ್ದರಿಂ ನೀನು ವರ್ಷಾಕಾಲದ ಕಪ್ಪೆಯಂತೆ ಶಬ್ದಾದಿ ವೃತ್ತಿಗಳಿಂದೇಕೆ ಭ್ರಮಿಸುತ್ತೀಯೆ ? ಸುಖಕರವಾದ ಉಪಶಾಂತಿಯಂ ನೋಡದೆ ಶ್ರೋತ್ರಾದಿ ರೂಪದಿಂ ಶಬ್ದಾದಿ ವಿಷಯಗಳಿಗೆ ಅಲೆಯುವ ನಿನ್ನಿಂದೇನು ಸಂಪಾದಿಸಲ್ಪಟ್ಟಿತು ? ಮೃಗ ಗಜ ಪತಂಗ ಮೀನ ಭ್ರಮರಗಳು ಶಬ್ದ ಸ್ಪರ್ಶ ರೂಪ ರಸ ಗಂಧಗಳೊಳೊಂದೊಂದರಿಂದಲೇ ಒಂದೊಂದು ನಷ್ಟವಾದುದು. ಈ ಐದು ವಿಷಯಗಳು ನಿನ್ನೊಬ್ಬನನ್ನೇ ಸೆಳೆಯುವಲ್ಲಿ ನಿನಗೆಂತು ಸುಖವಾದೀತು. ಜೊಲ್ಲಿನಂತಿರುವ ರೇಶ್ಮೆಯೇ ಹುಳುವಿಗೆ ಬಂಧಕವಾಗುವಂತೆ ನಿನ್ನ ವಾಸನಾ ಸಮೂಹವೇ ನಿನಗೆ ಬಂಧಕವಾಗುವದು. ಈ ವಾಸನಾ ಕಲ್ಪನೆಗಳಂ ಬಿಟ್ಟು ಶರತ್ಕಾಲದ ಮೇಘದಂತೆ ನೀನು ಶುದ್ಧವಾದರೆ ಶಾಂತಿಯಂ ಪಡೆಯುತ್ತೀಯೆ ? ಕ್ಷಯೋದಯಗಳಿಂ ಕೂಡಿ ನರಕ ಪಶುತ್ವ ಸ್ಥಾವರತ್ವಾದಿ ಗತಿಗಳಂ ಕೊಡುವದೆಂದು ತಿಳಿದಿದ್ದಾಗ್ಯೂ ಜಗತ್ತಿನ ಕ್ರಮವಂ ಬಿಡದಿರುವ ನಿನಗೆ ಹೇಳುವದಕ್ಕಿಂತ ನೀರಂ ಬಡಿಯುವದು ಗಾಳಿಯಂ ಗುದ್ದುವದೂ ಸಹ ಉತ್ತಮವೆನಿಸುವದು. ವರ್ಷಾಕಾಲದಲ್ಲಿ ಮೇಘಾಡಂಬರದಂತೆ ಅಜ್ಞಾನಕಾಲದಲ್ಲೇ ನಾಶಿಸತಕ್ಕವನಾದ್ದರಿಂದ ನಶ್ವರವಾದ ನಿನಗೆ ಬೋಧಿಸಿದ್ದರಿಂದುಪಯೋಗವೇನು ? ಹೋಗತಕ್ಕವನಿಗೆ ಹಿತೋಪದೇಶವಂ ಮಾಡುವದೂ ಕೂಡ ಮೂರ್ಖತನವೆನಿಸುವದಾದ್ದರಿಂದ ನಿನ್ನ ಗೋಜಿಗೆ ನಾನು ಬರದಿರುವೆನು ? ತಾನು ಕೆಡುವದಂ ಕಾಣದೆ ಅಖಂಡವಸ್ತುವಿನಲ್ಲಿ ಅವನು ಇವನು ನಾನು ನನ್ನದೆಂಬುದೇ ಮೊದಲಾದ ಭೇದವಂ ಕಲ್ಪಿಸಿಕೊಂಡು ಈ ಕಲ್ಪನಾಸೃಷ್ಟಿಯಿಂದಿಲ್ಲದ ದಿಗಿಲು ರೋಗವಂ ಸಂಪಾದಿಸಿಕೊಂಡಂಥಾ ಅಹಂಕಾರಕ್ಕೆ ಬೀಜವಾದ ನಿನ್ನ ಅನುಸರಣೆಯಿಂದ ವಿಕಲ್ಪ ವಿಸ್ತಾ

ತ್ರಸ್ವರೂಪನಾದ ನನಗೂ ಕೂಡ ಖಂಡನೆಯಾದುದು. ಅಥವಾ ನಿನಗೂ ನನಗೂ ಸಂಬಂಧನೇನಿರುವದು. ಬಿಲ್ವದ ಕಾಯಿನಲ್ಲಿ ಆನೆ ಇರುವದೆಂಬಂತೆ ಅನಂತವಾದ ಆತ್ಮ ತತ್ವಕ್ಕೆ ಅಣುವಾದ ನಿನ್ನಲ್ಲಿ ಸ್ಥಿತಿಯೆಂಬ ಮಾತು ಅಸಂಗತವಾಗಿರುವದು, ಕಾಮ ಕ್ರೋಧಾದಿಗಳಿಂದತಿ ಭಯಂಕರವಾದ ವಾಸನೆಯೆಂಬ ಪಾಳುಪಳ್ಳದೊಳ್ ನೆಲಸಿ ಸಮೀಪಕ್ಕೆ ಬಂದ ಮಹಾತ್ಮರನ್ನೂ ಕೂಡ ಸೆಳಕೊಳ್ಳುವೆಯಾದ್ದರಿಂದ ಬುದ್ಧಿಶಾಲಿಗಳು ನಿನ್ನನ್ನನುಸರಿಸುವದಿಲ್ಲ. ಕಳ್ಳೆಲದ ಭಾವಿಯಂತೆ ಅತ್ಯಂತವಾಗಿ ನೆಲವಂ ತೋರದ ಈ ವಾಸನೆಯೊಳ್ ನಿನಗೆಂತು ವಾಸವಾದುದು. ಕಾಲುಂಗುಟ ಮೊದಲುಗೊಂಡು ಜುಟ್ಟಿನ ಕೊನೆಯಾಗಿ ಯಾವ ಅಂಗದಲ್ಲಿ ಹುಡುಕಿದರೂ ಸಿಕ್ಕದ ಈ ಅಹಂಕಾರವು ಬಾಲಕನ ಭ್ರಾಂತಿ ಪಿಶಾಚದಂತೆಯೇ ಸಿದ್ಧವಾಗಿರುವದು. ನಾನೆಂಬುವದೇ ಇಲ್ಲದಿರುವಲ್ಲಿ ಅವನು ಇವನು ನನ್ನದೆಂಬುವದು ಹೇಗೆ ಸಂಗತವಾದೀತು, ಈ ಸಂಸಾರ ಪ್ರಪಂಚವ ಮೊದಲಿನಿಂದ ಕೊನೆಗೂ ಭ್ರಾಂತಿಯಿಂದಲೇ ಸಿದ್ಧವಾದದ್ದಾದ್ದರಿಂದ, ತಿಳಿದವರು ಇದಂ ಗ್ರಹಿಸಲಾರರು. ಎಲೋ ಮನವೇ! ಈ ಕುಚೇಷ್ಟೆಗೆ ನೀನೇ ಕಾರಣವಾದ್ದರಿಂದ ವಿವೇಕದಿಂ ನಿನ್ನಂ ನಾನು ಕತ್ತರಿಸುವೆನು. ಇದು ಮಾಂಸ ರುಧಿರಕ್ತ ಎಮು ಮೂಳೆ ಇದು ಕಣ್ಣು ಇದು ಮೂಗು ಇದು ಬಾಯಿ ಇದು ಕೈ ಇದು ಕಾಲೆಂದು ದೇಹದಲ್ಲಿ ಅಂಗಗಳಿರುವವಲ್ಲದೆ ಅಹಂಕಾರವೆನಿಸುವ ದಾವದೂ ಇಲ್ಲ. ಜ್ಞಾನಾಂಶವು ಚಿತ್ತಿಗೂ ಚಲನಾಂಶವು ವಾಯುವಿಗೂ, ಜರಾಮೃತ್ಯು ಮೊದಲಾದ್ದು ದೇಹಕ್ಕೆಂದು ಸಿದ್ಧವಾಗಿರುವಲ್ಲಿ ಯಾವದಕ್ಕೂ ಸೇರದ ಈ ಅಹಂಕಾರವೆಲ್ಲಿಂದ ಬಂದುದು. ಇಲ್ಲ ಪರಮಾರ್ಥವಂ ವಿಚಾರಿಸಲು, ಮನೋವಾಸನಾಹಂಕಾದಿಗಳು ಯಾವದೂ ಇಲ್ಲ. ಕೇವಲ ಚಿತ್ಪ್ರಕಾಶಸ್ವರೂಪನಾದ ಪರಮಾತ್ಮನೊಬ್ಬನೇ ಪ್ರಕಾಶಿಸುತ್ತಿರುವನಾದ್ದರಿಂದ, ಮಹಾತ್ಮರಾದವರು ಸರ್ವವೂ ನಾನೆಂತವಾಗಲೀ ಒಂದೂ ನಾನಲ್ಲವೆಂತವಾಗಲೀ ನಿಶ್ಚಯಿಸುವರು. ಈ ಜ್ಞಾನದೃಷ್ಟಿಯಂ ಮರೆಮಾಡಿದ್ದ ಅಜ್ಞಾನದಿಂ ನಾನು ತೋಳದಿಂದ ಕುರಿಯಂತೆ ಇದುವರಿಗೆ ವಂಚಿತನಾಗಿದ್ದೆನು. ಈ ಅಜ್ಞಾನಚೋರನೆ ನನ್ನ ಪರಮಾರ್ಥ ಸ್ವರೂಪವೆಂಬ ಧನವಂ ಕದ್ದಿದ್ದವನೆಂದೀಗ ಗೊತ್ತಾದ್ದರಿಂದವನಂ ನಾನಿನ್ನು ಮೇಲೆ ಸ್ವೀಕರಿಸೆನು ? ಇವನು ನನ್ನಲ್ಲಿದ್ದಾಗ್ಯೂ ಮೇಘದಿಂ ಚಿಟ್ಟದಂತೆ ಸಂಬಂಧವಿಲ್ಲದಿರುವೆನು. ಸರ್ವಾತೀತನೆಂಬ ಜ್ಞಾನವಿದ್ದಾಗ್ಯೂ ವೇಷಧಾರಿಯಾದ ನಟನಂತೆ ಕಾಲೋಚಿತವಾದ ಆಯಾಯ ವ್ಯಾಪಾರಗಳಂ ನಡೆಸುವೆನು. ಇಕ್ಷು ಕ್ಷೀರ ತ್ರಿತ್ವನಿರೂಪದಿಂ ನಾನೇ ಇರುವೆನೆಂದು ತಿಳಿಯುತ

ಇದ್ದೇನೆ. ಇವುಗಳು ನನಗೆ ಭಿನ್ನವಾದಲ್ಲಿ ಜಡವಾದ ಇವುಗಳ ಸಂಬಂಧವು ಚಿದ್ರೂ
ಪನಾದ ನನಗೆ ಇಲ್ಲ. ಆದ್ದರಿಂದಿವುಗಳ ಸ್ಥಿತಿ ನಾಶಗಳಿಂ ಸುಖ ದುಃಖಗಳಂ ನಾನು
ಪಡೆಯಲಾರೆನು. ವಾಶೀಮರಕ್ಕಿಂತಲೂ ಅತಿ ಪ್ರಮಾಣವಾಗಿ ಜಗತ್ತೆಂಬ ಶಿಶು
ವಿಗೆ ಪಿಶಾಚವಾದ ಈ ನಾನೆಂಬ ವಿಕಾರವು ನನಗೆಲ್ಲಿಂದ ಬಂದುದು. ಇದರಿಂ
ನಾನು ಪಾಳು ಬಿಟ್ಟದೋಳ್ಜಿಂಕೆಯಂತೆ ಪ್ರಪಂಚದಲ್ಲಿ ಹಾರಾಡುತ್ತಿದ್ದೆನು. ಕಣ್ಣ
ಮೂಗು ಕಿವಿಮೊದಲಾದ ಕರಣಗಳು ತಮ್ಮ ತಮ್ಮ ವ್ಯಾಪಾರಗಳೊಳಿರುವಲ್ಲಿ ನಾನು
ನೋಡುವನೆಂತಲೂ, ಮೂಸುವೆನೆಂತಲೂ, ಕೇಳುವೆನೆಂತಲೂ, ಅಭಿಮಾನಪನ್ನಾ
ನನು ವಹಿಸುವನೋ? ಭ್ರಮಪಿಶಾಚದಂತೆ ಪುಟ್ಟುವ ಮೂಢನಾದ ಆ ಕಳ್ಳನು
ನನಗೆ ಗೊತ್ತಾಗಲಿಲ್ಲ, ವಿಚಾರಿಸುವಲ್ಲಿ ಶಬ್ದಾದಿ ವಿಷಯಗಳು ಬಿಸಲುದೊರೆ
ಯಂತೆ ಈ ಕಳ್ಳನ ಭಾವನೆಯಿಂದಲೇ ತೋರುವವು. ಈ ಸುಳ್ಳುಪದಾರ್ಥಗಳು
ಸತ್ಯವೆಂತಲೂ ಇವುಗಳನ್ನನುಭವಿಸಬೇಕೆಂತಲೂ ಪ್ರವರ್ತಿಸುವುದಕ್ಕೆ ದೇಹ ನಾನೆಂಬ
ಅಜ್ಞಾನವೇ ಕಾರಣವೆಂದು ಗೊತ್ತಾಗುವದು. ಎಲೋ ಮನವೇ ಇಂದ್ರಿಯಗಳು
ವಿಷಯಾಭಿಮುಖವಾಗುವದಕ್ಕೆ ಇವುಗಳು ವಾಸನಾರಹಿತವಾದ್ದರಿಂದ ಇವುಗಳ
ವಾಸನೆ ಕಾರಣವಾಗಲಾರದು. ವಾಸನೆಯಿಲ್ಲದೆ ಮಾಡಿದ ಕರ್ಮಗಳು ಬಂಧಕ
ವಾಗಲಾರವು. ಒಬ್ಬನ ವಾಸನೆಯಿಂ ಮತ್ತೊಬ್ಬನಿಗೆ ಪ್ರವೃತ್ತಿಯಾಗದ್ದರಿಂದ
ನೀನೆ ಇಂದ್ರಿಯರೂಪದಿಂ ವಿಷಯಗಳಲ್ಲಿ ಪ್ರವರ್ತಿಸುವದಾಗಿ ಕಾಣುತಲಿದ್ದಿ, ನೀನು
ಜಡವಾದ್ದರಿಂದಲೂ ಆತ್ಮನು ನಿರ್ವಿಕಾರನಾದ್ದರಿಂದಲೂ ವಾಸನೆಪುಟ್ಟುವದಕ್ಕೆ ಕಾ
ರಣ ಕಾಣುವದಿಲ್ಲ. ವಾಸನೆಯಿಲ್ಲದೆ ಯಾವದಕ್ಕು ಪ್ರವೃತ್ತಿಯಾಗಲಾರದು,
ಮುಖ್ಯಸ್ಪಂಗನಿಗೆ ಸೂಳೆಯರು ವಿಷಯ ರುಚಿಯಂ ತೋರಿಸಿ ಸೆಳೆವಂತೆ ನೀನೆ
ಮೊದಲಾದ ಕರಣಗಳೆಲ್ಲವೂ ಚೈತನ್ಯಪ್ರದನಾದ ಆತ್ಮನಂ ತಿಳಿದುಕೊಂಡು ಸ್ವೇಚ್ಛೆ
ಯಿಂ ನಟಿಸಿದ್ದರಿಂದ ವಾಸನೆಯೆಂಬುವದು ನಿನಗೆ ಸ್ವರೂಪವಾಗಿ ನಿಂದುದು. ಈಗ
ಲೂ ನಿನ್ನ ಸಂಬಂಧದಿಂದಲೇ ಆತ್ಮನು ಜ್ಞಾನಗುಣವಾದ ದ್ರವ್ಯದ ಸ್ವರೂಪ ಉಳ್ಳ
ವನಾಗಿ ಜಡನೆಂತಲೂ, ಚಿಜ್ಜಡಾತ್ಮಕನೆಂತಲೂ, ಚಿದಾಭಾಸನೆಂತಲೂ, ಚಿತ್ಪ್ರತಿಬಿಂಬ
ನೆಂತಲೂ, ಚಿನ್ಮಾತ್ರ ಸ್ವರೂಪನೆಂತಲೂ, ಪರಿಪರಿಯಾಗಿ ಹೇಳಲ್ಪಡುವನು. ತತ್ತ್ವಾ
ರ್ಥವಂ ನೋಡುವಲ್ಲಿ ಆತ್ಮನ ಪ್ರಭಾವದಿದದಲೇ ನಿಮ್ಮ ಚೈತನ್ಯಗಳು ಕಾಣುವದ್ದ
ರಿಂದ ಆತ್ಮನ ಸತ್ತೆಯೇ ನಿಮ್ಮ ಸ್ವರೂಪಸ್ಥಿತಿಗೆ ಕಾರಣವೆನ್ನಬೇಕಾಗುವದು. ಆರೀತಿ
ಯಿಂ ನೋಡುವಲ್ಲಿ ಸದಸದ್ರೂಪವಾದ ನಿಮ್ಮಲ್ಲಿ ನಾಶವೇ ಮುಖ್ಯವಾಗಿ ಕಾಣು
ವದ್ದರಿಂದ ಆತ್ಮನ ಸತ್ತೆಯೇ ನಿಮ್ಮ ಸ್ವರೂಪಸ್ಥಿತಿಗೆ ಕಾರಣವೆನಬೇಕಾಗುವದು.

ಆರೀತಿಯಿಂ ನೋಡುವಲ್ಲಿ ಸದಸದ್ರೂಪವಾದ ನಿಮ್ಮಲ್ಲಿ ನಾಶವೇ ಮುಖ್ಯವಾಗಿ ಕಾಣುವದ್ದರಿಂದ ಕೇವಲವಾಗಿ ಅಸತ್ತೆಂತಲೇ ನೀವು ನಿಶ್ಚಿತವಾಗಲು ಸತ್ತಾಸಾಮಾನ್ಯರೂಪವಾದ ಚಿದ್ವಸ್ತುವೊಂದೇ ನಿಲ್ಲುವದು. ಮುಖ್ಯವಾದ ಆ ದೃಷ್ಟಿಯೊಳ್ ಜಲಕ್ಕೆ ತರಂಗಾದಿಗಳಂತೆ ನೀನೇ ಮೊದಲಾದ ಕರಣಗಳು ನಿಮ್ಮ ವೃತ್ತಿಗಳು ವಿಷಯಗಳು ಸಹ ಆತ್ಮನೆಂತಲೇ ನಿಶ್ಚಿತವಾಗುವದು. ಪರಮಾರ್ಥವಾದೀ ಆತ್ಮವಾಸನೆಯಿಂದಲೇ ನೀವು ಕರ್ಮವಂ ಮಾಡುವಲ್ಲಿ ನಿಮಗೇಕೆ ಈ ದುಃಖವುಂಟಾದೀತು. ಈ ದೃಷ್ಟಿಯಿಲ್ಲದೆ ವಿಷಯವಾಸನೆಯಿಂ ಮಣಿಗಳಂತೆ ಕಟ್ಟಲ್ಪಟ್ಟು ತೆರಳೇ ಹುಳಗಳಂತೆ ಹೊರಗಣ ಬಂಧವಂ ಮಾಡಿಕೊಂಡು ಕಾಡುಬೆಟ್ಟಕ್ಕೆ ಹೋಗುವರಂತೆ ಪಾಳು ಪಳ್ಳಗಳಲ್ಲಿ ಬಿದ್ದು ಬಿದ್ದೇಳುತ್ತಾ ಕಷ್ಟವನ್ನನುಭವಿಸುತ್ತೀರಿ. ಇದು ಒಳ್ಳೇದು, ಇದು ಕೆಟ್ಟದ್ದು, ಇದು ಸತ್ಯ, ಇದು ಸುಳ್ಳು ಇದು ಹಿಡಿಯತಕ್ಕದ್ದು, ಇದು ಬಿಡತಕ್ಕದ್ದೆಂಬ ನಿಮ್ಮ ಕಲ್ಪನೆಯೇ ಜ್ವಲಿಸುವದೀಪಗಳಿಗೆ ಗಾಳಿಯಂತೆ ನಿಮ್ಮ ನಾಶಕ್ಕೆ ಕಾರಣವಾಗುವದು. ಓ ಮನವೇ ? ಇಂಥಾ ನಿನ್ನ ಕುಕಲ್ಪನೆಯಂ ಬಿಟ್ಟು ಅಸಂಕಲ್ಪನಾರಾಗದಿಂ ಸಂಕಲ್ಪಪರಂಪರೆಯಂ ಕತ್ತರಿಸುವೆಯಾದರೆ ನಿನಗೆ ಸರ್ವೋತ್ತಮವಾದ ಸುಖತೋರುವದು. ಪರಮಾರ್ಥದೃಷ್ಟಿಯಿಂದುಂಟಾದ ಸಂಕಲ್ಪಗಳು ಬಂಧಕವಲ್ಲದ್ದರಿಂದ ಅಸಂಕಲ್ಪನವೆನಿಸುವವು. ಪರಮಾರ್ಥವಿಚಾರವೇ ದುರ್ವಾಸನಾಪಿಶಾಚಿಗಳಿಗೆ ಮಹಾ ಮಂತ್ರವಾಗುವದು. ಈ ದೃಷ್ಟಿಯಿಂ ಮಾಡಿದ ಕರ್ಮಗಳೂ ಕೂಡ ಮೋಕ್ಷಸಾಧಕವಾಗುವವು. ಅಥವಾ ಅಖಂಡ ಚಿತ್ಪ್ರಕಾಶದೊಳ್ ಬಿಸಿಲಿನಲ್ಲಿ ಕತ್ತಲೆಯಂತೇ ವಾಸನಾದಿಗಳು ಪ್ರವರ್ತಿಸಲಾರವು. ಸತ್ವಾಂಶದಿಂದಿಂದ್ರಿಯಗಳು ರಜೋಂಶದಿಂ ದವುಗಳ ಕ್ರಿಯಾರೂಪವಾದ ವೃತ್ತಿಗಳು ತಮೋಂಶದಿಂ ವಿಷಯಗಳು ಸಹ ಹುಟ್ಟಿರುವವಾದ್ದರಿಂ ದಿಂದ್ರಿಯಗಳು ಸ್ವಕಾರಣ ಭೂತಾಂಶವಾದ ಸ್ವಸ್ವವಿಷಯಗಳನ್ನೇ ಹಿಡಿಯುತ್ತಿರುವವು. ಈ ವಿಷಯಗಳು ಸತ್ವಸಮಷ್ಟಿಯಿಂ ಪುಟ್ಟಿದ ಮನೋಬುದ್ಧ್ಯಹಂಕಾರಗಳಲ್ಲಿ ಪ್ರತಿಬಿಂಬಿಸಿದ್ದರಿಂದ ಬಾಲಕ ಪಿಶಾಚದಂತೆ ಈ ವಾಸನೆಗಳುಂಟಾಗುವವು. ಚಿತ್ಪ್ರಭಾವದಿಂ ಚೇತನಗಳಂತಿರುವ ಈ ಅಂತಃಕರಣಗಳು ಜಾಗ್ರತ್ಸ್ವಪ್ನಗಳಲ್ಲಿ ವಿಷಯ ವಿಚಾರದಲ್ಲೇ ಇರುವದ್ದರಿಂದ ಈ ವಾಸನೆಗಳು ವೃದ್ಧಿಹೊಂದುವವು. ಇವುಗಳು ಜಡಾಂತಃಕರಣಗಳಲ್ಲಿರುವಂಥಾವಾದ್ದರಿಂದ ಅಸಂಗಚಿನ್ಮಾತ್ರಸ್ವರೂಪನಾದ ಆತ್ಮನಂ ಪೊಂದಲಾರವು. ಅಂತರಂಗದಲ್ಲಿರುವ ವಾಸನೆಗಳೇ ಆತ್ಮನಂ ಹೊಂದಿರುವಲ್ಲಿ ದೇಹದ ವ್ಯಾಪಾರಗಳಿಂ ಬೆಳವ ಸಂಸ್ಕಾರವು ಹೇಗೆ ಆತ್ಮನಿಗೆ ಸಂಭವಿಸೀತು. ಆತ್ಮನಿಗೆ ಉತ್ಪತ್ತಿ ಮರಣಗಳೇ

ಇಲ್ಲದಿರುವಲ್ಲಿ ಒಬ್ಬನಿಂದೊಬ್ಬ ಹೊಡೆಯಲ್ಪಟ್ಟು ಮೃತನಾಗುವದು ಹೇಗೆ? ಬದುಕುವದ್ದರಿಂ ಯಾರಿಗೆ ಪ್ರಯೋಜನವೋ ಅವರಿಗೆ ಮರಣದಿಂ ದುಃಖವಾಗಬಹುದು. ಅಸಂಗನಾದ ಆತ್ಮನಿಗೆ ಈ ಜೀವನಮರಣಗಳಿದ್ದಾಗತಕ್ಕದ್ದೇನಿರುವದು? ಆತ್ಮನೇ ಜೀವನದಲ್ಲಿ ದೇಶಕಾಲ ವಸ್ತು ಭೇದವಿಲ್ಲದ್ದರಿಂ ದಿವಸಿಗೆ ಪಡಿಯುತಕ್ಕದ್ದು ಯಾವದೂ ಇಲ್ಲ. ಹೀಗಿರುವದ್ದರಿಂದ ಜೀವನಮರಣಗಳೆಂಬುವದು ಮನಸ್ಸಿನ ಕುತ್ಸಿತ ಕಲ್ಪನೆಯಿಂದು ಕಾಣ್ಬರುತ್ತಲಿಧೆ. ಯಾವನಿಗೆ ಅಖಂಡಭಾವವಿಲ್ಲವೋ ಅವನಿಗೆ ಖಂಡಭಾವದಿಂ ದಹಂಭಾವವುಂಟಾಗುವದು. ಅದರಿಂ ಜನ್ಮಮರಣಗಳೂ ಸಂಭವಿಸಬಹುದು. ಅಖಂಡನಾದ ಆತ್ಮನಿಗೆ ಅಹಂಭಾವಬರುವದಕ್ಕೆ ಮಾರ್ಗವಿಲ್ಲದಿರುವಲ್ಲಿ ಜನನ ಮರಣ ದುಃಖಗಳು ಹ್ಯಾಗೆ ಬಂದಾವು. ಆತ್ಮನು ಜ್ಞಾನಮಾತ್ರ ಸ್ವರೂಪನಾದವನು ಬಿಸಲು ದೊರೆಗೆ ಸಮಾನವಾದ ಅಂತಃಕರಣಾದಿಗಳು ಸತ್ಯವೆಂದಂಗೀಕರಿಸಿದಾಗ್ಯೂ ಜಡವೆನಿಸುವವು. ದೇಹಗಳೆಲ್ಲವು ರಕ್ತಮಾಂಸಾಸ್ಥಿ ಚರ್ಮ ಸ್ವರೂಪವಾದಂಥವು. ಹೀಗಿರುವಲ್ಲಿ ಕೇವಲಾಜ್ಞಾನ ಸ್ವರೂಪನಾದ ಅಹಂಭಾವ ವೆಲ್ಲುಂಟಾಯಿತು. ಯಾವದಕ್ಕೆ ಬಂತೆಂದು ತಿಳಿಯಬೇಕು. ಇಂದ್ರಿಯಗಳು ಪದಾರ್ಥಗಳು ಗುಣಗಳು ಪ್ರಕೃತಿಯು ಸದ್ವಸ್ತುವು ಸಹ ಸ್ವಸ್ವಭಾವದಲ್ಲೇ ಇರುವಲ್ಲಿ ಈ ಅಹಂಭಾವವೆಲ್ಲಿಂದುಂಟಾಗಬೇಕು. ವಿಚಾರಿಸಿ ನೋಡುವಲ್ಲೆಲ್ಲಾ ಕಡೆಯಲ್ಲಿಯ ಒಬ್ಬ ಆತ್ಮನೇ ಕಾಣ್ಬರುವನಲ್ಲದೆ ಮತ್ತೊಂದಿಲ್ಲ. ಹೀಗಿರುವಲ್ಲಿ ದೇಹಾಭಿಮಾನಿಯಾದಿ ಯಹಂಕಾರವಾವದೋ? ಇದಕ್ಕೆ ಆಕಾರವಾವದೋ? ಯಾವ ಜಾತಿಯೋ? ಯೇನು ವ್ಯಾಪಾರವೋ? ಯಾವ ಸ್ವರೂಪವೋ? ಯಾವ ರೂಪವೋ? ಯೇನು ಹೆಸರೋ? ಇದು ಗ್ರಾಹ್ಯವೋ? ತ್ಯಾಜ್ಯವೋ ಒಂದೂ ಗೊತ್ತಾಗದಿರುವದು. ಅದರಿಂದೀ ಅಹಂಭಾವವೇ ಯಿಲ್ಲವೆಂದು ತಿಳಿಯುತ್ತೇನೆ. ಇದು ಇದ್ದಾಗ್ಯೂ ಅಖಂಡ ಸ್ವರೂಪನಾದ ನನಿಗೆ ಇದರ ಸಂಬಂಧ ಹ್ಯಾಗಾದೀತು. ಇದೇ ಇಲ್ಲದಿರುವಲ್ಲಿ ಮಮತ್ವಾದಿ ಭೇದಕಲ್ಪನೆಗೆ ಅವಕಾಶವೇನಿರುವದು. ಭೇದವಾವದೂ ಇಲ್ಲದ್ದರಿಂದ ಪರಿಪೂರ್ಣವಾದ ಬ್ರಹ್ಮ ಒಂದೇ ಪ್ರಕಾಶಿಸುತ್ತಾ ನಾನಾ ರೂಪದಿಂ ವ್ಯವಹಾರ ಗೋಚರವಾಗಿರುವದೆಂಬುವದೇ ಸಿದ್ಧಾಂತವಾಗಿ ನಿಲ್ಲುವದು. ಹೀಗಿರುವಲ್ಲಿ ಭೇದಬುದ್ಧಿಯಿಂ ನಾನು ದುಃಖಪಡುವದಕ್ಕೆ ಕಾರಣವೇನಿರುವದು. ಒಂದುವೇಳೆ ಈ ಪದಾರ್ಥಗಳು ಬ್ರಹ್ಮಭಿನ್ನವಾಗಿವೆಯೆಂದು ನಾನಂಗೀಕರಿಸಿದಾಗ್ಯೂ ಆತ್ಮನು ನೋದೇಹೇಂದ್ರಿಯಗಳು ಕಲ್ಲು ಕಬ್ಬಿಣದ ಹೋಳಿಗಳಂತೆ ಸಂಬಂಧವಿದಿರುವವಾದ್ದರಿಂದ ಜಗತ್ತು ನಾನು ನನ್ನದೆಂಬುವದಕ್ಕೆ ಅವಕಾಶವಿಲ್ಲ

ದಿರುವನು. ಆದ್ದರಿಂದ ಅಜ್ಞಾನದಿಂ ಪುಟ್ಟಿದ ಈ ಅಹಂಕಾರವು ಅವಿಚಾರದಿಂದಲೆ ಬೆಳೆಯುತ್ತಾ ಜಗವೆಲ್ಲವಂ ಭ್ರಮೆಪಡಿಸುತ್ತಿರುವದೆಂದು ತಿಳಿಯತಕ್ಕದ್ದು. ಇದು ನನನದು, ಇದು ಇವನದು, ಇದು ಅವನದು, ಹೀಗಿರುವನು ನಾನು, ಹೀಗಿರುವನು ಅವನು. ಇಂಥಾವನು ನಾನಲ್ಲವೆಂದು ಲೋಕಗಳಂ ಭ್ರಾಂತಿಯಲ್ಲಿ ಮುಳುಗಿಸುವ ಈ ಅಹಂಕಾರದ ಚಮತ್ಕಾರವು ಬಿಸಲಿನಲ್ಲಿ ಮಂಜಿನಂತೆ ತತ್ವಜ್ಞಾನದಲ್ಲೇ ಅಡಗುವದಾದ್ದರಿಂದ ಆತ್ಮನಿಗೆ ಭಿನ್ನವಾಗಿ ಯಾವದೂ ಇಲ್ಲ. ಅದರಿಂದ ಸರ್ವವೂ ಬ್ರಹ್ಮವೆಂಬ ತತ್ವಾರ್ಥವನ್ನೇ ಭಾವಿಸುವೆನು. ಆಕಾಶದ ಕಪ್ಪಿನಂತಿರುವ ಈ ಅಹಂಕಾರ ಭ್ರಮೆಯು ತಿರುಗಿ ಬಾರದಂತೆ ಇದಂ ಮರೆಯುವದೇ ಲೇಸು. ಇದರ ಅನುಸಂಧಾನದಿಂ ಅನರ್ಥಗಳುಂಟಾಗುವವು. ಅಜ್ಞಾನರೂಪವಾದ ಪಾಪವು ಬೆಳೆವದು, ತಾಪವಧಿಕವಾಗುದು,, ಇನ್ನು ಪರಿಪರಿಯಾದ ವಿಕಾರಳುಂಟಾಗುವವಲ್ಲದೆ ಒಳ್ಳೇದಾವದೂ ಸಂಭವಿಸುವದಿಲ್ಲವಾದ್ದರಿಂದ ಇದಂ ನಿಶ್ಶೇಷವಾಗಿ ತ್ಯಜಿಸಿ ಶಾಂತನಾಗಿ ಆತ್ಮನಲ್ಲೇ ನಿಲ್ಲುವನು. ಅಹಂಕಾರ ಮೋಘವಿರುವವನಿಗೆ ಕಾಯ ಕವಂಬಗಳ ವೃದ್ಧಿ ತಪ್ಪದು. ಬದುಕಿಗೆ ಸಾವು ಸಾವಿಗೆ ಬದುಕೂ ಸಹ ಸಮೀಪದಲ್ಲೇ ಇರುವದ್ದರಿಂದ ಜನ್ಮ ಮರಣದುಃಖಗಳು ಚಕ್ರಾಕಾರವಾಗಿ ತಿರುಗುತ್ತಲಿರುವವು. ಇದು ದೊರೆಯಿತು. ಇದು ದೊರೆಯಬೇಕೆಂಬ ದುಃಖಾಗ್ನಿಯು ಅಹಂಕಾರಸೂರ್ಯನಿಂ ಮನವೆಂಬ ಸೂರ್ಯಕಾಂತದಲ್ಲಿ ಜ್ವಲಿಸುತ್ತಿರುವದು. ಇದಿರುವದು ಇದಿಲ್ಲವೆಂಬ ಚಿಂತೆಯು ಗಿಳಿಯಂ ಪೋಷಿಸದಂತೆ ಅಹಂಕಾರವಂ ಹಿಡಿದಿರುವದು. ಅಹಂಕಾರ ನಷ್ಟಗಲು ಶುಷ್ಕವಾದ ಸಂಸಾರವೃಕ್ಷವು ಕಲ್ಲಿನಂತೆ ತಿರುಗಿ ಪೊಳೆಯದು. ವಿಚಾರವೆಂಬ ಗರುಡನು ಬರಲು ದೇಹದಲ್ಲಿರುವ ಆಶಾಸರ್ಪಗಳೆಲ್ಲಿಗೋ ಪೋಗುವವು. ಅಜ್ಞಾನದಿಂ ಪುಟ್ಟಿ ಭ್ರಾಂತಿಯಿಂದಿರುವಂತಿರುವ ಈ ಸುಳ್ಳು ಪ್ರಪಂಚದಲ್ಲಿ ನಾನು ನೀನೆಂಬ ಕ್ರಮವು ಹ್ಯಾಗೆ ಸಮ್ಮತವಾಗುವದು. ವೃಕ್ಷವಾಗುವ ಯೋಗ್ಯತೆಯಿಂ ಬೀಜವು ಕಾರಣವೆನಿಸುವದು ಅದರ ಪರಿಣಾಮರೂಪವಾದ್ದರಿಂ ವೃಕ್ಷವು ಕಾರ್ಯವೆನಿಸುವದು. ಕಾರಣವಿಲ್ಲದ ಕಾರ್ಯವಿಲ್ಲದ್ದರಿಂದಲೂ, ಕಾರಣವೆನಿಸುವ ಅಜ್ಞಾನವಸತ್ತಾದ್ದರಿಂದಲೂ, ಈ ಜಗವ ಸತ್ತೆಂತಲೇ ಹೇಳಲ್ಪಡುವದು. ಆದಿಯಲ್ಲಿ ಮೃತ್ತಿಗೆಯೊಳ್ ಕುಂಭದಂತೆ ಬ್ರಹ್ಮದಲ್ಲೇ ದೇಹ ಬಂದುಂಟಾದುದು. ಅಂಥಾ ದೇಹವೇ ಈಗಲೂ ಆಗುತ್ತಿರುವದು, ಮುಂದಕ್ಕೂ ಆಗಬಹುದು, ಜಲದಲ್ಲುಂಟಾದ ತರಂಗವು ಜಲವಲ್ಲದೆ ಮತ್ತೊಂದಾಗಲಾರದು. ಅದರಂತೆ ಕ್ಷಣಿಕವಾದ ಈ ದೇಹವು ಬ್ರಹ್ಮವಲ್ಲದೆ ಮತ್ತೊಂದಲ್ಲ. ಪೂರ್ವೋತ್ಪತ್ತಿ ಕಾಲಗ

ಇಲ್ಲಲ್ಲದೆ ಮಧ್ಯದಲ್ಲುಂಟಾಗಿದ್ದ ವಿಕಾರವು ನಷ್ಟವಾದ್ದರಿಂದ ಕಾರಣವಾದ ಬ್ರಹ್ಮಕ್ಕೆ ನಾಶವೆಂಬುದು ಸಮ್ಮತವಾಗಲಾರದು. ತರಂಗದಂತೆ ಮಧ್ಯದೊಳ್ ಹುಟ್ಟಿದ ಈ ದೇಹರೂಪವಾದ ವಿಕಾರವಂ ನಂಬುವರು ದುರ್ಬುದ್ಧಿಗಳಾಗುವರಲ್ಲದೆ ಎಂದಿಗೂ ಸಾಧುಗಳಾಗಲಾರರು. ಇಂಥಾ ಸ್ಥೂಲಗಳನ್ನನೇಕವಾಗಿ ಪಡೆಯುವ ಯೋಗ್ಯತೆ ಇದ್ದಾಗ್ಯೂ, ಆ ಜ್ಞಾನಿಕವಾದ್ದರಿಂದ ಸ್ಥೂಲದಂತೆಯೇ ಲಿಂಗಶರೀರವೆಂದು ತಿಳಿಯತಕ್ಕದ್ದು. ಎಲೋ! ಚಿತ್ತವೇ! ಸ್ವಪ್ನ ದಿಗಲು ಮದ ಇಂದ್ರಿಯ ವೈಚಿತ್ರ್ಯ ಧಾತು ವಿಕಾರ ದುಃಖ ಸಂತೋಷಾತಿಶಯಗಳಲ್ಲಿ ರೂಪ ವ್ಯಾಪಾರ ಕಾಲ ಪ್ರಮಾಣಗಳಿಗೆ ವ್ಯತ್ಯಾಸವಾಗುವಂತೆ ನೀನು ಸತ್ಯವಾಗಿ ಕಾಣುತ್ತೀಯೆ, ಅದರಿಂದ ಕಣ್ಣುಗಟ್ಟಾಟದವನಿಗೂ ನಿನಗೂ ಭೇದವಿಲ್ಲವೆಂದು ತಿಳಿಯುತ್ತೇನೆ. ದೃಶ್ಯವಾದ ಪ್ರಪಂಚವೆಲ್ಲವೂ ಅಸತ್ಯವೆಂದು ವಿಚಾರದಿಂ ನಿಶ್ಚಿತವಾಗುವಲ್ಲಿ ನೀನಿಲ್ಲದಹೋಗುತ್ತೀಯೆ, ಆಗ ಭೋಗವಾಸನೆಗಳು ಹಿಮಗಾಲದಲ್ಲಿ ಹೂಗುತ್ತಿಗಳಂತೆ ನಷ್ಟಗಳಾಗುವವು. ಎಲೈ ಮನವೇ! ಕ್ರಿಯಾಶಕ್ತಿಯ ಚಲನದಿಂ ನೀನು ಹುಟ್ಟಿರುವೆಯಾದ್ದರಿಂದ ನಿನಗೆ ಚಾಪಲ್ಯದಿಂ ಮನನವಂ ಮಾಡುವದು ಯುಕ್ತವಾಗಿರುವದು. ಸಜ್ಜನರಿಗೆ ನಿಂದ್ಯವಾದ ಈ ಮಾರ್ಗವಂ ಬಿಟ್ಟು ವ್ಯಾಪಕಭಾವದಿಂ ನಿನ್ನಲ್ಲಿ ಪ್ರಸಕ್ತವಾಗಿರುವ ಚಿತ್ಸ್ವರೂಪವಂ ಭಾವಿಸುವೆಯಾದರೆ ನಿತ್ಯಶುದ್ಧವಾದ ಸ್ಥಿತಿಯುಂ ಪಡೆಯುತ್ತೀಯೆ? ಪತ್ನೀ ಪುತ್ರಾದಿ ವಿಷಯ ವಾಸನೆಗಳಂ ಬಿಟ್ಟು ದೇಹವಂ ತೃಣೀಕರಿಸಿ ಯುದ್ಧವಂ ಮಾಡುತ್ತಾ, ರಣದಲ್ಲಿ ಮೃತನಾಗಿ ಬ್ರಹ್ಮಲೋಕವಂ ಪೊಂದಿದ ಮಹಾ ವೀರನಂತೆ ಆಗ ನೀನು ಹೊಗಳಿಸಿಕೊಳ್ಳುತ್ತಾ ಸರ್ವೋತ್ತಮನಾಗಿರುತ್ತೀಯೆ? ಎಲೆಲಾ! ಈ ದೇಹ ಮನಸ್ಸುಗಳು ಪರಸ್ಪರ ಸಂಬಂಧಿಗಳಾದಾಗ್ಯೂ ಪರಸ್ಪರ ಶತ್ರುಭಾವದಿಂದಿರುವವು. ಆ ಧಾರಾಧೇಯದಂತಿರುವ ಇವುಗಳಲ್ಲೊಂದು ಹೋದರೂ ಎರಡೂ ಹೋಗುವದು? ಒಂದು ನಿಂತರೂ ಎರಡೂ ಇರುವವು? ಲಿಂಗಶರೀರ ರೂಪವಾದ ಮನವಿರುವಲ್ಲಿ ಸ್ಥೂಲದೇಹಪಾತವಾದ್ದರಿಂದ ಮೃತಿಯಾದುದೆಂಬ ಕಥೆಯು ಗಗನಚಾರಿಯಾದ ಕಬ್ಬಿಣದ ಬೊಂಬೆಯಿಂ ಭೂಮಿಯು ಭಕ್ಷಿತವಾಯಿತೆಂಬಂತೆ ಅಸಂಭಾವಿತವಾಗುವದು. ಅನ್ಯೋನ್ಯ ವಿರುದ್ಧರಾದ ಶತ್ರುಗಳು ಸೇರುವಲ್ಲಿ ಶಸ್ತ್ರ ಪ್ರಕಾಶಗಳಂತೆ ಭೋಗ ದುಃಖಗಳುಂಟಾಗುವವು. ಕಾಗೆ ಗೂಬೆಗಳ ಜಗಳಾಟದಲ್ಲಿ ಕೋಗಿಲೆಯೋಡುವಂತೆ ಬುದ್ಧಿಶಾಲಿಯಾದವನು ಈ ದೇಹ ಮನವೆರಡನ್ನು ಬಿಟ್ಟು ಮುಕ್ತನಾಗುವನು. ಹೀಗಲ್ಲದೆ ಯಾವನು ಭೋಗಾಕ್ರಮದಲ್ಲಿ ಬೀಳುವನೋ ಅವನನ್ನು ಮಹಾ

ನದೀ ಪ್ರವಾಹಾದಿಗಳಿಂದಣಗದ ಬಡಬಾಗ್ನಿಯಲ್ಲಿ ಮಡಗಿರಬೇಕು. ಮನವು ಸ್ವಸಂಕಲ್ಪದಿಂ ಬಾಲಬೇತಾಳಕ್ಕೆ ಸರಿಯಾದ ಶರೀರವಂ ಕಲ್ಪಿಸಿಕೊಂಡು ಸ್ವಕಲ್ಪಿತವಾದ ದುಃಖಗಳೆನ್ನುವದಕ್ಕೆ ಆಸನವಾಗಿ ತಂದೊಡ್ಡುತ್ತಿರುವದು. ವೀರನಾದ ಪಸು ಹೊಡೆಯಲು ಬಂದ ತಂದೆಯಂ ಹೊಡೆಯುವಂತೆ ದೇಹವು ತನ್ನ ದುಃಖಗಳಂ ಮನವಂ ಸೇರಿಸುವದು ? ದುಃಖ ಸುಖಗಳಿಗೆ ಕಾರಣವಾಗುವದ್ದರಿಂದಲೇ ಶತ್ರು ಮಿತ್ರತ್ವಗಳು ಕಾಣುವದ್ದರಿಂದ, ಈ ದೇಹ ಮನಗಳು ಪರಸ್ಪರ ಶತ್ರುಭಾವದಿಂದಿರುವವು. ದೇಹವು ತನ್ನ ದುಃಖಗಳಿಂ ಮನವಂ ಹೊಡೆಯುವದು! ಮನವು ತನ್ನ ದುಃಖವನ್ನನುಭವಿಸಲೋಸುಗ ದೇಹವಂ ಕಲ್ಪಿಸುವದು ! ಹೀಗೆ ಜನ್ಮಶತ್ರುಗಳಾದ ಈ ದೇಹ ಮನಗಳ ಸಂಬಂಧದೊಳ್ ಯಾವ ಸುಖ ವುಂಟಾದೀತು. ಇವುಗಳಲ್ಲಿ ಕೆಟ್ಟ ದೇಹವು ಮನವಳಿದರೆ ತಾನು ಸುಖವಾಗಿದ್ದೇನೆಂದು ಮನದ ನಾಶಕ್ಕೋಸುಗವೇ ಸತ್ಸಂಗಾದಿ ವ್ಯಾಪಾರಗಳಲ್ಲಿ ಸಿದ್ಧವಾಗುವದು. ಮನವಾದರೋ ವಿವೇಕ ಬಂದಲ್ಲಿ ತಾನು ನಷ್ಟವಾದೇನೆಂದು ವಿವೇಕ ಬರುವದಕ್ಕವಕಾಶವಂ ಕೊಡದೆ ತನ್ನ ಅವಿವೇಕ ದುಃಖಗಳ ಭೋಗಕ್ಕೋಸುಗ ದೇಹದ ಸ್ಥಿತಿಯನ್ನಪೇಕ್ಷಿಸುವದು, ತಮ್ಮ ಸುಖರಸವಂ ಕೊಡುವದ್ದರಿಂದ ಮೇಘ ತಟಾಕಗಳಂತೆ ಪರಸ್ಪರವಾಗಿ ವೃದ್ಧಿಹೊಂದಿದ ಈ ಮನೋದೇಹಗಳು ವಾಯ್ವಗ್ನಿಗಳಂತೆ ಶತ್ರುಮಿತ್ರ ಭಾವಗಳಿಂ ನಡೆಯುತ್ತಾ ಕೊನೆಗೆ ಶತ್ರುಭಾವದಿಂದಲೇ ನಿಲ್ಲುವವು. ಇವುಗಳಲ್ಲಿ ಮನವಿರುವವರಿಗೆ ಮನದ ಸಂಕಲ್ಪವಿದ್ದಂತೆ ದೇಹವು ಅನೇಕಪ್ರಕಾರವಾಗಿ ಬೆಳೆವುದು. ಮನವಳಿಯಲು ದೇಹವು ವಾಸನೆಯೊಡನೆ ನಿಶ್ಶೇಷವಾಗಿ ಪೋಗುವದು. ಹೀಗೆ ದೇಹವೊಂದಳಿಯಲು ಮನವು ನಿಶ್ಶೇಷವಾಗಿ ಪೋಗದಾದ್ದರಿಂದ. ಆಶಾಲತೆಯೊಡನೆ ಸಂಕಲ್ಪವೃಕ್ಷಗಳಿಂ ಕೂಡಿದ ಮನೋವನವಂ ಭೇದಿಸಿ ವಿಸ್ತಾರವಾದ ವಿಚಾರಮಾರ್ಗದಿಂದ ಅಖಂಡಾನಂದ ಭೂಮಿಯಂ ಹೊಂದಿ ಸುಖವಾಗಿ ವಿಹರಿಸುವೆನು. ಸಂಕಲ್ಪ ನಾಶವಾಗುವಲ್ಲಿ ಮನದ ಸ್ವಭಾವವಿಲ್ಲದ ಮನವು ಶಾಂತವಾದ ವಾಸನೆಗಳುಳ್ಳದ್ದಾಗಿ ಶರತ್ಕಾಲದಲ್ಲಿ ಮೇಘದಂತೆ ನಷ್ಟವಾಗುವದು. ಧಾತುಗಳಿಗೆ ನಿವೇಶನವಾದ ದೇಹವೆಂಬ ಶತ್ರುವು ಮನೋನಾಶದಲ್ಲಿ ಬಿದ್ದು ಹೋಗುವದು. ಒಂದುವೇಳೆ ಇದ್ದರೂ ಷಂಡನಂತೆ ಮತ್ತೊಂದು ಪುಟ್ಟಿಸದಾದ್ದರಿಂದ ನಷ್ಟವೆಂತಲೇ ತಿಳಿಯತಕ್ಕದ್ದು. ಯಾವದಕ್ಕೋಸುಗ ಭೋಗಸಂಪತ್ತು ಅಪೇಕ್ಷಿಸಲ್ಪಡುವದೋ ಆ ದೇಹಕ್ಕೂ ನನಗೂ ಮಧ್ಯಸ್ಥವಾದ ಮನವಿರುವಲ್ಲಿ ಸಂಬಂಧವೇನಿರುವದು. ಈ ಭೋಗ ಸಂಪತ್ತು ಕುತ್ಸಿತವಾದ್ದರಿಂದ

ಅವಶ್ಯವಲಂಬನವಾದ ದೇಹವನ್ನೇ ಧಿಕ್ಕರಿಸುವೆನು. ನಾನು ದೇಹವಲ್ಲವೆಂಬ ತತ್ತ್ವಾರ್ಥವು ಶ್ರವಣ ಮನನಾದಿಗಳಿಂದನುಭವಕ್ಕೆ ಬರುವಲ್ಲಿ, ಸರ್ವಾಂಗ ಸಹಿತವಾದ ದೇಹವಿದ್ದರೂ ಶವದಂತೆ ಚಲಿಸದಿರುವದಾದ್ದರಿಂದ, ಜಡವಾದ ಈ ದೇಹಕ್ಕೂ ಚಿನ್ಮಾತ್ರನಾದ ನನಗೂ ಸಂಬಂಧವಿಲ್ಲವೆನ್ನುವದು ಗೊತ್ತಾಗಿರುವದು. ಹೀಗಿರುವದ್ದರಿಂದ ದೇಹಾಭಿಮಾನವಂ ಬಿಟ್ಟು ನಾನು ಸೂರ್ಯೋಪಾಸಕನು, ಸೂರ್ಯನಂ ಹೊಂದುವಂತೆ ಆತ್ಮವಿಚಾರವಂ ಮಾಡುತ್ತಾ ಸ್ವರೂಪವನ್ನೇ ಪಡೆವೆನು. ಶರೀರ ನಾನೆಂಬ ಅಜ್ಞಾನದೊಡನೆ ಶರೀರ ಸಂಬಂಧವಾದ ಅನರ್ಥ ದುಃಖಗಳೆಲ್ಲವೂ ಸಂಬಂಧಿಸುವವು. ಮೂಲವಾದ ಅಜ್ಞಾನವಳಿಯುವಲ್ಲಿ ಅದರ ಸ್ಥಿತಿ ನಾಶವಿಚಾರವು ಕೂಡ ಅಯುಕ್ತವೆನಿಸುವದು. ಧೊರೆಯ ಸಮೀಪದಲ್ಲಿ ಪಾಮರರಂತೆ ಆತ್ಮನ ಸನ್ನಿಧಿಯಲ್ಲಿ ಜಡವಾದ ಅಂತಃಕರಣಗಳು ಇಂದ್ರಿಯಗಳೂ ವಿಷಯಗಳೂ ವಾಸನೆಗಳೂ ಸಹ ಸೇರಲಾರವು. ಈಗ ನಾನು ಸ್ವರೂಪವಂ ತಿಳಿದು ಸ್ವಾಭಾವಿಕ ಸ್ಥಿತಿಯಂ, ಹೊಂದಿರುವನಾದ್ದರಿಂದ, ಇಷ್ಟವಸ್ತು ಭ್ರಾಂತಿಗಳಿಂದಲೂ, ಇಚ್ಛೆಗಳಿಂದಲೂ, ಆ ವಿಕಲ್ಪಾಂಶಗಳಿಂದಲೂ ಬಿಡಲ್ಪಟ್ಟು ಅದ್ವಿತೀಯಭಾವದಿಂ ನಿತ್ಯಾನಂದನಾಗಿರುವೆನು. ತಿಲಗಳಿಂ ತೈಲದಂತೆ ಈಗ ನಾನು ಮನೋಬುದ್ಧ್ಯಾದಿ ಜಡಪದಾರ್ಥಗಳಿಂ ಭಿನ್ನನಾದವನು. ಇದುವರೆಗೆ ಬಂಧಕವಾಗಿದ್ದ ಮನೋದೇಹಾದಿಗಳು ಸ್ವರೂಪದ ರೀತಿಯಿಂ ತಿಳಿದ ನನಗೆ ರಾಜನಿಗೆ ಪರಿವಾರಗಳಂತೆ ವಿನೋದಕಾರಿಗಳಾಗಿರುವವು. ಮತ್ತು ಮನ ಸ್ವಚ್ಛತೆಯೂ, ಪೂರ್ಣಕಾಮತೆಯೂ, ಸತ್ತೆಯೂ ಮನೋಹರತೆಯೂ, ಸತ್ಯತೆಯೂ, ಪ್ರಾಜ್ಞತೆಯೂ ಆನಂದಿತೆಯೂ, ಉಪಶಮಿತೆಯೂ, ಪ್ರಿಯಭಾಷಿತೆಯೂ, ಪೂರ್ಣತೆಯೂ, ಉದಾರತೆಯೂ, ನಿತ್ಯಪ್ರಕಾಶತೆಯೂ, ಏಕಾಗ್ರತೆಯೂ, ಸರ್ವಾತ್ಮತೆಯು ಸಮತೆಯೂ, ನಿರ್ಭಯತೆಯೂ, ನಿರ್ವಿಕಲ್ಪತೆಯೂ ಕೂಡ ನನಗೆ ರಾಜನಿಗೆ ಅಂತಃಪುರ ಸುಂದರಿಯರಂತೆ ನಿತ್ಯ ಸಿದ್ಧವಾಗಿರುವವು. ಈಗ ಸಂಕಲ್ಪ ವಿಕಲ್ಪಗಳು ತಪ್ಪಿದ್ದರಿಂದಲೂ ಮನದ ಮನನವಣಗಿದ್ದರಿಂದಲೂ ಮೋಹವಳಿದ್ದರಿಂದಲೂ ಗಗನದಲ್ಲಿ ಶರತ್ಕಾಲದ ಮೇಘದಂತೆ ನಿರ್ಮಲನಾದ ನಾನು ಸ್ವರೂಪದಲ್ಲಿ ವಿಶ್ರಮಿಸಿಕೊಳ್ಳುತ್ತ ಶಾಂತನಾಗಿರುವೆನು. ಎಂದಾಲೋಚಿಸಿದ ಆ ಮಹಾಮುನಿಯು ಒಳಗಣ ದೃಷ್ಟಿಯಿಂ ದಶೋರ್ಧ್ವಮೇಲಿತಲೋಚನನಾಗಿ ಸೂರ್ಯನಂ ಪೊರಮಡುವ ಕಿರಣಗಳು ಸೂರ್ಯಪ್ರಕಾಶವನ್ನೇ ತೋರುವಂತೆ ಪರಮಾತ್ಮನಿಂ ಪೊರಮಟ್ಟ ಮಂತ್ರಗಳೆಲ್ಲವೂ ಅವನ ಮಹಿಮೆಯನ್ನೇ ಪ್ರಕಾಶಪಡಿಸುವವು. ಅವರೆ ವಿಷಯಭೇದದಿಂ ಮಂತ್ರಗಳು ಅವನ ಮಹಿಮೆಯನ್ನೇ ಪ್ರಕಾಶಪಡಿಸುವವು. ಅವರೆ ವಿಷಯಭೇದದಿಂ

ಮಂತ್ರಗಳು ಇತರೇಷ್ಟಾರ್ಥಗಳನ್ನೂ ಉಂಟುಮಾಡುತ್ತಾ ಕ್ರಮವಾಗಿ ಸಾಧಕನಿಗೆ ಪರಮಾರ್ಥವಂ ತೋರುವವು. ತಾರಕವಾದರೋ ಬ್ರಹ್ಮಪ್ರಾಪ್ತಿಯೇ ಮುಖ್ಯ ಫಲವಾಗಿ ಪೊರಮುಟ್ಟಿರುವದಾದ್ದರಿಂದ ಮೋಕ್ಷಾಪೇಕ್ಷೆ ಇದನ್ನೇ ಸಾಧಿಸಬೇಕು. ಸಮಸ್ತ ವೇದಗಳಿಗೂ ಇದೇ ಮೂಲವಾದ್ದರಿಂದಲೂ ಪರಮಾತ್ಮನ ಅಖಂಡಭಾವ ವನ್ನೇ ಮುಖ್ಯವಾಗಿದು ಪೇಳುವದ್ದರಿಂದಲೂ ಭೂತಭವಿಷ್ಯದ್ವರ್ತಮಾನ ಪದಾರ್ಥಗಳೂ ತ್ರಿಕಾಲಾತೀತವಾದ ವಸ್ತುವು ಸಹ ಇದೇಯೆಂದು ನಿಶ್ಚಯಿಸಿ ಘಂಟಾಧ್ವನಿಯಂತೆ ಉಚ್ಚಸ್ವರವಾಗಿ ಪ್ರಣವವನ್ನುಚ್ಚರಿಸುವಲ್ಲಿ ಮೂಲಾಧಾರ ಮೊದಲುಗೊಂಡು ಬ್ರಹ್ಮರಂಧ್ರಾಂತವಾಗಿ ಅದರ ಆರೋಹಣಾವರೋಹಣ ಕ್ರಮದಿಂ ಸಂತಾಪವುದಯಿಸುತ್ತಿರಲು ಆ ನಾದಬ್ರಹ್ಮದಲ್ಲಿ ನೆಲಸಿದ್ದ ಆ ಮುನೀಂದ್ರನ ಜ್ಞಾನವು ಅವನ ಜೀವಚೈತನ್ಯವು ಸಹ ಅರ್ಧಮಾತ್ರೆಯ ಕೊನೆಯೊಳ್ ನಾದಬಿಂದುಕಳಾತೀತವಾಗಿ ಪ್ರಕಾಶಿಸುವ ಅಖಂಡಸಿದ್ಧಜ್ಯೋತಿಗೆ ಅಭಿಮುಖವಾದುದು. ಆ ಪ್ರಣವೋಚ್ಚಾರಣೆಯಲ್ಲಿ ಉದಾತ್ತವಾದ ಅಕಾರದ ಉಚ್ಚಾರಣೆಯೊಳ್ ಮೂಲಾಧಾರ ಮೊದಲುಗೊಂಡು ಧ್ವನಿಯುಂಟಾಗುತ್ತಿರಲು ಪ್ರಾಣನಿಷ್ಕ್ರಮಣ ರೂಪವಾದ ರೇಚಕವು ಸಮುದ್ರವನ್ನಗಸ್ತ್ಯಮಹಾಮುನಿಯಂತೆ ಆ ಮುನಿಯ ಶರೀರವಂ ಶೂನ್ಯವೆನಿಸಿತು. ಆತನ ಶರೀರವಂ ಗೂಡಿನಿಂ ಪೊರಮಟ್ಟ ಪಕ್ಷಿಯು ಆಕಾಶದಲ್ಲಿರುವಂತೆ ಬ್ರಹ್ಮಭಾವನೆಯಿಂ ಸರಸವಾದ ಬಾಹ್ಯಾಕಾಶದೊಳ್ನಿಂದುದು. ಆಗ ಹೃದಯದಲ್ಲಿ ಭಾವಿತವಾದ ಅಗ್ನಿಯೊಣಗಿದ ಮರವಂ ಬಲವಾದ ಕಾಡುಗಿಚ್ಚಿನಿಂ ಆ ಮುನಿಯ ಶರೀರವಂ ದಹಿಸಿತು. ಹಠಯೋಗವು ದುಃಖಪ್ರದವಾದ್ದರಿಂದ ಭಾವನೆಯಿಂದಲೆ ಆ ಮುನಿಯು ಸ್ವದೇಹವಂ ದಹಿಸಿದನು. ಅನುದಾತ್ತಮಂ ಧ್ವನಿಯಿಂ ಉಕಾರವಂನುಚ್ಚರಿಸುವಲ್ಲಿ ಅವನ ಪ್ರಾಣಗಳಿಗೆ ಪೂರ್ಣಕುಂಭದ ಜಲದಂತೆ ನಿಶ್ಚಲವಾದ ಕುಂಭಕವಾದುದು. ಆಗ ಒಳಗೂ ಹೊರಗೂ ಕೆಳಗೂಮೇಲೂ ದಿಕ್ಕುಗಳಲ್ಲೂ ಆತನ ಪ್ರಾಣಗಳಿಗೆ ಕ್ಷೋಭೆಯಾಗಲಿಲ್ಲ ಭಾವಿತವಾದ ಅಗ್ನಿಯು ಸಿಡಿಲಿನ ಕಿಡಿಯಂತೆ ಅದೃಶ್ಯವಾಗಲು ದಗ್ಧವಾದ ಶರೀರದಭಸ್ಮವು ದೃಶ್ಯವಾಗಿದ್ದುದು. ಅಲ್ಲಿದ್ದ ಮೂಳೆಗಳು ಮೂಳೆಗಳು ಪಚ್ಚೆ ಕರ್ಪೂರದ ರಾಶಿಯೋಳ್ಪ್ರಕಾಶಿಸುವಂತಿದ್ದವು. ಭೈರವ ಮತದವನಂತೆ ಬಾಹ್ಯವಾಯುವು ಭಸ್ಮವನ್ನೆತ್ತಿ ತನ್ನ ಮೈಗೆ ಪೂಸಿಕೊಂಡನು ಬಳಿಕ ಆ ಭಸ್ಮವದೃಶ್ಯವಾಗಿ ಯೆಲ್ಲಿಗೋ ಪೋಗಲು ಮಕಾರೋಚ್ಚಾರಣದಲ್ಲಿ ಆ ಪ್ರಾಣಗಳಿಗೆ ಪೂರಕವೆಂಬ ಕ್ರಮವುಂಟಾದುದು. ಪೂರ್ಣರೂಪವಾದ ಆ ಕ್ರಮದಲ್ಲಿ ಚೈತನ್ಯಾವ್ಯಕ್ತದಲ್ಲಿದ್ದ ಆ ಪ್ರಾಣಗಳು ಮಂಜಿನಿಂ ನೆನದಿರುವಂತೆ ತಂಪಾಗಿ

ದ್ದವು. ಬಳಿಕ ಧೂಮವು ಮೇಘಮಂಡಲವಂ ಸೇರುವಂತೆ ಚಂದ್ರಮಂಡಲವಂ ಪೊಂದಿದ ಆ ಪ್ರಾಣಗಳು ಅಮೃತಕರಗಳಿಂ ಪೂರ್ಣವಾದ ಆ ಚಂದ್ರಮಂಡಲದಲ್ಲಿ ಅಮೃತರಸಾಯನರೂಪವಾದವು. ಬಳಿಕ ಶಿವನ ಸಿರಸ್ಸಿನೊಳ್ಗಂಗೆಯಂತೆ ಭಸ್ಮಶೇಷದೊಳ್ ಪ್ರಾಣಾಮೃತಧಾರೆಯು ಬೀಳಲು ಕ್ಷೀರಸಾಗರದಿಂ ಪಾರಿಜಾತದಂತೆ ಆ ಭಸ್ಮಶೇಷದಿಂ ಚತುರ್ಭುಜವಾಗಿ ಕಳಂಕವಿಲ್ಲದ ಚಂದ್ರಮಂಡಲದಂತೆ ಸುಂದರವಾದ ಒಂದು ಶರೀರ ಉಂಟಾದುದು. ಅಮೃತ ರಸಾಯನರೂಪವಾದ ಆ ಪ್ರಾಣಗಳಿಂ ತುಂಬಿದ ಆ ಶರೀರವು ಜಲಗಳಿಂ ಸರೋವರದಂತೆಯು ಮಧುರ ರಸದಿಂ ವೃಕ್ಷದಂತೆಯು ಪ್ರಕಾಶಿಸುತ್ತಾ ಆ ಮುನಿಗೆ ಸ್ವಕೀಯವಾದುದು. ಆ ಶರೀರದಲ್ಲಿರುವ ಕುಂಡಲಿಯು ಪ್ರಾಣಗಳಿಂ ಪೂರಿತವಾಗುವಲ್ಲಿ ಮಳೆಗಳಿಂ ತೊಳೆಯಲ್ಪಟ್ಟ ನೆಲದಂತೆ ಮುನಿಯ ಆ ಶರೀರವು ಪ್ರಕೃತಕಾರ್ಯೋಪಯೋಗಿಯಾದುದು. ಇಂತು ಶೋಷಣ ದಹನ ಪ್ಲಾವನ ಭಾವನೆಗಳಿಂ ನಾರಾಯಣ ಶರೀರವಂ ಪಡದ ಆ ಮುನಿಯು ಸಿದ್ಧಾಸನವಂ ದೃಢವಾಗಿ ಮಾಡಿಕೊಂಡು ಸ್ವಭಾವವಂ ನಿರ್ಮಲವಾಗಿ ಮಾಡಿಕೊಳ್ಳುವ ಶರತ್ಕಾಲವು ಮೇಘಪರಂಪರೆಯಂ ತಳ್ಳುವಂತೆ ವಿಷಯಗಳಿಂ ನಿರಾಕರಿಸಿ ನಿರ್ವಿಕಲ್ಪ ಸಮಾಧಿಗೋಸುಗ ಕಟ್ಟು ಕಂಭದೊಳಾನೆಯಂತೆ ಜ್ಞಾನೇಂದ್ರಿಯ ಪಂಚಕವಂ ದೇಹದಲ್ಲೇ ಕಟ್ಟಿ ತೃಷ್ಣಾಲೋಭ ಕುತೂಹಲಗಳಿಂ ತರಳವಾಗಿ ವಿಷಯಗಳಿಗೋಸುಗ ಓಡುವ ಮನವಂ ಪ್ರಾಣನಿರೋಧದಿಂ ತಡೆಯಲು ಆ ಚಿತ್ತವು ಪುತ್ರ ಮಿತ್ರಾದಿ ಚಿಂತೆಯೆಂಬ ಹಗ್ಗದಿಂ ಬಿಗಿಯಲ್ಪಟ್ಟಿದ್ದಾದಕಾರಣ ಆ ಹಗ್ಗದಿಂದಲೇ ಗೂಟದಂತೆ ದೂರವಾಗಿ ಸೆಳೆಯಲ್ಪಟ್ಟಿತು. ಹಾಗೆ ಹೋಗುವ ಮನವಂ ಜಲವಂ ಸೇತುವಿನಂತೆ ತಡೆದು ಕುಳಿತಿರುವ ಭ್ರಮರಗಳಿಂ ಕೂಡಿದ ಕಮಲಗಳಂ ಸಂಧ್ಯಾಕಾಲದಂತೆ ನಿಶ್ಚಲವಾದ ತಾರಕೆಗಳುಳ್ಳ ನೇತ್ರಗಳನ್ನರ್ಧಮುಚ್ಚಿಕೊಂಡು ಮಹಾತ್ಮರ ಜನ್ಮಕಾಲವು ಶೈತ್ಯ ಸೌರಭ್ಯಮಾಂದ್ಯಗಳಿಂ ಗಾಳಿಯಂ ಸುಖಕರವಾಗಿ ಮಾಡಿಕೊಳ್ಳುವಂತೆ ಅಂತದೃಷ್ಟಿಯಿಂ ಪ್ರಾಣಾಪಾನಗಳಿಗೆ ಮಾಂದ್ಯವನ್ನುಂಟುಮಾಡಿಕ್ಕೊಂಡು ತಿಲಗಳಿಂದ ತೈಲವಂ ತೆಗೆಯುವಂತೆ ವಿಷಯಗಳಿಂದಿಂದ್ರಿಯಗಳಂ ಬೇರ್ಪಡಿಸಿ ಕೂರ್ಮವು ಕಾಲ್ಗಳಂ ಸೆಳೆಕೊಳ್ಳುವಂತೆ ಇಂದ್ರಿಯಂಗಳನ್ನೊಳಕ್ಕೆ ಸೆಳೆದುಕೊಂಡು ಭರಣಿಯಲ್ಲಿಟ್ಟ ಮಣಿಯಂತೆ ಅಂತರ್ಮುಖಪ್ರಕಾಶವಾದನು. ಆಗ ಪ್ರದೋಷಕಾಲದ ಸೂರ್ಯನಿಗೆ ಜಗತ್ತಿನ ಪದಾರ್ಥಗಳಂತೆ ಅವನಿಗೆ ಬಾಹ್ಯವಿಷಯಗಳು ದೂರವಾದವು. ಒಳಗಣ ವಿಷಯಗಳು ಹಿಮಗಾಲದಲ್ಲಿ ವೃಕ್ಷದ ಪೊಟ್ಟರೆಗಳಂ ಸೇರಿಕೊಳ್ಳುವ ಪಕ್ಷಿಗಳಂತೆ ಆತ್ಮನಲ್ಲಿ ಐಕ್ಯವಂ

ಪಡದವು. ಬಾಯಿಮುಚ್ಚಿ ಕೆಳನೊಗವಾಗಿ ಮಡಗಿದ ಗಡಿಗೆಯಲ್ಲಿ ಇತರ ರಂಧ್ರಗಳಿಂ ನೀರು ಸುರಿಯದಿರುವಂತೆ ಹಿಮ್ಮಡಿಯಿಂದ ಸ್ವಲ್ಪ ಗುದವನ್ನೊತ್ತಿ ಮೂಲಾಧಾರವನ್ನೆಳೆಯುವುದರಲ್ಲಿ ದೃಷ್ಟಿಯನ್ನಿಟ್ಟ ಆ ಮುನಿಯ ಶರೀರದೊಳ್ ಇತರ ರಂಧ್ರಗಳಿಂ ವಾಯು ಚಲನವಾಗುವುದು ನಿಂದುದು. ಸ್ವಲ್ಪ ಕುಗ್ಗುವದರಿಂ ತುಂಬಿದಂತಿರುವ ಅವನ ಕಂಠವು ರತ್ನಕುಸುಮಗಳಿಂ ಪೂರ್ಣವಾದ ಮೇರುಶೃಂಗದ ಶಿಖೆಯಂತೆ ನಿಶ್ಚಲವಾಗಿದ್ದುದು. ಧಾರಣಾಧ್ಯಾನ ಸಮಾಧಿಗಳಿಂದಾ ಮುನಿಯ ಮನವು ವಿಂಧ್ಯಗಿರಿಯ ಪಳ್ಳದೊಳ್ ಆನೆಯಂತೆ ಹೃದಯಾಕಾಶದಲ್ಲಿ ನಿಂದುದು. ಶರತ್ಕಾಲದ ಗಗನದಂತೆ ಸೌಮ್ಯ ನಿರ್ಮಲವಾಗಿದ್ದ ಆ ಮನವು ಚಲನವಿಲ್ಲದ್ದರಿಂ ಗಾಳಿಯಿಲ್ಲದ ಸಮುದ್ರದ ಸಾಮ್ಯವನ್ನೈದಿತು. ಹೀಗೆ ಸಂಯಮಾಭ್ಯಾಸದಲ್ಲಿದ್ದ ಆ ಮುನಿಯು ಬ್ರಹ್ಮಾತ್ಮಾಭೇದವಂ ಧ್ಯಾನಿಸುತ್ತಾ ಸೊಳ್ಳೆಗಳಂ ಗಾಳಿಯಂತೆ ಮಧ್ಯಮಧ್ಯದೊಳ್ ತೋರುವ ವಿಪರೀತ ಭಾವನಾ ವಿಕಲ್ಪಗಳಂ ಕೊಡಹಿದನು. ಕತ್ತಿಯನ್ನೆತ್ತಿ ಶತೃಗಳಂ ಕತ್ತರಿಸುವ ಶೂರನಂತೆ ಸಂಶಯಾಸಂಭಾವನೆಗಳನ್ನು ತತ್ವಾರ್ಥ ಶ್ರದ್ಧೆಯಿಂ ಕೂಡಿದ ಮನದಿಂ ಛೇದಿಸಿದನು. ಹೀಗೆ ಬಂದ ಬಂದ ಭೇದಜ್ಞಾನಗಳೆಲ್ಲವನ್ನು ತಳ್ಳುತಲಿರುವ ಆ ಮುನಿಯ ಹೃದಯಾಕಾಶದಲ್ಲಿ ತನ್ನನ್ನವನು ಅತಿಕ್ರಮಿಸುವನೆಂಬ ರೋಷದಿಂ ಪ್ರತ್ಯಕ್ಷವಾಗಿ ಬಂದ ಮಹಾಮಾಯೆಯಂತೆ ಚಲಿಸುವ ಕಾಟಿಗೆಯ ಬೆಟ್ಟದವೋಲ್ ಕಪ್ಪಾದ ತಮವು ಆಕಾಶದಲ್ಲಿ ಕಾಲಮೇಘದಂತುದಿಸಿತು. ಆಗ ನಾನೇ ದೃಕ್ಕೆಂತಲೂ ದೃಶ್ಯವಾದ್ದೆಲ್ಲವೂ ಮಾಯಾಪ್ರಪಂಚವೆಂತಲೂ ನಿತ್ಯಾನಿತ್ಯ ವಿವೇಕಜ್ಞಾನವೆಂಬ ಸೂರ್ಯನ ಪ್ರಕಾಶವಾಗುವಲ್ಲಿ ದೃಷ್ಟವಾದ ಬ್ರಹ್ಮಕ್ಕೆ ದೃಶ್ಯವು ಭಿನ್ನವಾದ್ದರಿಂದ ಸರ್ವವೂ ಬ್ರಹ್ಮವೆಂಬ ಸಮ್ಯಜ್ಞಾನವನ್ನಾ ಮುನಿಯು ನಂಬಿದ್ದವನಾದ್ದರಿಂದ ಆ ತಮವನ್ನೂ ಕೂಡ ಬ್ರಹ್ಮವೆಂದವನು ಪರಿಭಾವಿಸಿದನು. ಆಗ ಬೆಟ್ಟದಂತೆ ಬಂದಿದ್ದ ಮಂಜಿನಂತೆ ಹೋಗುವುದೆಂಬ ಲೋಕವಾರ್ತೆಗೆ ಸರಿಯಾಗಿ ಆ ತಮವಳಿಯಲು ಸಂಧ್ಯಾರಾಗದಂತೊಂದು ಪ್ರಕಾಶವುಂಟಾದುದು. ಕಮಲವು ಪ್ರಾತಃಕಾಲದ ಸಂಧ್ಯಾರಾಗವಂ ನೋಡಿ ಸಂತೋಷಪಡುವಂತೆ ಆ ಮುನಿಯ ಮನವು ಈ ತೇಜವೇ ಬ್ರಹ್ಮವು ನನಗೀರೂಪದಿಂ ಪ್ರತ್ಯಕ್ಷವಾದುದು. ಇದರಲ್ಲಿ ನಾನೈಕ್ಯವಾಗಬೇಕೆಂದು ಚಿಂತಿಸುತ್ತಿರುವಲ್ಲಿ ಪಾತಾಳ ಮುಖದೊಳ್ರಕ್ತಪ್ರವಾಹದಂತೆ ಆ ಮುನಿಯ ಹೃದಯಾಕಾಶದಲ್ಲಿ ರಜೋಗುಣರೂಪವಾದ ಆ ತೇಜವಳಿದುದು. ಬಳಿಕ ಸೂರ್ಯಾಸ್ತವಾಗಲು ಕಣ್ಣು ಕಾಣದ ಚಕ್ರವಾಕದಂತೆ ಸಮಾಧಿಯಿಂ ಚಲಿತವಾಗಿ ಭ್ರಮಿಸುವ ಆ ಮುನಿಯ

ಮನವು ರಾತ್ರಿ ಕಮಲದಂತೆಯೂ, ಮದ್ಯ ಮದದಿಂ ಮತ್ತನಾಗಿರುವನಂತೆಯೂ ನಿದ್ರೆಯನೈದಿತು. ಆಗ ಸರ್ವಸಾಕ್ಷಿಯಾದ ನನಿಗೆ ಜಡವಾದ ಮನಕ್ಕೆ ನಿದ್ರೆಯುಂಟಾಗುವದ್ದರಿಂ ಬಾಧಕವೇನೆಂದು ಆ ಮುನಿಗೆ ಜ್ಞಾನವುಂಟಾದುದು. ಮೋಡವಂ ಗಾಳಿಯಂತೆಯೂ, ಕನ್ನೈದಿಲೆಯ ಬಳ್ಳಿಯಂ ಮದ್ದಾನೆಯಂತೆಯೂ, ರಾತ್ರಿಯಂ ಸೂರ್ಯನಂತೆಯೂ, ಜ್ಞಾನಾತಿಶಯದಿಂ ನಿದ್ರೆಯಂ ಹೋಗಲಾಡಿಸಿದ ಆ ಮುನಿಯ ಹೃದಯಾಕಾಶವು ಸೂರ್ಯ ಚಂದ್ರ ನಕ್ಷತ್ರ ಸಂಧ್ಯಾರಾಗ ಮೇಘಗಳಿಲ್ಲದೆ ಕೇವಲವಾದ ಗಗನದಂತೆ ಪ್ರಕಾಶಿಸಿತು. ಆಗಲಾ ಮುನಿಯು ನೇತ್ರದೋಷದಿಂ ಗಗನದಲ್ಲಿ ನವಿಲುಗಳಂ ಕಾಣುವಂತೆ ಹೃದಯದಲ್ಲುದಿಸಿದ ಶೂನ್ಯವನ್ನಾಕಾಶತತ್ವವೆಂದು ತಿಳಿದನು. ದೃಶ್ಯವಾಗುವುದೆಲ್ಲವು ದೃಗ್ರೂಪನಾದ ಆತ್ಮನಿಂದುದಿಸುವದಾದ್ದರಿಂದಿದೂ ಬ್ರಹ್ಮಸ್ವರೂಪವೆಂದು ಭಾವಿಸುವ ಆ ಮುನಿಯ ಜ್ಞಾನವು ಹೊಂಗೆಯಂ ವರ್ಷಾಕಾಲದ ಮೇಘದಂತೆಯೂ, ಮಂಜಿನ ಧಾರೆಯಂ ಬಿರುಗಾಳಿಯಂತೆಯೂ, ಕತ್ತಲೆಯಂ ದೀಪದಂತೆಯೂ, ಹೋಗಲಾಡಿಸುವಲ್ಲಿ ಆ ಮುನಿಯ ಮನಕ್ಕೆ ಮದವಿಕಾರದಂತೆ ಮೂಢತೆಯುಂಟಾದುದು. ಜ್ಞಾನ ಬಲದಿಂದಾ ಮೂಢತೆಯು ಸೂರ್ಯಪ್ರಕಾಶದಿಂ ರಾತ್ರಿಯ ಜಾಡ್ಯದಂತಳಿಯಲು ತಮಸ್ಸು ತೇಜಸ್ಸು ನಿದ್ರೆ ಮೋಹಾದಿಗಳೇನೂ ಇಲ್ಲದೆ ದುಃಖ ಗಂಧವಿಲ್ಲದ ಒಂದಾನೊಂದು ಆನಂದ ಉದಸಿತು. ಒಂದು ಕ್ಷಣದಲ್ಲಿ ಮನಕ್ಕೆ ವಿಶ್ರಾಂತಿಯಾಗಲು ಕಟ್ಟೆಯಿಂ ಹಿಮ್ಮೆಟ್ಟುವ ಕಾಲುವೆಯ ಜಲದಂತೆ ನಿವೃತ್ತಿ ಮಾರ್ಗದಲ್ಲಿರುವ ಆ ಮುನಿಯ ಮನದಲ್ಲಿ ವಿಶ್ವರೂಪ ಪ್ರಕಾಶವಾದುದು. ಬಹುಕಾಲ ಸಮಾಧಿಯ ಅಭ್ಯಾಸದಿಂದಲೂ ಸ್ವರೂಪಸ್ಥಿತಿಯ ರುಚಿಯು ತಿಳಿದಿರುವದ್ದರಿಂದಲೂ ಚಿನ್ನ ಒಡವೆಯಾಗುವಂತೆ ಆ ಮುನಿಯ ಮನವು ವಿಶ್ವಸಾಕ್ಷಿ ಭಾವದಿಂ ಚಿತ್ಸ್ವರೂಪವಾಗಿದ್ದುದು. ಕಲಶದಲ್ಲಿದ್ದ ಜಲವು ತಿಳಿಯಾಗುವಂತೆ ನಿಜಸ್ವರೂಪದಲ್ಲಿದ್ದ ಆ ಮಹರ್ಷಿಯ ಚಿತ್ತವು ಲೌಕಿಕವಾದ ಪೂರ್ವಸ್ವರೂಪವಂ ತ್ಯಜಿಸಿತು. ಆಗಲಾಮುನಿಯು ವಿಚಾರದಿಂ ತೆರೆನೊರೆ ಮೊದಲಾದ ಭೇದಜ್ಞಾನವಿಲ್ಲದ ಸಮುದ್ರರಾಜನಂತೆ ಸರ್ವಾತ್ಮನು ತಾನೆಂಬ ಜ್ಞಾನದ ರುಚಿಯನ್ನನುಭವಿಸಿದನು. ಆಗ ದೃಶ್ಯವಾಗಿ ಯಾವದೂ ತೋರದಿರಲು, ನಾನೇ ಸರ್ವಸ್ವರೂಪನಾಗಿರುವೆನೆಂದು ತಿಳಿದ ಆ ಮಹಾಮುನಿಯು ವೃತ್ತಿಜ್ಞಾನ ಗಂಧವಿಲ್ಲದ ಜ್ಞಾನಸ್ವರೂಪನಾಗಿ ನಿಂದನು. ರಸಾಯನ ರೂಪವಾದ ಸಮುದ್ರದಂತೆ ಅಖಂಡವಾದ ಆನಂದದಲ್ಲಿ ಸಮರಸವಾಗಿ ದೃಶ್ಯದರ್ಶನ ಹೀನವಾಗಿರುವ ನಿತ್ಯಜ್ಞಾನವೇ ಆ ಮುನಿಗೆ ಜಗತ್ಸ್ವರೂಪವಾಗಿದ್ದುದು. ಕಷ್ಟ ವಿಶೇಷದಿಂ ದೇಶಭ್ರಷ್ಟನಾಗಿ ಪರದೇ

ಶಮಂ ಪಡೆದವನಿಗೆ ಪರಮೇಶ್ವರ ಕಟಾಕ್ಷದಿಂ ಸಾಮ್ರಾಜ್ಯವುಂಟಾದಂತೆ ವೈರಾಗ್ಯದಿಂ ಶರೀರಾತ್ಮ ಭಾವವಂ ಬಿಟ್ಟು ಸಮಾಧಿ ಮಾರ್ಗವನ್ನೈದಿದ ಆ ಮುನಿಗೆ ಜ್ಞಾನಾತಿಶಯದಿಂ ಸತ್ತಾ ಸಾಮಾನ್ಯರೂಪವಾದ ಆ ಸ್ವರೂಪವು ಪ್ರಾಪ್ತವಾಗುವಲ್ಲಿ, ಆನಂದ ಜಲನಿಧಿಯೆಂದು ಪ್ರಸಿದ್ಧಿಯುಂಟಾದುದು. ಆನಂದ ಸರೋವರದಲ್ಲಿ ವಿಹರಿಸುವ ಆ ಬ್ರಾಹ್ಮಣನ ಚೈತನ್ಯವೆಂಬ ಹಂಸವು ಶರತ್ಕಾಲದ ಉದಯದಿಂ ನಿರ್ಮಲವಾದ ಗಗನದಲ್ಲಿ ಪ್ರಕಾಶಿಸುವ ಕಳಂಕವಿಲ್ಲದ ಪೂರ್ಣಚಂದ್ರನಂತಿದ್ದುದು, ಗಾಳಿಯಿಲ್ಲದ ದೀಪದಂತೆಯೂ, ಚಿತ್ರದ ಪ್ರತಿಮೆಯಂತೆಯೂ, ತೆರೆಯಿಲ್ಲದ ಸಮುದ್ರದಂತೆಯೂ, ಮಳೆ ಹುಯಿದು ನಿಂತ ಮೇಘದಂತೆಯೂ ಆ ಮುನಿಯು ಶಾಂತನಾಗಿದ್ದನು. ಆಪರಿಯಾದ ಜ್ಞಾನಪ್ರಕಾಶದಲ್ಲಿದ್ದ ಉದ್ದಾಲಕನಿಗೆ ಅನೇಕ ಸಿದ್ಧ ದೇವರ್ಷಿಗಳ ದರ್ಶನವಾದುದು. ಹಸಿವಿನಿಂದ ಸರಸವಾದ ಆಹಾರದಲ್ಲಿರುವ ಬಾಲಕನಿಗೆ ಕ್ರೀಡಾ ಪದಾರ್ಥಗಳಂತೆ ಸಿದ್ಧವಾದ ಇಂದ್ರಾದಿ ಪದವಿಗಳಂ ಕೊಡುವ ಮಹಾಸಿದ್ಧಿಗಳು ಅಲಕ್ಷ್ಯವಾದವು. ಬುದ್ಧಿಶಾಲಿಯಾದವನು ಬಾಲ್ಯ ಲೀಲೆಗಳಂ ಬಿಡುವಂತೆ ಆ ಸಿದ್ಧಿಗಳಂ ತ್ಯಜಿಸಿದ ಆ ಮಹಾಮುನಿಯು ಆರುತಿಂಗಳು ಸಮಾಧಿಯಲ್ಲೇ ನಿಂತು ಉತ್ತರಾಯಣದ ಸೂರ್ಯನಂತೆ ಪ್ರಕಾಶಿಸಿದನು. ಉತ್ತರೋತ್ತರವಾಗಿ ಜೀವನ್ಮುಕ್ತರ ಪದವಿಗಳನ್ನವನು ಪಡೆಯುವಲ್ಲಿ, ಸಿದ್ಧ ಸಾಧ್ಯ ದೇವರ್ಷಿ ಬ್ರಹ್ಮಾದಿ ಸಾಮ್ಯವಂ ಹೊಂದುತ್ತಾ ಹರಿಹರಾದಿಗಳಿಗೆ ಸಹಜವಾಗಿರುವ ಜ್ಞಾನಾನಂದೈಕರಸವಾದ ವೈಭವವಂ ಪಡೆದನು. ಯಾವದು ಪರಮಪದವೆಂತಲೂ, ಸರ್ವೋತ್ತಮಗತಿಯೆಂತಲೂ, ಅಖಂಡವಾದ ಶ್ರೇಯಸ್ಸೆಂತಲೂ, ಶಾಶ್ವತ ಸ್ಥಿತಿಯೆಂತಲೂ, ಶಿವವೈಭವವೆಂತಲೂ, ನಿತ್ಯ ಸಹಜಾನಂದವೆಂತಲೂ, ಪ್ರಸಿದ್ಧವಾಗಿರುವದೋ, ಸ್ವರ್ಗದಲ್ಲಿದ್ದವನು ಭೂಮಿಯ ಭೋಗಗಳನ್ನು, ಚೈತ್ರರಥವಂ ಕಂಡವನು ಕಗ್ಗಲಿಯ ತೋಪನ್ನು, ರಾಜ್ಯಾಧಿಪತ್ಯವಂ ಮಾಡುವನು ದಾರಿದ್ರ್ಯದುಃಖವನ್ನು, ಬಯಸದಿರುವಂತೆ ಯಾವ ಸ್ಥಿತಿಯಲ್ಲಿ ಒಂದು ಕ್ಷಣವಾದರೂ ನಿಂತವನು, ಮರಳಿ ವಿಷಯಾನಂದ ವೈಭವಗಳನ್ನಪೇಕ್ಷಿಸನೋ ದ್ರಷ್ಟೃದರ್ಶನ ದೃಶ್ಯವಾಸನಾರಹಿತನಾದಾಗ್ಯೂ ದೃಗ್ರೂಪವಾಗಿರುವ ಆ ಸ್ಥಾನದೊಳ್ ನೆಲಸಿದ್ದ ಆ ಮಹಾಮುನಿಗೆ ಪ್ರಾರಬ್ಧ ಭೋಗಶೇಷವಿರುವದರಿಂದ, ಚಿತ್ತವು ಬಹಿರ್ಮುಖವಾದುದು. ಆಗ ಚಂದ್ರಬಿಂಬ ಸಮಾನ ತೇಜರಾದ ಸಿದ್ಧಸಾಧ್ಯ ವಿದ್ಯಾಧರ ಸಿದ್ಧಮುನಿ ಮೊದಲಾದ ವೈಮಾನಿಕರು ಛತ್ರ ಚಾಮರ ಮೊದಲಾದ ದಿವ್ಯ ಸೇವಾಪದಾರ್ಥಗಳಂ ಹಿಡಿದಿರುವ ಅಪ್ಸರೆಯರಿಂದಲೂ, ವೀಣಾ, ವೇಣು, ಮುರಜ, ಮೃದಂ

ಗಾದಿ ವಾದ್ಯ ವಿಶೇಷಗಳಂ ಧರಿಸಿರುವ, ಕಿನ್ನರ, ಕಿಂಪುರುಷ, ಗಂಧರ್ವಾದಿ ಸುಂದರಿಯರಿಂದಲೂ ಸಹಿತರಾಗಿ ಬಂದು, ಎಲೈ ಮಹಾಮುನಿಯೆ! ಪ್ರಣಾಮ ಸೇವಾಪರರಾದ ನಮ್ಮಂ ನೀನು ಕರುಣಾಮಯವಾದ ದೃಷ್ಟಿಯಿಂ ಕಟಾಕ್ಷಿಸುವನಾಗು. ಲೋಕಗಳಲ್ಲಿರುವ ಭೋಗ ಸಂಪತ್ತುಗಳಿಗೆ ಸ್ವರ್ಗಸೌಖ್ಯವೇ ಕೊನೆಯದಾದ್ದರಿಂದಲೂ, ಇದಕ್ಕಾಗಿಯೇ ಸಮಸ್ತವಾದ ಕರ್ಮಕಾಂಡ ಉಂಟಾಗಿರುವದ್ದರಿಂದಲೂ, ಆಕಲ್ಪಾಂತವಾಗಿ ಸ್ವಕರ್ಮ ಸೌಖ್ಯವನ್ನನುಭವಿಸಲೋಸುಗ ಈ ಮಣಿವಿಮಾನವನ್ನೇರಿ ಸ್ವರ್ಗಲೋಕಕ್ಕೆ ಬರುವನಾಗು. ಧರ್ಮಾರ್ಥ ಕಾಮಗಳಲ್ಲಿ ಕಾಮವೇ ಮುಖ್ಯವಾದದ್ದು. ಕಾಮೋಪ ಭೋಗಗಳಲ್ಲಿ ಕಾಮಿನಿಯರೇ ಮುಖ್ಯರೆನಿಸುವರು. ಅಂಥಾ ಕಾಮಿನಿಯರು ವಸಂತದಲ್ಲಿ ಮಂಜರಿಗಳಂತೆ ಸ್ವರ್ಗದಲ್ಲೇ ಇರತಕ್ಕವರು. ಅಂಥವರು ಈಗ ನಿನ್ನ ಸೇವಾರ್ಥವಾಗಿ ಸಿದ್ಧವಾಗಿರುವದ್ದರಿಂದಿವರಂ ಕಟಾಕ್ಷಿಸುವನಾಗು, ಎಂದು ಪ್ರಾರ್ಥಿಸುತ್ತಿರುವಲ್ಲಿ, ಆ ಉದ್ದಾಲಕನು ದೃಶ್ಯ ಪ್ರಪಂಚವೆಲ್ಲವೂ ಮಾಯೆಯೆಂಬ ನಿಶ್ಚಯವಿರುವದ್ದರಿಂದ ಅನುರಾಗಿಯಾಗದೆ ಸರ್ವವ್ಯಾಪಿಯಾದ ಚಿನ್ಮಾತ್ರದಲ್ಲಿ ದೃಷ್ಟಿಯನ್ನಿಟ್ಟು ಅತಿಥಿಗಳಂತೆ ಅವರಂ ಪೂಜಿಸಿ ಪರಮಪುರುಷಾರ್ಥದಲ್ಲಾಸಕ್ತನಾದ ನನಗೆ ವಿಘ್ನವಾಗದಂತೆ ನೀವುಗಳು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು, ಆ ಸಿದ್ಧಾದಿಗಳು ಶರೀರ ಪುಷ್ಟಿಯಂ ನೋಡಿ ಬಂದ ಕಾಮಿನಿಯರು ಷಂಡನ ಬಳಿಯಿಂ ಹಿಂತಿರುಗುವಂತೆ ವೈರಾಗ್ಯ ಪರಾಯಣನಾದ ಆ ಮಹಾಮುನಿಯಂ ನಮಸ್ಕರಿಸಿ ಹಿಂತಿರುಗಿದರು. ಸ್ವಾತ್ಮಲ್ಲಾಸಕ್ತನಾಗಿರುವ ಜೀವನ್ಮುಕ್ತನಾದ ಆ ಮುನೀಂದ್ರನು ಯಥೇಚ್ಛವಾಗಿ ಆಯಾಯ ವನಗಳಲ್ಲೂ, ಮುನಿಗಳ ಆಶ್ರಮಗಳಲ್ಲೂ, ಮೇರು ಮಂದರ ಕೈಲಾಸಾದಿ ಗಿರಿಗಳಲ್ಲೂ, ದ್ವೀಪಾಂತರಗಳ ಉಪವನಗಳಲ್ಲೂ, ದಿಗಂತಗಳಲ್ಲಿರುವ ದಿವ್ಯಾಭರಣಗಳಲ್ಲೂ, ಕೆಲವು ಕೆಲವು ಕಾಲಧ್ಯಾನ ಲೀಲೆಯಿಂದಿದ್ದನು. ಒಂದೆಡೆಯಲ್ಲೊಂದು ದಿನಕ್ಕು ಮತ್ತೊಂದೆಡೆಯಲ್ಲಿ ತಿಂಗಳಿಗೂ, ಇನ್ನೊಂದೆಡೆಯಲ್ಲಿ ವರ್ಷಕ್ಕು, ಒಂದೊಂದೆಡೆಯಲ್ಲಿ ಅನೇಕ ವರ್ಷಗಳಿಗೂ ಆ ಮುನಿಯ ಚಿತ್ತವು ಬಹಿರ್ಮುಖವಾಗುತ್ತಿದ್ದುದು. ಚಿನ್ಮಾತ್ರದಲ್ಲಿ ದೃಷ್ಟಿಯುಳ್ಳವನಾದ್ದರಿಂದ ಆ ಮುನಿಗೆ ವ್ಯವಹಾರಗಳಲ್ಲೂ ಚಿದ್ವಸ್ತುವಿನ ಸತ್ವವೇ ಅಂತಃಕರಣಾದಿಗಳಲ್ಲಿ ಬೇರೆಯಂತೆ ಕಾಣಬರುವದೆಂದು ಮೊದಲು ನಿಶ್ಚಯವಾದುದು. ಬಳಿಕ ಪರಮಾತ್ಮನೇ ಸರ್ವಪ್ರಾಣಿಗಳಲ್ಲೂ ಆತ್ಮರೂಪದಿಂ ಪ್ರಕಾಶಿಸುವನೆಂಬ ನಿರ್ಣಯವಾದುದು. ಆ ಬಳಿಕ ಚಿತ್ತಗಳಿಗೆ ಔಪಾಧಿಕ ಭೇದವಲ್ಲದೆ ಚಿದಂಶಕ್ಕಿಲ್ಲವಾದ್ದರಿಂದ ಚಿತ್ಪದಾರ್ಥವೆಲ್ಲವೂ ಒಂದೊಂದು ಚಿತ್ಸಾಮಾನ್ಯ ಜ್ಞಾನವುಂ

ಟಾಮದು. ಬಳಿಕ ಚಿದ್ವಸ್ತುವಿನ ಸತ್ವಕ್ಕೆ ಅತಿರಿಕ್ತವಾದ ಸತ್ತೇ ಇಲ್ಲವಾದ್ದರಿಂದ ವ್ಯವಹಾರಿಕ ಪ್ರಾತಿಭಾಸಿಕ ಸತ್ವಗಳು ಪಾರಮಾರ್ಥಿಕ ಸತ್ವಕ್ಕೆ ಅಭಿನ್ನವೆಂದು ಸತ್ತಾ ಸಾಮಾನ್ಯ ಜ್ಞಾನವುಂಟಾಮದು, ಬಳಿಕ ಬೇರೆ ಸತ್ವವಿಲ್ಲದ್ದರಿಂದ ಬ್ರಹ್ಮ ಒಂದೇ ಸರ್ವಸ್ವರೂಪವಾಗಿ ಕಾಣಬರುವದೆಂಬ ವ್ಯವಹಾರಾತೀತವಾದ ಅಖಂಡ ಜ್ಞಾನವುಂಟಾದುದು. ಅದರಿಂದಸ್ತೋದಯಗಳಿಲ್ಲದ ಚಿನ್ಮಾತ್ರ ಸ್ವರೂಪನಾದ ಆ ಮುನಿಯು ಪರಮಾತ್ಮನಲ್ಲಿಯೇ ಸರ್ವ ಸಮಭಾವದಿಂದಿದ್ದನು. ಅವನು ಮಾಡಿದ ಕರ್ಮಗಳು ಬ್ರಹ್ಮಭೇದ ಜ್ಞಾನದಿಂ ಶುದ್ಧವಾಗಿದ್ದವಾದ್ದರಿಂದ ಹುರಿದ ಬೀಜದಂತೆ ಪುನರ್ಜನ್ಮಾಂಕುರಕ್ಕೆ ಕಾರಣವಾಗಲಿಲ್ಲ. ವ್ಯವಹಾರಗಳಲ್ಲಿ ನಾನು ನೀನು ಅದು ಇದೆಂಬ ಮಾತುಗಳು ಆರೋಪಿತವಾಗಿ ಬರುತ್ತಿದ್ದಾಗ್ಯೂ ಬ್ರಹ್ಮಾಭೇದಜ್ಞಾನದಿಂದನುರಾಗಾದಿಗಳಿಗೆ ಕಾರಣವಾಗಲಿಲ್ಲ. ಎಲೈ ದಾಶರಥಿಯೇ ! ಸತ್ತಾ ಸಾಮಾನ್ಯದರೀತಿಯಂ ನೀನು ತಿಳಿಯುವನಾಗು. ಬಹು ಪದಾರ್ಥನಿಷ್ಠವಾದ ಧರ್ಮವಿಶೇಷವೇ ಜಾತಿಯೆನಿಸುವದು. ಅದನ್ನೇ ಸಾಮಾನ್ಯವೆಂದು ಹೇಳುವರು. ಈಪ್ರಕಾರವಾಗಿ ಉಪಾಧಿ ಭೇದದಿಂದನೇಕಪ್ರಕಾರವಾದ ಚಿತ್ಪದಾರ್ಥಗಳಲ್ಲಿರುವ ಧರ್ಮವು ಚಿತ್ಸಾಮಾನ್ಯವೆನಿಸುವದು. ಅದಕ್ಕೆ ಚೇತ್ಯವೇ ಸ್ವರೂಪವಾಗಿರುವದು. ಚಿತ್ಪದಾರ್ಥದ ಸತ್ತೆಯೇ ಚೇತ್ಯಕ್ಕೂ ಆಧಾರವಾಗಿರುವದಲ್ಲದೆ ಚೇತ್ಯಕ್ಕೆ ಬೇರೆಸತ್ತೆ ಇಲ್ಲದ್ದರಿಂದ ಈ ಚೇತ್ಯವು ಭ್ರಾಂತಿ ಸಿದ್ಧವೆಂದು ತಿಳಿದು ಚೇತ್ಯಾಭಾವವನ್ನತ್ಯಂತವಾಗಿ ಸಂಭಾವಿಸುವಲ್ಲಿ ಸತ್ತೆಗಳಿಗೆ ಏಕತ್ವವುಂಟಾಗುವದು. ಇದನ್ನೇ ಸತ್ತಾ ಸಾಮಾನ್ಯವೆನ್ನುವರು. ಏಕತ್ವ ದಿತ್ವಗಳಂತೆ ಚಿಚ್ಚೇತ್ಯಗಳು ಪರಸ್ಪರಸಾಪೇಕ್ಷವಾಗಿರುವದ್ದರಿಂದ ಒಂದಕ್ಕೆ ನಾಶವಾದಲ್ಲಿ ಎರಡೂ ಪೋಗುವವು. ಇವರಲ್ಲಿ ಭ್ರಾಂತಿ ಸಿದ್ಧವಾದ್ದರಿಂದನಶ್ವರವಾದ ಚೇತ್ಯವು ಪೋಗುವಲ್ಲಿ ಆ ಸನಂತೆ ಚಿತ್ತಿಗೆ ಪರಮಾತ್ಮನಲ್ಲೈಕ್ಯವುಂಟಾಗುವದು. ಆಗ ಸತ್ತಾ ಸಾಮಾನ್ಯತೆಯುಂಟಾಗುವದು. ಯಾವಾಗ ಚಿತ್ತವು ಸ್ವಗತವಾದ ಚಿತ್ತಿನ ಮಹಿಮೆಯಂ ಸಂಭಾವಿಸುತ್ತಾ ಅದರಲ್ಲಿ ಒಳ ಹೊರಗಣ ಪದಾರ್ಥವೆಲ್ಲವನ್ನೂ ಲಯವಂ ಹೊಂದಿಸುವದೊ ? ಯಾವಾಗ ಪ್ರಾಣಿಗಳು ಪಾರಮಾರ್ಥಿಕ ನಿಜಸ್ವರೂಪ ವಿಚಾರದಿಂ ಸತ್ತಾ ಸಾಮಾನ್ಯವು ಸ್ವಸ್ವರೂಪವೆಂದು ತಿಳಿವರೊ ? ಯಾವಾಗ ಸಮಸ್ತ ದೃಶ್ಯಗಳು ಕೂರ್ಮದ ಅಂಗಗಳಂತೆ ಆತ್ಮನಲ್ಲಿ ಲಯಿಸುವವೋ ? ಆಗ ಸತ್ತಾಸಾಮಾನ್ಯತೆಯು ಪ್ರಕಾಶಿಸುವದು. ತುರೀಯಾತೀತ ಪದಕ್ಕೆ ಸಮಾನವಾಗಿ ಮುಕ್ತರಿಬ್ಬರಿಗೂ ಸಹಜವಾದ ಈ ದೃಷ್ಟಿಯು ಸಪ್ತ ಭೂಮಿಕೆಗಳೊಳ್ ನಾಲ್ಕನೇದರಲ್ಲಿಂ

ಟಾಗುವನು:—ಸಮಾಧಿಗಳಲ್ಲೂ ಬಹಿರ್ಮುಖ ವೃತ್ತಿಗಳಲ್ಲೂ ಕೂಡ ಇದು ಪ್ರಕಾಶಿಸುತ್ತಿರುವುದು. ಏಳನೇ ಭೂಮಿಯನ್ನತಿಕ್ರಮಿಸಿ ಸತ್ವಶೇಷವಿಲ್ಲದ್ದರಿಂದ ಜಡಪ್ರಾಯನಾದವನಿಗೆ ಇದು ಉಂಟಾಗಲಾರದು. ಎಲೈ ರಾಮಭದ್ರನೇ! ಈ ದೃಷ್ಟಿಯು ಬ್ರಹ್ಮ ವಿಷ್ಣು ಮಹೇಶ್ವರಾದಿಗಳಿಗೂ ನಮಗೂ ಸಹಜವಾಗಿರುವುದು. ಈ ದೃಷ್ಟಿಯಿಂದ ಜಗವೆಂಬ ಮನೆಯಲ್ಲಿ ವಿಹರಿಸುತ್ತಿದ್ದ ಆ ಉದ್ದಾಲಕನು ವಿದೇಹಮುಕ್ತನಾಗಬೇಕೆಂದಾಲೋಚಿಸಿ, ಒಂದಾನೊಂದು ಗುಹೆಯೊಳ್ ಪದ್ಮಾಸನದಲ್ಲಿ ಕುಳಿತು ಅರ್ಧತೆರೆದ ಕಣ್ಣುಗಳುಳ್ಳವನಾಗಿ, ಗುದದ್ವಾರ ನಿರೋಧದಿಂ ನವದ್ವಾರಗಳನ್ನು ಬಂಧಿಸಿ ವಿಷಯಗಳೆಲ್ಲವನ್ನು ಹೃದಯದಲ್ಲಿ ಲಯವಂ ಹೊಂದಿಸಿ ಸಮವಾಗಿ ನಿಲ್ಲಿಸಲ್ಪಟ್ಟ ಕಂಠವುಳ್ಳವನಾಗಿ ಹಲ್ಲಿಗೆ ಹಲ್ಲು ತಗಲದಂತೆ ಕಾಲುಮೂಲದಲ್ಲಿ ಕದಲದಂತೆ ನಿಲ್ಲಿಸಲ್ಪಟ್ಟ ಜಿಹ್ವಾಮೂಲವುಳ್ಳವನಾದ್ದರಿಂದೆತ್ತಲ್ಪಟ್ಟಂತೆ ಪ್ರಕಾಶಿಸುವ ಮುಖವುಳ್ಳವನಾಗಿ ಪ್ರಾಣವಾಯುವಿನ ಗತಿಯಂ ತಡದು ಚಿನ್ಮಾತ್ರನನ್ನೇ ಸ್ವರೂಪವಾಗಿ ಭಾವಿಸುತ್ತಾ ಚಿತ್ಸಾಮಾನ್ಯದ ವಿಚಾರದಿಂದುದಿಸಿದ ಬ್ರಹ್ಮಾನಂದದಿಂ ರೋಮಾಂಚವುಳ್ಳವನಾಗಿ ಆನಂದವನ್ನನುಭವಿಸುತ್ತಲೇ ಸತ್ತಾ ಸಾಮಾನ್ಯವಂ ಪರಿಭಾವಿಸುತ್ತಾ ವೈಷಮ್ಯ ಗಂಧವಿಲ್ಲದ ಸಾಮಾನ್ಯ ಭಾವದಿಂ ಪರಮಾತ್ಮನಲ್ಲಿ ವಿಶ್ರಾಂತಿಯಂ ಪಡೆದನು. ನಿರತಿಶಯವಾದ ಆ ಆನಂದದಿಂದ ಅವನಮೊಗದಾವರೆಯು ಅತ್ಯಂತ ಮನೋಹರವಾಗಿದ್ದುದು. ನಿಶ್ಶೇಷವಾಗಿ ಮನನ ವಿಲಾಸವು ನಿಲ್ಲಲು ಅವನ ಚೈತನ್ಯವು ಆನಂದಮಯ ಕೋಶವನ್ನತಿಕ್ರಮಿಸಿತು. ಆಗ ರೋಮಾಂಚ ಮುಖ ಕಾಂತಿಗಳು ಅಣಗುತ ಬರಲು ಅಕಳಂಕವಾಗಿ ಚಿತ್ರದಲ್ಲಿ ಬರೆದ ಶರತ್ಕಾಲದ ಪೂರ್ಣಚಂದ್ರನಂತವನ ಶರೀರವು ಪ್ರಕಾಶಿಸುತ್ತಿದ್ದುದು. ಬಿಸಿನೀರಿನ ಬಿಸಿಯಂತೆ ಆ ಮುನಿಯ ಪ್ರಾಣವಾಯು ಶರೀರದಲ್ಲೇ ಅಣಗಲು ಅವನ ಶರೀರಸಾರವು ನಾಳೆ ಬಿಸಲುಗಳಿಂ ದೇವತಾಪ್ರಸಾದ ಕುಸುಮದಂತೆ ಗ್ರಹಿಸಲ್ಪಡಲು, ಆರು ತಿಂಗಳಿಗೆ ಶುಷ್ಕವಾದ ಆ ಮುನಿಯ ಶರೀರವು ಹಾಗೆ ಕುಳಿತಿರುವದ್ದರಿಂದಲೂ, ರಂಧ್ರಗಳಲ್ಲಿ ನುಗ್ಗುವ ಗಾಳಿಯಿಂ ಧ್ವನಿಗೈಯ್ಯುವದ್ದರಿಂದಲೂ, ಆ ಗಿರಿಯಲ್ಲಿ ಮಾಡಿ ಮಡಗಲ್ಪಟ್ಟ ಗಾಯಕಮೂರ್ತಿಯಂತೆ ಪ್ರಕಾಶಿಸುತ್ತಿದ್ದುದು. ಬಳಿಕ ಒಂದಾನೊಂದು ಕಾಲದಲ್ಲಿ ಪಾರ್ವತಿಯೊಡನೆ ಒಬ್ಬಾನೊಬ್ಬ ತಪಸ್ವಿಗೆ ವರವಂ ಕೊಡಲೋಸುಗ ಆ ಗಿರಿಗೆ ಬಂದ ಸಪ್ತಮಾತೃಕೆಗಳಲ್ಲಿ ಶಂಖಿನಿಯೆಂದು ಪ್ರಸಿದ್ಧಳಾದ ಚಾಮುಂಡಿಕಾದೇವಿಯು ಶುಷ್ಕವಾಗಿದ್ದ ಆ ಉದ್ದಾಲಕನ ಶರೀರವಂ ಶಿರೋಭೂಷಣವಾಗಿ ಮಾಡಿಕೊಂಡಳು. ನವಿಲು ಗರಿಗಳಿಂ ಸೇರಿಸಿ ಹೆಣೆದ

ಆ ದೇವದೇವಿಯ ಜಡೆಯಲ್ಲಿದ್ದ ಮಂದಾರಮಾಲಿಕಾ ಸಮೂಹದೊಳ್ ಆ ಶರೀರವು ವಿಶ್ರಮಿಸಿಕೊಳ್ಳುವ ಭ್ರಮರದಂತೆ ಪ್ರಕಾಶಿಸುತ್ತಿದ್ದುದು. ರಕ್ತಮಾಂಸಾಸ್ಥಿಮಯವಾದ ಆ ಶರೀರಕ್ಕೂ ಕೂಡ ಇಂಥಾ ಪದವಿ ಬರುವಲ್ಲಿ ತತ್ವಜ್ಞಾನಾಭ್ಯಾಸದ ಮಹಿಮೆಯನ್ನೆಂತು ಬಣ್ಣಿಸತಕ್ಕದ್ದು. ಈ ಉದ್ದಾಲಕನ ಕಥೆಯೆಂಬ ಬಳ್ಳಿಯು ಯಾವನ ಹೃದಯದಲ್ಲಿ ರೂಢಮೂಲವಾಗುವದೋ ಅವನು ತಾಪತ್ರಯಾಕುಲವಾದ ಈ ಸಂಸಾರ ವ್ಯವಹಾರದಲ್ಲಿದ್ದಾಗ್ಯೂ ವಿವೇಕ ವಿಚಾರಾದಿ ಸದ್ಗುಣಗಳೆಂಬ ಕುಸುಮಗಳ ಪರಿಮಳದ ಸೊಬಗನ್ನು ಪರಮಾನಂದವೆಂಬ ಫಲದ ಸ್ವಾರಸ್ಯವನ್ನೂ ಕೂಡ ಚನ್ನಾಗಿ ಅನುಭವಿಸುವನೆಂದು ಶ್ರೀ ವಸಿಷ್ಠನು ಶ್ರೀರಾಮಚಂದ್ರನಂ ಕುರಿತು ಹೇಳಿದನೆಂಬಲ್ಲಿಗೆ;—ಉಪಶಮ ಪ್ರಕರಣದೊಳ್ ಜ್ಞಾನಯೋಗತರಂಗಿಣಿಯಲ್ಲಿ, ಉದ್ದಾಲಕೋಪಾಖ್ಯಾನ ನಿರೂಪಣವೆಂಬ ಹತ್ತನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ

---

ಏಕಾದಶತರಂಗ ಪ್ರಾರಂಭಃ.

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ.

---

ರಘುವಿಚಾರಕ್ರಮ ನಿರೂಪಣ ಪ್ರಾರಂಭವು.

ಬಳಿಕ ವಸಿಷ್ಠನು ಶ್ರೀರಾಮಚಂದ್ರನಂ ಕುರಿತಿಂತೆಂದನು:—ಎಲೈ ರಘುಕುಲನಾಯಕನೇ! ಉದ್ದಾಲಕನಂತೆ ನೀನು ಸ್ವಸ್ವರೂಪವಂ ವಿಚಾರಿಸಿ ತಿಳಿಯ ಅಪೇಕ್ಷೆ ಇರುವವರಿಗೆ ಭೂಮಿಯೊಳ್ ವಿಹರಿಸುತ್ತಿದ್ದು ಪರಮಪದದೊಳ್ವಿಶ್ರಾಂತಿಯಂ ಪಡೆಯುವನಾಗು. ದೃಶ್ಯಕ್ಷಯವಾಗಿ ಪರಮಪದ ಪ್ರಾಪ್ತಿಯಾಗುವ ಪರ್ಯಂತವು ಶಾಸ್ತ್ರಾರ್ಥಗಳಲ್ಲೂ, ಗುರುಸನ್ನಿಧಿಯಲ್ಲೂ ತನ್ನ ಮನದಲ್ಲೂ, ವಿಚಾರವಂ ಮಾಡುತಲಿರಬೇಕು. ವೈರಾಗ್ಯಾಭ್ಯಾಸ ಶಾಸ್ತ್ರ ವಿಚಾರಾದಿಗಳಿಂ ತೀಕ್ಷ್ಣವಾಗಿ ಪ್ರಕಾಶಿಸುವ ನಿರ್ಮಲವಾದ ಬುದ್ಧಿಯು ಶಾಶ್ವತವಾದ ಆ ಪದವಿಯನ್ನೇ ಪಡೆಯುವದೆಂದು ಹೇಳುವಲ್ಲಿ;—ಎಲೈ ಪರಮಗುರುವೇ! ಜ್ಞಾನವೃದ್ಧನೊಬ್ಬನು ವ್ಯವಹಾರಪರನಾಗಿದ್ದಾಗ್ಯೂ ಸಮಾಧಿಯುಳ್ಳವನಂತೆ ವಿಶ್ರಮಿಸಿಕೊಳ್ಳುವನು. ಮತ್ತೊಬ್ಬನು ಸಮಾಧಿಯಲ್ಲೇ ನಿಯತನಾಗಿರುವನು, ಇವರಲ್ಲಿ ಯಾವನು ಉತ್ತಮನೋ ಹೇಳಬೇಕೆಂದು, ಶ್ರೀರಾಮನು ಕೇಳಲು? ವಸಿಷ್ಠನಿಂತೆಂದನು:—ಎಲೈ ಬುದ್ಧಿಶಾಲಿಯೇ! ದೃಶ್ಯವೆಲ್ಲವೂ ಗುಣಾತ್ಮಕವಾದ್ದರಿಂದ ಆತ್ಮ

ವಲ್ಲನೆಂದು ನಿಶ್ಚಯಿಸಿದ ಪುರುಷನಿಗೆ ವಿಕ್ಷೇಪವಿಲ್ಲದ ಸ್ವರೂಪಸ್ಥಿತಿಯೇ ಸಮಾಧಿಯೆನಿಸುವದು, ಇದು ಚಿತ್ತವೃತ್ತಿಗಳ ತಡೆತದಿಂದಲೂ ದೃಶ್ಯಸಂಬಂಧವು ಅಂತಃಕರಣಕ್ಕಲ್ಲದೆ ನನಗಲ್ಲವೆಂಬ ವಿವೇಕದ ಅಭ್ಯಾಸ ಬಲದಿಂದಲೂ ಸಂಭವಿಸುವದು. ಇದರಲ್ಲಿ ವಿಷಯ ವಾಸನೆಯಿಲ್ಲದ್ದರಿಂದ ತಾಪಶಾಂತಿಯಾಗಿರುವದೇ ಪರಮಫಲವೆನಿಸುವದು. ಈ ಶಾಂತಿಯುಳ್ಳವನು ಧ್ಯಾನನಿಷ್ಠನಾಗಿದ್ದರೂ ವ್ಯವಹಾರಪರನಾಗಿದ್ದರೂ ಫಲವು ಸಮಾನವೆನಿಸುವದು. ಇಲ್ಲಿ ಚಿತ್ತವೇ ಮುಖ್ಯವಾದ್ದರಿಂದ ಅದರ ಸ್ಥಿತಿಯಿಂದಲೆ ಫಲವು ಭೇದಿಸುವದು. ಚಿತ್ತವು ತಟಸ್ಥಭಾವದಿಂದಿರುವಲ್ಲಿ ಶರೀರವು ವಿಷಯ ಭೋಗದಲ್ಲಿದ್ದರೂ ಆ ಪುರುಷನು ಮಹಾಯೋಗಿ ಎನಿಸುವನು. ಶರೀರವು ಆಸನವನ್ನಳವಡಿಸಿಕೊಂಡಿದ್ದರೂ ಚಿತ್ತವು ವಿಷಯ ಲಂಪಟವಾಗಿದ್ದರೆ ಆ ಪುರುಷನು ವೇಷಧಾರಿಯೆನಿಸುವನು. ಸರ್ವಸಂದೇಹ ಪರಿಹಾರಕವಾದ ಪರಮಾರ್ಥವು ತಿಳಿದಿದ್ದರೆ ನಗರದಲ್ಲಿ ಸಂಸಾರ ವ್ಯವಹಾರದಲ್ಲಿರುವನೂ ವನದಲ್ಲಿ ತಪಸ್ವಿಯಾಗಿರುವನೂ ಸಹ ಸಮವೆನಿಸುವನು. ಕಾಂತಾದಿ ವಿಷಯ ಶ್ರವಣದಲ್ಲಿ ಕಾರ್ಯಾಂತರದಲ್ಲಿ ಪ್ರಸಕ್ತನಾದವನ ಮನದಂತೆ ತನುವಾಸನನಾದವನ ಮನವು ವ್ಯವಹಾರದಲ್ಲಿದ್ದರೂ ಇಲ್ಲದಿರುವಂತೆ ಆಯಾಯ ವ್ಯವಹಾರಗಳಲ್ಲುಂಟಾಗುವ ವಿಕಾರಗಳಂ ಹೊಂದಲಾರದು. ವಾಸನೆಯಿಲ್ಲದ್ದರಿಂದ ಮನಸ್ಸಿಗೆ ಕರ್ತೃತ್ವ ವಿಲ್ಲದಿರುವದೇ ಸಮಾಧಿಯೆಂತಲೂ ಕೈವಲ್ಯವೆಂತಲೂ ಪರಮಾನಂದ ಪದವಿಯೆಂತಲೂ ಹೇಳಲ್ಪಡುವದು. ಹೀಗಿರುವದರಿಂದ ಮನಸ್ಸಿಗೆ ವಾಸನೆ ತಪ್ಪುವಂತೆ ಉದ್ಯೋಗವಂ ಮಾಡುವನಾಗು. ದುಃಖಕರವಾದ ವಾಸನೆ ಸ್ವಲ್ಪ ವಿದ್ದಾಗ್ಯೂ ವ್ಯವಹಾರ ಕರ್ತೃತ್ವವು ಆ ಸಂಬಂಧವಾದ ಬಂಧವೂ ಕೂಡ ತಪ್ಪತಕ್ಕದ್ದಲ್ಲವೆಂದು ನಿಶ್ಚಯಿಸುವನಾಗು. ಯಾವ ಉಪಾಯದಿಂ ಮನಕ್ಕೆ ವಾಸನೆ ತಪ್ಪಿ ಶೋಕಭಯಾಪೇಕ್ಷೆಗಳು ಸಂಭವಿಸದಿರುವವೋ ಅದೇ ಸಮಾಧಿಯೆನಿಸುವದು. ಸಮಸ್ತವಾದ ಜಡಪದಾರ್ಥಗಳಲ್ಲಿ ಆತ್ಮ ಭಾವನೆಯಿಲ್ಲದ ಪುರುಷನ ಭಾವವನ್ನೇ ಅವಲಂಬಿಸಿ ಯಥೇಷ್ಟವಾಗಿ ಶೈಲದಲ್ಲಾಗಲೀ ಮನೆಯಲ್ಲಾಗಲೀ ಸುಖದಿಂದಿರುವನಾಗು. ಅಹಂಕಾರವಿಲ್ಲದೆ ಹೀಗೆ ಸಮಾಧಿನಿಷ್ಠವಾದ ಮನವುಳ್ಳ ಗೃಹಸ್ಥರಿಗೆ ಗೃಹವೇ ವಿಜನವಾದ ತಪೋವನವೆನಿಸುವದು. ಮನೋವೇಗ ಅಡಗದಿರುವನು ತಪೋವನದಲ್ಲಿದ್ದರೂ ದರಿದ್ರನಾದ ಗೃಹಸ್ಥನಂತೆ ದುಃಖಪಡುತ್ತಿರುವನು. ಮಹಾ ಭೂತಗಳಂತೆ ಪರೋಪಕಾರಾರ್ಥವಾಗಿಯೇ ಶರೀರವಂ ಧರಿಸಿರುವ ನಿಷ್ಕಾಮರಾದ ಮಹಾತ್ಮರಿಗೆ ಅಹಂಕಾರ ಮಮಕಾರ ವಾಸನೆಗಳಿಲ್ಲದ್ದರಿಂದ ವನವೂ ಭವನವೂ ಕೂಡ ಸಮಾನವಾಗಿರುವದು.

ವಾಸನೆಗಳಿಂದೆದ್ದ ಮನವು ರಾಗಾದಿಗಳಿಂ ವಿಕ್ಷಿಪ್ತವಾಗಿ ವಿಷಯಗಳಲ್ಲಲೆಯುತ್ತಾ ಮರಳಿ ಸಹಸ್ರಪ್ರಕಾರವಾಗಿ ಏಳುವದಕ್ಕೆ ಬೀಜವಾದ ಸಂಸಾರ ಸುಷುಪ್ತಿಯಂ ಪಡೆವದು, ರಾಗಾದಿ ವಾಸನೆಗಳಣಗಿದ ಮನವು ಮೋಕ್ಷವನ್ನೇ ಹೊಂದುವದು. ಇದರಲ್ಲಿ ನಿನಗೆ ಯಾವದು ರುಚಿಸುವದೋ ಆ ಮಾರ್ಗವಂ ಹೊಂದಬಹುದು. ಯಾವನು ಸರ್ವ ಭಾವಾತೀತನೆಂತಲಾಗಲೀ ಸರ್ವ ಸ್ವರೂಪನೆಂತಲಾಗಲೀ ಆತ್ಮನಂ ತಿಳಿಯುವನೋ ಯಾವನಿಗೆ ಸರ್ವಭಾವಗಳೂ ಸಮವಾದ್ದರಿಂದ ಇಷ್ಟಾನಿಷ್ಟಬುದ್ಧಿಯಣಗಿರುವದೋ ಅವನು ಸಮಾಧಿನಿಷ್ಠನೆನಿಸುವನು. ಎಲೈ ಮನುಕುಲಚಂದ್ರನೇ! ತನ್ನ ಸ್ಥಿತಿಯಲ್ಲಿ ಯಾರಿಗೂ ಸಂದೇಹವಿಲ್ಲವಾದ್ದರಿಂದ ಆತ್ಮನು ಶಾಶ್ವತನೆಂಬುವದು ಸರ್ವ ಸಮ್ಮತವಾಗಿರುವದು. ಅತಿ ದೂರದೇಶದಲ್ಲಿರುವ ಪದಾರ್ಥಗಳ ಸಾಕ್ಷಾತ್ಕಾರ ವಾಗುವದ್ದರಿಂದಲೂ ಜಡವಾದ ಮನಸ್ಸಿಗೆ ಅದಂ ಪಿಡಿಯುವ ಯೋಗ್ಯತೆ ಸ್ವತಃ ಇಲ್ಲದ್ದರಿಂದಲೂ ಆತ್ಮನು ಸರ್ವವ್ಯಾಪಕನೆನ್ನುವದೂ ಕೂಡ ಗೊತ್ತಾಗುವುದು. ಜಗದ್ವಿಷಯದಲ್ಲಿ ದೃಶ್ಯವಾದುದಕ್ಕೆ ನಾಶವು ಕಾಣ್ಬರುವದ್ದರಿಂದಲೂ, ಪ್ರಳಯದಲ್ಲಿ ನಷ್ಟವಾದ್ದಕ್ಕೆ ಪುನರುತ್ಪತ್ತಿಯಾಗುವದ್ದರಿಂದಲೂ, ಜಡಕ್ಕೆ ಚಿತ್ತು ಕಾರಣವಾಗಲಾರದಾದ್ದರಿಂದಲೂ, ಜಗತ್ಕಾರಣವಾದ ಪ್ರಕೃತಿ ಪರಮಾಣ್ವಾದಿಗಳು ಶಾಶ್ವತವಾಗಿರುವವೆಂದು ಕೆಲವರು ಪೇಳುವರು, ಅವರ ದೃಷ್ಟಿಯಿಂದಾತ್ಮನು ನಿಮಿತ್ತವೆನಿಸುವನು. ಪ್ರಕೃತಿ ಮೊದಲಾದವುಗಳು ಉಪಾದಾನವೆನಿಸುವವು. ಇವರಿಗೆ ಮುಕ್ತಿಯೊಳ್ ಜಡಸಂಬಂಧ ತಪ್ಪಬೇಕಾದ್ದರಿಂದ ಜ್ಞಾನಿಯ ದೃಷ್ಟಿಯಿಂ ಪ್ರಧಾನಾದಿಗಳು ದೂರವಾಗಿ ಅವನ ಭಾಗಕ್ಕಿಲ್ಲವಾದ್ದರಿಂದ ಅಶಾಶ್ವತವೆನಿಸಿದಾಗ್ಯೂ ಸರ್ವಸಾಧಾರಣ ದೃಷ್ಟಿಯಿಂ ಶಾಶ್ವತವೆನಿಸುವದ್ದರಿಂದಲೂ ಕಾರಣವಿರುವವರಿಗೆ ಕಾರ್ಯವು ತಪ್ಪತಕ್ಕದ್ದಲ್ಲವಾದ್ದರಿಂದಲೂ ಕಾರಣ ಸತ್ತಾಬಲದಿಂ ಜಗತ್ತು ಸತ್ಯವೆಂದಿವರು ಸ್ಥಾಪಿಸುವರು. ಒಬ್ಬನಿಗೆ ಸತ್ಯವಾಗಿ ಒಬ್ಬನಿಗೆ ಅಸತ್ಯವಾಗಿರುವದ್ದರಿಂದಲೂ ಮುಖ್ಯವಾದ ಜ್ಞಾನಿದೃಷ್ಟಿಯಿಂದ ಅಸತ್ಯವೆನಿಸುವದ್ದರಿಂದಲೂ ಆತ್ಮನಂತೀಜಗವು ಸತ್ಯವಲ್ಲವೆಂತಲೇ ಸಿದ್ಧವಾಗುವದು. ಆದ್ದರಿಂದ ವಿವೇಕಿಗಳು ಆತ್ಮನಲ್ಲೇ ದೃಷ್ಟಿಯನ್ನಿಡುವರು. ಪ್ರಧಾನಾದಿಗಳು ದೂರವಾಗುವವಲ್ಲದೆ ನಷ್ಟವಾಗುವುದಿಲ್ಲವೆಂಬ ಹಠವಾದಿಗಳೂ ಕೂಡ ಜಡವೆಂದು ಜಗವಂ ಬಿಟ್ಟು ಆತ್ಮನನ್ನೇ ನಿಟ್ಟಿಸುವರಾದ್ದರಿಂದ ಸಮಸ್ತರೂ ಆತ್ಮಜ್ಞಾನವನ್ನೇ ಅಪೇಕ್ಷಿಸುವರು. ಪ್ರವೃತ್ತಿ ಮಾರ್ಗದಿಂ ದೃಶ್ಯಾಕಾರವಾಗಿ ಪರಿಣಮಿಸುವಂತೆ ನಿವೃತ್ತಿಮಾರ್ಗದಿಂದಾತ್ಮಾಕಾರವಾಗಿ ಯಾರ ಮನವು ಪರಿಣಮಿಸುವದೋ ಅವರು ಜ್ಞಾನವಂತರೆನಿಸುವರು.

ಸ್ವತಶ್ಚೈತನ್ಯವಿಲ್ಲದ್ದರಿಂದ ಜಡವೆಂತಾಗಲೀ ಬೇರೇ ಸತ್ವವಿಲ್ಲದ್ದರಿಂದ ಅಸತ್ಯವೆಂತಲಾಗಲೀ ಇವರ ಜ್ಞಾನವು ದೃಶ್ಯದಲ್ಲಿಯೇ ಇರುವದು. ಆದಾಗ್ಯೂ ಇವರು ಜಗವೆಲ್ಲವಂ ನಿಸ್ಸಾರವೆಂದು ನಿಶ್ಚಯಿಸಿ ಪರಮಾನಂದ ಸ್ವರೂಪನಾದ ಆತ್ಮನನ್ನು ಸರ್ವಾತೀತನೆಂದಂಗೀಕರಿಸಿರುವರಾದ್ದರಿಂದಾತ್ಮಜ್ಞಾನಿಗಳೆನಿಸುವರು. ಇದರಿಂದ ಜಗವಂ ನಿಸ್ಸಾರವೆಂದು ಗ್ರಹಿಸಿ ಮನವು ಪ್ರವರ್ತಿಸದಿರುವದೇ ನಿವೃತ್ತಿ ಮಾರ್ಗವೆನಿಸುವದು. ಇನ್ನು ಕೆಲವು ಜ್ಞಾನಿಗಳು ಪರಮಾತ್ಮನ ವ್ಯಾಪಕ ಸ್ವಭಾವವನ್ನೇ ನೋಡುತ್ತಾ ತೇಜಸ್ತಿಮಿರಗಳಂತೆ ಪರಸ್ಪರ ವಿರುದ್ಧವಾದ ಆತ್ಮ ಜಗತ್ತುಗಳಿಗೆ ಸಂಬಂಧ ವಸಂಗತವಾದ್ದರಿಂದ ಬ್ರಹ್ಮವೇ ಜಗದ್ರೂಪವಾಗಿ ತೋರುತ್ತಿರುವದಲ್ಲದೆ ಬ್ರಹ್ಮಕ್ಕೆ ಭಿನ್ನವಾದ ಜಗತ್ತಿಲ್ಲವೆಂಬ ನಿಶ್ಚಯದಿಂ ಸರ್ವವೂ ಬ್ರಹ್ಮವೆಂತಲೇ ಸ್ಥಾಪಿಸುತ್ತಿರುವರು. ಈ ಪರಿಯಾದ ಸದ್ವಾಸನೆಯು ಯಾರ ಮನಸ್ಸಿಗಿರುವದೋ ಅವರು ಸತ್ಪದಾರ್ಥವನ್ನಾಗಿಯೇ ಸರ್ವವನ್ನೂ ತಿಳಿಯುವರು. ಸರ್ವಾತೀತನಾತ್ಮನೆನ್ನುವರಿಗೆ ಜಗವೆಲ್ಲವೂ ಅಸತ್ತೆಂಬ ವಾಸನೆಯಿರುವದ್ದರಿಂದ ಸರ್ವವೂ ಅಸತ್ತೆಂತಲೇ ತಿಳಿವರು. ಈ ಸರ್ವ ಶಬ್ದವು ಜಗದ್ವಾಚಕವಲ್ಲದೆ ವಾಙ್ಮನೋತೀತವಾದ ವಸ್ತುವಂ ಗ್ರಹಿಸಲಾರದು. ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ಸಾಕ್ಷಿಯಾದ ವಸ್ತು ಒಂದೇ ಆದ್ದರಿಂದ ಜ್ಞಾನವು ಏಕರೀತಿಯಾಗಿರುವದು. ಆದಾಗ್ಯೂ ಆ ಜ್ಞಾನದ ಆವರಣಶಕ್ತಿಯ ಮಹಿಮೆಯಿಂದ ಸುಷುಪ್ತಿಯಲ್ಲಿ ಯಾವದೂ ಗೋಚರವಾಗದು. ಸ್ವಪ್ನ ಜಾಗರಗಳಲ್ಲಿ ವಿಕ್ಷೇಪಶಕ್ತಿಯ ಪ್ರಕಾಶಕ್ಕೆ ಅನುಗುಣವಾಗಿ ಸ್ವಲ್ಪ ಸ್ಫುಟವಾಗಿಯೂ ಅತಿ ಸ್ಫುಟವಾಗಿಯೂ ಪದಾರ್ಥಗಳು ಗೋಚರವಾಗುವವಲ್ಲದೆ ಇವುಗಳ ಸತ್ತೆಯಲ್ಲಿ ವೈಲಕ್ಷಣ್ಯವೇನೂ ಇಲ್ಲವಾದ್ದರಿಂದ ಸ್ವಪ್ನದಲ್ಲಿ ಪದಾರ್ಥಜ್ಞಾನವಾದಂತೆಯೇ ಜಾಗ್ರತ್ತಿನಲ್ಲೂ ಆಗುವದೆಂದು ಹೇಳುವರು. ಹೀಗೆ ಮನಸ್ಸಿನಲ್ಲಿ ವಾಸನೆ ಇದ್ದಂತೆಯೇ ಜಗವು ಸತ್ತಾಗಿಯೂ ಅಸತ್ತಾಗಿಯೂ ಕಾಣುತ್ತಿರುವದು. ಪ್ರಪಂಚರೂಪವಾಗಿರುವ ಪಂಚಭೂತಗಳು ಅಂತಃಕರಣಾಂಶಗಳಾದ್ದರಿಂದ ಅಂತಃಕರಣವು ಯಾರಿಗೆ ಹೇಗಿರುವದೋ ಹಾಗೆ ಗುಣದೋಷಗಳು ಪಟಿಪಿಟಗಳು ಮಡಿ ಮೈಲಿಗೆಗಳು ಸುಖ ದುಃಖಗಳು ಸಹ ತೋರುತ್ತಿರುವವು. ಅದರಿಂದಲೇ ನಿವೃತ್ತಿಮಾರ್ಗವಲ್ಲಿರುವವರಿಗೆ ಬಂಧುಗಳೂ ಕೂಡ ಸಂತೆಯ ವ್ಯಾಪಾರಕ್ಕೆ ಸೇರಿರುವವರಂತೆ ತೋರುವರು. ನಗರಜನ ಪದಗಳೂ ಕೂಡ ಕಾಡಿಗೆ ಸರಿಯಾಗಿ ಕಾಣಬರುವವು. ಪ್ರವೃತ್ತಿ ನಿವೃತ್ತಿಮಾರ್ಗಗಳಲ್ಲಾವನೆಲ್ಲಿರುವನೋ ಅವನಿಗೆ ಆ ಮಾರ್ಗದವನೇ ಜೋತಾಗುವನು. ಅಂತಃಕರಣಕ್ಕೆ ಸ್ವತಶ್ಶಕ್ತಿಯಿಲ್ಲದ್ದರಿಂದ ಅಂತಃಕರಣಾ

ಸುಗತವಾದ ಚೈತನ್ಯಕ್ಕೆ ಪೂರ್ವವಾಸನೆಯಿದ್ದಂತೆಯೇ ಜಗತ್ತು ಕಾಣ್ಬರುವದೆಂದು ತಿಳಿಯತಕ್ಕದ್ದು. ಸರ್ವಕಾಲ ದೇಶಸ್ಥಿತಿಯಾದ್ದರಿಂದೊಳಗೆ ಹೊರಗೆ ಎಂಬ ವಿಭಾಗವಸಂಗತವೇ ಆಗುವದು. ಆದಾಗ್ಯೂ ಆ ಆತ್ಮನಿಗೆ ವಾಸನೋಚಿತವಾದ ಇಚ್ಛೆಗೆ ಅನುಗುಣವಾಗಿ ಸಿದ್ಧವಾಗಿರುವದು. ಭರಣಿಯಲ್ಲಿರುವ ಕರ್ಪೂರದ ಪರಿಮಳದಂತೆ ಸಕಲ ಪ್ರಾಣಿಗಳ ಹೃದಯದಲ್ಲಿ ನಾನೆಂದು ನಿಂದಿರುವ ಆತ್ಮನ ಮಹಿಮೆಯೇ ಪ್ರಪಂಚರೂಪದಿಂ ಪ್ರಕಾಶಿಸುತ್ತಿರುವದು. ಹೀಗಿರುವದ್ದರಿಂದ ಸರ್ವವೂ ಆತ್ಮನೆಂದು ನಿಶ್ಚಿತವಾಗುವದು. ಈ ಆತ್ಮನು ಹೊರಗಣ ದೃಷ್ಟಿಯಿಂದ ಹೊರಗಿರುವಂತೆಯೂ ಒಳಗಣ ದೃಷ್ಟಿಯಿಂದೊಳಗಿರುವಂತೆಯೂ ದೃಶ್ಯರೂಪವಾಗಿರುವ ತನ್ನ ಚಿತ್ತವಂ ತಾನೇ ನೋಡುತ್ತಿರುವನು. ಅದ್ವಿತೀಯವನಾದ ಆ ಆತ್ಮನು ಸ್ವೇಚ್ಛಾಲೀಲೆಯಿಂದ ತನ್ನನ್ನೇ ದ್ವಿತೀಯವನ್ನಾಗಿ ಕಲ್ಪಿಸಿಕೊಂಡು ತಾನೆಂದದರಲ್ಲಭಿಮಾನದಿಂ ನಿಂದಿರುವನಾದ್ದರಿಂದ ತನ್ನ ಚಿತ್ತವನ್ನೀಪರಿಯಾಗಿ ಪ್ರೇಮದಿಂ ಬೆಂಬಿಡದೆ ನೋಡಿಕೊಂಡಿರುವದು ಯುಕ್ತವೆನಿಸುವದು. ಅಖಂಡನಾದವನಿಗೆ ಇಚ್ಛೆಯು ಸರ್ವದೇಶ ಕಾಲಸ್ಥಾಯಿಗೆ ಪೂರ್ವ ಸಂಸ್ಕಾರರೂಪವಾದ ವಾಸನೆಯೂ ಸಹ ಹೇಗೆ ಬಂದೀತು. ಆದ್ದರಿಂದ ಸರ್ವ ವ್ಯವಹಾರ ರೂಪನಾಗಿಯೂ ವ್ಯವಹಾರಕ್ಕೆ ವಿಷಯನಾಗಿಯೂ ಅದಕ್ಕೆ ಕರ್ತೃವಾಗಿಯೂ ಆತ್ಮನೇ ವಿಹರಿಸುತ್ತಿರುವನೆಂದು ನಿಶ್ಚಯಿಸತಕ್ಕುದು. ಇದರಲ್ಲಿ ಸ್ವಲ್ಪವಾದರೂ ಭೇದವನ್ನೆಣಿಸುವಲ್ಲಿ ಮಹಾಭಯರೂಪವಾದ ಸಂಸಾರವು ಸಂಗಡಲೇ ಸಿದ್ಧವಾಗುವದು. ಅದರಿಂ ವಿಚಾರಪರರಾದವರು ಭೇದಜ್ಞಾನರೂಪವಾದ ಚಿತ್ತದ ವೃತ್ತಿಗಳಂ ತಡೆಯುತ್ತಾ ದೃಗ್ದೃಶ್ಯಗಳಿಗೆ ಅಭೇದಜ್ಞಾನರೂಪವಾದ ಸಮಾಧಿಯಂ ಸಾಧಿಸುತ್ತಾ ಅಖಂಡವಾದ ಸ್ವಸ್ವರೂಪದಲ್ಲಿ ನಿಲ್ಲವರು. ಯಾವನು ಕರ್ಮಪರವಾದ ಇಂದ್ರಿಯಗಳಿಂದ ಸರ್ವಕರ್ಮಗಳಂ ಮಾಡುತ್ತಿದ್ದಾಗ್ಯೂ ಅದ್ವಿತೀಯನಾದ ಆತ್ಮನು ತನ್ನಲ್ಲಿ ತಾನೇ ವಿಹರಿಸುತ್ತಿರುವನೆಂದು ಚಿಂತಾಪೇಕ್ಷಾ ಹರ್ಷಶೋಕಗಳಂ ಹೊಂದದೆ ಶಾಂತನಾಗಿರುವನೋ ಅವನು ಸಮಾಹಿತ ನೆನಿಸುವನು. ಇವನು ಶರತ್ಕಾಲದಲ್ಲಿ ಬಿಸಲಿನಿಂ ಕೂಡಿದ ನದೀತರಂಗಗಳಲ್ಲಿ ಥಳಕಾಂತಿ ವಿಶೇಷದಂತೆ ವ್ಯಾಪಾರಗಳಲ್ಲಿ ಅಹಂಭಾವ ಉದಯಿಸಲು ಚಿನ್ಮಾತ್ರಸ್ವರೂಪ ದೃಷ್ಟಿಯಿಂ ಸರ್ವ ಸಮವಾಗಿರುವ ನನಗೆ ಜಗವೆಂತಲೂ ಜನ್ಮವೆಂತಲೂ ನನ್ನದೆಂತಲೂ ವೈಚಿತ್ರ್ಯವಿಲ್ಲದಿರುವಲ್ಲಿ ಈ ಅಹಂಭಾವವೆಲ್ಲಿಂದುದಿಸಿತೆಂದು ತಾನೇ ನಗುತಲಿರುವನು. ಅಹಂಭಾವಕ್ಕೆ ನಿಶ್ಶೇಷವಾಗಿ ನಾಶವಾಗುವ ಪರ್ಯಂತವೂ ಸದಾಚಾರವನ್ನತಿಕ್ರಮಿಸಕೂಡದಾದ್ದರಿಂದ ವರ್ಣಾಶ್ರಮೋಚಿತವಾದ

ಕರ್ಮಗಳೆಲ್ಲವನ್ನೂ ಮಾಡುತ್ತಿರುವನು. ಇವನಿಗೆ ಚಿನ್ಮಾತ್ರದೃಷ್ಟಿಯಿಂದಂತ ರಂಗದಲ್ಲಿ ಸಮಭಾವ ವಿರುವದಲ್ಲದೆ ಕರ್ಮದಲ್ಲಿಲ್ಲವಾದ್ದರಿಂದ ಮೈತ್ರೀಕರುಣಾ ಮುದಿತೋಪೇಕ್ಷೆಗಳಂ ವಹಿಸಿ ತನ್ನಂತೆಯೇ ಪರರನ್ನೋಡುತ ಸರ್ವರಿಗೂ ಪ್ರೀತಿ ಪಾತ್ರನಾಗುವನು. ಅದ್ವಿತೀಯಭಾವದಿಂ ಪೂರ್ಣಕಾಮನಾಗಿರುವದ್ದರಿಂದ ಸರ್ವ ವಿಷಯಗಳಲ್ಲೂ ವಿರಕ್ತನಾಗಿರುವನು. ಆದ್ದರಿಂದ ತನ್ನ ಪದಾರ್ಥವಂ ಮತ್ತೊಬ್ಬನಿಗೆ ಕೊಡುವಲ್ಲಿವನಿಗೆ ಸಂತೋಷವಿರುವುದಲ್ಲದೆ ಪರದ್ರವ್ಯವಂ ಗ್ರಹಿಸುವುದರಲ್ಲಿ ಅಭಿಲಾಷೆಯಾಗಲಾರದು. ಹಿರಣ್ಯಗರ್ಭನ ಐಶ್ವರ್ಯವೂ ಕೂಡ ಇವನಿಗೆ ತೃಣಪ್ರಾಯವಾಗುವದು. ಇಂಥಾ ಮಹಾತ್ಮನಿಗೆ ಶರೀರಾಭಿಮಾನವೇ ಇಲ್ಲದಿರುವದ್ದರಿಂದ ಪುತ್ರೋದಯ ಮಿತ್ರನಾಶಗಳಿಂದಲೂ ಐಶ್ವರ್ಯ ಲಾಭ ಹಾನಿಗಳಿಂದಲೂ ವಾಹನಾರೋಹಣ ಪಂಕ ಪತನಗಳಿಂದಲೂ ಚಂದನ ಲೇಪಾಂಗಾಂಗ ಸಂಘಟನೆಗಳಿಂದಲೂ ವನಭವನ ನಿವಾಸಗಳಿಂದಲೂ ಹರ್ಷ ಶೋಕಗಳುಂಟಾಗಲಾರವು. ಇವನು ಈಶ್ವರಾಜ್ಞೆಯಿಂದ, ಮಹತ್ತರವಾದ ಪುಣ್ಯಪಾಪ ಕರ್ಮಗಳಂ ಮಾಡುತ್ತಿದ್ದಾಗ್ಯೂ ಕೆಸರಿಗೆ ಬಿದ್ದ ಶುದ್ಧ ಸುವರ್ಣದಂತೆ ನಿರ್ಲೇಪನಾಗಿರುವನು. ಅಜ್ಞಾನಿಯಾದರೋ ಶುಕ್ತಿ ರಜತಸಮಾನವಾದ ನಾನು ನೀನೆಂಬ ಅಭಿಮಾನದಿಂದ ಅಪಾರ ಮನೋಹರವಾದ ವಿಷಯಗಳಲ್ಲಿ ಬಿದ್ದು ಹಳ್ಳದಲ್ಲಿ ಬಿದ್ದ ಮದ್ದಾನೆಯಂತೆ ಬದ್ಧನಾಗುವನು. ಇವನು ವನದಿಂ ವನಕ್ಕೆ ಪೋಗುವಂತೆ ದುಃಖದಿಂ ದುಃಖಕ್ಕೆ ಬರುತ್ತಾ ಜನನ ಮರಣಾತ್ಮಕವಾದ ಸಂಸಾರವೆಂಬ ದುರ್ಮಾರ್ಗದಲ್ಲಲೆಯುತ್ತಿರುವನು. ವಿಚಾರದಿಂ ತತ್ವಾರ್ಥ ಜ್ಞಾನೋದಯವಾಗುವಲ್ಲಿ ರಜ್ಜು ಸರ್ಪದಂತೆ ನಾನೆಂಬ ಜ್ಞಾನವಳಿಯಲು, ಸರ್ವ ಸಮಭಾವವುಂಟಾಗುವದು. ಕಲ್ಲಿನಲ್ಲಿ ಪುತ್ಥದ ಗೊಂಬಲಿನಂತೆ ಅಖಂಡ ಭಾವದಿಂದಿರುವ ಆ ಮಹಾತ್ಮನಲ್ಲಿ ವಿಷಮೇಕ್ಷೆಯುಂಟಾಗದು. ಕರ್ಮದಿಂ ಪ್ರಯೋಜನವು ಕರ್ಮತ್ಯಾಗದಿಂ ಹಾನಿಯೂ ಕೂಡ ಅವನಿಗೆ ಸಂಭವಿಸಲಾರದು. ಎಲೈ ಮಾನವೋತ್ತಮನೆ! ದೇಶಕಾಲಾದಿ ಭೇದವು ಶರೀರ ಪೃಥಕ್ತ್ವಾದಿ ಭೇದವು ಸುಖದುಃಖಾದಿ ವೈಷಮ್ಯವೂ ಇವೆಲ್ಲಕ್ಕೂ ಮೂಲವಾದ ಅಹಂಭಾವಾದಿಗಳು ಅವುಗಳಿಗೂ ಮೂಲವಾದ ಅಜ್ಞಾನವೂ ಕೂಡ ಮೆಣಸಿನಲ್ಲಿ ಕಾರದಂತೆಯೂ, ಉಪ್ಪಿನಲ್ಲಿ ಕ್ಷಾರದಂತೆಯೂ, ಸಕ್ಕರೆಯಲ್ಲಿ ಸಿಹಿಯುಂತೆಯೂ, ಕಲ್ಲಿನಲ್ಲಿ ಕಠಿನಭಾವದಂತೆಯೂ, ಜಲದಲ್ಲಿ ದ್ರವತ್ವದಂತೆಯೂ, ಗಗನದಲ್ಲಿ ಛಿದ್ರದಂತೆಯೂ, ಮಣಿಯಲ್ಲಿ ಪ್ರಕಾಶದಂತೆಯೂ, ಚಿದ್ರೂಪವಾದ ಆತ್ಮನಲ್ಲೇ ಇರುವವು. ದೊಡ್ಡ ಬೆಟ್ಟದಂತೊಂದೇ ಗಟ್ಟಿಯಾಗಿರುವನಾದಾಗ್ಯೂ ಈ ಆತ್ಮನು

ಪ್ರಕಾರಾಂತರದಿಂ ಪ್ರಕಾಶಿಸುವ ಸ್ವಭಾವವುಳ್ಳವನಾದ್ದರಿಂದ ನಾನಾಪ್ರಕಾರವಾದ ಅಜ್ಞಾನಾಹಂಕಾರಾದಿರೂಪಗಳಿಂ ಪ್ರಕಾಶಿಸುವನು. ಆದ್ದರಿಂದ ಸರ್ವವೂ ಬ್ರಹ್ಮವೆಂಬುವದೆ ಸಿದ್ಧಾಂತವಾಗಿ ನಿಲ್ಲುವದು. ನೀರು ಹರಿಯುವಲ್ಲಿ ವರ್ಣಾಂತರಗಳಂತೆ ಚಿದ್ವಸ್ತುವಿನ ಪ್ರಕಾಶದಲ್ಲಿ ಅಹಂಕಾರಾದಿ ವಿಕಾರಗಳು ತೋರುತ್ತಿರುವವು. ಜ್ಞಾನಸ್ವರೂಪನಾದ ಈ ಪರಮಾತ್ಮನು ಈಶ್ವರರೂಪದಿಂ ಸರ್ವಜ್ಞನಾಗಿಯೂ ಜೀವರೂಪದಿಂದಲ್ಪಜ್ಞನಾಗಿಯೂ, ಅಖಂಡವಾಗಿ ಸುಖದುಃಖಗಳನ್ನನುಭವಿಸುವನು. ಜೀವೇಶ್ವರರಿಗೆ ಚಿದಂಶದಲ್ಲಿ ಭೇದವಿಲ್ಲದ್ದರಿಂದ ಜೀವನು ಭಾವಿಸಿದಂತೆ ಈಶ್ವರನು ಫಲಪ್ರದನಾಗುವನು. ಜೀವನಿಗೆ ವಿಚಾರದಿಂದ ಅಜ್ಞಾನವಳಿಯಲು, ಸಹಜವಾದ ಅಖಂಡಸ್ವರೂಪವೇ ಪ್ರಕಾಶಿಸುವದು, ಹೀಗಿರುವದ್ದರಿಂದ ಆದಿಮಧ್ಯಾಂತರಹಿತವಾಗಿ ನಿರ್ವಿಕಾರವಾಗಿಯೂ, ನಿತ್ಯಪ್ರಕಾಶವಾಗಿಯೂ, ಪರಮಾನಂದಸ್ವರೂಪವಾಗಿಯೂ ಒಂದು ಬ್ರಹ್ಮವೇ ಪ್ರಕಾಶಿಸುತ್ತಿರುವದು. ಈ ಅಖಂಡಾರ್ಥವು ಸ್ಫುಟವಾಗಿದ್ದರೂ ಅಜ್ಞಾನಿಗಳಿಗೆ ತಿಳಿಯಲಶಕ್ಯವಾಗಿರುವದ್ದರಿಂದ, ಅವರಿಗೆ ವ್ಯಕ್ತವಾಗಿ ಜ್ಞಾನವುಂಟಾಗಲೋಸುಗವೇ ಅಕಾರ ಉಕಾರ ಮಕಾರ ಅರ್ಧಮಾತ್ರ ಭೇದದಿಂ ವಿರಾಟ್ ಹಿರಣ್ಯಗರ್ಭ ಈಶ್ವರ ತುರೀಯ ಭೇದವನ್ನು ಈ ನಾಲ್ಕು ಒಂದೆಂಬ ಭಾವವಂ ಸಹ ತೋರುತ್ತಾ ಬ್ರಹ್ಮವೇ ಪ್ರಣವರೂಪದಿಂ ಪ್ರಕಾಶಿಸುತ್ತಿರುವದು. ಜ್ಞಾನಕ್ಕೋಸುಗವೇ ಶಬ್ದಮಯವಾದ ಸೃಷ್ಟಿಯುಂಟಾಗಿರುವದೆಂಬ ವಿಷಯದೊಳ್ಮಹಾತ್ಮರು ಪೇಳುವ ಈ ಉಪಾಖ್ಯಾನವಂ ಕೇಳುವನಾಗು. ಈ ನಗರಕ್ಕೆ ಉತ್ತರಭಾಗದೊಳ್ ಜಗತ್ಸಂಸಾರಿಯಾದ ಪರಮೇಶ್ವರನಿಂದೊಂದೆಡೆಯಲ್ಲಿ ಕೂಡಿಸಲ್ಪಟ್ಟ ಕರ್ಪೂರಗಳ ರಾಶಿಯಂತೆಯೂ, ತ್ರಿಪುರಸಂಹಾರದಿಂ ಕೃತಕೃತ್ಯನಾಗಿ ನಿಂದಿರುವ ಚಂದ್ರಶೇಖರನ ಅಟ್ಟಹಾಸದಂತೆಯೂ. ಶೈತ್ಯಾಂಶ ಸಂಬಂಧದಿಂ ಘನವಾಗಿ ಬಂದು ನಿಂದಿರುವ ಚಂದ್ರಕಾಂತಿಯಂತೆಯೂ, ಪ್ರಕಾಶಿಸುತ್ತಾ ರತ್ನಗಳಿಗೆ ಉತ್ಪತ್ತಿಸ್ಥಾನವಾದ ಹಿಮವತ್ಪರ್ವತದೊಳ್ಪುಟ್ಟಿರುವ ನಾಯಕಮಣಿಯಂತೆ ಕೈಲಾಸವೆಂಬ ಗಿರಿ ಇಹುದು. ಹರಿಗೆ ಕ್ಷೀರಸಮುದ್ರದಂತೆಯೂ, ವಿಧಿಗೆ ನಾಭೀಕಮಲದಂತೆಯೂ, ಈಶ್ವರನಿಗೆ ಅದು ನಿವಾಸಸ್ಥಾನವಾಗಿರುವದು. ಲತಾ ದೋಲೋತ್ಸವವನ್ನನುಭವಿಸುವ ಅಪ್ಸರೋರತ್ನಗಳಿಂ ಶೋಭಿಸುವ ರುದ್ರಾಕ್ಷವೃಕ್ಷ ಫಣಿಗಳಿಂದಲಂಕೃತವಾದ ಆ ಪರ್ವತವು ರತ್ನಗಳಿಂ ಥಳಥಳಿಸುವ ತರಂಗಗಳಿಂ ಕೂಡಿದ ಕ್ಷೀರಸಮುದ್ರದಂತೆ ಕಾಣಬರುತ್ತಿರುವದು. ಅಲ್ಲಿ ಪ್ರಥಮ ವಿಲಾಸಿನಿಯರ ಪಾದಪ್ರಹಾರದಿಂದ ಅಶೋಕ ವೃಕ್ಷಗಳ ಹೆಸರು

ಸಾರ್ಥಕವಾಗಿರುವದು. ಚಂದ್ರಕಾಂತ ದ್ರವಗಳಿಂ ಕೂಡಿದ ಅಲ್ಲಿಯ ಪ್ರವಾಹಗಳು ಉತ್ಪನ್ನವಾದ ಪ್ರದೇಶಗಳಿಂ ಹಿಂತಿರುಗುತಲೂ ಜರಿಗಳಲ್ಲಿ ಬೀಳುತಲೂ ಅಜ್ಞಾನಿಗಳನ್ನಣಕಿಸುವವು. ಹಿಮವದ್ಗಿರಿಗೆ ಶೃಂಗಾರವಾಗಿ ಚಿಕ್ಕ ಬ್ರಹ್ಮಾಂಡದಂತೆ ಲತಾವೃಕ್ಷ ನದೀನದ ಮೃಗ ಮನುಜೋತ್ತಮ ದೇವಾಸುರ ಕೂಟಗಳಿಂ ಕೂಡಿರುವ ಆ ಕೈಲಾಸಪರ್ವತದ ಕೆಳಗಡೆಯೊಳ್ ಉಪಪರ್ವತಗಳಲ್ಲಿರುವ ಅರಣ್ಯಗಳನ್ನಾಶ್ರಯಿಸಿ, ಫಲಮೂಲಾದಿಗಳಿಂ ಜೀವಿಸುವ ಹೇಮಜಟರೆಂಬ ಕಿರಾತರಿರುವರು, ಪ್ರತಾಪದಲ್ಲಿ ಸೂರ್ಯನಂತೆಯೂ, ಧನ ಸಂಪತ್ತಿನಲ್ಲಿ ಕುಬೇರನಂತೆಯೂ, ವೈಭವದಲ್ಲಿ ದೇವೇಂದ್ರನಂತೆಯೂ, ಜ್ಞಾನದಲ್ಲಿ ಗುರುವಿನಂತೆಯೂ, ನೀತಿಶಾಸ್ತ್ರಗಳಲ್ಲಿ ಶುಕ್ರನಂತೆಯೂ, ಪ್ರಖ್ಯಾತನಾಗಿ ಮಹತ್ತಾದ ಕಾಯಬಲದಿಂ ಮೂರ್ತಿಮಂತನಾದ ಮಾರುತನೆಂತಲೂ, ಜಯಲಕ್ಷ್ಮಿಯ ಭುಜವೆಂತಲೂ, ದೇವತೆಗಳಿಂ ಪೊಗಳಿಸಿಕೊಳ್ಳುತ್ತಲಿರುವ ಸುರಘನೆಂಬ ಮಹಾರಾಜನು ಘೋರರಾದ ಸುರವೈರಿಗಳ ದರ್ಪವಂ ನಿರ್ನಾಮವಾಗಿ ಮಾಡುತ್ತಾ ಆ ಕಿರಾತರ ರಾಜ್ಯವನ್ನಾಳುತ್ತಿದ್ದನು. ದಿವಸ ವ್ಯಾಪಾರಗಳಂ ನಡೆಸುವ ಸೂರ್ಯನಂತೆ ಸ್ವಲ್ಪವೂ ಭೇದವಿಲ್ಲದೆ ನಿಗ್ರಹಾನುಗ್ರಹ ಕ್ರಮಗಳಿಂ ರಾಜಕಾರ್ಯಗಳಂ ನೆರವೇರಿಸುವ ಆ ಮಹಾರಾಜನಿಗೊಂದಾನೊಂದು ಸಮಯದೊಳ್ ಬಲೆಯ ಇಕ್ಕಟ್ಟಿನಿಂ ಪಕ್ಷಿಯಗತಿಯಂತೆ ಆ ರಾಜ್ಯಭಾರದ ಸುಖದುಃಖಗಳಿಂ ಬುದ್ಧಿಯು ವ್ಯಾಕುಲವಾದುದು. ತಿಲಗಳಿಂ ತೈಲವಂ ಸೆಳೆಯುವ ಯಂತ್ರದಂತೆ ಈ ಕಿರಾತರಿಂ ನಾನು ಧನವಂ ನಿಶ್ಶೇಷವಾಗಿ ಗ್ರಹಿಸುವಲ್ಲಿ ಸಪರಿವಾರರಾದ ಅವರಿಗೆ ಬಂದ ದುಃಖವು ಪುನಃ ನನ್ನಿಂದಲೇ ಹೋಗಲಾಡಿಸತಕ್ಕದ್ದಾದ್ದರಿಂದ ಆ ದುಃಖವೆಲ್ಲವೂ ನನಗೇ ಬಂದಂತಾಗುವದು. ಅವರಿಗೆ ನಾನೇ ಧನವಂ ಕೊಡಲು ಮದೋದ್ರೇಕದಿಂ ಮರ್ಯಾದೆಯಂ ಮೀರುವರಾದ್ದರಿಂದ ಅವರಂ ನಾನೇ ನಿಗ್ರಹಿಸಬೇಕಾಗುವದು. ನಾನು ನಿಗ್ರಹವನ್ನೇ ಮಾಡುವಲ್ಲಿ ನನ್ನ ಸಮೀಪಕ್ಕೆ ಯಾರೂ ಬಾರರು. ಅನುಗ್ರಹವನ್ನೇ ಮಾಡುವಲ್ಲಿ ದುಷ್ಟರಾಗಿ ಮಿತಿಮೀರಿ ನಡೆವರು. ಹೀಗಿರುವಲ್ಲಿ ನಾನು ಮಾಡತಕ್ಕದ್ದೇನೆಂದು ಆ ಮಹಾರಾಜನು ಆಲೋಚಿಸುತ್ತಿರುವಲ್ಲಿ, ಅವನ ಮನವು ನೀರಿನ ಸುಳಿಯಲ್ಲಿ ಸಿಲುಕಿದ ತೃಣದಂತೆ ಭ್ರಮಿಸುತ್ತಿದ್ದುದು. ಆಗ ಮಾಂಡವ್ಯನೆಂಬ ಮಹಾಮುನಿಯು ಇಂದ್ರನ ಸಮೀಪಕ್ಕೆ ಬರುವ ತ್ರಿಲೋಕಸಂಚಾರಿಯಾದ ನಾರದನಂತೆ ಆ ರಾಜನ ಸಮೀಪಕ್ಕೆ ಬಂದನು. ಯಥೇಚ್ಛವಾಗಿ ಆ ಮುನೀಂದ್ರನಿಗೆ ಪೂಜಾಕ್ರಮದಿಂ ಸಂತೋಷವನ್ನುಂಟುಮಾಡಿದ ಆ ರಾಜೇಂದ್ರನು ಅವನ ಆಜ್ಞೆಯಿಂ ಸಮೀಪದಲ್ಲಿ

ಕುರಿತು ಪ್ರಶ್ನೆಗೈದನದೆಂತೆನೆ;—ಎಲೈ ಮಹಾಮುನಿಯೆ! ವಸಂತೋದಯದಿಂ ವೃಕ್ಷದಂತೆಯೂ ವಿಷ್ಣುವಿನ ಅವತಾರದಿಂ ತಪಸ್ವಿಯಂತೆಯೂ, ಮಹಾತ್ಮನಾದ ನಿನ್ನ ಆಗಮನದಿಂ ನಾನು ಸಂತುಷ್ಟನಾಗಿರುವೆನು. ಸೂರ್ಯ ಕಿರಣದಿಂ ಕಮಲದಂತೆ ನಿನ್ನ ಕಟಾಕ್ಷದಿಂ ನಾನು ಧನ್ಯರಲ್ಲಿ ಗಣ್ಯನಾದೆನು. ಸಕಲ ಧರ್ಮರಹಸ್ಯಗಳಂ ತಿಳಿದು ಸರ್ವೋತ್ತಮವಾದ ಸ್ಥಾನದಲ್ಲಿ ಬಹುಕಾಲದಿಂ ವಿಶ್ರಾಂತನಾಗಿರುವಯಾದ್ದರಿಂದಂಧಕಾರವಂ ಸೂರ್ಯನಂತೆ ನನ್ನ ಸಂದೇಹವಂ ಪರಿಹರಿಸುವನಾಗು. ಜನರ ನಿಗ್ರಹಾನುಗ್ರಹ ವಿಷಯದಲ್ಲಿ ಬಂದಿರುವ ಸಂದೇಹವು ಗಜವಂ ಸಿಂಹದಂತೆ ನನ್ನಂ ವ್ಯಥೆಪಡಿಸುತ್ತಿರುವದು. ಇದಕ್ಕಿಂತಲೂ ಅಧಿಕವಾದ ದುಃಖವಿಲ್ಲವಾದ್ದರಿಂದ ಕೃಪೆಯಿಂದೀದುಃಖವಂ ಪರಿಹರಿಸುವನಾಗು. ಸೂರ್ಯಕಿರಣದಂತೆ ನನಗೆ ಹೇಗೆ ಸಮಭಾವವುಂಟಾಗುವದೋ ಹಾಗೆ ಅನುಗ್ರಹಿಸುವನಾಗು;—ಎಂದು ಬೆಸಗೊಳ್ಳುವ ಆ ರಾಯನಂ ಕುರಿತು ಮಾಂಡವ್ಯನು ಪೇಳಿದನದೆಂತೆನೆ;—ಎಲೈ ಮಹಾಮತಿಯೇ! ಸ್ವಪ್ರಯತ್ನ ಸಾಧ್ಯವಾಗಿರುವ ಸ್ವರೂಪ ಸಾಕ್ಷಾತ್ಕಾರಾಂತವಾದ ವಿಚಾರವೆಂಬ ಉಪಾಯದಿಂದಲೇ ಮನಸ್ಸಿಗೆ ವೈಷಮ್ಯ ಸಂದೇಹಾದಿಗಳಿಂದುಂಟಾದ ಅಧೈರ್ಯವು ತಪ್ಪಿ ಧೈರ್ಯವುಂಟಾಗುವದು. ಶರತ್ಕಾಲಾಗಮದಿಂ ಮಳೆಯ ಜಡಿಯಂತೆ ಆ ಧೈರ್ಯದಿಂ ಮನಸ್ಸಿನ ಅಧೈರ್ಯವು ಪೋಗಿ ಸಮಭಾವವುಂಟಾಗುವದು. ಆದ್ದರಿಂ ನಿನ್ನ ಮನಸ್ಸಿನಿಂದಲೇ ನಿನ್ನ ಶರೀರದಲ್ಲಿರುವ ತತ್ವಗಳಂ ವಿಚಾರಿಸುವನಾಗು. ಪತ್ನೀಪುತ್ರ ಮಿತ್ರಾದಿಗಳನ್ನು ಇಂದ್ರಿಯ ಸ್ವರೂಪೋತ್ಪತ್ತಿ ಕ್ರಮಗಳನ್ನು ವಿಚಾರಿಸುತ್ತಾ ನಾನು ಯಾರು ಇದೆನಿಸಿಕೊಳ್ಳುವದು ಯಾವದು? ಇದಕ್ಕೂ ನನಗೂ ಸಂಬಂಧವೇನು? ನನಗೆ ಜನನ ಮರಣಗಳು ಹೇಗೆ ಸಂಘವಿಸಿದವು? ಎಂದು ವಿಚಾರಿಸುವ ನಿನಗೆ ಮಹತ್ವವುಂಟಾಗುವದು. ಬಳಿಕ ಶೈಲವಂ ಗಾಳಿಗಳಂತೆ ಹರ್ಷಾಮರ್ಷಗಳು ನಿನ್ನನ್ನಲ್ಲಾಡಿಸಲಾರವು. ಆಗ ನಿನ್ನ ಮನವು ಮನ್ವಂತರ ಗತಿಯಲ್ಲಿ ಕಲಿಕಳಂಕವಂ ಬಿಟ್ಟು ಕೃತಯುಗ ಧರ್ಮವಂ ಹೊಂದುವ ಪ್ರಪಂಚದಂತೆ ಸ್ವರೂಪವಂ ಬಿಡದೆ ಶಾಂತವಾಗುವದು. ಪೂರ್ವದಂತೆ ವ್ಯವಹಾರಯೋಗ್ಯತೆ ಇಲ್ಲದ್ದರಿಂದ ನಷ್ಟವೆಂತಲೇ ಅದಂ ಪೇಳುವರು. ಇಂಥ ಮನವುಳ್ಳವನಿಗೆ ಅಖಂಡಾನಂದ ಪದವಿಯೇ ಸಿದ್ಧವಾಗುವದ್ದರಿಂದ ಬ್ರಹ್ಮಾದಿ ಶ್ರೀಮಂತರು ಪುತ್ರರಂತೆ ದಯಮಾಡಲು ಯೋಗ್ಯರಾಗುವರು. ಮೇರು ಸಮುದ್ರ ಗಗನಗಳ ಮಹತ್ವವೂ ಕೂಡ ಇವನ ಮಹಿಮೆಯಲ್ಲೇಕದೇಶವಾಗುವದು. ಅತಿ ಕ್ಷುದ್ರವಾದ ವಿಷಯದ ಸಂಗತಿಯಿಂ ಜೀರ್ಣವಾದ ಮೂಷಕನಂತೆ ಗೋಷ್ಪದೋದಕದಲ್ಲಿ ಮುಳುಗುತ್ತಿದ್ದ ಈ

ಮಹಾತ್ಮನ ಮನಕ್ಕೆ ಪರಮಾತ್ಮ ಸಂಬಂಧದಿಂದ ಬ್ರಹ್ಮಾದಿಗಳ ಆನಂದ ಸಮುದ್ರ
ಗಳೂ ಕೂಡ ಗೋಷ್ಪದಜಲಗಳಂತಾಗುವವು. ಇಂಥಾ ಮಹಿಮೆಯುಂಟಾದ್ದ
ರಿಂದ ತಿರುಗಿ ಮನವು ಕ್ರಿಮಿಯಂತೆ ದೃಶ್ಯಕರ್ದಮದೊಳ್ಬೀಳದು, ದಿಂಡು ಸಿಕ್ಕು
ವವರಿಗೆ ಬಾಳೆಪಟ್ಟೆಗಳಂ ತೆಗೆಯುವಂತೆಯೂ ಚಿನ್ನ ನಿಲ್ಲುವವರಿಗೆ ಧಾತುವಂ
ತೊಳೆಯುವಂತೆಯೂ ನಿವೃತ್ತಿಮಾರ್ಗದಲ್ಲಿರುವನು. ಸ್ವರೂಪ ಸಾಕ್ಷಾತ್ಕಾರವಾ
ಗುವವರಿಗೆ ತತ್ವಗಳನ್ನೀ ತಿಳಿಯಬೇಕು. ಹೀಗೆ ಅವಸ್ಥೆಗಳೆಲ್ಲವೂ ಪೋಗುವಲ್ಲಿ
ಮನವೇ ಆತ್ಮನೆನಿಸುವದು. ಯಾವನು ಇತರ ಕಾರ್ಯಕ್ಕೆ ಪೋಗದೆ ಒಂದೇ
ಕಾರ್ಯದಲ್ಲಿ ನಿಲ್ಲುವನೋ ಅವನು ಅದರ ಫಲವಂ ಪಡೆಯುವನಾದ್ದರಿಂದ, ಸ್ವರೂಪ
ಜ್ಞಾನಾಪೇಕ್ಷೆಯು ದೃಶ್ಯವೆಲ್ಲವನ್ನೂ ತಿರಸ್ಕರಿಸುತ್ತಾ ಯಾವದು ತಿರಸ್ಕರಿಸಲಶಕ್ಯ
ವಾಗುವದೋ ಅದನ್ನೇ ಆತ್ಮನೆಂದು ತಿಳಿಯತಕ್ಕದ್ದು. ಎಂದು ಮಾಂಡವ್ಯಮು
ನಿಯು ಪೇಳಿ ಪೊರಮಟ್ಟು ಪೋಗಲು, ಮನೋಹರವಾದ ಏಕಾಂತ ಪ್ರದೇಶವಂ
ಪಡೆದ ಆ ಮಹಾರಾಜನು ಆಲೋಚಿಸಿದನದೆಂತೆನೆ;—ಇದುವರಿಗೆ ಕಂಡದ್ದೆಲ್ಲವನ್ನೂ
ನನ್ನದೆಂದು ಗ್ರಹಿಸುತ್ತಾ ಅದರ ದುರವಸ್ಥೆಗಳಲ್ಲಿ ನಾನೇ ಕೆಟ್ಟೆನೆಂದು ದುಃಖಪಡು
ತ್ತಿದ್ದೆನಷ್ಟೆ? ಈಗ ನಾನೆನಿಸಿಕೊಳ್ಳುವದು ಯಾವದೋ ಅದಂ ನಾನು ತಿಳಿಯುವೆನು.
ಜಗತ್ತಿಗಾಧಾರವಾದ ಈ ಚಿನ್ನದ ಬೆಟ್ಟವು ನನ್ನದೆನಿಸಿಕೊಳ್ಳುವದ್ದರಿಂದ ನಾನಾಗ
ಲಾರೆನು. ಇದರ ಸಮೀಪಕ್ಕೆ ದೈತ್ಯರು ಬರುವಲ್ಲಿ ನಾನು ದುಃಖಪಟ್ಟಿದ್ದಕ್ಕೆ ದುರ
ಭಿಮಾನವೇ ಕಾರಣವಾದುದು. ಇದೇಪ್ರಕಾರ ಈ ಜಗತ್ತೂ ಈ ಬೆಟ್ಟಗಳೂ ಈ
ಭೂಮಿಯು ಈ ಕಿರಾತಮಂಡಲವು ಈ ದೇಶವು ಈ ನಗರದಲ್ಲಿ ಇಲ್ಲಿಯ ಜನಗಳು
ಈ ಪತ್ನೀ ಪುತ್ರಾದಿ ಬಂಧುಜನವೂ ಕೂಡ ನಾನೆನಿಸಿಕೊಳ್ಳಲಾರದ್ದರಿಂದ, ಈ
ದೇಹವೇ ನಾನೆನಿಸಿಕೊಳ್ಳುವದೆಂದು ನಿಶ್ಚಯಿಸತಕ್ಕದ್ದು. ಆದರೆ ಈ ಶರೀರದ
ಲ್ಲಿಯೂ ಈ ಕೈಕಾಲು ಮೊದಲಾದ ಅಂಗಗಳು, ಈ ರಕ್ತ ಮಾಂಸಾದಿಗಳು, ಈ
ಕರ್ಮೇಂದ್ರಿಯ ಜ್ಞಾನೇಂದ್ರಿಯಗಳು, ಈ ಪ್ರಾಣಗಳು, ಈ ವಿಷಯ ಭೋಗಗಳು,
ಈ ಅಂತಃಕರಣಗಳು, ಈ ಜ್ಞಾನವೂ ಸಹ ನಾನೆನಿಸಿಕೊಳ್ಳಲಾರದಾದ್ದರಿಂದ, ಈ ಶರೀ
ರದೊಳ್ ಜೀವನೆನಿಸಿಕೊಳ್ಳುವ ಚೈತನ್ಯವೇ ನಾನೆನಬೇಕಾದುದು? ನನಗೆ ಈ
ಜಡಪದಾರ್ಥಗಳ ಅಭಿಮಾನದಿಂದಲೇ ಜೀವನೆಂಬ ಸಂಜ್ಞೆಯುಂಟಾಗಿರುವದು.
ಈ ಚೈತನ್ಯವು ಸರ್ವಪ್ರಾಣಿ ಸಾಧಾರಣವಾಗಿರುವದ್ದರಿಂದ, ಸರ್ವ ಪ್ರಪಂಚವೂ
ನಾನೆನಬೇಕಾಗುವದು. ಈಪರಿಯಿಂ ಸರ್ವವ್ಯಾಪಕನಾದ ನಾನು ಸಣ್ಣ ಕನ್ನಡಿ
ಯಲ್ಲಿ ಪ್ರತಿಬಿಂಬಿಸಿದ ಬೆಟ್ಟದಂತೆ ಸ್ವಲ್ಪವಾದ ಈ ಜಡಾಂತಃಕರಣದಲ್ಲಿ ತಗಲಿ

ಕೊಂಡು ದುರಭಿಮಾನದಿಂದ ವಿಷಯುಗಳಂ ಪಿಡಿಯುತ್ತಾ ಅತಿಸ್ವಲ್ಪ ನೆನಿಸಿಕೊಂಡೆನು. ವಿವೇಕದಿಂ ದೃಶ್ಯಗಳೆಲ್ಲವನ್ನೂ ತಿರಸ್ಕರಿಸಿದ್ದರಿಂದ, ನನಗೆ ಜೀವನೆಂಬ ಪೆಸರು ನಷ್ಟವಾಗಿ ಸರ್ವಾತ್ಮಭಾವದಿಂ ಪರಮಾತ್ಮಭಾವವೇ ಸಿದ್ಧವಾದುದು. ಜ್ಞಾತೃಜ್ಞೇಯ ಜ್ಞಾನಾತಿರಿಕ್ತವಾಗಿರುವ ಜ್ಞಪ್ತಿಮಾತ್ರವಾದ ಸ್ವರೂಪದಿಂದೀಗ ನಾನು ರಾಹುವಿಮುಕ್ತನಾದ ಶರಚ್ಚಂದ್ರನಂತೆಯೂ, ಮೇಘಾವರಣವಿಲ್ಲದ ಸೂರ್ಯನಂತೆಯೂ ಪ್ರಕಾಶಿಸುತ್ತಿರುವೆನು. ಅನ್ಯರಿಂ ತಿಳುಪಲಶಕ್ಯವಾದ್ದರಿಂದ, ತಾನೇ ತನ್ನ ಸ್ವರೂಪವಂ ವಿಚಾರಿಸಿ ತಿಳಿಯತಕ್ಕದ್ದೆಂದು ಪ್ರಾಜ್ಞರು ಪೇಳುವರು. ಸರ್ವಾತೀತವಾದ ಈ ಸ್ವರೂಪವು ಈಗ ನನ್ನಿಂದ ಲಬ್ಧವಾದುದು. ಬ್ರಹ್ಮ ವಿಷ್ಣು ಮಹೇಶ್ವರರೆಲ್ಲೂ, ಇಂದ್ರಾದಿ ದೇವತೆಗಳಲ್ಲೂ, ಸಕಲ ಚರಾಚರ ಪ್ರಾಣಿಗಳಲ್ಲೂ, ಮುತ್ತಿನ ಮಣಿಗಳಲ್ಲಿ ಸೂತ್ರದಂತೆ ನಾನು ಸರ್ವಾಂತರ್ಯಾಮಿಯಾಗಿರುವೆನು. ಆಕಾಶದಂತೆ ಸಮಸ್ತ ಬ್ರಹ್ಮಾಂಡಗಳಿಗೂ ಆಚ್ಛಾದಕನಾಗಿರುವೆನು. ದೃಶ್ಯಾಭಿಮಾನವೆಂಬ ರೋಗದಿಂ ಬಿಡಲ್ಪಟ್ಟಿದ್ದರಿಂದ, ಪೂರ್ಣವಾಗಿ ದಿಗ್ಭೂಮ್ಯಾಕಾಶಗಳೆಲ್ಲವನ್ನು ತುಂಬಿಕೊಂಡು ಸರ್ವ ಭಾವಾಂತರ್ಗತವಾಗಿದ್ದಾಗ್ಯೂ, ಭಾವಾಭಾವ ಪದಾರ್ಥಗಳೆಲ್ಲವನ್ನೂ ಆಕ್ರಮಿಸಿಕೊಂಡು ಯಾವ ಅವಲಂಬನವೂ ಇಲ್ಲದೆ ಸರ್ವಾತ್ಯಂತಾಭಾವ ಸ್ವರೂಪವಾಗಿರುವದ್ದರಿಂದ, ಅಜ್ಞಾನಿಗಳಿಗೆ ಅತಿ ಭಯಂಕರವಾಗಿ ಪಿಪೀಲಿಕಾಂತವಾದ ಪ್ರಪಂಚವೆಲ್ಲವನ್ನು ಪರಿಪರಿಯಾಗಿ ಆಕ್ರಮಿಸಿಕೊಂಡಿರುವ ವಿಚಿತ್ರವಾದ ಶಕ್ತಿಗಳಿಗೆ ಆಶ್ರಯವಾಗಿರುವ ನನ್ನ ಚಿಚ್ಛಕ್ತಿಯು ಸಕಲ ದಿಗ್ದೇಶಕಾಲವಸ್ತು ಪರಿಣಿ ಸ್ವರೂಪವಾಗಿದ್ದಾಗ್ಯೂ, ಸರ್ವಾತೀತ ಭಾವದಿಂ ನಿರ್ವಿಕಾರವಾಗಿ ಪ್ರಕಾಶಿಸುತ್ತಿರುವದು. ಇದರ ಕಲ್ಪನೆಯಿಂದಲೇ ಈ ಜಗವೆಲ್ಲವೂ ಉಂಟಾಗಿರುವದು. ಇದರ ವಿಲಾಸದಿಂದಲೇ ಸುಳ್ಳಾದ ಸುಖದುಃಖಗಳೂ ಕೂಡ ಯಥಾರ್ಥವಾಗಿ ಕಾಣುತ್ತಿರುವವು. ಸರ್ವರೂಪವಾಗಿರುವ ಈ ಪರಶಕ್ತಿಯೇ ಆತ್ಮನೆನಿಸುವದು. ಆತ್ಮನೇ ಚಿಚ್ಛಕ್ತಿರೂಪನಾಗಿರುವನು, ಶಕ್ತಿ ಶಕ್ತಿಮಂತರು ದೀಪಜ್ವಾಲೆಗಳಂತೆ ಅಭಿನ್ನರಾಗಿರುವರಾದ್ದರಿಂದ, ವಾಚಾಮಾತ್ರದಲ್ಲೇ ಭೇದವು ತೋರುತ್ತಿರುವದೆಂದು ಗೊತ್ತಾಗುವದು. ಈ ಭೇದದಿಂದಲೇ ನಾನು ನನ್ನದೆಂಬ ವ್ಯವಹಾರವುಂಟಾಗಿರುವದು. ಶುದ್ಧ ಚಿನ್ಮಾತ್ರ ಸ್ವರೂಪವಾದ ಈ ಪರಶಕ್ತಿಯೇ ರಾಜರೂಪದಿಂದೀದೇಶಕ್ಕೆ ಅಭಿಮಾನಿಯಾಗಿದ್ದುದು. ಈ ಶಕ್ತಿಯ ಪ್ರಸಾದದಿಂದಲೇ ಮನವು ದೇಹವೆಂಬ ರಥವನ್ನೇರಿ ವಿಚಿತ್ರ ವಿಹಾರವಂ ಮಾಡುತ್ತಿದ್ದುದು. ಸ್ವತಸ್ಸತ್ವವಿಲ್ಲದೆ ಈ ಮನೋ ದೇಹಾದಿಗಳು ವಾಸ್ತವಿಕವಾಗಿಲ್ಲವಾದ್ದರಿಂದ, ಇವುಗಳ

ಸ್ಥಿತಿಯಿಂದ ಲಾಭವು, ನಾಶದಿಂದ ಹಾನಿಯೂ ಸಹ ಕಾಣದಿರುವದು. ಮನವೆಂಬ ಐಂದ್ರಜಾಲಿಕನ ಮಾಯೆಯಿಂದಲೇ ಈ ಜಗವೆಲ್ಲವೂ ಸತ್ಯವಾಗಿ ಕಾಣುತ್ತಿರುವುದು. ದೀಪದಂತೆ ಸಾಕ್ಷಿಯಾದ ಈ ಜ್ಞಾನಶಕ್ತಿಯಿಂದಲೇ ಈ ತತ್ವಾರ್ಥವು ಗೋಚರವಾಹುದು. ಇದುವರಿಗೆ ನಾನು ಸುಳ್ಳಾದ ದೇಹವನ್ನವಲಂಬಿಸಿ ನಿರರ್ಥಕವಾದ ನಿಗ್ರಹಾನುಗ್ರಹ ಚಿಂತೆಯಿಂದ ವ್ಯಾಕುಲನಾಗಿದ್ದೆನು. ಈಗ ತತ್ವಜ್ಞಾನದಿಂದ ತಿಳಿಯತಕ್ಕದ್ದಂ ತಿಳಿದು ನೋಡತಕ್ಕದ್ದಂ ನೋಡಿ ಪಡೆಯತಕ್ಕದ್ದಂ ಪಡೆದಿರುವೆನಾದ್ದರಿಂದ, ಪೂರ್ಣಕಾಮನಾಗಿ ರಾಗದ್ವೇಷ ರಹಿತನಾಗಿರುವ ನನಿಗೆ ಸರ್ವಸ್ವರೂಪಗಳಿಂ ಪರಮಾತ್ಮನೇ ಪ್ರಕಾಶಿಸುತ್ತಿರುವನೆಂದು ನಿಶ್ಚಿತವಾಗಿರುವದು. ನಾನು ನನ್ನದೆಂಬುವದಕ್ಕೆ ಅವಕಾಶವಿಲ್ಲದ ಈ ಪರಮಾರ್ಥಪ್ರಕಾಶದಲ್ಲಿ ಹರ್ಷಾಮರ್ಷಗಳಿಗೆ ಸಹಚರವಾದ ಈ ನಿಗ್ರಹಾನುಗ್ರಹಗಳಿಗೆ ವಿಷಯವಾವುದು ? ಇವುಗಳ ಸ್ವರೂಪವೇನು ? ಇವುಗಳಿಗೆ ಆಶ್ರಯವಾವುದು ? ಇವುಗಳ ರೀತಿ ಹೇಗಿರುವದು ? ಇವುಗಳಿಗೆ ಕರ್ತೃವಾದವನು ಯಾರೆಂದು ವಿಚಾರಿಸಲು, ಸರ್ವವೂ ಬ್ರಹ್ಮವೆಂಬ ಒಂದೇ ನಿಷ್ಕರ್ಷೆಯಲ್ಲಿದೆ, ಮತ್ತಾವದೂ ತೋರದಿರುವದು. ಹೀಗಿರುವಲ್ಲಿ ಸುಖದುಃಖಗಳಿಗೆ ವ್ಯವಸ್ಥೆ ಏನಾಗುವದು ? ಅದೇ ಇಲ್ಲದಿರುವಲ್ಲಿ ಶೋಕಮೋಹಾದಿಗಳನ್ನೇಕೆ ಹೊಂದಬೇಕು ? ನೋಡತಕ್ಕದ್ದು ಮಾಡತಕ್ಕದ್ದು ಇರತಕ್ಕದ್ದು ಹೋಗತಕ್ಕದ್ದೂ ಕೂಡ ಚಿದಾಕಾಶರೂಪದಿಂ ಪ್ರಕಾಶಿಸುತ್ತಿರುವದು. ಎಲೈ ಪರಮಾತ್ಮನೇ! ತತ್ವಾತೀತವಾದ ದೃಷ್ಟಿಯಿಂದೀಗ ಗೋಚರನಾಗಿದ್ದೀಯೆ, ಈಗ ನಿನ್ನ ಪ್ರಕಾಶದಿಂ ನಾನು ಜ್ಞಾನಿಯಾದೆನು. ಸರ್ವಪ್ರಿಯನಾದ ನಿನಗೂ ಅಪರಿಚ್ಛಿನ್ನನಾದ ನನಿಗೂ ಸರ್ವ ಮನೋಹರವಾದ ಸಮ್ಯಜ್ಞಾನದ ಉದಯಕ್ಕೂ ಸಹ ನಮಸ್ಕಾರವಾಗಲಿ ವಿಷಯಾಭಿಲಾಷೆಯಿಂದಲೂ, ಸಂಸಾರ ಭ್ರಾಂತಿಯಿಂದಲೂ, ಬಿಡಲ್ಪಟ್ಟ ನಿರ್ವಿಕಾರವಾದ ಸುಷುಪ್ತಿ ಸ್ಥಿತಿಯಲ್ಲಿರುತ್ತಾ ಸರ್ವ ಸಮಭಾವದಿಂದ ಪರಮಾತ್ಮನಲ್ಲಿಯೇ ನಾನು ನೆಲಸಿರುವೆನು, ಎಂದು ಚಿಂತಿಸುವ ಹೇಮಜಟಾಧೀಶನು ಈ ವಿಶ್ವಾಮಿತ್ರನು ಬ್ರಾಹ್ಮಣ್ಯವಂ ಪಡೆದಂತೆ ತತ್ವವಿವೇಕ ವಿಚಾರಗಳಿಂದ ಪರಮಾನಂದ ಪದವಿಯಂ ಪಡೆದನು. ಎಲೈ ರಾಜೇಂದ್ರನೇ ! ಬಳಿಕ ಮಹಾರಾಜನು ಬಾರಿಬಾರಿಗೂ ಮಾಡಲ್ಪಡುವ ಧರ್ಮಾದಿ ಪ್ರಧಾನವಾದ ಲೌಕಿಕ ಕಾರ್ಯಗಳು ಅನರ್ಥ ಫಲಪ್ರದವಾದಾಗ್ಯೂ ಅನಿವಾರ್ಯವಾದ ಈ ಪ್ರಪಂಚದಲ್ಲಿ ಯಾವದು ಸರಿಯಾದ್ದೆಂದು ಆಲೋಚಿಸುತ್ತಾ, ದಿನವ್ಯಾಪಾರಗಳಲ್ಲ ಸೂರ್ಯನಂತೆ ದುಃಖಿತನಾಗಲಿಲ್ಲ. ಸಮಾನವಾದ ರಾಜಕಾ

ರ್ಯಗಳು ಪ್ರಾಪ್ತವಾಗುವಲ್ಲಿ, ಪ್ರವಾಹಗಳ ಮಧ್ಯದಲ್ಲಿರುವ ಪರ್ವತದಂತೆ ಚಲಿಸದೆ ನಿರಭಿಮಾನನಾಗಿ ಪರಮೇಶ್ವರನ ಕ್ಲುಪ್ತ ಇದ್ದಂತೆ ಸರ್ವವೂ ನಡೆಯುವದೆಂದು ನಿಶ್ಚಯಿಸಿ ಶಾಸ್ತ್ರಾಚಾರಗಳಿಗೆ ಅವಿರುದ್ಧವಾಗಿ ನಿಗ್ರಹಾನುಗ್ರಹಾದಿಗಳು ನೆರವೇರಿಸುತ್ತಿದ್ದನು. ಅವುಗಳಲ್ಲಿ ಹರ್ಷಾಮರ್ಷಗಳಿಗೊಳಗಾಗದೆ ಸಮುದ್ರದಂತೆ ಸೌಮ್ಯ ಭಯಂಕರ ಸ್ವಭಾವನಾಗಿದ್ದನು. ನಿತ್ಯ ಸುಷುಪ್ತನಂತವನು ನಿರಭಿಮಾನನಾಗಿರುವದ್ದರಿಂದ, ಅವನ ಚಿತ್ತವೃತ್ತಿಯು ನಿವಾತ ಪ್ರದೇಶದಲ್ಲಿರುವ ದೀಪದ ಜ್ವಾಲೆಯಂತೆ ನಿಶ್ಚಲವಾಗಿ ಪ್ರಕಾಸಿಸುತ್ತಿದ್ದುದು. ಅಂತರಂಗದಲ್ಲಿ ಸಮದೃಷ್ಟಿಯಿಂದವನು ಅತಿಪ್ರಸನ್ನನಾಗಿದ್ದಾಗ್ಯೂ ಹೊರಗಣ ದೃಷ್ಟಿಯುಳ್ಳ ಜನರಿಗೆ ಅವರ ಕರ್ಮಗುಣಾನುಗುಣವಾಗಿ ದಯಾಶಾಲಿಯಂತೆಯೂ, ಕ್ರೂರನಂತೆಯೂ, ಸುಖದುಃಖಾದಿ ದ್ವಂದ್ವಗಳಲ್ಲಿ ಮುಳಗಿರುವನಂತೆಯೂ, ತಟಸ್ಥನಂತೆಯೂ, ಕೇವಲ ಸನ್ಮಾರ್ಗದಲ್ಲಿರುವನಂತೆಯೂ, ದುಷ್ಟನಂತೆಯೂ, ಅತಿ ಸೂಕ್ಷ್ಮಬುದ್ಧಿಯುಂತೆಯೂ, ಮೂಢನಂತೆಯೂ, ಅರ್ಥಾತುರನಂತೆಯೂ, ಪರಸಾಧನ ಪರತಂತ್ರನಂತೆಯೂ ತೋರುತ್ತಿದ್ದನು. ಸರ್ವವಸ್ತುಗಳನ್ನು ಚಿದ್ವಸ್ತು ಕಲ್ಪನೆಯೆಂದು ನಿಶ್ಚಯಿಸಿ, ಅವರ ಸುಖದುಃಖಗಳಿಗೊಳಗಾಗದೆ ಸರ್ವಕಾಲ ವ್ಯಾಪಾರಗಳಲ್ಲೂ ಸರ್ವ ವ್ಯಾಪಕವಾದ ಚಿಚ್ಛಕ್ತಿಯ ವಿಲಾಸವಂ ನೋಡುತ್ತಾ, ನಿತ್ಯ ಸಮಾಹಿತನಂತೆ ಚಿದೇಕರಸವಾಗಿದ್ದನು. ಅಸಂಗಭಾವದಿಂದನೇಕ ಶತವರ್ಷಗಳು ರಾಜ್ಯಭಾರವಂ ಮಾಡುತ್ತಿದ್ದ ಆ ರಾಜರ್ಷಿಯು ತೇಜದಿಂದಾಕ್ರಮಿಸಲ್ಪಟ್ಟ ಹಿಮಕಣದಂತೆ ಸ್ವರೂಪವಾಗಿದ್ದ ದೇಹವಂ ಬಿಟ್ಟು ಘಟಾಕಾಶವು ಮಹಾಕಾಶವಂ ಸೇರುವಂತೆ ಪರಮಾತ್ಮನಂ ಹೊಂದಿದನು. ಇವನ ದೃಷ್ಟಿಯಂ ಹಿಡಿದವನು ಮಣಿದೀಪವಂ ಹಿಡಿದಿರುವನಂತೆ ತಮದಲ್ಲಿ ಬೀಳನು. ಮೋಹಾಂಧ ಕೂಪದಲ್ಲಿ ಬೀಳುತ್ತಿರುವನಿಗೆ ಈ ಮಹಾತ್ಮನ ವಿವೇಕ ದೃಷ್ಟಿಯ ಸ್ಮೃತಿಯುಂಟಾಗಲು, ಮಧ್ಯದಲ್ಲಿ ತೃಣ ಸಮೂಹದಿಂ ತಡೆಯಲ್ಪಟ್ಟವನಂತೆ ನಿಲ್ಲುವನು. ಸರ್ವಪಾಪಮೂಲವಾದ ಅಜ್ಞಾನಕ್ಕೆ ನಾಶವಾಗುವಲ್ಲಿ ದೃಷ್ಟಿಯುಂಟಾಗುವದು. ಆ ಮಹಾರಾಜನಂತೆ ನೀನು ದ್ವಂದ್ವಾತೀತವಾಗಿರುವ ಪರಮಪಾವನವಾದ ದೃಷ್ಟಿಯಂ ಹಿಡಿದು ಸರ್ವಕಾಲದಲ್ಲೂ ಏಕ ಸಮಾಧಾನವಾದ ಮನಸ್ಸಿನಿಂದ ರಾಜ್ಯವನ್ನಾಳುತ್ತಾ ಭೂಮಂಡಲವನ್ನಲಂಕರಿಸುವನಾಗೆಂದು ವಸಿಷ್ಠನು ಹೇಳುತ್ತಿದ್ದನೆಂಬಲ್ಲಿಗೆ;—ಉಪಶಮ ಪ್ರಕರಣದೊಳ್ ಸುರಘುವಿಚಾರ ಕ್ರಮ ನಿರೂಪಣವೆಂಬ ಏಕಾದಶ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ.

## ದ್ವಾದಶ ತರಂಗ ಪ್ರಾರಂಭವು.

### ಸುರಘು ಪರಿಘೋಪಾಖ್ಯಾನ ನಿರೂಪಣ ಪ್ರಾರಂಭವು.

ಬಳಿಕ ಎಲೈ ಗುರುವರನೇ! ಗಾಳಿಯಲ್ಲಿರುವ ನವಿಲುಗರಿಯ ಕೊನೆಯಂತೆ ಚಂಚಲವಾದ ಮನವು ಏಕಸಮಾಧಾನವಾಗುವದು ಹೇಗೆ? ಅದರರೀತಿಯಂ ನಿರೂಪಿಸುವನಾಗೆಂದು ಕೇಳುವ, ಶ್ರೀರಾಮನಂ ಕುರಿತು ಮರಳಿ ಪೇಳಿವನದೆಂತೆನೆ;—ಎಲೈ ರಘುವರನೇ! ಈ ಸುರಘುಮಹಾರಾಜನಿಗೂ ಪರ್ಣಾದನೆಂಬ ಒಬ್ಬ ರಾಜರ್ಷಿಗೂ ಈ ವಿಷಯದಲ್ಲಿ ನಡೆವ ಸಂವಾದವಂ ಕೇಳುವನಾಗು? ಪಾರಸೀಕ ದೇಶದಲ್ಲಿ ಶತ್ರುಗಳಿಗೆ ಪರಿಘಸ್ವರೂಪನಾದ, ಪರಿಘನೆಂಬ ಮಹಾರಾಜನಿದ್ದನು. ಇವನಿಗೂ ಸುರಘುವಿಗೂ ಸಹ ವಸಂತಮನ್ಮಥರವೋಲ್ ಅತ್ಯಂತ ಪ್ರೀತಿಯುಂಟಾದುದು. ಒಂದಾನೊಂದು ಕಾಲದಲ್ಲಿ ಪ್ರಜಾದೋಷದಿಂದುಂಟಾದ ಅನಾವೃಷ್ಟಿದೋಷದಿಂ ಪಾರಸೀಕ ದೇಶವು ಕಿಚ್ಚುಂಟಾದ ಕಾಡಿನಂತೆ ಪಾಳಾಗುತ್ತಿರಲು ಅದಕ್ಕೆ ಪ್ರತೀಕಾರವಂ ಮಾಡಲಾರದ ಪರಿಘನು ವಿರಕ್ತನಾಗಿ ಪೌರರಿಗೆ ಅಗೋಚರವಾಗಿರುವ ನಿರ್ಜನವಾದ ವನವಂ ಸೇರಿ ಲೋಕಾಂತರವಂ ಪೊಂದಿದವನಂತೊಬ್ಬರ ದೃಷ್ಟಿಗೂ ಬೀಳದೆ ತಪವಂ ಮಾಡುತ್ತಿದ್ದನು. ಅವನಿಗೆ ಪರ್ಣವೆ ಅಶನವಾದ್ದರಿಂದ ಪರ್ಣಾದನೆಂಬ ಪೆಸರುಂಟಾದುದು. ಜೀರ್ಣಪರ್ಣರಾಶಿಯಂ ಪೊಂದಿದ ಅಗ್ನಿಯಂತೆ ತೇಜಸ್ವಿಯಾದ ಆ ಪರ್ಣಾದನು ಸಹಸ್ರ ಸಂವತ್ಸರ ಮಾಡಿದ ತಪದಿಂದಾತ್ಮನು ಪ್ರಸನ್ನನಾಗಲು ದ್ವಂದ್ವ ದುಃಖಗಳು ತಪ್ಪುತ್ತಾ ಬ್ರಹ್ಮಾತ್ಮೈಕ್ಯಜ್ಞಾನ ಉದಯಿಸಲು ಜಗನ್ಮಿಥ್ಯಾತ್ವ ನಿರ್ಣಯದಿಂದಾಶಾರಹಿತವಾದ ಮನವು ಶಾಂತವಾಗಲು ರಾಗದ್ವೇಷಗಳಿಲ್ಲದೆ ಪರಮಾರ್ಥ ಜ್ಞಾನದಲ್ಲಿ ನಿಂದು ಜೀವನ್ಮುಕ್ತನೆನಿಸಿಕೊಂಡನು. ಬಳಿಕ ಸಿದ್ಧ ಸಾಧ್ಯರಿಗೆ ಸ್ನಿಗ್ಧನಾದ ಆ ಪರ್ಣಾದನು ಮುಕ್ತ ಮುಮುಕ್ಷುಜನಗಳಿಂದೊಡಗೂಡಿ ಸರೋವರದೊಳ್ ಹಂಸಗಳಿಂ ಕೂಡಿದ ಭ್ರಮರ ರಾಜನಂತೆ ಈ ಜಗದೊಳ್ವಿಹರಿಸುತ್ತಿದ್ದನು. ಅವನು ಒಂದಾನೊಂದು ಕಾಲದೊಳ್ ಹೇಮಚೂಡಾಧಿಪತಿಯಾದ ಈ ಸುರಘು ಮಹಾರಾಜನ ಅರಮನೆಗೆ ಬರಲು ರಮ್ಯವಾದ ರತ್ನಸಾನುವಿನ ಶೃಂಗದೊಳ್ ಸೇರಿದ ಸೂರ್ಯಚಂದ್ರರಂತವರು ಪ್ರಕಾಶಿಸುತ್ತಾ ನಿನ್ನ ದರ್ಶನದಿಂ ನನ್ನ ಸುಕೃತಗಳು ಫಲಿಸಿದವೆಂದು ಪೇಳುತ್ತಾ ಪರಸ್ಪರವಾಗಿ ಆಲಿಂಗಿಸಿ ಒಂದಾಸನದಲ್ಲಿ ಕುಳಿತುಕೊಂಡರು. [illegible]

ಗರ್ಭದಿಂ ಹೊರಗೆ ಬಿದ್ದು ತತ್ವಜ್ಞಾನದಿಂ ಪೂರ್ಣರಾದ ಆ ಮಹಾತ್ಮರೊಂದೆಡೆಯೊಳ್ ಸೇರಿದ ಹರಿಹರರಂತೆ ಪ್ರಕಾಶಿಸುತ್ತಿದ್ದರು. ಆಗ ಪರ್ಣಾದನು ಸುರಘುರಾಜನಂ ಕುರಿತು ಪೇಳಿದನದೆಂತೆನೆ,- ಎಲೈ ರಾಜೇಂದ್ರನೆ ನಿನ್ನ ದರ್ಶನದಿಂ ಪರಮಾನಂದವಾದ ನನ್ನ ಮನವು ಚಂದ್ರಬಿಂಬದಲ್ಲಿ ನೆಲಸಿರುವಂತೆಯೂ, ಅಲ್ಲಿಂದಲೇ ಪುಟ್ಟಿ ನಿಂತಿರುವಂತೆಯೂ, ಅಲ್ಲಿ ಕೆತ್ತಲ್ಪಟ್ಟಂತೆಯೂ ಶಾಂತವಾಗಿರುವದು. ಎಲೈ ಪರಮ ಮಿತ್ರನೇ? ಅಕೃತ್ರಿಮವಾದ್ದರಿಂ ಸುಖವಾದ ಪ್ರೇಮವು ವೃಕ್ಷ ಭೇದದಂತೆ ವಿಯೋಗವು ಸಂಭವಿಸಿದಾಗ್ಯೂ ಸರಸವಾದ ಹಳ್ಳದ ದಡದಲ್ಲಿ ನಿಂದಿರುವ ಬೇರಿನಂತೆ ಮರಳಿ ಶಾಖೋಪಶಾಖವಾಗಿ ಬೆಳೆದು ದೊಡ್ಡದಾಗುವದು. ನಮಗೆ ಯಥಾರುಚಿಯಾಗಿ ನಡದ ಆ ಮಾತು ಕಥೆಗಳನ್ನೂ ಆ ವಿಹಾರಗಳನ್ನೂ ಆ ವ್ಯಾಪಾರಗಳನ್ನೂ ಸ್ಮರಿಸುವ ನಾನು ಮರಳಿ ಮರಳಿ ಸಂತೋಷದಿಂ ಮರುಳನಂತಾಗುವೆನು. ಮಾಂಡವ್ಯನ ಪ್ರಸಾದದಿಂ ನಿನ್ನಂತೆ ಪರಮೇಶ್ವರ ಪ್ರಸಾದದಿಂ ನಾನು ತತ್ವಾರ್ಥವಂ ತಿಳದಿರುವೆನಾದ್ದರಿಂದ ಕೇಳುವೆನು. ಜಗದಾಧಾರವಾದ ಮೇರುವಂ ಸಾಧಿಸಿದ ಮಹೀಪತಿಯಂತೆ ನಿರ್ದುಃಖನಾದ ನೀನು ಪರಮಕಾರಣವಾದ ಪರಮಾತ್ಮನೆಂಬ ಸ್ಥಾನದಲ್ಲಿ ವಿಶ್ರಾಂತನಾಗಿದ್ದೀಯಾ? ಆತ್ಮಾರಾಮನಾಗಿರುವ ನಿನ್ನ ಮನವು ಶರತ್ಕಾಲದ ಸರೋವರದಂತೆ ನಿರ್ಮಲವಾಗಿರುವದೆ? ವೈಷಮ್ಯವಿಲ್ಲದ ಪ್ರಸನ್ನ ಗಂಭೀರವಾದ ದೃಷ್ಟಿಯಿಂ ನೀನು ಆವಶ್ಯಕ ಕಾರ್ಯಗಳಂ ನೆರವೇರಿಸುವೆಯಾ? ನಿನ್ನ ದೇಶದ ಜನರು ರೋಗ ಮನೋವ್ಯಥೆಗಳಿಲ್ಲದೆ ಧನಧಾನ್ಯ ಸಂಪನ್ನರಾಗಿ ಸುಖದಿಂದಿರುವರೆ? ನಿನ್ನ ಭೂಮಿಯು ಫಲಸಮೃದ್ಧಿಯಿಂದ ಪ್ರಜೆಗಳಂ ಪೊರೆಯುತ್ತಿರುವದೇ? ಚಂದ್ರಕಿರಣದಂತೆ ನಿನ್ನ ಯಶಸ್ಸು ದಿಕ್ಕುಗಳಂ ಪೊಂದಿರುವದೆ? ದಡದಲ್ಲಿರುವ ತಾವರೆಗಳು ಸರೋವರದ ಜಲವಂ ಪಿಡಿಯುವಂತೆ ದಿಗಂತಗಳಲ್ಲಿರುವ ಜನಗಳು ನಿನ್ನ ಗುಣವಂ ಪರಿಗ್ರಹಿಸುವರೇ ಹೊಲ ಗದ್ದೆಗಳಂ ಕಾಯುವ ಹುಡುಗಿಯರು ನಿನ್ನ ಗುಣಗಳಿಂ ಕೂಡಿದ ಪದಗಳಂ ಪಾಡುವರೆ, ನಿನ್ನ ಧನಧಾನ್ಯ ವಿಭವಗಳು ಪುತ್ರ ಮಿತ್ರ ಕಳತ್ರಾದಿಗಳು ಸಹ ಕ್ಷೇಮವಾಗಿರುವವೆ? ಆಧಿ ವ್ಯಾಧಿಗಳಿಲ್ಲದ ನಿನ್ನ ಶರೀರ ವೃಕ್ಷವು ಇಹಲೋಕ ಪರಲೋಕಗಳಲ್ಲಿ ಹಿತಕರವಾದ ಸುಕೃತ ಫಲಗಳಿಂ ಪೂರ್ಣವಾಗುತಲಿರುವದೇ? ವಿರಕ್ತವಾದ ನಿನ್ನ ಮನವು ಅವಿಚಾರ ರಮಣೀಯವಾದ ವಿಷಯಗಳಲ್ಲಿ ಪ್ರವರ್ತಿಸದಿರುವದೇ? ಅವರೇ ಬಹುಕಾಲದಿಂ ವಿಯುಕ್ತರಾಗಿದ್ದ ನಾವು ವಸಂತಾದ್ರಿ ತಟಗಳಂತೆ ಕಾಲಪುರುಷನಿಂದೀಗ ಸೇರಿಸಲ್ಪಟ್ಟೆವು. ಇವರಿಂದ ಬದುಕಿರುವರು ಕಾಣದ ಸಂಯೋಗ ವಿಯೋಗಗಳ ಸುಖದುಃಖಗಳು

ಯಾವದೂ ಇಲ್ಲವೆಂದು ತಿಳಿಯುತ್ತೇನೆ. ದೀರ್ಘವಾದ ಸಂಸಾರ ದೆಶೆಯಲ್ಲಿ ನಾವು ಮರಳಿ ಸೇರಿದ್ದರಿಂದ ಈಶ್ವರೇಚ್ಛಾ ವಿಲಾಸವು ಅತಿ ವಿಚಿತ್ರವಾಗಿ ಕಾಣ್ಬರುತಲಿದೆ, ಎಂದು ಪೇಳುವ ಪರ್ಹ್ಲಾದನಂ ಕುರಿತು ಸುರಘುವು ಪೇಳಿದನದೆಂತೆನೆ,—ಎಲೈ ರಾಜರ್ಷಿಯೆ! ವಾಯುವಿನ ಗತಿಯಂತೆ ಪ್ರವೃತ್ತಿ ನಿವೃತ್ತಿ ಸ್ಥಿತ್ಯಾಕಾರದಿಂ ಪರಿಪರಿಯಾಗಿ ಪ್ರಕಾಶಿಸುವ ಪರಮೇಶ್ವರನ ಕ್ಲುಪ್ತಿಯಂ ತಿಳಿಯಲು ಯಾರುತಾನೇ ಸಮರ್ಥರಾದಾರು? ಅತಿ ವಿಚಿತ್ರವಾದ ಆನಿಯತಿಯಿಂದಲೇ ನಾವು ಮರಳಿ ಸೇರಿದೆವು. ಈಗ ನಿಮ್ಮ ಆಗಮನಪ್ರಭಾವದಿಂ ನಾವು ಕ್ಷೇಮವಂತರಾಗಿಯೂ, ಪುಣ್ಯವಂತರಾಗಿಯೂ, ಆನಂದಭರಿತರಾಗಿಯೂ ಇರುವೆವು. ನನ್ನ ನಗರದ ಸಂಪತ್ತುಗಳೆಲ್ಲವೂ ತಮ್ಮ ಸಾನ್ನಿಧ್ಯದಿಂದನೇಕಪ್ರಕಾರವಾಗಿ ವೃದ್ಧಿಯಂ ಪಡದವು. ಪರಮ ಪವಿತ್ರವಾದ ತಮ್ಮ ದರ್ಶನವು ವಚನವು ಸಹ ರಸಾಯನ ವೃಷ್ಟಿಯಂತೆ ಪರಮಾನಂದಪ್ರದವಾಗಿರುವದು. ಎಂದು ಪೇಳುವ ಸುರಘುವಂ ಕುರಿತು ಪರ್ಹ್ಲಾದನಿಂತೆಂದನು,- ಎಲೈ ಸುಮತಿಯೆ ಈ ಸಂಸಾರದಲ್ಲಿ ಮಾಡಿದ ಕರ್ಮವೆಲ್ಲವು ಸಮಾಹಿತಚಿತ್ತನಿಗೆ ಸುಖಕರವಾಗುವದಲ್ಲದೆ ಇತರರಿಗೆ ಆಗಲಾರದಾದ್ದರಿಂದ ಸಂಕಲ್ಪರಹಿತವಾಗಿಯೂ, ವಿಶ್ರಾಂತಿಗೆ ಸ್ಥಾನವಾಗಿಯೂ, ವಿಕ್ಷೇಪದುಃಖವಿಲ್ಲದ್ದರಿಂದುಪಶಮರೂಪವಾಗಿಯೂ, ಪರಮಶ್ರೇಯೋರೂಪವಾದ ಸಮಾಧಿಯಲ್ಲಿ ನಿನ್ನ ಮನವು ನಿಂತಿಥಿಯೆ? ಎಂದು ಪರ್ಹ್ಲಾದನು ಕೇಳುವಲ್ಲಿ ಸುರಘುವಿಂತೆಂದನು,- ಎಲೈ ಮಹಾತ್ಮನೆ ಪರಮ ಶ್ರೇಯಸ್ಸೆಂಬ ನೀನು ಪೇಳಿದ ಸಮಾಧಿಯಾವದು? ನಾನು ತಿಳದಿರುವದಂ ಪೇಳುವೆನು ಕೇಳುವನಾಗು. ಪರಮಾರ್ಥ ಜ್ಞಾನಿಯಾದವನು ವ್ಯವಹಾರದಲ್ಲಿದ್ದರೂ ಸುಮ್ಮನಿದ್ದರೂ ಸಮಾಹಿತ ಚಿತ್ತನಾಗದೇ ಇರನು. ಸರ್ವಕಾಲದಲ್ಲೂ ಸರ್ವವ್ಯಾಪಾರಗಳಲ್ಲೂ ಸರ್ವಸ್ವರೂಪನಾಗಿರುವ ಆತ್ಮನೆಂದು ತಿಳಿಯುವರೇ ಸಮಾಹಿತರೆನಿಸುವರು. ಸರ್ವಾತೀತನಾಗಿರುವ ಚಿನ್ಮಾತ್ರಸ್ವರೂಪನಾದ ಆತ್ಮನಂ ನಿರ್ಧರಿಸಿದ ವಿವೇಕಿಗಳು ಸತ್ಯಜ್ಞಾನಾನಂತ ಸ್ವರೂಪನಾದ ಆತ್ಮನ ಮಹಿಮೆಯನ್ನು ನಾಮರೂಪಾತ್ಮಕವಾದ ಪ್ರಪಂಚದಲ್ಲಿ ಸತ್ತಾರೂಪದಿಂದಲೂ, ಪ್ರಕಾಶರೂಪದಿಂದಲೂ, ಅದ್ವಿತೀಯ ಸುಖಸ್ವರೂಪದಿಂದಲೂ, ನೋಡುತ್ತಾ ಆತ್ಮನೇ ಸರ್ವಸ್ವರೂಪನಾಗಿರುವನೆಂದು ನಿಶ್ಚಯಿಸಿ ಅಖಂಡಭಾವದಿಂದಹಂತಾ ಮಮತಾಶೂನ್ಯರಾಗಿರುವರು. ಈ ತತ್ವಜ್ಞಾನದಿಂದುಂಟಾದ ಚಿತ್ತ ವಿಶ್ರಾಂತಿಯೇ ಸಮಾಧಿಯೆನಿಸುವದು. ಇದಿಲ್ಲದವನು ಪದ್ಮಾಸನವನ್ನಳವಡಿಸಿಕೊಂಡು ಬ್ರಹ್ಮಾಂಜಲಿ ಬಂಧನಂ ಮಾಡಿ ಕುಳಿತಿರುವ ಮಾತ್ರದಿಂ ಹೇಗೆ ಸಮಾಹಿತನೆನಿಸುವನೋ ಅವನಿಗೆ ಎಂಥಾ ಸಮಾಧಿ

ಬರುವದೊ? ಹೇಗೆ ಬರುವದೋ ತಿಳಿಯಲಿಲ್ಲ. ಈ ಪರಮಾರ್ಥಜ್ಞಾನವಿಲ್ಲದೆ ಆಶೆ ತಪ್ಪದಾದ್ದರಿಂದ ವಿಷಯಗಳಲ್ಲೋಡಾಡುವ ಚಿತ್ತವುಳ್ಳ ಪುರುಷನು ಕರ್ಮೇಂದ್ರಿಯ ವ್ಯಾಪಾರವಿಲ್ಲದೆ ಸುಮ್ಮನಿದ್ದ ಮಾತ್ರದಿಂ ಸಮಾಹಿತನೆನಿಸುವನು. ವಿಷಯ ಧ್ಯಾನದಿಂದೊಂದುವೇಳೆ ಏಕಾಗ್ರತೆ ಉಂಟಾದಾಗ್ಯೂ ಅದರಿಂ ಚಿತ್ತಕ್ಕೆ ವಿಶ್ರಾಂತಿ ಯಾದಾಗ್ಯೂ ಅದು ಮೂರ್ಛಾ ಸುಷುಪ್ತಿಗಳ ಭೇದವೆಂತಲೇ ಹೇಳಲ್ಪಡುವದಾದ್ದರಿಂದ ಆಶೆಗಳಿಗೆ ಮೂಲವಾದ ವಾಸನೆಯೆಂಬ ತೃಣರಾಶಿಗೆ ಕಾಡುಗಿಚ್ಚಾದ ತತ್ವಜ್ಞಾನ ಒಂದೇ ಸಮಾಧಿಯೆನಿಸುವದೆಂದು ತಿಳಿಯತಕ್ಕದ್ದು. ಮದ ಮೋಹಾದ್ಯವಸ್ಥೆಗಳಲ್ಲೂ ವ್ಯಾಪಾರರಾಹಿತ್ಯವೆನ್ನುವದು ಸಂಭವಿಸುವದ್ದರಿಂದ ಸುಮ್ಮನಿರುವದೇ ಸಮಾಧಿಯೆಂದು ನಿಶ್ಚಯಿಸಕೂಡದು. ಯಾವದರಲ್ಲಿ ವಿಕಲ್ಪ ವಿಪರೀತಜ್ಞಾನ ಸಂಶಯಗಳಿಲ್ಲದೆ ತಿಳಿಯತಕ್ಕ ಪರಮಾರ್ಥವು ಯಥಾಸ್ಥಿತವಾಗಿ ಪ್ರಕಾಶಿಸುವದೋ? ಜ್ಞಾತೃಜ್ಞಾನ ಜ್ಞೇಯಾದಿ ಭೇದಜ್ಞಾನವು ಅಹಂಕಾರವು ಸಹ ಅಣಗಿದ್ದರಿಂದ ಮನಸ್ಸಿಗೆ ರಾಗದ್ವೇಷಾದಿ ಕ್ಷೋಭೆಯಿಲ್ಲದೆ ಸ್ಥೈರ್ಯವುಂಟಾಗುವದೋ? ಯಾವದರಿಂದ ಮರಳಿ ವಿಷಯಾಪೇಕ್ಷೆಯು ಗ್ರಾಹ್ಯತ್ಯಾಜ್ಯಬುದ್ಧಿಯು ಇನ್ನೊಂದು ಪಡೆಯತಕ್ಕದ್ದೆಂಬ ಚಿಂತೆಯು ಸಹ ಉಂಟಾಗದಿರುವದೋ? ಅಂಥಾ ಪರಿಪೂರ್ಣವಾದ ಪ್ರಜ್ಞೆಯೇ ಸಮಾಧಿಯೆನಿಸುವದು. ಮಾಂಡವ್ಯ ಮುನೀಶ್ವರನ ಪ್ರಸಾದದಿಂ ಯಾವಾಗ ನನಗೆ ತತ್ವಾರ್ಥವು ಗೊತ್ತಾದುದೋ ಅದು ಮೊದಲಾಗೀ ಪ್ರಜ್ಞೆಯು ನನಗೆ ವಿಚ್ಛಿನ್ನವಾಗದೆ ಪ್ರಕಾಶಿಸುತ್ತಿರುವದು. ಮುಗು ಪಿಡಿದ ಮೃಣಾಳ ಸೂತ್ರವು ಎಷ್ಟೆಳದರೂ ಛಿನ್ನವಾಗದೆ ಹೇಗೆ ವಿನೋದಕ್ಕೆ ಯೋಗ್ಯವಾಗಿರುವದೋ ಹಾಗೆ ಮನಸ್ಸಿಗೆ ದೃಢವಾಗಿ ಬಂದ ಸಮಾಧಿಯು ವಿಚ್ಛಿನ್ನವಾಗದು. ಹಗಲು ಯಾವತ್ತು ಸೂರ್ಯಪ್ರಭೆ ತಪ್ಪದಿರುವಂತೆ ಮರಣಾಂತವಾಗಿ ಈ ಪ್ರಜ್ಞೆ ತಪ್ಪಲಾರದು. ಮತ್ತೂ ಮಹಾನದಿಯ ಪ್ರವಾಹದಂತೆ ಕ್ಷಣಮಾತ್ರವೂ ನಿರುದ್ಧವಾಗದು. ಘಳಿಗೆಯು ಕಾಲವಂ ಬಿಡದಿರುವಂತೆಯೂ, ಸದಾಗತಿಯಾದ ವಾಯುವು ತನ್ನ ಗತಿಯಂ ಮರೆಯದಿರುವಂತೆಯೂ, ಪ್ರಾಜ್ಞನ ಬುದ್ಧಿಯು ತನಗೆ ಗೊತ್ತಾದ ಚಿದ್ವಸ್ತುವಂ ಬಿಡಲಾರದು. ಸೂರ್ಯಾದಿ ಗ್ರಹಗಳು ತಮ್ಮ ಗತಿಯಂ ಬಿಡದಿರುವಂತೆ ಪರಮಾತ್ಮನು ಪ್ರತಿ ಪದಾರ್ಥಗಳಲ್ಲೂ ತನ್ನ ಸತ್ತಾ ಪ್ರಕಾಶ ಸುಖಗಳಂ ತೋರುತ್ತಾ ತನ್ನ ಭಕ್ತನ ಪ್ರಜ್ಞೆಯಲ್ಲೇ ನೆಲಸಿರುವನು. ಸತ್ತೆ ಇಲ್ಲದ ಪದಾರ್ಥದಂತೆ ಜ್ಞಾನವಿಲ್ಲದ ಕಾಲ ಯಾವದೂ ಕಾಣಿಸಲಿಲ್ಲ ಸಂಸಾರಿಗೆ ದೋಷದಂತೆ ಜ್ಞಾನಿಗೆ ಆತ್ಮಜ್ಞಾನವು ಸಹಜವಾಗಿರುವದು. ಮಹಾ ಮುನಿಯ ಅನುಗ್ರಹದಿಂ ನಾನು ಸರ್ವಕಾಲದಲ್ಲೂ

ಜಾಗರೂಕನಾಗಿಯೂ, ನಿರ್ಮಲನಾಗಿಯೂ, ಶಾಂತನಾಗಿಯೂ, ಸಮಾಹಿತನಾಗಿಯೂ ಇರುವೆನು. ಸ್ವಾಭಾವಿಕವಾದ ನನ್ನ ಜ್ಞಾನಕ್ಕೂ ನನಗೂ ಹೇಗೆ ಭೇದವಾಗುವದೋ? ಆತ್ಮಭಿನ್ನವಾದ ಯಾವ ಕಾರಣದಿಂದಾಗುವದೋ?, ಆ ಕಾರಣಕ್ಕೆ ಯಾವ ಸತ್ತೆ ಇರುವದೋ? ತಿಳಿಯಲಿಲ್ಲ. ಮನವಿರುವದಾದರೆ ಸಮಾಧಿಯೆಂತಲೂ ಅಸಮಾಧಿಯೆಂತಲೂ ಹೇಳಬಹುದು. ದೃಶ್ಯ ಕಾರಣವಾದ ಮನವೇ ಇಲ್ಲದಿರುವಲ್ಲಿ ದೃಶ್ಯವೆಲ್ಲಿಂದುಂಟಾದೀತು. ಇದೇ ಇಲ್ಲದಿರುವಲ್ಲಿ ದ್ರಷ್ಟೃದರ್ಶನ ಪ್ರಸ್ತಾವಕ್ಕೆ ಕಾರಣವೇನಿರುವದು. ಇದೊಂದು ಇಲ್ಲದೆ ಸರ್ವದೇಶಕಾಲ ವಸ್ತು ಸ್ವರೂಪದಿಂ ಪರಮಾತ್ಮನೊಬ್ಬನೇ ಪ್ರಕಾಶಿಸುತ್ತಿರುವಲ್ಲಿ, ಸಮಾಹಿತನೆಂತಲೂ, ಅಲ್ಲವೆಂತಲೂ ಹೇಳಲವಕಾಶವೇನಿರುವದು, ಎಂದು ಸುರಘುವು ಹೇಳುವಲ್ಲಿ, ಸಂತುಷ್ಟನಾದ ಪರ್ಣಾದನಿಂತೆಂದನು;—ಎಲೈ ರಾಜರ್ಷಿಯೆ! ಸರ್ವೋತ್ತಮವಾದ ಪದವಿಯುಂ ಪಡದ್ದರಿಂದ ಪೂರ್ಣಚಂದ್ರನಂತೆ ಶಾಂತ ಪ್ರಸನ್ನಾಂತರಂಗನಾಗಿ ಪ್ರಕಾಶಿಸುತ್ತೀಯೆ! ಅಖಂಡ ಲಕ್ಷ್ಮೀವಿಲಾಸಸ್ಥಾನವಾದ ನಿನ್ನ ಹೃದಯಕಮಲಕ್ಕೆ ಪರಮಾನಂದವೇ ಮಕರಂದವಾಗಿರುವದು. ಪರಮಾರ್ಥ ಜ್ಞಾನದಿಂ ನಿರ್ಮಲಾಶಯನಾದ ನೀನು ನಿಸ್ತರಂಗವಾದ ಶುದ್ಧೋದಕ ಸಮುದ್ರದಂತೆ ಶೋಭಿಸುತ್ತೀಯೆ? ನಿನ್ನ ಹೃದಯಾಕಾಶವು ಅಹಂಕಾರ ಮೇಘವಿಲ್ಲದ್ದರಿಂದ ಶರತ್ಕಾಲದ ಗಗನದಂತೆ ಪ್ರಸನ್ನವಾಗಿಯೂ, ವಿಸ್ತಾರವಾಗಿಯೂ, ಅತಿ ಗಂಭೀರವಾಗಿಯೂ ಕಾಣುತ್ತಿರುವದು. ಎಲೈ ಜ್ಞಾನನಿಧಿಯೇ! ನೀನು ಎಲ್ಲಾ ಕಡೆಯಲ್ಲೂ ಶುಭಫಲಯುಕ್ತನಾಗಿಯೂ, ಸಂತುಷ್ಟನಾಗಿಯೂ, ವಿರಕ್ತನಾಗಿಯೂ, ನಿತ್ಯಪ್ರಕಾಶನಾಗಿಯೂ ಕಾಣಬರುತ್ತೀಯೆ? ಸಾರಾ ಸಾರ ವಿವೇಕ ಪಾರಂಗತವಾದ್ದರಿಂ ನಿನ್ನ ಮನವು ಈ ಪ್ರಪಂಚವೆಲ್ಲವನ್ನೂ ಅದ್ವಿತೀಯವಾದ ಬ್ರಹ್ಮವೆಂದು ನಿಶ್ಚಯಿಸಿರುವದು. ಭಾವಾಭಾವ ವಿವೇಕದಲ್ಲಿ ತತ್ವಜ್ಞನಾದ ಮಹಾತ್ಮನೆ ನಿತ್ಯಾನಂದವಾದ ಮನವುಳ್ಳ ನಿನ್ನ ಶರೀರವು ರಾಗಾಲಾಪ ಗುಣವಿಲ್ಲದ್ದರಿಂದ ವೀಣಾದಂಡದಂತೆ ಆರೋಹಣಾವರೋಹಣ ವರ್ಜಿತವಾಗಿರುವದು. ಸ್ವಸ್ವರೂಪ ಸಾಕ್ಷಾತ್ಕಾರವುಳ್ಳ ನೀನು ಅಂತರಂಗದಲ್ಲಿರುವ ಅಮೃತದಿಂ ಕ್ಷೀರಸಮುದ್ರದಂತೆ ಪೂರ್ಣನಾಗಿದ್ದೀಯೆ? ಎಂದು ಶ್ಲಾಘಿಸುವ ಪರ್ಣಾದನಂ ಕುರಿತು ಸುರಘುವಿಂತೆಂದನು;—ಎಲೈ ಮಹಾನುಭಾವನೆ! ದೃಶ್ಯಪದಾರ್ಥವೆಲ್ಲವೂ ವಿಚಾರದಿಂ ಭ್ರಾಂತಿ ಸಿದ್ಧವೆಂದು ಗೊತ್ತಾಗುವಲ್ಲಿ, ಇಲ್ಲಿ ಗ್ರಾಹ್ಯವೆನಿಸುವದು ಯಾವದೂ ಕಾಣಿಸುವದಿಲ್ಲ. ಅದರಿಂದಲೇ ತ್ಯಾಜ್ಯವಾದದ್ದೂ ಕೂಡ ಇಲ್ಲವೆನಿಸುವದು. ಗ್ರಹಣವೇ ಇಲ್ಲದಿರುವಲ್ಲಿ

ಮೋಕ್ಷವೆಂಬುದು ಹೇಗೆ ಸಂಭವಿಸೀತು. ಪದಾರ್ಥಗಳ ಗ್ರಹಣತ್ಯಾಗಗಳಿಗೆ ಅವುಗಳ ಉತ್ತಮ ನೀಚಭಾವಗಳೇ ನಿಮಿತ್ತವಾಗುವವು. ಅವುಗಳ ತೋರಿಕೆಗೆ ರಾಗದ್ವೇಷಗಳೇ ಮೂಲವಾಗುವವು. ಆ ರಾಗದ್ವೇಷಗಳು ದೇಶಕಾಲ ಭೇದದಿಂ ವ್ಯತ್ಯಸ್ತವಾಗುವವು. ನೀಚೋತ್ತಮತ್ವಗಳು ಶಾಸ್ತ್ರೀಯವೆನುವಲ್ಲಿ ಸಕಲ ದುಃಖ ಮೂಲವಾದ ಅಹಂಕಾರಕ್ಕೆ ನಾಶಕರವಾದ ಪರಮಾರ್ಥ ಶಾಸ್ತ್ರದೊಳ್ ಅಖಂಡವಾದ ಬ್ರಹ್ಮದೃಷ್ಟಿಯೊಂದೆ ಗ್ರಾಹ್ಯವೆಂದಿರುವದ್ದರಿಂದ, ಇತರ ಪದಾರ್ಥಗಳೆಲ್ಲವೂ ತುಚ್ಛವೆನಿಸುವವು. ಆದ್ದರಿಂದ ಲೋಕದಲ್ಲಿ ಯಾವದೂ ಗ್ರಾಹ್ಯವಾಗಲಾರದು. ವ್ಯವಹಾರದೃಷ್ಟಿಯಿಂ ಸತ್ಯವೆಂದು ಪ್ರಪಂಚವಂ ಪರಿಗ್ರಹಿಸಿದಾಗ್ಯೂ ಗಿರಿ ವನ ನದೀ ಸಮುದ್ರಗಳಿಂದಲೂ ಪಂಚಭೂತಗಳಿಂದಲೂ ಕೂಡ ಜಗವೆಲ್ಲವೂ ಪೂರ್ಣವಾಗಿರುವದು. ಭೋಗ ವಸ್ತುಗಳಲ್ಲಿ ಮುಖ್ಯವಾದ ನಾರಿಯು ಚರ್ಮಮಾಂಸಾಸ್ಥಿಮಯವಾದ ಬೊಂಬೆಯಲ್ಲದೆ ಮತ್ತೊಂದಲ್ಲವಾದ್ದರಿಂದ, ಅವಿಚಾರ ಸುಂದರವಾದ ಈ ಸಂಸಾರ ಪ್ರಪಂಚದಲ್ಲಿ ಸಾರವೆಂದಾವದಂ ತಿಳಿಯಬೇಕು. ಹೀಗಿರುವಲ್ಲಿ ಇಚ್ಛೆಯುಂಟಾಗುವದು ಹೇಗೆ? ಇಚ್ಛೆಯೆಂಬ ದಿನಲಕ್ಷ್ಮಿಯು ಹಿಂತಿರುಗುವಲ್ಲಿ ಬೆಳಕು ಬಿಸಲುಗಳೆಂಬ ರಾಗದ್ವೇಷಗಳೆಲ್ಲಿಯೋ ಅಣಗಿಪೋಗುವವು. ಬಲು ಮಾತುಗಳಿಂದೇನು, ನಿಸ್ಸಾರವೆಂದು ಪ್ರಪಂಚದಲ್ಲಿ ಪಸರಿಸದೆ ಸರ್ವಸಮವಾದ ಪರಮಾತ್ಮನಲ್ಲಿ ಸರಸವಾಗಿ ಮನವು ಬೆರಸಿ ನಿರ್ದುಃಖವಾಗಿರುವದೇ ಪರಮಪ್ರತಿಷ್ಠೆಯೆನಿಸುವದು, ಎಂದು ಪೇಳುವ ಸುರಘುವನ್ನಾ ಪರ್ಣಾದನು ಪರಮಾನಂದದಿಂ ಬಾಚಿ ತಬ್ಬಿಕೊಂಡು ಪರಿಪರಿಯಾಗಿ ಶ್ಲಾಘಿಸಿದನು. ಇಂತು ಪರಮಾರ್ಥ ಸರಸವಾದ ಸಲ್ಲಾಪಗಳಿಂ ಪರಸ್ಪರವಾಗಿ ಕೊಂಡಾಡುತ್ತಲಿರ್ದ ಆ ಸ್ನೇಹಿತರೀರ್ವರು ಬಹುಕಾಲ ಒಂದೆಡೆಯೊಳ್ ಕುಳಿತಿದ್ದು ಈಶ್ವರಾಜ್ಞೆಯಿಂದುಲ್ಲಂಘಿಸಲಾಗದ ಕಾರ್ಯವಿಶೇಷದಿಂ ಪೊರಮಟ್ಟು ಪೋದರೆಂದು ವಸಿಷ್ಠನು ಪೇಳಿದನೆಂಬಲ್ಲಿಗೆ;—ಜ್ಞಾನಯೋಗ ತರಂಗಿಣಿಯಲ್ಲಿ ಸುರಘು ಪರಿಘೋಪಾಖ್ಯಾನ ನಿರೂಪಣವೆಂಬ ಹನ್ನೆರಡನೆಯ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ.

---

ಭಾಸವಿಲಾಸ ಸಂವಾದ ನಿರೂಪಣವೆಂಬ

ತ್ರಯೋದಶತರಂಗ ಪ್ರಾರಂಭವು.

ಬಳಿಕ ಶ್ರೀರಾಮಚಂದ್ರನಂ ಕುರಿತು ವಸಿಷ್ಠನಿಂತೆಂದನು;—ಎಲೈ ರಘುಪುಂಗವನೇ! ಜ್ಞಾನಕಾರಣವಾದ ಇವರ ಸಲ್ಲಾಪವಂ ನೀನು ಸಂಭಾವಿಸುತ್ತಾ

ಪರಮಾರ್ಥ ಜ್ಞಾನದೊಳ್ನಿಲ್ಲುವನಾಗು;—ವಿಚಾರದಿಂ ತೀಕ್ಷ್ಣವಾಗಿ ಪ್ರಜ್ಞೆಯು ವಿಕಸಲು, ಶರತ್ಕಾಲದಿಂ ಮೇಘದಂತೆ ಅಹಂಕಾರವಡಗುವದು. ಆಶಾವೇಗವುಳ್ಳ ವಾಸನೆಯೆಂಬ ಗಾಳಿಯಣಗುವದು. ಮೋಹವೆಂಬ ಮಳೆಯು ಜಾಡ್ಯವಳಿಯುವವು, ಮನಃ ಕಾಲುಷ್ಯವೆಂಬ ಕೆಸರೊಣಗುವದು, ಪರಮಹಂಸ ಪ್ರಚಾರದಿಂ ಜ್ಞಾನಮಾರ್ಗವು ಪ್ರಕಾಶಿಸಲು ಅಖಂಡವಾದ ಚಿದ್ವಸ್ತುವು ಧ್ಯಾನಗೋಚರವಾಗುವದು. ಅಧ್ಯಾತ್ಮವಿಚಾರದಲ್ಲಿರುವವನಿಗೆ ಗಗನಚಾರಿಗೆ ಮುಳ್ಳಿನ ವೇಧೆಯಂತೆ ಮನಸ್ಸಿನ ದುಃಖವುಂಟಾಗದು. ಸರ್ವಕಾಲದಲ್ಲೂ ಅಂತರ್ಮುಖವಾದ ದೃಷ್ಟಿಯಿಂ ಚಿದಾಕಾಶದಲ್ಲಿ ನೆಲಸಿರುವನಿಗೆ ಅಂತರ್ಗೃಹದಲ್ಲಿರುವನಿಗೆ ಅಂಗಡಿಯ ವ್ಯವಹಾರಗಳಂತೆ ರಾಗದ್ವೇಷ ವ್ಯಾಪಾರಗಳು ದೂರವಾಗುವವು. ಜ್ಞಾನಿಯಾದವನು ಸಂಸಾರದಲ್ಲೇ ನೆಲಸಿದ್ದಾಗ್ಯೂ ಜಲದಲ್ಲಿರುವ ಕಮಲಪತ್ರದಂತೆ ನಿರ್ಲೇಪನಾಗಿರುವನು, ಸಿಂಹವಂ ಗಜದಂತೆ ಮನೋಮೋಹವವನಂ ಹೊಂದಲಾರದು. ನಂದನವನದಲ್ಲಿ ಮುಳ್ಳುಗಿಡದಂತೆ ಜ್ಞಾನಿಯ ಮನದಲ್ಲಿ ಭೋಗಾಪೇಕ್ಷೆಯುಂಟಾಗದು. ಅವನ ಮನವು ಪತ್ನೀನಾಶದಿಂ ವಿರಕ್ತನಂತೆ ಅವಿದ್ಯಾನಾಶದಿಂ ದುಃಖಪಡದು. ಗಗನದೊಳ್ ಧೂಳಿಯಂತೆ ನಿರ್ಮಲವಾದ ಅವನ ಮನದೊಳ್ ಸಂಸಾರಮೋಹವು ತಗಲದು. ಮಾನವತಿಯಂತೆ ವಿದ್ಯೆಯು ಸ್ವಸ್ವರೂಪ ವಿದಿತವಾದ ಕೂಡಲೇ ನಷ್ಟವಾಗುವದು. ಆದ್ದರಿಂದ ಅವಿದ್ಯಾರೋಗಕ್ಕೆ ಅದರ ವಿಚಾರವೇ ಸಿದ್ಧೌಷಧವೆನಿಸುವದು. ಚಿನ್ಮಾತ್ರದಲ್ಲಿ ದೃಷ್ಟಿಯುಳ್ಳ ಪುರುಷನು ವ್ಯವಹಾರಪರನಾಗಿದ್ದಾಗ್ಯೂ ಅಸಂಗಭಾವದಿಂದಿರುವದ್ದರಿಂದ ನೀರಿನಿಂ ಮತ್ಸ್ಯದ ನೇತ್ರದಂತೆ ವ್ಯಾವಹಾರಿಕ ಸುಖದುಃಖಗಳಿಂದುಪಹತನಾಗನು. ಜ್ಞಾನಶಾಸ್ತ್ರವೆಂಬ ಮಣಿದೀಪದ ಪ್ರಕಾಶದಿಂ ವಿಷಯಾಭಿಲಾಷೆ ಎಂಬ ಕತ್ತಲೆಯಳಿಯುವಲ್ಲಿ, ಚಿದಾದಿತ್ಯನ ಉದಯವಾಗಲು ಅಜ್ಞಾನವೆಂಬ ರಾತ್ರಿಯು ಪೋಗುವದು. ಪ್ರಜ್ಞಾಪ್ರಕಾಶದಿಂ ಮರಳಿ ಮರುಳಾಗದಂತೆ ವಸ್ತುಜ್ಞಾನವುಂಟಾಗುವದು. ತಿರುಗಿ ಬಾರದಂತೆ ದುಃಖಗಳು ಪೋಗುವದು, ಚ್ಯುತಿ ಇಲ್ಲದಂತೆ ಪರಮಾನಂದವುದಿಸುವದು. ಹೃದಯಾಕಾಶದೊಳಾತ್ಮ ಚಂದ್ರನ ಚಂದ್ರಿಕೆ ಪ್ರಕಾಶಿಸುವಲ್ಲಿ ಸಾನಂದವಾದ ಕ್ರಿಯೆಗಳೆಷ್ಟು ದಿವಸ ನಡೆಯುವವೋ, ಆ ದಿವಸವೇ ಆಯುಸ್ಸಿಗೆ ಸೇರತಕ್ಕಂಥಾವಾದ್ದರಿಂದ ಬುದ್ಧಿಶಾಲಿಯಾದವನು ಸರ್ವಕಾಲದಲ್ಲೂ ಆತ್ಮವಿಚಾರದಲ್ಲಾಸಕ್ತನಾಗಿರಬೇಕು. ಆತ್ಮವಿಚಾರದಿಂದ ಅಜ್ಞಾನ ಮೋಹವಂ ದಾಟಿದವನು ಅಮೃತ ಪೂರ್ಣನಾದ ಚಂದ್ರನಂತೆ ಅಂತರಂಗದಲ್ಲಿ ಶಾಂತನಾಗುವನು. ಯಾವದರಿಂ ಚಿತ್ತವು ವೈರಾ

ಗ್ಯದಿಂ ವಿಷಯಗಳಲ್ಲಿ ಪ್ರವರ್ತಿಸದೆ ಆತ್ಮಾಕಾರವಾಗುವದೊ ಅದೇ ದಿವಸವು, ಅದೇ ಶಾಸ್ತ್ರವು, ಅವರೇ ಮಿತ್ರರೆಂದು ತಿಳಿಯತಕ್ಕದ್ದು. ಯಾರಿಗೆ ಪಾಪಾತಿಶಯ ದಿಂದಾತ್ಮ ವಿಚಾರದಲ್ಲಿ ಜುಗುಪ್ಸೆಯುಂಟಾಗುವದೋ ಅವರು ಸಂಸಾರವೆಂಬ ಕಾಡಿನೊಳ್ ಕೆಲಸಕ್ಕೆ ಬಾರದ ಮರವೆನಿಸುವರು. ಘೋರವಾದ ಸಂಸಾರ ವೆಂಬ ಅರಣ್ಯವಲ್ಲಿ ಆಶೆಯೆಂಬ ಮೂಗುಧಾರದಿಂದಲೂ, ಕರ್ಮಗಳೆಂಬ ಈಟಿಗ ಳಿಂದಲೂ, ವಾಸನೆಯೆಂಬ ಕೌದಿಯಿಂದಲೂ, ಮಮಕಾರವೆಂಬ ಕತ್ತಿನ ಸರಪಣಿ ಯಿಂದಲೂ, ಅಹಂಕಾರವೆಂಬ ಸ್ವರೂಪದಿಂದಲೂ, ಧರ್ಮಾಧರ್ಮ ಐಶ್ವರ್ಯಾನೈಶ್ವ ರ್ಯಗಳೆಂಬ ಕಾಲುಗಳಿಂದಲೂ, ಜ್ಞಾನಾಜ್ಞಾನಗಳೆಂಬ ಪುಚ್ಛ ಮುಖಗಳಿಂದಲೂ, ರಾಗದ್ವೇಷಗಳೆಂಬ ಕೊಂಬುಗಳಿಂದಲೂ, ರೂಪಯುಕ್ತವಾಗಿ ಭೋಗಗಳೆಂಬ ಹಲ್ಲುಗಳಂ ತಿನ್ನುತ್ತಾ ಜರೆಯೆಂಬ ರೋಗದಿಂ ಜಡವಾಗಿ ನಿಟ್ಟುಸುರುಗಳಂ ಬಿಡುತ್ತಾ ಮನವೆಂಬ ವ್ಯಾಪಾರಿಗೆ ಅಧೀನವಾಗಿ ದುಷ್ಕರ್ಮ ಸೂರ್ಯನ ವ್ಯಸನ ಸಂತಾಪದಿಂ ತಪ್ತವಾಗಿ ಇಂದ್ರಿಯಗಳೆಂಬ ಹುಡುಗರಿಂದ ವಿಷಯಗಳಲ್ಲ ಸೆಳೆಯಲ್ಪ ಡುತ್ತಾ ವಿವೇಕ ವಿಚಾರರೂಪವಾದ ಸನ್ಮಾರ್ಗವನ್ನೂ ಶಾಂತಿಯೆಂಬ ನೆಳಲನ್ನೂ ಕಾಣದೆ ಸರ್ವಕಾಲವಲ್ಲೂ, ಕ್ಷುತ್ಪಿಪಾಸೆಗಳಿಂದಲೂ, ದುರ್ವ್ಯಾಪಾರಗಳಿಂದಲೂ, ಭೋಗ ಪದಾರ್ಥಗಳ ಭಾರದಿಂದಲೂ, ಶ್ರಮಪಡುತ್ತಾ ನಿತ್ಯದುಃಖವರವ ಜೀವ ನೆಂಬ ಪಶುವನ್ನೂ ಮೋಹವೆಂಬ ಕೆಸರು ಹಳ್ಳದಿಂ ಬಲಾತ್ಕಾರದಿಂದುದ್ಧರಿಸ ಬೇಕು. ತತ್ವಜ್ಞಾನದಿಂ ಚಿತ್ತವು ನಷ್ಟವಾಗುವಲ್ಲಿ ಅಹಂಕಾರ ಸ್ವರೂಪವು ಪೋ ಗಲು ಜೀವನು ಮುಕ್ತನಾಗುವನು. ನಾವಿಕನಿಂದ ನಾವೆಯಂತೆ ಸಂಸಾರಕ್ಕೆ ತಾರಕವಾದ ಜ್ಞಾನವು ಮಹಾತ್ಮನ ದಯದಿಂದಲೇ ಲಭ್ಯವಾಗುವದು. ಶಾಂತಿ ಯೆಂಬ ನೆರಳಿನಿಂದಲೂ, ಸದ್ಯುಕ್ತಿಗಳೆಂಬ ಫಲಗಳಿಂದಲೂ, ಶಾಸ್ತ್ರಗಳೆಂಬ ಎಲೆ ಕೊಂಬೆಗಳಿಂದಲೂ ಅನುಭಾವವೆಂಬ ಸ್ವರೂಪದಿಂದಲೂ, ಪರಮಾತ್ಮಮೂ ಲಕವಾಗಿ ಪ್ರಕಾಶಿಸುವ ಜ್ಞಾನಿಯೆಂಬ ವೃಕ್ಷ ವಿಲ್ಲದ ದೇಶವು ಪಾಳುಭೂಮಿಯಂತೆ ಬಿಡತಕ್ಕದ್ದು, ತನಿಗೆ ತಾನೇ ಬಂಧುವಲ್ಲದೆ ಮತ್ತೊಬ್ಬನಾಗಲಾರನಾದ್ದರಿಂದ ತನ್ನ ಸ್ವರೂಪವಂ ತಿಳಿದವನೆ ಬಂಧುವೆಂದು ಅವನಂ ಶರಣುಹೊಂದಿ ಯುಕ್ತಿ ಯಿಂದ ಮೋಹವೆಂಬ ಹಳ್ಳದಿಂದೆದ್ದೋಡಬೇಕಲ್ಲದೆ ಅದರ ಕೆಸರಿನೊಳ್ ಮುಳು ಗಲಾಗದು. ಇದು ಯಾವದು? ಹೇಗೆ ಬಂದುದು? ಎಲ್ಲಿಂದುದಿಸಿತು? ಹೇಗೆ ಹೋಗು ವದೆಂದು ಬುದ್ಧಿಶಾಲಿಯಾದವನು ಬಂದದ್ದೆಲ್ಲವನ್ನೂ ಸರ್ವದಾ ವಿಚಾರಿಸುತ್ತಿರ ಬೇಕು. ಧನವಾಗಲೀ, ಮಿತ್ರರಾಗಲೀ, ಶಾಸ್ತ್ರಗಳಾಗಲೀ, ಬಂಧು ವರ್ಗವಾ

ಗಳೇ ತನ್ನನ್ನುದ್ಧರಿಸಲಾರವು. ಆದ್ದರಿಂದ ನಿತ್ಯ ಸುಹೃತ್ತಾದ ಮನದಿಂ ತತ್ವಾರ್ಥವಂ ವಿಚಾರಿಸುತ್ತಾ ತನ್ನಂ ತಾನೇ ಉದ್ಧರಿಸಿಕೊಳ್ಳಬೇಕು. ದೃಶ್ಯ ವೈರಾಗ್ಯದಿಂದಲೂ, ಸ್ವರೂಪಸ್ಥಿತಿಯ ಅಭ್ಯಾಸದಿಂದಲೂ, ಸ್ವರೂಪ ವಿಚಾರದಿಂದುಂಟಾದ ಜ್ಞಾನದಿಂದಲೂ ಅಜ್ಞಾನಮಯವಾದ ಸಂಸಾರವು ದಾಟಲ್ಪಡುವದು. ಜನಗಳೊಡನೆ ದುಃಖಪಡುತಲೂ ದುರಾಶೆಯಿಂದುಬ್ಬುತ್ತಲೂ ಅಹಂಕಾರಕ್ಕೆ ತಗಲಿಬಿದ್ದು ಮನಸ್ಸಿನ ಕಲ್ಪನೆಗಳಿಂ ಮದವೇರಿದ ಆನೆಯಂತೆ ಅವಿವೇಕವಲ್ಲಿ ದುಃಖಪಡುತ್ತಿರುವ ಆತ್ಮನಂ ತಾನೇ ಉದ್ಧರಿಸಬೇಕು. ದೇಹವೇ ತಾನೆಂಬ ಮೋಹವಂ ಬಿಟ್ಟು ಅದಕ್ಕೆ ಸಂಬಂಧಿಸಿದ ಭಾವನಾ ಕಲ್ಪನೆಗಳಂ ತ್ಯಜಿಸಿ ತಾನೆನಿಸುವದು ಯಾವದೆಂದು ವಿಚಾರಿಸುತ್ತಾ ದೃಶ್ಯವಾಗುವ ಜಡಪದಾರ್ಥಗಳೆಲ್ಲವನ್ನೂ ತಿರಸ್ಕರಿಸಿ, ಸ್ವರೂಪವಂ ನಿರ್ಧರಿಸಿ, ಅದರ ಅಖಂಡಭಾವವಂ ನೋಡುತ್ತಾ ಅಹಂಕಾರವಂ ಬಿಟ್ಟಿರುವದೇ ಸಮಾಧಿಯೆನಿಸುವದು. ಬಿಸಲಿನಲ್ಲಿರುವವನಿಗೆ ಶೈತ್ಯದಂತೆ ಈ ಸಮಾಧಿಯಲ್ಲಿರುವನಿಗೆ ಮರಳಿ ಜಡಾತ್ಮಜ್ಞಾನ ಬರದಿರುವದೇ ಮುಕ್ತಿಯೆನಿಸುವದು. ಮೇಘಹೋಗುವಲ್ಲಿ ಸೂರ್ಯನಂತೆಯೂ ಕತ್ತಲೆ ಯಳಿಯುವಲ್ಲಿ ಪದಾರ್ಥದಂತೆಯೂ ಅಹಂಭಾವವಳಿಯುವಲ್ಲಿ ಆತ್ಮಜ್ಞಾನವು ಗೊತ್ತಾಗುವದು. ಜಡ ಪದಾರ್ಥಗಳೆಲ್ಲವನ್ನೂ ತಾನಲ್ಲವೆಂದು ತಿರಸ್ಕರಿಸುವಲ್ಲಿ, ತಿರಸ್ಕಾರ ಸಾಧನವಾದ ಶಾಸ್ತ್ರಜ್ಞಾನವು ಳ್ಳದ್ದೇ ಮನವೆಂದು ನಿಶ್ಚೈಸಿರುವಲ್ಲಿ, ಹಿಂದೆಮುಂದೆ ಏನೂ ತೋರದಿರಲು, ಶ್ರಮಪಟ್ಟು ನಿಂದವನಿಗೆ ವಿಶ್ರಾಂತಿ ಸುಖದಂತೆ ತಾನು ತನ್ನದೆನ್ನುವದಕ್ಕವಕಾಶವಿಲ್ಲದೆ ದುಃಖಾತ್ಯಂತಾ ಭಾವರೂಪವಾದ ಒಂದಾನೊಂದು ಸ್ಥಿತಿಯು ಪ್ರಕಾಶಿಸುವದು. ಅದೇ ಜಗದ್ವ್ಯಾಪಿಯಾದ ಸ್ವಸ್ವರೂಪವೆಂದು ತಿಳಿಯತಕ್ಕದ್ದು. ತರಂಗವಿಲ್ಲದ ಸಮುದ್ರದಂತೆಯೂ ಮೇಘ ತಾರಾದಿಗಳೊಂದೂ ಇಲ್ಲದ ಗಗನದಂತೆಯೂ ಅದು ನಿರ್ವಿಕಲ್ಪವಾಗಿರುವದಾದ್ದರಿಂ ವಾಙ್ಮನಸ್ಸುಗಳಿಗೆ ಗೋಚರವಾಗದೆ ಜ್ಞಾತೃಜ್ಞಾನಜ್ಞೇಯ ಭಾವಗಳಿಲ್ಲದ ಜ್ಞಪ್ತಿರೂಪದಿಂ ಪ್ರಕಾಶಿಸುತ್ತಿರುವದು. ಅದನ್ನೇ ತುರೀಯಪ್ರಪಷ್ಟಿಯೆಂತಲೂ, ತುರಿಯಾತೀತವಾದ ಸತ್ತಾಮಾತ್ರ ಸ್ಥಿತಿಯೆಂತಲೂ ಪೇಳುವರು. ಅದಕ್ಕೆ ಅದೇ ಸಮಾನವೆನಿಸುವದು. ಅಥವಾ ಗಾಢ ಸುಷುಪ್ತಿಯನ್ನದಕ್ಕೆ ಸಮಾನವೆನ್ನಬಹುದು. ಅಹಂಕಾರ ಮನಸ್ಸುಗಳಡಗದೆ ಆನಂದರೂಪವಾದ ಆ ಅವಸ್ಥೆಯು ತಲೆದೋರದು, ಅದನ್ನೇ ಅಖಂಡ ಚಿನ್ಮಾತ್ರಸ್ವರೂಪನಾದ ಪರಮೇಶ್ವರನ ರೂಪವೆನ್ನುವರು. ಕಲ್ಲುಸಕ್ಕರೆಯ ರುಚಿಯಂತೆ ಸ್ವಾನುಭವ ಮಾತ್ರಗಮ್ಯವಾದ್ದರಿಂದ ವಾಕ್ಕಿನಿಂದ ಪೇಳುವದಕ್ಕೂ ಇನ್ನೊಬ್ಬನಿಗೆ ತೋರುವದಕ್ಕೂ

ಅಶಕ್ಯವಾಗಿರುವದು. ಮನಸ್ಸಿನ ಬಾಹ್ಯ ವ್ಯಾಪಾರವಳಿಯಲು, ತರಂಗವು ಸಮು ದ್ರದಲ್ಲಿ ಲಯವಾಗುವಂತೆ ಆತ್ಮನು ಪರಮಾತ್ಮನಲ್ಲೈಕ್ಯವಂ ಪಡೆಯುವಲ್ಲಿ ತಾನೇ ಚರಾ ಚರ ಸ್ವರೂಪನಾಗಿರುವೆನೆಂಬ ಅರ್ಥವು ಗೊತ್ತಾಗುವದು. ಆ ಅನುಭವವು ಹೇಗೆ ಹೇಗೆ ವೃದ್ಧಿಹೊಂದುವದೊ! ಹಾಗೆ ಹಾಗೆ ವಿಷಯವಾಸನಾನಾಶವು ಚಿತ್ತೋಪ ಶಾಂತಿಯು ಸರ್ವ ಸಮತ್ವವೂ ಕೂಡ ಪ್ರಕಾಶಿಸುವದು. ಎಲೈ ಲೋಕಾ ಭಿರಾಮನೆ! ಸಾತ್ವಿಕವಾದ ಮನದಿಂ ರಾಜಸ ತಾಮಸವಾದ ಮನವಂ ಛೇದಿಸಿ ಅಹಂ ಕಾರ ಮಮಕಾರಗಳಂ ಬಿಡದೆ ಈ ಜಗತ್ತಿನ ದುಃಖವಡಗಲಾರದು. ಅಹಂಕಾರ ಮನಸ್ಸುಗಳ ಉರವಣೆಯಿಂದೀ ಜಗತ್ತಿನ ದುಃಖವು ಸಮುದ್ರದಂತೆ ವಿಸ್ತಾರವಾಗಿ ವೃದ್ಧಿ ಹೊಂದುತ್ತಿರುವದು. ಈ ಸಮುದ್ರಪ್ರವಾಹದ ವೃದ್ಧಿಗೋಸುಗ ಅಜ್ಞಾನ ಮೇಘಗಳಿಂ ಕ್ಷಯದುರ್ದಿನವಾದ ಸಂಸಾರವೆಂಬ ವರ್ಷಾಕಾಲವು ಕಡೆಯಿಲ್ಲದೆ ಆಗಾಗ್ಯೆ ಬರುತ್ತಿರುವದು. ಈ ಅರ್ಥದೊಳ್ ಭಾಸವಿಲಾಸರ ಸಂವಾದವನ್ನಾ ಲೈಸುವನಾಗು;—ಔನ್ನತ್ಯದಿಂದ ಗಗನವನ್ನು, ಪೀಠಗಳಿಂದ ಭೂಮಿಯನ್ನೂ, ತಲ ದಿಂದ ಪಾತಾಳವನ್ನೂ ವ್ಯಾಪಿಸಿ ತ್ರಿಲೋಕ ವಿಜಯವೆಂದು ಪ್ರಸಿದ್ಧವಾಗಿ ಅಸಂಖ್ಯ ವಾದ ಪುಷ್ಪಗಳಿಗೂ, ನಿರ್ಮಲವಾದ ಪ್ರವಾಹಗಳಿಗೂ, ಕಾಂತಿಯುಕ್ತವಾದ ರತ್ನ ಗಳಿಗೂ, ಅಪರಿಮಿತವಾದ ನಿಧಿಗಳಿಗೂ, ವಿಚಿತ್ರವಾದ ಧಾತುಗಳಿಗೂ, ಉತ್ಪತ್ತಿಸ್ಥಾನ ವಾಗಿ ಅಸಹ್ಯವಾದ ತೇಜೋವಾಯುಗಳಿಗೆ ಆಶ್ರಯವಾದ ಸಹ್ಯವೆಂಬ ಪರ್ವತ ವಿರುವದು. ರತ್ನಕಾಂಚನ ಮಯವಾದ ತಟಗಳಿಂದಾಗಿರಿಯು ನಿರ್ಮಲವಾದ ಗಂಡಗಳುಳ್ಳವೋ ತಂಡದಂತೆ ಪ್ರಕಾಶಿಸುತ್ತಿಹುದು. ಒಂದೆಡೆಯಲ್ಲಿ ಪೂಮಳೆಗಳಿಂ ದಲೂ, ಒಂದೆಡೆಯಲ್ಲಿ ಪ್ರವಾಹಗಳಿಂದಲೂ, ಒಂದೆಡೆಯಲ್ಲ ಸರೋವರಗಳಿಂದಲೂ, ಒಂದೆಡೆಯಲ್ಲಿ ರತ್ನದಗಣಿಗಳಿಂದಲೂ, ಪ್ರಕಾಶಿಸುವ ಆ ಗಿರಿಯು ಪ್ರವಾಹಗಳ ಮೊರತವಿಂದಲೂ ಅರಣ್ಯಗಳ ವೇಣುನಾದದಿಂದಲೂ, ಗುಹೆಗಳ ಪ್ರತಿ ಶಬ್ದದಿಂದಲೂ ಭ್ರಮರಗಳ ಝಂಕಾರದಿಂದಲೂ, ತಟವನಗಳಲ್ಲಿ ಅಪ್ಸರೆಯರ ಸಂಗೀತದಿಂದಲೂ, ವನದಲ್ಲಿ ಮೃಗಧ್ವನಿಗಳಿಂದಲೂ, ಶೃಂಗಗಳಲ್ಲಿ ಮೇಘ ಗರ್ಜನೆಗಳಿಂದಲೂ, ಗಗನ ದಲ್ಲಿ ಪಕ್ಷಿಗಳ ಕೋಲಾಹಲದಿಂದಲೂ, ಶಬ್ದಮಯವಾಗಿ ಕಾಣುತ್ತಿರುವದು. ಅಲ್ಲಿರುವ ಶಿಲೆಗಳು ಮೋಡವೆಂಬ ನೀಲಾಂಬರದಿಂದಾವೃತವಾಗಿ ನಿಶ್ಶಬ್ದವಾದ ರತ್ನಾಭರಣಗಳಂ ಧರಿಸಿ ಶೃಂಗಗಳೆಂಬ ವಿಟಪುರುಷರಂ ಪೊಂದುವಂತೆ ಕಾಣು ತ್ತಿರುವವು ಗುಹೆಗಳಲ್ಲಿ ಸಿದ್ಧ ವಿದ್ಯಾಧರರಿಂದಲೂ, ಶಿರೋಭಾಗದಲ್ಲಿ ದೇವತೆ ಗಳಿಂದಲೂ, ತಳದಲ್ಲಿ ಮಹಾ ನಾಗಗಳಿಂದಲೂ, ಮಧ್ಯದಲ್ಲಿ ಮನುಷ್ಯರಿಂದಲೂ,

ಮೇರುವಿಗೊಡಪುಟ್ಟಿದಂತಿರುವ ಆ ಸಹ್ಯಪರ್ವತದ ಉತ್ತರಭಾಗದೊಳ್ ಫಲಭಾರದಿಂ ತಗ್ಗಿದ ವೃಕ್ಷಗಳಿಂದಲೂ, ರತ್ನಮಯದಂತೆಸೆವ ಸರೋವರಗಳಲ್ಲಿ ಪ್ರವಹಿಸುವ ವಿಚಿತ್ರವಾದ ಪ್ರವಾಹಗಳಿಂದಲೂ, ಮನೋಹರವಾದ ಒಂದಾನೊಂದು ಸ್ಥಳದಲ್ಲಿ ಸ್ವರ್ಗದಂತೆ ರಮ್ಯವಾಗಿ, ಬ್ರಹ್ಮಲೋಕದಂತೆ ವೇದಘೋಷಮಯವಾಗಿ, ಶಿವಲೋಕದಂತೆ ನಿರ್ಮಲವಾದ ಅತ್ರಿಮಹಾಮುನಿಯ ಆಶ್ರಮವಿರುವದು. ಸಕಲ ಸಿದ್ಧಿಗಳಿಗೂ ಉತ್ಪತ್ತಿಸ್ಥಾನವಾಗಿ ಸಿದ್ಧರಿಗೆ ಶ್ರಮಪರಿಹಾರಕವಾದ ಆ ಆಶ್ರಮದೊಳ್ ಗಗನದಲ್ಲಿ ಗುರುಶುಕ್ರರಂತೆ ತೇಜಸ್ವಿಗಳಾದ ಇಬ್ಬರು ಮುನಿಗಳಿದ್ದರು. ಆ ತಪೋನಿಧಿಗಳಿಗೆ ಭಾಸವಿಲಾಸರೆಂಬ ಮಕ್ಕಳುಗಳಾದರು. ತಿಲ ತೈಲಗಳಂತೆಯೂ, ಪುಷ್ಪ ಪರಿಮಳಗಳಂತೆಯೂ ಅತಿ ಸ್ನೇಹದಿಂದೊಂದಾಗಿರುವ ಅವರೀರ್ವರು ಏಕಾತ್ಮಕರಾದ್ದರಿಂ ರೂಪಮಾತ್ರ ಭಿನ್ನರಾಗಿ ವೃದ್ಧಿಹೊಂದಿದರು. ಕಮಲದಲ್ಲಿ ಭ್ರಮರಗಳಂತೆ ಆ ಆಶ್ರಮದಲ್ಲಿರುವ ಆಭಾಸವಿಲಾಸರು ಯೌವ್ವನವಂ ಪಡದು ಸೂರ್ಯಚಂದ್ರರಂತೆ ಪ್ರಕಾಶಿಸುತ್ತಿರುವಲ್ಲಿ ಅವರ ತಂದೆಗಳು ಗೂಡಂ ಬಿಟ್ಟು ಹಾರುವ ಪಕ್ಷಿಗಳಂತೆ ಶರೀರವಂ ಬಿಟ್ಟು ಸ್ವರ್ಗಕ್ಕೆ ಪೋಗಲು ಸರೋವರದಿಂ ಕಿತ್ತುಹಾಕಲ್ಪಟ್ಟ ಕಮಲದಂತೆ ದೀನರಾದ ಅವರೀರ್ವರೂ ಪಿತೃಕರ್ಮವಂ ನೆರವೇರಿಸಿ ಗುಂಪುತಪ್ಪಿದ ಮೃಗಗಳಂತೆ ದುಃಖಪಡುತ್ತಲೂ, ನೀರಿಲ್ಲದ ಮರಗಳಂತೆ ಶುಷ್ಕವಾಗುತಲೂ ಗೃಹಾದಿಗಳಲ್ಲಿ ಆಸ್ಥೆಯಿಲ್ಲದೆ ದುಃಖ ವೈರಾಗ್ಯದಿಂದಲೆ ಜರೆಯಂ ಪಡೆಯುವಲ್ಲಿ ದೈವಯೋಗದಿಂದೊಂದುವೇಳೆ ಕೆಲವುದಿನ ವಿಯೋಗವಂ ಪಡೆದು ತತ್ವಜ್ಞಾನವಿಲ್ಲದ್ದರಿಂದವರು ಮತ್ತೂ ದುಃಖಪಡುತ್ತ ಒಂದಾನೊಂದು ಕಾಲವಲ್ಲಿ ಒಂದೆಡೆಯೊಳ್ ಸೇರಿ ಮಾತನಾಡಿದರದೆಂತೆನೆ:—ಎಲೈ ಭಾಸನೇ! ಜೀವನವೆಂಬ ವೃಕ್ಷಕ್ಕೆ ಫಲವಾಗಿ ಹೃದಯದಲ್ಲಿರುವ ಅಮೃತ ಸಮುದ್ರಕ್ಕೆ ಸಮಾನನಾದ ನಿನ್ನ ದರ್ಶನದಿಂದೀಗ ಸಂತುಷ್ಟನಾಗಿರುವೆನು. ನೀನು ಸುಖವಾಗಿ ಬಂದು ಸೇರಿದೆಯಾ? ಇಷ್ಟು ದಿವಸಗಳು ನಿನ್ನಿಂದೆಲ್ಲಿ ಕಳೆಯಲ್ಪಟ್ಟವು? ನಿನ್ನ ತಪಸ್ಸು ಸಫಲವಾಗಿರುವದೆ? ನಿನ್ನ ಬುದ್ಧಿಯು ತತ್ವಜ್ಞಾನದಿಂ ತಾಪರಹಿತವಾಗಿರುವದೆ? ಅದರಿಂ ನಿನ್ನ ಜ್ಞಾನವು ಫಲಯುಕ್ತವಾಗಿರುವದೆ? ನೀನು ಕ್ಷೇಮವಾಗಿದ್ದೀಯಾ? ಎಂದು ವಿಲಾಸನು ಕೇಳುವಲ್ಲಿ ಭಾಸನಿಂತೆಂದನು;—ಎಲೈ ವಿಲಾಸನೇ! ಈಗ ದೈವಯೋಗದಿಂ ನಿನ್ನ ದರ್ಶನವಾದ್ದರಿಂದೆನ್ನ ಆಗಮನವು ಸುಖಕರವಾದುದು. ಗುರೂಪದಿಷ್ಟ ಶಾಸ್ತ್ರವಿಚಾರದಿಂ ವಿವೇಕವುಂಟಾಗದೆ ಅದರ ವಿಚಾರದಿಂ ಬ್ರಹ್ಮೈಕ್ಯ ಜ್ಞಾನಾನುಭವವಾಗದೆ ಚಿತ್ತದ ಆಶೆಗಳು ಕತ್ತರಿಸದೆ ಚಿತ್ತವೂ ನಷ್ಟವಾಗದೆ ನಿಶ್ಶೇಷವಾಗಿ ಭೇದವಾ

ಸನೆಯುಳಿಯದೆ ಅದ್ವಿತೀಯ ಭಾವವು ಸಿದ್ಧವಾಗದಿರುವಲ್ಲಿ, ಯಾರಿಗೂ ಕ್ಷೇಮವಾಗಲಾರದು. ಜ್ಞಾನೌಷಧದ ಸೇವನೆ ಇಲ್ಲದ್ದರಿಂದಾತ್ಮನೇ ದೊರೆಯದಿರಲು ಸಂಸಾರ ವಿಷೂಚಿಯು ಹೇಗೆ ತಪ್ಪೀತು ? ಅದು ತಪ್ಪದೆ ಹೇಗೆ ನಮಗೆ ಕ್ಷೇಮವಾದೀತು ? ಬಾಲ್ಯದಿಂ ಮೊಳಕೆಯಾಗಿ ಯೌವ್ವನದಿಂ ಚಿಗುರುಗೂಡಿ ವೃದ್ಧಾಪ್ಯದಿಂ ಪುಷ್ಪಿತವಾಗಿ ನೆಂಟರಿಷ್ಟರೆಂಬ ದುಂಬಿಗಳಿಂ ತುಂಬಿರುವ ನಿತ್ಯರೋದನವಾದ ಈ ಶರೀರ ವೃಕ್ಷದೊಳ್ ಮೃತ್ಯುವೆಂಬ ಫಲವು ತಲೆದೋರುತ್ತಿರುವಲ್ಲಿ ಜನ್ಮಾಂತರ ಕರ್ಮವಳಿಯದುದರಿಂದಲೂ, ಗತಿಪ್ರದವಾದ ಪುಣ್ಯಕರ್ಮವಿಲ್ಲದ್ದರಿಂದಲೂ, ನಿರಾಧಾರವಾಗಿ ನಡೆಯಲಾರದ ದೇಹವು ಬೀಳುವವನ್ನೇ ನೋಡುತ್ತಿರುವಲ್ಲಿ, ಸಂಸಾರವೆಂಬೀ ಕಾಡಿನೊಳ್ ಸುಖವಾರ್ತೆ ಎಂತು ಉಂಟಾದೀತು ? ದೇಹವೆಂಬ ಪರ್ವತಕ್ಕೆ ಜರಿಗಳಾದ ಕರ್ಮಮಾರ್ಗಗಳು ಆಶೆಗಳೆಂಬ ಮುಳ್ಳುಗಳಿಂದಲೂ ವಿಷಯಗಳೆಂಬ ಹೆಬ್ಬಾವುಗಳಿಂದಲೂ ತುಂಬಿದ್ದಾಗ್ಯೂ ಅವುಗಳಲ್ಲೇ ಬಿದ್ದಿರುವೆವು. ಸುಖಲೇಶದಂತೆ ತೋರುವ ದುಃಖಗಳಿಂದಲೂ ದೀರ್ಘ ಹ್ರಸ್ವವಾದ ಶುಭಾಶುಭ ಕರ್ಮಗಳಿಂದಲೂ ಸ್ಥಿರವಾದ ಅಹೋರಾತ್ರಗಳು ನಿಲುಗಡೆ ಇಲ್ಲದೆ ಹೋಗಿ ಬರುತ್ತಿರುವವು. ಪರಮಾರ್ಥವಾಗಿಲ್ಲವಿದ್ದರೂ ಇರುವಂತೆ ಅಜ್ಞಾನದಿಂ ತೋರುವ ಭೋಗಗಳಲ್ಲಾಶೆಯಿಂದ ಸಂಸಾರಿಗಳು ಪರಿಪರಿಯಾದ ಸಂಕಲ್ಪಗಳಿಂದ ದುಷ್ಕರ್ಮಗಳನ್ನೇ ಮಾಡುತ್ತಿರುವರು. ಭೋಗಾಶಾ ಭಾವನಾ ಕಲ್ಪನೆಗಳೆಂಬ ಪೆಣ್ಣಾನೆಗಳಿಂ ಕೂಡಿದ ಮನವೆಂಬ ಮದಗಜವು ತನ್ನ ಕಟ್ಟುಕಂಭವಾದ ಆತ್ಮನನ್ನು ಸೆಳೆದೊಂಡು ಸ್ವೇಚ್ಛೆಯಿಂದ್ಯೋಡಾಡುತ್ತಿರುವದು. ಭೋಗಾಶೆಯೆಂಬ ಗೃಧ್ರವು ಶರೀರವೃಕ್ಷದ ಹೃದಯವೆಂಬ ಗೂಡಿನಲ್ಲಿರುತ್ತಾ ಆಯುಸ್ಸೆಂಬ ಚಿಂತಾಮಣಿಯು ಬೀಳುವದಂ ನೋಡದೆ ಜಿಹ್ವಾಗುಹ್ಯ ಚಾಪಲ್ಯವೆಂಬ ರೆಕ್ಕೆಗಳಿಂ ಹಾರಾಡುತ್ತಿರುವದು. ಕಾಯಲತೆಗೆ ಅವಲಂಬನವಾದ ಆಯುರ್ವೃಕ್ಷದ ದಿವಸ ಪತ್ರಗಳು ವಿವೇಕ ರಸವಿಲ್ಲದ್ದರಿಂ ಜೀರ್ಣವಾಗಿ ಉದರಿಹೋಗುತ್ತಿರುವವು. ದುರಾಸೆಯಿಂ ಹೊರಕ್ಕೆ ಹೊರಡುವಲ್ಲಿ ಜನಗಳಿಂದಲೂ ಶಕ್ತಿಯಿಲ್ಲದೆ ಕುಳಿತಿರುವಲ್ಲಿ ಪತ್ನೀ ಪುತ್ರಾದಿಗಳಿಂದಲೂ ಗೃಹಕೃತ್ಯದಲ್ಲಿ ಬರುವ ಅವಮಾನಗಳಿಂ ಮುಖವು ಹಿಮಬಿಂದುಗಳಿಂ ಕಮಲದಂತೆ ಕಾಂತಿ ಹೀನವಾಗುವದು. ಕಾಯ ಸರೋವರದೊಳ್ ಯೌವ್ವನ ರಸವು ಪೋಗುವಲ್ಲಿ ಆಯುಸ್ಸೆಂಬ ಹಂಸವು ಹಾರಿ ಹೋಗುವುದು. ಕಾಲಮಾರುತದಿಂ ಶಿಥಿಲವಾದ ಶರೀರ ವೃಕ್ಷದಿಂ ಭೋಗಪುಷ್ಪಗಳು ಬಿದ್ದುಹೋಗುವವು. ಭೋಗ ಸರ್ಪಗಳಿಂದಲೂ ದುಃಖ ಮುಂಡೂಕಗಳಿಂದಲೂ ತುಂಬಿರುವ ಅಜ್ಞಾನವೆಂಬ

ಅಂಧಕೂಪದಲ್ಲಿ ವಿವೇಕ ದೃಷ್ಟಿಯಿಲ್ಲದ ಮನೋಮೃಗವು ಬಿದ್ದು ಒದ್ದುಕೊಳ್ಳುತ್ತಿರುವದು. ಹೃದಯದಲ್ಲಿರುವ ಆಶಾಲತೆಯೂ ಭೋಗ ರಾಗ ಪಲ್ಲವಗಳಿಂ ಸಂಪನ್ನವಾಗಿ ದೇಹಸ್ಥಾನಮಂ ಕರ್ಪೂರದ ಧೂಮದಂತೆ ದೇಹವೆಲ್ಲವನ್ನು ವ್ಯಾಪಿಸಿ ಮಾಲಿನ್ಯವನ್ನುಂಟುಮಾಡುವದು. ಸಂಸಾರವೆಂಬ ವೀಣಾದಂಡದಲ್ಲಿ ಮಧುರಧ್ವನಿಯಾದ ಜೀವನಾಶೆಯೆಂಬ ತಂತಿಯನ್ನು ಕಾಲವೆಂಬ ದೊಡ್ಡ ಬಿಲದಲ್ಲಿರುವ ಮೃತ್ಯುವೆಂಬ ಇಲಿಯು ಕತ್ತರಿಸುವದು. ಕಾಮ ಲೋಭ ಮದಗಳಿಂ ಮಿತಿಮೀರಿ ಅಲೆದಾಡುತ್ತಾ, ಕ್ರೋಧ ಮೋಹ ಮಾತ್ಸರ್ಯಗಳಿಂದೊಡಗೂಡಿ, ಪರಿಪರಿಯಾದ ಆಪತ್ಸಂಪತ್ತುಗಳೆಂಬ ದೊಡ್ಡದೊಡ್ಡ ಸುಳಿಗಳಿಂ ಭಯಂಕರವಾದ ಜೀವನರೀತಿಯೆಂಬ ಕ್ಷುದ್ರನದಿಯು ಮರ್ಯಾದೆಯಂ ಮೀರಿ ಹರಿಯುತ್ತಾ, ಮಧ್ಯಕಾಲದಲ್ಲೇ ನಿಸ್ಸಾರವಾಗಿ ಅಡಗುವದು. ವಿದ್ಯಾಜಾತಿ ಗುಣ ಸಾಮರ್ಥ್ಯಾಭಿಮಾನಗಳೆಂಬ ತೆರೆಗಳಿಂ ವಿಚ್ಛಿತ್ತಿ ಇಲ್ಲದೆ ಹರಿಯುವ ಕರ್ಮನದಿಯು ಅಲ್ಲಲ್ಲಿ ಜನ್ಮಗಳೆಂಬ ಬಿಲಗಳನ್ನುಂಟುಮಾಡುತ್ತಾ, ಕೊನೆಗಾಣದೆ ಹಿಂಭಾಗಕ್ಕೂ ಮುಂಭಾಗಕ್ಕೂ ಸಹ ಪ್ರವಹಿಸುತ್ತಿರುವದು. ಅಲ್ಲಲ್ಲುಂಟಾದ ಬಂಧುಗಳೆಂಬ ಕರ್ಮನದಿಯ ಕಲ್ಲೋಲಗಳು ಸಾಗರದಂತಿರುವ ಕಾಲದ ಮುಂಗಡೆಯಲ್ಲೇ ಲಯವನ್ನೈದುವವು. ಸಕಲ ಪುರುಷಾರ್ಥ ಸಾಧನರೂಪವಾದ ಕಾಂತಿಯಿಂ ಪೊಳೆಯುವ ದೇಹರತ್ನವು ಪ್ರತಿಜನ್ಮದಲ್ಲೂ ನಾಶವೆಂಬ ಕೆಸರು ಹಳ್ಳದಲ್ಲಿ ಎಲ್ಲಿ ಬೀಳುವದೋ ಗೊತ್ತಾಗುವದಿಲ್ಲ. ದುರಾಹಾರ ದುರ್ವ್ಯವಹಾರ ಪರಾಯಣವಾಗಿ ಚಿಂತಾಸ್ವರೂಪವಾಗಿರುವ ಚಿತ್ತವು ಈ ಸಂಸಾರ ಸಮುದ್ರದೊಳ್ ಕಾಮಕ್ರೋಧಾದಿ ಸುಳಿಗಳಲ್ಲಿ ಬಿದ್ದು ತೃಣದಂತೆ ತಿರುಗುತ್ತಿರುವದು. ಇದಂ ಮಾಡಿದೆ ಇದಂಮಾಡುವೆ ಇದಂ ಮಾಡಬೇಕೆಂದು ಬುದ್ಧಿಯೆಂಬ ಪಕ್ಷಿಯು ಕಲ್ಪನಾ ಸಮೂಹವೆಂಬ ಬಲೆಗೆ ತಗಲಿ ಬಿದ್ದಿರುವದು. ಇವನು ಮಿತ್ರನು ಇವನು ಶತ್ರುವೆಂಬ ದ್ವಂದ್ವಬುದ್ಧಿಯು ಸೈದಲೆಗಳಿಂ ಮದ್ದಾನೆಯಂತೆ ನನ್ನ ಮರ್ಮಗಳಂ ಭೇದಿಸುತ್ತಿರುವದು. ದೊಡ್ಡದೊಡ್ಡ ಸುಳಿಗಳುಳ್ಳ ಚಿಂತಾನದಿಯ ತೆರೆಗಳಲ್ಲತಿ ಚಂಚಲವಾದ ಮನವು ಮೀನಿನಂತೆ ತಿರುಗುತ್ತಿರುವದು. ಈ ಪರಿಯಿಂ ಪರಿಪರಿಯಾದ ಪರದುಃಖಗಳಿಂ ತನ್ನದೆಂದು ಪರಿಗ್ರಹಿಸಿದ್ದರಿಂದ ಆತ್ಮನು ದೀನನಾಗಿ ದುಃಖಪಡುತ್ತಾ ಈ ಸಂಸಾರವೆಂಬ ಅರಣ್ಯದಲ್ಲಿ ಬಿದ್ದಿರುವನು. ಬಹುವಿಧ ಸುಖ ದುಃಖಗಳೆಂಬ ಹಳ್ಳಗಳಲ್ಲುರುಳುತ್ತಾ ಜನ್ಮ ಜರಾಮರಣಗಳೆಂಬ ಛಳಿ ಬಿಸಲು ಗಾಳಿಗಳಿಂ ಶಿಥಿಲನಾಗಿ ತರಗೆಲೆಯಂತೆ ಹಾರಿ ಹಾರಿ ಬೀಳುತ್ತ ವ್ಯವಸ್ಥೆ ಇಲ್ಲದೆ ಅಲೆಯುತ್ತಿರುವನು; ಇಂದು ಪರಿಪರಿಯಾಗಿ

ದುಃಖಪಡುತ್ತಾ ಪರಸ್ಪರವಾಗಿ ಸೇರಿಕೊಂಡು ವಿಚಿತ್ರವಾದ ತಪವಂ ಮಾಡುತ್ತಾ, ವಿಚಾರಪರರಾದ ಆ ತಪಸ್ವಿಗಳೀರ್ವರೂ ಕೆಲವು ಕಾಲದಲ್ಲಿ ತತ್ವಾರ್ಥವಂ ತಿಳಿದು ಕೃತಾರ್ಥರಾದರು. ಆದ್ದರಿಂ ಮುಕ್ತಿಗೆ ಜ್ಞಾನವೇ ಮುಖ್ಯಸಾಧನವೆಂದು ಹೇಳಲ್ಪಡುವದು. ಇತರ ಪಕ್ಷಿಗೆ ಅನಂತವಾದ ಸಮುದ್ರವು ಗರುಡನಿಗೆ ಗೋಷ್ಪದವಾಗುವಂತೆ ಅಪಾರವಾದೀ ಸಂಸಾರವು ಬುದ್ಧಿಶಾಲಿಗೆ ಗೋಷ್ಪದವಾಗುವದು. ಸರ್ವಾಭಿಮಾನತ್ಯಾಗದಿಂದಾತ್ಮಜ್ಞಾನಿಗಳಾದವರು ತಮ್ಮ ದೇಹವನ್ನೇ ದೂರದಲ್ಲಿರುವಂತೆ ನೋಡುವರು. ಆ ಜ್ಞಾನವೇ ಯಥಾರ್ಥವಾದ್ದರಿಂದ ದೇಹದುಃಖದಿಂ ವಿವೇಕಿಯಾದವನು ವ್ಯಥೆಪಡಲಾಗದು. ರಥಭಂಗದಿಂ ಸಾರಥಿಗೆ ಭಂಗವಿಲ್ಲದಂತೆ ದೇಹಭಂಗದಿಂದಾತ್ಮನಿಗೆ ಭಂಗವಿಲ್ಲವೆಂದು ತಿಳಿಯತಕ್ಕದ್ದು. ತರಂಗವುಂಟಾದ್ದರಿಂದ ಸಮುದ್ರದಂತೆ ಮನಸ್ಸಿನ ಕ್ಷೋಭೆಯಿಂ ಚಿದಾಕಾಶವು ವಿಕಾರಿಯಾಗದು. ಹಂಸಕ್ಕೆ ನೀರಿನಂತೆಯೂ, ನೀರಿಗೆ ಕಲ್ಲಿನಂತೆಯೂ, ಕಲ್ಲಿಗೆ ಮರದಂತೆಯೂ, ಮರಕ್ಕೆ ಭೋಗದಂತೆಯೂ, ಭೋಗಕ್ಕಾತ್ಮನು ಭಿನ್ನನಾಗಿರುವನು. ಮಧ್ಯದಲ್ಲಿ ಗಿರಿಗಳಿದ್ದಾಗ್ಯೂ ಆಕಾಶ ಸಮುದ್ರಗಳಂತೆ ಆತ್ಮಭೋಗಗಳು ಮಧ್ಯದಲ್ಲಿ ಮನವಿದ್ದಾಗ್ಯೂ ಸಂಬಂಧವಿಲ್ಲದಿರುವವು. ನದೀಜಲದಲ್ಲಿ ಪದ್ಮಗಳಂತೆ ಶರೀರಗಳು ಆತ್ಮನಲ್ಲೇ ಇದ್ದಾಗ್ಯೂ ಸಂಬಂಧಿಸದಿರುವವು. ಜಲಕಾಷ್ಠ ಸಂಬಂಧದಿಂ ತುಂತುರುಗಳಂತೆ ಆತ್ಮದೇಹ ಸಂಬಂಧದಲ್ಲಿ ಚಿತ್ತವೃತ್ತಿಗಳುಂಟಾಗುವವು. ಜಲದಲ್ಲಿ ವೃಕ್ಷಗಳು ಪ್ರತಿಬಿಂಬಿಸಿ ಕಾಣುವಂತೆ ಆತ್ಮನಲ್ಲಿ ಶರೀರಗಳು ಸಂಬಂಧಿಸಿರುವಂತೆ ತೋರುತ್ತಿರುವವು. ದರ್ಪಣಾದಿಗಳಲ್ಲಿರುವ ಪ್ರತಿಬಿಂಬದಂತೆ ಶರೀರಗಳು ಆತ್ಮಸತ್ತೆಯಿಂ ಸತ್ಯವೆಂತಲೂ ಭಿನ್ನವಾದ ಸತ್ತೆ ಇಲ್ಲದ್ದರಿಂದಸತ್ಯವೆಂತಲೂ ಹೇಳಲ್ಪಡುವವು. ನೀರು ಮರ ಕಲ್ಲುಗಳು ಸೇರುವಲ್ಲಿ ಒಂದರಿಂದೊಂದಕ್ಕೆ ಹೇಗೆ ಸಂತೋಷ ವ್ಯಥೆಗಳಿಲ್ಲವೋ ಹಾಗೆ ವಿಯೋಗದಲ್ಲೂ ಇಲ್ಲದಿರುವವು. ದಾರು ಸಂಯೋಗದಿಂ ಜಲದಲ್ಲಿ ಹೇಗೋ ಹಾಗೆ ಆತ್ಮಸಂಬಂಧದಿಂ ಶರೀರದಲ್ಲಿ ಚಲನ ಶಬ್ದಾದಿಗಳುಂಟಾಗುವವು. ಚಿಜ್ಜಡರೂಪವಾದ ಆತ್ಮ ಶರೀರಗಳಿಗೆ ಸುಖದುಃಖ ಜ್ಞಾನವಿಲ್ಲದ್ದರಿಂದ ಅದು ಅಜ್ಞಾನಕ್ಕಿಂತಲೇ ಹೇಳಬೇಕು. ಅಜ್ಞಾನದೊಡನೆ ಶರೀರಾದಿಗಳು ಅಳಿಯಲು ಚಿನ್ಮಾತ್ರನಾದ ಆತ್ಮನೊಬ್ಬನೇ ನಿಲ್ಲುವನು, ಅಜ್ಞಾನವಳಿದ ಬಳಿಕ ಶರೀರವಿದ್ದಾಗ್ಯೂ ನೀರು ಮರಗಳ ಸೇರಿಕೆಯಲ್ಲಿ ಒಂದಕ್ಕೂ ಜ್ಞಾನವಿಲ್ಲದಿರುವಂತೆ ದೇಹಾತ್ಮರಲ್ಲಿ ಯಾವದಕ್ಕೂ ಸುಖದುಃಖಾನುಭವವಿಲ್ಲದಿರುವದು. ಅಜ್ಞಾನಿಗೆ ಭಿನ್ನಸತ್ತಾಜ್ಞಾನದಿಂ ಸಂಸಾರವು ಸತ್ಯವಾಗಿರುವಂತೆ ಪ್ರಾಜ್ಞನಿಗೆ ಅಭಿನ್ನಸತ್ತಾ

ಜ್ಞಾನದಿಂ ಸತ್ಯವಾಗಿರುವದು. ಆದರೆ ಕಲ್ಲು ನೀರುಗಳಿಗೆ ಅಭಿಮಾನವಿಲ್ಲದಿರುವಂತೆ ಪ್ರಾಜ್ಞದೇಹದೊಳ್ ಚಿಜ್ಜಡ ಸಂಬಂಧವಿಲ್ಲದಿರುವದು. ಅಜ್ಞದೇಹದೊಳಿರುವದೆಂಬುದೇ ವಿಶೇಷವು, ಪ್ರಾಜ್ಞದೇಹದೊಳ್ಜಲ ಕಾಷ್ಟಗಳಂತೆ ಚಿಜ್ಜಡಗಳಿಗೆ ಅಭಿಮಾನ ಸಂಬಂಧವಿಲ್ಲದಿದ್ದಾಗ್ಯೂ ಶರೀರ ಸ್ಥಿತಿಯಿಂದ ಆತ್ಮನಿಗೆ ಅಭೇದಜ್ಞಾನದಿಂದಭಿಮಾನವಿರುವದೆಂದು ತಿಳಿಯತಕ್ಕದ್ದು. ಅಜ್ಞನಿಗೆ ಸ್ವಶರೀರಮಾತ್ರದಲ್ಲೇ ಅಭಿಮಾನವು ಪ್ರಾಜ್ಞನಿಗೆ ಸರ್ವ ಪ್ರಪಂಚದಲ್ಲೂ ಅಭಿಮಾನವೆಂಬ ವಿಶೇಷವಿರುವದು. ಬಾಲಕನಿಗೆ ಕತ್ತಲೆ ಪಿಶಾಚವಾಗುವಂತೆ ಪ್ರಾಜ್ಞನಿಗೆ ಇಲ್ಲದ್ದರಲ್ಲಿದೆ ಎಂಬ ಭ್ರಾಂತಿಯುಂಟಾಗಲಾರದು. ಎಲೈ ರಾಮಭದ್ರನೇ! ಚಿಜ್ಜಡಗಳಲ್ಲಿ ಚಿನ್ಮಯವಾದಾಗ್ಯೂ ಕಲ್ಪನೆಯಿಂ ಜಡವು ಭಿನ್ನವಾಗಿ ಕಾಣುವದಾದ್ದರಿಂದ ಚಿಜ್ಜಡಗಳೆಂಬ ಭೇದವು ಪ್ರಸಿದ್ಧವಾದುದು. ಆದರಿಂದ ಸತ್ತಾಭೇದವಿರುವಂತೆ ತೋರುವದು, ಹೀಗೆ ತಾನು ತನ್ನದೆಂಬ ಭೇದವು ಸಿದ್ಧವಾದ ಬಳಿಕ ಪರಮಾರ್ಥವಾಗಿ ಒಂದಾದ್ದರಿಂದ ಚಿಜ್ಜಡಗಳು ಸೇರುವವು. ಅಲ್ಲಿ ಚಿಜ್ಜಡ ಧರ್ಮಗಳ ವ್ಯತ್ಯಾಸವೇ ಭ್ರಮೆಯೆನಿಸುವದು. ದೇಹವೇ ತಾನೆಂಬ ಜ್ಞಾನವುಳ್ಳ ಅವಿವೇಕಿಯು ತಾನೇ ಪ್ರಾಜ್ಞನೆಂದೆದೆಯುಂ ತಪ್ಪಿಕೊಳ್ಳುವಲ್ಲಿ ಆತ್ಮನ ಚೈತನ್ಯಕ್ಕೆ ದೇಹದೊಳ್ ಸಂಬಂಧವು ಗೊತ್ತಾಗುವದು. ತನಗೆ ತಲೆನೋವು ತಾನು ಸುಂದರನೆಂಬುವಲ್ಲಿ ದೇಹಧರ್ಮಕ್ಕೆ ಆತ್ಮನಲ್ಲಿ ಸಂಬಂಧವು ಗೊತ್ತಾಗುವದು. ದೇಹವು ಜಡವಾದ್ದರಿಂದಲೂ ಚಿತ್ತು ಜ್ಞಾನಸ್ವರೂಪವಾದ್ದರಿಂದಲೂ, ಚಿತ್ತಿಗೆ ಅಭಿಮಾನಾದಿಗಳು ಸಂಭವಿಸುವವು. ಈ ಅಭಿಮಾನವೇ ಸಂಬಂಧವೆನಿಸುವದು, ಇದು ಸಾಂಸರ್ಗಿಕವೆಂತಲೂ, ತಾದಾತ್ಮ್ಯಸಿದ್ಧವೆಂತಲೂ ಎರಡು ಪ್ರಕಾರವಾಗಿ ಹೇಳಲ್ಪಡುವದು. ಕಣ್ಣಿನಿಂದ ನಾನು ನೋಡಿದೆನೆಂಬುವಲ್ಲಿ ಸಾಂಸರ್ಗಿಕವು, ನಾನೇ ನೋಡಿದನೆಂಬುವಲ್ಲಿ, ನೇತ್ರತಾದಾತ್ಮ್ಯವೂ ಗೊತ್ತಾಗುವದು. ಜಡ ಚಿದ್ವಿಚಾರದಿಂದ ತಾದಾತ್ಮ್ಯವೂ ಸಾಂಸರ್ಗಿಕವೂ ಸಹ ತಪ್ಪುವಲ್ಲ, ಚಿತ್ತು ಸರ್ವಾತೀತವಾಗಿ ನಿಲ್ಲುವದು. ಬಳಿಕ ಸತ್ತಾವಿಚಾರದಿಂದ ಅಖಂಡಭಾವವು ಗೊತ್ತಾಗುವಲ್ಲಿ ಜಡವೆಲ್ಲವೂ ಕಲ್ಪಿತವೆಂಬ ನಿಶ್ಚಯವಾಗುವದ್ದರಿಂದ ಅದ್ವಿತೀಯವಾಗಿ ಅಪರಿಚ್ಛಿನ್ನವಾದ ಬ್ರಹ್ಮವೊಂದೇ ನಿಲ್ಲುವದು. ಸಾಂಸರ್ಗಿಕವಾದ ಅಭಿಮಾನದಿಂದಂಗನಾಕಾಮವು ವೇತಾಳ ಭೀತಿಯು ಸಹ ಮನವಲ್ಲಿರುವದ್ದರಿಂದ, ಸ್ವಪ್ನದಲ್ಲಿ ಅಂಗನಾ ಸಂಗವು ನೋಡುವರಲ್ಲಿ ಕತ್ತಲೆಯಲ್ಲಿ ಸಹ ವೇತಾಳ ಬುದ್ಧಿಯುಂಟಾಗುವದು. ಚಿಜ್ಜಡ ವಿವೇಕದಲ್ಲಿ ಚಿತ್ತು ನಿರ್ವಿಕಲ್ಪನಾದ್ದರಿಂದಲೂ, ಶರೀರವು ಕೇವಲ ಜಡವಾದ್ದರಿಂದಲೂ, ನೀರು ಮರಗಳ

ನ್ನೊಲಿವುಗಳ ಸಂಬಂಧವು ಅಸಂಗತವಾದ್ದರಿಂದ ಪುಳ್ಳೆನಿಸುವದು. ದೇಹಾಹಂಭಾವದಿಂದಾತ್ಮನು ದೇಹದ ದುಃಖಕೊಳ್ಳಗಾಗಿರುವನಾದ್ದರಿಂದ, ದೇಹಾಭಿಮಾನವಂ ಬಿಟ್ಟ ಕೂಡಲೆ ಮುಕ್ತನೆನಿಸುವನು. ಕಲ್ಲು ನೀರು ಮರಗಳಿಗೆ ಒಳಗೆ ಅಭಿಮಾನವಿಲ್ಲದ್ದರಿಂದ, ಒಂದಕ್ಕೊಂದು ಸೇರಿಕೊಂಡಿದ್ದರೂ ಪರಸ್ಪರ ಸಂಬಂಧವಿಲ್ಲದಿರುವದು. ಹೀಗೆ ದೇಹೇಂದ್ರಿಯ ಮನಸ್ಸುಗಳು ಸೇರದಿನ್ದಾಗ್ಯೂ ಅಂತರಭಿಮಾನದಿಂದಾತ್ಮನಲ್ಲಿ ಸೇರಿದ್ದು ವಿಚಾರದಿಂದಭಿಮಾನವಳಿಯಲು, ಮರಳಿ ಬೇರೆಯಾಗಿ ನಿಲ್ಲುವವು. ಅದರಿಂದ ಅಂತಸ್ಸಂಗವೇ ಸಂಸಾರವು, ಅದು ಇರುವವನು ಬದ್ಧನು ಅದಿಲ್ಲದಿರುವನು ಮುಕ್ತನೆಂದು ಹೇಳಲ್ಪಡುವದು. ಒಳಗಣ ಅಭಿಮಾನಕ್ಕೆ ವಿಷಯವಾದ ಚಿತ್ತವು ಪರಿಪರಿಯಾದ ಸಂಸಾರವಂ ಕಲ್ಪಿಸುವದು. ಅಭಿಮಾನವಳಿದ ಕೂಡಲೇ ನಷ್ಟವೆನಿಸುವದು. ಅಖಂಡ ಭಾವದಲ್ಲಿರುವ ಚಿತ್ತವು ಅಭಿನ್ನವಾದ ಸ್ಫಟಿಕ ಲಿಂಗದಂತೆ ಪೂಜ್ಯವಾಗುವದು. ಅಸಂಗವಾದ ಚಿತ್ತವು ಸಂಸಾರಿಯಾಗಿದ್ದರೂ ಮುಕ್ತವಾಗಿರುವದು. ಹರಿಗೋಲಿಗೆ ಹೊರೆಯುಂಟಪಕ್ಕೆ ಕರ್ತೃತ್ವವಿದ್ದರೂ ಗುಣದೋಷ ಪ್ರಸಕ್ತಿಯಿಲ್ಲದ್ದರಿಂದಿಲ್ಲದಂತಿರುವದು. ಸಂಗವುಳ್ಳ ಚಿತ್ತಕ್ಕೆ ಕರ್ತೃತ್ವವಿಲ್ಲದಿದ್ದರೂ ಸ್ವಪ್ನ ಸಂಭ್ರಮದಂತೆ ಸುಖದುಃಖ ಪ್ರಸಕ್ತಿಯಾಗುವದು. ಆದ್ದರಿಂದ ಕರ್ತೃತ್ವ ಭೋಕ್ತೃತ್ವಗಳಿಗೂ ಬಂಧ ಮೋಕ್ಷಗಳಿಗೂ ಕಾರಣವಾದದ್ದು ಮನವೆಂತಲೂ ಅದಕ್ಕೆ ಸಂಗವೆಂತಲೂ ನಿಶ್ಚಿತವಾಗಿರುವದ್ದರಿಂದ ಬುದ್ಧಿಶಾಲಿಯಾದವನು ವಿಚಾರಬಲದಿಂ ಸಂಗವಂ ತ್ಯಜಿಸಬೇಕು. ಸಂಗವಿಲ್ಲದ ಮನವು ನಿರ್ಮಲವಾದ ಜಲವು ಜಲದಲ್ಲಿ ಸೇರುವಂತೆ ಆತ್ಮನಲ್ಲಿ ಐಕ್ಯವಂ ಪಡೆವುದು, ಎಂದು ವಶಿಷ್ಠನು ಹೇಳುತ್ತಿದ್ದನೆಂಬಲ್ಲಿಗೆ;—ಜ್ಞಾನಯೋಗ ತರಂಗಿಣಿಯಲ್ಲಿ, ಉಪಶಮಪ್ರಕರಣದೊಳ್ ಭಾವವಿಲಾಸ ಸಂವಾದ ನಿರೂಪಣನೆಂಬ ತ್ರಯೋದಶ ತರಂಗಕ್ಕೆ ಮಂಗಳಮಸ್ತು ಶ್ರೀಃ ಶ್ರೀಃ ಶ್ರೀಃ.

---

ಸಂಗ ಸಂಸಾರನಿವೃತ್ತಿ ನಿರೂಪಣವೆಂಬ

ಚತುರ್ದಶ ತರಂಗ ಪ್ರಾರಂಭವು.

ಒಳಿಕ ಶ್ರೀರಾಮಚಂದ್ರನು ಎಲೈ ಪರಮಗುರುವೇ ಸಂಗವೆಂಥಾದ್ದು ? ಇದು ಬಂಧಮೋಕ್ಷಗಳಿಗೆ ಕಾರಣವಾಗುವದು ಹೇಗೆ? ಹೇಗೆ ಸಂಗವು ಪೋಗುವುದು ? ಇದರ ವಿವರವಂ ನಿರೂಪಿಸಬೇಕೆಂದು ಕೇಳುವಲ್ಲಿ ವಸಿಷ್ಠನಿಂತೆಂದನು,-

ಎಲೈ ಶುಭಮತಿಯೆ! ಅಖಂಡವಾದ ಸ್ವರೂಪದಲ್ಲಿ ಇದು ಜಡಾಂಶವೆಂಬ ಕಲ್ಪ
ನೆಯೇ ಸಂಗಬೀಜವು, ಇದು ನನ್ನದೆಂಬುವದು ಅದರ ಮೊಳಕೆಯು, ಇದು ನನಗೆ
ಸುಖಕರವಾದ್ದೆಂಬುವದೇ ವೃದ್ಧಿಯು. ಇದು ನಾನೆಂದು ಗ್ರಹಿಸುವದೇ ಫಲಪ್ರಾಪ್ತಿ
ಯು, ಹೀಗೆ ವೃದ್ಧಿಯಂ ಪಡೆದ ದ್ವಿತೀಯಪದಾರ್ಥದ ವಿಶ್ವಾಸವೇ ಸಂಗವೆನಿಸು
ವದು. ಇದೇ ಅಭಿಮಾನವೆಂತಲೂ ಹೇಳಲ್ಪಡುವದು. ಚಿಜ್ಜಡವಿಭಾಗದಲ್ಲಿ ದೇಹೇಂ
ದ್ರಿಯಾಂತಃಕರಣಗಳೇ ಸಂಗವೆಲ್ಲೆಲ್ಲಿ ನಿಲ್ಲುವದೋ ಅದರದರ ಗುಣ ದೋಷಗಳು
ಆತ್ಮನಲ್ಲಿ ಸಂಭವಿಸುವವು. ಈ ದೋಷಗುಣ ಸಂಬಂಧವೇ ಬಂಧವು ಸ್ವರೂಪ
ವಿಚಾರದಿಂದಿದು ಪೋಗುವದೇ ಮೋಕ್ಷವು. ಇದೆಲ್ಲವೂ ಆತ್ಮನಾಗುವಲ್ಲಿ ಬಿಡತ
ಕ್ಕದ್ದು ಯಾವದು ಪಿಡಿಯುತಕ್ಕದ್ದು ಯಾವದೆಂದು ಭಾವಿಸುವದೇ ಅಸಂಗಸ್ಥಿ
ತಿಯು. ಅನಂತವಾದ ಬ್ರಹ್ಮ ಮಹಿಮೆಯಲ್ಲಿ ನಾನು ನನ್ನದು ಮತ್ತೊಬ್ಬನದೆನ್ನು
ವದಕ್ಕೆ ಅವಕಾಶವೇನಿರುವದು. ಆದದ್ದಾಗಲಿ, ಹೋದದ್ದು ಹೋಗಲಿ, ಆಗುವದು
ಪೋಗುವದೆಲ್ಲವೂ ಬ್ರಹ್ಮವಲ್ಲದೆ ಮತ್ತೊಂದಲ್ಲವೆಂಬ ಪರಮಾರ್ಥ ಜ್ಞಾನವುಳ್ಳ
ವನು ಮುಕ್ತನೆನಿಸುವನು. ಇವನೇ ಅಸಂಗನೆಂತಲೂ ಹೇಳಲ್ಪಡುವನು. ಇವನು
ಅದ್ವಿತೀಯ ಭಾವದಿಂ ಪೂರ್ಣನಾಗಿದ್ದಾಗ್ಯೂ ಲೋಕಾಚಾರಾನುಸಾರವಾಗಿ ಕರ್ಮ
ಗಳಂ ಮಾಡುವನು. ಮನಃಪೂರ್ವಕನಾಗಿ ಫಲಾಪೇಕ್ಷೆಯೂ ಕರ್ತೃತ್ವ ಜ್ಞಾನವೂ
ಇಲ್ಲದ್ದರಿಂದ ಅವನು ಮಾಡಿದ ಪರಾರ್ಥವಾದ ಪಿತ್ರಾದಿ ಕರ್ಮಗಳು ಬೀದಿಯಲ್ಲಿ
ಬಿಸುಟ ಧನದಂತೆ ಪರಾರ್ಥವಾಗಿಯೇ ಫಲಿಸುವವು. ಸ್ವಾರ್ಥವಾದ ಯಜ್ಞಾದಿ
ಕರ್ಮಗಳು ಹುರಿದ ಬೀಜದಂತೆ ಅವನಿಗೆ ಫಲಪ್ರದವಾಗವು. ಪೂರ್ವ ಕರ್ಮದಿಂ
ದುಂಟಾದ ಹರ್ಷಶೋಕಗಳಲ್ಲಿ ಅವನಿಗೆ ಬ್ರಹ್ಮವೆಂಬ ಜ್ಞಾನವೇ ಇರುವದ್ದರಿಂದ
ಯಾವದರಿಂದಲೂ ಅವನು ಬೆರಗಾಗನು. ಈ ಅಸಂಗಯೋಗದ ಮಹಿಮೆಯಿಂದ
ಇದಕ್ಕಾಗಿ ಇವನು ಮಾಡಿದ ಶ್ರವಣಾದಿ ಕರ್ಮಗಳು ಇವನಲ್ಲಿ ಫಲಿಸಿದ್ದಲ್ಲದೆ ಇವನ
ಭಕ್ತರಿಗೂ ಫಲಪ್ರದವಾಗುವವು. ಇವನ ಇತರ ಕರ್ಮಗಳು ನಿಂದಾಸ್ತುತಿ ಕರ್ತೃ
ಗಳಾದ ಜನರಲ್ಲಿ ಫಲಿಸುವವು. ಪ್ರಾರಬ್ಧೇತರವಾದ ಇವನ ಪೂರ್ವಕರ್ಮಗಳಲ್ಲಿ
ಫಲಿಸುವದಕ್ಕೆ ಶಕ್ತವಾದ್ದು ಮತ್ತೊಂದೆಡೆಯಲ್ಲ ಫಲಿಸುವದು. ಅಂಕುರಾದ್ಯವ
ಸ್ಥೆಗಳಲ್ಲಿರುವಂಥಾದ್ದು ದಗ್ಧವಾಗುವದು. ಹೀಗೆ ಸಮಸ್ತ ಕರ್ಮಗಳಿಗೂ ಬೇರೆ
ಬೇರೆ ದಾರಿಯಾಗಿ ಶೇಷವಿಲ್ಲದ್ದರಿಂದ ಅವನಿಗೆ ಪುನರ್ಜನ್ಮ ವಾಗಲಾರದು. ಇವನ
ವಂಶದಲ್ಲಿ ಪುಟ್ಟುವರೆಲ್ಲರೂ ಬ್ರಹ್ಮಜ್ಞಾನಿಗಳಾಗುವರು. ಇವನ ಶಿಷ್ಯಗಳು ಇವನು
ಕೊಟ್ಟ ಅನ್ನದ ಪ್ರಭಾವದಿಂದಿದ್ದ ಸ್ಥಳದಲ್ಲಿಯೇ ಸುಬುದ್ಧಿಗಳಾಗಿ ಸತ್ಸಂಗದಿಂ

ಜ್ಞಾನಮಾರ್ಗ ಪ್ರವಿಷ್ಟರಾಗುವರು. ಪಶುಗಳು ಭಾರವಂ ಹೊರುವವು. ಸ್ಥಿರ ಪ್ರಾಣಿಗಳು ಮಂಜು ಗಾಳಿ ಬಿಸಲುಗಳಿಂ ಸಹಿಸಿಕೊಂಡಿರುವವು. ಹುಳುಗಳು ಭೂಮಿಗಳಲ್ಲಿ ದುಃಖಪಡುವದು. ಹೊರಟರೆ ಪೆಟ್ಟು ಬಿದ್ದೀತೆಂದು ಭಯದಿಂ ಹಸುವನ್ನೂ ತತದುಕೊಂಡು ವೃಕ್ಷಾಗ್ರಗಳಲ್ಲಿ ಪಕ್ಷಿಗಳು ಸೇರಿಕೊಂಡಿರುವವು. ಕಿರಾತರಿಂ ಮೃಗಗಳು ವ್ಯಥೆಪಡುವವು. ಬಾರಿಬಾರಿಗೂ ಕ್ರಿಮಿಕೀಟಾದಿ ಜನ್ಮಗಳನ್ನೀ ಹೊಂದುವದು. ವಿಚ್ಛಿತ್ತಿಯಿಲ್ಲದೆ ನದಿಯಲ್ಲಿ ಅಲೆಯಂತೆ ಸಂಸಾರದಲ್ಲಲೆಯುವದು. ಮರಳಿ ಮರಳಿ ಜನನ ಮರಣಗಳಂ ಪಡೆಯುವದು. ಹುಲ್ಲುಬಳ್ಳಿ ಮೊದಲಾದ ಸ್ಥಿರಪ್ರಾಣಿ ಜನ್ಮಗಳನ್ನೈದುವದು. ಇನ್ನೂ ನಾನಾಪ್ರಕಾರವಾಗಿ ಕಷ್ಟಪಡುವುದೆಲ್ಲವೂ ಅಜ್ಞಾನಮೂಲವಾದ ಸಂಗವಿಶೇಷದಿಂ ಮಾಡಿದ ಕರ್ಮಗಳ ಫಲವೆಂದು ತಿಳಿಯತಕ್ಕದ್ದು. ಸಂಗವು ಸುಫಲವೆಂತಲೂ ನಿಷ್ಫಲವೆಂತಲೂ ಎರಡು ಪ್ರಕಾರವಾಗಿ ಹೇಳಲ್ಪಡುವದು. ತತ್ವಜ್ಞಾನದಿಂ ಜನ್ಮಾಂತರವಿಲ್ಲದಿರುವದು ಸುಫಲವು. ಜನ್ಮಾಂತರಗಳುಳ್ಳದ್ದು ನಿಷ್ಫಲವು ಸಫಲ ಸಂಗದ ಮಹಿಮೆಯಿಂದ ನಾರಾಯಣನು ಶಂಖಚಕ್ರ ಹಸ್ತನಾಗಿ ಜಗವಂ ರಕ್ಷಿಸುವನು. ಸೂರ್ಯನು ನಿರಾಲಂಬಮಾರ್ಗದಲ್ಲಿ ಸಂಚರಿಸುತ್ತಾ ಗ್ರಹಾಧಿಪತಿಯಾಗಿರುವನು. ಪ್ರಳಯಕಾಲದಲ್ಲಿ ನಷ್ಟವಾದ ಜಗವೆಲ್ಲವಂ ಮರಳಿ ಬ್ರಹ್ಮನು ಸೃಜಿಸುವನು. ಅರ್ಧಾಂಗದಲ್ಲಿ ಸ್ತ್ರೀರೂಪನಾದ ಶಂಕರನು ನಿತ್ಯ ಸಮಾಧಿನಿಷ್ಠನಾಗಿ ಲೋಕಗಳನ್ನನುಗ್ರಹಿಸುವನು. ಇನ್ನು ಅನೇಕಜನ ಸಿದ್ಧರು ಮಹಾಯೋಗಿಗಳು ಸಹ ಲೋಕಾನುಗ್ರಹವೇ ಮುಖ್ಯವಾಗಿ ಸಂಚರಿಸುವರು. ನಿಷ್ಫಲಸಂಗದ ಮಹಿಮೆಯಿಂದ ಮಾಂಸಗಳಲ್ಲಿ ಹದ್ದು ನಂತೆ ಮನವು ಭೋಗದಲ್ಲಿ ಬೀಳುವದು. ಈ ಪರಿಯಿಂ ಲೋಕದಲ್ಲಿ ಜನ್ಮಾಂತರ ಸಾಧಕವಾದ ಕರ್ಮಗಳೆಲ್ಲವೂ ನಿಷ್ಫಲಸಂಗದ ಪ್ರಭಾವದಿಂದಲೆ ನಡೆಯುತ್ತಿರುವವು. ಕೆಲವರು ಅಂತರಂಗದಲ್ಲಿ ಸುಫಲ ಸಂಗವುಳ್ಳವರಾದಾಗ್ಯೂ ಬಾಹ್ಯದಲ್ಲಿ ನಿಷ್ಫಲ ಸಂಗದಂತಿರುವರು. ಅವರಿಗೆ ಇದು ವೇಷದಂತೆ ಆರೋಪಿತವಾದ್ದರಿಂ ಫಲಕಾರಿಯಾಗದು. ಕೆಲವರಿಗೆ ವಾಸನಾವೇಶದಿಂ ನಿಷ್ಫಲಸಂಗವು ಸ್ವಾಭಾವಿಕವಾಗಿಯೇ ಇರುವದು. ಅವರು ಸಂಸಾರ ವೃಕ್ಷದಲ್ಲಿ ಕಪಿಯಂತೆ ಕುಣಿಯುತ್ತಾ ನಾನಾವಿಧ ಗತಿಗಳೆಂಬ ಕೊಂಬೆಗಳಿಂದ ಕೊಂಬೆಗಳನ್ನಾಶ್ರಯಿಸುತ್ತಿರುವರು. ಅದೆಂತೆಂದರೆ,- ಮಹಾತ್ಮನಾದ ವಾಯುವು ಪ್ರಪಂಚದೊಳ್ ಸಂಗತಿಯೆನಿಸಿಕೊಂಡಿರುವನು. ಚಂದ್ರನು ಕ್ಷಯರೋಗಕಳಂಕಯುಕ್ತನಾದ ಶರೀರವಂ ಪಡೆದಿರುವನು. ಪಂಚಭೂತಗಳು ಸ್ಥೈರ್ಯದಿಂ ಜಗವಂ ವಹಿಸಿಕೊಂಡಿರುವವು.

ದೇವ ಮನುಜ ಭುಜಗಾಸುರರು ಬ್ರಹ್ಮಾಂಡವೆಂಬ ಹತ್ತೀಹಣ್ಣಿನೊಳಿನ ಹುಳುಗಳಂತೆ ಆಡುತ್ತಿರುವರು. ಸಮುದ್ರದಲೆಗಳಂತಿವರ ಜನ್ಮಗಳು ಎಣಿಸಲಶಕ್ಯವಾಗುವವು. ಇವರು ಸ್ವಪರವಿವೇಕವಿಲ್ಲದೆ ಕಾಮಕ್ರೋಧಾದಿ ವ್ಯಾಪಾರಗಳಂ ಮನಬಂದಂತೆ ಮಾಡುತ್ತಿರುವರು. ಇವರಿಗೆ ಜೀರ್ಣ ಪರ್ಣದಂತೆ ಹಾರಾಡುತ್ತಿರುವದೇ ಸ್ವಾಭಾವಿಕವಾಗಿರುವದು. ಈ ಪರಿಯಿಂ ಲೋಕವಲ್ಲಿ ನಡೆವ ವ್ಯಾಪಾರಗಳೆಲ್ಲವೂ ಸಂಗಪ್ರಭಾವವೆಂದು ತಿಳಿಯತಕ್ಕದ್ದು. ಸಂಗವೆಂಬ ರಂಗಿಂದಲೆ ಒಬ್ಬಾನೊಬ್ಬ ಶೂನ್ಯಪ್ರಾಯವಾದ ಪರಮಾಕಾಶದೊಳ್ ಜಗತ್ತೆಂಬ ಚಿತ್ರವಂ ಬರೆದಿರುವನು. ಅಲ್ಲಿ ಸ್ಥಿರಚರ ಪ್ರಾಣಿಗಳು ಮೇಲಿಂದ ಬೀಳುತ್ತಲೂ, ಕೆಳಗಿನಿಂದ ಹಾರುತ್ತಲೂ, ಮಧ್ಯದಲ್ಲಿ ಕುಣಿಯುತ್ತಲೂ, ವಿಪರೀತ ಜನ್ಮಗಳಂ ಪಡೆಯುತ್ತಲೂ, ಆಡುತ್ತಿರುವಲ್ಲಿ ಯಾವುದಂ ಸತ್ಯವೆಂದು ಗ್ರಹಿಸಬೇಕು. ಮೇರುವೆಂಬ ಗಿರಿರಾಜನಿಗೆ ಆಪಾದಮಸ್ತಕವಾಗಿ ಮುಕ್ತಾಮಾಲೆಯಂತಿರುವ ಗಂಗೆಯಲ್ಲಿ ತರಂಗಗಳನ್ನಾದರೂ ಎಣಿಸಬಹುದು. ಸಂಗದೋಷವುಳ್ಳವರ ದೇಹಗಳನ್ನೆಣಿಸುವದಕ್ಕೆ ಯಾರೂ ಸಮರ್ಥರಾಗಲಾರರು. ಸಂಗವುಳ್ಳ ಜನಗಳಿಗೆ ನರಕಗಳೆ ಅಂತಃಪುರಗಳು. ಅಲ್ಲಿರುವ ಅಗ್ನಿಜ್ವಾಲೆಗಳು ಇವರ ಶರೀರಗಳಿಲ್ಲದಿರೆ ಎಂದಿಗೂ ಉರಿಯುಲಾರವು. ಲೋಕಗಳಲ್ಲಿರುವ ದುಃಖಗಳೆಲ್ಲವೂ ಸಂಗವುಳ್ಳವರಿಗೋಸುಗವೇ ಪುಟ್ಟಿರುವವು. ಭೋಗಸಂಗಕ್ಕೆ ತ್ಯಾಗವಾದೊಡನೆಯೆ ವಿವೇಕ ಮೊದಲಾದ ಅಸಂಗದ ವೈಭವಗಳು ಪ್ರಕಾಶಿಸುವವು. ಆದ್ದರಿಂದೊಳಗೆ ಸಂಗವನ್ನಂಗೀಕರಿಸುವದೆ ವಿಷಾಶನವೆಂತಲೂ ಅದಂ ಬಿಡುವದೆ ಅಮೃತಪಾನವೆಂತಲೂ ತಿಳಿಯುವನಾಗು. ನಿಶ್ಚಯವಾಗಿ ಸಂಗವಂ ಬಿಡದೆ ಮುಕ್ತಿಯಾಗಲಾರದಾದ್ದರಿಂದ ವಿವೇಕಿಗಳು ಭೂತಭವಿಷ್ಯದ್ವರ್ತಮಾನ ವೃತ್ತಾಂತಗಳಲ್ಲೂ, ಆ ವಸ್ತುಗಳಲ್ಲೂ, ಆಕಾಶದಲ್ಲೂ, ಮೇಲೂ, ಕೆಳಗೂ, ಹಿಂದೂ, ಮುಂದೂ, ದಿಕ್ಕುಗಳಲ್ಲೂ, ಒಳಗೂ, ಹೊರಗೂ, ಇಂದ್ರಿಯಗಳಲ್ಲೂ, ಆ ವ್ಯಾಪಾರಗಳಲ್ಲೂ, ಆ ವಿಷಯಗಳಲ್ಲೂ, ಆ ಸಂತೋಷಗಳಲ್ಲೂ, ಪ್ರಾಣಗಳಲ್ಲೂ, ಮೂಲಾಧಾರಾದಿ ಬ್ರಹ್ಮರಂಧ್ರಾಂತವಾದ ಲಕ್ಷ್ಯಸ್ಥಾನಗಳಲ್ಲೂ, ಕತ್ತಲೆಯಲ್ಲೂ, ಬೆಳಕಿನಲ್ಲೂ, ಅವುಗಳ ಸಂಧಿಯಲ್ಲೂ, ಹೃದಯಾಕಾಶದಲ್ಲೂ, ಜಾಗ್ರತ್ಸ್ವಪ್ನ ಸುಷುಪ್ತಿ ವೃತ್ತಿಗಳಲ್ಲೂ, ಬಿಳುಪು ಕೆಂಪು ಮೊದಲಾದ ಬಣ್ಣಗಳಲ್ಲೂ, ಸ್ಥಿರಚರ ಪದಾರ್ಥಗಳಲ್ಲೂ, ಆದಿಮಧ್ಯಾಂತ ಕಾಲಗಳಲ್ಲೂ, ದೂರ ಸಮೀಪಗಳಲ್ಲೂ, ಆನಂದ ಮೋಹಾದಿ ವೃತ್ತಿಗಳಲ್ಲೂ, ಪ್ರಾಣಾಪಾನಾದಿ ಗತಿಗಳಲ್ಲೂ, ಆಯಾಯ ಸಿದ್ಧಿಗಳಲ್ಲೂ, ಕಾಲಸಂಬಂಧಿಗಳಾದ ಅಪಾ

ಯ ಕಲ್ಪನೆಗಳಲ್ಲೂ, ಆಯಾಯ ಭಾವನೆಗಳಲ್ಲೂ, ವಾಸನೆಗಳಲ್ಲೂ, ಮನೋರಥ ವಿಕಲ್ಪ ಸಂಕಲ್ಪಗಳಲ್ಲೂ, ಯಾವದರಲ್ಲೂ ಮನವನ್ನಿಡದೆ ಸರ್ವಸಾಕ್ಷಿ ಭಾವವಂ ಸಾಧಿಸುವರು ಅದೆಂತೆನೆ;—ಚಂಚಲವಾದ ಮನವು ಹೊರಗೆ ಒಳಗೆ ಎಲ್ಲೆಲ್ಲಿದ್ದರೂ ಆನಂದವು ತೋರುವದೋ ಅವರಲ್ಲವರು ದೃಷ್ಟಿಯನ್ನಿಡದೆ ಇದರ ತೋರಿಕೆ ಯೆಲ್ಲಿಂದುಂಟಾಯಿತೆಂದಾಲೋಚಿಸುತ್ತಾ ನಿರ್ವಿಕಲ್ಪ ಚಿನ್ಮಾತ್ರಸ್ವರೂಪನಾದ ಆತ್ಮ ನಿಗೆ ಬುದ್ಧಿವೃತ್ತಿರೂಪವಾದೀ ತೋರಿಕೆಯೇ ಅಸಂಗತವೆಂದು ಆ ತೋರಿಕೆಯಂ ತಿರಸ್ಕರಿಸುವರು. ಆಗ ಆನಂದ ವಿಶೇಷವು ತಲೆದೋರುವಲ್ಲಿ ನಿರ್ಗುಣನಾದ ನನಗೀ ಸಾಕ್ಷಾತ್ಕಾರಾನಂದ ಸಂಬಂಧವು ಹೇಗೆಂದು ಅದಕ್ಕೊಳಗಾಗದಿರುವರು. ಅದೇ ಸರ್ವಸಾಕ್ಷಿಯಾದ ಸ್ವರೂಪಸ್ಥಿತಿ ಎನಿಸುವದು. ಆ ಸ್ಥಿತಿಯಲ್ಲಿರುವನು ಕರ್ಮಗಳಂ ಮಾಡದಿದ್ದರೂ ಸರ್ವಕರ್ಮಜ್ಞಾನ ಫಲರೂಪವಾದ ಬ್ರಹ್ಮವಂ ಪಡೆದಿರುವನಾದ್ದ ರಿಂದ ಮಹಾ ಕರ್ಮಠನೆಂತಲೂ, ಮಹಾಜ್ಞಾನಿಯೆಂತಲೂ ಹೇಳಲ್ಪಡುವನು. ಇವ ನೊಂದುವೇಳೆ ಕರ್ಮಗಳಂ ಮಾಡಿದರೂ ಈ ಕರ್ಮಗಳು ಅಂತಃಕರಣಾದಿ ವ್ಯಾಪಾರ ಗಳಿಂದು ತಿಳಿಯುವನಾದ್ದರಿಂದ, ಆ ಕರ್ಮಫಲಗಳು ಆಕಾಶದಲ್ಲಿ ಮೇಘಗಳಂತೆ ಅವನಲ್ಲಿ ಸಂಬಂಧಿಸಲಾರವು. ಇದೇ ಅಸಂಗಯೋಗವೆನಿಸುವದು, ಇನ್ನು ಕೆಲವು ಮಹಾತ್ಮರು ಅದ್ವಿತೀಯನಾದ ವಸ್ತುವಿಗೆ ದ್ವಿತೀಯ ಸಾಪೇಕ್ಷವಾದ ಸಾಕ್ಷಿಭಾವ ವೆಲ್ಲಿಯದೆಂದು ಚಿಂತಿಸುತ್ತಾ, ಆ ಆನಂದವು, ಆ ತೋರಿಕೆಯು, ಆ ತೋರಿದ ಪದಾರ್ಥವು, ಆ ತೋರಿಕೆಗೆ ಅವಲಂಬನವಾದ ಬುದ್ಧಿಯು, ಅದಕ್ಕೆ ಕಾರಣವಾದ ಜ್ಞಾನಶಕ್ತಿಯೂ ಕೂಡ ಚಿನ್ಮಾತ್ರನೆಂದು ಪರಮಾರ್ಥದ ಪರಿಭಾವನೆಯಂ ಮಾ ಡುತ್ತಾ ತಾನೆಂಬ ಭಾವವನ್ನೇ ಬಿಡುವರು. ಅವರಿಗೆ ಎರಡನೆ ಪದಾರ್ಥವೇ ಇಲ್ಲ ದ್ದರಿಂದ ಸಂಗವೆಂಬುವದು ಶಶಶೃಂಗ ಸಮಾನವಾಗುವದು. ಅವರು ಯಾವ ರ್ಮಗಳಂ ಮಾಡಿದರೂ ಆ ಕರ್ಮಫಲಗಳು ಆಕಾಶಕ್ಕೆ ಹೋದ ಧೂಳಿಗಳಂತೆ ಎಲ್ಲಿಯೋ ಅಡಗಿಪೋಗುವವು. ಇವರು ನೋಡುವರಿಗೂ ಕೂಡ ದುಃಖಪ್ರದವಾದ ಕರ್ಮಗಳಂ ಮಾಡುತ್ತಿದ್ದರೂ ಸಹಜಾನಂದದಲ್ಲಿರುವರಾದ್ದರಿಂದ, ಅವರ ಮುಖವು ಚಂದ್ರ ಬಿಂಬದಂತೆ ಪ್ರಸನ್ನವಾಗಿ ಪ್ರಕಾಶಿಸುತ್ತಿರುವದು. ಯಾವನ ಮನವು ಅಖಂಡ ಚಿನ್ಮಾತ್ರದಲ್ಲಿ ನಿಂದು ಬಾಹ್ಯ ಸಂತಾಪವೇನೂ ಇರುವದಿಲ್ಲವಾದ್ದರಿಂದ ಶಾಂತವಾಗಿ ರುವದೋ ಅವನ ದರ್ಶನಮಾತ್ರದಿಂದಲೇ ಸರ್ವರಿಗೂ ಸಂತೋಷವಾಗುವದು. ಅವನ ಸೇವೆಯಿಂದಾ ಬುದ್ಧಿಗಳಾಗಿ ಸರ್ವರೂ ಕೃತಾರ್ಥರಾಗುವರು. ಅಖಂ ಡದೃಷ್ಟಿಯಿಂದಾತ್ಮನಲ್ಲೇ ಲೀನವಾದ ಮನವುಳ್ಳ ಪ್ರಾಜ್ಞನಂ ಪ್ರಾರಬ್ಧಾಂತವಿದ್ದಲ್ಲಿ

ಬಹಿರ್ಮುಖಚಿತ್ತನಾಗಿ ಪಾಮರನಂತೆ ಕಾಮ ಕ್ರೋಧಾನುಗುಣವಾದ ಸಕಲ ಕಾರ್ಯಗಳನ್ನೂ ಮಾಡುವನು. ಸತ್ಯಜ್ಞಾನಾನಂತ ಸ್ವರೂಪನಾದ ಪರಮಾತ್ಮನ ವಿಭೂತಿಯಾದ ಸ್ಥಿತಿಪ್ರಕಾಶ ಪ್ರೀತಿ ವಿಷಾದಗಳ ಸ್ಫೂರ್ತಿಯಿಂದ ದೃಶ್ಯವೆಲ್ಲವನ್ನೂ ಪರಮಾತ್ಮನೆಂತಲೇ ಅವನ ಮನವು ತಿಳಿದವನಾದ್ದರಿಂದ ಅವನಿಗೆ ಆತ್ಮಾರಾಮತ್ವವು ತಪ್ಪದಿರುವದು. ಅಹಂಕಾರವಿಲ್ಲದ್ದರಿಂದವನಿಗೆ ಆ ಕರ್ಮ ಲೇಪವಾಗದಿರುವದು. ಶತ್ರುಮಿತ್ರಾದಿ ರೂಪಗಳಿಂದ ಪರಮಾತ್ಮನೇ ಪರಿಪರಿಯಾಗಿ ವಿಹರಿಸುತ್ತಿರುವನೆಂಬ ನಿಶ್ಚಯದಿಂದವನು ಮೇರು ಸಮಾನ ಧೈರ್ಯನೆನಿಸುವನು. ಬಹಿರ್ಭಾವಾರಂಭವಲ್ಲಿ ಅವನಿಂದ ಪ್ರೇರಿತವಾದ ಶರೀರವು ಬಿಡಲ್ಪಟ್ಟ ಬಾಣದಂತೆ ತಡೆಯಿಲ್ಲದೆ ನಡೆಯುತ್ತಿಹದು, ಅದರಿಂದವನು ಚಲಿಸುವನೆಂದು ಇತರರು ತಿಳಿಯುವರು. ಅಂತರಂಗದಲ್ಲವನಿಗೆ ಚಲನವಿಲ್ಲದ್ದರಿಂದಲೂ, ಬಾಹ್ಯಾಂಗ ಚಲನ ಕಾಣುವದ್ದರಿಂದಲೂ, ಕೇವಲ ಬಾಹ್ಯ ವ್ಯಾಪಾರದ ಫಲದಿಂದವನಿಗೆ ಸಂಬಂಧವಿಲ್ಲದ್ದರಿಂದಲೂ, ಪ್ರತಿಬಿಂಬಾದಿತ್ಯನಂತವನು ಚಲಿಸುವನೆಂದು ತಿಳಿಯತಕ್ಕದ್ದು. ಬಾಹ್ಯ ವ್ಯಾಪಾರದಲ್ಲವನು ಸ್ಫಟಿಕವು ಸಮೀಪಿಸಿದ ಪದಾರ್ಥಗಳ ರಂಗಂ ಪಿಡಿಯುವಂತೆ ಸಹವಾಸಿಜನಾನುಸಾರವಾಗಿ ನಡೆವನಲ್ಲದೆ ಅದರಲ್ಲನುರಕ್ತನಾಗನು. ಈ ಸಂಸಾರ ದೃಷ್ಟಿಯು ಕಮಲದಳವಂ ಜಲದಂತೆ ಅವನಂ ವ್ಯಾಪಿಸಲಾರದು. ಜ್ಞಾನಮಾರ್ಗದಲ್ಲಿರುವ ಸಾಧಕನಿಗೆ ವಿಚಾರದಿಂದಾತ್ಮನಲ್ಲಿ ಹೇಗೆ ಹೇಗೆ ಆಸಕ್ತಿಯುಂಟಾಗುವದೋ ಹಾಗೆ ಹಾಗೆ ಸಂಸಾರಾಸಕ್ತಿ ತಪ್ಪುವದು. ಯಾವಾಗ ಪರಮಾತ್ಮನೇ ತಾನೆಂಬ ನಿಶ್ಚಯವಾಗುವದೋ ಆಗ ನಿಸ್ಸಂಗನೆನಿಸುವನು. ಸಂಗರೋಗಕ್ಕೆ ಆತ್ಮಜ್ಞಾನವೇ ಔಷಧವಲ್ಲದೆ ಮತ್ತೊಂದಲ್ಲ. ಜಾಗ್ರತದಲ್ಲಿಯೇ ಸುಷುಪ್ತಿಯುಂ ಸಾಧಿಸುವ ಬುದ್ಧಿಶಾಲಿಗೆ ಸ್ವರೂಪಸ್ಥಿತಿಯು ಗೊತ್ತಾಗುವದು. ಅದನ್ನೇ ಹಿಡಿದು ಸಾಧಿಸುವವನಿಗೆ ಪ್ರಿಯಾಪ್ರಿಯ ಸುಖದುಃಖಾದಿ ದ್ವಂದ್ವಬುದ್ಧಿ ತಪ್ಪುವದು. ಮತ್ತಾ ಅಸ್ತೋದಯಗಳಿಲ್ಲದ ಚಿದಾದಿತ್ಯನು ಪ್ರಕಾಶಿಸುವನು. ಆ ದೃಷ್ಟಿಯು ಪ್ರೌಢವಾಗಲು ಆ ಸಾಧಕನೇ ಪರಮಪಾವನವಾದ ತುರೀಯ ಸ್ಥಿತಿಯಲ್ಲಿ ನಿಂದು ಅಮಾವಾಸ್ಯೆಯಲ್ಲಿ ಸೂರ್ಯನಂತೆಯೂ, ಹುಣಮೆಯಲ್ಲಿ ಚಂದ್ರನಂತೆಯೂ, ಅಖಂಡವಾಗಿ ಪ್ರಕಾಶಿಸುವನು. ವಿವೇಕ ವೈರಾಗ್ಯ ವಿಚಾರಗಳಿಂದಂತರ್ಮುಖವಾದ ಮನವು ಪ್ರಪಂಚ ಕಲ್ಪನೆಯುಂ ಬಿಟ್ಟು ನಿರ್ವಿಕಲ್ಪವಾದ ಚಿನ್ಮಾತ್ರಸ್ವರೂಪದಲ್ಲಿ ಲಯಿಸಿರುವದೇ ಜಾಗ್ರತ್ತಿನಲ್ಲ ಸುಷುಪ್ತಿಯೆನಿಸುವದು. ಈ ಅವಸ್ಥೆಯ ರಸವನ್ನನುಭವಿಸುವ ಪ್ರಾಜ್ಞನಿಗೆ ಜಗವೆಲ್ಲವು ಚಿನ್ಮಾತ್ರವಾಗಿ ಕಾಣಬರುವದು. ಅಹಂಕಾರ

ಮಮಕಾರಗಳಿಲ್ಲದ್ದರಿಂದಿದು ಸುಷುಪ್ತಿಯೆನಿಸುವದು. ಈ ಅವಸ್ಥೆಯೊಳ್ ಸಿದ್ಧನಾದವನಿಗೆ ನಾಮ ರೂಪಗಳೂ ಕೂಡ ಬ್ರಹ್ಮಸ್ವರೂಪವಾಗುವದ್ದರಿಂದ ಪ್ರಾರಬ್ಧಕ್ಕೆ ಸೋಚಿತವಾದ ಇಚ್ಛೆಯಂ ಪಿಡಿದು ಪರಿಪರಿಯಾದ ಕಾರ್ಯಗಳನ್ನವನು ಪಾಮರನಂತೆ ಮಾಡುತ್ತಿದ್ದಾಗ್ಯೂ ಆತ್ಮಾರಾಮನೆನಿಸುವನು, ಈಶ್ವರಾಜ್ಞೆಯಿಂದ ನಡೆಯುವ ಆ ಪ್ರಾಜ್ಞನು ಬೊಂಬೆಯಂತೆ ಸುಖದುಃಖಗಳಂ ಹೊಂದಲಾರನು. ಅವನು ಪಿಡಿದ ಅಹಂಭಾವವೂ ಕೂಡ ಬ್ರಹ್ಮಸ್ವರೂಪವಾಗುವದ್ದರಿಂದ ಪಾಮರಾಹಂಭಾವನಂತೆ ಬಂಧಕವಾಗಲಾರದು. ದೇಹಧಾರಿಯಂತವನು ಅಹಂಭಾವಾದಿಗಳನ್ನಂಗೀಕರಿಸಿ ಸಕಲ ಕಾರ್ಯಗಳಂ ಮಾಡುತ್ತಿರುವನು. ತುರೀಯ ಸ್ಥಿತಿಯೆನಿಸುವ ಈ ಜಾಗ್ರತ್ಸುಷುಪ್ತಿಯುಂ ಪಿಡಿದ ನೀನು ಕರ್ಮಗಳಂ ಮಾಡಿದರೂ ಅವುಗಳ ಫಲವಿಲ್ಲದ್ದರಿಂದ ಅಕರ್ತೃವೆನಿಸುತ್ತೀಯೆ ? ಕರ್ಮಗಳಂ ಮಾಡದಿದ್ದರೂ ಮುಖ್ಯ ಫಲವಂ ಪಡದಿರುವನಾದ್ದರಿಂದ ಸರ್ವಕರ್ಮ ಕರ್ತೃವೆನಿಸುತ್ತೀಯೆ ? ಇದರಲ್ಲಿ ನಿನ್ನ ಇಚ್ಛೆಯಿದ್ದಂತೆ ನಡೆಯಬಹುದು. ಈಶ್ವರಾಜ್ಞೆಯಿಂ ಪ್ರಾಪ್ತವಾದ ಕರ್ಮಗಳಂ ಬಿಡುವದು ದೊಡ್ಡವರಿಗೆ ಸಮ್ಮತವಲ್ಲವಾದ್ದರಿಂದ ಆಡುವ ಮಗುವಿನಂತೆ ಫಲಾಭಿಸಂಧಿಯಿಲ್ಲದೆ ಪ್ರಕೃತೋಚಿತವಾದ ಕರ್ಮಗಳಂ ನಡೆಸುವನಾಗು. ಈ ತುರೀಯಾವಸ್ಥೆಯಲ್ಲಭ್ಯಾಸದಿಂ ಸಿದ್ಧನಾದವನಿಗೆ ಜಗದ್ವ್ಯಾಪಾರವೆಲ್ಲವೂ ಲೀಲೆಯಾಗಿ ಕಾಣುವದಾದ್ದರಿಂದ ಮರಳಿ ಅವನು ಸಂಸಾರಿಯ ಮಾರ್ಗಕ್ಕೆ ಬಾರನು. ಈ ತುರೀಯಾವಸ್ಥೆಯೇ ಮಹಾನಂದವಾದ ಜೀವನ್ಮುಕ್ತಿಯೆನಿಸುವದು. ಇದನ್ನತಿಕ್ರಮಿಸಿದವನು ತುರೀಯಾತೀತನೆಂತಲೂ, ವಿದೇಹ ಮುಕ್ತನೆಂತಲೂ ಪೇಳಲ್ಪಡುವನು. ಎಲೈ ರಾಮಭದ್ರನೇ ! ಜೀವನ್ಮುಕ್ತಿಗೆ ಇತರವಾದ ಜಾಗ್ರದಾದ್ಯವಸ್ಥಾತ್ರಯವು ಅಜ್ಞಾನ ದುಃಖಮಯವಾದ್ದರಿಂದ ಅನಾನಂದವೆನಿಸುವದು. ಜೀವನ್ಮುಕ್ತಿಯು ಜ್ಞಾನಾನಂದ ಪ್ರಚುರವಾದ್ದರಿಂದ ಮಹಾನಂದವೆನಿಸುವದು. ಇವರೊಳ್ ಸ್ವೇಚ್ಛೆಯಿಂದಲಾಗಲೀ, ಪರೇಚ್ಛೆಯಿಂದಲಾಗಲೀ; ಈಶ್ವರಾಜ್ಞೆಯಿಂದಲಾಗಲೀ ಕಾದಾಚಿತ್ಕವಾದ ಅಜ್ಞಾನ ದುಃಖಗಳು ಸಂಭವಿಸುವದಕ್ಕೆ ಕಾರಣವಾದ ಪ್ರಾಕೃತ ಶರೀರ ಸಂಬಂಧವಿರುವದ್ದರಿಂದ ಪ್ರಾಕೃತವಾದ ವ್ಯಾವಹಾರಗಳಿಗೆ ವಿಷಯವಾಗುವದು. ಪರಮಾತ್ಮನಲ್ಲೇಕೀಭಾವವೆನಿಸುವ ಅನಾದ್ಯಂತವಾದ ವಿದೇಹಮುಕ್ತಿಯಲ್ಲಿ ಪ್ರಾಕೃತ ಗಂಧವಿಲ್ಲದ್ದರಿಂದ, ಪರಮಾತ್ಮನಂತನು ವ್ಯವಹಾರ ವಿಷಯವಾಗದಿರುವದು, ಆನಂದ ಒಂದೇ ಇರುವದ್ದರಿಂದ ಅನಾನಂದ ಮಹಾನಂದ ವ್ಯವಹಾರಗಳಿಗೆ ಅತಿ ದೂರವಾಗಿರುವದು. ಸಕಲ ಸಂಸಾರ ದುಃಖ ವಿಶ್ರಾಂತಿಸ್ಥಾನ

ನಾದ ಆ ವಿದೇಹ ಮುಕ್ತಿಯು ವಾಯುವಿಗೆ ಆಕಾಶದಂತೆ ತುರೀಯಾವಸ್ಥೆಯನ್ನತಿಕ್ರಮಿಸಿದವನಿಗೆ ಗಮ್ಯವಾಗುವದು. ಸಮಸ್ತ ವ್ಯವಹಾರಗಳೂ ದ್ವೈತದಲ್ಲಿ ಸಂಭವಿಸುವವಲ್ಲದೆ ಅದ್ವೈತದಲ್ಲಿ ಯಾವದೂ ಸಂಭವಿಸದು. ಪರಮಾರ್ಥ ವಿಚಾರದಿಂದಹಂಕಾರವಂ ಬಿಟ್ಟು ನಿರ್ವಿಕಲ್ಪವಾದ ಸ್ವಸ್ವರೂಪವಂ ಧ್ಯಾನಿಸುವಲ್ಲಿ ಮನಕ್ಕೆ ಏಕಾಗ್ರತೆಯುಂಟಾಗಲು ದ್ವಿತೀಯವಸ್ತು ಸ್ಫೂರ್ತಿಯಿಲ್ಲದ್ದರಿಂದ ಸುಷುಪ್ತಿಗೆ ಸರಿಯಾದ ಆ ಅವಸ್ಥೆಯು ಜಾಗ್ರತ್ಸುಷುಪ್ತಿಯೆನಿಸುವದು. ಇದರಲ್ಲಹಂಕಾರಾಂಶವಿರುವವರಿಗೆ ಇದು ಸಂಪ್ರಜ್ಞಾತ ಸಮಾಧಿಯೆಂತಲೂ ಹೇಳಲ್ಪಡುವದು. ಚಿದಾಕಾಶದೊಳ್ ಮನವು ಐಕ್ಯವಾಗಿ ನಿಶ್ಶೇಷವಾಗಿ ಅಹಂಕಾರವಡಗಲು ಜಾಗ್ರತ್ಸುಷುಪ್ತಿಯೆಂತಲೂ, ಅಸಂಪ್ರಜ್ಞಾತ ಸಮಾಧಿಯೆಂತಲೂ, ತುರೀಯಾವಸ್ಥೆಯೆಂತಲೂ, ಜೀವನ್ಮುಕ್ತಿಯೆಂತಲೂ ಹೇಳಲ್ಪಡುವದು. ಈ ಅವಸ್ಥೆಯಭ್ಯಾಸವಂ ಮಾಡುವನಿಗೆ ಬಾಹ್ಯ ವಾಸನೆಗಳು ಹೇಗೆ ಹೇಗೆ ಬಿಡಲ್ಪಡುವವೋ ಹಾಗೆ ಹಾಗೆ ಸಹಜಾನಂದ ಪ್ರಕಾಶವುಂಟಾಗುವದು. ಆದರಿಂದ ಬಾಹ್ಯ ದುಃಖಗಳು ನಿಶ್ಶೇಷವಾಗಿ ಅಡಗಲು ಆನಂದಮಯವಾದ ಜೀವನ್ಮುಕ್ತಿಯು ಸಿದ್ಧವಾಗುವದು, ಜೀವನ್ಮುಕ್ತಿಗೂ ವಿದೇಹಮುಕ್ತಿಗೂ ದೇಹವಿರುವದೊಂದೇ ವಿಶೇಷವಲ್ಲದೆ ಮತ್ತೊಂದಿಲ್ಲ. ಜೀವನ್ಮುಕ್ತ ಸ್ಥಿತಿಯಿಂದ ನೀನು ಬಹುಕಾಲ ರಾಜ್ಯಭಾರವಂ ಮಾಡಿ ಬಳಿಕ ವಿದೇಹ ಮುಕ್ತಿಯಂ ಪಡೆಯುವನಾಗು. ಶುಭೇಚ್ಛಾವಿಚಾರಣಾ, ತನು ಮಾನಸಾ, ಸತ್ವಾಪತ್ತಿ, ಅಸಂಸಕ್ತಿ, ಪದಾರ್ಥಾ ಭಾವನಾ, ತುರ್ಯಗಾ ಎಂಬೇಳು ಭೂಮಿಕೆಗಳಲ್ಲಿ ಜಾಗ್ರದವಸ್ಥೆಯೊಳ್ ಸ್ವರೂಪ ಧ್ಯಾನಬಲದಿಂದಿತರ ಪದಾರ್ಥಗಳಲ್ಲಿ ಪ್ರವರ್ತಿಸದೆ ಮನವು ಸ್ಥಿಮಿತವಾಗುವದ್ದರಿಂದ, ತನುಮಾನಸೆಯೇ ಜಾಗ್ರತ್ಸುಷುಪ್ತಿಗೆ ಆದಿಭಾಗವೆನಿಸುವದು. ಇದೇ ಸವಿಕಲ್ಪ ಸಮಾಧಿಯು ಇದರ ಅಭ್ಯಾಸದಿಂ ಸ್ವರೂಪದಲ್ಲಿ ಮನಸ್ಸಿಗೆ ಐಕ್ಯವಾಗುವದೇ ಸತ್ವಾಪತ್ತಿಯೆನಿಸುವದು. ಇದನ್ನೇ ನಿರ್ವಿಕಲ್ಪ ಸಮಾಧಿಯೆಂದು ಹೇಳುವರು, ಇದು ಮೊದಲುಗೊಂಡು ನಾಲ್ಕು ಭೂಮಿಕೆಗಳಲ್ಲಿರುವರೂ ಜೀವನ್ಮುಕ್ತರೆನಿಸುವರು. ಈ ನಾಲ್ಕುಮಂದಿಗೂ ಕ್ರಮವಾಗಿ ಬ್ರಹ್ಮವಿತ್, ಬ್ರಹ್ಮವಿದ್ವರ, ಬ್ರಹ್ಮವಿದ್ವರೀಯ, ಬ್ರಹ್ಮವಿದ್ವರಿಷ್ಠನೆಂದು ಹೆಸರುಗಳು ಪ್ರಸಿದ್ಧವಾಗಿರುವವು. ಸತ್ವಾಪತ್ತಿಯಲ್ಲಿ ಸಹಜಾನಂದದ ಅನುಭವದಿಂದ ಇತರ ವಸ್ತುಗಳಲ್ಲಾಸಕ್ತಿಯುಂಟಾಗದಿರಲು, ಅಸಂಸಕ್ತನಾದವನಿಗೆ ಅಸಂಗನಾಗಿ ವ್ಯವಹರಿಸುವ ಯೋಗ್ಯತೆ ಇರುವದ್ದರಿಂದ ಅದರಿಂ ನೀನು ಲೋಕಗಳಂ ರಕ್ಷಿಸುವನಾಗು? ಈ ಸ್ಥಿತಿಯಂ ಪಡೆದಿರುವ

ನಿನಗೆ ವರೀಯ ಸ್ಥಿತಿಯೂ ವರಿಷ್ಠಸ್ಥಿತಿಯೂ ಕೂಡ ಲಭ್ಯವಾಗುವದು. ಈ ಅಖಂಡಸ್ಥಿತಿಯನ್ನನುಭವಿಸುವ ನೀನು ಭಾವಗತವಾದ ಅದ್ವೈತವಂ ಕ್ರಿಯೆಯಲ್ಲಿ ತೋರಿಸದೆ ದುಷ್ಟ ಶಿಷ್ಟರ ನಿಗ್ರಹಾನುಗ್ರಹಗಳಂ ಸರಿಯಾಗಿ ನಡಸುವನಾಗು. ಭ್ರಮಾತ್ಮಕವಾದೀ ಶರೀರವಿರುವದ್ದರಿಂದ ಲಾಭವು ಹೋದ್ದರಿಂದ ಹಾನಿಯೂ ಸಹ ಇಲ್ಲದ್ದರಿಂದಿದು ಹೋಗುವದೆಂಬ ದಿಗಲಿಲ್ಲದೆ ಸುಷುಪ್ತಾವಸ್ಥೆಯಲ್ಲಿ ನೀನು ನಿಲ್ಲುವನಾಗು, ಶ್ರವಣದಿಂದ ಅಖಂಡ ವಾಕ್ಯಾರ್ಥ ಸ್ವರೂಪವನ್ನು ಮನನದಿಂ ಜಗದಧ್ಯಾಸಸ್ಥಾನವಾದ ಚೈತನ್ಯ ಸ್ವರೂಪವನ್ನು ನಿಧಿಧ್ಯಾಸನದಿಂದ ನಿರುಪಾಧಿಸ್ವರೂಪವನ್ನೂ ತಿಳಿದು ಸ್ವರೂಪದಲ್ಲಿರುವ ಸತ್ತಾಸ್ವರೂಪವನ್ನು ಅದರ ಪ್ರಕಾಶವನ್ನು ಅದರ ವ್ಯಾಪ್ತಿಯನ್ನು ಸಹ ನೋಡುತ್ತಿರುವೆಯಾದ್ದರಿಂದಿಷ್ಟಾನಿಷ್ಟ ಭ್ರಾಂತಿಯಳಿದ ನಿನ್ನ ಹೃದಯವು ಮೇಘಾಂಧಕಾರಗಳಿಲ್ಲದ ಶರದಾಕಾಶದಂತೆ ನಿರ್ಮಲವಾಗಿರುವದು. ಅದರಿಂದಲೇ ನಿನ್ನ ಮುಖಚಂದ್ರನು ಪ್ರಸನ್ನನಾಗಿರುವನು, ಯೋಗಮಂತ್ರ ತಪಸ್ಸಿದ್ಧಿಗಳಿಂದಂತರಿಕ್ಷವನ್ನೈದಿದ ಪುರುಷನು ಮರಳಿ ಕೆಳಕ್ಕೆ ಬರದಿರುವಂತೆ ನೀನು ಪೂರ್ವದಂತೆ ಈ ಸಂಸಾರದೆಶೆಗೆ ಬರುವನಲ್ಲ. ಹೀಗಿರುವದ್ದರಿಂದ ಇವನು ಅವನು ನಾನು ಇದು ಅದು ನನ್ನದೆಂದು ಭ್ರಮೆಪಡದೆ ಇದೆಲ್ಲವೂ ಬ್ರಹ್ಮವೆಂದು ನಿಶ್ಚಯಿಸುವನಾಗು? ಅದ್ವಿತೀಯ ಭಾವದಿಂ ವ್ಯವಹಾರ ವಿಷಯವಲ್ಲವಾದ್ದರಿಂದ ಬ್ರಹ್ಮವು ನಾಮರೂಪರಹಿತವೆನಿಸುವದು. ಆದಾಗ್ಯೂ ಆತ್ಮನೆಂಬ ಪೆಸರು ವ್ಯವಹಾರಾರ್ಥವಾಗಿ ಶ್ರುತಿಗಳಲ್ಲೇ ಸಿದ್ಧವಾಗಿರುವದು. ಸಮುದ್ರದಲ್ಲಿ ತೆರೆಗಳಂತೆ ನಾಮರೂಪಗಳು ಆತ್ಮನಲ್ಲೇ ಅಭಿನ್ನವಾಗಿರುವವು. ಆತ್ಮ ಪ್ರಪಂಚಗಳೆಂದೆರಡು ಪದಾರ್ಥಗಳೇ ಪ್ರಸಿದ್ಧವಾಗಿರುವವು. ಪ್ರಪಂಚವೆಲ್ಲವೂ ಆತ್ಮನಾಗುವಲ್ಲಿ ಅದಕ್ಕೆ ಭಿನ್ನವಾದ್ದು ಯಾವದೆಂದು ತಿಳಿಯಬೇಕು. ಎಲೈ ರಘುವೀರನೇ! ಇವನು ಅವನು ನಾನೆಂಬುವದೇ ಮೊದಲಾದ ವ್ಯವಹಾರಕ್ಕೆ ವಿಷಯವೆಂದು ಯಾವದಂ ಹಿಡಿಯುವೆಯೋ? ಆ ವಸ್ತುವು ನನಗೆ ಭಿನ್ನವೆನ್ನುವೆಯೋ? ನಾನೆಂತಲೇ ಗ್ರಹಿಸುವೆಯೋ? ನನಗೆ ನಾನೇ ವಿಷಯನಾಗಲಾರೆನಾದ್ದರಿಂದ ಭಿನ್ನವೆನ್ನುವೆಯಾದರೆ ಯಾವ ಸತ್ತೆಯಿಂದದು ಇರುವದೋ ನೋಡುವನಾಗು? ನನ್ನ ಸತ್ವವೇ ಅಲ್ಲಾ ಇರುವದೆನ್ನುವಲ್ಲಿ ಪದಾರ್ಥ ಭೇದವನ್ನೇಕೆ ಪರಿಗ್ರಹಿಸಬೇಕು. ಭ್ರಾಂತಿ ಸಿದ್ಧವಾಗಿರುವದೆನ್ನುವೆಯಾದರೆ ಭ್ರಾಂತಿ ಸಿದ್ಧವಾದದ್ದಕ್ಕೂ ಸತ್ಯವಸ್ತುವಿಗೂ ಸಂಬಂಧವೆಂತಾಗುವದು. ಅಥವಾ ಅದಕ್ಕಾದರೂ ಸತ್ವವೆಲ್ಲಿಯದೋ ನೋಡುವನಾಗು. ಪ್ರಾಜ್ಞನಾದಾಗ್ಯೂ ಭ್ರಾಂತಿಯಿಂ ಪದಾರ್ಥನಂ ಕಲ್ಪಿಸಿಕೊಂಡು ಅದರಿಂ

ನೀನೇ ಭ್ರಾಂತಿಪಡುವೆಯಾದರೆ ವಿದೂಷಕನಂತೆ ವೇಷಧಾರಿಯೆನಿಸುತ್ತೀಯೆ ! ಪರಮಾರ್ಥವಾಗಿ ನೋಡುವಲ್ಲಿ ಕತ್ತಲೆಯಿಂದಾದಿತ್ಯನಿಗೆ ಹೊದ್ದಿಕೆಯುಂಟಾಗಿರುವದೆಂಬಂತೆ ನಿನಗೆ ದ್ವೈತಕಳಂಕವು ಸಿದ್ಧವಾಗುವದು. ಅಥವಾ ದೃಶ್ಯಕ್ಕೆ ಬೇರೆ ಸತ್ವವೆಂದು ದ್ವೈತವಂ ಹಿಡಿಯುವೆಯಾದರೆ ಶೀತೋಷ್ಣಗಳಂತೆಯೂ, ತಮಸ್ತೇಜಸ್ಸುಗಳಂತೆಯೂ, ವಿರುದ್ಧವಾದ ಚಿಜ್ಜಡಗಳಿಗೆ ಸಂಬಂಧವೆಂತಾದೀತು! ಚಿನ್ಮಾತ್ರಕ್ಕೆ ದೇಹಸಂಬಂಧವೆಂಬುವದು ಬಡಬಾಗ್ನಿಯಲ್ಲಿ ಜಲವೆಂಬಂತೆ ಅಸಂಗತವಾಗುವದು. ಸತ್ಯಾಸತ್ಯ ವಿಚಾರದಲ್ಲಿ ದ್ವೈತವೆಂಬ ಬಿಸಿಲು ದೂರವು ನಷ್ಟವಾಗುವದು. ದ್ವೈತವನ್ನಂಗೀಕರಿಸಿದಾಗ್ಯೂ ನಿತ್ಯ ಶುಚಿತ್ವಾದಿ ಲಕ್ಷಣಗಳಿಗೆ ಸರಿಯಾದ ಲಕ್ಷಣವಿಲ್ಲದ್ದರಿಂದಾತ್ಮದೇಹಗಳಿಗೆ ಸಂಬಂಧವೇ ಅಸಂಗತವಾಗುವದು. ಪ್ರಾಣವಾಯುವಿನ ಚಲನಶಕ್ತಿಯನ್ನಾತ್ಮವೆಂದು ತಿಳಿದ ಭ್ರಾಂತರು ಆತ್ಮಸಂಬಂಧದಿಂ ದೇಹ ಚಲಿಸುವದೆಂತಲೂ, ಧ್ವನಿಗೈಯ್ಯುವದೆಂತಲೂ, ಇಂದ್ರಿಯಗಳು ಚಲಿಸುವವೆಂತಲೂ ದ್ವೈತವಂ ಸ್ಥಾಪಿಸುವರು. ಅದನ್ನಂಗೀಕರಿಸಿದವಗ್ಗೆ ದುಃಖವಧಿಕವಾಗುವದ್ದರಿಂದ ಪರಮಾರ್ಥವಾದ ಅದ್ವೈತವನ್ನೇ ಅಂಗೀಕರಿಸಿ ದೇಹಾದಿಗಳೆಲ್ಲವೂ ಭ್ರಾಂತಿ ಸಿದ್ಧವೆಂಬ ನಿಶ್ಚಯದಿಂ ಸುಖವಾಗಿರುವದು ಉತ್ತಮವೆಂದು ತಿಳಿಯುವನಾಗು. ಬಾಯಾರಿಕೆ ಇದ್ದವನಿಗೆ ಮರುಭೂಮಿಯ ಬಿಸಲು ತೊರೆಯಾಗಿ ಕಾಣುವಂತೆ ಪ್ರಪಂಚ ವಾಸನೆಯುಳ್ಳವನಿಗೆ ಪರಮಾತ್ಮನ ಪ್ರಕಾಶವೇ ಪ್ರಪಂಚವಾಗಿ ಕಾಣುತ್ತಿರುವದು. ಇದಕ್ಕೆ ಸ್ವಜ್ಞಾನದಿಂದಲೇ ಸೃಷ್ಟಿಯಲ್ಲದೆ ಪರಮಾರ್ಥವಾಗಿ ಸೃಷ್ಟಿಯು ಸ್ಥಿತಿಯು ಪ್ರಳಯವು ಅದರಿಂದ ಬಂಧವು ಮೋಕ್ಷವು ಸಹ ಇಲ್ಲವೆಂದು ನಿಶ್ಚಯಿಸಿ ನಾನು ಸುಖಿಯೆಂತಲೂ, ದುಃಖಿಯೆಂತಲೂ ಮೂಢನೆಂತಲೂ, ಪ್ರೌಢನೆಂತಲೂ, ದೇಹಾಭಿಮಾನದಿಂದುಂಟಾದ ದುರ್ದೃಷ್ಟಿಗಳಂ ಬಿಟ್ಟು ಬ್ರಹ್ಮ ಒಂದೇ ಸರ್ವಸ್ವರೂಪವಾಗಿ ಪ್ರಕಾಶಿಸುವದೆಂಬ ನಿಶ್ಚಯದಿಂ ರಾಗ ದ್ವೇಷಾದಿಗಳಿಲ್ಲದೆ ಸುಖದಿಂದಿರುವನಾಗು. ಪ್ರಾಣವಾಯುವಿನಿಂ ಚಲಿಸಿದ ಇಂದ್ರಿಯಗಳ ಪ್ರಕಾಶದಲ್ಲಿ ತಿಳಿಯುವದೊಂದೇ ಆತ್ಮನ ವ್ಯಾಪಾರವಲ್ಲದೆ ಮತ್ತೊಂದಲ್ಲ. ನಿರ್ಮಲ ವಸ್ತುವಿನಲ್ಲಿ ಪ್ರತಿಬಿಂಬಿಸುವದು ಸ್ವಾಭಾವಿಕವಾದ್ದರಿಂದ ಸತ್ವ ಪರಿಣಾಮವಾದ ಅಂತಃಕರಣದಲ್ಲಿ ಪ್ರಪಂಚದೊಡನೆ ಸರ್ವವ್ಯಾಪಿಯಾದ ಆತ್ಮತತ್ವವು ಪ್ರತಿಬಿಂಬಿಸುವದು. ಅದರಿಂದಾತ್ಮನಿಗೆ ಸ್ವರೂಪವಾದ ಜ್ಞಾನವು ಅಂತಃಕರಣದಲ್ಲೂ ಅದರ ವೃತ್ತಿಗಳಲ್ಲೂ ಹಳ್ಳದಲ್ಲಿ ನೀರಿನಂತೆ ನಿಲ್ಲುವದು. ಪುಷ್ಪವಿದ್ದೆಡೆಯೊಳ್ ಪರಿಮಳದಂತೆ ಚಿತ್ತವಿದ್ದೆಡೆಯೊಳಾತ್ಮಜ್ಞಾನವು ಸಿದ್ಧವಾಗಿ

ರುವದ್ದರಿಂದ ವಾಸನಾವೇಶದಿಂ ಚಿತ್ತವೆಲ್ಲೆಲ್ಲಿಗೆ ಪೋಗುವದೋ ಅಲ್ಲಲ್ಲೆ? ಆತ್ಮಸಾನ್ನಿಧ್ಯದಿಂದಾಯಾಯ ಪದಾರ್ಥವು ಕಲ್ಪಿತವಾಗಿ ಗೋಚರವಾಗುವದು. ಬೀಜವು ವೃಕ್ಷವಾಗುವಂತೆ ವಾಸನೆಯೇ ಪ್ರಪಂಚವಾಗಿ ಕಾಣ್ಬರುವದು ಲೋಹ ಚಲನಕ್ಕೆ ಅಯಸ್ಕಾಂತವಂತೆ ಚಿತ್ತದ ವಾಸನೆ ಪರಿಣಮಿಸುವದಕ್ಕೆ ಸಾನ್ನಿಧ್ಯಮಾತ್ರದಿಂದಾತ್ಮನು ಕಾರಣನೆನಿಸುವನು. ಸ್ವತಃಕಾರಣತ್ವವಿಲ್ಲದ್ದರಿಂದ ಆತ್ಮನು ಕರ್ತೃವಲ್ಲವೆಂದು ಪೇಳಲ್ಪಡುವನು. ಆತ್ಮನಿಗೆ ಚಿತ್ತವು ಭಿನ್ನವಾದ್ದರಿಂದಲೂ ಚಿತ್ತದಲ್ಲಿ ಆತ್ಮನು ಕಾಣುವದ್ದರಿಂದಲೂ ಕನ್ನಡಿಯಲ್ಲಾಕಾಶದಂತೆ ಪ್ರತಿಬಿಂಬಿಸುವನೆಂದು ಪೇಳುವರು. ಆತ್ಮನಿಗೆ ವ್ಯಾಪ್ತಿಯೇ ಪ್ರತಿಬಿಂಬವೆನಿಸುವದಾದ್ದರಿಂದ ಘಟಾದಿ ಪ್ರತಿಬಿಂಬದಂತೆ ಆತ್ಮನಲ್ಲಿ ವ್ಯತ್ಯಯವಾಗಲಾರದು. ಭೂಭೇದದಿಂ ಜಲದ ರುಚಿಯು ಭೇದಿಸುವಂತೆ ಚಿತ್ತ ಭೇದದಿಂದಾತ್ಮಜ್ಞಾನವು ಭೇದಿಸುವದು. ಚಿತ್ತಸಾನ್ನಿಧ್ಯದಿಂದಾತ್ಮನಿಗೆ ಅಭಿಮಾನವು ಆತ್ಮಸಾನ್ನಿಧ್ಯದಿಂ ಚಿತ್ತಕ್ಕೆ ಪರಿಣಾಮನಶಕ್ತಿಯು ಉಂಟಾಗಿರುವದು. ಪರಕೀಯವಾದ ಅಭಿಮಾನವಂ ಸ್ವೀಕರಿಸಿದಾತ್ಮನು ಅವಿವೇಕದಿಂ ಬದ್ಧನಾಗುವನು. ವಿಚಾರಶಕ್ತಿಯಿಂದಭಿಮಾನವಂ ತ್ಯಜಿಸಲು ಮುಕ್ತನೆನಿಸುವನು. ಚಿತ್ತದಲ್ಲಿ ಸತ್ವವು ಕಾಣದ್ದರಿಂದ ಅದರ ಅಭಿಮಾನ ಉಂಟಾಗುವದಕ್ಕೆ ಕಾರಣವಾಯಿತು. ಅದಕ್ಕೆ ಸತ್ವವಿಲ್ಲಯದೆಂದು ವಿಚಾರಿಸುವಲ್ಲಿ ಆ ವಿಚಾರದಿಂ ಸಿದ್ಧವಾಗಿದ್ದ ಅವರ ಸತ್ವವು ದೀಪದಿಂ ತಮದಂತೆ ನಷ್ಟವಾಗುವದು. ಕಾರಣವೇ ಇಲ್ಲದಿರುವಲ್ಲಿ ಕಾರ್ಯವಂತಿದ್ದೀತು. ಆತ್ಮಸ್ಥಿತಿಯೇ ಸರ್ವಸ್ಥಿತಿ ಕಾರಣವೆಂದು ಸರ್ವ ಪದಾರ್ಥಗಳು ಐಕ್ಯವಂ ಪಡೆಯುವಲ್ಲಿ ಆ ಅಭೇದ ಜ್ಞಾನವೇ ಸಮ್ಯಜ್ಞಾನವೆನಿಸುವದು. ವಿಚಾರಬಲದಿಂದ ಅದಂ ಗ್ರಹಿಸಿದವರು ಸರ್ವವೂ ಬ್ರಹ್ಮವೆಂತಲೇ ಸ್ಥಾಪಿಸುವರು. ಹೀಗೆ ಮನಸೇ ಬಂಧಮೋಕ್ಷಗಳಿಗೆ ಕಾರಣವಾದ್ದರಿಂದ ಜೀವಾದಿ ಸಂಜ್ಞೆಗಳುಳ್ಳ ಆ ಮನವನ್ನೇ ವಿಚಾರಿಸಬೇಕೆಂದು ಪೇಳುವಲ್ಲಿ ಈ ಸಂಜ್ಞೆಗಳುಂಟಾಗುವದಕ್ಕೆ ಕಾರಣವಂ ನಿರೂಪಿಸಬೇಕೆಂದು ಕೇಳುವ ಶ್ರೀರಾಮನಂ ಕುರಿತು ಮರಳಿ ವಸಿಷ್ಠನಿಂತೆಂದನು. ಎಲೈ ರಾಮಭದ್ರನೆ,- ವಾಯುವಿನಂತೆ ಚಲಾಚಲ ಸ್ವಭಾವನಾದ ಪರಮಾತ್ಮನು ತರಂಗಗಳಲ್ಲಿ ಜಲದಂತೆ ವಾಯುತೇಜೋ ಜಲಗಳಲ್ಲ ಚಲಸ್ವಭಾವನಾಗಿರುವನು. ಜಲದಲ್ಲಿ ಜಲಭಾವದಂತೆ ಭೂಮ್ಯಾಕಾಶಗಳಲ್ಲಿ ಅಚಲಸ್ವಭಾವನಾಗಿರುವನು. ಈ ಪಂಚಭೂತಾತ್ಮಕ ರೂಪವಾದ ಪ್ರಾಣಿಗಳಲ್ಲಿ ಅಚಂಚಲವಾದ ಗಿರಿ ಶಿಲಾದಿಗಳು ಭೂಮ್ಯಾಂಶವಧಿಕವಾದ್ದರಿಂದ ತಮ್ಮಲ್ಲಿಯೇ ನಿಲ್ಲುವವು ವಾಯ್ವಾದ್ಯಂಶಗಳು ಅಧಿಕವಾದ್ದರಿಂದ ಮನುಷ್ಯಾದಿ ಸೊರೆಯಂತೆ ಚಲಪ್ರಾಣಿಗಳು ತಮ್ಮಲ್ಲಿ ನಿಲ್ಲದೆ ಸ್ಥಿರವಾದ

ಜಡಪದಾರ್ಥಗಳನ್ನು ಪಿಡಿವವು. ಚಿನ್ಮಾತ್ರಸ್ವರೂಪನಾದ ಆತ್ಮನು ಸ್ಥಿರಸ್ವಭಾ
ವನು. ಅವನ ಶಕ್ತಿಗಳು ಚಲಸ್ವಭಾವಗಳು. ಶಕ್ತಿ ಶಕ್ತಿಮಂತರು ಗುಣಿಗುಣ
ಗಳಂತೆ ಅಭಿನ್ನರಾದ್ದರಿಂದ ಪರಮಾತ್ಮನು ಸ್ಪಂದಸ್ವಭಾವನೆನಿಸುವನು. ಅದರಿಂದ
ವನಿಗೆ ಕಲ್ಪನೆಯಂ ಮಾಡುವದು ಅದಿಲ್ಲದಿರುವದು ಸಹ ಸ್ವಾಭಾವಿಕವಾಗಿರುವದು.
ಪರಿಪೂರ್ಣವಾದ ಸ್ವರೂಪದಲ್ಲಿದು ತನಗೆ ಭಿನ್ನವೆಂದು ಆತ್ಮನು ಕಲ್ಪಿಸಿದ್ದೇ ಜಗದೆನಿ
ಸುವದು. ಈ ಕಲ್ಪನೆಯೇ ಅಜ್ಞಾನವೆನಿಸುವದು. ಕಲ್ಪನೆಯಿಲ್ಲದಿರುವದೇ ಜ್ಞಾನ
ವೆನಿಸುವದು. ಜ್ಞಾನಾಜ್ಞಾನಾತ್ಮಕವಾದ ಚೈತನ್ಯವೇ ಮನವೆನಿಸುವದು. ಕಲ್ಪಿತ
ವಾದ ಜಗವಂ ಗ್ರಹಿಸಿ ಜೀವಿಸುವದ್ದರಿಂದ ಜೀವನೆಂತಲೂ, ನಾನು ನನ್ನದೆಂಬ
ಅಭಿಮಾನದಿಂದಹಂಕಾರವೆಂತಲೂ, ದ್ವಿತೀಯ ಪದಾರ್ಥ ಸಂಕಲ್ಪದಿಂ ಮನವೆಂ
ತಲೂ, ನಿಶ್ಚಯಿಸುವದ್ದರಿಂದ ಬುದ್ಧಿಯೆಂತಲೂ ಆತ್ಮನಿಗೇ ಪೆಸರುಗಳುಂಟಾಗಿರು
ವವು. ಕಲ್ಪಿತವಾದೀಜಡದೇಹವು ಆತ್ಮಸತ್ತೆಯಿಂದಲೇ ಸ್ಥಿತಿಯಂ ಪಡೆದು ಅಜ್ಞಾನ
ಪ್ರಧಾನವಾಗಿ ವೃದ್ಧಿಹೊಂದಿರುವದು. ಈ ಪರಿಯಾದ ಆತ್ಮನ ಸ್ವರೂಪವು
ಬೃಹದಾರಣ್ಯ ಮೊದಲಾದ ಶ್ರುತಿಗಳಿಂ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದ್ದಾಗ್ಯೂ ಮೂಢ
ರಾದ ತಾರ್ಕಿಕರು ಈ ನಾಮರೂಪಗಳಲ್ಲೆ ದೃಷ್ಟಿಯನ್ನಿಟ್ಟು ಆತ್ಮನಸ್ವರೂಪವ
ನಿಪರಿಯಾಗಿ ಪೇಳುತ್ತಿರುವರು. ಅದರಿಂ ಜನಗಳಿಗೆ ಭ್ರಾಂತಿಯುಂಟಾಗಿರು
ವದು. ಹೀಗೆ ಆತ್ಮನೇ ಸಂಸಾರ ಕಾರಣನಾಗಿರುವನಲ್ಲದೆ ಜಡಕಲ್ಪಿತವಾದ ದೇ
ಹವು ಕಾರಣವಾಗಲಾರದು, ಆಧಾರಾಧೇಯಾದಿಗಳು ಬಂದರೊಡನೆಯೇ ಎರಡೂ
ಹೋಗುವವಾದ್ದರಿಂದ ದೇಹ ನಾಶವಾಗುವಲ್ಲಿ ಜೀವ ನಾಶವಾಗುವದು. ಎಲೆಯು
ಶುಷ್ಕವಾಗುವಲ್ಲೆಲೆಯ ರಸವು ಸೂರ್ಯಕಿರಣವಂ ಪೊಂದುವಂತೆ ದೇಹವು ಬೀಳುವಲ್ಲಿ
ಜೀವನು ಆತ್ಮನಂ ಹೊಂದುವನು. ಇವನಿಗೆ ದ್ವಿತೀಯ ಪದಾರ್ಥವಾಸನೆ ಇದ್ದರೆ
ದೇಹನಾಶದಲ್ಲಿ ಅಜ್ಞಾನರೂಪವಾದ ಮಾಯೆಯಲ್ಲಿ ಸೇರಿಕೊಂಡು ಮರಳಿ ಮರಳಿ
ಜನನ ಮರಣ ದುಃಖಗಳನ್ನನುಭವಿಸುವನು. ವಾಸನೆ ಇಲ್ಲದಿರೆ ಪುನರಾವೃತ್ತಿ
ಯಿಲ್ಲದೆ ಶಾಶ್ವತವಾದ ಪರಬ್ರಹ್ಮ ಪದವಂ ಹೊಂದುವನು. ಯಾವನು ದೇಹ
ನಾಶದಿಂದಾತ್ಮನಾಶವಂ ತಿಳಿವನೋ ಅವನಿಗೆ ತಾಯಿ ಮೊಲೆಯಿಂದಲೂ ಕೂಡ
ಪಿಶಾಚ ಪುಟ್ಟುವದೆಂದು ತಿಳಿಯತಕ್ಕದು. ವಾಸನಾತ್ಮಕವಾದ ಚಿತ್ತದೊಡನೆ
ತಿರುಗಿ ಬಾರದಂತೆ ದೇಹವು ನಷ್ಟವಾಗುವದೇ ಮೋಕ್ಷವೆನಿಸುವದು. ಹೀಗೆ ಸತ್ತ
ವನಿಗೆ ಪರಮಾತ್ಮನಲ್ಲೈಕ್ಯವಾಗುವದ್ದರಿಂದ ತಿಳಿದವರು ಇಂಥಾ ಸಾವನ್ನು ಅಭ್ಯು
ದಯವೆಂದು ಪೇಳುವರು. ಇಂಥಾ ಸಾವಿಲ್ಲದವನು ತರಂಗದೊಳಗೆ ಸಿಕ್ಕಿದ ಕ್ರಿಮಿ

ದಂತೆ ಕೆಲವು ಕಾಲ ಮರೆಯಾಗಿದ್ದು ಜನ್ಮಾಂತರದಿಂ ತಿರುಗಿ ಕಾಣ್ಬರುತ್ತಾ ವೃಕ್ಷದಿಂ ಮತ್ತೊಂದು ವೃಕ್ಷವಂ ಹೊಂದುವ ಕಪಿಯಂತೆ ಕುಣಿಯುತ್ತಿರುವನು. ವಂಚಕಳಾದ ಸಾಕುವಳಿಂದ ಬಾಲಕರಂತೆ ವಾಸನೆಯಿಂದೀ ಜೀವರು ಸೆಳೆಯಲ್ಪಡುವರು. ವಾಸನೆಯಿಂದೆಳೆಯಲ್ಪಡುವ ಈ ಜೀವರು ಪರಿಪರಿಯಾದ ದೇಹಗಳಂ ಪಡದು ಪ್ರಾಣಿಗಳ ಗ್ರಾಸದಿಂದಲೇ ಜೀವಿಸುತ್ತಾ ಅತಿ ಕಷ್ಟವಾದ ನರಕಮಂಡಲದಲ್ಲಿ ಬಿದ್ದು ಒದ್ದುಕೊಳ್ಳುತ್ತಿರುವರು. ದೇಹೇಂದ್ರಿಯಾತ್ಮಗಳು ಕೆಸರು ನೀರುಗಳಂತೆ ಸೇರಿಕೊಂಡಿರುವದ್ದರಿಂದೊಂದಾಗಿರುವಂತೆ ತೋರುತ್ತಿರುವವು, ಗಡಿಗೆ ಹಣ್ಣುಗಳಂತೆ ದೇಹಾತ್ಮರಿಗೆ ಭೇದವಿರುವದ್ದರಿಂದ ದೇಹನಾಶದಲ್ಲಿ ತಾನು ನಷ್ಟನಾದೆನೆಂಬುವನನ್ನು ಧಿಕ್ಕರಿಸಬೇಕು. ಹೀಗಿರುವಲ್ಲಿ ನಾನೇ ಇದೆಂತಲೂ ಇದು ನನ್ನ ದೇಹವೆಂತಲೂ ಅಭಿಮಾನವಿಡುವಂತಾದ್ದು ರೋದನದಂತೆ ನಿರರ್ಥಕವೆಂದು ತಿಳಿಯತಕ್ಕದ್ದು. ಕಲ್ಪಿತ ಪಿಶಾಚದಿಂದುಂಟಾದ ಭೀತಿವಿಕಾರಗಳಂತೆ ಇಲ್ಲಿ ಸ್ನೇಹ ಸುಖಾದಿಗಳು ಕಾಣುತ್ತಿರುವವು. ಕಟ್ಟಿಗೆಯ ಹೊರೆಯಲ್ಲಿ ಕಟ್ಟಿಗೆಯಂತೆ ಎಲ್ಲೆಲ್ಲಿ ನೋಡಿದರೂ ಈ ಪ್ರಪಂಚದಲ್ಲಿ ಪಂಚಭೂತಗಳೇ ಕಾಣುತ್ತಿರುವವು. ಈ ಪಂಚಭೂತ ವಿಕಾರದಿಂದುಂಟಾದ ನಾಶೋತ್ಪತ್ತಿಗಳಲ್ಲಿ ಹರ್ಷಾಮರ್ಷಗಳಿಗೆ ಕಾರಣವೇನೋ? ಸ್ತ್ರೀ ಪುರುಷರುಗಳಿಗೇನು ವಿಶೇಷವೋ? ಕೈ ಕಾಲು ಕಣ್ಣು ಮೂಗು ಮೊದಲಾದ ಅಂಗಗಳ ಸೇರಿಕೆಯೋಳ್ ಥಾಳಥಳ್ಯವುಂಟಾಗಿರುವಲ್ಲಿ ಏಕೆ ಆಶ್ಚರ್ಯ ಪಡುವರೋ, ಇದನ್ನ ವಿವೇಕಿಜನಗಳಿಂದಲೇ ತಿಳಿಯಬೇಕು. ಒಂದು ಕಲ್ಲಿನಲ್ಲಿ ಅನೇಕ ಬೊಂಬೆಗಳಾಗುವಂತೆ ಅಕ್ಕ ತಂಗಿಯರು ಅಣ್ಣ ತಮ್ಮಂದಿರು ಸಹ ಪುಟ್ಟುವರು. ಮಣ್ಣು ಬೊಂಬೆಗಳಂತೆ ಬಹುಮಂದಿಗಳು ಒಂದೆಡೆಯಲ್ಲಿ ಸೇರುವರು. ಅಲೆಗಳಲ್ಲಿ ಹುಲ್ಲುಗಳಂತೆ ಜನಗಳು ಸೇರಿ ಸೇರಿ ಬಿಡುತ್ತಿರುವರು. ಹೀಗೆ ಸೇರಿರುವ ದೇಹೇಂದ್ರಿಯಾತ್ಮ ಪ್ರಾಣ ಮನಸ್ಸುಗಳಲ್ಲಿ ಪರಸ್ಪರಾನುರಾಗವೆಂಬುವದು ಎಂಥಾದ್ದೋ, ಯಾವದಕ್ಕೆ ದುಃಖ ಸಂತೋಷಗಳೋ ಯಾವದಕ್ಕೋಸುಗ ದುಃಖಪಡಬೇಕೋ, ತಿಳಿಯಲಶಕ್ಯವಾಗಿರುವದು. ಇಂಥಾದ್ದರಲ್ಲಿ ಸಂಸಾರಿಯಾದ ಆತ್ಮನು ಹುಲ್ಲುಗಳಂ ಸಮುದ್ರವಂತೆ ಇವೆಲ್ಲವನ್ನು ತನ್ನಲ್ಲಿ ಸೇರಿಸಿಕೊಂಡು ಅಭಿಮಾನಿಯಾಗಿ ವಿಕಾರಿಯೆನಿಸುವನು. ವಿವೇಕ ವಿಚಾರಗಳಿಂದಭಿಮಾನವು ಬಿಡಲು ಸ್ವಸ್ವರೂಪದಲ್ಲಿ ನಿಲ್ಲುವನು. ಹೀಗಿರುವದ್ದರಿಂದ ತರಂಗಗಳಿಂ ಸಮುದ್ರದಂತೆ ಸ್ವಕಲ್ಪಿತವಾದ ದೇಹೇಂದ್ರಿಯ ಪ್ರಾಣ ಮನಸ್ಸುಗಳಿಂದಾತ್ಮನೇ ವಿನೋದಿಸುತ್ತಿರುವನೆಂದು ತಿಳಿಯತಕ್ಕದ್ದು. ಈ ಅಖಂಡಭಾವವಂ ತಿಳಿದ ಮಹಾ

ತ್ಮರು ನಿರ್ವಾಸನರಾಗಿ ದಡದ ಮರಗಳಿಂ ಸಮುದ್ರದಂತೆಯೂ ಧೂಳಿಗಳಿಂದ ಗಗನದಂತೆಯೂ ಲೋಕವ್ಯವಹಾರಗಳಿಂ ವಿಕಾರ ಪಡದೆ ನಿತ್ಯಾನಂದರಾಗಿರುವರು. ಈ ಪ್ರಾಜ್ಞರು ಪ್ರತ್ಯಙ್ಮುಖವಾದ ಚಿತ್ತಿನ ವಿಲಾಸವೇ ಮನವೆಂದು ಹೇಳುವರು. ಆ ಮನವೇ ತಾನೆಂತಲೂ, ತನ್ನದೆಂತಲೂ, ಪಂಚಭೂತಗಳೆಂತಲೂ, ಕಾಲತ್ರಯವೆಂತಲೂ, ದೃಶ್ಯದರ್ಶನ ದ್ರಷ್ಟೃವಿಲಾಸಗಳಿಂ ಪರಿಪರಿಯಾಗಿ ಪ್ರಕಾಶಿಸುತ್ತಿರುವದು. ಆದರಿಂದ ಕಾರ್ಯಕಾರಣ ಭಾವವಂ ನೋಡುವ ಮಹಾತ್ಮರು ಚಿತ್ತದ ವಿಲಾಸವೆಲ್ಲವನ್ನೂ ಚಿದ್ವಿಲಾಸವೆಂತಲೇ ಹೇಳುವರು. ದ್ರಷ್ಟೃ ದೃಶ್ಯಗಳಲ್ಲಿ ಮುಖ್ಯವಾದ ದ್ರಷ್ಟೃವಿನಲ್ಲಿ ದೃಷ್ಟಿಯನ್ನಿಡಲು ದೃಶ್ಯವು ದೃಷ್ಟಿಗೆ ಅಧೀನವಾಗಿರುವದ್ದರಿಂದ ಅಸತ್ತೆನಿಸುವದು. ದ್ರಷ್ಟೃಭಾವವು ದೃಶ್ಯಸಾಪೇಕ್ಷವಾದ್ದರಿಂದ ದೃಶ್ಯದೊಡನೆ ದ್ರಷ್ಟೃವೂ ಅಸತ್ತೆನಿಸುವದು. ಬಳಿಕ ನಿರ್ಲೇಪವಾದ ದೃಕ್ಕು ಒಂದೇ ನಿಲ್ಲುವದು. ಕೇವಲ ದೃಗ್ರೂಪನಾದ ಆತ್ಮನಿಗೆ ಅಸತ್ತಾದ ದ್ರಷ್ಟೃದೃಶ್ಯ ಭಾವಗಳ ಸಂಬಂಧದಿಂ ಹರ್ಷಶೋಕಗಳುಂಟಾಗುವದಕ್ಕೆ ಕಾರಣವೇನು ? ಯಾವದಕ್ಕೆ ಕಲ್ಪಿತವಾದ ನಾಮವು ಕೂಡ ಕೇಳಲ್ಪಡುವುದಿಲ್ಲವೋ ಅದು ಸತ್ಯವೆಂತಲೂ, ಅಸತ್ಯವೆಂತಲೂ, ವ್ಯವಹಾರಕ್ಕೆ ವಿಷಯವಾಗಲಾರದು. ಒಂದು ಮಾರುದ್ದವಾಗಿ ರಚ್ಚೇದಪ್ಪಕ್ಕಿರುವದು ಕುದುರೆಯ ಕೊಂಬೆಂಬಂತೆ ಯಾವದರ ಕಲ್ಪಿತವಾದ ನಾಮವು ಹೇಳಿಕೆಗೆ ಯೋಗ್ಯವಾಗಿ ವಚನಮಾತ್ರದಿಂದಾಕಾರ ಊಹಿಸಲ್ಪಡುವದೋ ಅದು ಅತ್ಯಂತಾಸತ್ಯವೆಂತಲೂ, ತುಚ್ಛವೆಂತಲೂ, ಶೂನ್ಯವೆಂತಲೂ ಹೇಳಲ್ಪಡುವದು. ಯಾವದು ಹೇಳಿಕೆಗೆ ವಿಷಯವಾಗಿ ಇಂದ್ರಿಯ ಗೋಚರವಾಗುತ್ತಿದ್ದಾಗ್ಯೂ ಬಿಸಲು ದೊರೆಯಂತೆಯೂ, ಶುಕ್ತಿ ರಜತದಂತೆಯೂ, ಕಾರ್ಯಕ್ಕೆ ಉಪಯೋಗಿಸುವದಿಲ್ಲವೋ ಅದು ಪ್ರಾತಿಭಾಸಿಕ ಸತ್ಯವೆನಿಸುವದು. ಯಾವದು ಕಾರ್ಯೋಪಯೋಗಿಯಾಗಿ ವ್ಯವಹರಿಸಲ್ಪಡುತ್ತಿದ್ದಾಗ್ಯೂ ತತ್ವಜ್ಞಾನಾಭ್ಯುದಯದಲ್ಲಿ ನಿಲ್ಲದೋ ಆ ಈ ಪ್ರಪಂಚವೇ ವ್ಯಾವಹಾರಿಕ ಸತ್ಯವೆನಿಸುವದು. ಯಾವದು ಸರ್ವಕಾರಣವಾಗಿದ್ದಾಗ್ಯೂ ಅಜ್ಞಾನದಲ್ಲಿ ಮರೆಯಾಗಿದ್ದು ಜ್ಞಾನೋದಯದಲ್ಲಿ ಅಪೂರ್ವಪದಾರ್ಥದಂತೆ ಸಿದ್ಧವಾಗುವದೋ ಸಹಜಾನಂದವಾದ ಈ ಚಿದ್ವಸ್ತುವೇ ಪಾರಮಾರ್ಥಿಕ ಸತ್ಯವೆನಿಸುವದು. ಇದರ ಸತ್ತೆಯಿಂದಲೇ ಇತರ ಪದಾರ್ಥಗಳು ಸತ್ಯವಾಗಿ ಕಾಣುತ್ತಿರುವವು. ಇವುಗಳು ಚಿನ್ಮಾತ್ರನಾದ ಆತ್ಮನಿಂ ಕಲ್ಪಿತವಾದ್ದರಿಂದ ಆತ್ಮನ ಸತ್ತೆಯು ಇವುಗಳು ಚಿನ್ಮಾತ್ರನಾದ ಆತ್ಮನಿಂ ಕಲ್ಪಿತವಾದ್ದರಿಂದ ಆತ್ಮನ ಸತ್ತೆಯು ಇವುಗಳಲ್ಲಿ ಸಂಬಂಧಿಸಿರುವದು. ಈ ಪರಮಾರ್ಥ ಜ್ಞಾನದಲ್ಲೇ ನಿಂದಿರುವರು

ಜೀವನ್ಮುಕ್ತರೆನಿಸುವರು. ಈ ಜ್ಞಾನದ ಪ್ರಕಾಶದಿಂ ವ್ಯವಹಾರದಿಂ ಹಿಮ್ಮೆಟ್ಟಿದವರು ವಿಚಾರಪರರಾಗುವರು. ವ್ಯವಹಾರ ಮಾರ್ಗದಲ್ಲೇ ವಿವೇಕಿಗಳಾದವರು ಯಜ್ಞೋಪಾಸನಾದಿ ಸತ್ಕರ್ಮಗಳಲ್ಲಾಸಕ್ತರಾಗುವರು. ಅವಿವೇಕಿಗಳು ಇಂದ್ರಿಯಮನಸ್ಸುಗಳಂ ತಡೆಯಲಾರದೆ ದೃಗ್ಗೋಚರವಾದ ವಿಷಯಗಳಲ್ಲಾಸಕ್ತರಾಗುವರು. ಅವಿಚಾರ ರಮಣೀಯವಾದ ಭೋಗ ಸುಖವನ್ನೇ ಸರ್ವೋತ್ತಮವೆಂದು ನಿಶ್ಚೈಸಿದ ಆ ದುರ್ವ್ಯವಹಾರಿಗಳಿಗೆ ಭೂಮಿ ಚಂದ್ರ ಗಗನಾರವಿಂದಾದಿ ಪ್ರಾತಿಭಾಸಿಕ ಪದಾರ್ಥಗಳು ಸತ್ಯವಾಗುವವು. ಇಂಥಾ ಪ್ರಾತಿಭಾಸಕರಿಗೆ ಮುಂಭಾಗದಲ್ಲೇ ದೃಷ್ಟಿ ಪ್ರಸರಿಸುವದ್ದರಿಂದ ಅತಿಶಯೋಕ್ತಿ ಪರಾಯಣರಾದ ದುಷ್ಕವಿಗಳಿಂ ನಿರೂಪಿತವಾದ ಶೃಂಗಾರಾದಿ ಕಥೆಗಳು ಯಥಾರ್ಥವಾಗುವವು. ಆದ್ದರಿಂದವರಿಗೆ ಮೇಘದಿಂ ಪೂಮಾಲೆಗಳ ವೃಷ್ಟಿಯಾಗುತ್ತಿರುವದು, ಚಂದ್ರಮಂಡಲದಿಂ ಜ್ವಾಲೆಗಳು ಪೊರಮಡುವವು. ನೆಲದಲ್ಲಿ ಮಿಂಚುಬಳ್ಳಿಗಳು ಆಡುತ್ತಿರುವವು. ಗಗನದಲ್ಲಿ ಹಿರಣ್ಮಯವಾದ ಸೋಪಾನವು ಕಾಣುತ್ತಿರುವದು. ಗಗನದಲ್ಲಿ ಹಿರಣ್ಮಯವಾದ ಸೋಪಾನವು ಕಾಣುತ್ತಿರುವದು. ಇಂಥಾ ತುಚ್ಛರ ಮಾತಿನಿಂದುಪಯೋಗವೇನು? ವಿಚಾರಪರನಾದ್ದರಿಂದುಪದೇಶ ಕ್ರಮವಂ ನೀನು ತಿಳಿಯುವನಾಗು. ಈ ದೃಶ್ಯವು ಸತ್ಯವಾದಲ್ಲಿ ನಿತ್ಯ ಸಿದ್ಧವಾದ್ದರಿಂದದರ ಲಾಭವೆನಿಸುವದಕ್ಕೂ ಅದರಿಂ ಸಂತೋಷವೆನ್ನುವದಕ್ಕೂ ಅವಕಾಶವಾಗಲಾರದು. ಅದು ಸತ್ಯವಾದಲ್ಲಿ ಅವಕ್ಕೆ ನಾಶವೆಂತಾದೀತು, ಸತ್ಯಾಸತ್ಯವೆನ್ನುವಂಥಾದ್ದು ವಿರುದ್ಧವಾದ ಧರ್ಮಗಳಿಗೆ ಒಡೆಯೊಳ್ ಸೇರಿಕೆಯಾಗಲಾರದ್ದರಿಂದ ಅಸಮ್ಮತವಾಗುವದು. ಇಂಥಾ ವಿವಾದ ವಿಷಯವಾದ ಅಜ್ಞಾನವಂ ಬಿಟ್ಟು ಪಾರಮಾರ್ಥಿಕವಾದ ತತ್ವದೃಷ್ಟಿಯಿಂ ನೋಡುವನು ಯಾವದರಲ್ಲು ಮೋಹಪರನಾಗನಾದ್ದರಿಂದ ಅವನಂತೆ ನೀನು ಸರ್ವವನ್ನು ಬ್ರಹ್ಮವೆಂದು ತಿಳಿಯುವನಾಗು? ದೃಶ್ಯದೃಷ್ಟಿ ಸಂಬಂಧದಿಂದೀ ಪ್ರಪಂಚವುಂಟಾಗಿದ್ದಾಗ್ಯೂ ದೃಶ್ಯ ದೃಷ್ಟಿಗಳೆಂಬ ಜ್ಞಾನವಿರುವನಿಗೆ ಅವುಗಳಿಂದಾಗುವ ಸುಖವು ವೈಷಯಿಕವೆನಿಸಿ ಸಂಸಾರಕ್ಕೆ ಕಾರಣವಾಗುವದು. ದೃಶ್ಯವೂ ದೃಷ್ಟಿಯೂ ಅವುಗಳ ಸಂಬಂಧವೂ ಸಹ ಬ್ರಹ್ಮವೆಂದು ನಿಶ್ಚೈಸಿರುವನಿಗೆ ದೃಶ್ಯ ದೃಷ್ಟಿ ಸಂಬಂಧದಿಂದಾಗುವ ಸುಖವು ಪಾರಮಾರ್ಥಿಕವೆನಿಸುವದು. ಸುಖವೆಂಬುವದು ಸಹಜವಾದ್ದಲ್ಲದೆ ಮತ್ತೊಂದಲ್ಲ, ಅದೇ ಅಜ್ಞಾನಿಗಳಿಗೆ ವೈಷಯಿಕವಾಗಿ ತೋರುತ್ತಾ ದುಃಖ ಮಿಶ್ರವಾಗುವದು. ದುಃಖಮೂಲವಾದ ಉಪಾಧಿಯು ದುಃಖಗಳೊಡನೆ ತತ್ವಜ್ಞಾನದಿಂ ನಷ್ಟವಾಗಲು ಕೇವಲವಾದ ಸುಖವು ಪ್ರಕಾಶಿಸುವದು.

ಕ್ಷಯವೃದ್ಧಿಗಳಾಗುತ್ತಿರುವವರಿಗೆ ಅಜ್ಞಾನವಿರುವದೆಂತಲೆ ತಿಳಿಯತಕ್ಕದ್ದು. ಅಜ್ಞಾನವು ನಿಶ್ಶೇಷವಾಗುವಲ್ಲಿ ಆ ಸುಖವು ಅಖಂಡವಾಗುವದು. ಆ ಸುಖಸ್ಥಿತಿಯೇ ಮುಕ್ತಿಯೆನಿಸುವದು. ಸಚ್ಚಿದಾನಂದ ಲಕ್ಷಣನಾದ ಪರಮಾತ್ಮನಿಗೆ ಸಹಜವಾದ ಈ ಸುಖದಂತೆಯೇ ಜ್ಞಾನವೂ ಸತ್ಯವೂ ಸಹ ಪ್ರಕಾಶಿಸುವದೆಂದು ತಿಳಿಯುವನಾಗು? ಮನಸ್ಸಿನೊಡನೆ ಆರಾದ ಇಂದ್ರಿಯಗಳಿಗೆ ಗೋಚರವಾದ ಪದಾರ್ಥಗಳೇ ಸ್ಥೂಲ ಸೂಕ್ಷ್ಮಾದಿ ವ್ಯವಹಾರಕ್ಕೆ ವಿಷಯಗಳಾಗುವವು. ಮನವೊದಲಾದ್ದಕ್ಕೆ ಪ್ರೇರಕವಾದ ಚಿದ್ವಸ್ತುವು ನಿರ್ಗುಣವಾದ್ದರಿಂದಲೂ ಪದಗಳು ಗೂಢಾರ್ಥವಾದ್ದರಿಂದಲೂ ಯಾವ ಪದಕ್ಕೂ ಅರ್ಥವಾಗದಾದ್ದರಿಂದ ಆ ವಸ್ತುವು ಪದಾರ್ಥವೆನಿಸಿಕೊಳ್ಳಲಾರದು. ಆದ್ದರಿಂದ ಬ್ರಹ್ಮಾದಿ ಸಂಜ್ಞೆಗಳು ವ್ಯವಹಾರಕ್ಕೋಸುಗ ಕಲ್ಪಿತವಾಗಿರುವವೆಂದು ತಿಳಿಯತಕ್ಕದ್ದು. ಪದಾರ್ಥ ಭಾವವೇ ಇಲ್ಲದಿರುವಲ್ಲಿ ಸ್ಥೂಲಸೂಕ್ಷ್ಮ ಮಹದಣುಗಳೆಂಬ ಪ್ರಮಾಣ ಬೋಧಕವಾದ ಪದಗಳಿಗೆ ಈ ಆತ್ಮನು ಹೇಗೆ ವಿಷಯನಾದಾನು? ಜಡವಾದ ಪದಾರ್ಥವಿದ್ದಲ್ಲಿ ಇವನಂ ಚೇತನನೆನಬಹುದು? ಜ್ಞಾನಸ್ವರೂಪನಿವನೆಂದು ಪೇಳಲೋಸುಗ ಇಲ್ಲದೆ ಜಡಪದಾರ್ಥವಂ ಕಲ್ಪಿಸಿಕೊಂಡು ಇದಕ್ಕೆ ಭಿನ್ನವಾದವನು ಆತ್ಮನೆಂದು ಶ್ರುತಿಗಳೇ ಸಾರುತ್ತಿರುವಲ್ಲಿ, ಇವನಂ ಜಡನೆಂಬುವದು ಹೇಗೆ? ಕಾರ್ಯವಿಲ್ಲದಿರುವಲ್ಲಿ ಕಾರಣತ್ವವು, ಕಾರಣವಿಲ್ಲದಿರುವಲ್ಲಿ ಕಾರ್ಯತ್ವವು ಸಹ ಇವನಿಗೆ ಹೇಗೆ ಸಂಭವಿಸೀತು? ನನ್ನದೆನಿಸುವ ವಸ್ತುವಿಲ್ಲದ್ದರಿಂದ ನಾನೆಂದಿವನು ಪೇಳಲ್ಪಡನು? ನಾನೆಂಬುವದೇ ಇಲ್ಲದಿರುವಲ್ಲಿ ನನ್ನದೆಂಬ ಮಾತು ಅನ್ಯನೆಂಬ ಮಾತು ಸಹ ಹೇಗೆ ಉಂಟಾದೀತು? ಅತ್ಯಂತಿಕವಾಗಿ ದ್ವಿತ್ವವಿಲ್ಲವೆಂದು ಸ್ಥಾಪಿಸಲೋಸುಗ ಕೇವಲಾರ್ಥ ಬೋಧಕವಾದ ಏಕಶಬ್ದದಿಂದೀ ಆತ್ಮನಂ ಶ್ರುತಿಯು ಸೂಚಿಸುತ್ತಿರುವಲ್ಲಿ, ಇವನು ಒಬ್ಬನೆಂತಲೂ ಒಬ್ಬನಲ್ಲವೆಂತಲೂ ಪೇಳುವದು ಹೇಗೆ? ಭಿನ್ನಪದಾರ್ಥವೆ ಇಲ್ಲದಿರುವಲ್ಲಿ ಯಾವದಕ್ಕಿವನು ಸಮೀಪದಲ್ಲಿರುವನೆಂತಲೂ ದೂರದಲ್ಲಿರುವನೆಂತಲೂ ಪೇಳಬಹುದು. ಜ್ಞಾನಮಾತ್ರ ಗಮ್ಯನಾದ್ದರಿಂದಿವನು ಜ್ಞಾನಿಗೆ ಸಮೀಪಸ್ಥನೆಂತಲೂ ಅಜ್ಞಾನಿಗೆ ದೂರಸ್ಥನೆಂತಲೂ ಪೇಳಲ್ಪಡುವನು. ಜ್ಞಾನ್ಯಜ್ಞಾನಿ ಸ್ವರೂಪವಿಂದಿವನೇ ಇರುವನಾದ್ದರಿಂದ ಸಮೀಪ ದೂರ ಪ್ರಸ್ತಾಪಕ್ಕೆ ಅವಕಾಶವಿಲ್ಲದಿರುವದು. ಇದರಿಂದಲೇ ಇವನು ಪ್ರಾಪ್ಯನೆಂತಲೂ ಅಪ್ರಾಪ್ಯನೆಂತಲೂ ಪೇಳಲ್ಪಡುವದಿಲ್ಲ. ಭ್ರಾಂತಿ ಸಿದ್ಧವಾದ ಪ್ರಪಂಚವು ವಿಚಾರದಿಂ ಪೋಗುವದ್ದರಿಂದಲೂ ವಿಚಾರದಲ್ಲಿ ದಿವನನು ನಿಲ್ಲುವದ್ದರಿಂದಲೂ ಶಾಶ್ವತನೆಂದಿವನು ಪ್ರಸಿದ್ಧವಾಗಿರುವನು. ವಿಚಾ

ರಸರರೇ ಇರುವನೆಂದು ಇವನಂ ಪೇಳುವರಲ್ಲದೆ ಅಜ್ಞಾನಿಗಳೆಂದಿಗೂ ಪೇಳಲಾರರು. ಪೇಳತಕ್ಕ ಮತ್ತೊಬ್ಬನಿಲ್ಲವಾದ್ದರಿಂದ ಅಸ್ತಿನಾಸ್ತಿಯೆಂಬ ಪ್ರಸಂಗಕ್ಕೆವನು ದೂರನಾಗಿರುವನು. ವಿಚಾರದಲ್ಲಿ ಯಾವ ದೃಶ್ಯವೂ ಇಲ್ಲದಾದ್ದರಿಂದ ಸರ್ವವೂ ಇವನೆಂಬುವದು ಅಸಂಗತವಾಗುವದು. ಭಿನ್ನವಸ್ತುವ್ಯಾವದೂ ಇಲ್ಲದಿರುವಲ್ಲಿ ಸರ್ವವ್ಯಾಪಿಯುಂದಿವನಂ ಪೇಳಬಹುದೆ, ದೃಶ್ಯವೆಲ್ಲವೂ ಅಭಿನ್ನವಾಗಿರುವಲ್ಲಿ ವ್ಯಾಪಕನೆಂಬುವದರಿಂ ಪ್ರಯೋಜನವೇನಿರುವದು. ಈಪರಿಯಿಂದ ಯಾವ ಮಾತಿಗೂ ಅವಕಾಶವಿಲ್ಲದ್ದರಿಂದಲೂ, ಈ ಪರಮಾತ್ಮನು ತಾನೇ ಅಜ್ಞಾನಿಯಾಗಿರುವದ್ದರಿಂದಲೂ, ಯಾವದು ದೃಶ್ಯವೆನಿಸುವದೋ ಅವಕ್ಕೆ ತಾನು ಅತೀತನಾಗಿರುವೆನೆಂಬ ಅರ್ಥವಂ ಶ್ರುತಿ ಗುರುರೂಪದಿಂ ತಾನೇ ಪೇಳಿಕೊಳ್ಳುತ್ತಾ ವಿಚಾರದಿಂ ತಾನೇ ಮುಕ್ತನಾಗುವನೆಂದು ತಿಳಿದುಬರುತ್ತೆ. ಅದರಿಂದ ತಿಳಿದಿರುವರು ವಕ್ತೃವಚನ ವಾಚ್ಯದ್ರಷ್ಟೃದರ್ಶನ ದೃಶ್ಯಾದಿ ಸ್ವರೂಪದಿಂದಿವನೇ ಸ್ವೇಚ್ಛೆಯಿಂ ಪ್ರಕಾಶಿಸುತ್ತಿರುವನೆಂದು ಸ್ಥಾಪಿಸುವರು. ಎಲೈ ಮತಿಶಾಲಿಯೇ! ಸರ್ವವೂ ಪರಮಾತ್ಮನೆಂದು ತಿಳಿಯುವದರಲ್ಲೂ ಕೂಡ ನಾನೆಂಬುವದು ಬೇಕಾಗುವದಾದ್ದರಿಂದ ನಾನೆಂಬ ಜ್ಞಾನರೂಪದಿಂ ಪ್ರಕಾಶಿಸುವನೇ ಆತ್ಮನೆಂದು ನಿಶ್ಚೈಸಿ ಗಗನವು, ಸೂರ್ಯನು, ದಿಕ್ಕುಗಳು, ಪೃಥಿವ್ಯಪ್ತೇಜೋ ವಾಯುಗಳು, ದೇವದೈತ್ಯಾದಿ ಪ್ರಾಣಿಗಳು, ಗಿರಿ ನದೀ ಸಮುದ್ರಗಳು, ವೃಕ್ಷ ಲತೌಷಧಿಗಳು, ನಕ್ಷತ್ರ ಗ್ರಹಗಳು. ಮೇಘಮಂಡಲಗಳು, ಭೂಮಿಯ ಧೂಳಿಯು ಸುಖದುಃಖಾದಿ ವಿಕಾರಗಳು, ದ್ರಷ್ಟೃವು ಈ ತ್ರಿಪುಟಿಯಂ ತಿಳಿಯುವನೂ ಕೂಡಾ ನಾನಲ್ಲದೆ ಮತ್ತೊಂದಲ್ಲ. ಹೀಗೆ ಸರ್ವ ಪ್ರಪಂಚವೂ ನಾನೇ ಆಗುವಲ್ಲಿ ಭೇದವೆಂಬುವದೆಲ್ಲಿ ನಿಲ್ಲುವದು. ಅದೇ ಇಲ್ಲದಿರುವಲ್ಲಿ ನಾನೆಂದು ಭಾವಿಸುವದು ಹೇಗೆ? ದೇಹವೇ ನಾನೆಂಬ ತಾಮಸವಾದ ಅಹಂಭಾವವಂ ತೊಲಗಿಸಲೋಸುಗ ಸರ್ವಾತೀತನು ನಾನೆಂತಲೂ. ಸರ್ವಸ್ವರೂಪನು ನಾನೆಂತಲೂ, ಸಾತ್ವಿಕವಾದ ಅಹಂಭಾವಗಳು ಪ್ರಕಾಶಿಸುವವು. ಈ ಜ್ಞಾನಗಳಿಗೆ ಸಾಕ್ಷಿಯಾಗಿ ಇವುಗಳಂ ಪಿಡಿದಿರುವ ವಸ್ತುವೇ ನಾನೆನಿಸಿಕೊಳ್ಳುವದು. ಅದರಿಂದಲೇ ಈ ವಿಕಲ್ಪಗಳುಂಟಾಗಿರುವವು, ಇವುಗಳಿರುವವರಿಗೆ ಅಲ್ಲ ನಾನೆಂಬ ಜ್ಞಾನ ಉದಯಿಸುತ್ತಿರುವದೆಂದು ತತ್ವಾರ್ಥವಂ ವಿಚಾರಿಸುತ್ತಿರುವನಾಗು. ಆಗ ನಿನಗೆ ಜಗವೆಲ್ಲವೂ ಅಸತ್ತೆಂಬ ವಿಷಯವು ಗೊತ್ತಾಗಿ ಹೃದಯದಲ್ಲಿರುವ ಅಜ್ಞಾನ ಗ್ರಂಥಿಯು ನಿಶ್ಶೇಷವಾಗುವದು. ಎಲೈ ರಾಮಭದ್ರನೇ! ಈ ಆತ್ಮನು ಪದಾರ್ಥಗಳ ರುಚಿಯಂತೆ ಸ್ವಾನುಭವ ಮಾತ್ರ ಗೋಚರನಲ್ಲದೆ ಪ್ರತ್ಯ

ಕ್ಷಾದಿ ಪ್ರಮಾಣಗಳಿಂ ಸಾಧ್ಯನಾಗಲಾರನು. ಆದ್ದರಿಂದಲೇ ಅಪ್ರಮೇಯನೆನಿಸುವನು. ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಪದಾರ್ಥಗಳಂ ನಿಷೇಧಿಸುತ್ತಾ ಅಖಿಲ ಜ್ಞಾನಿಗಳಿಗೆ ಸಾಕ್ಷಿಯಾರೆಂದು ಪರಿಭಾವನೆಯಂ ಮಾಡುತ್ತಿರುವಲ್ಲಿ ಪ್ರಮಾಣರೂಪವಾದ ವೃತ್ತಿಗಳುಳ್ಳದ್ದು ಮನವೆಂದು ಗೊತ್ತಾಗಲು ಆ ಮನಕ್ಕೆ ಯಾವದರಿಂ ಚೈತನ್ಯವೆಂದಾಲೋಚಿಸುತ್ತಿರುವನಿಗೆ ಮನವು ದೃಶ್ಯಕಲ್ಪನೆಯುಂ ಬಿಟ್ಟು ಚಿನ್ಮಾತ್ರಸ್ವರೂಪದಿಂ ಪ್ರಕಾಶಿಸುವದು. ಆಗ ದ್ವಿತೀಯವಸ್ತುವಾಸನೆ ಇಲ್ಲದ್ದರಿಂ ದುಃಖಾತ್ಯಂತಾಭಾವರೂಪವಾದ ಸಹಜಾನಂದವು ಪ್ರಕಾಶಿಸುವದು. ಅದನ್ನನುಭವಿಸುವನೇ ಆತ್ಮನೆಂದು ಸ್ವರೂಪವಂ ನಿರ್ಧರಿಸಿ ಆ ಸುಖವನ್ನನುಭವಿಸುತ್ತಿರುವನಿಗೆ ಸರ್ವವೂ ಬ್ರಹ್ಮಾತ್ಮಕವಾಗಿಯೇ ಕಾಣಿಸುತ್ತಿರುವದು. ಹೀಗೆ ಸ್ವಾಭಿನ್ನವಾದ ಚಿತ್ತದಿಂ ಸ್ವರೂಪವಂ ನೋಡಿಕೊಳ್ಳುವನಾದ್ದರಿಂದಾತ್ಮನು ಅಪರೋಕ್ಷ ಜ್ಞಾನಗೋಚರನೆನಿಸುವನು. ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಇಂದ್ರಿಯಾದಿಗಳು ಸಹಾಯವಾಗಬೇಕು. ಆತ್ಮಜ್ಞಾನಕ್ಕೆ ಇತರ ಸಹಾಯಾಪೇಕ್ಷೆಯಿಲ್ಲದ್ದರಿಂದ ಅಪರೋಕ್ಷಾನುಭವವೇ ಮುಖ್ಯ ಸಾಧನವೆನಿಸುವದು. ಪ್ರತ್ಯಕ್ಷಾದಿ ಪ್ರಮಾಣಗಳು ಬಾಹ್ಯವಾದ ದೃಶ್ಯಾದಿಗಳ ತಿರಸ್ಕಾರಕ್ಕೆ ಉಪಯುಕ್ತವಾದ್ದರಿಂದ ಆವಶ್ಯಕವಾಗುವವು. ಅಪರೋಕ್ಷಾನುಭವಗೋಚರನಾದ್ದರಿಂದಾತ್ಮನು ಪ್ರತ್ಯಕ್ಷನೆಂತಲೇ ಜ್ಞಾನಿಗಳಿಂ ಹೇಳಲ್ಪಡುವನು. ಸತ್ತಾವಿಚಾರದಿಂ ಜ್ಞಾನಸ್ವರೂಪನಾದ ಆತ್ಮನಿಗೆ ಪ್ರಮಾತೃ ಪ್ರಮಾಣ ಪ್ರಮೇಯಗಳೆಲ್ಲವೂ ಅಭಿನ್ನವಾದ್ದರಿಂದ ಈ ಅಭೇದರೀತಿಯುಂ ತಿಳಿದ ವಿವೇಕಿಗಳು ಆಘ್ರಾಣಿಸುವನು, ಭಕ್ಷಿಸುವನು, ನೋಡುವನು, ಮುಟ್ಟುವನು, ಕೇಳುವನು, ವಿಚಾರಿಸುವನು, ತಿಳಿಯುವನು, ಇತರ ಕಾರ್ಯಗಳಂ ಮಾಡುವನೂ ಸಹ ಆತ್ಮನೆಂತಲೇ ಸ್ಥಾಪಿಸುವರು. ಆದ್ದರಿಂದಾತ್ಮನು ಸರ್ವಾನುಭವಸಿದ್ಧನಾಗಿ ಪ್ರತ್ಯಕ್ಷನೆನಿಸುವನು. ಎಲೈ ರಾಜೀವಾಕ್ಷನೇ ! ಆ ಆತ್ಮನೇ ಇದೆಲ್ಲವಂ ಹೇಳುತ್ತಿರುವನಾದಾಗ್ಯೂ ತಾನು ಹೇಳಿಸಿಕೊಳ್ಳದಿರುವನು. ಇದೇಪ್ರಕಾರ ಸರ್ವರೂಪನಾದಾಗ್ಯೂ ಸರ್ವಾತೀತನಾಗಿರುವನು. ಸ್ವಶಕ್ತಿಯಿಂದಿತರ ಪದಾರ್ಥವಂ ಕಲ್ಪಿಸಿಕೊಂಡಿರುವ ಆ ಪರಮಾತ್ಮನೇ ಆತ್ಮಾನಾತ್ಮ ಸಂಜ್ಞೆಗಳಂ ಮಾಡಿಕೊಂಡಿರುವನು. ಸರ್ವವ್ಯಾಪಿಯಾಗಿದ್ದಾಗ್ಯೂ ಸ್ಥೂಲದೃಷ್ಟಿಗಳಿಂದಿವನು ತಿಳಿಯಲಶಕ್ಯನಾಗಿರುವನು. ಕನ್ನಡಿಯಲ್ಲಿ ಗಗನದಂತೆ ಪುರ್ಯಷ್ಟಕದಲ್ಲಿ ಪ್ರತಿಬಿಂಬಿಸಿರುವ ಈ ಆತ್ಮನು ಜೀವನೆನಿಸುವನು. ಮೇಘ ಚಲನದಿಂ ವಾಯುವಿನಂತೆ ಅಹಂಕಾರಪೂರ್ವಕವಾದ ಪ್ರವೃತ್ತಿಯಿಂದೂಹಿಸಲ್ಪಡುವನು. ಸತ್ತಾರೂಪದಿಂ ಸಕಲ

ದಿಗ್ದೇಶಕಾಲ ವ್ಯಾಪಕನಾದ ಈ ಆತ್ಮನು ದೀಪವಿರುವಲ್ಲಿ ನೇತ್ರದಂತೆಯೂ, ಗಾಳಿ ಇರುವಲ್ಲಿ ರಜನಂತೆಯೂ, ಪುರ್ಯಷ್ಟಕವಿರುವ ಸ್ಥಳದಲ್ಲಿಯೇ ಚಲಿಸುವದ್ದರಿಂದ ಶರೀರಗಳಲ್ಲೇ ಇರುವನೆಂದು ಅಜ್ಞರು ಹೇಳುವರು. ಸೂರ್ಯೋದಯದಿಂ ಲೋಕವ್ಯವಹಾರದಂತೆ ಆತ್ಮಸಾನ್ನಿಧ್ಯದಿಂದಲೇ ಪುರ್ಯಷ್ಟಕದಲ್ಲಿ ಇಚ್ಛಾದಿ ವ್ಯಾಪಾರಗಳು ಕಾಣುತ್ತಿರುವವು. ಲೋಕವ್ಯವಹಾರ ನಾಶದಿಂ ಸೂರ್ಯನಂತೆ ದೇಹಾದಿ ನಾಶದಿಂದಾತ್ಮನು ನಷ್ಟನಾಗಲಾರನು. ಈ ಆತ್ಮನಿಗೆ ಆದಿಯಿಲ್ಲದ್ದರಿಂದ ಅಜನೆನಿಸುವನು, ಜನ್ಮವೇ ಇಲ್ಲದ್ದರಿಂದ ಮೃತ್ಯುವೂ ಇಲ್ಲವೆಂದು ಹೇಳಲ್ಪಡುವನು, ಸ್ವಭಿನ್ನವಾದ ವಸ್ತುವಿಲ್ಲದ್ದರಿಂದಿವನು ನಿರಪೇಕ್ಷನೆನಿಸುವನು, ಅಪೇಕ್ಷೆಯೇ ಇಲ್ಲದವನಿಗೆ ಬಂಧನೆಂತುಂಟಾದೀತು? ಬಂಧವೇ ಇಲ್ಲದವನಿಗೆ ಮುಕ್ತಿಯೆಂತಾದೀತು? ಇವನ ಸ್ವರೂಪವಂ ತಿಳಿಯದವರೇ ತಾವು ಬದ್ಧರೆಂದು ಮೋಕ್ಷಸಾಧಕವಾದ ವ್ಯಾಪಾರಗಳಲ್ಲಿ ಪ್ರವೃತ್ತರಾಗುವರು. ತಿಳಿದವರು ಜಲಯಂತ್ರಾದಿಗಳಂತೆ ಸ್ವವ್ಯಾಪಾರಗಳಂ ನಡೆಸುತ್ತಿದ್ದಾಗ್ಯೂ ಅಸಂಗಯೋಗದಿಂ ತಟಸ್ಥರಾಗಿರುವರು. ಆದ್ದರಿಂದ ಸ್ವಸ್ವರೂಪ ಜ್ಞಾನಾಭ್ಯುದಯವನ್ನೇ ಮೋಕ್ಷವೆಂದು ತಿಳಿಯುವನಾಗು? ಇದು ವಿಚಾರದಿಂದಲೇ ಆಗತಕ್ಕದ್ದಾದ್ದರಿಂದ ಬ್ರಹ್ಮಲೋಕವನ್ನೇರಿದರೂ ಪಾತಾಳವಂ ಪೊಕ್ಕರೂ ಪುಣ್ಯಕ್ಷೇತ್ರವಂ ಪ್ರವೇಶಿಸಿದರೂ ಆಗತಕ್ಕದ್ದಲ್ಲವೆಂದು ನಿಶ್ಚಯಿಸುವನಾಗು. ಎಲೈ ಮಹಾಮತಿಯೇ! ಅಖಂಡಸ್ವರೂಪಜ್ಞಾನದಿಂ ದ್ವಿತೀಯ ಪದಾರ್ಥ ಸ್ಫೂರ್ತಿಯಾಗದಿರಲು, ಮನನವಿಲ್ಲದ್ದರಿಂ ಮನಸ್ಸಿಗೆ ಕ್ಷಯವಾಗುವದೇ ಮೋಕ್ಷವೆನಿಸುವದು. ಜ್ಞಾನೋದಯವಾಗದಿರುವವರಿಗೆ ಅತಿದೀನರಾದ ಜನರು ಭಕ್ತಿಯಿಂದ ಮೋಕ್ಷವನ್ನಪೇಕ್ಷಿಸುವರು, ಸತ್ಸಹವಾಸಾದಿಗಳಿಂ ಜ್ಞಾನೋದಯವಾಗುವಲ್ಲಿ ಬಂಧ ಮೋಕ್ಷಗಳೆರಡೂ ಅಜ್ಞಾನಕಲ್ಪಿತವೆಂದು ತಿಳಿದು ತಾವು ನಡದ ನಡತೆಯಿಂ ತಾವೇ ನಗುವರು. ಎಲೈ ರಾಮನೇ! ನೀನು ತಿಳಿದಿರುವೆಯಾದ್ದರಿಂದ ಅಸಂಗಯೋಗದಿಂದಾತ್ಮಾರಾಮನಾಗಿ ರಾಜ್ಯಭಾರವಂ ಮಾಡುತ್ತಿರುವನಾಗು? ನಿದ್ರೆಯಿಂದೆದ್ದು ಕನ್ನಡಿಯಂ ನೋಡಿಕೊಳ್ಳದಿರುವನಿಗೆ ತನ್ನ ಮುಖವು ಮಲಿನವಾಗಿದ್ದೀತೆಂದು ಸಂದೇಹ ಉಂಟಾಗುವದು. ಮತ್ತೂ ಪರಹಿತನಾದವನಿಗೆ ದೇಶಾಂತರದಲ್ಲಿರುವ ಅತಿಪ್ರೇಮಪಾತ್ರನಾದ ಜನವು ದುಃಖಪಡುತ್ತಿರುವದಾಗಿಯೇ ತೋರುವದು, ಹೀಗೆ ಅವಿದ್ಯೆಯೊಳ್ ಕಾಮಕರ್ಮ ವಾಸನೆಯಿಂದ ಲೀನನಾಗಿದ್ದ ಪುರುಷನಿಗೆ ಸರ್ಗಾದಿ ನಿದ್ರಾಂತಗಳಲ್ಲಿ ಸ್ವರೂಪಸ್ಮರಣೆಯುಂಟಾಗುವದು. ಆದ್ದರಿಂದ ಪುರುಷನು ಪ್ರಾಣಕಾಂತನಂ ಚಿಂತಿಸುವ ಕಾಮಿ

ನಿಯಂತೆ ಸ್ವಶರೀರವಂ ಚಿಂತಿಸುವನು. ಬಳಿಕ ಆ ಪ್ರಾಣಕಾಂತನಂತೆ ನಿಜಶರೀರವು ಸಿದ್ಧವಾಗುವದು, ಅದರ ಸಂಬಂಧದೊಳ್ ಸುರಾಪಾನದಿಂ ಮದದಂತೆ ಅದೇ ತಾನೆಂಬ ಬುದ್ಧಿಯುಂಟಾಗುವದು. ಈರೀತಿಯಿಂ ಪರಮಾತ್ಮನಿಗೆ ಸ್ವಾಭಾವಿಕವಾದ ಜ್ಞಾನಶಕ್ತಿಯಿಂದಲೇ ಬಹುರೂಪನಾಗಬೇಕೆಂಬ ಇಚ್ಛೆಯುಂಟಾಗುವದು. ಕೂಡಲೇ ಆ ಮಹೇಶ್ವರನಿಗೆ ಸೂಕ್ಷ್ಮ ಸಮಷ್ಟಿರೂಪವಾದ ಹಿರಣ್ಯಗರ್ಭಶರೀರವುಂಟಾಗುವದು. ಅದರಿಂದ ಮನೋಬುದ್ಧಿ ಚಿತ್ತಾಹಂಕಾರೇಂದ್ರಿಯ ಕರ್ಮವಾಸನೆಗಳುಂಟಾಗುವವು. ಶಕ್ತಿಶಕ್ತಿಮಂತರಿಗೆ ಅಭೇದವಾದ್ದರಿಂದಾತ್ಮನೇ ಈ ಅಂತಃಕರಣಾದಿ ರೂಪದಿಂ ಪ್ರಕಾಶಿಸುವನೆಂದು ಹೇಳುವರು. ಬಟ್ಟೆ ಬಣ್ಣಗಳು ಬೇರೆಯೆಂದು ಹೇಳುವರಲ್ಲದೆ ಬೇರೆಯಾಗಿ ತೆಗೆದುಕೊಳ್ಳುವದಕ್ಕೆ ಆಗುವದಿಲ್ಲವಾದ್ದರಿಂದ, ಗುಣಿಗುಣಗಳಿಗೆ ಅಭೇದವೆಂತಲೇ ನಿಶ್ಚಯಿಸತಕ್ಕದ್ದು, ವೃತ್ತಿಭೇದದಿಂ ಭಿನ್ನವಾದ ಅಂತಃಕರಣಗಳಲ್ಲೂ ಒಂದಕ್ಕೊಂದು ಸೇರಿಕೊಂಡೊಂದರ ನಾಶದಿಂ ಮತ್ತೊಂದೂ ನಷ್ಟವಾಗುವದ್ದರಿಂದಲೂ, ಆ ಭೇದವನ್ನೇ ನಿಶ್ಚಯಿಸತಕ್ಕದ್ದು. ಆತ್ಮನ ಇಚ್ಛಾಶಕ್ತಿಯೇ ಮನನವಾಗಿರುವದು, ಮನವು ಚಿಂತಿಸಿದಂತೆ ಸಂಸಾರವೆಲ್ಲವೂ ವೃದ್ಧಿಯಾಗಿರುವದು. ಅದರಿಂದಲೇ ಬಂಧ ಮೋಕ್ಷ ವಿಚಾರಗಳುಂಟಾಗಿರುವವು. ಸಂಕಲ್ಪ ಲೇಶವಿದ್ದಾಗ್ಯೂ ಮನಸ್ಸಿಗೆ ವೃದ್ಧಿ ತಪ್ಪದು. ಮನವಿರುವವರಿಗೆ ಯಾರಿಗೂ ದುಃಖ ತಪ್ಪದು, ಆದ್ದರಿಂದ ಭೇದಜ್ಞಾನರೂಪವಾದ ಮನವು ನಿರ್ಮೂಲವಾಗುವಂತೆ ವಿಚಾರವಂ ಮಾಡುತ್ತಾ ಮನವೇಳುವದಕ್ಕೆ ಮೂಲವಾದ ದ್ವಿತೀಯ ಪದಾರ್ಥ ಜ್ಞಾನವಂ ಬಿಡುವನಾಗು ? ಪರಮಾತ್ಮನು ಸ್ವೇಚ್ಛಾಮಾತ್ರದಿಂ ಬಹುರೂಪನಾದಾಗ್ಯೂ ಸ್ವರೂಪಾಜ್ಞಾನ ರೂಪವಾದ ಮಾಯೆಯಂ ಸ್ವಾಧೀನವಾಗಿಟ್ಟುಕೊಂಡು ತನ್ನ ಅಖಂಡಭಾವವಂ ಬಿಡದಿರುವನಾದ್ದರಿಂದ, ಪರಿಪರಿಯಾಗಿ ವಿಹರಿಸುತ್ತಿದ್ದಾಗ್ಯೂ ನಿತ್ಯಾನಂದನಾಗಿರುವನು. ಅಂತಃಕರಣ ಪ್ರಾಣೇಂದ್ರಿಯ ವಿಷಯಗಳೇ ಜನನ ರೂಪಗಳು, ಇವುಗಳೇ ಪ್ರಪಂಚರೂಪದಿಂದಿರುವವಲ್ಲದೆ ಮತ್ತೊಂದಿಲ್ಲ. ಸೂರ್ಯನಿಗೆ ಕಿರಣಗಳಂತೆ ಆ ಪರಮಾತ್ಮನಿಗೆ ಅಭಿನ್ನರಾದ ಆತ್ಮರುಗಳಲ್ಲಿ ಆ ಮಾಯೆಯೇ ಅವಿದ್ಯೆಯೆನಿಸಿಕೊಂಡಿರುವದು. ಅದರಿಂ ವಿಷಯಾಪೇಕ್ಷೆಯುಂಟಾಗುವಲ್ಲಿ, ಸಂಕಲ್ಪರೂಪವಾದ ಮನದಿಂದಹಂಕಾರಪರರಾಗಿ ಸ್ವರೂಪಜ್ಞಾನವಿಲ್ಲದೆ ವಿಷಯಾಭಿಮಾನದಿಂ ಬದ್ಧರಾಗುವರು. ವಿಚಾರದಿಂ ಸ್ವರೂಪ ಜ್ಞಾನವಿಲ್ಲದೆ ವಿಷಯಾಭಿಮಾನದಿಂ ಬದ್ಧರಾಗುವರು, ವಿಚಾರದಿಂ ಸ್ವರೂಪವಂ ತಿಳಿದವರು ಅಹಂಕಾರವಿಲ್ಲದೆ ಆತ್ಮಾರಾ

ನುರಾಗಿ ಮುಕ್ತರೆನಿಸುವರು. ಜ್ಞಾನಸ್ವರೂಪನಾದ ಪರಮಾತ್ಮನಿಗೆ ಸಹಜವಾದ ಜ್ಞಾನಶಕ್ತಿಯೇ ಹೀಗೆ ಮಾಯಾವಿದ್ಯಾ ರೂಪಗಳಿಂದುಪಾಧಿಯಾಗಿರುವದು. ವಿಷಯ ಸ್ಫೂರ್ತಿಯೊಳವುಗಳು ನಿಸ್ಥವಾಗ ಸ್ವರೂಪವಂ ಮರಸಿ ವಿಷಯಾಭಿಮಾನವಂ ವೃದ್ಧಿಪಡಿಸುವವು. ಜ್ಞಾನೇಚ್ಛಾ ಕ್ರಿಯಾಶಕ್ತಿಗಳು ಸಹಜವಾದ್ದರಿಂದುಂಟಾಗುವ ವಿಷಯಸ್ಫೂರ್ತಿಯೋಳ್ವಿಚಾರಪರರಾದವರು ಕೆಲವರು ತಟಸ್ಥರಾಗುವರು. ಕೆಲವರು ಆಸಕ್ತರಾಗುವರು, ಹೇಗಿದ್ದಾಗ್ಯೂ ಅದ್ವಿತೀಯಭಾವದಿಂದ ಅಹಂಕಾರವಿಲ್ಲದವರು ಕೃತಾರ್ಥರೆನಿಸುವರು. ಅಹಂಕಾರಕ್ಕೆ ಸಹಜವಾದ ಬಂಧ ಮೋಕ್ಷಗಳೆರಡೂ ಅಜ್ಞಾನಿಕವಾದ್ದರಿಂದ, ಮೋಕ್ಷಾಪೇಕ್ಷೆಯೂ ಕೂಡ ವ್ಯಾಜವೆನಿಸುವದು. ಸರ್ವಾತೀತನೆಂತಲಾಗಲೀ ಸರ್ವ ಸ್ವರೂಪನೆಂತಲಾಗಲೀ ಹೇಗೆ ಆತ್ಮನನ್ನಂಗೀಕರಿಸಿದಾಗ್ಯೂ ದ್ವಿತೀಯ ಪದಾರ್ಥವೇ ಇಲ್ಲದ್ದರಿಂದ ಬಂಧ ಮೋಕ್ಷ ಪ್ರಸ್ತಾಪವೇ ಅಸಂಗತವಾಗುವದು. ಸರ್ವವೆಂತಲೂ, ಆತ್ಮನೆಂತಲೂ, ಎರಡು ಪದಾರ್ಥಗಳನ್ನು ಗ್ರಹಿಸುವಲ್ಲಿ, ಸರ್ವಾತೀತನೆಂತಲೂ ಸರ್ವಸ್ವರೂಪನೆಂತಲೂ ಆತ್ಮನು ಹೇಳಲ್ಪಡುವನು. ಆತ್ಮನ ಜ್ಞಾನಮಾತ್ರ ಸ್ವರೂಪವಂ ತಿಳಿಸಲೋಸುಗ ಇಲ್ಲದ ಜಡಪದಾರ್ಥವಂ ಕಲ್ಪಿಸಿಕೊಂಡು ಅದಕ್ಕೆ ಭಿನ್ನನೆಂದು ಆತ್ಮನಂ ಹೇಳುವದು. ಜ್ಞಾತೃ ಜ್ಞಾನ ಜ್ಞೇಯ ವಿಕಲ್ಪಗಳಿಲ್ಲದೆ ಕೇವಲ ಜ್ಞಪ್ತಿರೂಪನಾದ ಆತ್ಮನ ವಿಚಾರದಲ್ಲಿ ಜ್ಞಾನಶಕ್ತಿ ಮೊದಲಾದವುಗಳೂ ಕೂಡ ಉಪದೇಶಾರ್ಥವಾಗಿ ಕಲ್ಪಿತವಾಗಿರುವವೆಂದು ನಿಶ್ಚಯಿಸತಕ್ಕದ್ದು. ಗಾಢ ನಿದ್ರೆಯಲ್ಲಿರುವನಿಗೆ ಕರಣಕರಣಾದಿಗಳೆಲ್ಲವೂ ಇದ್ದಾಗ್ಯೂ ಹೇಗೆ ಇಲ್ಲದಿರುವವೋ? ಹೇಗೆ ಅಖಂಡಭಾವದಿಂದಾತ್ಮನಿಗೆ ದೇಹವೂ ಇಲ್ಲದಿರುವದು. ಅದ್ದರಿಂದಲೇ ಅವನು ಅನಂತನೆಂದು ಹೇಳಲ್ಪಡುವನು. ಇವನಂ ನೋಡುವನು ಮತ್ತೊಬ್ಬನಿಲ್ಲವಾದ್ದರಿಂದ ಇವನು ಇಥಾನೆಂದು ಹೇಳುವದಕ್ಕೂ ಕೂಡ ಅವಕಾಶವಿಲ್ಲದಿರುವದು. ಹೀಗಿರುವಲ್ಲಿ ಇವನಲ್ಲಿಂಥಾ ಶಕ್ತಿ ಮೊದಲಾದ್ದು ಇದೆಯೆಂದು ಹೇಳುವದಕ್ಕೆ ಹ್ಯಾಗಾದೀತು! ಮತ್ತೊಬ್ಬನಿಲ್ಲದ್ದರಿಂದವನು ಸ್ವರೂಪ ಪ್ರಕಾಶಾರ್ಥವಾಗಿ ಶ್ರುತಿರೂಪದಿಂ ತಾನೇ ಪ್ರಕಾಶಿಸುವನು. ಜಗದ್ರೂಪದಿಂ ಪ್ರಕಾಶಿಸುವದು, ಅವನಿಗೆ ಸ್ವಾಭಾವಿಕವಾದ್ದರಿಂದ ಬಹುರೂಪನಾಗಬೇಕೆಂದವನಿಗೆ ಇಚ್ಛೆಯುಂಟಾಗುವದು. ಇಚ್ಛೈಸಿದಂತೆ ಸಿದ್ಧಿಯಾಗುವದ್ದರಿಂದಲೂ ಅಖಂಡ ಭಾವಕ್ಕೆ ಚ್ಯುತಿ ಇಲ್ಲದ್ದರಿಂದಲೂ ಬಹುರೂಪದಿಂ ಕ್ರೀಡಿಸುವಲ್ಲಿಯೂ ಆತ್ಮಾರಾಮನಾಗಿಯೇ ಇರುವನು. ಜಡವೆಂದು ಕಲ್ಪಿತವಾದ ದೇಹವಂ ತಾನೆಂದು ಗ್ರಹಿಸಿರುವ ಜೀವನಿಗೆ ಇಚ್ಛಾಸಿದ್ಧಿ ಇಲ್ಲದ್ದರಿಂದಲೂ

ಸ್ವರೂಪಜ್ಞಾನವಿಲ್ಲದ್ದರಿಂದಲೂ ಕಾಮಕ್ರೋಧಾದಿಗಳಿಂ ದುಃಖಪಡುತ್ತಿರುವನು. ಇವನಿಗೆ ವಿಚಾರದಿಂ ಸ್ವರೂಪ ಜ್ಞಾನವಾಗುವಲ್ಲಿ ಸಹಜವಾದ ಆನಂದವನ್ನೇ ಪಡೆವನು. ಜೀವನು ದುಃಖಪಡುವದಕ್ಕೆ ಭೇದಜ್ಞಾನ ಪ್ರಕಾಶಕವಾದ ಮನವೇ ಕಾರಣವಾದ್ದರಿಂದ ವಿಚಾರಬಲದಿಂ ಮನದ ಮನನವಂ ತಪ್ಪಿಸತಕ್ಕದ್ದು. ಪ್ರಾಣವಾಯುವು ವಾಯುವು, ಲತೆಯನ್ನಲ್ಲಾಡಿಸುವಂತೆ ಶರೀರವನ್ನಲ್ಲಾಡಿಸುವದಲ್ಲದೆ ಮೇರುವಿನಂತೆ ಸ್ಥಿರನಾದ ಆತ್ಮನನ್ನಲ್ಲಾಡಿಸಲಾರದು. ಆತ್ಮನು ಚಿದ್ರೂಪನಾದ್ದರಿಂದ ದೀಪದಂತೆ ಸಕಲ ಪದಾರ್ಥವನ್ನು ತೋರುವನಲ್ಲದೆ ತಾನು ಯಾವದನ್ನೂ ಗ್ರಹಿಸುವನಲ್ಲ. ಆತ್ಮನು ತಟಸ್ಥನಾದ್ದರಿಂದಲೂ ಪದಾರ್ಥಗಳೆಲ್ಲವೂ ಅಲ್ಲೇ ಇರುವದ್ದರಿಂದಲೂ ಪದಾರ್ಥಗಳು ಪ್ರತಿಬಿಂಬ ಸಮಾನವೆನಿಸುವವು, ಸರ್ವ ಪದಾರ್ಥಗಳೂ ಆತ್ಮನಿಗೆ ಅಭಿನ್ನವಾಗಿರುವಲ್ಲಿ, ಇವು ಭಿನ್ನವೆಂಬ ಭ್ರಾಂತಿಯಿಂದಲೇ ಆತ್ಮನಲ್ಲಿ ಕರ್ತೃತ್ವಾದಿಗಳು ಆರೋಪಿತವಾಗುವವು. ಆದರಿಂದಲೇ ಮನನವೆಂಬ ಮೃಗವು ವಿಷಯಗಳೆಂಬ ಬಿಸಲು ದೊರೆಗಳನ್ನೋಡಿ ಓಡುತ್ತಿರುವದು. ವಿಚಾರದಿಂ ಸ್ವರೂಪವು ತಿಳಿಯಲು ಬ್ರಾಹ್ಮಣ ಸಮೂಹದಿಂ ಚಂಡಾಲಿಯಂತೆ ಅವಿದ್ಯೆ ಓಡಿಹೋಗುವದು. ಬಳಿಕ ಮರುಭೂಮಿಯ ಬಿಸಲು ತೊರೆಯಂತೆ ಕಾಣುತ್ತಿದ್ದರೂ ಮನಕ್ಕೆ ಆಶೆಯನ್ನುಂಟುಮಾಡದಿರುವಂತೆ ವಿಷಯಗಳು ಪ್ರಕಾಶಿಸುತ್ತಿದ್ದರೂ ನಿರರ್ಥಕಗಳಾಗುವವು. ಇದರಿಂದ ಅವಿದ್ಯೆಯ ಸ್ಥಿತಿಯಿಂದಲೇ ಲೋಕಸ್ಥಿತಿಯೆಂದು ಗೊತ್ತಾಗುವದಲ್ಲವೆ? ಅವಿದ್ಯೆಯ ಸ್ಥಿತಿಯಂ ವಿಚಾರಿಸುವಲ್ಲಿ ಅವಿದ್ಯೆಗೆ ಸೃಷ್ಟಿಕ್ರಮವೇ ಸ್ವರೂಪವೆಂತಲೂ ಪರಮಾರ್ಥವಾಗಿ ಅದೇ ಇಲ್ಲವೆಂತಲೂ ಗೊತ್ತಾಗುವದು. ಈ ಅರ್ಥದಲ್ಲಿ ನಿಶ್ಚಯ ಜ್ಞಾನದಿಂದ ಅವಿದ್ಯೆಯು ಬಿಸಲಿಂ ಮಂಜಿನಂತೆ ನಿರ್ನಾಮವಾಗುವದು. ಈ ವಿಷಯದಲ್ಲಿ ತಿಳಿದವರು ಹೇಳುವ ಯುಕ್ತಿಗಳಂ ಗ್ರಹಿಸುವನಾಗು. ಎಲೈ ಮಹಾಮತಿಯೇ! ಲೋಕದೊಳ್ ಜ್ಞಾನವೆಂತಲೂ, ಅಜ್ಞಾನವೆಂತಲೂ, ಎರಡು ಪದಾರ್ಥಗಳು ಪ್ರಸಿದ್ಧವಾಗಿರುವವು. ಇದರೊಳ್ ಜಡವಲ್ಲದ್ದರಿಂದ ಬ್ರಹ್ಮವೇ ಜ್ಞಾನವೆನಿಸುವದು. ನಞ್ಸಮಾಸವನ್ನಂಗೀಕರಿಸುವಲ್ಲಿ ಜ್ಞಾನವೆಂಬ ಪದದಿಂದಲೇ ಅಜ್ಞಾನಪದವುಂಟಾಗುವದು. ಈ ನಞ್ಸಮಾಸವು ಅದಕ್ಕೆ ಸಮಾನವೆಂತಲೂ ಅದು ಇಲ್ಲವೆಂತಲೂ, ಅದಕ್ಕೆ ಭಿನ್ನವೆಂತಲೂ, ಅದಕ್ಕಿಂತ ಕಡಮೆಯೆಂತಲೂ, ಅದರಂತಿದು ಪ್ರಶಸ್ತವಲ್ಲವೆಂತಲೂ, ಅದಕ್ಕಿದು ವಿರುದ್ಧವೆಂತಲೂ ಆರು ಪ್ರಕಾರವಾಗಿ ಅಜ್ಞಾನದ ಸ್ವರೂಪವಂ ತೋರುವದು. ಪ್ರತ್ಯಕ್ಷ ಸಾಕ್ಷಿಕವಾದ್ದರಿಂದಲೂ, ಅದ್ವಿತೀಯವಾದ್ದರಿಂದಲೂ, ಆರು ಪ್ರ

ಕಾರವಾದ ಅರ್ಥಗಳಲ್ಲಿ ಯಾವದೂ ಸಂಭವಿಸಲಾರದು. ಹೀಗಿರುವಲ್ಲಿ ಅಜ್ಞಾನವೆಂಬ ಪದಾರ್ಥವಂ ಪರಿಗ್ರಹಿಸುವದು ಹೇಗೆ? ಅದರಿಂದ ಅಜ್ಞಾನವು ಅದಕ್ಕೆ ಕಾರ್ಯವಾದ ಜಗವೂ ಕೂಡ ಬ್ರಹ್ಮವೆಂತಲೇ ಸ್ಥಾಪಿಸಲ್ಪಡುವದು. ಈ ಜ್ಞಾನಾಜ್ಞಾನಗಳೆರಡೂ ಮನೋವೃತ್ತಿಗಳೆಂಬ ಪಕ್ಷದಲ್ಲಿ ಪ್ರಕೃತೋಚಿತವಾಗಿ ಯಾವ ಅರ್ಥವನ್ನಾದರೂ ಗ್ರಹಿಸಬಹುದು. ಬ್ರಹ್ಮವಿಚಾರದೊಳ್ ಮನವೇ ನಿರ್ನಾಮವಾಗುವದ್ದರಿಂದ ಇಲ್ಲಿ ಯಾವ ಅರ್ಥವನ್ನೂ ಗ್ರಹಿಸಕೂಡದು. ಈ ಅಜ್ಞಾನವೇ ಮಾಯೆಯೆಂತಲೂ ಅವಿದ್ಯೆಯೆಂತಲೂ ಹೇಳಲ್ಪಡುವದು. ಈ ಪದಗಳೇ ಮಾಯಾವಿದ್ಯೆಗಳಿಲ್ಲವೆಂಬ ಅರ್ಥವಂ ವಿವರಿಸುವವು. ಅದಂ ವಿಚಾರಿಸದೆ ಅದರಿಂದೀದುಃಖ ಉಂಟಾಗಿಹೆ ಎಂಬ ಜನಗಳು ಗೊಡ್ಡೀಮಗನು ಮೊಲದ ಕೊಂಬಿನಿಂ ತಿವಿದದ್ದರಿಂದ ದುಃಖಪಡುವೆನೆಂದು ಹೇಳುವರಂತೆ ಅಪಹಾಸ್ಯರಾಗಿರುವರು. ಅದ್ದರಿಂ ನೀನು ಅಜ್ಞಾನಿಗಳ ದಾರಿಗೆ ಪೋಗದೆ ಪರಮಾರ್ಥ ವಿಚಾರದಿಂ ಸರ್ವವೂ ಬ್ರಹ್ಮವೆಂದು ನಿರ್ಧರಿಸಿ ಸುಖದಿಂದಿರುವನಾಗು. ಆತ್ಮನು ಸರ್ವಾತೀತನೆಂಬುವನಿಗೆ ಸರ್ವವೂ ಅಸತ್ಯವಾಗುವದು. ಸರ್ವ ಸ್ವರೂಪನೆಂಬುವನಿಗೆ ಅಖಂಡಭಾವ ಉಂಟಾಗುವದು. ಯಾವರೀತಿಯಿಂದಲೂ ಎರಡನೇ ಪದಾರ್ಥವಿಲ್ಲದ್ದರಿಂದಾಸೆ ತಪ್ಪುವದು. ಆಸೆ ಇಲ್ಲದವನು ಪಂಜರವಂ ಸಿಂಹದಂತೆ ದೇಹಾಭಿಮಾನವಂ ಛೇಧಿಸಿಕೊಂಡು ಪೋಗುವನು. ಅವನು ಮೋಡವಿಲ್ಲದ ಚಂದ್ರನಂತೆ ಪ್ರಕಾಶಿಸುವನು. ಮಳೆಯಿಂದ ಬೆಟ್ಟದಂತೆ ಜ್ಞಾನದಿಂ ಶಾಂತಿಯಂ ಪಡೆವನು. ರಾಜ್ಯವಂ ಪಡೆದ ದರಿದ್ರನಾಗಿದ್ದ ದೊರೆಯಂತೆ ಪರಮಾನಂದವನ್ನನುಭವಿಸುವನು. ಉಕ್ಕುವ ಸಮುದ್ರದಂತೆ ತನ್ನಲ್ಲೆ ತಾನಡಗನು ಶರತ್ಕಾಲದ ಮೇಘದಂತೆಯೂ ತೆರೆಯಡಗಿದ ಸಮುದ್ರದಂತೆಯೂ ಶಾಂತನಾಗುವನು. ಮೇರುವಿನಂತೆ ಧೈರ್ಯವನ್ನು, ದೀಪವಿರುವ ಮನೆಯಂತೆ ಪ್ರಕಾಶವನ್ನು, ಕಟ್ಟಿಗೆಯಿಲ್ಲದ ಅಗ್ನಿಯಂತೆ ಶಾಂತಿಯನ್ನೂ, ಶರತ್ಕಾಲದ ಗಗನದಂತೆ ನೈರ್ಮಲ್ಯವನ್ನು, ಅಮೃತಪಾನವಂ ಮಾಡಿದವನಂತೆ ತೃಪ್ತಿಯನ್ನೂ ಸಹ ಹೊಂದುವನು. ಮತ್ತು ಅವನು ಸರ್ವಾತ್ಮನನ್ನಾಗಿಯೂ, ಸರ್ವವ್ಯಾಪಿಯನ್ನಾಗಿಯೂ, ಸರ್ವೇಶ್ವರನನ್ನಾಗಿಯೂ, ಸರ್ವಪ್ರೇರಕನನ್ನಾಗಿಯೂ, ಸರ್ವಾಂತರ್ಯಾಮಿಯನ್ನಾಗಿಯೂ, ಸರ್ವಾಕಾರನನ್ನಾಗಿಯೂ, ಸರ್ವಾತೀತನನ್ನಾಗಿಯೂ, ಆತ್ಮನಂ ನೋಡುತ್ತಿರುವನು. ಮಾನಾಪಮಾನಗಳಿಂದಲೂ, ಕಾಮಕ್ರೋಧಾದಿಗಳುರವಣೆಯಿಂದಲೂ, ಅಹಂಕಾರ ಮಮಕಾರ ಸಂಘ್ರಮಗಳಿಂದಲೂ, ಸುಖದುಃಖಾದಿ ದ್ವಂದ್ವ ದೋಷವಿಕಾರಗಳಿಂದಲೂ.

ಸ್ಪರ್ಶವಾಗಿ ದುಃಖಪಡುತ್ತಿದ್ದ ತನ್ನ ಪೂರ್ವವ್ಯಾಪಾರಗಳನ್ನು ಆ ಕಾಲ ದೇಶ ವೃತ್ತಾಂತಗಳನ್ನು ಅಜ್ಞಾನ ವಿಜೃಂಭಿತವಾದ ತನ್ನ ಆಯಾಯ ರೀತಿಗಳನ್ನೂ ಸಹ ಸ್ಮರಿಸಿಕೊಂಡು ತಾನೆ ನಗುತ್ತಿರುವನು. ಸರ್ವಾತೀತ ಭಾವದಿಂದನಿಗೆ ಸರ್ವದರ ಮೇಲೂ ಕ್ರೋಧವುಂಟಾಗುವದು. ಸರ್ವಾತ್ಮಭಾವದಿಂದೆಲ್ಲವನ್ನೂ ಅಪೇಕ್ಷಿಸು ವನು. ಸರ್ವವ್ಯಾಪಾರಗಳಲ್ಲೂ ಅನುಮೋದಿಸಿ ಪ್ರವರ್ತಿಸುವನು. ತಾನೆ ಇಲ್ಲ ದಿರುವಲ್ಲಿ ಮತ್ತೊಂದೆಲ್ಲಿರುವದೆಂದು ಸರ್ವ ವಿಷಯದಲ್ಲೂ ಅಜ್ಞಾನಿಯಂತಿರುವನು. ಸರ್ವವೂ ತಾನೆಂಬ ಜ್ಞಾನದಿಂ ಮಾತ್ಸರ್ಯ ಪಡುವದಕ್ಕೆ ವಿಷಯಾಂತರವಂ ಕಾಣದೆ ನಿತ್ಯಾನಂದನಾಗಿರುವನು. ಅಖಂಡಭಾವದಿಂದವನಿಗೆ ತ್ಯಾಗ ಪರಿಗ್ರಹಗಳು ಸ್ತುತಿ ನಿಂದೆಗಳು ಸಹ ತಪ್ಪುವವು. ಸರ್ವಕಾಲ ಪ್ರಕಾಶದಿಂದಸ್ತೋದಯ ಪ್ರಸ್ತಾವಕ್ಕೆ ಅವಕಾಶವಿಲ್ಲದಿರುವದು. ಹೀಗೆ ದೃಶ್ಯೋಪಾಧಿಯಿಲ್ಲದೆ ಆಕಾರರಹಿತನಾಗಿ ಸರ್ವ ಕರ್ಮಗಳಂ ಮಾಡುತ್ತಿದ್ದಾಗ್ಯೂ ಅಕರ್ತೃವಾದ ಪುರುಷನೇ ಮುಕ್ತನೆನಿಸುವನು. ಇಂಥಾ ಅಖಂಡಭಾವದಿಂ ನೀನು ಸರ್ವಾಪೇಕ್ಷೆಗಳನ್ನೂ ಬಿಡುವೆಯಾದರೆ ನಿಶ್ಶೇಷ ವಾಗಿ ಜಲವಂ ತ್ಯಜಿಸಿದ ಮೇಘದಂತೆ ನಿರ್ಮಲನಾಗುತ್ತೀಯೆ ? ವಸಂತವನ ವಿಹಾರ ಅಖಂಡ ರಾಜ್ಯಾಧಿಪತ್ಯ ಸಹೃದಯ ಪ್ರಾಣಕಾಂತಾಸಂಗ ಮೊದಲಾದ ಸಮಸ್ತ ಸುಖಗಳೂ ಆಶೆಯಿಲ್ಲದವನ ಸುಖಕ್ಕೆ ಸ್ವಲ್ಪವಾದರೂ ಸಮಾನವಾಗಲಾ ರವು. ಅವನಿಗೆ ಜಗವೆಲ್ಲವೂ ತೃಣಕಣ ಪ್ರಾಯವಾಗುವದ್ದರಿಂದ ಯಾವ ದುಃಖವೂ ಸಂಭವಿಸಲಾರದು. ನಾನು ನನ್ನದು ಬೇಕು ಬೇಡವೆಂಬ ಕಲ್ಪನೆಯಿಲ್ಲದೆ ಅದ್ವಿ ತೀಯ ಭಾವದಿಂ ನಿಂದಿರುವನಿಗೆ ಯಾವದೂ ಸವಿಯಾಗಲಾರದು. ರಥದಲ್ಲಿರುವ ನಿಗೆ ದಿಗ್ಭ್ರಮೆಯಂತೆ ಸ್ವರೂಪ ಸ್ಥಿತಿಯನ್ನರಿಯದವನಿಗೆ ಖಂಡ ಕಲ್ಪನೆಯಿಂದಾಶೆ ಯುಂಟಾಗುವುದೆಂದು ನಿಶ್ಚಯಿಸುವನಾಗು. ಅಖಂಡಭಾವವಿಲ್ಲದೆ ಆಶೆ ತಪ್ಪದಾದ್ದ ರಿಂದ ಪ್ರಪಂಚದ ಸೃಷ್ಟಿಗೆ ಪೂರ್ವದಲ್ಲೂ, ಪ್ರಳಯಾಂತದಲ್ಲೂ, ಪ್ರಕಾಶಿಸುವ ಆತ್ಮ ಸ್ವರೂಪವಂ ನೋಡುತ್ತಾ ಮಧ್ಯಭಾಗದಲ್ಲೂ ಅದನ್ನೇ ಪರಿಗ್ರಹಿಸುವಲ್ಲಿ ಸರ್ವವೂ ಬ್ರಹ್ಮವೆಂದು ಗೊತ್ತಾಗುವದು. ಆಗ ದ್ವಿತೀಯ ಪದಾರ್ಥವಿಲ್ಲದ್ದರಿಂದ ಆಶೆತಪ್ಪಿ ಸ್ವರಾನ್ಯವುದಿಸಲು ಸಿಂಹದ ಬಳಿಯಿಂ ಹುಲ್ಲೆಯಂತೆ ಅವನ ಬಳಿಯಿಂ ಮಾಯೆ ಓಡುವುದು. ಅದ್ದರಿಂದವನು ಮದನ ಮದಮನೋಹರಳಾದ ಮದಿರಾಕ್ಷಿಯನ್ನೂ ಕೂಡ ಮಣ್ಣಿನ ಬೊಂಬೆಯೆಂದೆಣಿಸುವನು. ಭೋಗಗಳಂ ರೋಗಗಳಂತಲೂ, ಆಪತ್ತುಗಳಂ ಸಂಪತ್ತುಗಳಂತಲೂ, ದೃಶ್ಯ ಸಂಪದವಂ ಬಿಸಲು ಮೊರೆಯಂತಲೂ ತಿಳಿವನು. ಇವನು ನವತರುಣಿಯಿಂ ಕೂಡಿದ್ದಾಗ್ಯೂ ಸಮಾಪನಯಿರೋರೂಪ

ಳಾದ ಪ್ರೌಢಾಂಗನೆ ಬಿಡದಿದ್ದಾಗ್ಯೂ ಸ್ಮರ ಶರಗಳು ಇವನಲ್ಲಿ ಧೂಳಿ ಸಮಾನವಾಗು
ವವು. ರಾಗದ್ವೇಷಗಳಿಂದಿವನು ಕೊಂಚವಾದರೂ ಚಲಿಸನು. ಮರುಭೂಮಿ
ಗಳಲ್ಲಿ ಪಾಂಥನಂತೆ ಭೋಗಗಳಲ್ಲಿವನು ತಗಲನು. ಬೆಟ್ಟವಂ ಗಾಳಿಯಂತೆ ದೃಶ್ಯ
ಲಕ್ಷ್ಮಿ ಇವನನ್ನಲ್ಲಾಡಿಸಲಾರದು. ಕಂಣು ಬೆಳಕಿನಲ್ಲಿ ಪಸರಿಸುವಂತೆ ಅಸಂಗ
ವಾದ ಭಾವದಿಂ ಭೋಗಗಳಲ್ಲವನು ನಡೆವನು. ಕಾಕತಾಳ ನ್ಯಾಯದಿಂದುಂಟಾದ
ಭೋಗಗಳಿಂದಿವನಿಗೆ ಮಂದರಗಿರಿಗೆ ಸಮುದ್ರದಲೆಗಳಂತೆ ದುಃಖ ಸುಖಗಳ್
ತೋರವು. ವಸಂತಾದಿ ಋತುಗಳಿಂ ಬೆಟ್ಟದಂತೆ ದೇಶಕಾಲಾನುಸಾರದಿಂ ಬಂದ
ದುಃಖಸುಖಗಳಿಂದಿವನು ಕ್ಷೋಭೆಪಡನು. ಇಂದ್ರಿಯ ಭ್ರಮೆಗಳಿಂದೇಹವಲೆ
ಪಟ್ಟಿಪಡುತ್ತಿದ್ದಾಗ್ಯೂ ಮನವಸಂಗವಾದ್ದರಿಂದಿವನು ತಟಸ್ಥನೆನಿಸುವನು. ಮಿಂಚು
ಹುಳುವಿನ ಮಿರಗಿಗೆ ಸರಿಯಾದ ಸಂಭೋಗ ಸುಖದಲ್ಲಿ ನಖದಂತಕ್ಷತಗಳಿಂ ದುಃಖ
ತೋರದಿರುವಲ್ಲಿ ಅಖಂಡಾನಂದದಲ್ಲಿರುವನಿಗೆ ದೇಹಕ್ಷತಿಯಿಂದೇನಾದೀತು. ಆತ್ಮ
ಜ್ಞಾನವೆಂಬುವದು ಒಂದುವೇಳೆ ತೋರಿದಾಗ್ಯೂ ಮರಳಿ ಮರವೆಗೆ ಬರದಾದ್ದರಿಂದ
ವಿಚಾರದಿಂ ಚನ್ನಾಗಿ ತಿಳಿಯಲ್ಪಟ್ಟ ಆತ್ಮನು ಬಂಧುವಿನಂತೆ ಎಂದಿಗೂ ಮರೆಯ
ಲ್ಪಡನು. ಬೆಟ್ಟದಿಂ ಬಿದ್ದ ನದಿಯು ಮರಳಿ ಏರದಿರುವಂತೆ ವಿಚಾರದಿಂ ನಷ್ಟವಾದ
ಭ್ರಾಂತಿಯು ಮರಳಿ ಪುಟ್ಟಲಾರದು. ಪುಟಪಾಕ ಶುದ್ಧವಾದ ಚಿನ್ನವು ಕೆಸರಿನಲ್ಲಿ
ದ್ದರೂ ಹೇಗೆ ಮಲಿನವಾಗದೋ ಹಾಗೆ ಜ್ಞಾನಿಯಾದವನು ಸಂಸಾರದಲ್ಲಿದ್ದರೂ
ಅನುರಕ್ತನಾಗನು. ಕಲ್ಲನೊಡೆದು ತೆಗೆದ ಮಣಿಯೂ ತೊಟ್ಟೊಡೆದು ಬಿದ್ದ ಫಲವೂ
ಸಹ ತಿರುಗಿ ಹೇಗೆ ಪೂರ್ವದಂತೆ ಸೇರದೋ ಹಾಗೆ ಒಡೆದ ಹೃದಯಗ್ರಂಥಿಯೂ
ಮರಳಿ ಗುಣಗಳಿಂ ಸೇರಲಾರದು. ಚಂಡಾಲ ಪಾತ್ರೆಯಂ ಬ್ರಾಹ್ಮಣನಂತೆ ತಿಳಿ
ದವನು ಅವಿದ್ಯೆಯಂ ಪೊಂದಲಾರನು. ವಿಚಾರದಿಂದುದಕವಲ್ಲ ಕ್ಷೀರಭ್ರಾಂತಿ
ಯಂತೆ ದೃಶ್ಯದಲ್ಲಿ ಸಂಸಾರ ಭ್ರಾಂತಿಯಳಿಯುವುದು ಅಜ್ಞಾನದಿಂ ಹೀರಂದು ಕುಡಿ
ಯಲ್ಪಡುವ ಮದ್ಯದಂತೆ ಸಾರವೆಂದನುಭವಿಸಲ್ಪಡುವ ಸಂಸಾರವು ಜ್ಞಾನದಿಂ ಬಿಡ
ಲ್ಪಡುವುದು. ಚಿತ್ರ ಪ್ರತಿಮೆಗೆ ರಾಗಿನಂತೆ ಕಾಮಿನಿಗೆ ಕೇಶಾದಿ ಕಾಂತಿಗಳೆಂದು
ತಿಳಿಯತಕ್ಕದ್ದು. ಅನುಭವಿಸಲ್ಪಟ್ಟ ಬ್ರಹ್ಮಾನಂದವು ಸಕ್ಕರೆಯ ರುಚಿಯಂತೆ
ಭೇದಿಸಲಶಕ್ಯವಾಗುವದು. ಆದ್ದರಿಂದ ವ್ಯಭಿಚಾರಿ ಸ್ತ್ರೀಯು ಮನೆಯ ಕೆಲಸದಲ್ಲಿ
ದ್ದಾಗ್ಯೂ ಜಾರನಂ ಧ್ಯಾನಿಸುವಂತೆ ಜ್ಞಾನಿಯು ಯಾವ ಕೆಲಸವಂ ಮಾಡುತ್ತಿ
ದ್ದಾಗ್ಯೂ ಪರಮಾತ್ಮನಂ ಧ್ಯಾನಿಸುವನು. ಜಾರಸ್ತ್ರೀಗೆ ಜಾರನಂತೆ ಜ್ಞಾನಿಗೆ
ಪರಮಾತ್ಮನೆಂದಿಗೂ ವಿಸ್ಮೃತನಾಗನು. ಗಂಡವಾಸನಂದರ ಸಂಬಂಧದಿಂದವ

ಮನೆಯ ಕೆಲಸವಂ ನೋಡುವಂತೆ ಲೋಕಾನುಸಾರ ನಿರ್ಬಂಧದಿಂದವನು ಕರ್ಮಗಳಂ ಮಾಡುವನು ಸುಖದುಃಖಾದಿ ದ್ವಂದ್ವಗಳನ್ನತಿಕ್ರಮಿಸಿರುವದ್ದರಿಂದ ಜ್ಞಾನಿಯು ನಗರಗ್ರಾಮಗಳಲ್ಲಿದ್ದರೂ, ಗಿರಿತಪೋವನಗಳಲ್ಲಿದ್ದರೂ, ದುಃಖ ಸುಖಗಳು ಪರಂಪರೆಯಾಗಿ ಬರುತ್ತಿದ್ದರೂ ಪರಮಾನಂದನಾಗಿರುವನು. ಎಲೈ ಮಹಾತ್ಮನೆ ಮುಕ್ತರಾದವರಲ್ಲಿ ನಿಮ್ಮ ಮನು ಮಾಂಧಾತೃದಿಲೀಪಾದಿಗಳು ರಾಜ್ಯವ್ಯವಹಾರದಲ್ಲೆ ಪ್ರತಿಷ್ಠಿತರಾಗಿದ್ದರು. ಈಗಲೂ ಜನಕ ಕಪಾದಿಗಳು ಹಾಗೆ ಇರುವರು. ಬಲಿನಮುಚಿ ವೃತ್ರಶಂಬರ ಪ್ರಹ್ಲಾದಾದಿ ದಾನವರು ಸರ್ವದಾ ಯುದ್ಧಾದಿಗಳಲ್ಲಿ ನಿಂದಿದ್ದರು. ಅಗ್ನಿ ಸೂರ್ಯ ಮೊದಲಾದವರು ಪೀರುವದ್ದರಿಂ ದಮೃತಕಲೆಗಳು ಕ್ಷೀಣವಾಗುತ್ತಿದ್ದರೂ ವೃದ್ಧಿಯಾಗುತ್ತಿದ್ದರೂ ಸೋಮನು ತನ್ನ ಆಧಿಪತ್ಯದಲ್ಲೇ ಕ್ಲುಪ್ತನಾಗಿರುವನು. ಗುರು ಶುಕ್ರರು ಅಗ್ನಿ ಯಮ ವಾಯುಗಳು ನಾರದ ವಿಶ್ವಮಿತ್ರಾದಿ ಮುನಿಗಳು ನಂದಿ ಭೃಂಗಿ ಮೊದಲಾದ ಗಣಾಧಿಪತಿಗಳು, ದೇವ ಸೇನಾಧಿಪತಿಯಾದ ಸುಬ್ರಹ್ಮಣ್ಯನು, ಗ್ರಹಾಧಿಪತಿಯಾದ ಸೂರ್ಯನು, ಜಗತ್ಕಾರ್ಯ ಪರಾಯಣರಾದ ಬ್ರಹ್ಮ, ವಿಷ್ಣು, ಮಹೇಶ್ವರರು ಸಹ ನಾನಾ ಪ್ರಕಾರವಾದ ಕಾರ್ಯಗಳಲ್ಲಿರುವರು. ಕಾಮ ಕ್ರೋಧಗಳಿಂದುಚ್ಛೃಂಖಲ ವ್ಯವಹಾರಿಗಳಾದಾಗ್ಯೂ ಅಖಂಡಜ್ಞಾನದಿಂದ ಹಂಕಾರ ಮಮಕಾರಗಳಿಲ್ಲದೆ ವೇಷಧಾರಿಗಳಂತೆ ನಡೆಯುವರಾದ್ದರಿಂದ ಇವರ ನಾಮಸ್ಮರಣೆಯೂ ಕೂಡ ಪಾವನವೆನಿಸುವದು. ಇದೇ ಪ್ರಕಾರ ಇನ್ನೂ ಅನೇಕ ಸುರಾಸುರ ಮಾನವರು ಮುಕ್ತರಾಗಿಯೇ ಲೋಕವ್ಯವಹಾರಗಳಂ ನಡೆಸುತ್ತಿರುವರು. ಅವರಲ್ಲಿ ಕೆಲವರು ಶಿಲೆಯಂತೆ ನಿಶ್ಚಲರಾಗಿರುವರು. ಕೆಲವರು ಕಾನನವಂ ಪೊಂದಿರುವರು. ಕೆಲವರು ರಾಜ್ಯಾಧಿಪತ್ಯವನ್ನೇ ಮಾಡುತ್ತಿರುವರು. ಕೆಲವರು ಗ್ರಹಾಧಿಪತಿಗಳಾಗಿರುವರು. ಕೆಲವರು ಪಾತಾಳಾದಿ ಲೋಕಗಳಲ್ಲಿರುವರು. ಕೆಲವರು ತಿರ್ಯಗ್ಯೋನಿಗಳಲ್ಲಾಸಕ್ತರಾಗಿರುವರು. ಕೆಲವರು ದೇವಲೋಕಾದಿಗಳಂ ಪೊಂದಿರುವರು. ಕೆಲವರು ದೇವಯೋನಿಗಳಲ್ಲೂ ಮೂರ್ಖರಾಗಿರುವರು. ಸರ್ವಶಕ್ತನಾದ ಪರಮೇಶ್ವರನು ಸರ್ವದೇಶಕಾಲಗಳಲ್ಲಿ ಸರ್ವಪ್ರಕಾರನಾಗಿರುವನಾದ್ದರಿಂದೆಲ್ಲಿ ಯಾವದೂ ಸಂಭವಿಸಲಾರದು. ಕರ್ಮವೆಂತಲೂ, ದೈವವೆಂತಲೂ, ಈಶ್ವರನೆಂತಲೂ, ಶಿವನೆಂತಲೂ, ಪರಮಾತ್ಮನೆಂ ನಾನಾಪ್ರಕಾರವಾಗಿ ಪೇಳಲ್ಪಡುವನು. ಮಣಲಿನಲ್ಲಿ ಚಿನ್ನದ ರಜನಂತೆಯೂ, ಅವರಲ್ಲಿ ಮಲದಂತೆಯೂ, ಅವಸ್ತು ವಸ್ತುಗಳಲ್ಲಿ ವಸ್ತ್ವವಸ್ತುಗಳು ಕಾಣಬರುವವು. ಪಾಪ ಭಯದಿಂ ಜನರು ಧರ್ಮಾಸಕ್ತರಾಗುವರು. ಅನ್ಯಥಾ

ನದಿಂ ಪರಮಪದ ಪ್ರಾಪ್ತಿಯಾಗುವದು, ಆದ್ದರಿಂದ ಪಾಪವಾದ ಶೂನ್ಯಮತಗಳೂ ಕೂಡ ಸಾಧುಗಳೆನಿಸುವವು. ಎಂದಿಗೂ ಇಲ್ಲದ ಕೊಂಬಿನ ಮೊಲಗಳು ಮಾಯೆಯಲ್ಲುಂಟಾಗುವವು. ಶಾಶ್ವತರೆನಿಸುವ ಗಿರಿಮಹೀಸಮುದ್ರ ಸೂರ್ಯ ಚಂದ್ರಾದಿಗಳು ಪ್ರಳಯದಲ್ಲಿ ನಷ್ಟರಾಗುವರು. ಹೀಗೆ ದೃಶ್ಯವಾದ ಪ್ರಪಂಚದಲ್ಲಿ ಯಾವದೂ ಕ್ಲಪ್ತವಲ್ಲವಾದ್ದರಿಂದ ಲಾಭಾಲಾಭ ವೃದ್ಧಿ ಹಾನಿಗಳಲ್ಲಿ ಹರ್ಷಾಮರ್ಷಗಳಂ ಹೊಂದದೆ ಸದಸತ್ತುಗಳೆಂದು ಆಸ್ಥಾನಾಸ್ಥೆಗಳಂ ಬಿಟ್ಟು ಸರ್ವ ವಿಷಯದಲ್ಲೂ ಸಮಭಾವದಿಂದಿರುವನಾಗು? ಅಜ್ಞಾನದಿಂ ಜನಗಳು ಮುಳುಗುವರಲ್ಲದೆ ಜ್ಞಾನದಿಂದ ಯಾರೂ ಮುಳುಗಲಾರರು. ಮರೆಯಲ್ಪಟ್ಟಿರುವ ಕಂಠಾಭರಣಮಣಿಯಂತೆ ಆತ್ಮನು ಜ್ಞಾನದಿಂ ಪ್ರಾಪ್ತನಾಗುವದ್ದರಿಂದ ಮುಕ್ತಿಯನ್ನಪೇಕ್ಷಿಸುವನು ಜ್ಞಾನವನ್ನೇ ಸಾಧಿಸಬೇಕು, ಆತ್ಮನೊಬ್ಬನೇ ಸತ್ಯನೆಂಬ ಜ್ಞಾನದಿಂ ದೃಶ್ಯಪದಾರ್ಥಗಳಲ್ಲಭಿಮಾನ ತಪ್ಪುವದೇ ಮುಕ್ತಿಯೆನಿಸುವದು. ವಿಚಾರಪರರಾದವರು ಸುಹೋತ್ರ ಜನಕಾದಿಗಳಂತೆ ಅಖಂಡಜ್ಞಾನದಿಂ ರಾಗಾಭಿಮಾನವರ್ಜಿತರಾಗಿ ಲೋಕದೊಳ್ವಿಹರಿಸುತ್ತಿರುವರು. ಮನವಿರುವವರಿಗೆ ಬ್ರಹ್ಮಭಿನ್ನಪದಾರ್ಥಜ್ಞಾನವು ಅದರ ಸಂಬಂಧಾಭಿಮಾನಗಳು ಸಹ ತಪ್ಪಲಾರವಾದ್ದರಿಂದ ಆತ್ಮಮಹಿಮ ವಿಚಾರದಿಂ ಭೇದಜ್ಞಾನಸ್ವರೂಪವಾದ ಮನವಂ ಶಾಂತಿಹೊಂದಿಸುವನಾಗು? ದೇಹವಿರುವಲ್ಲೇ ಮನವಳಿಯಲು ಜೀವನ್ಮುಕ್ತನೆನಿಸುವನು. ದೃಶ್ಯವಾದ ಭೋಗವಸ್ತುಗಳಲ್ಲನುರಕ್ತನಾದವನೇ ಬದ್ಧನೆನಿಸುವನು. ಯುಕ್ತಿ ಪ್ರಯತ್ನಗಳಿಲ್ಲದವನಿಗೆ ಗೋಷ್ಪದವೂ ಕೂಡ ಸಮುದ್ರವಾಗುವದು. ಅವುಗಳಿದ್ದವನಿಗೆ ಸಮುದ್ರವೂ ಕೂಡ ಗೋಷ್ಪದವಾಗುವದು. ಸರ್ವದುಃಖ ನಿರಶ್ಛೇದಕವಾದ ಆತ್ಮಜ್ಞಾನಕ್ಕೆ ಸತ್ಸಂಗ ವಿಚಾರಾದಿಗಳೇ ಯುಕ್ತಿ ಪ್ರಯತ್ನಗಳಾದ್ದರಿಂದ ಅವುಗಳಲ್ಲೇ ನೀನು ಸರ್ವಕಾಲದಲ್ಲೂ ಅಚಂಚಲನಾಗಿ ನೆಲಸಿ ನಿತ್ಯಾನಂದವಾದ ಜೀವನ್ಮುಕ್ತಿಯಂ ಸಾಧಿಸುವನಾಗು. ಎಲೈ ರಘುಕುಲಾಗ್ರಣಿಯೇ! ಸಕಲ ವಿಷಯಗಳಿಗೂ ಸೇರುವದಕ್ಕೆ ಸಂಕೇತಸ್ಥಾನವಾಗಿ ಸೌಂದರ್ಯ ಲಾವಣ್ಯ ಸೌಕುಮಾರ್ಯ ಗಾಂಭೀರ್ಯ ಚಾತುರ್ಯ ವಿಲಾಸಾದಿ ಗುಣಗಳಿಂ ಥಳಥಳಿಸುವ ನಾರಿಯರೆಂಬ ತೆರೆಗಳಿಂ ದಾಟಲಶಕ್ಯವಾದ ಸಂಸಾರ ಸಾಗರವನ್ನಾರು ಪ್ರಜ್ಞೆಯೆಂಬ ನಾವೆಯಿಂ ದಾಟುವರೋ ಅವರೇ ಧೀರರೆನಿಸುವರು. ಆನುಕೂಲಾಂತವಾದ ವಿಚಾರದಿಂದಖಂಡಸ್ವರೂಪವು ಗೊತ್ತಾಗುವಲ್ಲಿ, ಸರ್ವವೂ ಬ್ರಹ್ಮಾಭಿನ್ನವಾಗಲು ಸರ್ವಾಂತರ್ಗತವಾದ ಈ ಸಂಸಾರವೂ ಬ್ರಹ್ಮವಲ್ಲದೆ ಮತ್ತೊಂದಲ್ಲವೆಂಬ ನಿಶ್ಚಯದಿಂ ಜನ್ಮ ಜರಾ

ಮರಣ ದುಃಖಗಳನ್ನು ಪತ್ನೀ ಪುತ್ರ ಬಂಧು ಸುಹೃತ್ಸಹೋದರಾದಿ ಸುಖದುಃಖಗಳನ್ನು ಸಹಿಸಿಕೊಂಡು ಅಹಂಕಾರ ಮಮಕಾರಗಳಿಗೆ ಅಧೀನರಾಗದೇ ಯಾರು ನಿತ್ಯಾನಂದರಾಗಿ ವಿಹರಿಸುತ್ತಿರುವರೋ ಅವರೇ ಸಂಸಾರ ಸಮುದ್ರದಲ್ಲಿ ಮುಳುಗದಿರುವರೆಂದು ನಿಶ್ಚಯಿಸುವನಾಗು. ಪದಾರ್ಥ ವಾಸನೆಯಿಂದನುಭವಿಸಿದ ಭೋಗಗಳು ಸಂಸಾರ ದುಃಖಗಳಿಗೆ ವರ್ಧಕವಾಗುವವು. ಬ್ರಹ್ಮವಾಸನೆಯಿಂದನುಭವಿಸಿದ ಭೋಗಗಳು ಅಹಂಕಾರ ಮಮಕಾರವಿಲ್ಲವ್ದರಿಂದ ನಿತ್ಯಾದಂಡಕ್ಕೆ ಸಾಧಕವಾಗುವವು. ಆದ್ದರಿಂ ಬುದ್ಧಿಶಾಲಿಯಾದವನು ವಿಚಾರಿಸಿ ತಿಳಿದು ಬಂದದ್ದೆಲ್ಲವನ್ನು ಸುಖದಿಂದನುಭವಿಸುವನು. ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಇದೇ ವಿಶೇಷವಲ್ಲದೆ ಮತ್ತೊಂದಿಲ್ಲವೆಂದು ತಿಳಿಯುವನಾಗು? ಎಲೈ ಸುಗುಣಾಭಿರಾಮನೇ! ಯಾವನು ನಿನ್ನಂತೆ ವಿಚಾರಪರನಾಗುವನೋ ಅವನು ಬ್ರಹ್ಮವಾಸನೆಯಿಂ ಬಂದದ್ದೆಲ್ಲವನ್ನು ಅನುಭವಿಸುತ್ತಾ ಬ್ರಹ್ಮದಲ್ಲೇ ನಿಂದಿರುವನಾದ್ದರಿಂದ ದೇಹಾಂತದಲ್ಲಿ ಬ್ರಹ್ಮವನ್ನೇ ಹೊಂದುವನು. ವಿವೇಕಿಯಾದವನು ಸುಖಬಂದರೂ ದುಃಖಬಂದರೂ ಕೂಡ ಬೆರಗಾಗದೆ ಈ ಪ್ರಾರಬ್ಧ ಕಳೆಯುವದೆಂಬ ಸಂತೋಷದಿಂದದನ್ನನುಭವಿಸುವನು. ಹೀಗಿರುವಲ್ಲಿ ಅಖಂಡಜ್ಞಾನಿಗೆ ಎಂಥಾ ಸುಖವಾಗುವದೋ ನೀನೇ ಆಲೋಚಿಸುನಾಗು, ನಿನ್ನಂತೆ ತತ್ವಜ್ಞನಾದವನು ಯಾವದರಲ್ಲೂ ಸ್ವಲ್ಪವಾದರೂ ದುಃಖಪಡದೆ ಬಲಬುದ್ಧಿ ತೇಜಗಳಿಂ ಪೂರ್ಣನಾಗಿ ವಸಂತಕಾಲದ ವೃಕ್ಷದಂತೆ ವೃದ್ಧಿಯಂ ಪಡೆಯುವನೆಂದು ವಸಿಷ್ಠನು ನಿರೂಪಿಸುತ್ತಿದ್ದನೆಂಬಲ್ಲಿಗೆ;— ಉಪಶಮ ಪ್ರಕರಣದೊಳ್ ಜ್ಞಾನಯೋಗ ತರಂಗಿಣಿಯಲ್ಲಿ ಸಂಗಸಂಸಾರ ನಿವೃತ್ತಿ ನಿರೂಪಣವೆಂಬ ಹದಿನಾಲ್ಕನೇ ತರಂಗಕ್ಕೆ ಮಂಗಳಮಸ್ತು ಶ್ರೀ ಶ್ರೀ.

---

## ಜೀವನ್ಮುಕ್ತ ಜ್ಞಾನಯೋಗಸ್ವರೂಪ ನಿರೂಪಣವೆಂಬ ಪಂಚದಶ ತರಂಗ ಪ್ರಾರಂಭವು.

ಬಳಿಕ ವಸಿಷ್ಠನಿಂತೆಂದನು;—ಎಲೈ ಶ್ರೀರಾಮಚಂದ್ರನೇ! ನಿನ್ನ ಜ್ಞಾನದಾರ್ಢ್ಯಕ್ಕೋಸುಗ ಮರಳಿ ಪೇಳಲ್ಪಡುವ ಜೀವನ್ಮುಕ್ತರ ಲಕ್ಷಣವಂ ನೀನು ತಿಳಿಯುವನಾಗು? ತತ್ವ ವಿಚಾರದಿಂ ಜೀವನ್ಮುಕ್ತನಾದವನಿಗೆ ಅದ್ವಿತೀಯ ಭಾವದಿಂದ ಪ್ರೇಕ್ಷೆ ತಪ್ಪುವದಾದ್ದರಿಂದ ಅಸತ್ಪದಾರ್ಥದ ಪೋಲ್ ನಿರಭಿಮಾನನಾಗಿ ದೃಶ್ಯವೆಲ್ಲವನ್ನು ನೋಡುತ್ತಿರುವನು. ಸ್ವಾಧೀನವಾಗಿ ದೃಷ್ಟಿಗೆ ಬಿದ್ದ ನಿಸ್ಸಾರತ್ವಾಭರಣ

ಗಳನ್ನೂ ಕೂಡ ಕಲ್ಲು ಮಣ್ಣುಗಳಂತೆ ತಿಳಿವನು. ಒಬ್ಬನು ಅವುಗಳಂ ತನ್ನ ಅಂಗಗಳಿಗೆ ಇಟ್ಟರೂ ಮತ್ತೊಬ್ಬನು ತೆಗದುಕೊಂಡು ಪೋದರೂ ನಿತ್ಯಸಂತುಷ್ಟನಂತೆ ವಿಕಾರವಿಲ್ಲದಿರುವನು, ಸಕಲ ಪ್ರಾಣಿ ವ್ಯಾಪಾರವನ್ನೂ ಗೊಂಬೆಗಳ ಆಟದನ್ತೋಲ್ ತಿಳಿವನು, ಪೂರ್ವಕ್ಕೆ ನಡವಂತೆ ಮುಂದಕ್ಕೂ ಆಗುವದು, ಈಗಲೂ ನಡೆಯುವದೆಂಬ ನಿಶ್ಚಯದಿಂ ಹಿಂದುಮುಂದಿನ ವೃತ್ತಾಂತಗಳಂ ಚಿಂತಿಸದೆ ವರ್ತಮಾನ ವ್ಯಾಪಾರಗಳೆಲ್ಲವನ್ನೂ ತನ್ನ ವಿಲಾಸವೆಂದು ನೋಡುತ್ತಾ ಸ್ವೇಚ್ಛೆಯಿಂ ತಾನೇ ನಗುತ್ತಿರುವನು. ಲೋಕಾನುಸಾರವಾಗಿ ಕರ್ಮಗಳೆಲ್ಲವನ್ನು ಅವನು ಮಾಡುತ್ತಿದ್ದರೂ ನಿರ್ಲೇಪನಾಗಿರುವನು. ಬ್ರಹ್ಮ ಬ್ರಹ್ಮೇತರ ಭಾವಗಳೇ ಅಂತರ್ಮುಖ ಬಹಿರ್ಮುಖ ಮಾರ್ಗಗಳೆನಿಸುವವು. ಬ್ರಹ್ಮಭಾವದಲ್ಲೇ ಅವನು ಜಾಗರೂಕನಾಗಿರುವನ್ನರಿಂದಲೂ ಬ್ರಹ್ಮೇತರ ಭಾವಗಳೆಂದಿಗೂ ಇಲ್ಲವಾದ್ದರಿಂದಲೂ, ಸೂರ್ಯಾಸ್ತೋದಯ ಕಾಲಾನುಸಾರವಾಗಿ, ಈಶ್ವರಾಜ್ಞೆಯೆಂದು ಸರ್ವ ವ್ಯಾಪಾರಗಳನ್ನೂ ಅವನು ಮಾಡುತ್ತಿರುವನು. ತಾನೇ ಇಲ್ಲವೆಂಬ ಜ್ಞಾನದಾರ್ಢ್ಯದಿಂದ ಅಜ್ಞಾನಿಯಂತೆ ದುಃಖ ಸುಖವಿಕಾರಗಳಂ ಪೊಂದನು. ಸರ್ವ ಕರ್ಮಫಲನಾದ ಜ್ಞಾನವು ಅವಕ್ಕೆ ಪ್ರಯೋಜನವಾದ ಅಜ್ಞಾನ ನಿವೃತ್ತಿಯೂ ಸಹ ಸಿದ್ಧವಾಗಿರುವದ್ದರಿಂದ ಯಾವ ಕರ್ಮಗಳಲ್ಲವನು ತಪ್ಪಿದರೂ ಆ ಕರ್ಮಗಳು ಸಂಪೂರ್ಣವೆನಿಸುವವು. ಮಾಡದಿದ್ದರೂ ಮಾಡಲ್ಪಟ್ಟಂತೆಯೇ ಆಗುವವು. ಮೇಲೆ ಹಾಕತಕ್ಕ ನೀರು ಒಂದೆಡೆಯೋಳ್ ತಪ್ಪಿದರೂ ಬೇರಿಗೆ ನೀರು ಸರಿಯಾಗಿ ಬಿದ್ದಿರುವದ್ದರಿಂದ ವೃಕ್ಷವು ಹೇಗೆ ಎಲ್ಲಾ ಕಡೆಯಲ್ಲೂ ಸಮವಾಗಿ ಉಲ್ಲಾಸವಂ ಪಡೆಯುವದೋ ಹಾಗೆ ಅವನು ಮಾಡಿದ ಕರ್ಮವು ಮಧ್ಯದಲ್ಲಿ ಒಂದೆಡೆಯೋಳ್ ಪ್ರಮಾದಬಂದರೂ ಸಂಪೂರ್ಣವಾಗುವದು. ಅವನು ಇತರ ಜನದಂತೆ ಸಂಸಾರಾಸಕ್ತನಾಗಿದ್ದರೂ ಕಾರ್ಯಸಿಧ್ಯಸಿದ್ಧಿಗಳಲ್ಲಿ ಸುಖ ದುಃಖಗಳಿಂ ಬೆರಗಾಗನು. ಇತರ ಜನರಿಗೆ ಗೃಹಕೃತ್ಯದಂತೆ ಅವನಿಗೆ ಬ್ರಹ್ಮಾನುಸಂಧಾನವೇ ಮುಖ್ಯವಾದ್ದರಿಂದಲೂ ಅಜ್ಞಾನವು ಸಹಜವಾದ್ದರಿಂ ನಿರೂಢವಾದ ಬಳಿಕ ತಪ್ಪಲಾರದಾದ್ದರಿಂದಲೂ ಅಖಂಡಭಾವದಿಂ ದವರಲ್ಲಿ ದುಃಖಗಂಧವಿಲ್ಲದ್ದರಿಂದಲೂ ಜ್ಞಾನಿಗೆ ಹೊರಗಣ ದುಃಖಗಳು ಪರಂಪರೆಯಾಗಿ ಬರುತ್ತಿದ್ದರೂ ಸಹಜಾನಂದದಿಂ ಸರ್ವ ಕಾಲಗಳಲ್ಲೂ ನಗಗೆ ಮೊಗನಾಗಿಯೇ ಇರುವನು. ಇವನು ಪರಮಾತ್ಮನಲ್ಲೈಕ್ಯವಂ ಪಡೆದಿರುವನಾದ್ದರಿಂ ದೊಬ್ಬರಿಗೂ ವಿರುದ್ಧನಾಗದೆ ಕನ್ನಡಿಯಂತೆ ಸರ್ವರಿಗೂ ಅನ್ಯಕನಾಗಿರುವನು. ಶಿಷ್ಟ ದುಷ್ಟರಿಗೂ ಮಿತ್ರಾಮಿತ್ರರಿಗೂ ಬಾಲವೃದ್ಧರಿಗೂ ಮೂಢ ಪಂಡಿತರಿಗೂ

ದರಿದ್ರ ಶ್ರೀಮಂತರಿಗೂ ಚಾರಚೋರರಿಗೂ ತ್ಯಾಗಿ ಭೋಗಿಗಳಿಗೂ ಇತರ ಜನ ಕೂಡ ಪ್ರತಿಬಿಂಬದಂತೆ ಕೃತಾನುಕೃತನಾಗಿರುವನು. ಗುರುವಿನಂತಿವನು ಯಾವ ಯಾವ ಭಾಗಕ್ಕೆ ಬಂದರೂ ಅದಕ್ಕೆ ವೃದ್ಧಿಯಾಗುವುದು. ಆದ್ದರಿಂದ ಇಷ್ಟದೇವತಾ ವಿಗ್ರಹದಂತಿವನು ಸರ್ವರಿಗೂ ಪೂಜ್ಯನಾಗುವನು. ಇವನ ಸ್ತುತಿ ನಿಂದೆಗಳು ಭಕ್ತಿ ವೈರಸ್ಯಗಳೂ ಕೂಡ ಇದ್ದ ಬಳಿಯಲ್ಲೇ ಫಲಪ್ರದವಾಗುವವು. ದೇವತಾ ಪ್ರತಿಮೆಗಳಿಗೂ ಇವನಿಗೂ ಸಾರಳ್ಯದಿಂ ಮಾತನಾಡುತ ತತ್ವೋಪದೇಶವಂ ಮಾಡುವದೊಂದೇ ವಿಶೇಷವೆಂದು ತಿಳಿಯತಕ್ಕದ್ದು. ಆದರಿಂತಿವರು ಪರಮಾತ್ಮನಿಗೆ ಚರಮೂರ್ತಿಗಳೆಂದು ಪ್ರಸಿದ್ಧರಾಗಿರುವರು. ಇವರು ಪ್ರಕೃತೋಚಿತವಾಗಿ ಅಹಂಕಾರ ಮಮಕಾರ ಕಾಮಕ್ರೋಧಾದಿಗಳನ್ನಂಗೀಕರಿಸುವರಲ್ಲದೆ ಅವುಗಳನ್ನೇ ಬಲವಾಗಿ ಗ್ರಹಿಸರು. ಗ್ರಾಹ್ಯಾಗ್ರಾಹ್ಯ ಬುದ್ಧಿ ಇಲ್ಲದೆ ಪೂರ್ವಾಪರ ವೃತ್ತಿಗಳನ್ನೂ ಯೋಚಿಸದೆ ಬಾಲರಂತೆ ಕಾರ್ಯಗಳಂ ಮಾಡುತ್ತಿರುವರು. ಚಂದ್ರನು ಸುಡುತ್ತಿದ್ದರೂ ಸೂರ್ಯನು ತಣ್ಣಗಿದ್ದರೂ ಸ್ವೇತರ ಸತ್ತಾಜ್ಞಾನವಿಲ್ಲದಿದ್ದರೂ ಪರಮಾತ್ಮನ ಶಕ್ತಿಗಳೇ ಹೀಗೆ ಪ್ರಕಾಶಿಸುವವೆಂದು ತೋರುವದ್ದರಿಂದಲೂ ಆಶ್ಚರ್ಯಪಡದಿರುವರು. ಸಕಲ ದುಃಖ ಸುಖಬೋಧಕವಾದ ಮನವೇ ಇವರಿಗೆ ನಷ್ಟವಾಗಿರುವದ್ದರಿಂದ ಸ್ವಶರೀರದ ಘಾತ ಪಾತಗಳಲ್ಲೂ ಕೂಡ ನಿತ್ಯಾನಂದರಾಗಿರುವರು. ಕೊಳ್ಳಿಯು ತಿರುಗುವದ್ದರಿಂದಗ್ನಿ ಮಂಡಲದಂತೆಯೂ, ಜಲದ ಚಲನ ಸುಳಿಯಂತೆಯೂ, ನೇತ್ರಚಲನದಿಂ ಗಗನದಲ್ಲಿ ಮುಕ್ತಾ ಮಾಲಾದಿಗಳಂತೆಯೂ, ಚಿತ್ತದ ಚಲನದಿಂದಲೇ ಈ ಜಗತ್ತು ಸತ್ಯವಾಗಿ ತೋರುತ್ತಿರುವದೆಂದು ಪೇಳುವಲ್ಲಿ ಚಿತ್ತನಾಶೋಪಾಯವಂ ಪೇಳಬೇಕೆಂದು ಶ್ರೀರಾಮನು ಕೇಳಲು ವಸಿಷ್ಠನಿಂತೆಂದನು. ಎಲೈ ಶುಭಮತಿಯೆ ! ಯೋಗವೆಂತಲೂ, ಜ್ಞಾನವೆಂತಲೂ ಎರಡು ಪ್ರಕಾರವಾಗಿ ಚಿತ್ತನಾಶೋಪಾಯವು ಪೇಳಲ್ಪಡುವದು. ಅದರಲ್ಲಿ ಸತ್ತೈಕ್ಯದಿಂ ಬ್ರಹ್ಮೇತರ ಪದಾರ್ಥವಿಲ್ಲವೆಂಬ ನಿಶ್ಚಯವೆ ಜ್ಞಾನವೆಂತಲೂ ಸಮ್ಯಗೀಕ್ಷಣವೆಂತಲೂ, ಸಮ್ಯಕ್ ಜ್ಞಾನವೆಂತಲೂ ಪೇಳಲ್ಪಡುವದು. ಚಿತ್ತವೃತ್ತಿಗಳ ನಿರೋಧವೇ ಯೋಗವೆನಿಸುವದು. ಭೂಮಿಯ ವಿವರಗಳಲ್ಲಿ ಜಲದಂತೆ ಶರೀರ ನಾಡಿಗಳಲ್ಲಿ ವ್ಯಾಪಿಸಿಕೊಂಡಿರುವ ವಾಯುವೇ ಪ್ರಾಣವೆನಿಸುವದು. ಕ್ರಿಯಾ ವಿಶೇಷಗಳಿಂದಿವಕ್ಕೆ ಅಪಾನಾದಿ ನಾಮಗಳುಂಟಾಗಿರುವವು. ಪ್ರಾಣವು ಚಲಿಸುವಲ್ಲಿ ಸಂಕಲ್ಪ ಕಲ್ಪನೋನ್ಮುಖವಾಗಿ ಉಂಟಾದ ಜ್ಞಾನವೇ ಚಿತ್ತವೆನಿಸುವದು. ತೈಲಕ್ಕೆ ತಿಲದಂತೆಯೂ ಪರಿಮಳಕ್ಕೆ ಪುಷ್ಪದಂತೆಯೂ ಚಿತ್ತಕ್ಕೆ ಪ್ರಾಣವೇ ಆಧಾರವಾದ್ದರಿಂದ ಪ್ರಾಣ ನಿರೋಧ

ದಿಂ ಚಿತ್ತಕ್ಕೆ ನಿರೋಧವಾಗುವದು. ಚಿತ್ತ ನಿರೋಧದಲ್ಲಿ ಅಜ್ಞಾನಮಯವಾದ ಸಂಸಾರವೆ ಶಾಂತವಾಗುವದು. ಬಿಳಪು ಮಂಜುಗಳಂತೆ ಚಿತ್ತ ಪ್ರಾಣಗಳು ಅಭಿನ್ನ ವಾದ್ದರಿಂದಿವರಲ್ಲೊಂದರ ನಾಶದಿಂ ಮತ್ತೊಂದೂ ನಷ್ಟವಾಗುವದು. ಒಂದರ ನಿರೋಧದಿಂ ಮತ್ತೊಂದೂ ನಿರುದ್ಧವಾಗುವದೆಂದು ತಿಳಿಯುವನಾಗು. ಎಲೈ ರಘು ವೀರನೆ! ಪ್ರಾಣನಿರೋಧ ಕ್ರಮಗಳಂ ಕೇಳುವನಾಗು. ಸತ್ಸಂಗ ಶಾಸ್ತ್ರ ವಿಚಾರ ಗಳಿಂದುಂಟಾದ ವೈರಾಗ್ಯಾಭ್ಯಾಸಗಳಿಂ ಸಂಸಾರಾಪೇಕ್ಷೆ ತಪ್ಪಲು ಇಷ್ಟದೇವತಾ ಮೂರ್ತಿಧ್ಯಾನದಲ್ಲಿ ಚಿತ್ತವೇಕ ವಾಗುವದ್ದರಿಂದಲೂ, ದೃಢವಾಗಿ ಮುಖ್ಯತತ್ವ ಸ್ವರೂಪನಾದ ಪರಮೇಶ್ವರನಂ ಧ್ಯಾನಿಸುವದ್ದರಿಂದಲೂ, ಪೂರಕ ಕುಂಭಕ ರೇಚಕಾತ್ಮಕವಾದ ಪ್ರಾಣಾಯಾಮವು ಧ್ಯಾನಸಹಿತವಾದ ಅಭ್ಯಾಸದಿಂ ಶ್ರಮ ದುಃಖಗಳಿಲ್ಲದೆ ಸಿದ್ಧವಾಗುವದ್ದರಿಂದಲೂ, ಜಪಿಸಲ್ಪಡುವ ಪ್ರಣವದ ಚತುರ್ಥ ಮಾತ್ರಾರ್ಥ ವಿಚಾರದಲ್ಲಿ ಬಾಹ್ಯಜ್ಞಾನ ವಡಗುವದ್ದರಿಂದಲೂ, ಧ್ಯಾನ ದೀರ್ಘ ವಾದ ರೇಚಕವಾಯುವು ಗಗನದಲ್ಲ ವಿಚ್ಛಿನ್ನವಾಗಿ ಅಂಗರಂಧ್ರವಂ ಸೇರದಿರುವದ್ದ ರಿಂದಲೂ, ಪೂರಕ ವಾಯುವು ಒಳಗೆ ಗಿರಿಯಲ್ಲಿ ಮೇಘದಂತೆ ನಿಲ್ಲುವದ್ದರಿಂದಲೂ, ಪೂರ್ಣ ಕುಂಭದಂತೆ ಕುಂಭಕವು ಬಹುಕಾಲ ಚಲಿಸದಿರುವದ್ದರಿಂದಲೂ, ತಾಲೂ ರ್ಧ್ವ ಭಾಗದ ರಂಧ್ರದಲ್ಲಿ ನಾಲಿಗೆಯಂ ನಿಲ್ಲಿಸಿ ಬ್ರಹ್ಮರಂಧ್ರಕ್ಕೆ ಪ್ರಾಣವಂ ಸೇರಿ ಸುವದ್ದರಿಂದಲೂ, ಯಾವ ವಿಚಾರವೂ ಇಲ್ಲದ ಚಿದಾಕಾರಧ್ಯಾನದಿಂ ಬಾಹ್ಯಾಂತರ ಜ್ಞಾನ ವಡಗುವದ್ದರಿಂದಲೂ, ನಾಸಾಗ್ರದಿಂದೀಚೆಗೆ ದ್ವಾದಶಾಂಗುಲದೊಳ್ ನಿರ್ಮಲಾಕಾಶವಂ ಲಕ್ಷಿಸುವಲ್ಲಿ ಮನೋದೃಷ್ಟಿಗಳಿಗೆ ಲಯವಾಗುವದ್ದರಿಂದಲೂ, ದ್ವಾದಶಾಂಗುಲವಾದ ತಾಲೂರ್ಧ್ವರಂಧ್ರದೊಳ್ ಪ್ರಾಣಸೇರುವದ್ದರಿಂದಲೂ, ಭ್ರೂಮಧ್ಯದೊಳ್ ನೇತ್ರಪ್ರಕಾಶವು ಶಾಂತವಾಗುವಲ್ಲಿ ಅದೃಶ್ಯ ಜ್ಞಾನವೊಳ್ ದ್ರಷ್ಟ್ರುವಾಗಿರುವನು ನಾನೆಂಬುವದು ಗೊತ್ತಾಗುವದ್ದರಿಂದಲೂ, ಸುಮ್ಮನೆ ಕುಳಿ ತಿರುವಲ್ಲಿ ಯಾವ ಜ್ಞಾನವುಂಟಾಗುವದೊ ಅದನ್ನೇ ಲಕ್ಷ್ಯವಾಗಿ ಹಿಡಿದು ಅದರ ವಿಕಲ್ಪಗಳಂ ತ್ಯಜಿಸುತ್ತಾ ನಿರ್ವಿಕಲ್ಪವಾಗಿ ನಿಂದ ಆ ಲಕ್ಷ್ಯಕ್ಕೆ ದ್ರಷ್ಟ್ರುವಾದವನು ನಾನೆಂದು ತಿಳಿಯುವದ್ದರಿಂದಲೂ, ಹೃದಯಾಕಾಶದಲ್ಲಿ ವಾಸನಾರಹಿತವಾದ ಮನ ಸ್ಥಿತಿಯಿಂದಲೂ, ಪ್ರಾಣಸ್ಪಂದವು ನಿರುದ್ಧವಾಗುವದೆಂದು ಹೇಳುವಲ್ಲಿ ಹೃದಯವೆ ನ್ನುವದಾವದೆಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು,- ಎಲೈ ಸೂಕ್ಷ್ಮಮತಿಯೆ ! ಎದೆಯ ಒಳಭಾಗವನ್ನೇ ಹೃದಯವೆಂದು ಹೇಳುವರು. ಅದಂ ಗ್ರಹಿಸಬಾರದು. ಯಾವದು ಅದರೊಳಗೂ ಹೊರಗೂ ಮಧ್ಯದಲ್ಲೂ

ಇರುತ್ತಾ ಸಮಸ್ತಪದಾರ್ಥಗಳಿಗೂ ಕನ್ನಡಿಯಾಗಿ ಸಕಲ ಸಂಪತ್ತುಗಳಿಗೂ ಬೊಕ್ಕಸವಾಗಿ ಸರ್ವ ಪ್ರಾಣಿಗಳಿಗೂ ಜ್ಞಾನಸ್ವರೂಪವಾಗಿರುವದೋ ಆ ಹೃದಯವನ್ನೇ ನೀನು ಗ್ರಹಿಸುವನಾಗು. ಇದೇ ಚಿದಾಕಾಶವೆನಿಸುವುದು. ಇದರಲ್ಲೇ ಮನವು ನಿಲ್ಲಿಸತಕ್ಕದ್ದು. ಪ್ರಾಣ ನಿರೋಧದಲ್ಲಿ ನಾನು ಹೇಳಿದ ಯುಕ್ತಿಗಳಿಂದಲೂ, ಹಿರಣ್ಯಗರ್ಭ ಮೊದಲಾದವರು ಹೇಳಿದ ಯುಕ್ತಿಗಳಿಂದಲೂ, ಸಾಧಿಸುವ ಪುರುಷನು ಹಠಾತ್ಕಾರದಿಂ ದೇಹಕ್ಕೆ ಬಾಧೆ ಸಂಭವಿಸುವದಾದ್ದರಿಂದ ಕ್ರಮವಾಗಿಯೇ ಸಾಧಿಸಬೇಕು. ಭ್ರೂಮಧ್ಯದಿಂದಲೂ ತಾಲುರಂಧ್ರದಿಂದಲೂ, ಬ್ರಹ್ಮರಂಧ್ರ ಪರ್ಯಂತವಾಗಿ ಎರಡು ದ್ವಾದಶಾಂಗುಲಗಳು ನಾಸಿಕೆಯಿಂದ ಹೊರಕ್ಕೆ ಒಂದು ದ್ವಾದಶಾಂಗುಲವು ಇವುಗಳ ಕೊನೆಗಳಲ್ಲಿ ಚಿತ್ತವಂ ನಿಲ್ಲಿಸುವದ್ದರಿಂದ ಪ್ರಾಣದ ಚಲನನಿಲ್ಲುವದು. ಭಾರಿಭಾರಿಗೂ ಅಭ್ಯಾಸಕ್ರಮವಾಗಿ ಹಿಂತಿರುಗಿಸಿದ ನಾಲಿಗೆಯಿಂದ ಬ್ರಹ್ಮಪ್ರಕಾಶ ಮಾರ್ಗವಾದ ಇಂದ್ರಯೋನಿಯಾಕ್ರಮಿಸಲ್ಪಡುವದು. ಈ ಸ್ಥಾನಗಳಲ್ಲಿ ಪ್ರಾಣ ನಿರೋಧದಿಂದನೇಕ ಪ್ರಕಾರವಾದ ಸಿದ್ಧಿಗಳಾಗುವವು. ಅವುಗಳು ಅನೇಕ ವಿಕಲ್ಪಗಳುಳ್ಳಂಥಾವಾದಾಗ್ಯೂ ವೈರಾಗ್ಯಶಾಲಿಗೆ ಮುಕ್ತಿ ವಿರೋಧಗಳಾಗಲಾರವು. ಆತ್ಮಾರಾಮನಾಗಿ ಈ ಲಕ್ಷ್ಯಭ್ಯಾಸವಂ ಮಾಡುವನಿಗೆ ಒಳಸುಖ ತೋರಲು ಸಮಸ್ತವಾದ ದುಃಖಗಳೂ ಶಾಂತವಾಗುವವು. ಕ್ರಿಯಾಶಕ್ತಿ ಸ್ವರೂಪವಾದ ಪ್ರಾಣದ ಚಲನವಿಲ್ಲದೆ ಮನವು ಚಲಿಸುವದು. ಅದು ಚಲಿಸದೆ ಬಾಹ್ಯಜ್ಞಾನವಾಗದು. ಬಾಹ್ಯಜ್ಞಾನವಿರುವವರಿಗೆ ದುಃಖ ತಪ್ಪದಾದ್ದರಿಂದ ತುಂಟನಂ ಬಂದೀ ಗೃಹವಂ ಸೇರಿಸುವಂತೆ ಮನವನ್ನೊಂದು ಲಕ್ಷ್ಯದಲ್ಲಿ ನಿಲ್ಲಿಸಲು, ಮಗನ ದುಃಖದಿಂ ತಂದೆಯಂತೆ ಪ್ರಾಣವು ಬದ್ಧವಾಗುವದು. ಬದ್ಧನಾದ ಮಾನಶಾಲಿಗೆ ಪಶ್ಚಾತ್ತಾಪದಂತೆ ಮನಸ್ಸಿಗೆ ವಿಚಾರವುಂಟಾಗುವದು. ದುಃಖಪಡುವ ಕುಲಪ್ರಸೂತನಂ ಸಮಾಧಾನಪಡಿಸಲು ಬರುವ ವೃದ್ಧನಂತೆ ಮನವು ವಿಚಾರಿಸುವ ಸ್ಥಲದಲ್ಲಿಯೇ ಸರ್ವವ್ಯಾಪಕನಾದ ಪರಮಾತ್ಮನು ಪ್ರಕಾಶಿಸುವನು. ದೀಪದಿಂ ತಮದಂತೆ ಆ ಪ್ರಕಾಶದಿಂ ಬಾಹ್ಯವಾಸನೆಯುಳಿಯಲು ನಿತ್ಯಾನಂದ ಸ್ವರೂಪವಾದ ಮೋಕ್ಷವು ಸಿದ್ಧವಾಗುವದು. ಸರ್ವ ರಸಗಳಿಗೂ ರಸವಾಗಿ ಸರ್ವ ತೇಜಗಳಿಗೂ ತೇಜವಾಗಿ ಸರ್ವ ಕಾಮಗಳಿಗೂ ಕಲ್ಪವೃಕ್ಷವಾದ ಹೃದಯಾಕಾಶ ಚಂದ್ರನ ಚಂದ್ರಿಕಾ ವಿಹಾರ ಸುಖವಂ ತಿಳಿದವನೇ ಜೀವನ್ಮುಕ್ತನೆನಿಸುವನು. ಎಲೈ ಶ್ರೀರಾಮಚಂದ್ರನೇ! ಇನ್ನು ಜ್ಞಾನದ ಕ್ರಮವಂ ನೀನು ಕೇಳುವನಾಗು? ದೃಶ್ಯವಾದ ಸಮಸ್ತ ಪದಾರ್ಥಗಳೂ ಅದರ ಶಕ್ತಿ

ಗಳೂ ಸಹ ಪರಮಾತ್ಮನಿಗೆ ಅಭಿನ್ನವಾದ್ದರಿಂದ ದೃಗ್ದೃಶ್ಯ ಸೃಷ್ಟಿರೂಪವಾದ ಸರ್ವ ಪ್ರಪಂಚವೂ ಪರಮಾತ್ಮನಲ್ಲದೆ ಮತ್ತೊಂದಲ್ಲವೆಂಬ ದೃಢವಾದ ನಿಶ್ಚಯವೇ ಸಮ್ಯಜ್ಞಾನವೆಂತಲೂ ಸಮ್ಯಗೀಕ್ಷಣವೆಂತಲೂ ಹೇಳಲ್ಪಡುವದು. ಅಜ್ಞಾನದಿಂ ರಜ್ಜು ಸರ್ಪವಾಗುವಂತೆ ಇದಿಲ್ಲದ್ದರಿಂ ಜನ್ಮವುಂಟಾಗುವದು. ಇದು ಸಿದ್ಧವಾಗುವದ್ದರಿಂದ ಭ್ರಾಂತಿಯಂತೆ ಬಾಧ ತಪ್ಪುವದೆಂದು ತಿಳಿಯುವನಾಗು ? ಇದು ಜ್ಞೇಯವೆಂಬ ಜ್ಞಾನವೂ ಅದರ ಸಂಕಲ್ಪವೂ ಇಲ್ಲದ ಜ್ಞಪ್ತಿಯೇ ಮುಕ್ತಿಯಲ್ಲಿ ನಿಲ್ಲುವದು. ವಿಶುದ್ಧರೂಪವಾದ ಆ ಜ್ಞಾನವೇ ಪರಮಾತ್ಮನೆನಿಸುವದು. ಅದೇ ಸ್ವೇತರ ಜ್ಞಾನದಿಂದ ಅಶುದ್ಧರೂಪವಾಗಿ ಅವಿದ್ಯೆಯೆನಿಸುವದು. ಅದ್ವಿತೀಯವಾದ್ದರಿಂದ ಸ್ವಾಜ್ಞಾನವಿಲ್ಲದ ಆ ಜ್ಞಾನವೇ ಜ್ಞೇಯವಾಗಿ ತನ್ನಿಂ ತಾನೇ ವಿಚಾರದಿಂ ನಿಶ್ಚೈಸಿ ಮರಳಿ ಅದ್ವಿತೀಯ ಸ್ವರೂಪವಾಗಿ ನಿಲ್ಲುವದು. ಹೀಗಿರುವಲ್ಲಿ ದ್ವೈತಾದ್ವೈತ ವಿವಾದಗಳು ಜನ್ಮಜರಾ ಮರಣಾದಿ ಕಲ್ಪನೆಗಳು, ಬಂಧ ಮೋಕ್ಷ ವಿಚಾರಗಳು, ಆಕಾಶಾದಿ ಪದಾರ್ಥಗಳು ಸಹ ಎಲ್ಲಿರುವವೋ ನೀನೇ ನೋಡುವನಾಗು ! ಸರ್ವವೂ ಬ್ರಹ್ಮವೆಂಬುದೊಂದೇ ಯಥಾರ್ಥವಲ್ಲದೆ ಮತ್ತೊಂದೂ ಅಲ್ಲವೆಂದು ನಿಶ್ಚೈಸತಕ್ಕದ್ದು. ಇಂಥಾ ಬುದ್ಧಿಯಿಂದಾತ್ಮನನ್ನಾಲಿಂಗಿಸಿಕೊಂಡಿರುವನನ್ನು ಯಾವ ಭೋಗಗಳೂ ಸೆಳೆಯಲು ಸಮರ್ಥವಾಗಲಾರವು. ಈ ಜ್ಞಾನಸಾರವಿಲ್ಲದ ಪುರುಷನನ್ನು ಜಲವಿಲ್ಲದ ಬಕಿಯಲ್ಲಿರುವ ಮತ್ಸ್ಯವಂ ಬಕಪಕ್ಷಿಗಳಂತೆ ದುಃಖಗಳಾಕ್ರಮಿಸುವವು. ಸತ್ತ್ವ ವಿಚಾರದಿಂ ನೋಡುವಲ್ಲಿ ಕಾಷ್ಠ ಪಾಷಾಣ ವಸ್ತ್ರ ಮೊದಲಾದ ಸಮಸ್ತ ವಸ್ತುಗಳು ಒಂದೇ ಆಗುವದ್ದರಿಂದ ಭೇದ ಭ್ರಾಂತಿಯಂ ಬಿಟ್ಟು ಸರ್ವಕಾಲದಲ್ಲೂ ಶಾಂತ ಸ್ವಭಾವನಾಗಿರುವನಾಗು ! ಎಲೈ ಸೂಕ್ಷ್ಮಬುದ್ಧಿಯೇ ! ಭಾರವಾಹಿಯಾದ ರಜಕನ ಕತ್ತೆಯು ಕೆಸರಿನಲ್ಲಿ ಮುಣಗಲು, ನೀನಾಪತಿಗೆ ಹೇಗೆ ದುಃಖಪ್ರಸಕ್ತಿ ಇಲ್ಲವೋ ಹಾಗೆ ನೇತ್ರವು ಸ್ತ್ರೀರೂಪಾಕೃತಿಯದೊಳ್ಮುಣಗುವಲ್ಲಿ ಆತ್ಮನಿಗೆ ದುಃಖ ಪ್ರಸಕ್ತಿಯಾಗುವದಿಲ್ಲ. ಮತ್ತು ಭಾರವಂ ಹೊರುವದಕ್ಕೆ ಎತ್ತಿನಂತೆ ರೂಪದಂ ನೋಡಲೋಸುಗವೇ ನೇತ್ರ ಹುಟ್ಟಿರುವದು. ಹೀಗಿರುವಲ್ಲಿ ಅದರ ಅಭಿಮಾನದಿಂದಾತ್ಮನು ದುಃಖಪಡುವದಕ್ಕೆ ಕಾರಣವೇನಿರುವದು. ರೂಪವು ತಾನು ಹಾಳಾಗುವದಲ್ಲದೆ ತನ್ನನ್ನಭಿಮಾನಿಸುವ ಆತ್ಮನನ್ನು ವ್ಯಥೆಪಡಿಸುವದಾದ್ದರಿಂದ ರೂಪಾದಿ ವಿಷಯಗಳನ್ನಭಿಮಾನಿಸುವನು ಅಧಮನೆನಿಸುವನು. ಪ್ರಾಜ್ಞನಾದವನೋ ಆತ್ಮನ ಪ್ರಕಾಶಕ ಭಾವವನ್ನು ಆನಂದಮಯವಾದ ಕೋಶಗಳ ಅವನ ಅನುಗತಿಯನ್ನೂ ನೋಡುತ್ತ, ಆತ್ಮನ ಅಭಿಮಾನದಿಂದ ಅಸತ್ತಾದ ರೂಪಾ

ದಿಗಳಿಗೆ ಮಿಥ್ಯತ್ವವಲ್ಲದೆ ಇವುಗಳಿಗೆ ಬೇರೆ ಸತ್ವವಿಲ್ಲವೆಂದು ಉದಾಸೀನನಾಗಿರುವನು. ರೂಪಾದಿ ವಿಷಯ ದರ್ಶನದಲ್ಲಿ ವಿವೇಕಿಗಳು ಕರಣಗಳಿಗೆ ಬೋಧಿಸುವ ಕ್ರಮವೆಂತೆಂದರೆ;—ಎಲೈ ನೇತ್ರವೇ! ವಿಷಯಗಳೆಲ್ಲವೂ ಸಿದ್ಧವಾಗಿದ್ದಾಗ್ಯೂ ಆತ್ಮನು ಸಾಕ್ಷಿ ಭಾವದಿಂ ಸುಖದಿಂದಿರುವದಿಲ್ಲವೆ? ಹಾಗೆ ನೀನೂ ಸುಖದಿಂದಿರದೆ ರೂಪಕ್ಕಾಗಿ ವ್ಯಥೆಪಡುವದಕ್ಕೆ ಕಾರಣವೇನು? ಎಲೈ ಚಿತ್ತವೇ! ಜಲವು ಸುಳಿಯಾಗುವಂತೆಯೂ, ಕಣ್ಣೀರಿನಿಂ ಕೂಡಿದ ದೃಷ್ಟಿಯಿಂ ಗಗನದಲ್ಲಿ ನವಿಲುಗರಿಯುಂಟಾಗುವಂತೆಯೂ, ಕಣ್ಣಿನ ಪ್ರಚಾರದಿಂದಲೇ ಸ್ತ್ರೀ ಸೌಂದರ್ಯಾದಿಗಳು ವಿಚಿತ್ರವಾಗಿ ಕಾಣಬರುವವು. ಅಸತ್ತಾದ ಈ ವಿಷಯಕ್ಕೋಸುಗ ನೀನು ವ್ಯಥೆಪಡುವದಕ್ಕೆ ಕಾರಣವೇನು? ಚಲ ಸ್ವಭಾವವಾದ ನೀನು ವಿಷಯಾಕಾರವಾಗಿ ಸ್ಫುರಿಸುವಲ್ಲಿ ಚಲಿಸುವ ಪ್ರಳಯಕಾಲ ಸಮುದ್ರದೊಳ್ ಮೀನಿನಂತೆ ಅಹಂಕಾರವು ತಲೆದೋರುವದು, ಅದಕ್ಕೆ ನಿಮಿತ್ತವಿಲ್ಲವದ್ದರಿಂದ ಬೆಳಕಿನಿಂ ಕಂಡ ಜಡವಾದ ರೂಪದೊಳ್ ನೀನು ಅಭಿಮಾನಪಡಬೇಡ, ಸೂರ್ಯನ ಬೆಳಕು, ಸ್ತ್ರೀರುಗಳ ರೂಪ, ಕಣ್ಣಿನ ನೋಟ, ಇವುಗಳು ಸ್ತ್ರೀ ಮುಖದರ್ಪಣಗಳಂತೆ ಶರೀರವು ಇದರಲ್ಲಿ ಸ್ತ್ರೀಮುಖವಂ ನೋಡಿ ವಿಟನಂತೆ ನೀನು ವ್ಯಥೆಪಡುವದಕ್ಕೆ ನಿನ್ನ ಅಜ್ಞಾನ ಕಲ್ಪನೆಯೇ ಕಾರಣವಾಗಿರುವದ್ದರಿಂದ ಇವುಗಳ ಸೇರಿಕೆಗೆ ನಿಮಿತ್ತವಾದ ಮನವಂ ಗ್ರಹಿಸಿ ಅಸತ್ತಾದ ವಿಷಯಕ್ಕೋಸುಗ ಉತ್ಸಾಹ ಪಡಬೇಡ? ವಿವೇಕದಿಂ ನಿನ್ನ ಅಜ್ಞಾನ ಕಲ್ಪನೆಯುಣಗಲು ಧಾರ ಕಿತ್ತ ಮಣಿಗಳಂತೆ ವಿಷಯಗಳೆಲ್ಲವೂ ಬೇರೆಬೇರೆಯಾಗಿ ನಿಲ್ಲುವವು. ಸರ್ವೇಂದ್ರಿಯಗಳಿಗೂ ಬೋಧಕವಾಗಿ ಭೋಗ ರೋಗಗಳಿಗೆ ನೀನೇ ಕಾರಣವಾಗುತ್ತೀಯೆ? ಆದ್ಯಂತಗಳಲ್ಲಿಲ್ಲದೆ ಮಧ್ಯವಲ್ಲಿ ಶಾಶ್ವತ ವಸ್ತುವಿಗಿಂತಲೂ ಅಧಿಕವಾಗಿ ತೋರುತ್ತಾ ವಿಚಾರವುಂಟಾದ ಕೂಡಲೇ ಹಾಳಾಗುತ್ತೀಯೆ? ಅದರಿಂ ನಿನಗೆ ಸುಳ್ಳೇ ದೃಷ್ಟಾಂತವಾಗುವದಲ್ಲದೆ ಮತ್ತೊಂದಿಲ್ಲ. ಕಲ್ಪಿತವಾದ ವಿಷಯಗಳಂ ಗ್ರಹಿಸಿ ತಾನೆಂತಲೂ ತನ್ನದೆಂತಲೂ ನಂಬಿದ ಆತ್ಮನಂ ಕೆಡಿಸಿ ತಾನೂ ದುಃಖಪಡುತ್ತಿರುವ ನಿನ್ನ ಕುಣಿತವು ನನಗೆ ಅಸಹ್ಯವಾಗಿರುವದು. ಇದ್ದರೂ ಇರು ಹೋದರೂ ಹೋಗು, ಜಡಭ್ರಾಂತ ಮೃತಸ್ವರೂಪವಾದ ನಿನ್ನಿಂದ ನನಗೆ ಆಗತಕ್ಕದ್ದೇನು. ಮೂರ್ಖನು ನಿನಗೆ ಅಧೀನನಾಗುವನಲ್ಲದೆ ಪ್ರಾಜ್ಞನೆಂದಿಗೂ ಆಗಲಾರನು. ನಿನ್ನ ಸ್ವರೂಪವಂ ತಿಳಿಯದೆ ನಿನಗಭಿಮಾನ ಪಡುವದ್ದರಿಂದ ಶಮದಮಾದಿ ಸದ್ಗುಣಗಳಿಗೆ ನಾನೂ ದೂರವಾಗಿದ್ದೆನು. ಈಗ ನಿನ್ನ ನಾಳುವಿಕೆಯು ಗೊತ್ತಾಗಲು, ನನ್ನ ದೇಹವೂ ಕೂಡ ಜನರಿಗೆ ಸೇವ್ಯವಾಗಿರುವದು. ಎಲೈ ಚಿತ್ತಪಿಶಾಚವೇ ಭೋಗ

ವೃತ್ತಿಗಳೆಂಬ ಪಿಶಾಚಿಗಳೊಡನೆ ನನ್ನ ದೇಹವೆಂಬ ಮನೆಯಂ ಬಿಟ್ಟುಹೋಗುವೆ ಯಾದರೆ ನಾನು ವಿವೇಕಿಯೆನಿಸೇನು ? ವಾಸ್ತವವಾಗಿಲ್ಲದಿದ್ದರೂ ಇರುವದಕ್ಕಿಂತಲೂ ಅಧಿಕವಾಗಿ ಜನಗಳಂ ಗೋಳಾಡಿಸುವೆಯಲ್ಲದೆ ನಿನ್ನ ಬಲಪರಾಕ್ರಮಗಳಂಥಾವೊ ? ನಿನಗೆ ಆಶ್ರಯವಾವದೊ ? ಅಜ್ಞಾನದಿಂ ಮೃತರಾದವರನ್ನೇ ನೀನು ಗೋಳುಗುಟ್ಟಿಸುತ್ತೀಯೆ, ವಾಸ್ತವವಾಗಿ ನೀನು ಪರಾಕ್ರಮಿಯೆ ? ಆದರೆ ವಿಚಾರ ಶಕ್ತಿಯಂ ಪಿಡದಿರುವ ನನ್ನೆದುರಿಗೆ ನಿಲ್ಲುವನಾಗು ? ಅಥವಾ ನೀನಿರುವದಾದರ ಹೊಡೆಯಬಹುದು ? ಇಲ್ಲದಿರುವ ನಿನ್ನೊಡನೆ ಸೆಣಸುವದ್ದರಿಂದ ನಾನೇ ಅಜ್ಞಾನೆನಿಸಿಕೊಳ್ಳುವೆನು. ಚಿತ್ತಬೇತಾಳವೆಂಬ ಶಬ್ದಮಾತ್ರ ಶ್ರವಣದಿಂ ಭ್ರಾಂತನಾದ ನ್ನಿಂದ ಮಾಡಲ್ಪಟ್ಟ ಚೇಷ್ಟೆಗಳು ಈಗ ನನಗೆ ಹಾಸ್ಯಾಸ್ಪದವಾಗಿರುವವು. ಈಗ ನೀನು ಪಾಳಾಗಿ ಹೋದದ್ದರಿಂದ ನಾನು ಕೃತಾರ್ಥನಾಗಿರುವೆನು. ಈಗ ವಿಚಾರ ವೆಂಬ ಮಂತ್ರದಿಂ ಚಿತ್ತಬೇತಾಳವು, ಚಿಂತಾ ಪಿಶಾಚಿಯು, ಅಹಂಕಾರ ರಾಕ್ಷಸನೂ ಕೂಡ ದೇಹದಿಂದ ಓಡಿಹೋದರು. ಪರಮಾರ್ಥವಾಗಿ ನನಗೆ ಮನವ್ಯಾ ವದು, ಆಶೆ ಯಾವದು, ಅಹಂಕಾರ ಯಾವದು, ವ್ಯರ್ಥದಾಗೀಸಂಸಾರದಿಂ ನಾನು ಕಷ್ಟಪಟ್ಟೆನು ? ಈಗ ಕೇವಲ ಚಿನ್ಮಾತ್ರನಾದ ಸ್ವರೂಪದಿಂ ಪ್ರಕಾಶಿಸುವ ಕೃತಕೃತ್ಯನಾದ ನನ್ನನ್ನೇ ನಾನು ನಮಿಸುವೆನು. ಶೋಕವೂ ಮೋಹವೂ ಸಹ ಅವಿಚಾರ ಸಿದ್ಧವಾದ್ದರಿಂದಿಲ್ಲವೆನಿಸುವದು. ಅಭಿಮಾನರೂದವಾದ ಅಹಂಕಾರವು ಅವಕ್ಕೆ ಅಭಿಮಾನಿಯಾದ ಆತ್ಮನು ಸಹ ಇಲ್ಲ. ಅದಕ್ಕೆ ಸಾಕ್ಷಿಯಾದ ಪ್ರತ್ಯಕ್ಚೈತನ್ಯವಿಲ್ಲವೆಂಬುವದು ಇಲ್ಲ. ಆ ಚೈತನ್ಯವ ದ್ವಿತೀಯವಾದ್ದರಿಂದ ಅದಕ್ಕೆ ನಾನು ಭಿನ್ನನಲ್ಲ? ಅದರಿಂದಲೇ ನನಗೆ ಆಶೆಯು ಕರ್ಮಗಳು ಸಂಸಾರವು ಕರ್ತೃತ್ವ ಭೋಕ್ತೃತ್ವಗಳು ದೇಹವೂ ಕೂಡ ಇಲ್ಲವೆನಿಸುವವು. ಆತ್ಮಾನಾತ್ಮ ವಸ್ತುಗಳು ಪರಸ್ಪರಸಾಪೇಕ್ಷೆ ಯುಳ್ಳವಾದ್ದರಿಂದ ಆ ಶಬ್ದಗಳಿಗೆ ವಿಷಯವಾದ ಚೇತನತ್ವ ಜಡತ್ವಗಳು ನನಗೆ ಸಂಭವಿಸಲಾರವು. ಸರ್ವವ್ಯಾಪಕವಾದ ಕೇವಲ ಚಿದ್ವಸ್ತುವೇ ನಾನೆನಿಸುವವಾದ್ದರಿಂದಲೂ, ಅದರ ಸತ್ತಾಬಲದಿಂ ಸರ್ವವೂ ಇರುವದ್ದರಿಂದಲೂ, ದೇಶ ಕಾಲ ವಸ್ತು ಭೇದಗಳವಕ್ಕಿಲ್ಲದ್ದರಿಂದಲೂ, ಜಗದ್ರೂಪನಾದವನು ಅದಕ್ಕೆ ಅವಿಯಲ್ಲಿರುವನು. ಅದಕ್ಕೆ ಕರ್ತೃತ್ವವೂ ಸಹ ನಾನೆನಿಸುವೆನು. ನಾಮರೂಪ ವಿಕಾರ ವರ್ಜಿತನಾಗಿ ತರಂಗ ನಿರ್ಮಲ ಪ್ರಕಾಶ ಕಾಲತ್ರಯಾತ್ಮಕನಾಗಿರುವ ನನ್ನನ್ನೇ ನಾನು ನಮಿಸುವೆನು. ಜಗದೇಕಪ್ರಕಾಶಕನಾಗಿ ಸರ್ವವ್ಯಾಪಿಯಾಗಿರುವ ಸತ್ತೆಯಿಂದಾತ್ಮಾರಾಮನಾಗಿರುವ ನನಗೋಸುಗ ನಮಸ್ಕಾರವಾಗಲಿ, ಸಕಲ ದೃಶ್ಯಾಕೃತಿಗನಾದಾಗ್ಯೂ

ಜಗದ್ರೂಪದಿಂ ದೃಶ್ಯನಾಗಿರುವ ನನಗೆ ನಮಸ್ಕಾರವು. ಮನನ ಕ್ರಮವಿಲ್ಲದೆ ಸಮಭಾವದಿಂದಭಿರಾಮವಾಗಿ ವಿರೂಪರಾಗಿಯೂ ವಿಶ್ವರೂಪ ಪ್ರಕಾಶಕವಾಗಿ ಆದಿಮಧ್ಯಾಂತಗಳಿಲ್ಲದೆ ಗುಣಾತೀತದಾಗಿರುವ ಸಕಲೇಶ್ವರ ಸ್ವರೂಪವಾದ ಸ್ವರೂಪವನ್ನೇ ನಾನು ನಮಿಸುವೆನು. ದೃಶ್ಯವೆಲ್ಲವೂ ಆತ್ಮನೆಂದು ಚಿತ್ತದಿಂ ಜಗವು ತೊಡೆಯುಬ್ಬಿಟ್ಟಿತು. ಜಡವಾದ್ದರಿಂದಲೂ ಚಿತ್ತಾಂತರವಿಲ್ಲದ್ದರಿಂದಲೂ, ಮಾಯಿಕವಾದ್ದರಿಂದಲೂ, ಗಗನ ವೃಕ್ಷದಂತೆ ಆ ಚಿತ್ತವೇ ಇಲ್ಲವೆನಿಸುವದು. ನಾವೆಯಲ್ಲಿರುವನಿಗೆ ವೃಕ್ಷದ ಗಮನದಂತೆಯೂ, ಚಕ್ರದಮೇಲಿರುವನಿಗೆ ಗಿರಿ ಭ್ರಮೆಯಂತೆಯೂ, ಆತ್ಮನೇ ಚಿತ್ತವಾಗಿ ಕಾಣುವನಲ್ಲದೆ ಚಿತ್ತ ಬೇರೆಯಿಲ್ಲವೆಂದು ತಿಳಿಯತಕ್ಕದ್ದು. ಹೀಗೆ ಚಿತ್ತವೇ ಬ್ರಹ್ಮವಾದ್ದರಿಂದದರಿಂದುಂಟಾದ ಜಗವೆಲ್ಲವೂ ಚಿತ್ರದಂತೆ ಬ್ರಹ್ಮಾತ್ಮಕವೆನಿಸುವದು. ಈಗ ನಾನು ಸಂದೇಹವಾವದೂ ಇಲ್ಲದೆ ಶಾಂತಜ್ವರನಾಗಿರುವೆನು. ಬೆಳಕು ಹೋಗುವಲ್ಲಿ ಚಿತ್ರದ ಬಣ್ಣಗಳಂತೆ ಚಿತ್ತವಳಿದಿದ್ದರಿಂ ಬಾಲ್ಯ ತೃಷ್ಣಾದಿಗಳೆಲ್ಲವೂ ನಷ್ಟವಾದವು. ಈಗ ಚಿತ್ತವು ಮೃತವಾದ್ದರಿಂದಲೂ, ತೃಷ್ಣೆಯಣಗಿದ್ದರಿಂದಲೂ, ಮೋಹವಳಿದಿದ್ದರಿಂದಲೂ, ನಿರಹಂಕಾರತೆಯುಂಟಾದ್ದರಿಂದಲೂ, ಎಚ್ಚರಿಕೆಯಲ್ಲೇ ಎಚ್ಚರವಾಗಿರುವೆನು. ಈಗ ನಾನಾತ್ಮವಸ್ತುವೆಂತಲೂ ಬ್ರಹ್ಮ ಬಾದೇ ಪ್ರಕಾಶಿಸುತ್ತಿಹುದೆಂತಲೂ ನಿಶ್ಚಯವಾದ ಬಳಿಕ ನಾನು ವಿಚಾರಿಸತಕ್ಕದ್ದೇನಿರುವದು. ಈ ಪೇಳಿಕೆಯಿಂದಲಾದರೂ ಉಪಯೋಗವೇನು ? ಚಿದಾಭಾಸಾದಿ ಲಕ್ಷಣಗಳಾವದೂ ಇಲ್ಲದೆ ಸರ್ವ ಪ್ರಕಾಶಾತೀತವಾಗಿರುವ ಪರಮಪಾವನವಾದ ಪದವಂ ಪಡೆದು ಶಾಶ್ವತವಾದ ಆತ್ಮಸ್ವರೂಪದಿಂ ಸ್ವಾಸ್ಥ್ಯನಾಗಿರುವೆನು. ಲೋಕವ್ಯವಹಾರದೊಳ್ ಯಾವದು ಇದೆಯೆಂತಲೂ ಯಾವದು ಇಲ್ಲವೆಂತಲೂ ಪ್ರಸಿದ್ಧವಾಗಿರುವದೋ ಅದೆಲ್ಲವೂ ಶಾಂತವಾದ ಬ್ರಹ್ಮವಲ್ಲದೆ ಮತ್ತೊಂದಲ್ಲ. ಆ ವಿಚಾರದಿಂದ ಕೆಟ್ಟಿದ್ದ ಮನವೇ ವಿಚಾರದಿಂದೇಂ ತಿಯಾದುದು ? ಇನ್ನುಮೇಲೆ ಮನವಿದ್ದರೂ ಇರಲಿ, ಹೋದರೂ ಹೋಗಲಿ, ಅದ್ವಿತೀಯಾತ್ಮ ಸ್ವರೂಪದಿಂದಿರುವ ನನಗೆ ವಿಚಾರದಿಂದಾಗತಕ್ಕದ್ದೇನಿರುವದು. ಇದುವರಿಗೆ ಅವಿಚಾರ ವಿಚಾರಗಳೆಂಬ ದ್ವಂದ್ವವಿದ್ದದ್ದರಿಂದ ವಿಚಾರಕ್ಕೋಸುಗ ಮಿತಾಕಾರನಾಗಿದ್ದೆನು. ವಿಚಾರದಿಂದೀಗ ಅಮಿತಾಕಾರನಾಗುವಲ್ಲಿ, ವಿಚಾರ ಕರ್ತೃವಾದ ನಾನೆಲ್ಲಿರುವೆನು ! ವಿಚಾರಕನಾದ ನಾನಿರುವೆನೋ! ಇಲ್ಲವೋ! ಎಂಬ ವಿಕಲ್ಪನಂ ಪದದಿಂ ಮರಳಿ ಮನವುಂಟಾಗುವದ್ದರಿಂದ ವಿಕಲ್ಪರೂಪವಾದೀ ಸಂಕಲ್ಪ ಕಲ್ಪನೆಯಂ ಬಿಟ್ಟು ಸ್ವಸ್ಥನಾಗಿರುವೆನೆಂದು ಭೋಜನ ಗಮನ ಮೊದಲಾದ ಸಕಲ ವ್ಯ

ಪಾರಗಳಲ್ಲೂ ಚಿಂತಿಸುವ ಮಹಾತ್ಮರು ಆತ್ಮಾರಾಮ ಭಾವದಿಂ ನಿರಂತರಂ ಕರಾಗಿರುವರು. ಈ ಪರಿಯಿಂ ತಾನು ವಿಚಾರಿಸಿ ಕೃತಕೃತ್ಯನಾದೆನೆಂಬ ಅರ್ಥವಂ ಸಂವರ್ತಮಹಾಮುನಿಯು ವಿಂಧ್ಯಪರ್ವತದೊಳ್ ನನ್ನಂ ಕುರಿತು ಪೇಳಿರುವನಾದ್ದರಿಂದ ಈ ಪರಿಯಾದ ವಿಚಾರದಿಂ ನೀನು ಸಂಸಾರದುಃಖ ಸಮುದ್ರವಂ ದಾಂಟಿ ನಿತ್ಯಾನಂದನಾಗಿರುವನಾಗೆಂದು ವಸಿಷ್ಠನು ನಿರೂಪಿಸಿದನೆಂಬಲ್ಲಿಗೆ;—ಉಪಶಮಪ್ರಕರಣದೊಳ್ ಜ್ಞಾನಯೋಗ ತರಂಗಿಣಿಯಲ್ಲಿ,--ಜೀವನ್ಮುಕ್ತ ಜ್ಞಾನಯೋಗ ಸ್ವರೂಪ ನಿರೂಪಣವೆಂಬ ಹದಿನೈದನೇ ತರಂಗಕ್ಕೆ ಮಂಗಳಮಸ್ತು ಶ್ರೀ.

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ.

ವಿಮಲಜ್ಞಾನಪ್ರದ ನಿರೂಪಣವೆಂಬ ಷೋಡಶ ತರಂಗ ಪ್ರಾರಂಭವು.

ಬಳಿಕ ಶ್ರೀರಾಮಚಂದ್ರನಂ ಕುರಿತು ವಶಿಷ್ಠನಿಂತೆಂದನು;—ಎಲೈ ಶ್ರೀರಾಮಭದ್ರನೇ! ವಿಮಲಜ್ಞಾನಪ್ರದವಾದ ಈ ಕ್ರಮವಂ ಕೇಳುವನಾಗು;— ವಿಂಧ್ಯಪರ್ವತದಲ್ಲಿಪ್ಪ ವೀತಹವ್ಯನೆಂಬ ಮಹಾಮುನಿಯು ಆಧಿವ್ಯಾಧಿಮಯವಾಗಿ ಸಂಸಾರ ಭ್ರಮಕಾರಿಯಾದ ಕರ್ಮಮಾರ್ಗದಿಂ ಭೀತನಾಗಿ ನಿರ್ವಿಕಲ್ಪ ಸಮಾಧಿ ಸಿದ್ಧಿಗೋಸುಗ ಶೀತಳವಾದ ಸ್ಥಳವಂ ಸೇರಿ ಅಲ್ಲಿ ಬಾಳೇಗಿಡಗಳಿಂ ಪೂರ್ಣವಾದ ತನ್ನ ಆಶ್ರಮದೊಳ್ ನೀಲೋತ್ಪಲದಲ್ಲಿ ಭ್ರಮರದಂತೆ ವಾಸವಂ ಮಾಡುತ್ತಾ, ಒಂದಾನೊಂದು ವೇಳೆಯೊಳ್ ನಿರ್ಮಲವಾದ ಪ್ರದೇಶದಲ್ಲಿ ಸಮವಾಗಿ ಕೃಷ್ಣಾಜಿನವಂ ಹಾಸಿಕೊಂಡು ಕುಳಿತು ಗಿರಿತಟದೊಳ್ ಮಳೆಹುಯ್ದು ಮೇಘದಂತೆ ವಿಶ್ರಾಂತನಾಗಿ ಪದ್ಮಾಸನವನ್ನಳವಡಿಸಿ ಹಿಮ್ಮಡಿಗಳ ಮೇಲೆ ಕೈಗಳನ್ನಿಟ್ಟುಕೊಂಡು ಊರ್ಧ್ವದೃಷ್ಟಿಯಾಗಿ ಚಿಂತಿಸುತ್ತಾ ಕಾಂತಿ ಸಮೂಹವಂ ಸೂರ್ಯನಂತೆ ಮನವಂ ಸೆಳೆದು ಇಂದ್ರಿಯಾಂತಃಕರಣ ವಿಷಯಗಳಂ ತ್ಯಜಿಸುತ್ತಾ ಆಲೋಚಿಸಿದನದೆಂತೆನೆ:—ಎಲೈ ಈ ಮನವು ವಿಷಯಗಳಿಂದೆಳೆಯಲ್ಪಡುತ್ತಿದ್ದಾಗ್ಯೂ ಅಲೆಗಳಲ್ಲಿ ಸಿಲುಕಿದ ತರಗೆಲೆಯಂತೆ ಚಂಚಲವಾಗಿರುವದು ? ಈ ವಿಷಯಾನುರಕ್ತವಾದ ಚಕ್ಷುರಾದೀಂದ್ರಿಯಗಳಿಂದಿವು ಅಂಗೈಯ್ಯಿಂದ ಹೊಡೆಯಲ್ಪಟ್ಟ ಚಂಡಿನಂತೆ ಹಾರುತ್ತಿರುವದು. ಇಂದ್ರಿಯವೃತ್ತಿಮಯವಾದ ಸೋಪಾನವನ್ನೇರುವಂತೆ ಹಿರಿದಣವಂ ಬಿಡುತ್ತಾ ಮುಂದಕ್ಕೆ ಹೋಗುತ್ತಿರುವದು. ಯಾವದರಿಂದ ಹಿಂತಿರುಗಿಸಲ್ಪಡುವದೋ

ಅದನ್ನೇ ಅತಿ ಮೂರ್ಖನಂತೆ ಹಿಡಿಯುತ್ತಿರುವದು. ವೃಕ್ಷದೊಳ್ ಕೊಂಬೆಯಿಂ ಕೊಂಬೆಗೆ ಹಾರುವ ಕಪಿಯಂತೆ ಘಟದಿಂದ ಪಟಕ್ಕೂ ಅದರಿಂದ ಶಕಟಕ್ಕೂ ಅದರಿಂದ ಮತ್ತೊಂದಕ್ಕೂ ಹೋಗುತ್ತಿರುವದು. ಓ ಇಂದ್ರಿಯಗಳಿರಾ! ನೀವು ಕಡೆಯಲ್ಲಿರುವ ಕದಳಿಯಂತೆ ಚಪಲವಾಗಿರುತ್ತೀರಲ್ಲವೆ! ನನಗೆ ಜ್ಞಾನೋದಯವಾಗುವಂತೆ ನಿಲ್ಲುವದಕ್ಕೆ ನಿಮಗೆ ಅವಕಾಶವಲ್ಲವೆ! ನಿಮ್ಮ ಚಪಲತೆಯಿಂದನರ್ಥವೇ ಆಗುವುದೆಂದು ಪೂರ್ವದಿಂದಲೂ ಗೊತ್ತಾಗಿರುವುದ್ದರಿಂದ ಪೂರ್ವವೃತ್ತಗಳಂ ಸ್ಮರಿಸಿಕೊಂಡು ಈಗಲಾದರೂ ಚಪಲತೆಯಂ ಬಿಡುವರಾಗಿ. ಜಡವಾದ ನೀವು ಮನಸ್ಸಿನ ರೂಪಗಳಲ್ಲವೇ? ಬಿಸಲು ದೊರೆಯಂತೆ ನಿಮ್ಮ ಅಹಂಕಾರವು ಬೆಳೆಯುತ್ತಿಹುದು. ಆತ್ಮಜ್ಞಾನ ಶೂನ್ಯರಾದ ನಿಮ್ಮ ಗರ್ವವು ಕುರುಡರ ಔದ್ಧತ್ಯಕ್ಕೆ ಸಮವಾಗಿರುವದು. ಸರ್ವಸಾಕ್ಷಿಯೆನಿಸುವ ಆತ್ಮನಿಂದಲೆ ಸರ್ವಕಾರ್ಯವೂ ನಡೆಯುವದಲ್ಲದೆ ನಿಮ್ಮಿಂದೇನೇನೂ ಆಗುವುದಿಲ್ಲ. ಹೀಗಿರುವಲ್ಲಿ ನೀವೇಕೆ ಗರ್ವಪಡುವಿರಿ? ಅಲಾತಚಕ್ರದಂತೆಯೂ ರಜ್ಜುಸರ್ಪದಂತೆಯೂ ನೇತ್ರಮೊದಲಾದ ನೀವು ವ್ಯರ್ಥವಾಗಿ ಹಾರಾಡುತ್ತೀರಿ. ನಿಮ್ಮ ಸ್ವರೂಪವು ಅಭಿಜ್ಞನಾದ ಆತ್ಮನಿಗೆ ವಿದಿತವಾಗಿರುವುದು. ನಿಮಗೂ ಆತ್ಮನಿಗೂ ಸ್ವರ್ಗಪಾತಾಲ ಗಿರಿಗಳವೋಲ್ ಸಂಬಂಧ ಅತಿ ದೂರವಾಗಿರುವುದು. ಚಂಡಾಲರಿಂದ ಬ್ರಾಹ್ಮಣನಂತೆಯೂ ಸರ್ಪಗಳಿಂದ ಮಾರ್ಗಸ್ಥನಂತೆಯೂ ನಿಮ್ಮಿಂದ ಭಯಪಟ್ಟ ಆತ್ಮನು ದೂರವಾಗಿರುವನು. ಸೂರ್ಯನಿರುವಲ್ಲಿ ಹಗಲಿನ ಕೆಲಸಗಳಂ ಮಾಡುವ ಜನಗಳ ವೋಲ್ ಚಿದಾತ್ಮನು ನಿಮಗಿರುವದ್ದರಿಂದ ನೀವು ಪರಸ್ಪರವಾಗಿ ಸೇರಿ ಕಾರ್ಯಗಳಂ ಮಾಡುತ್ತೀರಿ. ಸಕಲೇಂದ್ರಿಯಗಳಿಗೂ ಪ್ರಚಾರಕವಾಗಿ ಹೊಟ್ಟೆಗೋಸುಗ ನಾಲ್ಕುದಿಕ್ಕುಗಳಲ್ಲೂ ಭಿಕ್ಷಕ್ಕೆ ಹೋಗುವ ಚಿತ್ತವೇ ನಾನೇ ಚಿದ್ರೂಪವೆಂದು ನೀನು ಭ್ರಮೆಪಡುತ್ತಾ ನಾಯಿಯಂತೇಕೆ ವ್ಯರ್ಥವಾಗಿ ಅಲೆಯುತ್ತೀಯೆ? ಜಡವಾದ ನಿನಗೂ ಚಿದ್ರೂಪನಾದ ಆತ್ಮನಿಗೂ ಐಕ್ಯವೆಂತು ಸಂಭವಿಸೀತು? ಅಹಂಕಾರ ರೂಪದಿಂ ಸ್ವರೂಪವನ್ನೀನು ಅಭಿಮಾನಿಸುತ್ತಾ ನಾನೇ ಸಕಲ ಕಾರ್ಯಗಳಂ ಮಾಡುವೆನೆಂತಲೂ ನನ್ನಿಂದಲೇ ಜೀವನವೆಂತಲೂ ಗರ್ವಪಡುತ್ತೀಯೆ, ನೀನಿಲ್ಲದ ಸುಷುಪ್ತಿಯೊಳ್ ಜೀವನವು ಕಾಣ್ಬರುವದ್ದರಿಂದ ನಿನಗೆ ಭ್ರಾಂತಿಯುಂಟಾಗಿರುವದೆಂದು ಗೊತ್ತಾಗುತ್ತಲಿದೆ. ಸಕಲ ದೇಹದಲ್ಲೂ ಚಿತ್ತಿರುವುದಲ್ಲದೆ ನಿನ್ನ ಹೆಸರೇ ಕಾಣುವುದಿಲ್ಲ. ಹೀಗಿರುವಲ್ಲಿ ನಾನು ಬದುಕಿರುವೆನೆಂಬ ಭಾವನೆಯು ನಿನಗೆ ಹೇಗಿರುವದೋ ತಿಳಿಯಲಶಕ್ಯವಾಗಿರುವದು. ರಸಾಯನದಂತೆ ಪುಟ್ಟಿರುವ ನಿನ್ನ ಕರ್ತೃತ್ವ ಭೋಕ್ತೃತ್ವ

ಭ್ರಾಂತಿಗಳು ಪರ್ಯವಸಾನದಲ್ಲಿ ವಿಷದಂತೆ ದುಃಖಕರವಾಗುವುದು. ಇಂದ್ರಿಯ ಸಮೂಹಾಶ್ರಯವಾದ ನೀನೀ ಭ್ರಾಂತಿಯಿಂದಪಹಾಸ್ಯವಾಗುವೆಯಲ್ಲದೆ ಇದರಿಂದಿನ್ನೇನೂ ಪ್ರಯೋಜನ ಕಾಣಿಸುವುದಿಲ್ಲ. ಜಡವಾದ ನಿನ್ನ ಸ್ವರೂಪಸ್ಥಿತಿಗೆ ಅವಕಾಶವಿಲ್ಲದಿರುವಲ್ಲಿ ನಿನಗೆ ಭೋಗಗಳೆಂದರೇನು? ನಿನಗೆ ಬಂಧು ಮಿತ್ರಾದಿಗಳು ಹೇಗೆ ಉಂಟಾದರು! ಸದ್ವಸ್ತುವೇ ಇರುವುದಲ್ಲದೆ ಜಡಪದಾರ್ಥವಿಲ್ಲವೇ ಇಲ್ಲವೆಂಬ ಸಿದ್ಧಾಂತವಿರುವಲ್ಲಿ ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವಗಳು ಮನಸ್ತ್ವವೂ ಕೂಡ ಹೇಗೆ ಸಂಭವಿಸೀತು? ನೀನು ಜೀವರೂಪದಲ್ಲಿ ಜ್ಞಾತೃತ್ವಾದಿ ವಿಕಲ್ಪಗಳು ಆವಿರ್ಭಾವ ತಿರೋಭಾವ ರೂಪವಾದ ಸತ್ತೆಯು ಸಹ ನಿತ್ಯಪ್ರಕಾಶನಾದ ನಿನಗೆ ಹೇಗೆ ಸಂಭವಿಸೀತು! ನಿನಗೆ ಕರ್ತೃತ್ವಾದಿಗಳು ಭ್ರಾಂತಿಸಿದ್ಧವಾದರೆ ಅವುಗಳಿಂ ನಾನು ಹೋಗಲಾಡಿಸುವೆನು. ಮನವೆಂಬ ನಾಮವಿರುವವರಿಗೆ ಜಡತ್ವವಲ್ಲದೆ ಚೇತನತ್ವ ಸಂಭವಿಸಲಾರದು. ಹಾಗಾಗುವಲ್ಲಿ ಕಲ್ಲು ಬೊಂಬೆಯು ಕುಣಿದಂತೆ ನಿನ್ನ ಕರ್ತೃತ್ವವಸಿದ್ಧವಾಗುವದು. ನರ್ತನಶಕ್ತಿಯಿಂ ಪ್ರತಿಮೆಯಂತೆ ಚಿದ್ವಸ್ತುವಿನ ಸತ್ತೆಯಿಂ ನೀನು ಕಾರ್ಯಗಳಂ ನಿರ್ವಹಿಸುವೆಯಾದರೆ ಕಾರ್ಯಗಳೆಲ್ಲವೂ ಅದರಿಂದಲೇ ಆಗುವದು. ಕೊಯ್ಯುವನಿಗೆ ಕುಡುಗೋಲಿನಂತೆಯೂ, ಹೊಡೆಯುವನಿಗೆ ಶಸ್ತ್ರದಂತೆಯೂ, ಕುಡಿಯುವನಿಗೆ ಪಾತ್ರದಂತೆಯೂ, ಅದಕ್ಕೆ ನೀನು ಕಾರ್ಯಸಾಧನವಾಗುತ್ತೀಯೆ. ಕರ್ತೃಕರಣ ಕಾರ್ಯರೂಪದಿಂದಾ ವಸ್ತುವೇ ಪ್ರಕಾಶಿಸುತ್ತಿರುವದಾದರೆ ಆಗ ನಿನ್ನ ಪೆಸರೇ ಅಡಗುವದು. ಅದರಿಂ ನೀನು ಬೋಧಿಸಲ್ಪಡುವೆ ಎಂಬರೆ ಗುರುಗಳು ಶಿಷ್ಯರನ್ನನೇಕಶತಾವೃತ್ತಿ ತಿಳಿಪುವರಾದ್ದರಿಂದ ಈ ಅರ್ಥವನ್ನಂಗೀಕರಿಸಬಹುದು. ಜ್ಞಾನರೂಪದಿಂ ಪ್ರಕಾಶಿಸುವ ಆತ್ಮಸತ್ತೆಯಿಂದಲೇ ಚಿತ್ತ ಶಬ್ದಾರ್ಥಗಳನ್ನಂಗೀಕರಿಸಿದ್ದೀಯೆ ಹೀಗೆ ಚಿಚ್ಛಕ್ತಿಯಿಂ ಸ್ಥಿತಿಯಂ ಪಡೆದ ನೀನು ಜ್ಞಾನೋದಯದಲ್ಲಿ ಬಿಸಲಿನಲ್ಲಿ ಹಿಮದಂತೆ ನಷ್ಟವಾಗಿದ್ದೀಯೆ ಪರಮಾರ್ಥವಾಗಿ ನೀನೆ ಇಲ್ಲದಿರುವಲ್ಲಿ ಆ ಚಿತ್ತೇ ನಾನೆಂದೇಕೆ ಗರ್ವ ಪಡುತ್ತೀಯೆ? ಅದೇ ನಾನೆಂಬ ಭಾವನೆಯು ನಿನ್ನ ನಾಶಕ್ಕೆ ಕಾರಣವಾಗುವದಲ್ಲದೆ ಅದರಿಂ ನಿನ್ನ ಸ್ಥಿತಿ ಎಂದಿಗೂ ಆಗಲಾರದು. ಇಂದ್ರಜಾಲದಲ್ಲಿ ಬಳ್ಳಿಯಂತೆ ಅಜ್ಞಾನದಲ್ಲಿಯೇ ನೀನುಂಟಾಗಿದ್ದೀಯೆ ತರಂಗ ಕಣಗಳಿಂ ಸಮುದ್ರದಂತೆ ಪರಬ್ರಹ್ಮದ ಶಕ್ತಿಯೇ ಸುರನರಾದಿ ರೂಪಗಳಿಂ ಪ್ರಕಾಶಿಸುತ್ತಿರುವದು. ಎಲೈ ಚಿತ್ತವೆ,- ನೀನು ಚಿನ್ಮಯವೇ ಆದಲ್ಲ ಸರ್ವ ಸ್ವರೂಪನಾಗಿರುವ ಪರಮಾತ್ಮನಿಗೆ ಅಭಿನ್ನವಾದ ನೀನು ಮತ್ತೊಂದನ್ನು ಪಿಡಿದೇಕೆ ದುಃಖಪಡುತ್ತೀಯೆ ಸರ್ವವಸ್ತುಗಳಲ್ಲೂ, ಅದರ ಉತ್ಪ

ತ್ಯಾದಿ ಭಾವಗಳಲ್ಲೂ, ಸಿದ್ಧವಾಗಿರುವ ಪರಮಾತ್ಮನ ಪ್ರಾಪ್ತಿಯಲ್ಲಿ ಯಾವದು ನಿನಗೆ ಪ್ರಾಪ್ತವಾಗದೆ ಇದ್ದೀತು ಅಹಂಭಾವವು ಕೂಡ ಪರಮಾತ್ಮನಿಗೆ ಅಭಿನ್ನವಾಗಿ ರುವಲ್ಲಿ ಇದೇ ನಾನೆಂತಲೂ, ಇದು ನನ್ನದೆಂತಲೂ, ಇದು ಮತ್ತೊಬ್ಬನದೆಂತಲೂ, ಇದರಿಂ ನನಗೆ ಹಾನಿಯೆಂತಲೂ, ದುಃಖಪಡುವದಕ್ಕೆ ಕಾರಣವೇನು! ಯಾರಿಂದ ಯಾರಿಗೆ ದುಃಖವೆಂದು ತಿಳಿಯಬೇಕು! ಬಿಸಲು ನೆರಳುಗಳೆಂಬಂತೆ ಚಿಜ್ಜಡಗಳೆರಡು ಬಗೆಯಾಗಿಯೇ ಪದಾರ್ಥ ವಿಭಾಗವಿರುವದು. ಇದರಲ್ಲಿ ನೀನು ಜಡವಾದಲ್ಲ ಸತ್ತಾ ಭೇದವಿಲ್ಲದ್ದರಿಂದ ಅಸತ್ತೇ ಆಗುತ್ತೀಯೆ? ಚಿತ್ತೇ ಆದಲ್ಲಿ ನಿನಗೆ ಭಿನ್ನವಾದ್ದಿಲ್ಲ ವೆಂಬುವದು ಸಿದ್ಧವಾಗಿಯೇ ಇರುವದು. ಅದರಿಂದ ಶರೀರವೂ ಕೂಡ ಭ್ರಾಂತಿ ಸಿದ್ಧವೆನಿಸುವದು. ಶಶಶೃಂಗವೆಂಬಂತೆ ಮೂರನೆ ಪದಾರ್ಥದ ಕಲ್ಪನೆಯೇ ಅಸಂ ಗತವಾಗುವಲ್ಲಿ ಅದರಿಂ ದುಃಖಾದಿಗಳೆಂಬುವದು ಹೇಗೆ ಸಂಗತವಾದೀತು ಚಿತ್ತಿಗೆ ಭಿನ್ನವಾದ ವಸ್ತುವಿಲ್ಲವೆಂಬ ತತ್ವಜ್ಞಾನದಿಂ ಚಿತ್ತ ಚಿದಾಭಾಸಗಳೆಂಬ ಅಜ್ಞಾನವಣ ಗುವಲ್ಲಿ ನಿನಗೆ ಚಿದ್ರೂಪತ್ವವೇ ಸಿದ್ಧವಾಗುವದು. ಹಾಗಾಗುವಲ್ಲಿ ನಿರ್ವಿಕಲ್ಪವಾದ ನಿನಗೆ ಕರ್ತೃತ್ವ ಭೋಕ್ತೃತ್ವಾದಿಗಳು ಹೇಗೆ ಸಂಭವಿಸಾವು ತಾನು ತನ್ನದೆಂಬ ಜ್ಞಾನವಿಲ್ಲದ ಅವಿವೇಕಿಗಳಿಗೆ ವಿವೇಕಾರ್ಥವಾಗಿ ಕರಣರೂಪವಾದ ನಿನ್ನಿಂದಾತ್ಮನು ಕಾರ್ಯಗಳಂ ಮಾಡುವನೆಂದು ಪೇಳುವರು. ಹಿಡಿಯುವನಿಲ್ಲದ ಕುಡಗೋಲಿಗಾ ಗಲೀ ಕತ್ತಿಗಾಗಲೀ ಕತ್ತರಿಸುವ ಶಕ್ತಿ ಕಾಣಲಿಲ್ಲವಾದ್ದರಿಂದ ಕರಣವಸತ್ತೆನಿಸು ವುದು. ಕರಣರೂಪವಾದ ನಿನಗೆ ಸ್ವತಃ ಕರ್ತೃತ್ವವಿಲ್ಲದಿರುವಲ್ಲಿ ನಾನೇ ಕರ್ತೃ ವೆಂದು ನೀನೇಕೆ ದುಃಖಪಡುತ್ತೀಯೆ? ಪರೋಪಕಾರಾರ್ಥವಾಗಿ ದುಃಖಪಡುವೆ ನಾದರೆ ಈ ದುಃಖವು ಪ್ರಭುವಾದವನಲ್ಲಿ ಶೋಭಿಸುವದಲ್ಲದೆ ಅಶಕ್ತನಲ್ಲಿ ಶೋಭಿಸ ಲಾರದು. ಗರ್ವದಿಂ ನಾನಿವನಿಗುಪಕಾರವಂ ಮಾಡುವೆನೆಂಬ ಅಲ್ಪಬುದ್ಧಿಯು ದುಃಖಪಡುವನಲ್ಲದೆ ಅವನಿಂದ ಯಾರಿಗೆ ಯಾವ ಕೆಲಸವೂ ಆಗಲಾರದು. ಪ್ರಭು ವಿನ ಭೋಗಾರ್ಥವಾಗಿ ದುಃಖಪಡುವೆನೆಂದರೆ ಅದ್ವಿತೀಯಭಾವದಿಂ ನಿತ್ಯತೃಪ್ತ ನಾದ ಆತ್ಮನಿಗೆ ಯಾವ ಇಚ್ಛೆ ಇಧೆಯೆಂದು ನೀನು ಪೇಚಾಡಬೇಕು. ರಾಣಿಯು ನೋಟದಿಂ ತರುಣನಂತೆ ಅವಿಚಾರ ದೃಷ್ಟಿಯಿಂದವನಂ ನೋಡುತ ನೀನೇ ಇಚ್ಛೆ ಪಡುತ್ತೀಯೆ! ಕುಸುಮದಿಂ ಫಲದಂತೆ ಅವನಿಂದಲೇ ನೀನು ಪುಟ್ಟಿದಾಗ್ಯೂ ಫಲಕ್ಕೆ ಕುಸುಮದ ಪರಿಮಳದಂತೆ ಆತ್ಮನ ಯೋಗ್ಯತೆ ನಿನಗಿಲ್ಲದಿರುವದು. ಅದ ರಿಂದಲೇ ನಿನಗೆ ಆತ್ಮನ ಸಂಬಂಧವಾಗಲಾರದು. ಕರ್ಮಗಳ ಏಕಭಾವವೇ ಒಬ್ಬೊಬ್ಬರಿಗೆ ಸಂಬಂಧವೆನಿಸುವದು. ಸ್ವಲ್ಪವಾದರೂ ಸಾಮ್ಯವಿಲ್ಲದೆ ಸಂಬಂಧ

ವಾಗಲಾರದು. ನಿರ್ವಿಕಾರನಾದ ಆತ್ಮನಿಗೂ ಇಚ್ಛಾಕ್ರಿಯಾಸುಖ ದುಃಖಾದಿಗಳಿಂ
ದನೇಕ ರೂಪವಾದ ನಿನಗೂ ಯಾವ ವಿಷಯದೊಳ್ ಸಾಮ್ಯವಿರುವುದೆಂದು ಸಂ
ಬಂಧವಾದೀತು ಭಿನ್ನಗುಣವಾದ ಪಂಚಭೂತಗಳ ವೋಲ್ ನಮಗೆ ಸಂಬಂಧವಾಗ
ಬಹುದೆಂದರೆ ಶಬ್ದಮಾತ್ರ ಗುಣವಾದಾಕಾಶವು, ಶಬ್ದಸ್ಪರ್ಶಗುಣವಾದ್ದು ವಾಯುವು
ಶಬ್ದಸ್ಪರ್ಶರೂಪಗುಣವಾದ್ದು ತೇಜವು, ಶಬ್ದಸ್ಪರ್ಶರೂಪ ರಸಗುಣವಾದ್ದು ಜಲವು,
ಶಬ್ದಸ್ಪರ್ಶರೂಪರಸ ಗಂಧಗುಣವಾದ್ದು ಪೃಥಿವಿಯೆಂದು ಪಂಚಭೂತಗಳು ಪ್ರಸಿದ್ಧ
ವಾಗಿರುವಲ್ಲಿ ಗುಣಗಳ ಸಂಬಂಧವಿರುವದ್ದರಿಂದಲೂ, ಜಡಾಂಶದಲ್ಲಿ ಸಾಮ್ಯವಿರು
ವದ್ದರಿಂದಲೂ ಸಂಬಂಧವಾಗಬಹುದು. ಚಿಜ್ಜಡಭಾವ ಮೊದಲಾದ ಸರ್ವಾಂಶ
ಗಳಲ್ಲೂ ಸಾಮ್ಯವಿಲ್ಲದ ನಿನಗೆ ಸಂಬಂಧವೆಂತಾದೀತು ಆತ್ಮನ ಜ್ಞಾನ ಶಕ್ತಿಯೇ
ಜಡಾಂಶದಿಂ ನನ್ನಲ್ಲಿರುವುದು. ಅದರಿಂ ಸಂಬಂಧವಾಗಬಹುದೆಂದರೆ ಜಡಾಂಶ
ವಳಿಯದೆ ಚಿತ್ಸಂಬಂಧವಾಗಲಾರದು. ಜಡಾಂಶವಳಿಯುವಲ್ಲಿ ನಿನ್ನ ಸ್ಥಿತಿಗೆ ಹಾನಿ
ಯಾಗುವದ್ದರಿಂದಾತ್ಮನ ಸಂಬಂಧದೊಳ್ ನಿನ್ನ ಅಪೇಕ್ಷೆಯೇ ದುಃಖ ಕರವಾಗು
ವದು. ಹೇಗಾದರೂ ಆಗಲಿ ಆತ್ಮನ ಸಂಬಂಧವಾಗಬೇಕೆನ್ನುವೆಯಾದರೆ ದೃಶ್ಯದ
ಸ್ಥಿತಿಯಂ ನೀನು ವಿಚಾರಿಸುತ್ತಾ ಸ್ವತಸ್ಸತ್ತೆ ಇಲ್ಲದ್ದರಿಂದದರ ಅಭಾವವೇ ಗೊತ್ತಾ
ಗುವಲ್ಲಿ ಯಾವ ಸುಖ ತೋರುವದೋ ಆ ಸ್ಥಿತಿಯಲ್ಲೇ ದೃಷ್ಟಿಯನ್ನಿಟ್ಟು ನಾನಾ
ದುಃಖ ವಿಕಾರಗಳಿಂ ಕಾರಣವಾದ ಪೂರ್ವದ ಸಂಕಲ್ಪ ವಿಕಲ್ಪಾದಿ ರೀತಿಗಳಲ್ಲಿ ಬೀಳ
ದಿರುವೆಯಾದರೆ ಜ್ಞಾನಶಕ್ತಿಗೆ ಜಡಾಂಶ ತಪ್ಪುವದ್ದರಿಂ ನಿನಗೆ ಆತ್ಮನಲ್ಲೈಕ್ಯವೇ
ಸಂಭವಿಸುವದು. ಆತ್ಮನೇ ಸಂಕಲ್ಪಿಸುವನೆಂದರೆ ಗಗನದಲ್ಲಿ ಪುಷ್ಪವೆಂಬಂತೆ ಸರ್ವ
ಭಾವಾತೀತನಾದ ಆತ್ಮನಲ್ಲಿ ಅದ್ವಿತೀಯ ಭಾವದಿಂ ಕರ್ತೃತ್ವವೆಂಬುವದು ಸಂಭವಿಸ
ಲಾರದು. ಗಾಳಿಯಿಂದುಂಟಾದ ಫೇನತರಂಗ ಬುದ್ಬುದಗಳಿಂ ಸಮುದ್ರವಂತೆ
ನಿನ್ನಿಂದುಂಟಾದ ನಾನಾಭಾವಗಳಿಂದಲೇ ವ್ಯಾಪಕನಾದ ಆತ್ಮನು ಪ್ರಕಾಶಿಸುವನು.
ಜ್ಞೇಯವಿಲ್ಲದ ಜ್ಞಾನ ಸ್ವರೂಪದಿಂದ ಅಖಂಡವಾಗಿ ಪ್ರಕಾಶಿಸುವ ಆತ್ಮನಲ್ಲ ಗಗನ
ದಲ್ಲಿ ಉದ್ಯಾನವೆಂಬಂತೆ ಕಲ್ಪನೆಯೆಂಬುವದು ಉಂಟಾಗಲಾರದು. ವಿವೇಕದಿಂ
ದಾತ್ಮಸ್ವರೂಪವು ಗೊತ್ತಾಗುವಲ್ಲಿ ಜಡವಾದ ದೇಹ ಮನಸ್ಸುಗಳಲ್ಲೂ ಕಲ್ಪನೆಯೆಂ
ಬುವದು ಅಸಂಗತವಾಗುವದು. ಗಗನದಲ್ಲಿ ವೇದವಂ ಬರೆಯುವನೆಂಬಂತೆ ಆತ್ಮ
ನಲ್ಲಿ ಸಂಕಲ್ಪ ಕಲ್ಪನೆಯನ್ನಾರೋಪಿಸುವನೆಂಬ ವಚನವೂ ಕೂಡ ಅದ್ವಿತೀಯಭಾವ
ದಿಂದ ಅಸಂಗತವೇ ಆಗುವದು. ಅಸ್ತೋದಯಗಳಿಲ್ಲದೆ ನಿತ್ಯಪ್ರಕಾಶನಾದ ಆ ಜ್ಞಾನ
ಸೂರ್ಯನು ಈಗ ನಿನಗೆ ಪ್ರಕಾಶನಾದ್ದರಿಂದ ಮೋಹದಿಂದುಂಟಾಗಿದ್ದ ಸುಖದುಃಖ

ಗಳು ಬಿಸಲುದೊರೆಗಳಂತೆ ಅಸತ್ಯವೆನಿಸಿದವು. ಓ ಇಂದ್ರಿಯಗಳಿರಾ ನಾವು ಇದ್ದೇವೆ ಯೆಂಬ ನಿಮ್ಮ ಜ್ಞಾನದಿಂ ದುಃಖಗಳೇ ಪರಂಪರೆಯಾಗಿ ಬರುವದ್ದರಿಂದ ಆ ಅಜ್ಞಾನವಂ ಬಿಟ್ಟುಬಿಡಿ. ಅಜ್ಞಾನದಿಂದಲೇ ನೀವು ಪುಟ್ಟಿದಂಥಾವರಾದ್ದರಿಂದ ಇದುವರೆಗೆ ನಾನು ಪೇಳಿದ ಮಾತಿನಿಂದ ನಿಮ್ಮ ಸ್ಥಿತಿ ಜ್ಞಾನವು ಹೋಗಿರುವದೆಂದು ತಿಳಿಯುತ್ತೇನೆ. ಎಲೈ ಚಿತ್ತವೇ ಕಾದ ಚಿನ್ನದ ಶಕೆಯಿಂ ಪಾರ್ಶ್ವಗಳಲ್ಲಿರುವ ಪದಾರ್ಥಗಳಂತೆ ನಿನ್ನ ಸತ್ತಾಜ್ಞಾನದಿಂ ನಿನ್ನನ್ನನುಸರಿಸಿಕೊಂಡಿರುವ ಇಂದ್ರಿಯಾದಿಗಳು ದುಃಖಪಡುವವಾದ್ದರಿಂದ ಇದು ನಿನ್ನ ದುಃಖಕ್ಕೋಸ್ಕರವೇ ಆಗುವದು. ನೀನು ನೋಡುತ್ತಿರುವಲ್ಲಿಯೇ ಕಾಲಸಮುದ್ರದಲ್ಲಿ ಸಂಸಾರ ನದೀ ಸಮೂಹಗಳು ಬೀಳುವವು. ವರ್ಷಧಾರೆಗಳಂತೆ ಅಹಂಕಾರಪೂರ್ವಕವಾದ ದುಃಖ ಪರಂಪರೆಗಳೆಲ್ಲಿಂದಲೋ ಬರುತ್ತಿರುವವು. ಕೊನೆಗಾಣದ ಗೋಳಿಗೆ ಕಾರಣವಾದ ವಿಪತ್ಸಂಪತ್ತೆಂಬ ವಿಷೂಚಿ ಕೋಪದ್ರವವು ಪ್ರಕಾಶಿಸುತ್ತಿಹುದು. ಶರೀರವೃಕ್ಷದೊಳ್ ಶ್ವಾಸಶ್ವಾಸಗಳೆಂಬ ದುಂಬೆಗಳಿಂ ತುಂಬಿರುವ ಜರಾಮರಣಗಳೆಂಬ ಮಂಜರಿಗಳು ವಿಕಾಸವಂ ಹೊಂದುತ್ತಿರುವವು. ಹೃದಯದಲ್ಲಿ ಸದ್ಗುಣಗಳಂ ಲೋಭವೆಂಬ ಪಕ್ಷಿಯು ದ್ವಂದ್ವ ದುಃಖವೆಂಬ ಮುಖದಿಂ ಖಂಡಿಸುತ್ತಿರುವದು. ಚಿಂತೆಗಳೆಂಬ ಕೋತಿಗಳು ಅಜ್ಞಾನವೆಂಬ ಗೂಬೆಯು ಸಹ ಅಲ್ಲೇ ಸೇರಿಕೊಂಡಿರುವವು. ಇಂದ್ರಿಯಗಳಿಂ ಕೂಡಿದ ನೀನಿರುವದ್ದರಿಂದಲೇ ಸ್ಮಶಾನದಲ್ಲಿ ಪಿಶಾಚಿಗಳಂತೆ ಅಶುಭ ಕ್ರಿಯೆಗಳು ಕುಣಿದಾಡುತ್ತಿರುವವು. ನೀನಿಲ್ಲದಿರೆ ಪ್ರಾತಃಕಾಲದಲ್ಲಿ ಕಮಲಗಳಂತೆ ಶುಭಸಂಪತ್ತುಗಳು ವಿಕಾಸವಂ ಪಡೆವವು. ಹೃದಯಾಕಾಶದೊಳ್ ಜ್ಞಾನಸೂರ್ಯ ಪ್ರಕಾಶದಿಂ ಮೋಹವೆಂಬ ಮಂಜಣಗುವದು. ಆಕಾಶ ಪ್ರವಾಹಗಳಂತೆ ವಿಕಲ್ಪಗಳುಂಟಾಗಲಾರವು. ಹೃದಯ ವೃಕ್ಷದೊಳ್ಮಂಜರಿಯಂತೆ ಸರ್ವಾನಂದಕರವಾದ ಮೈತ್ರಿಯುಂಟಾಗುವುದು. ಹಿಮಗಾಲದ ಪದ್ಮಿನಿಯಂತೆ ಚಿಂತೆಯಳಿವುದು. ಶರತ್ಕಾಲದ ಸೂರ್ಯನಂತೆ ಜ್ಞಾನವು ಪ್ರಕಾಶಿಸುವುದು. ಗಾಳಿಯಡಗಿದ ಸಮುದ್ರದಂತೆ ವಿಕಲ್ಪವಿಲ್ಲದ ಮನವು ಶಾಂತವಾಗುವದು. ಅಮೃತದಿಂ ಚಂದ್ರನಂತೆ ಆನಂದದಿಂ ಪೂರ್ಣನಾದ ಪುರುಷನು ಶೋಭಿಸುವನು. ಸುಟ್ಟಿಲೆಗಳಿಗೆ ರಸದಂತೆ ಅಜ್ಞಾನವಳಿದ ಆ ಪುರುಷನಿಗೆ ಆಶಾಪಾಶಕ್ಕೆ ಕಾರಣವಾದ ದುಸ್ಸಂಗವುಂಟಾಗಲಾರದು. ಹೀಗೆ ಅನೇಕ ಗುಣಗಳುಂಟಾಗುವದ್ದರಿಂದ ನೀನು ಆತ್ಮನಂ ಸೇರಿ ವಿಶ್ರಮಿಸಿಕೊಳ್ಳುವಲ್ಲಿ ಮರಳಿ ಸಂಸಾರಮೋಹವು ನಿನಗೆ ಸಂಭವಿಸದು. ಸರ್ವಾತ್ಮಭಾವದಿಂ ನಾನಿಲ್ಲವೆಂತಾಗಲಿ ಭಾವಿಸುವದ್ದರಿಂದ ನಾನೊಬ್ಬನಿರುವೆನೆಂ

ತಲಾಗಲೀ; ಯಾವ ಮಾರ್ಗವು ನಿನಗೆ ಸುಖವಾಗಿ ತೋರುವದೋ? ಆ ಮಾರ್ಗವನ್ನವಲಂಬಿಸಬಹುದು. ಆದರೆ ಪೂರ್ವಾಪರಗಳಲ್ಲಿಲ್ಲದೆ ಮಧ್ಯದಲ್ಲಿ ಭ್ರಾಂತಿಸಿದ್ಧವಾದ ಸ್ಥಿತಿಯನ್ನವಲಂಬಿಸುವದಕ್ಕಿಂತ ಮಹಾತ್ಮನಾದ ಆತ್ಮನಲ್ಲಿ ಸೇರಿಕೊಂಡು ನಿತ್ಯಾನಂದ ಸ್ಥಿತಿಯಿಂದಿರುವದೇ ಉತ್ತಮವೆನಿಸುವದು. ಸುಳ್ಳಾದ ಸ್ಥಿತಿಯಿಂ ಜೀವಿಸುವದಕ್ಕಿಂತ ಸತ್ಯವಾದ ಮಾರ್ಗದಿಂ ಸಾವದು ಲೇಸಾದ್ದರಿಂದ ಪರಮಾರ್ಥವಾಗಿ ಹೇಳುವ ನನ್ನ ಮಾತಂ ಗ್ರಹಿಸಿ ಭ್ರಾಂತಿಸಿದ್ಧ ಸ್ಥಿತಿಯಲ್ಲಿ ಆಶೆಯಂ ಬಿಟ್ಟು ಸರ್ವ ಭಾವಾತೀತನಾದ ಆತ್ಮನಲ್ಲಿ ಸೇರಿಕೊಳ್ಳುವನಾಗು, ತೇಜವಿಲ್ಲದ್ದರಿಂ ತಮದಂತೆ ಅವಿಚಾರದಿಂದಲೇ ನಿನ್ನ ಸ್ಥಿತಿಯುಂಟಾಗಿರುವದು. ಚನ್ನಾಗಿ ವಿಚಾರಿಸುವಲ್ಲಿ ಸತ್ತಾಮಾತ್ರ ಸ್ವರೂಪವಾದ ಬ್ರಹ್ಮ ಒಂದೇ ಪ್ರಕಾಶಿಸುತ್ತಿರುವದಲ್ಲದೆ ಮತ್ತ್ಯಾವನೂ ಪ್ರಕಾಶಿಸುವದಿಲ್ಲ. ಆ ಜ್ಞಾನಿಕ ಸಂಕಲ್ಪದಿಂ ಬಾಲಕ ಪಿಶಾಚದಂತೆ ಪುಟ್ಟಿದ ನೀನು ಈಗ ವಿಚಾರದಿಂ ನಷ್ಟವಾದ್ದರಿಂದ ಸಂಕಲ್ಪ ವಿಕಲ್ಪಾತ್ಮಕವಾದ ಸ್ವರೂಪವಳಿಯಲು ನಿನಗೆ ಪರಮೇಶ್ವರಭಾವವೇ ಉಂಟಾಗಿರುವದು. ನಿನಗೀಪರಿಯಾದ ಸ್ಥಿತಿಯಂ ಸಿದ್ಧಪಡಿಸಿದ ವಿವೇಕವಂ ನಾನು ನಮಿಸುವೆನು. ಬೆಳಕಿಲ್ಲದ್ದರಿಂದುಂಟಾದ ಕತ್ತಲೆಯು ಬೆಳಕಿನಿಂದಳಿಯುವಂತೆ ಅವಿವೇಕದಿಂದುಂಟಾದ ವಸ್ತುವು ವಿವೇಕದಿಂ ಪೋಗುವದು, ಇದುವರಿಗೆ ನೀನಿರುವೆ ಎಂದು ಭ್ರಾಂತಿಪಡುತ್ತಿದ್ದ ನಾನು ಸಿದ್ಧಾಂತ ಯುಕ್ತಿಗಳಿಂ ನೀನಿಲ್ಲವೆಂಬ ಅರ್ಥವು ನಿಶ್ಚಿತವಾಗಲೀಗ ಸುಖವಾಗಿರುವೆನು. ಹಿಂದಕ್ಕೂ ಮುಂದಕ್ಕೂ ಇಲ್ಲದೆ ಈಗಲೂ ಇಲ್ಲವೆನಿಸಿದ ನಿನಗೆ ಕ್ಷೇಮವಾಗಲಿ, ಈಗ ನೀನಿಲ್ಲದ್ದರಿಂ ಸ್ವರೂಪದಲ್ಲೇ ನಾನು ಸುಖದಿಂದಿರುವೆನು. ಕಾಲತ್ರಯಸ್ಥಿತಿ ಇದ್ದಾಗ್ಯೂ ಅಭೇದದಿಂದಿವನು ಆತ್ಮನೆನ್ನುವದಕ್ಕೆ ಅವಕಾಶವಿಲ್ಲದಿರುವಲ್ಲಿ ಅನ್ಯ ಕಲ್ಪನೆಗವಲಂಬವೇನಿರುವದು. ಆದರಿಂದ ನಾನು ಜಲದಲ್ಲಿ ಚಲನವಿಲ್ಲದ ತರಂಗದಂತೆ ಸ್ವಸ್ವರೂಪದೊಳ್ ಮೌನಿಯಾಗಿರುವೆನು ? ಎಂದು ನಿಶ್ಚೈಸಿದ ವೀತಹವ್ಯನು ನಿರ್ವಾಸನನಾಗಿ ಮನವಿಲ್ಲದ್ದರಿಂದ, ಅಲೆ ಇಲ್ಲದ ಕಡಲಿನಂತೆ ಶೋಭಿಸಿದನು. ಕಟ್ಟಿಗೆಯಿಲ್ಲದ ಅಗ್ನಿಯೊಳ್ ಜ್ವಾಲೆಯಂತೆ ಅವನ ಪ್ರಾಣ ಒಳಗೇ ಶಾಂತವಾದುದು. ಮೂಗಿನ ಪಕ್ಕದೊಳ್ ಅಲ್ಪಪ್ರಕಾಶವುಳ್ಳ ಆತನ ಕಣ್ಣುಗಳು ಅರ್ಧ ವಿಕಸಿತವಾದ ಕಮಲಗಳಂತಿದ್ದವು. ಸಮಕಾಯ ಶಿರೋಗ್ರೀವನಾಗಿ ವಿಂಧ್ಯಪರ್ವತದೊಳ್ ಕೆತ್ತಲ್ಪಟ್ಟವನಂತೆಯೂ, ಚಿತ್ರದಲ್ಲಿ ಬರೆಯಲ್ಪಟ್ಟವನಂತೆಯೂ, ನಿರ್ವಿಕಲ್ಪ ಸಮಾಧಿಯಲ್ಲಿದ್ದ ಆ ಮಹಾಮುನಿಗೆ ಮುಹೂರ್ತಮಾತ್ರದಂತೆ ಮುನ್ನೂರು ವರುಷಗಳಾದವು, ಅಷ್ಟರೊಳ್ ಮಳೆ ಗುಡುಗು ಸಿಡಿಲು

ಗಾಳಿ ಕಾಡುಗಿಚ್ಚುಗಳಿಂದಲೂ, ಬೇಟೆಯಾಡುವ ದೊರೆಗಳ ಕೋಲಾಹಲಗಳಿಂದಲೂ, ಸಿಂಹ ಶರಭ ಗಂಡ ಭೇರುಂಡಾದಿ ಮೃಗಪಕ್ಷಿಗಳ ಆರ್ಭಟೆಗಳಿಂದಲೂ, ಭೂಕಂಪದಿಂದುರುಳುವ ಸಿಲೆಗಳ ಸದ್ದಿನಿಂದಲೂ, ಆತನಿಗೆಚ್ಚರವಾಗಲಿಲ್ಲ. ಇಷ್ಟರೊಳ್ ಬಿರಿಮಳೆಗಳಿಂ ಪ್ರವಾಹಗಳು ಹರಿಯುವಲ್ಲಿ ಅವುಗಳಿಂ ಬಂದುಬಿದ್ದ ಮಣ್ಣಿನಿಂದವನ ದೇಹವು ಹಳ್ಳದಲ್ಲಿದ್ದ ಕಲ್ಲಿನಂತೆ ಮುಚ್ಚಲ್ಪಟ್ಟಿತು. , ಮುನ್ನೂರು ವರುಷಗಳಾದ ಬಳಿಕ ಪ್ರಾರಬ್ಧ ಶೇಷವಿರುವದ್ದರಿಂದೆಚ್ಚತ್ತ ಆ ಮಹಾಮುನಿಯ ಶರೀರದೊಳ್ ಪ್ರಾಣ ಸಂಚಾರಕ್ಕೆ ಅವಕಾಶವಿಲ್ಲದ್ದರಿಂದ ಬಹಿರ್ಮುಖವಾದ ಜ್ಞಾನವೇ ಶರೀರಕ್ಕೆ ಆಧಾರವಾಗಿದ್ದುದು. ಮನದ ಭಾವನೆಯಿಂದಲೇ ಆ ಮಹಾಮುನಿಯು ಕೈಲಾಸ ವನದೊಳ್ ನೂರು ವರ್ಷ ಜೀವನ್ಮುಕ್ತನಾದ ಮುನಿಯ ರೂಪದಿಂದಿದ್ದನು. ನೂರುವರ್ಷ ವಿದ್ಯಾಧರನಾದನು, ಐದುಯುಗ ಇಂದ್ರಾಧಿಪತ್ಯವಂ ಮಾಡಿದನು. ಒಂದು ಕಲ್ಪ ಚಂದ್ರಶೇಖರನ ಸನ್ನಿಧಿಯೊಳ್ ಗಣವಾಗಿದ್ದನೆಂದು ಪೇಳುವಲ್ಲೀ ಮುನಿಯ ಮನೋರಾಜ್ಯದೊಳ್ ದಿಕ್ಕಾಲ ನಿಯತಿಕ್ರಮಗಳೆಂತು ನಡದವು. ಈ ಮುನಿಯು ಜೀವನ್ಮುಕ್ತನಾದಾಗ್ಯೂ ಬಂಧ ಮೋಕ್ಷ ದೃಷ್ಟಿಗಳು ಪೋಗಲಿಲ್ಲವೆಂದು ತೋರುತಲಿಧೆ, ಎಂದು ಶ್ರೀರಾಮನು ಕೇಳಲು ಮರಳಿ ವಸಿಷ್ಠನಿಂತೆಂದನು;—ಎಲೈ ರಘುವರನೇ! ಮೇರುವಿನ ಸುತ್ತಲೂ ಇರುವ ವರ್ಷಭೇದದಿಂ ದಿಗ್ಭೇದವು ರುದ್ರ ವಿಷ್ಣು ಬ್ರಹ್ಮಾದಿ ಮಾನಭೇದದಿಂದಲೂ, ಸುಖದುಃಖ ದಶಾಭೇದದಿಂದಲೂ ಕೂಡ ಕಾಲಭೇದವು ಉತ್ಸಾಹಾನುತ್ಸಾಹಯುಕ್ತವಾದ ಮನದ ಅವಸ್ಥಾ ಭೇದದಿಂ ದೇಶ ಭೇದವು ಕಾಯ ವಾಙ್ಮನಸ್ಸುಗಳಲ್ಲಿ ಸಾತ್ವಿಕಭಾವಾದಿ ಭೇದದಿಂ ನಿಯತಿ ಭೇದವು ಸಹ ಕ್ಲುಪ್ತವಾಗಿರುವದು. ಸರ್ವಾತ್ಮಕನಾದ ಚಿಚ್ಛಕ್ತಿ ಎಲ್ಲೆಲ್ಲಿ ಹೇಗೆ ಹೇಗೆ ಉದಿಸುವದೋ ಅಲ್ಲಲ್ಲಿ ಹಾಗೆಹಾಗೆ ಅನುಭವಿಸುವದು. ಹೀಗೆ ದಿಗ್ದೇಶಾದಿ ನಿಯಮಗಳು ಬುದ್ಧ್ಯಧೀನವಾದ್ದರಿಂದ, ಆ ಮುನಿಯು ಅನೇಕವಿಧ ಪ್ರಪಂಚಗಳಂ ಕಂಡನು. ತತ್ವಾರ್ಥ ಜ್ಞಾನದಿಂ ಆತ್ಮೇತರ ಪದಾರ್ಥವಿಲ್ಲದ ಜೀವನ್ಮುಕ್ತನಿಗೆ ಬಂಧ ಮೋಕ್ಷದೃಷ್ಟಿ ಯೆಂತುಂಟಾದೀತು. ಹುರಿದ ಬೀಜವು ಪುಟ್ಟುವ ಯೋಗ್ಯತೆ ಇಲ್ಲದ್ದರಿಂದ ಹೇಗೆ ಬೀಜವೆನಿಸದೋ ಹಾಗೆ ಜೀವನ್ಮುಕ್ತರ ವಾಸನೆಯೂ ಕರ್ಮಫಲ ಸಂಪಾದಕವಲ್ಲದ್ದರಿಂದ ವಾಸನೆಯೆನಿಸದು. ಕ್ರಿಯಾಸಿದ್ಧಿಯಾಗುತ್ತಿದ್ದಾಗ್ಯೂ ಅವನ ಇಚ್ಛೆಯು ಜ್ಞಾನಶಕ್ತಿ ಪ್ರಾಚುರ್ಯದಿಂ ಪರಮೇಶ್ವರನ ಇಚ್ಛೆಯಂತೆ ಬಂಧಕವಾಗದು. ಅವನು ಸರ್ವಾತ್ಮ ಭಾವದಿಂದಿರುವನಾದ್ದರಿಂದ ಸರ್ವರ ಅನುಭವವೂ ಅವನಿಗೆ ಸ್ವಾನುಭವವಾಗುವದು. ಆ ಮುನಿ

ಯು ಯಾವ ಇಂದ್ರನ ಆಧಿಪತ್ಯವನ್ನನುಭವಿಸಿದನೋ ಆ ಇಂದ್ರನು ದೀಸವೆಂಬ ದೇಶದೊಳ್ ದೊಸಿಯಾಗೀಗ ಜೇಜಿಯಾಡುತ್ತಿರುವನು. ಇವನು ಶಿವಸನ್ನಿಧಿಯಲ್ಲಿ ಗಣಶ್ರೇಷ್ಠನಾಗಿರುವಾಗ ಕ್ರೀಡಾರ್ಥವಾಗಿದ್ದ ಹಂಸಪಕ್ಷಿಯೇ ಈಗ ಕೈಲಾಸಪ್ರಾಂತ್ಯದೊಳ್ ಕಿರಾತಾಧಿಪತಿಯಾಗಿರುವದು. ಈ ಮುನಿಯು ಸೌರಾಷ್ಟ್ರದೇಶದೊಳಾವ ರಾಜನ ಭಾವವಂ ವಹಿಸಿದ್ದನೋ, ಆ ರಾಜನೀಗ ತೆನುಗುದೇಶದಲ್ಲಿರುವನು. ಇದರಿಂದ ಉತ್ತಮಲೋಕ ಸ್ಥಿತಿ ಇದ್ದಾಗ್ಯೂ ಜ್ಞಾನವುಂಟಾಗದಿರುವನಿಗೆ ಅಧೋಗತಿ ಬರುವದೆಂತಲೂ, ಅಧಮಲೋಕದಲ್ಲಿದ್ದಾಗ್ಯೂ ಜ್ಞಾನವುಂಟಾದವನಿಗೆ ಸರ್ವೋತ್ತಮ ಮುಕ್ತಿಸಾಮ್ರಾಜ್ಯವು ಸಿದ್ಧವಾಗುವದಂತಲೂ, ಗೊತ್ತಾಗುವದೆಂದು ಪೇಳುತ್ತಿರುವಲ್ಲಿ, ಎಲೈ ಗುರುವೇ ! ಈ ಮಾನಸಸೃಷ್ಟಿಯೊಳ್ ದೇಹಗಳು ಭ್ರಾಂತಿಸಿದ್ಧವೆನಿಸುವವಲ್ಲವೇ ? ಆ ದೇಹವಂ ಧರಿಸಿರುವರು ಸಚೇತನರೆನಿಸುವದು ಹೇಗೆಂದು ಶ್ರೀರಾಮನು ಕೇಳಲು ? ಮರಳಿ ವಸಿಷ್ಠನಿಂತೆಂದನು;—ಎಲೈ ಶುಭಮತಿಯೇ ! ಮನಃಕಲ್ಪಿತವಾದ್ದೆಲ್ಲವು ಭ್ರಾಂತ್ಯಾತ್ಮಕವೆನಿಸುವಲ್ಲಿ ಅಚೇತನ ಸಚೇತನಗಳೊಳ್ ವಿಶೇಷವೇನಿರುವದು. ಚಿನ್ಮಾತ್ರನಾದಿ ಜಗವು ಮನೋಮಾತ್ರವೆಂತಲೂ ಭ್ರಾಂತಿ ಪದಾರ್ಥ ಸಮಾನವೆಂತಲೂ ಹೇಗೆ ಪೇಳಲ್ಪಡುವದೋ ಇದೇಪ್ರಕಾರವಾಗಿ ಆ ಮಾನಸಿಕ ಜಗವು ಪೇಳಲ್ಪಡುವದು. ವಾಸ್ತವವಾಗಿ ಆ ಜಗವೂ ಇಲ್ಲ, ಈ ಜಗವೂ ಇಲ್ಲ, ನಿನಗೆ ತೋರಿಸುವ ಆ ಜಗತ್ತಿಗೆ ಸತ್ತೆಯೂ ಇಲ್ಲ, ಬ್ರಹ್ಮವೇ ಈ ರೂಪಗಳಿಂ ಪ್ರಕಾಶಿಸುತ್ತಿಹುದೆಂದು ತಿಳಿಯುವನಾಗು ? ಹಿಂದೆ ಹೋದದ್ದು ಮುಂದೆ ಬರುವದು ಈಗಿರುವದೂ ಸಹ ಚಿನ್ಮಾತ್ರವಾದ ಮನದ ಸ್ವರೂಪವೆಂದು ನಿಶ್ಚೈಸತಕ್ಕದ್ದು. ಇವರ ಸ್ವರೂಪವಿಂಥಾದ್ದೆಂದಾವವರಿಗೆ ತಿಳಿಯುವದಿಲ್ಲವೋ ಅವರಿಗೆ ಪರಮಾರ್ಥ ಜ್ಞಾನವಾಗಲಾರದು. ಆ ಜ್ಞಾನಿಯಾದವನಿಗೆ ಜಲಧಿಯೊಳ್ ಜಲದಂತೆ ಪರಮಾತ್ಮನಲ್ಲೇ ಜಗವು ಉತ್ಪತ್ತಿಲಯ ಕ್ರಮವಿಂದಾಡುತ್ತಿರುವದು. ಚಿದ್ವಸ್ತುವು ಅವಿಕಾರಿಯಾಗಿದ್ದುಕೊಂಡೇ ಸ್ವಭಾವಿಕವಾದ ಮಾಯೆಯಿಂದುಂಟಾದ ಗುಣಾತ್ಮಕವಾದ ದೃಶ್ಯವನ್ನೆಬ್ಬಿಸುತ್ತ ಚಿತ್ತವೆನಿಸಿಕೊಂಡಿತು. ಅದೇ ಮನನ ಕ್ರಮದಿಂ ಮನವೆನಿಸಿಕೊಂಡು ಈ ಜಗದ್ರೂಪವಾಗಿರುವದು. ಇಂಥಾವರು ಅಖಂಡ ಜ್ಞಾನದಿಂದ ಅವಿಕಾರಿಯಾಗಿರುವರು. ಈ ಪರಿಯಿಂ ಸೃಷ್ಟಿಕ್ರಮದಲ್ಲಿದ್ದ ವೀತಹವ್ಯನೆಂಬ ಮುನಿವು ತನ್ನ ಆ ಸೃಷ್ಟಿಕ್ರಮವನ್ನಾತ್ಮನ ಚಮತ್ಕಾರವೆಂದು ತಿಳಿದು ಆತ್ಮನ ಮಹಿಮೆಯನ್ನೇ ಚಿಂತಿಸುತ್ತ ಮರಳಿ ತನ್ನ ಪೂರ್ವಜನ್ಮ ಸ್ಮರಣೆಯೊಳಾಸಕ್ತನಾಗಿ ನಷ್ಟವಾಗದಿರುವ ದೇಹಗ

ಕೆಸರೊಳ್ ವೀತಹವ್ಯನೆಂಬ ದೇಹವು ಮಣ್ಣೊಳಗೆ ಸಿಲುಕಿರುವುದಂ ಕಂಡು ಪ್ರಾಣವಾಯುಗಳಿದ್ದರೂ ಚಲಿಸಲಸಮರ್ಥವಾದೀ ದೇಹವು ಮೇಲಕ್ಕೆ ಬರುವದಕ್ಕೆ ಉಪಾಯವೇನೆಂದು ಚಿಂತಿಸುತ್ತಾ ನಾನು ಸೂರ್ಯನ ದೇಹವಂ ಪ್ರವೇಶಿಸಲು, ಆ ಸೂರ್ಯನು ತನ್ನ ಕಿಂಕರನಾದ ಪಿಂಗಳನಿಂದೀ ದೇಹವಂ ತೆಗೆಸುವನು. ಅಥವಾ ಈ ದೇಹಧಾರಣ ಲೀಲೆಯಿಂದಾಗತಕ್ಕದ್ದೇನೂ ಇಲ್ಲವಾದ್ದರಿಂದ ಸ್ವರೂಪದಲ್ಲೇ ನೆಲೆಸುವೆನೆಂದೊಂದು ಕ್ಷಣ ಸುಮ್ಮನಿದ್ದು ನನಗೆ ದೇಹದ ತ್ಯಾಗವು ಗ್ರಹಣವು ಸಹ ಸಮವಾಗಿರುವಲ್ಲಿ ಸಿದ್ಧವಾಗಿರುವುದರ ತ್ಯಾಗದಿಂದಾಗತಕ್ಕದ್ದೇನು ? ಈ ದೇಹವು ಅಫಲವಾಗುವವರೆಗೆ ಇದನ್ನೇ ಗ್ರಹಿಸಿ ವಹಿಸುವೆನೆಂದು ನಿಶ್ಚಯಿಸಿ ಪುರ್ಯಷ್ಟಕರೂಪದಿಂ ಚಲದಲ್ಲಿರುವ ವಾಯುವು ಆಕಾಶವಂ ಸೇರುವಂತೆ ಸೂರ್ಯನ ಶರೀರವಂ ಪ್ರವೇಶಿಸಿತು. ಅದಂ ತಿಳಿದ ಸೂರ್ಯನು ಆ ಮುನಿಯ ಅಪೇಕ್ಷಾಪೂರ್ತಿಗೋಸುಗ ಎದುರಿಗಿರುವ ಪಿಂಗಳನೆಂಬ ಗಣನಿಗೆ ಆಜ್ಞಾಪಿಸಲು, ಪುರ್ಯಷ್ಟಕ ರೂಪದಿಂ ಇದ್ದ ಆ ಮುನಿಯು ಸೂರ್ಯನಂ ನಮಿಸಿ ಅವನ ಅನುಜ್ಞೆಯಿಂದ ಪಿಂಗಳ ಶರೀರವಂ ಪ್ರವೇಶಿಸಿದನು. ಆ ಪಿಂಗಳನು ವಿಂಧ್ಯಗಿರಿಗೆ ಬಂದು ಅವನ ಶರೀರವನ್ನೆತ್ತಲೂ, ಆ ಮುನಿಯು ತನ್ನ ಶರೀರವಂ ಪ್ರವೇಶಿಸಿ ಪಿಂಗಳನನ್ನಮಿಸಿದನು. ಆ ಪಿಂಗಳನು ಆ ಮುನಿಗೆ ಪ್ರಣಾಮವಂ ಮಾಡಿ ಅವನ ಆಜ್ಞೆಯಿಂದ ಯಥಾಪ್ರಕಾರವಾಗಿ ಸ್ವಸ್ಥಾನವಂ ಪೊಂದಿದನು. ಬಳಿಕ ಆ ವೀತಹವ್ಯನು ಬಿಳೀ ನೈದಿಲೆಗಳಿಂ ನಕ್ಷತ್ರಯುಕ್ತವಾದ ಗಗನದಂತೆ ಪ್ರಕಾಶಿಸುವ ಸರೋವರವಂ ಪೊಂದಿ ಕೆಸರಿನಾಟವಂ ವಿದ್ದು ಬಂದ ಕಲಭದಂತೆ ಜಲವಂ ಪೊಕ್ಕು ಯಥಾವಿಧಿಯಾಗಿ ಸ್ನಾನವಂ ಮಾಡಿ ಮೈತ್ರೀ ಕರುಣಾ ಮುದಿತೋಪೇಕ್ಷೆಗಳಿಂದಲೂ ಪ್ರಜ್ಞಾ ಸಮಭಾವ ಶಾಂತಿಗಳಿಂದಲೂ ಪ್ರಕಾಶಿಸುತ್ತಾ ಪೂರ್ವದಂತೆ ವ್ಯವಹಾರಪರನಾಗಿದ್ದನು, ಪರಾವರಲೋಕಸ್ವರೂಪವಂ ತಿಳಿದ ಆ ಮುನಿಯು ಆ ದಿವಸ ಸಾಯಂಕಾಲದೊಳ್ ಮರಳಿ ಸಮಾಧಿಗೋಸುಗ ಒಂದಾನೊಂದು ಗುಹೆಯಂ ಪೊಕ್ಕು ಇಂದ್ರಿಯ ಸಹಿತವಾದ ಮನಸ್ಸಿನಿಂದಾತ್ಮಾನುಸಂಧಾನವಂ ಮಾಡುತ್ತಾ ಪೂರ್ವದಲ್ಲೇ ನಾನು ಇಂದ್ರಿಯಗಳ ಸ್ವರೂಪವಂ ತಿರಸ್ಕರಿಸಿರುವೆನಲ್ಲದೇ, ಈಗ ಪ್ರಪಂಚದ ಅಸ್ತಿನಾಸ್ತಿಯೆಂಬ ಕಲ್ಪನೆಯನ್ನು ಬಳ್ಳಿಯನ್ನಾನೆಯಂತೆ ತುಳಿದು ಶಿಷ್ಟವಾದ ಚಿನ್ಮಾತ್ರ ಸ್ವರೂಪದಲ್ಲಿ ತೃಪ್ತನಾಗಿ ನಿಂದು ಜ್ಞಾನಿಗಳಿಗೆ ಜೀವಿಸುವವನಾಗಿಯುಂ ಅಜ್ಞರಿಗೆ ಮೃತನಾಗಿಯುಂ ಕಾಣುತ್ತಾ ಎಚ್ಚರಿಕೆಯಲ್ಲಿ ದ್ವೈತಕಲ್ಪನಾನುಸಾರಿಯಾದ ವ್ಯವಹಾರವಿಲ್ಲದ್ದರಿಂದ ನಿದ್ರೆಗೈಯ್ಯುವವನಂತೆಯೂ ಸುಷುಪ್ತಿಯಲ್ಲಿ ತತ್ವಜ್ಞಾನ ಪ್ರಕಾಶದಿಂದೆ

ಚ್ಛರವಾಗಿರುವಂತೆಯೂ ತಿರುಗುವಲ್ಲಿ ಒಳಗೆ ಜಲವಿಲ್ಲದ್ದರಿಂದ ಪೋಟುವ ರದಂತೆಯೂ ಪ್ರಕಾಶಿಸುತ್ತಾ ಲೋಕವ್ಯವಹಾರದಲ್ಲಿ ಆಸಕ್ತನಾಗುವನೆಂದು ಸಮಾಧಿನಿಷ್ಠನಾದನು. ಕ್ಷಣಕಾಲ ವಿಶ್ರಮಿಸಿಕೊಂಡ ಮಾರ್ಗಸ್ಥನಂತೆ ಆರು ದಿವಸ ಸಮಾಧಿಯಲ್ಲಿದ್ದ ಆ ಮುನಿಗೆ ಮರಿನಿದ್ರೆ ಯುಳಿದವನಿಗೆ ಜಾಡ್ಯದಂತೆ ದೃಶ್ಯ ಭ್ರಾಂತಿಯು ನಿಶ್ಶೇಷವಾಗಿ ಪೋದುದು. ಬಳಿಕ ಸಿದ್ಧನಾದ ಆ ಮಹಾಮುನಿಯು ಜೀವನ್ಮುಕ್ತ ಸ್ಥಿತಿಯಿಂ ಲೋಕವ್ಯವಹಾರಪರನಾಗಿದ್ದನು. ಸ್ಥಿತಿ ಗಮನಾದಿ ಸರ್ವ ವ್ಯಾಪಾರಗಳಲ್ಲೂ ಮನಸ್ಸು ಮೊದಲಾದವುಗಳೊಡನೆ ಅವನಿಗೆ ಇಂತು ಸಂವಾದ ನಡೆಯುತ್ತಿದ್ದುದು. ಅದೆಂತೆಂದರೆ;—ಎಲೈ ಮನವೇ! ಇಂದ್ರಿಯಗಳಂ ನಿಗ್ರಹಿಸಿಕೊಂಡಿರುವ ನಿನ್ನಿಂದೀಗ ಎಂಥಾ ಸುಖವು ಪಡೆಯಲ್ಪಟ್ಟಿರುವದೋ ಚೆನ್ನಾಗಿ ನೋಡು ? ಇದೇ ಸ್ಥಿರವಾದ್ದರಿಂದ ಇದಂ ಬಿಟ್ಟು ನೀನು ಚಪಲನಾಗ ಬೇಡ, ಓ ದುರಾಸೆವುಳ್ಳ ಕೆಟ್ಟ ಇಂದ್ರಿಯಗಳಾ ! ನೀವು ಯಾವದನ್ನಾತ್ಮನೆಂದು ತಿಳಿದಿದ್ದರೋ ಅದು ರಜ್ಜು ಸರ್ಪದಂತೆ ಭ್ರಾಂತಿ ಸಿದ್ಧವಾದದ್ದಾದ್ದರಿಂದ ವಿಚಾರದಿಂದೀಗ ನಷ್ಟವಾದುದು. ಹೀಗೆ ನಿಮ್ಮಾಶೆಯು ವ್ಯರ್ಥವಾಗುವಲ್ಲಿ ಆತ್ಮನಿಗೂ ನಿಮಗೂ ಸಂಬಂಧವೆಂತು ಸಂಭವಿಸುವದು. ನೀವು ನಿಮ್ಮ ವಿಷಯಗಳು ಕರ್ತೃತ್ವವು ಬ್ರಹ್ಮವು ಸಹ ಭಿನ್ನವಾಗಿಯೇ ಇರುವವು. ಮತ್ತೂ ಗ್ರಹಿಸುವದು ಮನಸ್ಸು, ಭೋಗಿಸುವವು, ಆತ್ಮನೆಂದು ಗೊತ್ತಾಗಿರುವದು, ಹೀಗಿರುವಲ್ಲಾವವರಿಂದಾವನಿಗೆ ಯಾವ ದೋಷವು ಅದು ಎಂಥಾದ್ದೆನ್ನಬೇಕು. ,ಕಾಡಮರವು, ಚರ್ಮಸಹಗ್ಗವು, ಕಬ್ಬಿಣಾದಿ ಉಳಿ ಬಾಚಿಗಳು ಹೊಟ್ಟೆಗೋಸುಗ ಬಂದ ತಚ್ಚನು ಸೇರುವಲ್ಲಿ ಕಾಕತಾಳ ನ್ಯಾಯದಿಂ ಮನೆಯಾಗುವಂತೆ ನಿಮ್ಮ ವ್ಯವಹಾರ ನಡೆಯುವದು. ಇವರಿಂದಾವುದಕ್ಕೇನು ಹಾನಿಯಾದೀತು, ಈಗ ಮರವೆಗೆ ಮರವೆಯಾದುದು, ಸ್ಮೃತಿಗೆ ಸ್ಫುಟವಾದ ಸ್ಮೃತಿಯಾದುದು, ಸತ್ತು ಸತ್ತಾಗಿಯೂ, ಅಸತ್ತು ಅಸತ್ತಾಗಿಯೂ, ಶಾಶ್ವತವಾದದ್ದು, ಶಾಶ್ವತವಾಗಿಯೂ ನಿಂದುದು, ಕ್ಷಯಿಸುವಂತಹದ್ದು ಕ್ಷಣವೇ ಆಯಿತು, ಎಂದು ವಿವೇಕ ವಿಚಾರದಿಂದಲೇ ಆ ಮುನಿಯು ಸರ್ವಸಾಕ್ಷಿಯಾಗಿ ಅನೇಕವರ್ಷ ಭೂಮಿಯೊಳ್ ವಿಹರಿಸುತ್ತಿದ್ದನು. ಪದಾರ್ಥ ದರ್ಶನರೂಪವಾದ ಅನರ್ಥ ಪರಿಹಾರಕ್ಕೋಸುಗ ಧ್ಯಾನನಿಷ್ಠನಾಗುವ ಆ ಮುನಿಗೆ ತ್ಯಾಜ್ಯ ಗ್ರಾಹ್ಯ ಪದಾರ್ಥಗಳಲ್ಲಿ ಅಸಂಗಭಾವದಿಂದಿಷ್ಟಾನಿಷ್ಟಗಳೆರಡನ್ನು ಮನವು ಅತಿಕ್ರಮಿಸಿರುವಂತಿದ್ದುದು. ಇಂತು ವಿಹರಿಸುತ್ತಿದ್ದ ಆ ಮಹಾಮುನಿಯು ವಿದೇಹಕೈವಲ್ಯದಲ್ಲಪೇಕ್ಷೆಯಿಂದ ಸಹ್ಯಗಿರಿಯ ಗುಹೆಯಂ ಸೇರಿ ಪದ್ಮಾಸನದಲ್ಲಿ ಕುಳಿತು

ಹೇಳಿದನದೆಂತೆನೆ;—ಓ ರಾಗದ್ವೇಷಗಳಾ! ನಿಮ್ಮಿಂದ ನಾನು ಬಹುಕಾಲ ಕ್ರೀಡಿಸುತ್ತಿದ್ದೆನಲ್ಲವೆ ? ಈಗ ನೀವು ರಾಗದ್ವೇಷ ಭಾವಗಳಂ ಬಿಟ್ಟುಬಿಡಿ ? ಓ ಭೋಗಗಳಾ! ಅಖಂಡವಾದ ನಿರ್ವಾಣಪದವಿಯನ್ನು ಕೂಡ ಮರತ ನಾನು ಬಾಲಕನಂತೆ ನಿಮ್ಮಿಂದ ಲಾಲಿತನಾದ್ದರಿಂದ ನಿಮಗೂ ನಿಮ್ಮ ಸುಖಕ್ಕೂ ನಮ ನಮಸ್ಕಾರವಂ ಮಾಡುವೆನು, ಎಲೈ ದುಃಖವೇ! ಗುರುವಿನಂತೆ ನೀನು ವಿವೇಕಮಾರ್ಗವಂ ತೋರಿದ್ದರಿಂದ ಶಾಂತವಾದೀಪದವಿಗೆ ನಾನು ಬಂದೆನು, ಆದ್ದರಿಂದ ಸುಖಪ್ರದವಾದ ನಿನ್ನಂ ನಾನು ಬಾರಿಬಾರಿಗೂ ನಮಿಸುವೆನು. ಅಸಾರವಾದ ಜೀವನವುಳ್ಳ ಸಂಸಾರವೇ ನಿನಗೆ ಶುಭವಾಗಲಿ! ಎಲೈ ದೇಹವೇ! ನೀನು ಬೇರೆ ನಾನು ಬೇರೆ ಎಂಬುವದು ಅನಾದಿಸಿದ್ಧವಾಗಿರುವದು. ಸಂಯೋಗವೆಂಬುವದು ವಿಯೋಗಾಂತವಾದ್ದರಿಂದ ಅತಿ ಪ್ರಯಾಸ ಸಿದ್ಧವಾದ ಪ್ರಯೋಜನಗಳಿಗೂ ಅವಕ್ಕಾಗಿ ಪ್ರಯಾಸಪಟ್ಟ ಪ್ರಾಣಿಗಳಿಗೂ ಕೂಡ ಎಲ್ಲೆಲ್ಲಿಯೋ ಸ್ಥಿತಿಯಾಗುವದು. ಇದಕ್ಕಿಂತ ವಿಷಮವಾದ ಗತಿಯಿನ್ನ್ಯಾವದಿರುವದು. ಬಹುಜನ್ಮ ಸಿದ್ಧವಾದ ಸ್ನೇಹಕ್ಕೆ ಪಾತ್ರವಾಗಿರುವ ದೇಹವೇ ಬಿಡಲ್ಪಡುವಲ್ಲಿ, ಇದಕ್ಕಿಂತಾಶ್ಚರ್ಯವಾವಿನ್ನ್ಯಾವದೆನಬೇಕು. ಎಲೈ ದೇಹವೇ! ನಿನ್ನ ಉಪಕಾರಕ್ಕೋಸುಗ ನೀನು ಸತ್ಸಹವಾಸ ಸತ್ಕರ್ಮಾದಿಗಳಲ್ಲಾಸಕ್ತವಾಗುವಲ್ಲಿ ನನಗೆ ನಿನ್ನ ವಿಯೋಗವು ನಿನಗೆ ನಾಶವು ಸಹ ಸಿದ್ಧವಾದುದು. ಎಲೌ ತೃಷ್ಣೆಯೇ! ನಾನು ಬಳಲಿದಾಗ್ಯೂ ಬಿಡದೆ ಅಡಿಗಡಿಗೆ ಸಂಭವಿಸುವ ದೈನ್ಯವಂ ಲೆಕ್ಕಿಸದೆ ಶಿಶುವಿನಂತೆ ನನ್ನಂ ರಕ್ಷಿಸಿದೆಯಲ್ಲವೆ? ಈಗ ಸ್ಥಿತಿಯಂ ಪೊಂದುತೆ ಪ್ರಣಾಮವಂ ಮಾಡುವ ನನಗೆ ಅಪ್ಪಣೆಯಂ ಕೊಡುವಳಾಗು! ಎಲೈ ಕಾಮವೆ! ನನ್ನ ಅಪರಾಧಗಳೆಲ್ಲವಂ ಕ್ಷಮಿಸಿ ಶಾಂತಿಯಂ ಪಡೆಯುವ ನನಗೆ ಮಂಗಳವಂ ಪ್ರಾರ್ಥಿಸುವನಾಗು ? ನರಕಗಳಿಂ ನನ್ನನ್ನುದ್ಧರಿಸಿದ ಪುಣ್ಯಕ್ಕೆ ನಮಸ್ಕಾರವಾಗಲಿ! ಓ ನರಕಗಳಾ! ಬಹುಕಾಲದಿಂ ನನ್ನಂ ಬಿಡಲಾರದೆ ಕರಕೊಳ್ಳುತ್ತಿದ್ದ ನಿಮಗೀಗ ಕೊನೆಯ ನಮಸ್ಕಾರವಂ ಮಾಡುವೆನು. ಎಲೈ ಮೋಹವೇ! ಇಷ್ಟು ದಿವಸಕ್ಕೀಗ ಅದೃಶ್ಯವಾಗುತಲಿರುವ ನಿನಗೆ ನನ್ನ ಪ್ರಣಾಮವಾಗಲಿ, ಮೇಘಧ್ವನಿಯಂ ಮಾತನಾಡುತ ಪರ್ಣವಸನಗಳಾಗಿದ್ದ ಗುಹೆಯೆಂಬ ತಪಸ್ವಿನಿಯೇ! ಸಂಸಾರಮಾರ್ಗಶ್ರಮ ಪರಿಹಾರಿಣಿಯಾಗಿ ಸಮಾಧಿಯೊಳ್ ಸುಖಿಯಾಗಿದ್ದ ನಿನಗೆ ನಾನು ಪ್ರಣಾಮವಂ ಮಾಡುವೆನು. ಮಾರ್ಗ ಸಂಚಾರದಲ್ಲಿ ಕರಾವಲಂಬನವಂ ಕೊಡುತ್ತಾ ಪ್ರವಾಪ್ಯಕ್ಕೆ ಸಹಾಯವಾದ ದಂಡಕ್ಕೆ ನಮಸ್ಕಾರವು. ಎಲೈ ದೇಹವೇ! ಬೆವರು ಕಾವು ಮೊದಲಾದ ನಿನ್ನ ವಿಕಾರಗಳಿಗೆ ನಾನು ನಮಸ್ಕಾರವಂ ಮಾಡುವೆನು.

ಕರುಳು ಮೂಳೆ ಮಾಂಸ ಮೊದಲಾದ ಸಾರವಂ ತೆಗದುಕೊಂಡು ನೀನು ಶಿರಳುವನಾಗು ? ಸಮಸ್ತ ಸಂಸಾರಗಳಿಗೂ, ಆಯಾಯ ವ್ಯವಹಾರಗಳಿಗೂ, ಅವುಗಳಲ್ಲಿ ಸಹಾಯವಾಗಿದ್ದ ಪ್ರಾಣಗಳಿಗೂ ನಾನು ಪ್ರಣತಿಯಂ ರಚಿಸುವೆನು. ಇವುಗಳೀಗ ನನ್ನಂ ಬಿಟ್ಟು ಪಯಣಮಾಡಿಸಬಹುದು. ವ್ಯಯದವರಿಗೆ ಸಂಪಾದನೆಯು ಪೇಳುವವರಿಗೆ ಬೆಳವಳಿಕೆಯು ಬೇರೆಯಾಗುವವರಿಗೆ ಸೇರಿಕೆಯೆಂಬುವದು ಕ್ಲಿಷ್ಟವಾದಸ್ಸಾದ್ದರಿಂದೀಗ ನಾನು ಸ್ವಸ್ಥಾನವಂ ಪೊಂದುವೆನು. ಇವುಗಳೂ ಕೂಡ ತಮ್ಮ ಸ್ಥಾನವಂ ಪೊಂದಲಿ, ಚಕ್ಷುವು ಸೂರ್ಯನನ್ನು, ಶ್ರವಣಾಕಾಶವನ್ನು, ಘ್ರಾಣವು ಸುಗಂಧಿ ವನಭೂಮಿಯನ್ನು, ತ್ವಕ್ಕು ಪ್ರಾಣಗಳು ಸಹ ವಾಯುವನ್ನು, ರಸನವು ಚಂದ್ರಮಂಡಲವನ್ನು, ತಮ್ಮ ತಮ್ಮ ಶಕ್ತಿಗಳಿಂದೊಡಗೂಡಿ ಸೇರಲಿ, ಈಗ ನಾನು ತಾರಕಾಂತಸ್ಥಿತನಾಗಿ ಕಡತನಂತ ಕಡಲಿನಂತೆ ಶಾಂತನಾಗುವೆನು, ಈಗ ನನಗೆ ಕಾರ್ಯಪರಂಪರೆಗಳು ದೃಶ್ಯದೃಷ್ಟಿಗಳು ಆದರ ಮನನಗಳು ಸಹ ನಷ್ಟವಾಗಿರುವವು. ಎಂದು ಸಪ್ತಮ ಭೂಮಿಕೆಯಲ್ಲಿ ನಿಂದ ಆ ಮಹಾಮುನಿಯು ಮಾತ್ರಾ ಭೇದದಿಂದಲೂ ಸ್ಥೂಲ ಸೂಕ್ಷ್ಮಾದಿ ನಾದ ಭೇದದಿಂದಲೂ, ಪ್ರಣವವಂ ಧ್ಯಾನಿಸುತ್ತ ಹೊರಗೂ ಒಳಗೂ ಸಹ ಸಂಕಲ್ಪ ಕಲ್ಪಿತವಾದ ತ್ರೈಲೋಕ್ಯ ಪದಾರ್ಥವಂ ಬಿಟ್ಟು ಶಿಖರವಿಲ್ಲದ ಮಂದರಗಿರಿಯಂತೆಯೂ, ನಿಲ್ಲಿಸಿದ ಕುಂಬಾರನ ಚಕ್ರದಂತೆಯೂ, ಅಲೆಯಿಲ್ಲದ ಕಡಲಿನಂತೆಯೂ, ತುಂಬಿದ ಕೊಡದಂತೆಯೂ ಮೇಘ ನಕ್ಷತ್ರಾದಿಗಳೊಂದೂ ಇಲ್ಲದ ಗಗನದಂತೆಯೂ, ಸ್ಥಿರವಾಗಿ ನಿಂದು ವಾಯುವು ಗಂಧವಂ ಬಿಡುವಂತೆ ನಿಶ್ಯಬ್ದವಾದ ಪ್ರಣವಾಂತದ ಅನುಸಂಧಾನದಿಂದ ಇಂದ್ರಿಯ ತನ್ಮಾತ್ರಗಳಂ ಬಿಡುವಲ್ಲಿ, ತಪೋರೂಪ ಗೋಚರವಾಗಲು ಪುಟ್ಟುತ್ತಲಿರುವ ಕೋಪವಂ ಕ್ಷಮಶಾಲಿಯಂತೆ ಜ್ಞಾನಸೂರ್ಯನಿಂದದಂ ಸಂಹರಿಸಿದನು. ಬಳಿಕ ತೇಜವು ಗೋಚರವಾಗಲೂ ನನ್ನ ನೇತ್ರದ ತೇಜವೇ ಬೇರೆಯಾಗಿರುವಂತೆ ಪ್ರಕಾಶಿಸುವದೆಂದಾಲೋಚಿಸಿದನು. ಆಗ ತೇಜವು ಮರೆಯಾಗುವಲ್ಲಿ ಒಂದು ಕತ್ತಲೆ ಬೆಳಕು ಸಹಾ ಇಲ್ಲದಿರಲು ಈ ಕಲ್ಪನೆಯು ಮನದ್ದೆಂದಾಲೋಚಿಸಿ ಅಂತರ್ಮುಖವಾದ ಮನದಿಂದ ಮನವನ್ನೇ ಭೇದಿಸಿದನು. ಬಳಿಕ ತಕ್ಷಣವಲ್ಲಿ ಪುಟ್ಟಿದ ಶಿಶುವಿನ ಜ್ಞಾನದಂತೆ ಯಾವ ವಿಕಾರವೂ ವಿಚಾರವೂ ಸಹ ಉದಯಿಸದಿರುವಲ್ಲಿ ವಿಶುದ್ಧ ಜ್ಞಾನಸ್ವರೂಪನಾದ ನನಗೀ ಪೊಂಕೆಲ್ಲದೆಂದು ಭಾವಿಸಿದನು. ಆಗಲೇ ಆ ಮುನಿಯು ಸ್ಪಂದ ಶಕ್ತಿಯಂ ವಾತದಂತೆ ದೃಶ್ಯದೃಷ್ಟಿಯಂ ತ್ಯಜಿಸಿದನು. ಆಗ ಸತ್ತಾಮಾತ್ರ ಸ್ವರೂಪವಾದ ಪರ್ಯಂತ ಸ್ಥಾನವಂ ಪೊಂದಿದ ಆ

ಮನವು ಸುಷುಪ್ತಿಯನ್ನವಲಂಬಿಸಿ ಗಿರಿಯಂತೆ ನಿಶ್ಚಲವಾಗಲು, ಪ್ರಾರಬ್ಧಶೇಷವಿಲ್ಲದ್ದರಿಂದೊಳ ಹೊರಗಣ ವಾಸನೆಗಳು ಮನದಲ್ಲೇ ಅಣಗಿದವು. ಆಗ ವಿಕಾರವಿಲ್ಲದ ಸ್ವಪ್ನದಂತೊಳಗೆ ಎಚ್ಚರವಾದುದು. ಅಹಂಕಾರ ಗಂಧವಿಲ್ಲದ ಆ ಸ್ಥಿತಿಯೇ ತುರ್ಯವೆನಿಸುವದು. ಆಗ ಆತ್ಮನಿಗೆ ಸಹಜವಾದ ಜ್ಞಾನೇಚ್ಛಾ ಕ್ರಿಯಾಶಕ್ತಿಗಳು ಸಚ್ಚಿದಾನಂದ ಸ್ವರೂಪದಿಂ ಪ್ರಕಾಶಿಸಿದವು. ಹೊರಗಣ ಆನಂದವಿಲ್ಲದ್ದರಿಂದ ನಿರಾನಂದವೆಂತಲೂ, ಸಹಜಾನಂದ ಸ್ಥಿತಿಯಿಂದ ಸಾನಂದವೆಂತಲೂ, ಸತ್ತಾಮಾತ್ರಸ್ವರೂಪವಾದ್ದರಿಂದ ಸತ್ತೆಂತಲೂ, ಬಾಹ್ಯದೃಷ್ಟಿಗೆ ಅಗೋಚರವಾದ್ದರಿಂದ ಸತ್ತೆಂತಲೂ, ಇರುಳು ಕಣ್ಣಿನವನಿಗೆ ಕತ್ತಲೆಯೇ ಪ್ರಕಾಶವಾಗುವಂತೆ ಇದೊಂದೆಂತಲೂ, ಬಾಹ್ಯ ದೃಷ್ಟಿಯಿಂದಾವದು ಇಲ್ಲವೆಂತಲೂ, ಜ್ಞಾನಸ್ವರೂಪವಾದ್ದರಿಂದ ಚಿತ್ತೆಂತಲೂ, ಚೈತ್ಯ ಪ್ರಕಾಶವಿಲ್ಲದ್ದರಿಂದ ಜಡವೆಂತಲೂ, ಯಾವದು ಅನುಭವ ಸಿದ್ಧವಾಗಿರುವದೋ? ಯಾವದನ್ನ ಹೇಳಲು ಪೊರಮಟ್ಟ ಶ್ರುತಿಗಳು ದೃಶ್ಯವನ್ನೇ ಹೇಳುತ್ತಾ ಇದಲ್ಲವೆಂದು ತಿರಸ್ಕರಿಸುವವೋ? ಯಾವದು ಸರ್ವಭಾವಾಂತರಗಳಲ್ಲಿ ದ್ದಗನ್ಯ ಒಂದೂ ಇಲ್ಲದಿರುವದೋ? ಶೂನ್ಯವೆಂತಲೂ, ಬ್ರಹ್ಮವೆಂತಲೂ, ವಿಜ್ಞಾನವೆಂತಲೂ, ಪುರುಷನೆಂತಲೂ, ಈಶ್ವರನೆಂತಲೂ, ಶಿವನೆಂತಲೂ, ಆತ್ಮನೆಂತಲೂ, ಕ್ಷಣಿಕ ವಿಜ್ಞಾನವೆಂತಲೂ, ಮಾಧ್ಯವೆಂತಲೂ, ಸರ್ವವೆಂತಲೂ, ಯಾವದು ಶಾಸ್ತ್ರಜ್ಞಾನಿಗಳಿಂ ಹೇಳಲ್ಪಡುವದೋ? ? ಸರ್ವ ಶಾಸ್ತ್ರಗಳಿಗೂ ಯಾವದು ಸಿದ್ಧಾಂತವೆನಿಸುವದೋ? ಯಾವದು ಸರ್ವ ತೇಜಗಳಿಗೂ ತೇಜವಾಗಿರುವದೋ? ? ಅನೇಕವಾಗಿ ಕಾಣುತ್ತಿದ್ದರೂ ಒಂದೆನಿಸುವದೋ? ಅನೇಕಾಂತ ಸಮೇತವಾಗಿದ್ದರೂ ನಿರಂತರವಾಗಿರುವದೋ? ಸರ್ವಾನುರಕ್ತವಾಗಿದ್ದರೂ ನಿರ್ಲೇಪವಾಗಿರುವದೋ? ಅಂಥಾ ಸ್ವಾನುಭವ ಗಮ್ಯವಾದ ಪರಮಪದವಂ ಪೊಂದಿದ ಆ ಮಹಾಮುನಿಯು ಚಿತ್ರಪ್ರತಿಮೆಯಂತಿರಲು, ಮನೋನುಗತವಾಗಿದ್ದ ಅವನ ಚೈತನ್ಯವು ಹಾರಿದ ಜಲಕಣವು ಸಮುದ್ರವಂ ಪೊಂದುವಂತೆ ಪರಮಾತ್ಮನಂ ಸೈದಿತು. ಹಿಮಗಾಲದ ಕಮಲದಂತೆ ಅವನ ಶರೀರವು ನಿಸ್ಸಾರವಾಗುತ್ತಿರಲು, ಹೃದಯ ಕಮಲದಲ್ಲಿ ಭ್ರಮರದಂತಿದ್ದ ಪ್ರಾಣಗಳು ಪಕ್ಷಿಗಳು ವೃಕ್ಷದಲ್ಲಿದ್ದ ಗೂಡಂ ಬಿಡುವಂತೆ ಅವನ ಹೃದಯವಂ ಬಿಟ್ಟು ಮಹಾ ವಾಯುವಿನಲ್ಲೈಕ್ಯವಂ ಪೊಂದಿದವು. ಇದೇಪ್ರಕಾರ ಆಕಾಶಾದ್ಯಂಶಗಳಿಂ ಪುಟ್ಟಿದ್ದ ಅಂತಃಕರಣ ಬಾಹ್ಯ ಕರಣಗಳು ಆಯಾಯ ಭೂತಗಳಂ ಸೇರುವಲ್ಲಿ ಅಸ್ಥಿ ಮಾಂಸಮಯವಾದ ದೇಹಮಾತ್ರವೇ ಭೂಮಿಯಲ್ಲಿ ನಿಂದುದು. ಎಲೈ ರಾಮಭದ್ರನೇ! ನಾಂ ಕಲ್ಪಶೇಷದಿಂ ವೀತಹವ್ಯನೆಂದುದಿಸಿದ ಜ್ಞಾನವು ಹೀಗೆ

ಲಯವನ್ನೈದಿತು. ಆಶಾನಾಶವು ದುಃಖಹಾನಿಯು ಅಜ್ಞಾನನಿವೃತ್ತಿಯು ಬ್ರಹ್ಮಸಾಯುಜ್ಯವೂ ಸಹ ಜ್ಞಾನದಿಂದಲೇ ಆಗುವದರಿಂದ ವಿಚಾರದಿಂದ ಜ್ಞಾನವನ್ನೇ ಸಾಧಿಸುವನಾಗು. ವೀತಹವ್ಯನೀ ಪ್ರಪಂಚವನ್ನೇ ಜಗವೆಂದನುಭವಿಸಿದನಲ್ಲದೆ ಅಪೂರ್ವವಾದ ಮತ್ತೊಂದು ಜಗವಂ ಕಾಣಲಿಲ್ಲವಾದ್ದರಿಂದ ಅಜ್ಞಾನಮಯವಾದ ಮನವೇ ಜಗವಾಗುವದೆಂದು ನಿಶ್ಚೈಸುವನಾಗು. ವಿಚಾರದಿಂ ಸಿದ್ಧನಾದ ಆ ವೀತಹವ್ಯನು ಮೂವತ್ತು ಸಾವಿರ ವರ್ಷ ಜೀವನ್ಮುಕ್ತಭಾವದಿಂ ಹೇಗೆ ವಿಹರಿಸುತ್ತಿದ್ದನೋ ಹಾಗೆ ನೀನೂ ಜ್ಞಾನಾತಿಶಯದಿಂ ನಿರ್ಲೇಪನಾಗಿ ರಾಜ್ಯಭಾರವಂ ಮಾಡುವನಾಗು. ಸರ್ವವ್ಯಾಪಕನಾದ ಆತ್ಮನಿಗೆಂದಿಗೂ ಉತ್ಪತ್ತಿ ಇಲ್ಲವೆಂಬುವದು ಗೊತ್ತಾಗಿರುವಲ್ಲಿ ಪುನರ್ಜನ್ಮವಾಗುವದೆಂದು ನೀನು ಪೇಚಾಡುವುದಕ್ಕೆ ಕಾರಣವೇನಿರುವದು. ನವಿಲುಗಳಿಗೆ ವಿಷಗಳಂತೆ ನಿನ್ನಂಥಾ ಮಹಾತ್ಮರು ದುಃಖಗಳಿಗೆ ಅಧೀನರಾಗುವದಿಲ್ಲವಾದ್ದರಿಂದ ಮನಃಕಲ್ಪಿತವಾದ ಹರ್ಷಾಮರ್ಷಾದಿ ವಿಕಾರಗಳಿಗೆ ಒಳಗಾಗದೆ ನಿತ್ಯಾನಂದನಾಗಿರುವನಾಗೆಂದು ವಸಿಷ್ಠಮಹಾಮುನಿಯು ನಿರೂಪಿಸಿದನೆಂಬಲ್ಲಿಗೆ;—ಉಪಶಮಪ್ರಕರಣದಲ್ಲಿ ಜ್ಞಾನಯೋಗತರಂಗಿಣಿಯೊಳ್ ಷೋಡಶ ತರಂಗಕ್ಕೆ ಮಂಗಳಮಸ್ತು. ಶ್ರೀ ಶ್ರೀ.

---

## ಮನೋನಾಶೋಪಾಯಾದಿ ನಿರೂಪಣವೆಂಬ ಸಪ್ತದಶ ತರಂಗ ಪ್ರಾರಂಭವು.

ಬಳಿಕ ಶ್ರೀರಾಮಚಂದ್ರನು ಎಲೈ ಗುರುವೆ! ಜೀವನ್ಮುಕ್ತರಾದ ಮಹಾತ್ಮರಿಗೆ ಆಕಾಶಗಮನಾದಿ ಸಿದ್ಧಿಗಳೇಕೆ ಕಾಣಿಸುವುದಿಲ್ಲ? ಈ ವೀತಹವ್ಯನಿಗೆ ವಿದ್ಯಾಧರಭಾವಾದಿಗಳು ಮಾನಸಿಕವಾಗಿಯೇ ಸಂಭವಿಸಿದ್ದಕ್ಕೆ ನಿಮಿತ್ತವೇನೆಂದು ಕೇಳುವಲ್ಲಿ ವಸಿಷ್ಠನಿಂತೆಂದನು;—ಎಲೈ ಶ್ರೀರಾಮಭದ್ರನೆ! ವಾಯುವಿಗೆ ಅಸ್ಥಗತಿಯು ತೇಜಕ್ಕೆ ಊರ್ಧ್ವಗತಿಯು ಜಲಕ್ಕೆ ಅಧೋಗತಿಯೆಂಬುವದು ಹೇಗೆ ಸ್ವಾಭಾವಿಕವೋ ಹಾಗೆ ದೇವತಾದಿ ಶರೀರಗಳಿಗೆ ಊರ್ಧ್ವಾಧೋಗತಿಗಳು ಸ್ವಾಭಾವಿಕವಾಗಿರುವವು. ಆದ್ದರಿಂದ ವಿಚಿತ್ರವಾದ ಸಿದ್ಧಿಗಳೆಲ್ಲವೂ ವಸ್ತುಸ್ವಭಾವವೆಂದು ತಿಳಿಯತಕ್ಕದ್ದು. ಯಾವನು ಹೇಗೆ ಇಚ್ಛೈಸುವನೋ ಅವನು ಹಾಗೆ ಅನುಭವಿಸುವನು. ಜ್ಞಾನಸ್ವರೂಪನಾದ ಆತ್ಮನಲ್ಲಿ ಕ್ರಿಯಾಶಕ್ತಿಯೋಗದಿಂದುಂಟಾದ ಮನವು ಅತಿಚಪಲವಾದ್ದರಿಂದಲೂ, ಸಂಕಲ್ಪರೂಪವಾದ್ದರಿಂದಲೂ, ಸತ್ವಪರಿಣಾಮವಾದ್ದರಿಂದಲೂ ನಿರ್ಮಲವಾದ ಸ್ವರೂಪದಲ್ಲಿ ಪ್ರತಿಫಲಿಸಿದ ಸಮಸ್ತ ಪದಾರ್ಥಗಳನ್ನೂ ಸ್ವಚ್ಛಂದವಾಗಿ ಸಂಕ

ಕ್ಷಿಸುತ್ತಲೇ ಇರುವದು. ಆ ಇಚ್ಛೆಯು ಕ್ಷಣಿಕವಾದರೆ ಆ ಫಲವೂ ತೋರಿಕೆ ಮಲ್ಲೇ ಸಮಾಪ್ತವಾಗುವದು. ಯಾವದರ ಇಚ್ಛೆಯು ಸಂಕಲ್ಪ ವಿಕಲ್ಪ ಭಾವನೆ ಗಳಿಂ ವೃದ್ಧಿಹೊಂದುವದೋ ಆ ಫಲವು ಮಾನಸಿಕ ಭೋಗಕ್ಕೆ ಯೋಗ್ಯವಾಗು ವದು. ಆ ಇಚ್ಛಾನುಸಾರವಾಗಿ ಕರ್ಮವೂ ನಡದರೆ ಕರ್ಮತಾರತಮ್ಯವಿದ್ದಂತೆ ಕರ್ಮ ಪರಿಣಾಮವಾದ ಶರೀರಕ್ಕೂ ಆ ಫಲವು ಕ್ಷಣಿಕವಾಗಿಯೂ ಕೆಲವು ಕಾಲ ಪಿರತಕ್ಕದ್ದಾಗಿಯೂ ಸಂಭವಿಸುವುದು. ಸ್ವರೂಪ ವಿಚಾರಪರನಾದವನಿಗೆ ಸಮಸ್ತ ಪದಾರ್ಥಗಳೂ ಅಸತ್ತಾಗುವದ್ದರಿಂದ್ಯಾವದರಲ್ಲೂ ಅವನಿಗೆ ಇಚ್ಛೆಯುಂಟಾಗು ವದಿಲ್ಲ. ಆದ್ದರಿಂದವನು ಸ್ವರೂಪದಲ್ಲೇ ಶಾಂತನಾಗಿ ನಿಲ್ಲುವನು. ಜಗತ್ತಿನ ರೀತಿಗಳೆಲ್ಲವೂ ಮಾಯಿಕವಾದ್ದರಿಂದ ಆ ಸಿದ್ಧಿಗಳುಳ್ಳವರು ಅಜ್ಞಾನಿಗಳೆನಿಸುವರು. ಒಂದರ ಜ್ಞಾನವು ಮತ್ತೊಂದಕ್ಕೆ ಉಪಯೋಗಿಸಲಾರದಾದ್ದರಿಂದ ಸಿದ್ಧಿಜ್ಞಾನಿಯು ಸಿದ್ಧಿಯನ್ನೂ, ಆತ್ಮಜ್ಞಾನಿಯು ಆತ್ಮನನ್ನೂ, ಪಡೆಯುವನೆಂದು ತಿಳಿಯುವನಾಗು. ಆತ್ಮಜ್ಞಾನಿಗೂ ಕೂಡ ಪ್ರಾರಬ್ಧವಿದ್ದಲ್ಲ ಭೋಗಾದಿಗಳಂತೆ ಸಿದ್ಧಿಗಳುಂಟಾಗುವವು. ಪಾಮರರಿಗೆ ಆಶ್ಚರ್ಯಕರವಾದ ಈ ಸಿದ್ಧಿಗಳು ಆತ್ಮಾನುಸಂಧಾನಕ್ಕೆ ವಿಘ್ನವಾಗುವ ವಾದ್ದರಿಂದ ಲೌಕಿಕ ಪ್ರತಿಷ್ಠೆಗೆ ಸಾಧನವಾದ ಈ ಸಿದ್ಧಿಗಳಂ ಜ್ಞಾನಿಗಳು ಅಂಗೀ ಕರಿಸರು. ಮಣಿ ಮಂತ್ರ ಯಂತ್ರ ಮೂಲಿಕಾಧಾರಣಾದಿ ಕ್ರಮಗಳಿಂದಾಗುವ ಈ ಸಿದ್ಧಿಗಳು ದೇಶ ಕಾಲ ದ್ರವ್ಯ ಕ್ರಿಯಾಯೋಗದಿಂ ಸಿದ್ಧವಾಗುವವು. ಇವುಗಳಿಂ ದಾತ್ಮಜ್ಞಾನಕ್ಕೆ ಉಪಯೋಗವು ಆತ್ಮಜ್ಞಾನದಿಂದಿವುಗಳಿಗೆ ಸಾಧನೆಯೂ ಎಂ ದಿಗೂ ಆಗಲಾರವು. ವಿಷದಿಂದ ನಾಶವೆಂತಲೂ, ಮದ್ಯದಿಂದ ಮದವೆಂತಲೂ ಮಿಗಿಲಾದ ಉಪವಾಸದಿಂ ದಮನವೆಂತಲೂ, ಅಮೃತದಿಂ ಜೀವನವೆಂತಲೂ, ಪರಮಾ ತ್ಮನ ಕ್ಲೃಪ್ತಿಯಿಂದ ಆಯಾಯ ಪದಾರ್ಥಗಳಿಗೆ ಆಯಾಯಗುಣಗಳು ಸ್ವಾಭಾವಿಕ ವಾಗಿರುವವು. ಈ ನಿಯಮವಂ ತಪ್ಪಿಸುವದಕ್ಕೆ ಹರಿಹರ ಬ್ರಹ್ಮರೂ ಕೂಡ ಸಮರ್ಥರಾಗಲಾರರು. ಆತ್ಮಜ್ಞಾನಿಗೆ ಒಂದನ್ನೂ ಮಾಡುವದರಿಂದಲೂ, ಒಂ ದನ್ನೂ ಬಿಡುವದರಿಂದಲೂ ಪ್ರಯೋಜನವೇನೂ ಇಲ್ಲದ್ದರಿಂದ ಯಾವದನ್ನು ಇವನು ಪರಿಗ್ರಹಿಸದೇ ನದಿಗಳಿಂ ಸಮುದ್ರದಂತೆ ಈಶ್ವರೇಚ್ಛೆಯಿಂ ಬಂದದ್ದರಿಂದಲೇ ಸಂ ತೋಷಪಡುತ್ತಾ ನಿತ್ಯತೃಪ್ತನಾಗಿರುವನು. ಎಂದು ಹೇಳುವಲ್ಲಿ ಎಲೈ ಗುರುವೆ ಈ ವೀತಹವ್ಯನ ಶರೀರವನ್ನೇಕೆ ಮಾಂಸಭಕ್ಷಕವಾದ ಮೃಗ ಪಕ್ಷಿಗಳು ಮುಟ್ಟ ಲಿಲ್ಲ. ಮತ್ತು ಈ ವೀತಹವ್ಯನು ಜ್ಞಾನ ಬಂದಕೂಡಲೆ ಏಕೆ ವಿದೇಹಮುಕ್ತಿಯಂ ಪಡೆಯಲಿಲ್ಲವೆಂದು ಶ್ರೀರಾಮನು ಕೇಳುವಲ್ಲಿ, ಮರಳಿ ವಸಿಷ್ಠನಿಂತೆಂದನು,—ಎಲೈ

ಶ್ರೀರಾಮಚಂದ್ರನೇ ಜ್ಞಾನವಿದ್ದಂತೆ ಶರೀರ ವಿರುವದಾದ್ದರಿಂದ ಯಾರಿಗೆ ವಾಸನೆ ಗಳಿಂ ದೇಹಾದಿ ಜಡಾತ್ಮಜ್ಞಾನವಿರುವದೋ ಅವರ ದೇಹವೇ ಛೇದದ ಹಾದಿಗಳಿಗೆ ಯೋಗ್ಯವಾಗುವದು. ಯಾರಿಗೆ ಆತ್ಮಜ್ಞಾನವೇ ರೂಢಮೂಲವಾಗಿರುವದೋ ಅವರ ದೇಹವು ಛೇದದಾಹಾದಿಗಳಿಗೆ ಯೋಗ್ಯವಾಗದು. ಶತ್ರುವಂ ನೋಡಿದರೆ ಕೋಪವೂ, ಮಿತ್ರನಂ ನೋಡಿದರೆ ಸಂತೋಷವೂ ಮಧುರಪದಾರ್ಥದಲ್ಲಭಿಲಾಷೆಯೂ, ಕೈಯ್ಪುಪಾರ್ಥದಲ್ಲಿ ಜುಗುಪ್ಸೆಯೂ, ಉಂಟಾಗುವದ್ದರಿಂದ ಕಂಡಪದಾರ್ಥದಂತೆಯೇ ಮನವು ಪರಿಣಮಿಸುವದೆಂದು ತಿಳಿಯತಕ್ಕದ್ದು. ಆದರಿಂದ ಆತ್ಮಜ್ಞಾನಿಯ ದೇಹವಂ ನೋಡುವಲ್ಲಿ ಘಾತುಕನಾದ ಪ್ರಾಣಿಗಳಿಗೂ ಕೂಡ ಘಾತಬುದ್ಧಿಯುಂಟಾಗಲಾರದು. ಅಹಿಂಸಾ ಪ್ರತಿಷ್ಠೆಯಾದವನ ಸನ್ನಿಧಿಮಾತ್ರದಿಂದಲೇ ಗಜಸಿಂಹಾದಿಗಳಿಗೆ ವೈರ ಪೋಗುವಲ್ಲಿ ನಿತ್ಯಾನಂದನಾದ ಆತ್ಮಜ್ಞಾನಿಯ ಸನ್ನಿಧಿಯೊಳ್ ಪ್ರಾಣಿಗಳಂತಿರುವವೆಂದು ಪೇಳಬೇಕು. ಸಮಾನ ಜ್ಞಾನಿಗಳಾದ ಪ್ರಾಣಿಗಳಿಗೆ ಸ್ನೇಹವಾಗಲಿ ದ್ವೇಷವಾಗಲಿ ಉಂಟಾಗುವದು. ಆದರಿಂದಲೇ ದುಷ್ಟಪ್ರಾಣಿಗಳ ದರ್ಶನದಲ್ಲಿ ಶಕ್ತನಾದವನಿಗೆ ಹೊಡೆಯಲಿಚ್ಛೆಯೂ ಅಶಕ್ತನಿಗೆ ಓಡಲಿಚ್ಛೆಯೂ ಉಂಟಾಗುವದು. ಸಾಧು ಪ್ರಾಣಿಗಳಲ್ಲಿ ಕ್ರೂರಪ್ರಾಣಿಗಳಿಂ ಘಾತಪಾತಾದಿಗಳು ಸಂಭವಿಸುವಲ್ಲಿ ಫಲಶಾಕಾದಿಗಳಂತೆ ಆ ಪ್ರಾಣಿಗಳು ಭಕ್ಷಣಾರ್ಥವಾಗಿಯೇ ಪುಟ್ಟಿರುವವೆಂದು ತಿಳಿಯತಕ್ಕದು. ಆದರಿಂದ ಕ್ರೂರರಿಂ ಸಾಧುಗಳಿಗೆ ಘಾತವಾಗುವಲ್ಲೂ ಸಾಧುಗಳಿಂದಿತರರಿಗೆ ಘಾತವಾಗುವಲ್ಲೂ ಅವರವರ ಜನ್ಮಾಂತರ ಕರ್ಮದೋಷವೆಂದು ತಿಳಿಯತಕ್ಕದ್ದು. ಇಂಥಾದೆಲ್ಲವೂ ಕರ್ಮವಾಸನೆ ಇರುವರಲ್ಲಿಯೇ ಸಂಭವಿಸುವದಲ್ಲದೆ ಬ್ರಹ್ಮಮಾತ್ರ ವಾಸನೆಯುಳ್ಳವನಲ್ಲಿ ಯಾರಿಗೂ ರಾಗದ್ವೇಷಗಳುಂಟಾಗವು. ಆದರಿಂದವನಲ್ಲ ಪ್ರಾಣಿಗಳು ತಮ್ಮ ತಮ್ಮ ತಾಯಿ ತಂದೆಗಳ ಪೋಲ್ ಪ್ರೀತಿಯುಕ್ತವಾಗುವವು. ಪಥಿಕಂಗೆ ಗಿರಿವೃಕ್ಷಾದಿಗಳ ಪೋಲ್ ವೀತಹವ್ಯನ ದೇಹದಲ್ಲಿ ಮೃಗವ್ಯಾಘ್ರಾದಿಗಳಿಗೆ ರಾಗದ್ವೇಷಗಳುಂಟಾಗಲ್ಲಿಲ್ಲವಾದ್ದರಿಂದ ಯಾವದರಿಂದಲೂ ಅದು ಭಿನ್ನವಾಗಲಿಲ್ಲ. ಕಾಷ್ಠಲೋಷ್ಠಗಳ ಪೋಲಾತ್ಮನು ಆ ಶರೀರದಲ್ಲಿರುವನಲ್ಲದೆ ಪರ್ಯಷ್ಟಕ ಸಂಬಂಧ ವಿಕಾರಗಳೊಡನೆ ಅಲ್ಲಿ ಇಲ್ಲವ್ದರಿಂದಲೂ ಸಮವಾದ ಭೂಜಲಾಗ್ನಿ ವಾಯುಜ್ಞಾನದಿಂದಾ ಶರೀರವು ವೀತಹವನಿಂ ನಿರ್ವಿಕಾರವಾಗಿ ಮಾಡಲ್ಪಟ್ಟಿರುವದ್ದರಿಂದಲೂ ವ್ಯಾಘ್ರಾದಿಗಳ ನಾಶಾಗಲಿಲ್ಲ. ಎತ್ತೈ ಸೂಕ್ಷ್ಮಮತಿಯೇ ಚಿತ್ತಪ್ರಾಣಿಗಳಿಂದುಂಟಾದ ಸ್ಪಂದನವೇ ನಾಶಕ್ಕೆ ಕಾರಣವಾಗುವದು. ಅದಿಲ್ಲದ ಪದಾರ್ಥವೆಲ್ಲವೂ ಕಲ್ಲಿನಂತೆ

ರವಹೀನವೆನಿಸುವದು. ಧಾರಣಾ ಬಲದಿಂದ ಶರೀರದ ಒಳಗೂ ಹೊರಗೂ ಸಹ ಸ್ಪಂದವಡಗಿದ್ದರಿಂದಲೂ ಅದರಿಂದ ಶರೀರದ ಧಾತುಗಳು ಮೇರುವಿನಂತೆ ಸ್ತಬ್ಧವಾಗಿದ್ದದ್ದರಿಂದಲೂ ಯೋಗಿ ಶರೀರಗಳು ಮೇಘಗಳಂತೆ ದ್ರವಿಸದೆ ನೆಲದಲ್ಲಿದ್ದ ಬಂಡೆಯಂತೆ ಛೇದಿಸಲ್ಪಡದಿರುವದ್ದರಿಂದಲೂ ಆ ಶರೀರಕ್ಕೆ ಘಾತಪಾತವೇನೂ ಆಗಲಿಲ್ಲ. ಬ್ರಹ್ಮಮುನಿಯೆ ವಿಚಾರದಿಂ ಯಾರಿಗೆ ಅಹಂಭಾವ ಗ್ರಂಥಿಯು ಭಿನ್ನವಾಗುವದೋ ಅವರು ದೇಹ ಪರಿಗ್ರಹ ತ್ಯಾಗಗಳಲ್ಲಿ ಸ್ವತಂತ್ರರಾಗುವರು. ಕರ್ಮಫಲದಾತೃವಾದೀಶ್ವರನು ಪೂರ್ವಕರ್ಮಗಳು ಈಗಿನ ಕರ್ಮಗಳೂ ವಾಸನೆಗಳೂ ಕೂಡ ಬ್ರಹ್ಮಾನುಸಂಧಾನ ಪ್ರಾರಬ್ಧ ಭೋಗಗಳಲ್ಲಿ ಪ್ರವರ್ತಿಸುವ ಅವನ ಮನವಂ ತಡೆಯಲು ಸಮರ್ಥವಾಗಲಾರವು. ಪ್ರಾರಬ್ಧ ಭೋಗದಲ್ಲಿ ಕಾಕತಾಳ ನ್ಯಾಯದಿಂದವನಿಗೆ ಮನವುಂಟಾಗುವದು. ಅದರಂತೆ ಅದರಿಂದಪೇಕ್ಷಿಸಿದ ಕಾರ್ಯವೂ ನಡೆಯುವದು. ಅದರಿಂದವರು ಬೇಕಾದಷ್ಟು ವರ್ಷ ಜೀವಿಸುವರು, ಬಿಡಬೇಕೆಂದು ತೋರಿದಾಗ ಶರೀರವಂ ಬಿಡುವರು, ಅವರ ಮನವು ಪಾರಮಾರ್ಥಿಕ ಶ್ರೇಯಸ್ವರೂಪವಾದ ಪರಮಾತ್ಮನಿಗೆ ಅಭಿನ್ನವಾದ್ದರಿಂದ ಇಚ್ಛೆಯಸಿದ್ದೆಲ್ಲವೂ ಸಿದ್ಧವಾಗುವದು. ಎಲೈ ಶುಭಮತಿಯೇ! ಯಾವಾಗ ವೀತಹವ್ಯನಿಗೆ ವಿಚಾರದಿಂ ಚಿತ್ತವು ನಷ್ಟವಾಯಿತೋ ಆಗಲೇ ಅವನಿಗೆ ಮೈತ್ರಿ ಮೊದಲಾದ ಗುಣಗಳುಂಟಾದವು, ಎಂದು ಹೇಳುವಲ್ಲಿ, ಎಲೈ ಗುರುವೇ! ಬ್ರಹ್ಮದಲ್ಲಿ ಚಿತ್ತವಸ್ತವಾಗಲು, ಮೈತ್ರ್ಯಾದಿ ಗುಣಂಗಳಲ್ಲುಂಟಾಗುವವು. ನಷ್ಟವಾದ ಮನವೇನಾಗುವದೆಂದು ಶ್ರೀರಾಮನು ಕೇಳಲು ಮುರಳಿ ವಸಿಷ್ಠನಿಂತೆಂದನು— ಎಲೈ ಸೂಕ್ಷ್ಮದೃಷ್ಟಿಯೆ! ಮನೋನಾಶವು ಸ್ವರೂಪನೆಂತಲೂ, ಅರೂಪವೆಂತಲೂ ಎರಡು ಪ್ರಕಾರವಾಗುವದು. ಸ್ವರೂಪನಾಶದಲ್ಲಿ ಜೀವನ್ಮುಕ್ತನೆಂತಲೂ ಅರೂಪನಾಶದಲ್ಲಿ ವಿದೇಹ ಮುಕ್ತನೆಂತಲೂ ಹೇಳಲ್ಪಡುವನು. ಇದರ ವಿವರವಂ ಕೇಳುವನಾಗು? ಸತ್ವಪ್ರಧಾನವಾದ ಜ್ಞಾನರೂಪ ಅಂತಃಕರಣವಂ ಗ್ರಹಿಸಿ ಜ್ಞಾತೃವೆನಿಸಿಕೊಂಡಿರುವನೇ ಜೀವನು. ಮನೋಬುದ್ಧಿ ಚಿತ್ತಾಹಂಕಾರಗಳು ಪ್ರಾಣಗಳು ಇಂದ್ರಿಯಗಳು ಸಹ ಅಂತಃಕರಣ ಬಾಹ್ಯಕರಣಗಳೆನಿಸುವವು. ಇವುಗಳ ವಿಷಯಗಳು ವಿಷಯ ಭೋಗಸ್ಥಾನವಾದ ದೇಹವೂ ಸಹ ಕಾರ್ಯವೆನಿಸುವವು. ಕರ್ತೃ ಕರಣ ಕಾರ್ಯರೂಪವಾದ ಅಂತಃಕರಣ ಬಹಿಃಕರಣ ಕಾರ್ಯಗಳೇ ಸಾತ್ವಿಕ ರಾಜಸ ತಾಮಸಗಳೆನಿಸುವವು. ಸತ್ವೋದಿತವಾದ ಜೀವನು ತಾಮಸ ವಾಸನೆಗಳಿಂ ಭೋಗಾಸಕ್ತನಾಗುವನಲ್ಲ, ಸಾತ್ವಿಕ ವಾಸನೆಯಿಂ ತ್ಯಾಗಾಸಕ್ತನಾಗುವನಲ್ಲ, ಇಚ್ಛಾನಾಶ ಸ್ವರೂಪವಾದ ರಜೋ

ಗುಣದಿಂ ಪುಟ್ಟಿದ ಕರಣಗಳು ಅನುಕೂಲವಾಗುವವು. ದೃಶ್ಯವಾದ ಜಡವು ರೂಪಯುಕ್ತವಾದ್ದರಿಂದವದರಲ್ಲಿ ಆತ್ಮನೆಂಬ ಜ್ಞಾನವೇ ಸ್ವರೂಪವಾದ ಮನವೆನಿಸುವದು. ಶುದ್ಧ ಚಿನ್ಮಾತ್ರ ಸ್ವರೂಪವಾದ ಬ್ರಹ್ಮವು ಅರೂಪವಾದ್ದರಿಂದ ಅದು ತಾನೆಂಬ ಜ್ಞಾನವೇ ಅರೂಪವಾದ ಮನವೆನಿಸುವದು. ಜಡವು ತಾನೆಂಬ ತಾಮಸ ವಾಸನೆ ಇರುವವರಿಗೆ ಯಾಂಗೂ ಜನ್ಮದುಃಖ ತಪ್ಪಲಾರದು. ವಿಚಾರದಿಂದದು ಪೋಗುವಲ್ಲಿ ಮೈತ್ರ್ಯಾದಿ ಗುಣಗಳುಂಟಾಗುವವು. ವಿಚಾರದಿಂ ದಿನಗಳು ಬೆಳೆಯಲು ಪರಮಾರ್ಥ ಜ್ಞಾನವು ನಿಶ್ಚಿತವಾಗಿ ರೂಢಮೂಲವಾಗುವದು. ಇದೇ ಜೀವನ್ಮುಕ್ತಿಯೆನಿಸುವದು ! ಇವನು, ಅವನು, ನಾನು, ಇಂದೆಂಬ ವಿಕಲ್ಪಗಳು, ಈ ಸುಖದುಃಖ ದೆಶೆಗಳು ಸಹ ಗಿರಿಯಂ ಶ್ವಾಸಗಳಂತೆ ಯಾವನಂ ಹಾರಿಸಲಾರವೋ ಅವನ ಮನಸ್ಸಿಗೆ ಸ್ವರೂಪ ನಾಶವೆಂತಲೂ, ಅವನು ಜೀವನ್ಮುಕ್ತನೆಂತಲೂ ಪೇಳಲ್ಪಡುವನು. ಗುಣದೋಷ ಹರ್ಷಾಮರ್ಷಾದಿ ಜ್ಞಾನಗಳು ಸತ್ಯಾಸತ್ಯ ವಿಚಾರವೂ ಕೂಡ ಯಾವನಿಗೆ ಉದಯಿಸುವದಿಲ್ಲವೋ ಅವನು ವಿದೇಹ ಮುಕ್ತನೆನಿಸುತ್ತಾ ನಿರ್ವಿಕಲ್ಪ ಚಿನ್ಮಾತ್ರ ಸ್ವರೂಪನಾದ ಪರಮಾತ್ಮನಲ್ಲಿ ನೆಲಸಿರುವನು. ಸರ್ಪದಂತೆ ತೋರುತ್ತಿದ್ದ ರಜ್ಜುವು ವಿಚಾರದಿಂ ರಜ್ಜುವಾಗಿ ನಿಲ್ಲುವಂತೆ ಮನೋಜೀವಾದಿ ರೂಪಗಳಿಂ ತೋರುತ್ತಿದ್ದ ಬ್ರಹ್ಮವು ವಿದೇಹ ಮುಕ್ತಿಯೊಳ್ ಬ್ರಹ್ಮವಾಗಿಯೇ ನಿಲ್ಲುವದು. ಆಗ ತಾನು ಬ್ರಹ್ಮವೆಂಬ ಜ್ಞಾನಕ್ಕೆ ಅವಕಾಶವಿಲ್ಲದ್ದರಿಂದ ಅರೂಪವಾದ ಮನಸ್ಸಿಗೆ ನಾಶವಾಗುವದೆಂದು ಪೇಳುವಲ್ಲ, ಎಲೈ ಗುರುವೆ! ಪರಮಾಕಾಶವೆಂಬ ಪರ್ವತದಲ್ಲಿ ಲೋಕಾಂತರಗಳೆಂಬ ವೃಕ್ಷಗಳಿಂದಲೂ, ದೇವಾಸುರರೆಂಬ ಪಕ್ಷಿಗಳಿಂದಲೂ, ನಕ್ಷತ್ರಗಳೆಂಬ ಪುಷ್ಪಗಳಿಂದಲೂ, ಮಿಂಚುಗಳೆಂಬ ಗೆರೆಗಳುಳ್ಳ ಮೇಘಗಳೆಂಬೆಲೆಗಳಿಂದಲೂ, ಸಮುದ್ರಗಳೆಂಬ ಭಾವಿಗಳಿಂದಲೂ, ನದಿಗಳೆಂಬ ಕಾಲುವೆಗಳಿಂದಲೂ ಕೂಡಿ, ಹದಿನಾಲ್ಕು ಪ್ರಕಾರವಾದ ಪ್ರಾಣಿಗಳಿಗೆ ಆಶ್ರಯವಾಗಿರುವ ಜಗವೆಂಬ ಅರಣ್ಯದೊಳ್ ಹಬ್ಬಿರುವಂಥಾದ್ದಾಗಿ ಮೋಹವೆಂಬ ಜಲದಿಂ ಬೆಳೆಯುತ್ತಾ ಜರಾಮರಣಗಳೆಂಬ ಗಿಣ್ಣುಗಳಿಂದಲೂ ಸುಖದುಃಖಗಳೆಂಬ ಫಲಗಳಿಂದಲೂ, ರೂಢ ಮೂಲವಾದ ಸಂಸಾರವೆಂಬ ದ್ರಾಕ್ಷೀಬಳ್ಳಿಗೆ ಬೀಜವಾವದು, ಅದಕ್ಕೆ ಬೀಜವಾವದು, ಆ ಬೀಜಕ್ಕೆ ಯಾವದು ಬೀಜವು, ಅದಕ್ಕೆ ಬೀಜವಾವದು, ಇದೆಲ್ಲವನ್ನೂ ನನ್ನ ಜ್ಞಾನ ದಾರ್ಢ್ಯಕ್ಕೋಸುಗ ಸಂಕ್ಷೇಪವಾಗಿ ಪೇಳಬೇಕೆಂದು ಶ್ರೀರಾಮನು ಕೇಳಲು, ವಸಿಷ್ಠನಿಂತೆಂದನು;—ಎಲೈ ಸುಮತಿಯೇ! ಒಳಗೆ ಲೀನವಾಗಿರುವ ನಾನಾವಿಧ ಕಾರ್ಯಾರಂಭದ ಶುಭಾಶುಭರೂಪ ಮೊಳಕೆಗಳಿಂ

ಕೂಡಿರುವ ಶರೀರವೇ ಸಂಸಾರ ಲತೆಗೆ ಬೀಜವಾದ್ದರಿಂದ ಶರೀರದಿಂದಲೇ ಇದು ಬೆಳೆಯುತ್ತಿರುವದು. ಉತ್ಪತ್ತಿ ಸ್ಥಿತಿ ಮೊದಲಾದ ಕಲ್ಪನೆಗಳಿಗೂ, ಸಕಲ ದುಃಖಗಳಿಗೂ ಆಶ್ರಯವಾಗಿ ಆಶೆಗೆ ಅಧೀನವಾಗಿರುವ ಚಿತ್ತವೇ ಈ ಶರೀರಕ್ಕೆ ಬೀಜವೆನಿಸುವದು. ಸ್ವಪ್ನ ಸಂಭ್ರಮಾದಿಗಳಲ್ಲಿ ಗಂಧರ್ವ ಪುರಾದಿಗಳಂತೆ ಚಿತ್ತದಿಂದೀ ಶರೀರವುಂಟಾಗಿರುವದು. ಮೃತ್ತಿಕೆಗೆ ಘಟದಂತೆ ಚಿತ್ತಕ್ಕೀ ಶರೀರವೇ ಸ್ವರೂಪವೆನಿಸುವದು. ಈ ಚಿತ್ತಕ್ಕೆ ಪ್ರಾಣಸ್ಪಂದವು ದೃಢಭಾವನೆಯೂ ಸಹ ಎರಡು ಬೀಜಗಳೆಂದು ಹೇಳುವರು. ಪ್ರಾಣವು ನಾಡಿಗಳಲ್ಲಿ ಚಲಿಸದಿರುವಾಗ ಜ್ಞಾನವಿಲ್ಲದಿರುವದ್ದರಿಂದಲೂ, ನಾಡಿಗಳಂ ಸೇರುವಲ್ಲಿ ಜ್ಞಾನವುಂಟಾಗುವದ್ದರಿಂದಲೂ, ಸೂತ್ರಾತ್ಮಕನ ಪ್ರೇರಣೆಯಿಂದಲೇ ಹಿರಣ್ಯಗರ್ಭನಿಂ ಜಗತ್ತುಂಟಾಗಿರುವದ್ದರಿಂದಲೂ, ಪ್ರಾಣಸ್ಪಂದದ ನಿರೋಧದಿಂ ಚಿತ್ತವು ನಿರುದ್ಧವಾಗುವದ್ದರಿಂದಲೂ ಹೊಡೆಯಲ್ಪಡುವ ಚಂಡಿನಂತೆ ಪ್ರಾಣಚಲನದಿಂ ಶರೀರದಲ್ಲಿ ಜ್ಞಾನವೂ ಸಂಚರಿಸುವದ್ದರಿಂದಲೂ ಸರ್ವವ್ಯಾಪಿಯಾದ ಜ್ಞಾನವೂ ಕೂಡ ಗಾಳಿಯಿಂ ಗಂಧದಂತೆ ಪ್ರಾಣಸ್ಪಂದದಿಂ ಮುದಿತವಾಗುವದ್ದರಿಂದಲೂ, ಚಿತ್ತಕ್ಕೆ ಪ್ರಾಣಸ್ಪಂದವು ಬೀಜವೆನಿಸುವದು, ಜ್ಞಾನವು ಮನೋರೂಪದಿಂ ಪೊರಮಡುವಲ್ಲಿ ಜ್ಞೇಯವಸ್ತು ಸಂಬಂಧದಿಂದನೇಕ ದುಃಖಗಳು ಸಂಭವಿಸುವದ್ದರಿಂದ ಪ್ರಾಜ್ಞರು ಪ್ರಾಣಾಯಾಮ ಧ್ಯಾನಾದ್ಯುಪಾಯಗಳಿಂದ ಚಿತ್ತವನ್ನಣಗಿಸುವರು. ಅದರಿಂದ ಜ್ಞಾನವಂತರ್ಮುಖವಾಗಲು ಪರಮಾತ್ಮ ಪದವೇ ಲಬ್ಧವಾಗುವದು. ಪ್ರಾಣಸ್ಪಂದದಿಂದಲೂ, ವಾಸನೋದಯದಿಂದಲೂ, ಜ್ಞಾನವು ಪೊರಮಡದಿರೆ ನೀನೇ ಪರಮೇಶ್ವರನೆನಿಸಿಕೊಳ್ಳುತ್ತೀಯೆ! ದೃಢವಾದ ಭಾವನೆಯಿಂದ ಪೂರ್ವೋತ್ತರ ಸ್ಥಿತಿಯಂ ವಿಚಾರಿಸದೆ ಪದಾರ್ಥವಂ ಗ್ರಹಿಸುವದೇ ವಾಸನೆಯೆನಿಸುವದು. ಜನ್ಮಾಂತರ ಸಂಸ್ಕಾರದಿಂದಿದು ನನ್ನದು ಈ ದೇಹವೇ ನಾನೆಂಬ ಜ್ಞಾನವೇ ಭಾವನೆ ಎನಿಸುವದು. ಸೃಷ್ಟಿಗೆ ಪೂರ್ವದಲ್ಲೂ ಪ್ರಳಯಾಂತದಲ್ಲೂ ಇಲ್ಲದ ಜಗವು ಎಲ್ಲಿಂದೀಗ ಬಂದುದು ? ಪೂರ್ವೋತ್ತರ ಕಾಲಗಳಲ್ಲಿ ಬ್ರಹ್ಮವಲ್ಲದೆ ಮತ್ತೊಂದಿಲ್ಲವಾದ್ದರಿಂದ, ಆ ಬ್ರಹ್ಮವೇ ಈಗ ಜಗವಾಗಿ ತೋರುತ್ತಿರುವದೆಂದು ನಿಶ್ಚೈಸುವಲ್ಲಿ, ಸರ್ವವೂ ಬ್ರಹ್ಮಸ್ವರೂಪವಾಗುವದು. ಭಾವನಾ ಬಲದಿಂ ಯಾವದು ಹೇಗೆ ಭಾವಿಸಲ್ಪಡುವದೋ ಅದು ಹಾಗೆ ಆಗುವದ್ದರಿಂದ ಪೂರ್ವಾಪರ ಜ್ಞಾನವಿಲ್ಲದೆ ದೃಢವಾಗಿ ಪ್ರವರ್ತಿಸಿದ ಭಾವನನ್ನೇ ವಾಸನೆಯೆನ್ನುವರು. ಯಾವದು ಹೇಗೆ ಭಾವಿಸಲ್ಪಡುವದೋ ಅದನ್ನು ಹಾಗೆ ಆತ್ಮನಲ್ಲಿ ಕಲ್ಪಿಸುವದ್ದರಿಂದ ದೃಢ ಭಾವನಾ ಪ್ರವೃತ್ತಿಗೆ ವಾಸನೆಯೆಂಬ ಹೆಸರು ಯುಕ್ತವೆನಿ

ಸುವದು. ವಾಸನೆ ಇದ್ದಂತೆ ಚಿತ್ತವು ಪೊರಮಡುವದಾದ್ದರಿಂದ ಚಿತ್ತಕ್ಕೆ ದೃಢಭಾವನೆಯು ಬೀಜವೆನಿಸುವದು. ವಾಸನೆ ಇದ್ದಂತೆ ಪುರುಷನು ಪದಾರ್ಥಗಳಂ ದೇಹವಂ ಸಹ ಕಾಣುವನು. ಆತ್ಮೇತರ ಪದಾರ್ಥಗಳಲ್ಲಿ ಆತ್ಮನೆಂಬ ಜ್ಞಾನವೇ ಸಮ್ಯಗ್ಜ್ಞಾನವಿಲ್ಲದ ಚಿತ್ತವೆಂದು ಪೇಳಲ್ಪಡುವದು. ವಾಸನೆಯಿಂದುಂಟಾದ ಚಿತ್ತವೇ ಜನ್ಮಮೃತ್ಯು ಜರಾದಿಗಳಿಗೆ ಕಾರಣವಾಗುವದು. ಯಾವಾಗ ಬ್ರಹ್ಮೇತರ ಪದಾರ್ಥಭಾವನೆ ತಪ್ಪುವದೋ ಆಗ ವಾಸನೆವುಂಟಾಗುವದಕ್ಕವಕಾಶವಿಲ್ಲದ್ದರಿಂದ ಚಿತ್ತವು ಪುಟ್ಟಲಾರದು. ಬ್ರಹ್ಮೇತರ ಜ್ಞಾನವಿಲ್ಲದ ಆ ಅವಸ್ಥೆಯೇ ಅಮನಸ್ಕವೆನಿಸುವದು. ಯಾವಾಗ ಗಗನದಲ್ಲಿ ಮೇಘದಂತೆ ಬ್ರಹ್ಮೇತರ ಪದಾರ್ಥವು ಜ್ಞಾನದಲ್ಲಿ ಸ್ಫುರಿಸುವದಿಲ್ಲವೋ ಆಗ ಗಗನದಲ್ಲಿ ಕಮಲದಂತೆ ಆತ್ಮನಲ್ಲಿ ಚಿತ್ತವುಂಟಾಗುವದಿಲ್ಲ. ಆದ್ದರಿಂದ ಬ್ರಹ್ಮೇತರ ಜ್ಞಾನಸ್ವರೂಪವಾದ್ದೇ ಮನವೆಂದು ತಿಳಿಯುತ್ತೇನೆ. ಸರ್ವವೂ ಬ್ರಹ್ಮವೆಂಬ ವಿಚಾರದಿಂ ಬ್ರಹ್ಮೇತರ ಭಾವನಾರೂಪವಾಗಿ ಪೊರಮಡುವ ಚಿತ್ತವಂ ತಡೆಯುತ್ತಾ ತೋರಿದ್ದೆಲ್ಲವಂ ಬ್ರಹ್ಮವೆಂದು ಭಾವಿಸುತ್ತಿರಲಾಗಿ ಅಮನಸ್ಕಭಾವವುಂಟಾಗುವದು. ಇದೇ ದೃಢಮೂಲವಾದರೆ ನಿರ್ವಿಕಲ್ಪ ಸಮಾಧಿಯೆನಿಸುವದು, ಸಮಸ್ತಕ್ಕೂ ಬ್ರಹ್ಮವೇ ಕಾರಣವಾದ್ದರಿಂದ ಸರ್ವವನ್ನು ಬ್ರಹ್ಮವೆಂದು ಭಾವಿಸದೆ ಪರಮಾರ್ಥವಿಚಾರವೆನಿಸುವದು. ಜಗತ್ತಿಗೆ ಪ್ರಧಾನವೇ ಕಾರಣವೆಂದು ಯಾರು ಪೇಳಿದರೋ ಅವರೇ ಕೃತಾರ್ಥನಿಗೆ ಪ್ರಧಾನವು ನಷ್ಟವಾಗುವದೆಂದು ಪೇಳಿರುವದ್ದರಿಂದ ಅದಕ್ಕೆ ಬೇರೆ ಸತ್ವವಿಲ್ಲವೆಂದು ನಿಶ್ಚಿತವಾಗುವದು. ಅದರಿಂದ ತಾನು ತನ್ನದೆಂಬ ಜ್ಞಾನವಿಲ್ಲದ ಮೂಢರಿಗೆ ವಿವೇಕಾರ್ಥವಾಗಿ ಚಿಜ್ಜಡವಿಭಾಗವಂ ತೋರುತ್ತಾ ಸ್ವಸಿದ್ಧಾಂತವು ಚಿತ್ತದೊಳ್ ಸ್ಥಿರವಾಗಲೋಸುಗ ಜಡಪ್ರಪಂಚಕ್ಕೆ ಚಿತ್ತು ಕಾರಣವಾಗಲಾರದಾದ್ದರಿಂದ ಪ್ರಧಾನವೇ ಈ ಪ್ರಪಂಚಕ್ಕೆ ಉಪಾದಾನ ಕಾರಣವೆಂದು ಪೇಳಿರುವದಾಗಿ ತಿಳಿಯತಕ್ಕದ್ದು. ಬ್ರಹ್ಮವೇ ಪ್ರಪಂಚರೂಪದಿಂ ಪ್ರಕಾಶಿಸುವದ್ದರಿಂದ ಸರ್ವವೂ ಬ್ರಹ್ಮವೆಂಬ ನಿಶ್ಚಯವೇ ಅಮನಸ್ಕವೆನಿಸುವದು. ಈ ಭಾವವುಳ್ಳವನೇ ಜೀವನ್ಮುಕ್ತನೆನಿಸುವನು, ಅವನು ಅಖಂಡವಸ್ತುವಿನಲ್ಲೇ ನೆಲಸಿರುವ ಮನವುಳ್ಳವನಾದ್ದರಿಂದ ತಾನು ತನ್ನದೆಂಬ ಜ್ಞಾನವವನಿಗೆ ಪುಟ್ಟಲಾರದು. ಕುಲಾಲಚಕ್ರಭ್ರಮಣದಂತಿರುವ ಕರ್ಮ ಪರಿಣಾಮರೂಪವಾದ ಅವನ ಶರೀರವು ಪ್ರಾರಬ್ಧಶೇಷವಿರುವವರೆಗೆ ಬೀಳಲಾರದು. ಅದು ಪರರ ದೃಷ್ಟಿಯಿಂದವನಿಗೆ ಇರುವಂತಿದೆ ಅವನ ದೃಷ್ಟಿಯಿಂದಿಲ್ಲವಾದ್ದರಿಂದ ದಗ್ಧಪಟದಂತಿದು ಇದ್ದರೂ ಇಲ್ಲವೆನಿಸು

ವನು. ಇದೇಪ್ರಕಾರ ಬಹಿರ್ಮುಖವಾಗಿ ತೋರುವ ಅವನ ಚಿತ್ತವೂ ಅಸತ್ತೆನಿಸುವದು. ಅದರಿಂದವನು ವಿಷಯಾಸಕ್ತನಾದಾಗ್ಯೂ ರಾಗದ್ವೇಷಗಳು ಹಾನಿವೃದ್ಧಿ ದುಃಖ ಸಂತೋಷಗಳು ಇಲ್ಲದಿರುವನು. ಅದರಿಂದವನ ವಾಸನೆಯು ದೃಢವಾಗದೇ ಹುರಿದ ಬೀಜದಂತೆ ಪುನರ್ಜನ್ಮ ಕಾರಣವಾಗಲಾರದು. ಅದರಿಂದವನು ಚಿತ್ತವಿಲ್ಲದವನೆಂತಲೇ ಹೇಳಲ್ಪಡುವನು. ಚಿತ್ತ ಬೀಜವಾದ ಪ್ರಾಣಸ್ಪಂದ ವಾಸನೆಗಳಲ್ಲಿ ಪರಸ್ಪರ ಕಾರ್ಯ ಕಾರಣಭಾವ ವಿರುವದ್ದರಿಂದೊಂದು ಹೋದಾಗ್ಯೂ ಎರಡೂ ಹೋಗುವದು. ಯಾವಾಗ ವಾಸನೆ ದೃಢವಾಗುವದೋ ಆಗ ಪ್ರಾಣವು ಚಲಿಸುವದು. ಯಾವಾಗ ಪ್ರಾಣವು ಚಲಿಸುವದೋ ಆಗ ವಾಸನೆಯುಂಟಾಗುವದು, ಗಡಿಗೆ ಕೊಳಗಗಳೆರಡೂ ಸೇರುವದ್ದರಿಂದ ಹೇಗೆ ಜಲಗ್ರಹಣವಾಗುವದೋ ಹಾಗೆ ಎರಡರ ಸೇರಿಕೆಯಿಂದ ಮನವುಂಟಾಗುವದು. ಇವುಗಳಿಗೆ ಪರಸ್ಪರ ಕಾರ್ಯ ಕಾರಣ ಭಾವವಿರುವದ್ದರಿಂದ ಚಿತ್ತಕ್ಕೆ ವಾಸನೇ ಬೀಜವೆನುವಲ್ಲಿ ಅವಕ್ಕೆ ಪ್ರಾಣಸ್ಪಂದವೇ ಬೀಜವೆನಿಸುವದು. ಪ್ರಾಣಸ್ಪಂದವೇ ಚಿತ್ತಕ್ಕೆ ಬೀಜವೆನುವಲ್ಲಿ ಆ ಪ್ರಾಣಸ್ಪಂದಕ್ಕೆ ವಾಸನೆಯೇ ಬೀಜವೆನಿಸುವದು. ಇವುಗಳು ತಿಲತೈಲಗಳಂತೆಯೂ, ಬೀಜಾಂಕುರಗಳಂತೆಯೂ, ಪುಷ್ಪ ಪರಿಮಳಗಳಂತೆಯೂ, ಒಂದರಲ್ಲೊಂದು ಸೇರಿಕೊಂಡಿರುವವು. ಇಂದ್ರಿಯ ಸುಖಾದಿ ಸ್ಫೂರ್ತಿಯಲ್ಲಿ ವಾಸನಾಪ್ರಾಣಸ್ಪಂದಗಳಿಗೆ ಚಿತ್ತೆಕಾರಣವಾಗುವದು. ಪ್ರಾಣಚಲನದಿಂದಿಂದ್ರಿಯಚಲನವು ಅದರಿಂ ವಿಷಯಸಂಬಂಧವು ಅದರಿಂದಾನಂದವು ಅದರಿಂ ಪೂರ್ವಾನಂದದ ಸ್ಮರಣೆಯೂ ಆಗ ಆನಂದ ಸ್ಫೂರ್ತಿಗೆ ಆಧಾರವಾದ ಪ್ರಾಣಸ್ಪಂದವೂ ಅದರಿಂ ಮರಳಿ ವಾಸನಾರೂಪದಿಂ ಚಿತ್ತಕ್ಕೆ ಅಭ್ಯುದಯವೆಂದಿವುಗಳು ತಮ್ಮ ತಮ್ಮಲ್ಲಿಯೇ ಕಾರ್ಯ ಕಾರಣ ಭಾವಗಳಂ ಪೊಂದುತ್ತಿರುವವು. ವಾಸನೆಗೆ ಏಳುತ್ತಿರುವದೇ ಸ್ವಭಾವವಾದ್ದರಿಂದದು ಸುಮ್ಮನಿರದು. ಅದರ ಉದಯದಿಂದ ಬುದ್ಧಿಯುಕ್ತನಾದ ಆತ್ಮನಿಗೆ ಕ್ಷೋಭೆಯುಂಟಾಗುವುದು. ಆಗ ಪ್ರಾಣವು ಚಲಿಸಲು ಮನವುಂಟಾಗುವದು. ಪ್ರಾಣವು ಚಲನಸ್ವಭಾವವಾದ್ದರಿಂ ಚಲಿಸುತ್ತಿರುವದು. ಅದರಿಂ ರಾಗಾದಿ ವಾಸನಾತ್ಮಕವಾದ ಹೃದಯದ ಗುಣಗಳೇಳಲು ಚಿಚ್ಛಕ್ತಿಗೆ ಎಚ್ಚರವಾಗುವದು. ಅದರಿಂ ಚಿತ್ತವೆಂಬ ಶಿಶುವು ಪುಟ್ಟುವದು. ಹೀಗೆ ಎರಡು ಪ್ರಕಾರವಾಗಿಯು ಚಿತ್ತವು ಪುಟ್ಟುವದ್ದರಿಂದ ವಾಸನಾಪ್ರಾಣ ಸ್ಪಂದಗಳೆರಡೂ ಚಿತ್ತಕ್ಕೆ ಬೀಜವೆನಿಸುವವು. ಅಜ್ಞಾನಮಯವಾದ ವಾಸನೆಯು ಬ್ರಹ್ಮವಾಸನೆಯಿಂ ಕ್ಷಯಿಸುವಲ್ಲಿ ಅಜ್ಞಾನವೇ ಮೂಲವಾಗಿ ಶರೀರವೆಂಬ ಬುಡದಿಂದಲೂ, ಕಾರ್ಯಗಳೆಂಬ ಎಲೆಗಳಿಂದಲೂ, ವ್ಯಕ್ತಿಗಳೆಂಬ ಟಿಸಿಲ್ಗಳಿಂ

ದಲೂ, ಕೂಡಿಕೊಂಡು ಸುಖ ದುಃಖಾಲೋಚನೆಯಿಂ ಚಲಿಸುತ್ತಾ ರಾಗ ರೋಗಗಳಿಗೂ ಆಶಾಸರ್ಪಗಳಿಗೂ, ಇಂದ್ರಿಯ ಪಕ್ಷಿಗಳಿಗೂ, ಆಧಾರವಾಗಿರುವ ಚಿತ್ತವೆಂಬ ವೃಕ್ಷವನ್ನೇ ಕೆಡಹುವದು. ಮೋಹವಿಕಾರದಿಂ ಜನಗಳ ನೇತ್ರವಂ ಮುಚ್ಚಿ ಆಶಾವೇಗದಿಂ ದಿಗ್ಭ್ರಾಂತಿಯನ್ನುಂಟುಮಾಡುವ ಚಿತ್ತವೆಂಬ ಧೂಳಿಯು ಪ್ರಾಣವೇಗದಿಂದಲೇ ಉಂಟಾಗಿದ್ದದಾದ್ದರಿಂದ ಪ್ರಾಣನಿರೋಧದಿಂದದಕ್ಕೆ ಕ್ಷಯವಾಗುವದು. ಸಂವಿದ್ರೂಪನಾದ ಆತ್ಮನಿಗೆ ಸಂವೇದ್ಯಕಲ್ಪನೆ ಯುಂಟಾದಾಗಲೇ ಈ ವಾಸನಪ್ರಾಣಗಳು ಉದಯಿಸುವವಾದ್ದರಿಂದ ಇವುಗಳಿಗೆ ಸಂವೇದ್ಯವೇ ಬೀಜವೆನಿಸುವದು. ಸಂವೇದ್ಯದ ಭಾವನೆಯಂ ಬಿಡುವಲ್ಲಿ ಈ ವಾಸನ ಪ್ರಾಣಸ್ಪಂದಗಳು ಬೇರ್ಗಡಿದ ಮರದಂತೆ ಬೀಳುವವು. ನಿತ್ಯಪ್ರಕಾಶವಾದ ಸಂವಿತ್ತು ಸ್ವಪ್ನದಲ್ಲಿ ಸ್ವಮರಣವನ್ನು ದೇಶಾಂತರ ಸ್ಥಿತಿಯನ್ನೂ ಕಾಣುವಂತೆ ಸ್ವಸಂಕಲ್ಪದಿಂ ಸಂವೇದ್ಯವೆಂದು ತನ್ನನ್ನೇ ನೋಡುತ್ತಿರುವುದು. ಬಾಲಕನ ಭ್ರಾಂತಿಯೇ ಬೇತಾಳನಾದಂತೆ ಸಂವಿತ್ತೇ ಸಂವೇದ್ಯವಾಗಿರುವದಲ್ಲದೆ ಸಂವೇದ್ಯ ಬೇರೆಯಿಲ್ಲ. ಸ್ಥಾಣುವಿಗೆ ಪುರುಷಭಾವದಂತೆಯೂ ರಂಧ್ರದಿಂದೊಳಗೆ ಬಿದ್ದ ಬಿಸಲಿಗೆ ದಂಡರೇಣುಭಾವಗಳಂತೆಯೂ, ಸಂವಿತ್ತಿಗೆ ಸಂವೇದ್ಯಭಾವವುಂಟಾಗಿರುವದು. ಸಂವೇದ್ಯವು ಬೇರೆಯೆಂಬ ಭ್ರಮೆಯಿಂದಲೇ ಈ ಜಗವೆಲ್ಲವೂ ಉಂಟಾಗಿರುವದು. ಅದ್ವೈತಸ್ಥಿತಿಯಲ್ಲಿ ಸಂವಿತ್ಸಂವೇದನ ಸಂವೆದ್ಯ ಭಾವಗಳಿಲ್ಲದ್ದರಿಂದ ವಿವೇಕ ವಿಚಾರಗಳಲ್ಲಿ ತನ್ನಂ ತಾನು ತಿಳಿಯುವೆನೆಂಬ ಭಾವವೂ ಕೂಡ ಸಂಕಲ್ಪ ಜನ್ಯವೆಂದು ತಿಳಿಯತಕ್ಕದ್ದು. ನಾವೆಯಲ್ಲಿರುವನಿಗೆ ಪರ್ವತಗಮನದಂತೆ ಸಂವಿತ್ತಿಗೆ ಸಂವೇದ್ಯವು ಬೇರೆಯೆಂಬ ಮಿಥ್ಯಾಜ್ಞಾನವುಂಟಾಗಿರುವದು. ಸಮ್ಯಜ್ಞಾನದಿಂದೀ ಭ್ರಾಂತಿಯಳಿಯುವಲ್ಲಿ ಜಗವೆಲ್ಲವೂ ಸ್ವಸ್ವರೂಪವಾಗಿ ಪ್ರಕಾಶಿಸುವದು. ಈ ಜ್ಞಾನವೇ ತತ್ವಜ್ಞಾನವೆಂತಲೂ, ಸಮ್ಯಜ್ಞಾನವೆಂತಲೂ, ಸಮ್ಯಗ್ದರ್ಶನವೆಂತಲೂ ಪೇಳಲ್ಪಡುವುದು. ಆದ್ದರಿಂದ ಕಂಡದ್ದಾಗಲಿ ಕಾಣದ್ದಾಗಲಿ ಯಾವದು ತೋರುವದೋ ಅದನ್ನಾತ್ಮನೆಂದು ತಿಳಿಯದೆ ಆ ಅಜ್ಞಾನವೂ ತೋರಿದ ಪದಾರ್ಥವೂ ಕೂಡ ಮಹಾ ಸಂಸಾರವಾಗಿ ಪರಿಣಮಿಸಿ ಬಂಧಕವಾಗುವದು. ವಿಚಾರದಿಂದೀ ಅಜ್ಞಾನ ಪೋಗುವದೇ ಮೋಕ್ಷವೆನಿಸುವದು. ಮುಖ್ಯವಾಗಿ ತಿಳುವಳಿಕೆ ಇದ್ದದ್ದರಿಂದಲ್ಲವೇ ಬಂಧಮೋಕ್ಷ ದುಃಖಗಳುಂಟಾದುವು. ಆ ತಿಳವಳಿಕೆಯನ್ನೇ ಬಿಟ್ಟು ನೀನು ಅಜಡಭಾವದಿಂದಿರುವನಾಗೆಂದು ಹೇಳುವಲ್ಲಿ ಎಲೈ ಗುರುವೇ ತಿಳವಳಿಕೆ ಇಲ್ಲದಿರುವದೇ ಜಾಡ್ಯವೆನಿಸುವುದು. ಜಾಡ್ಯವಲ್ಲದ್ದೇ ತಿಳವಳಿಕೆಯೆನಿಸುವುದು. ಹೀಗಿರುವಲ್ಲಿ ಜಡನಾಗದೆ ತಿಳವಳಿಕೆಯಂ ಬಿಡು

ವದು ಹೇಗೆ! ತಿಳವಳಿಕೆ ಇಲ್ಲದೆ ಜಾಡ್ಯವು ಹೇಗೆ ಹೋದೀತೆಂದು ಶ್ರೀರಾಮನು ಕೇಳುವಲ್ಲಿ ಮರಳಿ ವಸಿಷ್ಠನಿಂತೆಂದನು,- ಎಲೈ ಶುಭಮತಿಯೇ! ಮನಸ್ಸಿಗೆ ತೋರಿದ್ದಾಗಲಿ ಕಣ್ಣಿಗೆ ಕಂಡಿದ್ದಾಗಲಿ ಇದೊಂದು ಪದರ್ಥವೆಂದಾವನು ತಿಳಿವನೋ ಅವನಿಗದರಲ್ಲಿ ರಾಗಾದಿಗಳುಂಟಾಗುವವು. ಯಾವನಿಗೆ ದೃಶ್ಯವೆಲ್ಲವೂ ಸುಳ್ಳೆಂಬ ನಿಶ್ಚಯವಿರುವದೋ ಅವನು ಅನೇಕ ಕಾರ್ಯಗಳಂ ಮಾಡಿದಾಗ್ಯೂ ರಾಗದ್ವೇಷಾದಿಗಳಲ್ಲದ್ದರಿಂದ ಫಲಭಾಗಿಯಾಗದೆ ಅಜ್ಞಾನಿಯಂತಲೂ ಜಡನಲ್ಲವೆಂತಲೂ ಹೇಳಲ್ಪಡುವನು. ಇವನಿಗೆ ನಾನೆಂಬ ಜ್ಞಾನವೂ ಕೂಡ ಸುಳ್ಳಾಗಿರುವದ್ದರಿಂದ ಇವನು ಅಸಂಗನಾದ ಜೀವನ್ಮುಕ್ತನೆನಿಸುವನು. ಯಾವಾಗ ವಾಸನೆ ಇಲ್ಲದ್ದರಿಂದಾವ ಪದಾರ್ಥವೂ ಭಾವನೆಗೆ ಬರುವುದಿಲ್ಲವೋ ಭಾವನೆಗೆ ಬಂದರೂ ಬಾಲಕಜ್ಞಾನದವೋಲ್ ಸ್ಥಿರವಾಗುವುದಿಲ್ಲವೋ ಆಗ ವಿಕಲ್ಪ ಜಾಡ್ಯವಿಲ್ಲದ ನಿರ್ಮಲಜ್ಞಾನ ಉಂಟಾಗುವುದು. ಅದರಿಂದ ಯಾವಸಂಗವೂ ಸಂಭವಿಸದಿರಲು ಪರಮಾನಂದ ಪ್ರಕಾಶವಾಗುವದು. ಆದ್ದರಿಂದ ಯೋಗಿಗಳು ಪದಾರ್ಥದ ತಿಳವಳಿಕೆಯನ್ನೇ ತಿರಸ್ಕರಿಸುತ್ತಾ ಅಜ್ಞಾನಿಗಳಂತಿರುವರು ಜಗದ್ವಾಸನೆಯುಣಗಲೋಸುಗ ಅವರಿಂದಂಗೀಕರಿಸಲ್ಪಟ್ಟಿದ್ದ ಬ್ರಹ್ಮವಾಸನೆಯು ಇಂಧನವಿಲ್ಲದ ವಹ್ನಿಯಂತೆ ಅವರ ಹೃದಯದಲ್ಲೇ ಅಣಗುವುದು. ಬಳಿಕ ಅವನು ತಿರುಗುತ್ತಿದ್ದರೂ ಕುಳಿತಿದ್ದರೂ ವ್ಯಾಪಾರಾಸಕ್ತನಾಗಿದ್ದರೂ ಪದಾರ್ಥಜ್ಞಾನ ತತ್ಸಂಬಂಧಿ ಸುಖಗಳೇನೂ ಇಲ್ಲದೆ ಜಡನಂತಿರುವನು. ಪ್ರಾಣಾಯಾಮ ವೃತ್ತಿ ನಿರೋಧಾದಿ ಕಷ್ಟಗಳನ್ನಾದರೂ ಅನುಭವಿಸಿ ಈ ದೃಷ್ಟಿಯೆಂಬ ನಾವೆಯನ್ನವಲಂಬಿಸಿ ದುಃಖ ಸಮುದ್ರವಂ ದಾಟುವನಾಗು. ಬೀಜವಂಕುರಾದಿ ರೂಪದಿಂ ವೃದ್ಧಿಯಾಗಿ ದೊಡ್ಡ ವೃಕ್ಷವಾಗುವಂತೆ ನಿನ್ನ ಸಂಕಲ್ಪವೇ ಸಂವೇದ್ಯಾದಿ ರೂಪದಿಂ ಬೆಳದು ದೊಡ್ಡ ಸಂಸಾರವಾಗುವುದಲ್ಲದೆ ಜನ್ಮಪರಂಪರೆಗೂ ಕಾರಣವಾಗುವದು. ಹೀಗೆ ಜ್ಞಾನ ರೂಪನಾದ ಆತ್ಮನೇ ದೃಶ್ಯಜ್ಞಾನ ರೂಪವಾದ ಸಂಕಲ್ಪದಿಂ ತಾನೇ ಮುಗ್ಧನಾಗಿ ನಾನಾಪ್ರಕಾರವಾಗಿ ಪುಟ್ಟಿ ದುಃಖ ಪಡಲಾರದೆ ಸ್ವವಿಚಾರದಿಂ ಸ್ವರೂಪಜ್ಞಾನಿಯಾಗಿ ಮುಕ್ತನಾಗುವನು. ಈ ಆತ್ಮನು ಸ್ವರೂಪವಂ ವಿಚಾರಿಸದಿರುವಲ್ಲಿ ಭಾವನಾನುಸಾರವಾಗಿ ಪದಾರ್ಥಗಳುಂಟಾಗುವದ್ದರಿಂದ ರಾಗದ್ವೇಷಾದಿಗಳಿಂ ಮುಕ್ತನಾಗದೆ ಬಹುಕಾಲವಾದಾಗ್ಯೂ ಸ್ವರೂಪವಂ ಹೊಂದಲಾರನು. ಈ ಆತ್ಮನು ಸಕಲ ಜಗದಾದಿಯಾದ ತನ್ನ ಮಾಯಾಶಕ್ತಿಯಿಂದ ಜಗನ್ನಾಟ್ಯವನ್ನಾಡುತ್ತಿರುವನು. ಇವನು ದೇವಾಸುರ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷಾದಿ [illegible] ಸೇರಿದವನಲ್ಲ ಇವನು

ತೆರನೆ ಹುಳುವಿನಂತೆ ತನ್ನನ್ನೇ ತಾನು ಕಟ್ಟಿಕೊಂಡು ದುಃಖಪಡುತ್ತಾ ಬಹು ಕಾಲಕ್ಕೆ ಸ್ವರೂಪ ವಿಚಾರದಿಂ ಮುಕ್ತನಾಗುವನು. ಈ ಆತ್ಮನೆಂಬ ಜ್ಞಾನ ಸಮುದ್ರದ ತೆರೆಗಳೇ ಸ್ವರ್ಗವೆಂತಲೂ, ಭೂಮಿಯೆಂತಲೂ, ವಾಯುವೆಂತಲೂ, ಆಕಾಶವೆಂತಲೂ, ಗಿರಿಗಳೆಂತಲೂ, ನದಿಗಳೆಂತಲೂ ಪ್ರಸಿದ್ಧವಾಗಿರುವವು. ಈ ಜಗವೆಲ್ಲವೂ ಜ್ಞಾನಮಾತ್ರವಲ್ಲದೆ ಮತ್ತೊಂದಲ್ಲವೆಂದು ಸಮ್ಯಜ್ಞಾನವಂ ಪಡೆದವನು ಶೀಘ್ರವಾಗಿ ಕೈವಲ್ಯವಂ ಪಡೆವನು. ಯಾವಾಗೀ ಸಂಪತ್ತು ಸ್ವಲ್ಪವಾದರೂ ಚಲಿಸದೆ ತನ್ನಲ್ಲೇ ನಿಲ್ಲುವದೋ ಆಗ ಸಮ್ಯಜ್ಞಾನದಿಂ ಕೈವಲ್ಯವಂ ಪಡೆದು ಯಾವ ವ್ಯಾಪಾರದಲ್ಲಿದ್ದರೂ ಅದಕ್ಕೆ ತಗಲದೆ ಅಸಂಗನೆನಿಸುವನು. ಅಂತಃಕರಣಾನುಗತವಾದ ಸಂವಿತ್ತು ತೇಜದಿಂ ಪ್ರಕಾಶದಂತೆ ಜ್ಞಾನಮಾತ್ರ ಸ್ವರೂಪವಾದ ಬ್ರಹ್ಮದಿಂದುದಯಿಸುವುದ್ದರಿಂದ 'ಇದಕ್ಕೆ ಸನ್ಮಾತ್ರವಾದ ಬ್ರಹ್ಮವೇ ಬೀಜವೆನಿಸುವದು. ಸತ್ತಿನ ಭಾವವನ್ನೇ ಸತ್ತೆಯನ್ನುವರು ಇದಕ್ಕೆರಡು ರೂಪಗಳು ಅವುಗಳಲ್ಲೊಂದು ಘಟ ಪಟಾದಿ ನಾನಾವಿಧ ಪದಾರ್ಥಸಂಬಂಧದಿಂದನೇಕ ರೂಪವಾಗಿರುವುದು. ಮತ್ತೊಂದು ಸಮಷ್ಟಿರೂಪದಿಂದೇಕ ರೂಪವಾಗಿರುವದು. ನಾನಾರೂಪವಾದ್ದಕ್ಕೆ ಜ್ಞೇಯವಸ್ತು ತಪ್ಪದಾದ್ದರಿಂದ ಅಖಂಡಭಾವ ಸಂಭವಸುವದು. ಆದರಿಂದ ಅಖಂಡವಾಗಿ ಏಕರೂಪದಿಂದಿರುವದೇ ಸತ್ತೆಗೆ ಮುಖ್ಯ ಸ್ವರೂಪವೆನಿಸುವದು. ಇದಕ್ಕೆ ನಾಶವು ವಿಸ್ಮೃತಿಯು ಸಹ ಎಂದಿಗೂ ಸಂಭವಿಸಲಾರದು. ಉತ್ಪತ್ತಿಗೆ ಪೂರ್ವದಲ್ಲೂ, ನಾಶಾನಂತರದಲ್ಲೂ, ಜಗದ್ವ್ಯವಹಾರ ವಿಲ್ಲದ್ದರಿಂದ ವರ್ತಮಾನಕಾಲವೇ ಜಗತ್ತಿಗೆ ಸತ್ತಾರೂಪವೆಂತಲೂ, ಅಂಗಗಳು ಸೇರಿ ಅಂಗಿಯಾಗುವದ್ದರಿಂದ ಕಾಲಕ್ಕೆ ಅಂಗಗಳಾದ ಕಲೆಗಳ ಸತ್ತೆಯೆಂತಲೂ, ಈ ಎರಡಕ್ಕೂ ಭಿನ್ನವಾಗಿ ವಸ್ತು ಸತ್ತೆ ಇರುವದೆಂತಲೂ ಜನಗಳು ಪೇಳುವರು. ಪರಮಾತ್ಮನ ಸತ್ತೆಯೇ ಈ ಕಾಲಾದಿ ಸತ್ತೆಗಳಾಗಿ ತೋರುವದು. ಇದು ವಾಸ್ತವವಾದಾಗ್ಯೂ ಕಾಲಾದಿ ಕಲ್ಪನೆ ಅಸತ್ತಾದ್ದರಿಂದ ಕಾಲಾದಿಗಳು ನಷ್ಟವಾಗುವಲ್ಲಿ ಅವುಗಳ ಸತ್ತೆಗೂ ನಾಶ ವ್ಯವಹಾರ ಉಂಟಾಗುವದ್ದರಿಂದಂದಲೂ, ನಾನಾತ್ವವಿರುವವರಿಗೆ ಶುದ್ಧವಾದ ಕೈವಲ್ಯ ಸಂಭವಿಸಲಾರದಾದ್ದರಿಂದಲೂ, ಸಾಮಾನ್ಯ ರೂಪದಿಂದೇಕರೂಪವಾದ ಸತ್ತೆಯನ್ನೇ ಭಾವಿಸುತ್ತಾ ಪರಮಾನಂದನಾಗಿರುವನಾಗು. ಈ ಸತ್ತಾಸಾಮಾನ್ಯಕ್ಕೆ ಯಾವದು ಕೊನೇ ಸತ್ತೆಯೋ ? ಅದೇ ಈ ಜಗತ್ತಿಗೂ ಜೀವರಿಗೂ ಸಹ ಬೀಜವೆನಿಸುವದು. ಅಲ್ಲಿ ಯಾವ ಕಲ್ಪನೆಗೂ ಅವಕಾಶವಿಲ್ಲದ್ದರಿಂದ ಅದಕ್ಕೆ ಮತ್ತಾವ ಬೀಜವಿಲ್ಲನೆಂದು ತಿಳಿಯತಕ್ಕದ್ದು. ಸಮಸ್ತಶಾಸ್ತ್ರ ಸಾರಗಳಿಗೂ ಸಾರ

ವಾದ ಆ ಸತ್ತೆಯಲ್ಲಿ ನಿಂತವನು ಹಿಂತಿರುಗಲಾರನು. ಈ ಸತ್ತಾಸ್ವರೂಪನಾದ ಪರಮಾತ್ಮನಲ್ಲಿ ದರ್ಪಣದಪ್ರೋಲ್ ಸಮಸ್ತ ವಸ್ತು ದೃಷ್ಟಿಗಳು ಪ್ರಕಾಶಿಸುವವು. ಸಾಲಿಗೆಯಿಂದ ಚಿತ್ರಪಗಳಂತೆ ಅದರಿಂದಲೇ ಸಮಸ್ತವಸ್ತುಗಳೂ ಜೀವಿಸುವವಾದ್ದರಿಂದ ಅದೇ ಪರಮಾನಂದ ಪದವೆಂದು ಜನಗಳಿಗೆ ಅತ್ಯಂತ ಪ್ರೀತಿಪಾತ್ರವಾಗುವದು. ಅಲ್ಲಿಯೇ ಸಮಸ್ತವಾದ ಜಗತ್ತುಗಳು ಹುಟ್ಟಿ ತಿರುಗುತ್ತಾ ಅದೃಶ್ಯವಾಗುವವು. ಗುರು ಲಘುಗಳಿಗೂ, ಸ್ಥೂಲ ಸೂಕ್ಷ್ಮಗಳಿಗೂ, ದೂರಸ್ಥ ಸಮೀಪಸ್ಥರಿಗೂ, ಜ್ಯೇಷ್ಠ ಕನಿಷ್ಠರಿಗೂ, ತೇಜಸ್ತಿಮಿರಗಳಿಗೂ, ದಿಗ್ವಸ್ತುಗಳಿಗೂ ಅದೇ ಅಧಿಕವೆನಿಸುವದು. ಲೋಕ ಸಾಧಾರಣ ಪ್ರಸಿದ್ಧಿ ಇಲ್ಲದ್ದರಿಂದೊಂದು ಅಲ್ಲವೆಂತಲೂ ತಿಳಿಯಲಶಕ್ಯವಾದ ವೇದಾಂತ ಶಾಸ್ತ್ರದಲ್ಲೆ ಪ್ರಸಿದ್ಧಿ ಇರುವದ್ದರಿಂದೇನೊ ಒಂದೆಂತಲೂ ಭಾವರೂಪದಿಂದಿರುವಂತೆ ಕಾಣುವದೆಂತಲೂ, ಅಭಾವರೂಪದಿಂ ನಾಸ್ತಿಯೆಂಬುವದಕ್ಕೆ ವಿಷಯವಾಗಿರುವದೆಂತಲೂ, ಅದ್ವಿತೀಯವಾದ್ದರಿಂ ದದೇದೃಶ್ಯವಾಗಿರುವದೆಂತಲೂ, ದೃಙ್ಮಾತ್ರ ಸ್ವರೂಪವಾದ್ದರಿಂದ ಅದೃಶ್ಯವೆಂತಲೂ, ಅಹಂಭಾವ ರೂಪದಿಂ ದಿದೇನೆಯೆನ್ನುವದೆಂತೂ, ಮಮಕಾರಕ್ಕೆ ವಿಷಯವಾಗಿ ನಾಶಿಲ್ಲವೆನ್ನುವದೆಂತಲೂ, ಯಾವದು ಹೇಳಲ್ಪಡುವದೋ, ಯಾವದರಲ್ಲಿ ಭೇದಬುದ್ಧಿಯಿಂ ಭಯವು ಸಿದ್ಧವಾಗಿರುವದೋ, ಯಾವದರ ಜ್ಞಾನವಿಲ್ಲದೆ ಚಿತ್ತಕ್ಕೆ ಶಾಂತಿ ಯಾಗದೋ, ಪರಮ ಪಾವನವಾದ ಆಸ್ಥಾನದಲ್ಲಿ ಯಾವ ಪ್ರಯತ್ನದಿಂದಲಾದರೂ ನೀನು ನಿಲ್ಲುವೆಯಾದರೆ ಅದೇ ನೀನೆನಿಸಿಕೊಳ್ಳುವೆಯಾದ್ದರಿಂದ ಅದಕ್ಕ ಉದ್ಯೋಗದಲ್ಲಿರುವನಾಗು. ಎಂದು ಹೇಳುವಲ್ಲಿ;—ಎಲೈ ಗುರುವೇ! ಮೋಕ್ಷ ಬೀಜವೆಂದು ಹೇಳಲ್ಪಟ್ಟ ಉಪಾಯಗಳಲ್ಲಿ ಯಾವದರ ಪರಿಗ್ರಹದಿಂ ಶೀಘ್ರವಾಗಿ ಆ ಪರಮಪದವು ಪ್ರಾಪ್ತವಾಗುವದೆಂದು ಶ್ರೀರಾಮನು ಕೇಳಲು ವಸಿಷ್ಠನಿಂತೆಂದನು;—ಎಲೈ ರಾಮಭದ್ರನೇ! ದುಃಖ ಬೀಜವಾದ ದೇಹಾದಿಗಳಿಗೆ ಪ್ರತಿಯಾಗಿ ಯಾವದು ಹೇಳಲ್ಪಟ್ಟಿರುವದೋ ಅದರದರ ಅಭ್ಯಾಸದಿಂ ದುಃಖಾಂತವಾದ ಪದವು ಸಿದ್ಧವಾಗುವದು. ಅವರಲ್ಲಿ ಬಲಾತ್ಕಾರದಿಂ ವಾಸನೆಗಳೆಲ್ಲವನ್ನು ಬಿಟ್ಟು ಸತ್ತಾಸಾಮಾನ್ಯದ ಕೊನೆಯಲ್ಲಿರುವ ಅಖಂಡೈಕರಸವಾದ ಚಿನ್ಮಾತ್ರ ವಸ್ತುವಿನಲ್ಲಿ ಅಭೇದಜ್ಞಾನದಿಂ ಮನವಂ ನಿಲ್ಲಿಸುವೆಯಾದರೆ ಆ ಕ್ಷಣದಲ್ಲೆ ನೀನು ಆ ಅಖಂಡಭಾವವಂ ಪಡೆಯುತ್ತೀಯೆ? ಸತ್ತಾಸಾಮಾನ್ಯದಲ್ಲೇ ನಿಲ್ಲುವೆಯಾದರೆ ಪೂರ್ವಕ್ಕಿಂತಲೂ ಅಧಿಕವಾದ ಪ್ರಯತ್ನ ಬೇಕಾಗುವದು. ಶೋಧಿತವಾದ ತ್ವಂಪದಾರ್ಥದಲ್ಲೇ ನಿಲ್ಲುವೆಯಾದರೆ ಪೂರ್ವಕ್ಕಿಂತಲೂ ಪ್ರಯತ್ನವಧಿಕವಾಗತಕ್ಕದ್ದು. ಅತಿಪ್ರಯಾಸವಾದ ತ್ವಂಪದಾರ್ಥದ ಶೋಧ

ನೆಯಿಂದುಪಯೋಗವೇನು ? ಸರ್ವವೂ ಬ್ರಹ್ಮವೆಂಬ ಸಿದ್ಧಾಂತವಿರುವದ್ದರಿಂದ ಜ್ಞಾನ ವಿಷಯವಾದ ಜ್ಞೇಯವಸ್ತುಗಳ ಧ್ಯಾನದಿಂದಲೇ ಆಟುಂಡಾನಂದವಾಗಬಹುದೆಂದರೆ;—ಸರ್ವವ್ಯಾಪಾರಗಳಲ್ಲೂ ಅಹಂಕಾರಾದ್ಯನುಗತಿಯಿಂದ ಅಶೋಧಿತವಾದ ತ್ವಂಪದಾರ್ಥದ ಪ್ರಕಾಶವೇ ಕಾಣುವದ್ದರಿಂದಲೂ, ಜ್ಞಾನ ಜ್ಞೇಯಗಳು ಜ್ಞಾತೃವಿಗೆ ಅಭಿನ್ನವಾದ್ದರಿಂದಲೂ, ಜ್ಞಾತೃ ಸ್ವರೂಪ ವಿಚಾರಣೆಯೊಳ್ ಜ್ಞೇಯವಸ್ತುವಿಗೆ ಸ್ಥಿತಿಯೇ ತಪ್ಪುವದರಿಂದಲೂ, ಇ ಮಾತೇ ಅಸಂಗತವೆನಿಸುವದು. ವಾಸನಾತ್ಯಾಗವನ್ನೇ ಸಾಧಿಸಬಹುದೆಂದರೆ,—ವಾಸನಾತ್ಯಾಗವೆಂಬುವದು ಮೇರುಪರ್ವತವಂ ಕೀಳುವದಕ್ಕಿಂತಲೂ, ಅತಿ ಕಷ್ಟವೆನಿಸುವದು. ವಾಸನೆ ಇರುವವರಿಗೆ ಚಿತ್ತವು, ಚಿತ್ತವಿರುವವರಿಗೆ ವಾಸನೆಯು ಸಹ ನಷ್ಟವಾಗಲಾರದು. ಚಿತ್ತಶಾಂತಿಯಾಗದೆ ತತ್ವಜ್ಞಾನವಾಗಲಾರದು. ತತ್ವಜ್ಞಾನ ಮನೋನಾಶ ವಾಸನಾತ್ಯಾಗಗಳು ಸೇನಾಜನಗಳಂತೆ ಪರಸ್ಪರ ಸಹಾಯವಾಗಿ ನಡೆಯುವಲ್ಲಿ ಕಾರ್ಯಸಿದ್ಧಿಯಾಗುವದು. ಇವುಗಳನ್ನು ಬೇರೆಬೇರೆಯಾಗಿ ಬಹುಕಾಲ ಸೇವಿಸಿದಾಗ್ಯೂ ಮೂರ್ಛಾಮರಣಾದಿ ದೋಷಗಳುಳ್ಳ ಮಂತ್ರಗಳಂತೆ ಸಿದ್ಧಿಸಲಾರವಾದ್ದರಿಂದೀ ಮೂರನ್ನು ಬಿಡದೆ ಸರ್ವಕಾಲದಲ್ಲೂ ಸಾಧಿಸಬೇಕು. ಇದರ ಅಭ್ಯಾಸದಲ್ಲಿ ನಿಶ್ಶೇಷವಾಗಿ ಮನವು ನಷ್ಟವಾಗುವದ್ದರಿಂದ ತಾವರೇದಂಟು ಮುರಿಯುವಲ್ಲಿ ಅದರ ಧಾರಗಳಂತೆ ಹೃದಯದಲ್ಲಿರುವ ಅಹಂಕಾರ ಮೊದಲಾದ ಗಂಟುಗಳೆಲ್ಲವೂ ಒಡದುಹೋಗುವವು. ವಾಸನಾತ್ಯಾಗದಂತೆ ಪ್ರಾಣ ನಿರೋಧವೂ ಕೂಡ ಚಿತ್ತಕ್ಕೆ ನಾಶಕವಾದ್ದರಿಂದ ಜ್ಞಾನಿಗಳೀ ಎರಡನ್ನು ಸಮಾನವೆನ್ನುವರು. ಜಾವಹೊತ್ತು ಕುಳುತಿದ್ದಾಗ್ಯೂ ಅದರಿಂ ದುಃಖ ತೋರದಿದ್ದಲ್ಲಿ ಆ ಆಸನವು ಜಿತವೆನಿಸುವದು. ಆಹಾರವು ಸಾತ್ವಿಕವಾಗಿಯೂ, ಶುದ್ಧವಾಗಿಯೂ, ಮಿತವಾಗಿಯೂ, ಸೇವಿತವಾಗುವಲ್ಲಿ ನಿದ್ರೆಯೂ ಮಿತವಾಗುವದು. ಮತ್ತು ಇದರಿಂದ ಪ್ರಾಣಧಾರಣ ಯೋಗ್ಯತೆಯುಂಟಾಗುವದು. ಇದರಮೇಲೆ ಗುರು ಪೇಳಿದ ಯುಕ್ತಿಯಿಂದ ಪ್ರಾಣಾಯಾಮಾಭ್ಯಾಸವಂ ಮಾಡುವನಿಗೆ ಪ್ರಾಣಸ್ಪಂದ ನಿರೋಧವಾಗುವದು. ಸಮಸ್ತ ವಸ್ತುಗಳಿಗೂ ಆದಿಮಧ್ಯಾಂತಗಳಲ್ಲಿ ಯಾವದು ಇರುವದೋ ಆ ಚಿದ್ವಸ್ತುವಿನ ಜ್ಞಾನವೇ ಅದರ ದರ್ಶನವೆನಿಸುವದು. ಅಜ್ಞಾನದಿಂದ ಸಂಗವ್ಯವಹಾರವೂ ಸಂಸಾರಭಾವನೆ ಸಹ ಪೋಗುವಲ್ಲಿ ಅಜ್ಞಾನಮಯವಾದ ವಾಸನೆಯಣಗುವದು. ವಾಸನೆಗೆ ಶರೀರವೇ ಅವಲಂಬನವಾದ್ದರಿಂದ, ಶರೀರನಶ್ವರವೆಂಬ ನಿಶ್ಚಯವಾಗಲು ವಾಸನೆಯುದಯಿಸಲಾರದು. ವಾಸನಾವಲಂಬನವಿಲ್ಲದ್ದರಿಂದ

ಚಿತ್ತವು ವಿಷಯಗಳಲ್ಲಿ ಪ್ರವರ್ತಿಸಲಾರದೆ ನಿಲ್ಲುವುದು. ಪ್ರಾಣಸ್ಪಂದನೇ ಚಿತ್ತವೆನಿಸುವದಾದ್ದರಿಂದ ಗಾಳಿಯಿಂ ಧೂಳಿಯಂತೆ ಪ್ರಾಣಸ್ಪಂದದಿಂದುಂಟಾಗಿದ್ದ ಮನಸ್ಸಿನ ಚಲನವಿಕಾರವಣಗುವುದು. ಅದರಿಂದ ಬಾರಿಬಾರಿಗೂ ಕುಳಿತು ಪ್ರಾಣಚಲನವಂ ನಿಲ್ಲಿಸಬೇಕು. ಪ್ರಕಾರಾಂತರದಿಂ ಮನವಂ ಜಯಿಸುವನಾದರೆ ಪರಮಪದಪ್ರಾಪ್ತಿಗೆ ಬಹುಕಾಲವಿಳಂಬವಾಗುವದಾದ್ದರಿಂದ, ಮದಗಜಕ್ಕೆ ಅಂಕುಶದಂತೆ ನಾನು ಪೇಳಿದ ಯುಕ್ತಿಯೇ ಮುಖ್ಯವೆಂದು ತಿಳಿಯುವನಾಗು ? ಅಧ್ಯಾತ್ಮಜ್ಞಾನವು, ಸತ್ಸಂಗವು, ವಾಸನಾತ್ಯಾಗವು, ಪ್ರಾಣ ನಿರೋಧವು ಸಹ ಈ ನಾಲ್ಕು ಉಪಾಯಗಳು ಮನೋಜಯದಲ್ಲಿ ಮುಖ್ಯವೆನಿಸುವವು! ಈ ಯುಕ್ತಿಗಳಿಂದ ಜಲಧಾರೆಗಳಿಂ ಭೂಮಿಯರಜದಂತೆ ಚಿತ್ತವಣಗುವದು, ಇಂಥಾ ಯುಕ್ತಿಗಳಿರುವಲ್ಲಿ ಯಾರು ಹಠಾತ್ಕಾರದಿಂ ಚಿತ್ತವಂ ಜಯಿಸಲುದ್ಯುಕ್ತರಾಗುವರೋ! ಅವರು ಕಪ್ಪಿನ ಉಂಡೆಗಳಿಂ ಕತ್ತಲೆಯಂ ಹೊಡೆಯುವರಂತಲೂ, ತಾವರೆಯೆಳೆಗಳಿಂ ಮದ್ದಾನೆಯಂ ಕಟ್ಟುವರಂತಲೂ ತಿಳಿಯತಕ್ಕದ್ದು. ಈ ಯುಕ್ತಿಗಳಂಬಿಟ್ಟು ಪ್ರಕಾರಾಂತರದಿಂ ಚಿತ್ತವನ್ನಾಗಲಿ, ಅದಕ್ಕೆ ಸಮೀಪಸ್ಥಿತವಾದ ಶರೀರವನ್ನಾಗಲೀ, ಯಾರು ಸ್ಥಿರಪಡಿಸಲುಜ್ಜುಗಿಸುವರೋ ಅವರು ದೌರ್ಭಾಗ್ಯವುಳ್ಳವರಂತೆ ಭಯದಿಂದ ಭಯವನ್ನು ದುಃಖದಿಂ ದುಃಖವಂ ಸಹ ಪೊಂದುವರು. ಅವರಿಗೆ ಜಿಂಕೆಗಳಂತೆ ವನಗಿರಿಗಳಲ್ಲಲೆಯುವದು. ಹಕ್ಕಿಗಳಂತೆ ಚಿಗರು ಪಣ್ಣುಗಳಂ ಮೆಲ್ಲುವದು, ತೆರೆಗಳಂತೆ ಚಪಲಪಡುವದು, ಗಿರಿ ನದಿಗಳಲ್ಲಿ ಬಿದ್ದ ಹುಲ್ಲಿನಂತೆ ಭ್ರಮಿಸುವದು ಸಹ ಲಾಭವೆಂದು ನಿಶ್ಚೈಸುವನಾಗು. ಯಜ್ಞ ದಾನ ತಪಸ್ತೀರ್ಥ ದೇವಾರ್ಚನ ಭ್ರಮೆಗಳಿಂ ಬಹುಪ್ರಕಾರವಾಗಿ ಶ್ರಮಪಟ್ಟಾಗ್ಯೂ ಕಾಲಕ್ಷೇಪವಾಗುವದಲ್ಲದೆ ಮತ್ತೊಂದಿಲ್ಲ. ಕ್ರಮವಾಗಿ ಜ್ಞಾನಸಿದ್ಧಿಯಾಗುವದೆಂಬುವದನ್ನು ನಂಬಲಾಗದು. ದುಃಖದೋಷ ದಂಡಪ್ರಹಾರದಿಂ ಚಂಡಿಸಂತಿವರು ಸ್ವರ್ಗ ನರಕ ಮನುಷ್ಯಲೋಕಗಳಲ್ಲಿ ಪಾತೋತ್ಪಾತ ದೆಶೆಯನ್ನನುಭವಿಸುವರು. ಆದ್ದರಿಂ ನೀನು ಈ ದುಷ್ಟದೃಷ್ಟಿಗಳಂ ಬಿಟ್ಟು ವೀತರಾಗನಾಗಿ ವಿಚಾರಜ್ಞಾನವನ್ನೇ ಸಾಧಿಸುವನಾಗು. ಜ್ಞಾನವಂತನೇ ಜೀವಿಸುವನು. ಜ್ಞಾನವಂತನೇ ಬಲಿಷ್ಠನಾಗುವನಾದ್ದರಿಂದ ನೀನು ಜ್ಞಾನವನ್ನೇ ಸಂಪಾದಿಸಿ ಕಲ್ಪನೆಯಿಲ್ಲದ ಕ್ರಿಯೆಗಳಂ ಮಾಡುತ್ತಾ ಕ್ಷೀಯವಿಲ್ಲದ ಜ್ಞಾನಸ್ವರೂಪದಿಂ ನಿಲ್ಲುವನಾಗು. ವಿಚಾರದಿಂದಾವನಿಗೆ ಸ್ವಲ್ಪನಾದರೂ ಕ್ಷೀಯತಪ್ಪುವದೋ! ಅವನ ಜನ್ಮ ಸಫಲವೆನಿಸುವದು. ಹೃದಯವೆಂಬ ಪಾತಿಯಲ್ಲಿ ಬಿದ್ದ ವಿಚಾರಬೀಜವು ಸತ್ಸಂಗಶಾಸ್ತ್ರವಿಚಾರಾಭ್ಯಾಸಗಳಿಂ ವೃದ್ಧಿ

ಯಾಗುತ್ತ ದೊಡ್ಡ ಮರವಾಗಿ ಜಗವೆಲ್ಲವನ್ನು ಆಕ್ರಮಿಸುವದು. ವೈರಾಗ್ಯ ಪೂರ್ವಕವಾದ ವಿಚಾರವು ಸ್ವಲ್ಪ ವೃದ್ಧಿಯಂ ಪಡೆಯುವಲ್ಲಿ ಪೂರ್ಣವಾದ ಸರೋವರವಂ ಪಕ್ಷಿಗಳಂತೆ ಶಮಾದಿ ಸದ್ಗುಣಗಳು ಸೇರುವವು. ಚನ್ನಾಗಿ ವಿಚಾರಿಸಿದ್ದರಿಂ ನಿಶ್ಚಿತವಾದ ತತ್ವಜ್ಞಾನವುಳ್ಳವನಿಗೆ ಮಹತ್ತರವಾದ ವೈಭವವುಳ್ಳ ಅಜ್ಞಾನಗಳು ಕೂಡ ತಿರುಗಿ ಬರಲಾರವು. ಶಬ್ದಾದಿ ವಿಷಯಗಳು ಕಲ್ಪನಾದಿಮಾನಸವೃತ್ತಿಗಳು ಆಧಿವ್ಯಾಧಿಗಳು ಕೂಡ ತತ್ವಜ್ಞಾನಿಯನ್ನಳ್ಳಾಡಿಸಲಾರವು. ಎತ್ತೆ ಮಹಾಮತಿಯೇ! ಮಿಂಚುಗಳ ಹೊಳಪಿನಿಂ ಕೆಂಪಾದ ಪ್ರಳಯಕಾಲದ ಮೇಘಗಗಳಂ ಬಾಲಕರು ಪಿಡಿಯುವರೆಂಬಂತೆಯೂ, ಕನ್ನೈದಿಲೆಗಳಿಂ ತನ್ನ ನೇತ್ರಕ್ಕೆ ಜಗಳವಾಗುವದೆಂದೋರ್ವ ಕನ್ನೆಯೂ ಕನ್ನೈದಿಲೆಗಳಿಗೆ ವಿಕಾಸಕಾರಿಯಾಗಿ ಗಗನಮಧ್ಯದಲ್ಲಿದ್ದ ಚಂದ್ರನಂ ತಂದು ತನ್ನ ರನ್ನದ ಪೆಟ್ಟಿಗೆಯೊಳ್ ಸೇರಿಸಿಕೊಂಡಳೆಂಬಂತೆಯೂ, ತುಂಬೆಗಳಿಂ ತುಂಬಿದ ಗಂಡಸ್ಥಳಗಳುಳ್ಳ ಗಂಡಾನೆಗಳು ಸ್ತ್ರೀಯರುಗಳ ಸಾಧಾರಣ ಶ್ವಾಸಗಳಿಂ ತಳ್ಳಲ್ಪಟ್ಟ ಸೊಳ್ಳೆಗಳಿಂ ಹೊಡೆಯಲ್ಪಟ್ಟವೆಂಬಂತೆಯೂ, ಉಗುರಿಗೆ ತಗಲಿರುವ ಆನೆಮುತ್ತುಗಳುಳ್ಳ ಸಿಂಹಗಳಂ ಎಳೆಹುಲ್ಲೆಗಳು ಹೊಡದುಹಾಕಿರುವಂತೆಯೂ, ಶ್ವಾಸಜ್ವಾಲೆಗಳಿಂ ಸುಡಲ್ಪಟ್ಟ ಕಾಡುಗಳುಳ್ಳ ಹೆಬ್ಬಾವುಗಳಂ ಕಪ್ಪೆಮರಿಗಳು ನುಂಗಿದವೆಂಬಂತೆಯೂ, ವಿಷಯಗಳೆಂಬ ಕಳ್ಳರು ಭೂಮಿಕಾಭ್ಯಾಸದಲ್ಲಿ ತತ್ವನಿಶ್ಚಯದಿಂ ಪ್ರೌಢನಾದವನನ್ನು ಆಕ್ರಮಿಸಿದರೆಂಬುವದು ಅತಿ ವಿಚಿತ್ರವೆನಿಸುವದು. ವಿಚಾರದಲ್ಲಿ ಪ್ರೌಢವಾಗದ ಬುದ್ಧಿಯನ್ನೆಳಲತೆಯಂ ಬಿರುಗಾಳಿಗಳಂತೆ ವಿಷಯಗಳೆಂಬ ಕಳ್ಳರಪಹರಿಸುವರು. ಮುಂದರಗಿಯಂ ಮಂದಮಾರುತಗಳಂತೆ ರಾಗದ್ವೇಷಾದಿ ದುರಾಶಯಗಳು ವಿವೇಕಶಾಲಿಯಂ ಹಾರಿಸಲಾರವು. ಇದೆನಿಸಿಕೊಳ್ಳುವ ಪದಾರ್ಥವ್ಯಾವದು, ಈ ಜಗವೆಲ್ಲಿಂದಬಂದುದು, ಈ ದೇಹಕ್ಕೂ ನನಿಗೂ ಸಂಬಂಧವೇನು, ಈ ದುಃಖಸುಖಗಳು ನನಿಗೆ ಹ್ಯಾಗೆಬಂದವೆಂದು ಕುಳಿತಿರುವಲ್ಲೂ, ನಿಂತಿರುವಲ್ಲೂ, ಜಾಗ್ರದಲ್ಲೂ, ಸ್ವಪ್ನದಲ್ಲೂ ಕೂಡ ಯಾವನು ವಿಚಾರಿಸುತ್ತಿರುವನೋ ಅಥವಾ ಸತ್ಪುರುಷರೊಡನೆ ವಿಚಾರವಂ ಮಾಡುವನೋ ಅವನೇ ಬದುಕಿರುವನೆಂದು ಹೇಳಲ್ಪಡುವದು. ದೀಪದಿಂದ ಪದಾರ್ಥವಂತೆ ವಿಚಾರದಿಂದಲೇ ಕಾರಣವಸ್ತು ಗೊತ್ತಾಗುವದು. ಅವಾಂತರ ಕಾರಣ ಜ್ಞಾನದೊಳ್ ದುಃಖ ತಪ್ಪದಾದ್ದರಿಂದಲೂ, ಸರ್ವಕಾರಣವಾದ ಬ್ರಹ್ಮಜ್ಞಾನದೊಳ್ ದುಃಖಪ್ರಸಕ್ತಿ ಇಲ್ಲದ್ದರಿಂದಲೂ, ಬ್ರಹ್ಮಜ್ಞಾನವೇ ತತ್ವಜ್ಞಾನವೆನಿಸುವದು. ಯಾವದರಿಂ ಪರರ ಅಜ್ಞಾನವಳಿದು ಜ್ಞಾನವೇ ಪ್ರಕಾಶಿಸುವದೋ ಅವೇ ಶಾಸ್ತ್ರವೆನಿಸುವವು.

ಕ್ಷೀರದಲ್ಲಿ ಮಾಧುರ್ಯದಂತೆ ಅಜ್ಞಾನದಲ್ಲೇ ಜೇಯವಾದ ಚಿದ್ವಸ್ತುವು ಪ್ರಕಾಶಿಸುವದು. ಆ ವಸ್ತುವಿನ ಸ್ವರೂಪವನುಭವಕ್ಕೆ ಬರಲು ಮದ್ಯದ ಮದವೇರಿದವನಂತೆ ಸಹಜಾನಂದ ಪ್ರಕಾಶದಿಂ ತನ್ಮಯನಾಗುವನು. ವೀಣಾ ವೇಣು ಮುರಜ ಮೃದಂಗ ಸಹ ಕೃತವಾದ ಕಾಂತಾ ಸಂಗೀತಗಳಲ್ಲೂ, ಕೋಕಿಲ ಕೂಜಿತ ಶಿಖಂಡಿತಾಂಡವ ಹಂಸಧ್ವನಿ ಮನೋಹರವಾದ ಗಿರಿವನಾದಿ ವಿಹಾರಗಳಲ್ಲೂ, ಮಧುರ ಪಾನೀಯ ಭಕ್ಷ್ಯ ಭೋಜ್ಯ ಮಿಶ್ರವಾದ ಸರಸಾ ಹಾರಗಳಲ್ಲೂ, ಸರಸ ಪಟೀರ ಸುಮನೋಹಾರ ಸುಗಂಧಿ ತಾಂಬೂಲ ಕುಸುಮ ಶಯನಾದಿಗಳಿಂ ಲೋಭನೀಯವಾದ ಕಾಮಿನೀ ಸಹವಾಸಗಳಲ್ಲೂ, ಶೈತ್ಯ ಸೌರಭ್ಯ ಮಾಂದ್ಯದಿಂ ಕೂಡಿದ ಮಲಯಮಾರುತ ಸಂಪರ್ಕದಿಂ ಸುಂದರವಾದ ಚಂದ್ರಿಕಾ ಕ್ರೀಡೆಯಲ್ಲೂ, ರಂಭೆ ಊರ್ವಶೀ ಮೇನಕಾದ್ಯಪ್ಸರಸ್ಸುಗಳೊಡನೆ ನಂದನ ಚೈತ್ರರಥಾದಿ ವನಗಳಲ್ಲಿ ವಿಹರಿಸುವದರಲ್ಲೂ, ಮೇರು ಮಂದರ ಕೈಲಾಸ ಸತ್ಯಲೋಕ ವೈಕುಂಠಾದಿ ಸೌಖ್ಯಗಳಲ್ಲೂ ಕೂಡ ಸಹಜಾನಂದ ಸಾಮ್ರಾಜ್ಯವುಳ್ಳ ಜೀವನ್ಮುಕ್ತನಿಗೆ ಅಪೇಕ್ಷೆಯುಂಟಾಗಲಾರದು. ಪ್ರಳಯಕಾಲದ ಮೇಘಗಳ ಗುಡಿಗಿನಂತೆ ಭಯಂಕ[illegible]ವಾದ ಭೇರಿ ಭಾಂಕಾರಗಳಿಂ ಮಿಶ್ರವಾದ ಸುರವೈರಿಗಳ ಕೋಲಾಹಲಾರ್ಭ[illegible]ಳಿಂದಲೂ ಕೂಡ ಇವನ ಮನಸ್ಸಿಗೆ ದಿಗಲುಂಟಾಗಲಾರದು. ಇವನಿಗೆ ಜಗ[illegible]ರಣವಾದ ಅಜ್ಞಾನವಳಿದದ್ದರಿಂದ ಆಜ್ಞಾನಿಕವಾದ ಸ್ಥೂಲ ಸೂಕ್ಷ್ಮ ಶರೀ[illegible] ಸಂಬಂಧಿ ಸುಖದುಃಖಗಳೊಳ್ ಯಾವದೂ ಸಂಭವಿಸಲಾರದೆಂದು ತಿಳಿಯುವನಾಗು ? ನೀಚೋತ್ತಮರೀತಿಗಳಾದ ನಾನಾವಿಧ ಪದಾರ್ಥಗಳಿಗೂ ಸಕಲ ಸುಖದುಃಗಳಿಗೂ ಕಾರಣವಾದ್ದರಿಂದ ಮನವೇ ಸರ್ಪವೆಂದು ಪೇಳಲ್ಪಡುವದು. ತಮೋಗುಣೋದ್ರೇಕದಲ್ಲಿದಕ್ಕೆ ಬಾಹ್ಯ ಪದಾರ್ಥ ಸ್ಫೂರ್ತಿಯು ಅದರಲ್ಲಾಸಕ್ತಿಯು ಅದರ ಸುಖ ದುಃಖಾನುಭವವೂ ಸಹ ಉಂಟಾಗುವದು. ಸತ್ವಗುಣೋದ್ರೇಕದಲ್ಲಿ ವಿವೇಕ ವೈರಾಗ್ಯಗಳು ನಿಜಾನಂದಾನುಭವವು ಸಹ ಉಂಟಾಗುವದು. ಪರಮಾರ್ಥ ಜ್ಞಾನದಲ್ಲ ಸರ್ಪವೂ ಸುಳ್ಳೆಂತಲೂ ಸರ್ಪವೂ ಬ್ರಹ್ಮವೆಂತಲೂ ಪೇಳಲ್ಪಡುವದು. ಇವನು ಶೂದ್ರನಲ್ಲ ಬ್ರಾಹ್ಮಣನೆಂಬುವದರಲ್ಲಿ ಶೂದ್ರನೋ ಬ್ರಾಹ್ಮಣನೋ ಎಂಬ ಸಂದೇಹಕ್ಕೆ ಪರಿಹಾರವು ಶೂದ್ರಭಾವಕ್ಕೆ ಹಾನಿಯು ಬ್ರಾಹ್ಮಣತ್ವಕ್ಕೆ ಸ್ಥಾಪನೆಯು ಸಹ ನಿಶ್ಚಿತವಾಗುವದು. ಶೂದ್ರನಲ್ಲವೆಂಬುವದರಲ್ಲಿ ಬ್ರಾಹ್ಮಣನೆಂತಲೂ ಬ್ರಾಹ್ಮಣನೆಂಬುವದರಲ್ಲಿ ಶೂದ್ರನಲ್ಲವೆಂತಲೂ ಎರಡು ವಚನಗಳೂ ಏಕಾರ್ಥವಾಗಿ [illegible]. ಹೀಗೆ ಸರ್ಪವೆನಿಸುವ ಮನವು ಬ್ರಹ್ಮವೋ

ಜಗನ್ನೋ ಎಂದು ವಿಚಾರಿಸುವಲ್ಲಿ, ಜಗವಲ್ಲ ಬ್ರಹ್ಮವೇ ಅಹುದೆಂದು ಗೊತ್ತಾಗಲ ತಾನು ಸರ್ವಾತೀತನೆಂಬುವದು ಸರ್ವಸ್ವರೂಪನೆಂಬುವದು ಸಹ ಏಕಾರ್ಥವಾಗಿ ನಿಲ್ಲುವದು. ಈ ನಿಶ್ಚಯದಿಂದೆರಡನೇ ಪದಾರ್ಥ ಜ್ಞಾನವಿಲ್ಲದಿರುವದೇ ನಿರ್ವಿಕಲ್ಪ ಸಮಾಧಿಯೆಂತಲೂ, ಅಖಂಡಾಕಾರ ವೃತ್ತಿಯಂತಲೂ ಪೇಳಿಲ್ಪಡುವದು. ಇದು ರಿಂಥ ಮೂಲವಾಗಿ ನಿಂತವನೇ ಜೀವನ್ಮುಕ್ತನೆನಿಸುವನು. ಇವನಿಗೆ ಬ್ರಹ್ಮಜ್ಞಾ ಒಂದೇ ಇರುವದ್ದರಿಂದ ಪ್ರಾರಬ್ಧವಶದಿಂದ ದೇಹವಲೆಯುತ್ತಿರುವಲ್ಲಿ, ಉದ್ಯಾ ಮರುಭೂಮಿಗಳು, ಚಂದ್ರಿಕಾಂಗಾರ ರಾಶಿಗಳು, ಸುಖದುಃಖಗಳು, ಸ್ವರ್ಗ ನ ಕಗಳು, ಉತ್ತಮಾಧಮಗಳು, ಶತ್ರುಮಿತ್ರರು ಸ್ತುತಿ ನಿಂದೆಗಳು, ಸಿಹಿ ಕಹಿ ಪದಾ ರ್ಥಗಳು ಸಹ ಸಮಾನವಾಗಿಯೇ ಇರುವವು. ಆದರಿಂದವನಿಗೆ ಹರ್ಷಾಮರ್ಷ ಗಳು ಭೋಗ ತ್ಯಾಗಾದಿಗಳು ಅಪೇಕ್ಷಾನಪೇಕ್ಷೆಗಳು ಸಹ ಏನೂ ಕಾಣಿಸುವದಿಲ್ಲ. ಇಂದ್ರಿಯಗಳೆಂಬ ಮೃಗಗಳು ಕಾಮಕ್ರೋಧಾದಿಗಳೆಂಬ ಮೊಸಳೆಗಳು ಸಹ ಜ್ಞಾನಿಯಂ ಕಡಿಯುವವಲ್ಲದೆ ಇವನಂ ಪಿಡಿಯಲಾರವು. ಅದರಿಂದಿವನು ದೊಡ್ಡ ದೊಂದಂ ಪಿಡಿಯದೆ ನೀಚವೆಂದೊಂದಂ ಬಿಡದೆ ಪ್ರಾರಬ್ಧಾನುಸಾರವಾಗಿ ಹೆ ದದ್ದೆಲ್ಲವನ್ನು ಬ್ರಹ್ಮ ಬುದ್ಧಿಯಿಂದಲೇ ಗ್ರಹಿಸುವನು. ಲೋಕಾನುಸಾರ ವಾಗಿ ಕರ್ಮವಂ ಮಾಡುವಲ್ಲೊಂದಾನೊಂದು ಕಾಲದಲ್ಲೊಂದಾನೊಂದು ಪದಾರ್ಥ ಕಾರಲು ಆದ್ಯಂತಗಳಿಲ್ಲದ ಪದಾರ್ಥವೀಗಳೆಲ್ಲಿಂದ ಬಂದುದು. ಆದ್ಯಂತಗಳ ಲ್ಲಿರುವ ಬ್ರಹ್ಮವೇ ಈಗಲೀರೂಪದಿಂ ತೋರುವದೆಂದು ನಿಶ್ಚೈಸುವನು. ಸಂಗ ದೋಷವಿಲ್ಲದ್ದರಿಂದ ದರಿದ್ರನ ಮನೋರಥಕಲ್ಪನೆಯು ಬಾಲಕರ ವಿಹಾರವು ಜ್ಞಾನಿ ಯ ಕರ್ಮಾಚರಣೆಯು ಸಹ ಸಮಾನವೆನಿಸುವದು. ಯಾವದರಲ್ಲಪೇಕ್ಷೆಯೋ ಅದೇ ಗೊತ್ತಾಗುವದಲ್ಲದೇ ಮತ್ತೊಂದು ಕಂಡರೂ ಕೇಳಿದರೂ ಮುಟ್ಟಿ ದರೂ ಗೊತ್ತಾಗಲಾರದೆಂಬುವದು ಆಬಾಲವೃದ್ಧವಾಗಿ ಗೊತ್ತಾಗಿರುವದ್ದರಿಂದ, ಸಮಸ್ತ ಪದಾರ್ಥಗಳ ಜ್ಞಾನಕ್ಕೂ ಪರಿಗ್ರಹಕ್ಕೂ ಆ ಸುಖದುಃಖ ಭೋಗಕ್ಕು ಸಹ ಸಂಗವೇ ಕಾರಣವೆನಿಸುವದೆಂದು ಪೇಳುವಲ್ಲಿ ಸಂಗದ ಸ್ವರೂಪವಂ ನಿರೂಪಿ ಸಬೇಕೆಂದು ಶ್ರೀರಾಮನು ಕೇಳಲು? ಮರಳಿ ವಸಿಷ್ಠನಿಂತೆಂದನು;—ಎಲೈ ರಾಜೀವಾಕ್ಷನೇ! ಪದಾರ್ಥ ಲಾಭಾಲಾಭ ವೃದ್ಧಿಕ್ಷಯ ಸ್ಥಿತಿನಾಶಗಳಲ್ಲಿ ಹರ್ಷಾ ಮರ್ಷಗಳನ್ನುಂಟುಮಾಡುವ ಅಶುದ್ಧವಾದ ವಾಸನೆಯೇ ಅನೇಕ ಪದಾರ್ಥ ಸಹ ವಾಸದಿಂ ಸಂಗವೆನಿಸುವದು. ಅಜ್ಞಾನಾತ್ಮಕವಾದ ಇದರ ಪ್ರಾಬಲ್ಯದಿಂ ಮಾಡಿದ ಕರ್ಮವೆಲ್ಲವೂ ರಾಗದ್ವೇಷ ಸಾಧಕವಾದ್ದರಿಂದ ಬಂಧಕವಾಗಿ ಪುನರ್ಜನ್ಮಕ್ಕೆ ಕಾರ

ಾಗುವದು. ಸರ್ವವೂ ಬ್ರಹ್ಮವೆಂದು ವಿಚಾರದಿಂದುಂಟಾದ ಶುದ್ಧವಾಸನೆಯು
ರಡನೆ ಪದಾರ್ಥವೇ ಇಲ್ಲದ್ದರಿಂದ ಹರ್ಷಾಮರ್ಷಗಳಿಗೆ ಅವಕಾಶವಿಲ್ಲದ್ದೆ ಅಸಂಗ
ಸುವದು. ಇದರಿಂ ಮಾಡಿದ ಕರ್ಮವೆಲ್ಲವು ಸಂಕಲ್ಪ ವಿಕಲ್ಪಗಳಿಲ್ಲದ್ದರಿಂದ
ರದ ಬೀಜದಂತೆ ಪುನರ್ಜನ್ಮರೂಪದಿಂ ದಂಕುರಿಸಲಾರದು. ಈ ವಾಸನೆಯೇ
ವನ್ಮುಕ್ತರಿಗೆ ದೇಹ ಪಾತಾಂತವಾಗಿರುವದು. ಇದರಲ್ಲಿಹಂತಾ ಮಮತೆಗಳಿ
ದ್ದರಿಂದ ಇಂದ್ರಿಯ ಪ್ರಸಕ್ತಿಯು ಆಶಾವೈವಶ್ಯವು ಸುಖದುಃಖ ದೆಶೆಗಳು ಸಹ
ಭವಿಸದಿರುವವು. ಅದರಿಂ ಜ್ಞಾನಿಯಾದವನು ಶಮದಮಾದಿ ಗುಣಗಳಿಂ
ಪೂರ್ಣನಾಗಿ ಮದಮಾನ ಮಾತ್ಸರ್ಯಾದಿಗಳಿಲ್ಲದೆ ನಿಷ್ಕಳಂಕನಾದ ಪೂರ್ಣಚಂ
ದಂತೆ ನಿರ್ಮಲಪ್ರಕಾಶನಾಗಿರುವನು. ಮಂದರಗಿರಿಯಿಂ ಮಥಿತವಾದಾಗ್ಯೂ
ೀರ ಸಮುದ್ರವು ಹೇಗೆ ಧಾವಳ್ಯವಂ ಬಿಡಲಿಲ್ಲವೋ ಹಾಗೆ ಜ್ಞಾನಿಯು ಸುಖ
ಃಖ ಸಹಸ್ರಗಳು ಬಂದಾಗ್ಯೂ ಸ್ವಸ್ವಭಾವವಂ ಬಿಟ್ಟು ಹರ್ಷಾಮರ್ಷಗಳಿಗಧೀ
ಾಗದೆ ಸರ್ವಕರ್ಮಗಳನ್ನೂ ಅಸಂಗಭಾವದಿಂ ನೆರವೇರಿಸುತ್ತಾ ನಿತ್ಯಾನಂದನಾ
ವನು. ಇದೇಪ್ರಕಾರವಾಗಿ ನೀನು ಅಸಂಗವಾದ ಬುದ್ಧಿಯಿಂ ರಾಜ್ಯ
ಂ ಮಾಡುತ್ತಾ ನಿಜಾನಂದ ಸಾಮ್ರಾಜ್ಯವನ್ನನುಭವಿಸುತ್ತಿರುವನಾಗೆಂದು
ನು ಶ್ರೀರಾಮಚಂದ್ರನಂ ಕುರಿತು ನಿರೂಪಿಸಿದನೆಂಬಲ್ಲಿಗೆ;—

ಜ್ಞಾನಯೋಗತರಂಗಿಣಿಯೊಳ್ ಉಪಶಮಪ್ರಕರಣದಲ್ಲಿ, ಮನೋನಾ
ಶೋಪಾಯಾದಿ ನಿರೂಪಣವೆಂಬ ಸಪ್ತದಶ ತರಂಗಕ್ಕೆ ಮಂಗಳ
ಮಸ್ತು ಶ್ರೀ ಶ್ರೀ ಜಯತು.

ಜ್ಞಾನಯೋಗತರಂಗಿಣಿಯಲ್ಲಿ ಉಪಶಮಪ್ರಕರಣ ಸಮಾಪ್ತಂ.

ಶ್ರೀ ಸೀತಾಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ ಶ್ರೀರಾಮಚಂದ್ರ
ಗುರು ಪರಬ್ರಹ್ಮಣೇನಮಃ.

